
ಋಗ್ವೇದಸಂಹಿತಾ
ಭಾಗ ೨೭
ಏಳನೆಯ ಅಷ್ಟಕದಲ್ಲಿ ಒಂದು, ಎರಡು,
ಮೂರು ಮತ್ತು ನಾಲ್ಕನೆಯ
ಅಧ್ಯಾಯಗಳು.
ಒಂಭತ್ತನೆಯ ಮಂಡಲದ ಸೂಕ್ತಗಳು ೬೪—೧೦೦

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೬

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೬

ಏಳನೆಯ ಅಷ್ಟಕದಲ್ಲಿ ಒಂದು, ಎರಡು, ಮೂರು ಮತ್ತು
ನಾಲ್ಕನೆಯ ಅಧ್ಯಾಯಗಳು.

ಒಂಭತ್ತನೆಯ ಮಂಡಲದ ಸೂಕ್ತಗಳು ೪೪—೧೦೦

*Translated with Exhaustive and Critical Notes*
*and Explanations*
*by*

**Asthana Mahavidwan**
**H. P. VENKATA RAO.**
*Editor.*

*Printed at*
SREE SHARADA PRESS,
MYSORE.
1954

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ G. N. ಚಕ್ರವರ್ತಿ M.A.
   Professor of Sanskrit. St. Philomina's College, Mysore
2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್,
   ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷ ವಿದ್ವಾನ್
   ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್,
   Govt. Oriental Research Institute, Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು.
    Govt. Oriental Research Institute, Mysore.

# ಪೀಠಿಕೆ

ಋಕ್ಸಂಹಿತೆಯಲ್ಲಿ ಒಂಭತ್ತನೆಯ ಮಂಡಲವು ಸಂಪೂರ್ಣವಾಗಿ ಕೇವಲ ಒಂದು ದೇವತೆಯನ್ನು ಮಾತ್ರ ಪ್ರಶಂಸಿಸುವ ವೈಶಿಷ್ಟ್ಯವನ್ನು ಹೊಂದಿದೆ. ಈ ಮಂಡಲವನ್ನು ಬಿಟ್ಟರೆ ಸೋಮದೇವತಾಪ್ರಶಂಸಕಗಳಾದ ಸೂಕ್ತಗಳು ನಾಲ್ಕು ಮಾತ್ರ ಉಳಿದ ಮಂಡಲಗಳಲ್ಲಿವೆ ಅಲ್ಲದೇ, ಕೆಲವು ಸನ್ನಿವೇಶಗಳಲ್ಲಿ ಇತರ ದೇವತೆಗಳೊಡನೆಯೂ ಸೋಮನು ಸ್ತುತನಾಗಿದ್ದಾನೆ. ಅವೆಲ್ಲವೂ ಆನುಷಂಗಿಕ. ಕೇವಲ ಸೋಮದೇವತೆಯನ್ನೇ ಉದ್ದೇಶಿಸಿದವಲ್ಲ.

ಸ್ವಯಂಶುದ್ಧನೂ, ಜಗಚ್ಛುದ್ಧಿಕಾರಕನೂ, (ಪವಮಾನಸಂಜ್ಞಕನೂ) ಆದ ಸೋಮನನ್ನು ಪ್ರಶಂಸಿಸುವ ಒಂಭತ್ತನೆಯ ಮಂಡಲದ ಋಕ್ಕುಗಳೆಲ್ಲವೂ ಪಾವಮಾನೀ ಋಕ್ಕುಗಳೆಂದು ಪ್ರಸಿದ್ಧವಾಗಿವೆ. **ನವಮಂ ಮಂಡಲಂ ಪಾವಮಾನಂ ಸೌಮ್ಯಂ** ಎಂದು ಸರ್ವಾನುಕ್ರಮಣಿಯ ವಾಕ್ಯವಿರುತ್ತದೆ. **'ಪವಮಾನಃ ಸ್ತುತಃ ಸೋಮೋ ನವಮೇ ತ್ವಿಹ ಮಂಡಲೇ'** ಎಂದು ಬೃಹದ್ದೇವತಾವಾಕ್ಯವು ತಿಳಿಸುತ್ತದೆ.

**ಪಾವಮಾನೀರ್ಯೋ ಅಧ್ಯೇತ್ಯೃಷಿಭಿಃ ಸಂಭೃತಂ ರಸಂ ।**
**ತಸ್ಮೈ ಸರಸ್ವತೀ ದುಹೇ ಕ್ಷೀರಂ ಸರ್ಪಿರ್ಮಧೂದಕಂ ॥**

(ಋ. ಸಂ. ೯-೬೭-೩೨)

ಮಧುಚ್ಛಂದಃಪ್ರಭೃತಿಗಳಾದ ಋಷಿಗಳಿಂದ ಸಂಪಾದಿತವಾದ ಪಾವಮಾನೀ ಸೂಕ್ತಗಳು ಸಕಲ ವೇದಗಳಿಗೂ ಸಾರಭೂತಗಳಾಗಿವೆ. ಸಕಲವೇದಗಳ ರಸರೂಪಗಳಾದ ಈ ಪಾವಮಾನೀ ಸೂಕ್ತಗಳನ್ನು ಯಾರು ಪಠಿಸಿ ಪಾರಾಯಣ ಮಾಡುವರೋ ಅವರಿಗೆ ಸರಸ್ವತಿಯು ಅತ್ಯತಿಶಯವಾದ ಸುಖವನ್ನು ಒದಗಿಸುತ್ತಾಳೆ ಎಂದು ಈ ಸಕಲ ಸೂಕ್ತಗಳ ಮಹಿಮೆಯನ್ನು ಪ್ರಶಂಸಿಸಿದೆ.

"ಅತ್ಯಂತ ಪ್ರಭಾವದಿಂದ ಕೂಡಿದ ತಪಸ್ಸನ್ನಾಚರಿಸಬೇಕು" ಎಂದು ಇಂದ್ರನು ಋಷಿಗಳಿಗೆ ಉಪದೇಶಿಸಿದನು. ಅವರು ಉತ್ತಮವಾದ ಲೋಕವನ್ನಿಚ್ಛಿಸಿ ತಪಸ್ಸನ್ನಾಚರಿಸಿದರು. ತತ್ಫಲವಾಗಿ ಸೋಮನನ್ನು ಪ್ರಶಂಸಿಸುವ ಪಾವಮಾನೀ ಸೂಕ್ತಗಳನ್ನು ಪಠಿಸಿದರು. ಈ ಸೂಕ್ತಗಳನ್ನು ಪರಿಶುದ್ಧವಾದ ಹೃದಯದಿಂದ ಪಠಿಸುವವರು ತಮ್ಮ ವಂಶದ ಹಿರಿಯರನ್ನೂ ಕಿರಿಯರನ್ನೂ ಶುದ್ಧಿಗೊಳಿಸಿ ತಾವೂ ಶುದ್ಧರಾಗುತ್ತಾರೆ. ಸಕಲ ಪಾಪಗಳೂ ನಾಶವಾಗುತ್ತವೆ. **"ಪಾವಮಾನ್ಯಃ ಪರಂ ಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ"** (ಬೃ. ದೇ. ೬-೧೪೦) ಪಾವಮಾನೀಸೂಕ್ತಗಳು ಪರಂಬ್ರಹ್ಮಸ್ವರೂಪವು. ಪರಂಜ್ಯೋತಿಯು. ಅದು ನಿತ್ಯವಾದುದು. ಯಾರು ದಿವ್ಯಜ್ಯೋತೀರೂಪವಾದ ಈ ಪಾವಮಾನೀ ಸೂಕ್ತಗಳನ್ನು ಧ್ಯಾನಾತ್ಮಕವಾದ ಹೃದಯದಿಂದ ಕೂಡಿ ಪಠಿಸುವರೋ ಅವರಿಗೆ ಅತ್ಯುತ್ತಮವಾದ ಸದ್ಗತಿಯು ಲಭಿಸುತ್ತದೆ, ಇತ್ಯಾದಿಯಾಗಿ ಬೃಹದ್ದೇವತಾವಾಕ್ಯಗಳು ಪ್ರಸಂಸಿಸುತ್ತವೆ.

ಸೋಮನನ್ನು ಸ್ತುತಿಸುವ ಈ ಮಂಡಲವು ನೂರ ಹದಿನಾಲ್ಕು ಸೂಕ್ತಗಳುಳ್ಳದ್ದಾಗಿಯೂ ಏಳು ಅನುವಾಕಾತ್ಮಕವಾಗಿಯೂ ಇರುತ್ತದೆ. ಛಂದಸ್ಸುಗಳಿಗನುಗುಣವಾಗಿ ವಿಭಾಗಮಾಡಿದರೆ ಈ ರೀತಿಯಿರುತ್ತದೆ.

| | | | | |
|---|---|---|---|---|
| ೧. | ಗಾಯತ್ರೀ ಛಂದಸ್ಸಿನ | ಋಕ್ಕುಗಳು | ಸೂಕ್ತ | ೧ ರಿಂದ ೬೭. |
| ೨. | ಜಗತೀ ,, | ,, | ,, | ೬೮ ರಿಂದ ೮೬. |
| ೩. | ತ್ರಿಷ್ಟುಪ್ ,, | ,, | ,, | ೮೭ ರಿಂದ ೯೭. |
| ೪. | ಅನುಷ್ಟುಪ್ ,, | ,, | ,, | ೯೮ ರಿಂದ ೧೦೧. |
| ೫. | ಉಷ್ಣಿಕ್ ,, | ,, | ,, | ೧೦೨ ರಿಂದ ೧೦೬. |
| ೬. | ಪ್ರಗಾಥದ ಗುಂಪಿಗೆ | ಸೇರಿದವು | | ೧೦೭ ರಿಂದ ೧೦೮. |
| ೭. | ಉಳಿದವು (ಅನೇಕ ಛಂದಸ್ಸುಗಳಿಂದ ಕೂಡಿದವು) | | | ೧೦೯ ರಿಂದ ೧೧೪. |

ನೂರಹದಿನಾಲ್ಕು ಸೂಕ್ತಗಳುಳ್ಳ ಒಂಭತ್ತನೆಯ ಮಂಡಲವೆಲ್ಲವೂ ಕೇವಲ ಸೋಮದೇವತೆಯನ್ನು ಪ್ರಶಂಸಿಸುವುದೇ ಆದರೆ, ಸೋಮನ ವೈಶಿಷ್ಟ್ಯವೇನು ? ಸೋಮದೇವತೆಯ ಸ್ವರೂಪವೇನು ? ಇತರ ದೇವತೆಗಳಿಗೂ ಸೋಮದೇವತೆಗೂ ಇರುವ ಸಂಬಂಧವೇನು ಇತ್ಯಾದಿ ವಿಷಯಗಳನ್ನು ವಿಮರ್ಶಿಸಬೇಕಾದ ಅವಶ್ಯಕತೆಯಿರುತ್ತದೆ.

ಸೋಮ ಶಬ್ದದ ನಿರ್ವಚನವು ಸೋಮನ ಅಲೌಕಿಕವಾದ ಮತ್ತು ಲೌಕಿಕವಾದ ಎರಡು ಸ್ವರೂಪಗಳನ್ನು ತಿಳಿಸುತ್ತದೆ. ಅಲೌಕಿಕವಾದ ಸ್ವರೂಪವನ್ನು ದೇವತೆಯೆಂದೂ ಲೌಕಿಕವಾದ ಸ್ವರೂಪವನ್ನು ರಸಾತ್ಮಕವೆಂದೂ ಸ್ಥೂಲವಾದ ದೃಷ್ಟಿಯಿಂದ ಹೇಳಬಹುದು. ಆದರೆ ಅನೇಕ ಸಂಹಿತಾವಾಕ್ಯಗಳು ರಸಾತ್ಮಕವಾದ ವಸ್ತುವಿನಲ್ಲಿಯೂ ದಿವ್ಯತ್ವವನ್ನು ನಿರ್ದೇಶಿಸಿ ಪ್ರಶಂಸಿಸುತ್ತವೆ ಋಕ್ಸಂಹಿತಾವಾಕ್ಯಗಳಲ್ಲಿ ಕೆಲವೆಡೆಗಳಲ್ಲೂ ಮತ್ತು ಉಪನಿಷದಾದಿಗಳಲ್ಲೂ ಇದರ ಆಧ್ಯಾತ್ಮಿಕಸ್ವರೂಪವೂ ವರ್ಣಿತವಾಗಿರುತ್ತದೆ. ಈ ಪ್ರಕರಣವನ್ನು ಒಟ್ಟಿನಲ್ಲಿ ನಾಲ್ಕು ವಿಭಾಗಗಳನ್ನಾಗಿ ಮಾಡಬಹುದು.

ಸೋಮದೇವತೆ.
ಯಜ್ಞಸಾಮಗ್ರಿಯಾದ ಸೋಮರಸ.
ಸೋಮಯಾಗ ಮತ್ತು ಅದರ ಪ್ರಭೇದಗಳು.
ಸೋಮದ ದಿವ್ಯತ್ವಪ್ರತಿಪಾದಕವಾದ ವರ್ಣನಗಳು. (ಆಧ್ಯಾತ್ಮಿಕಸ್ವರೂಪವರ್ಣನ ಇತ್ಯಾದಿ).

**|| ದೇವತಾತ್ಮಕನಾದ ಸೋಮನ ಸ್ವರೂಪವರ್ಣನೆ. ||**

"ಹಿಂಡು" ಎಂಬರ್ಥವುಳ್ಳ **"ಸು"** ಧಾತುವಿನಿಂದ ನಿಷ್ಪನ್ನವಾಗಿರುವ **ಸೋಮ** ಶಬ್ದಕ್ಕೆ ಸೋಮಲತೆಯೇ ಪ್ರಧಾನವಾದ ಅರ್ಥವೆಂದು ನಿರುಕ್ತಕಾರರ ವಿವರಣೆಯಿದೆ. ದೇವತಾಪರವಾದ ಅರ್ಥವನ್ನು ತೋರಿಸಲು ಸೋಮದ ದಿವ್ಯತ್ವಪ್ರತಿಪಾದಕವಾದ ವಾಕ್ಯವನ್ನು ಋಕ್ಸಂಹಿತೆಯಿಂದ ಉದಾಹರಿಸಿದ್ದಾರೆ. ದಿವ್ಯಾಂಶ ಮತ್ತು ಪಾರ್ಥಿವಾಂಶ ಎರಡನ್ನೂ ಹೊಂದಿರುವುದೆಂದು ತಾತ್ಪರ್ಯ. ಲತಾರೂಪದಲ್ಲಿಯೂ ರಸದ ರೂಪದಲ್ಲಿಯೂ ಪೃಥ್ವಿಯಲ್ಲಿ ಲಭ್ಯವಾಗುವ ಸೋಮವು ಅಂರಿಕ್ಷದಲ್ಲೂ ಮತ್ತು ದ್ಯುಲೋಕದಲ್ಲೂ ದಿವ್ಯವಾದ ಒಂದು ತೇಜೋರೂಪವನ್ನು ಹೊಂದಿರುತ್ತದೆ. ತೇಜೋರೂಪಿಯಾದ ಈ ಸೋಮನಿಗೂ ಚಂದ್ರನಿಗೂ ಬ್ರಾಹ್ಮಣಾದಿಗಳಲ್ಲಿ ತಾದಾತ್ಮ್ಯವನ್ನು ಹೇಳಿರುತ್ತದೆ. ಚಂದ್ರರೂಪಿಯೂ ದ್ಯುಲೋಕಸ್ಥಿತವೂ ಆದ ಈ ಸೋಮನೇ ಲತಾರೂಪದಲ್ಲಿಯೂ ರಸರೂಪದಲ್ಲಿಯೂ ಪೃಥ್ವಿಯಲ್ಲಿ ಅವತರಿಸುತ್ತದೆ ಎಂಬ ಅಭಿಪ್ರಾಯವೂ ಸ್ಪಷ್ಟವಾಗಿದೆ.

ಆದರೆ, ತೇಜೋಮಯನಾದ ಸೋಮನು ಚಂದ್ರರೂಪನೇ, ಸೂರ್ಯಸಂಬಂಧಿಯೇ, ಅಗ್ನಿರೂಪನೇ ಅಥವಾ ಇಂದ್ರರೂಪನೇ ಎಂದು ನಿಷ್ಕೃಷ್ಟವಾಗಿ ಹೇಳುವುದು ಸುಲಭವಲ್ಲ. ಚಂದ್ರನೊಡನೆ ತಾದಾತ್ಮ್ಯವನ್ನು ತೋರಿಸಿ ವರ್ಣಿತ

ವಾಗಿರುವವಾಕ್ಯಗಳನ್ನು ಪ್ರಥಮತಃ ಪರಿಶೀಲಿಸಿದರೆ ಓಷಧಿಗಳಿಗೆಲ್ಲ ಪತಿಯೆಂಬ ಯಾವ ಸ್ಥಾನವು ಚಂದ್ರನಿಗಿರುವುದೋ ಅದೇರೀತಿ ಸೋಮನೂ ವರ್ಣಿತನಾಗಿದ್ದಾನೆ. ಚಂದ್ರನು ದೇವತೆಗಳಿಗೆ ಅನ್ನವೆಂಬ ಯಾವ ವಿವರಣವಿರುವುದೋ ಆ ವಿವರಣೆಯು—ಸೋಮನೇ ಚಂದ್ರನು ಎಂಬ ಸೋಮಚಂದ್ರರ ತಾದಾತ್ಮ್ಯವನ್ನನುಸರಿಸಿದೆ.

**"ತೇ ದೇವಾ ಅಬ್ರುವನ್ ।.................ಸೋಮೋ ರಾಜಾ ದೇವಾನಾಮನ್ನಂ**
**ಯಚ್ಚಂದ್ರಮಾಃ ಸ ಯತ್ರೈಷ ಏತಾಗ್ಂ ರಾತ್ರಿಂ........... ............ '' ॥**

(ಶ ಬ್ರಾ. ೧-೬-೪-೫)

ದೇವತೆಗಳಿಗೆ ಅನ್ನವಾದ ಯಾವ ಸೋಮವಿರುವುದೋ ಅದು ಚಂದ್ರನಲ್ಲದೆ ಬೇರೆಯಲ್ಲ. ಯಾವಾಗ ಚಂದ್ರನು ಅಂತರಿಕ್ಷದಲ್ಲಿ ಪೂರ್ವದಲ್ಲಾಗಲಿ ಅಥವಾ ಪಶ್ಚಿಮದಲ್ಲಾಗಲಿ ಕಾಣುವುದಿಲ್ಲವೋ ಆಗ ಪೃಥ್ವಿಗಿಳಿದು ಬಂದಿದ್ದಾನೆಂದು ಅರ್ಥವು. ಪೃಥ್ವಿಯಲ್ಲಿ ಅವತರಿಸಿ ಉದಕಗಳಲ್ಲಿಯೂ ಓಷಧಿಗಳಲ್ಲಿಯೂ ಗರ್ಭರೂಪದಲ್ಲಿ ಪ್ರವೇಶಿಸುತ್ತಾನೆ. ಚಂದ್ರ ರೂಪದಲ್ಲಿ ದೇವತೆಗಳಿಗೆ ಅನ್ನರೂಪನಾದ ಚಂದ್ರನು, ಪೃಥ್ವಿಯಲ್ಲಿ ಓಷಧ್ಯಾದಿಗಳ ಪುಷ್ಟಿಗೆ ಕಾರಣನಾಗಿ ಪೃಥ್ವಿಯ ಪ್ರಜೆಗಳಿಗೆ ಅನ್ನರೂಪನೂ ಅನ್ನಕಾರಣನೂ ಆಗಿದ್ದಾನೆ. ಅಂತರಿಕ್ಷದಲ್ಲಿ ಕಾಣದಿರುವ ದಿನಗಳಲ್ಲಿ ಪೃಥ್ವಿಯಲ್ಲಿ ನಮ್ಮೊಡನೆ ವಾಸವಾಗಿರುವುದರಿಂದ (**ಅಮಾ—ವಸ್** ಜೊತೆಯಲ್ಲಿ ವಾಸವಾಗಿರುವುದು) ಆಯಾದಿನಗಳಿಗೆ **ಅಮಾವಾಸ್ಯೆ**ಯೆಂದು ಹೆಸರು ಎಂದು ಹೇಳಿರುವ ಇಂತಹ ಸಂದರ್ಭವು ಚಂದ್ರನ ಪಾಕ್ಷಿಕವಾದ ಚಲನವನ್ನು ವರ್ಣಿಸುತ್ತದೆ. ಇದೇ ಚಲನವನ್ನು ಋಕ್ಸಂಹಿತೆಯಲ್ಲಿಯೂ ಈ ರೀತಿ ವರ್ಣಿಸಿದೆ.

**ಸಂ ದಕ್ಷೇಣ ಮನಸಾ ಜಾಯತೇ ಕವಿರ್ಋತಸ್ಯ ಗರ್ಭೋ ನಿಹಿತೋ ಯಮಾ ಪರಃ ।**
**ಯೂನಾ ಹ ಸಂತಾ ಪ್ರಥಮಂ ವಿಜಜ್ಞತುರ್ಗುಹಾ ಹಿತಂ ಜನಿಮ ನೇಮಮುದ್ಯತಂ ॥**

(ಋ. ಸಂ ೯-೬೮-೫)

ಇತ್ಯಾದಿ ಋಕ್ಕುಗಳಲ್ಲಿ ಸೋಮನೇ ಸೂರ್ಯ ಮತ್ತು ಚಂದ್ರರೂಪಗಳಲ್ಲಿ ಅಹೋರಾತ್ರಗಳಲ್ಲಿಯೂ ಪರಿಭ್ರಮಣ ವನ್ನು ಹೊಂದುತ್ತಿರುತ್ತಾನೆ ಎಂದು ತಿಳಿಸಿರುತ್ತದೆ. '**ದಿವಾ ಸೂರ್ಯಃ ಪ್ರಾದುರ್ಭವತಿ ರಾತ್ರೌ ಚಂದ್ರಮಾಃ**' ಎಂದು ಸಾಯಣರು ವಿವರಿಸಿದ್ದಾರೆ. ಇಲ್ಲಿ '**ಗುಹಾ ಹಿತಂ**' ಎನ್ನುವುದು ಮಾತ್ರ ರಹಸ್ಯವಿಷಯ.

ಸೂರ್ಯದುಹಿತೆಗೂ ಸೋಮನಿಗೂ ಇರುವ ಸಂಬಂಧವು ಸೂರ್ಯನಿಗೂ ಸೋಮನಿಗೂ ಇರುವ ಸಂಬಂಧ ವನ್ನು ಇನ್ನೂ ವಿಶದಪಡಿಸುತ್ತದೆ. "ಸೂರ್ಯನ ದುಹಿತೆಯು ಸೋಮನನ್ನು ದಶಾಪವಿತ್ರದಲ್ಲಿ ಶುದ್ಧಿಗೊಳಿಸುತ್ತಾಳೆ. ಪರ್ಜನ್ಯನಿಂದ ಪೋಷಿತನಾದ ಸೋಮನನ್ನು ಸೂರ್ಯನ ದುಹಿತೆಯು ಕರೆತರುತ್ತಾಳೆ. ಸೋಮನು ಸೂರ್ಯೆಯನ್ನು ಪತ್ನಿಯನ್ನಾಗಿ ಆರಿಸಿದ್ದಾನೆ" ಇತ್ಯಾದಿ ವರ್ಣನೆಗಳು ಸೋಮನಲ್ಲಿರುವ ಸೂರ್ಯಾಂಶತ್ವವನ್ನು ಪ್ರತಿಪಾದಿಸುತ್ತವೆ. ಅಲ್ಲದೇ,

"ಸೂರ್ಯೆಯ ವಿವಾಹಕಾಲದಲ್ಲಿ ಸೋಮನೇ ವರನು. ಅಶ್ವಿನೀದೇವತೆಗಳು ವರನ ಕಡೆಯವರು. ಅಗ್ನಿಯು ಈ ವಿವಾಹೋತ್ಸವದಲ್ಲಿ ಮಾರ್ಗದರ್ಶಕನು. ಈ ಸಂಭ್ರಮಕಾಲದಲ್ಲಿ ಸವಿತೃವು ತನ್ನ ಪುತ್ರಿಯನ್ನು ಸೋಮರೂಪ ನಾದ ವರನಿಗೆ ಕೊಟ್ಟು ವಿವಾಹವನ್ನು ನೆರವೇರಿಸಿದನು. ಈ ಉತ್ಸವಕಾಲದಲ್ಲಿ ಮನಸ್ಸೇ ರಥವು. ಸೂರ್ಯಚಂದ್ರ ರುಗಳೇ ರಥವನ್ನು ನಡೆಸುವವರು." ಇತ್ಯಾದಿ ವರ್ಣನೆಗಳು ಸೋಮನ ಅತ್ಯತಿಶಯವಾದ ದಿವ್ಯಾಂಶವನ್ನು ತೋರಿಸು

ತ್ರವೆ. ಆದರೆ ಇಂತಹ ಸಂದರ್ಭಗಳಲ್ಲಿ, ಸೋಮನು ಸೂರ್ಯ ಮತ್ತು ಚಂದ್ರರಿಗಿಂತ ಬೇರೆಯಾದ ದೇವತಾ ವಿಶೇಷವೆಂದೂ ಸೂಚಿತವಾಗಿದೆ.

ಚಂದ್ರಸೂರ್ಯಾದಿಗಳಿಗಿಂತಲೂ ಅಧಿಕವಾದ ಪ್ರಭಾವವುಳ್ಳವನೂ ಸಕಲ ದೇವಲೋಕಕ್ಕೂ ಪ್ರಭೆಯನ್ನು ಕೊಡತಕ್ಕವನೂ ಆದ ಸೋಮನು ಚಂದ್ರಸೂರ್ಯಾದಿಗಳಿಗೆ ಉತ್ಪಾದಕನು ಎಂದೂ ಸ್ಪಷ್ಟವಾಗಿ ತಿಳಿಸಿದೆ.

**ಪವಮಾನೋ ಅಜೀಜನದ್ದಿವಶ್ಚಿತ್ರಂ ನ ತನ್ಯತುಂ । ಜ್ಯೋತಿರ್ವೈಶ್ವಾನರಂ ಬೃಹತ್ ।**
(ಋ. ಸಂ. ೯-೬೧-೧೬)

"ಸಕಲ ಲೋಕಗಳಿಗೂ ಪ್ರಕಾಶದಾಯಕನಾದ ಆದಿತ್ಯರೂಪವಾದ ಜ್ಯೋತಿಯನ್ನು ಸೋಮನು ಉತ್ಪನ್ನಮಾಡಿ ದ್ಯುಲೋಕದಲ್ಲಿ ಸ್ಥಾಪಿಸಿದ್ದಾನೆ.'' "ಸರ್ವಜ್ಞನಾದ ಪವಮಾನನು ತನ್ನ ತೇಜಸ್ಸಿನಿಂದ ಸೂರ್ಯನನ್ನೂ ಬೆಳಗಿಸಿದ್ದಾನೆ. ಸಕಲ ಲೋಕಗಳನ್ನು ಪ್ರಕಾಶಯುತವಾಗುವಂತೆ ಮಾಡಿದ್ದಾನೆ.'' "ಸೂರ್ಯನನ್ನು ದ್ಯುಲೋಕಸ್ಥನಾಗುವಂತೆ ಮಾಡಿದ್ದಾನೆ. ಕೇವಲ ಸೂರ್ಯನನ್ನೇ ಅಲ್ಲ ಸಕಲ ತೇಜೋಮಂಡಲಗಳಿಗೂ ನೀನೇ ಪ್ರಕಾಶಕನು. (**ಸ ನೋ ಜ್ಯೋತೀಂಷಿ ವಿರೋಚಯ**) ಎಲ್ಲಕ್ಕಿಂತಲೂ ಅಧಿಕವಾಗಿ ಯಾವ ಸೋಮವನ್ನು ಬೃಹದ್ದೇವತಾವಾಕ್ಯವು ಪರಂಜ್ಯೋತಿಯೆಂದು ವರ್ಣಿಸಿದೆಯೋ ಅದೇ ದಿವ್ಯಶಕ್ತಿಯನ್ನು ಋಕ್ಸಂಹಿತೆಯಲ್ಲಿಯೂ ಇದೇ ರೀತಿ ವರ್ಣಿಸಿದೆ.

**ತ್ವಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ ।**
**ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ॥**
(ಋ. ಸಂ. ೯-೮೬-೨೯)

ಎಲೈ ಸೋಮನೇ, ನೀನು ಸರ್ವಜ್ಞನು. ನಿನ್ನ ನಿಯಾಮಕಧರ್ಮವನ್ನು ಪಾಲಿಸುತ್ತ ಸಕಲಲೋಕಗಳೂ ತಮ್ಮ ನಿಯಮಿತವಾದ ಸ್ಥಾನದಲ್ಲಿರುತ್ತವೆ. ನೀನು ಸಕಲ ಲೋಕಗಳಿಗಿಂತಲೂ ಅತೀತನಾಗಿ ಅವೆಲ್ಲವನ್ನೂ ಭರಿಸುತ್ತಿದ್ದೀಯೆ. ಸೂರ್ಯಾದಿ ಜ್ಯೋತಿರ್ಮಂಡಲಗಳೂ ನಿನ್ನ ಪ್ರಭಾವದಿಂದಲೇ ಪ್ರಕಾಶಿಸುತ್ತ ಲೋಕರಕ್ಷಿತವಾದ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿವೆ'' ಇತ್ಯಾದಿಯಾಗಿ ಸೋಮನ ಸರ್ವೇಶ್ವರತ್ವವು ಸ್ತುತವಾಗಿದೆ. **''ತಸ್ಮಾದಾಹುಃ ಸೋಮಃ ಸರ್ವಾ ದೇವತಾ ಇತಿ"** ಸೋಮವೇ ಸಕಲ ದೇವತಾತ್ಮಕವಾಗಿ ಇರುತ್ತದೆ ಇತ್ಯಾದಿಯಾಗಿ ಶತಪಥಬ್ರಾಹ್ಮಣಾದಿಗಳಲ್ಲಿ ಪ್ರಶಂಸಿತವಾಗಿದೆ. ಅಲ್ಲದೆ—**''ಭುವನಾನಾಗ್ ಹ್ಯೇಷ ಪತಿರ್ವಿಶ್ವಾನ್ಯಭಿಧಾಮಾನಿ"** (ಶ. ಬ್ರಾ. ೩-೩-೪-೧೪) ಈ ಸೋಮನೇ ಸಕಲ ಲೋಕಗಳಿಗೂ ಪ್ರಭುವು, ಸೋಮನೇ ಸಕಲ ಪ್ರಜೆಗಳಿಗೂ ಆಶ್ರಯನು ಇತ್ಯಾದಿಯಾಗಿಯೂ ಸೋಮನ ಪ್ರಭುತ್ವವೂ ಪ್ರಭಾವವೂ ವರ್ಣಿತವಾಗಿದೆ.

ಹೀಗೆ ಸರ್ವೇಶ್ವರತ್ವವು ವರ್ಣಿತವಾಗಿದ್ದರೂ, ಕೆಲವು ಸಂದರ್ಭಗಳಲ್ಲಿ ಇಂದ್ರ, ಅಗ್ನಿ ಇತ್ಯಾದಿ ದೇವತೆಗಳೊಡನೆ ತಾದಾತ್ಮ್ಯವಿರುತ್ತದೆ. ಸೋಮನಿಗೂ ಇಂದ್ರನಿಗೂ ಇರುವ ನಿಕಟವಾದ ಸಂಬಂಧವು ಪ್ರಸಿದ್ಧವಾಗಿದೆ. ಇಂದ್ರನಿಗೆ ದೈಹಿಕ ಮತ್ತು ಮಾನಸಿಕವಾದ ಶಕ್ತಿಯನ್ನು ಕೊಟ್ಟು, ನಿಜವಾದ ಉತ್ಸಾಹವನ್ನುಂಟುಮಾಡಿ, ಇಂದ್ರನನ್ನು ಸಕಲ ವಿಧಗಳಲ್ಲಿಯೂ ಚೈತನ್ಯಯುತನನ್ನಾಗಿ ಮಾಡುವ ಸಾಧನವಾವುದೆಂದರೆ, ಅದು ಸೋಮರಸ. ಇಂದ್ರನಿಗೆ ಶಕ್ತಿದಾಯಕವಾದುದು ವಜ್ರಾಯುಧ. ಚೈತನ್ಯದಾಯಿಯಾದುದು ಸೋಮ. ಆದುದರಿಂದ ಸೋಮ ಮತ್ತು ಋುಧಗಳಿಗೆ ತಾದಾತ್ಮ್ಯವಿರುತ್ತದೆ.

**ಆತ್ಸೋಮ ಇಂದ್ರಿಯೋ ರಸೋ ವಜ್ರಃ ಸಹಸ್ರಸಾ ಭುವತ್ । ಉಕ್ಥಂ ಯದಸ್ಯ ಜಾಯತೇ ॥**

(ಋ. ಸಂ ೯-೪೭-೩)

ಈ ಇಂದ್ರನನ್ನು ಪ್ರಶಂಸಿಸುವ ಉಕ್ಥಮಂತ್ರವು ಪಠಿತವಾದೊಡನೆಯೇ, ವಜ್ರರೂಪವಾದ ಸೋಮವು ಅತ್ಯಂತ ಬಲಯುತವಾದ ಪ್ರಭಾವವುಳ್ಳದ್ದಾಗಿ ಉತ್ಪನ್ನವಾಗುತ್ತದೆ ಇತ್ಯಾದಿಯಾದ ವರ್ಣನಗಳು ಅನೇಕವಾಗಿರುತ್ತವೆ. "ಸೋಮರೂಪವಾದ ಈ ವಜ್ರಾಯುಧವು ಅತ್ಯಂತ ಸುಂದರವಾದ ವಸ್ತುವಿಗಿಂತಲೂ ಮೀರಿದ ಸೌಂದರ್ಯವುಳ್ಳದ್ದಾಗಿದೆ'' **(ವಜ್ರೋ ವಪುಷೋ ವಪುಷ್ಟರಃ)** ವಜ್ರಾಯುಧವು ವೃತ್ರಹನನಕ್ಕೆ ಎಷ್ಟು ಸಾಹಾಯ್ಯಕವೋ, ಸೋಮವೂ ಅಷ್ಟೇ ಸಾಹಾಯ್ಯಕವು.

ಇಂತಹ ಸಂದರ್ಭಗಳಲ್ಲಿ ಸೋಮವು ಪಾರ್ಥಿವವಾದ ರಸವೆಂದು ಹೇಳಲಾಗುವುದಿಲ್ಲ. ಇದು ದಿವ್ಯ ತೇಜಸ್ಸು ಮತ್ತು ದಿವ್ಯಶಕ್ತಿ " ಕೇವಲ ಪಾರ್ಥಿವವಾದ ರಸವನ್ನು ಮಾತ್ರ ಪಾನಮಾಡತಕ್ಕವನು ಪೂರ್ಣವಾಗಿ ಸೋಮಪಾನ ಮಾಡಿದನೆಂದು ಹೇಳಲಾಗುವುದಿಲ್ಲ. ಸೋಮನ ದಿವ್ಯರೂಪವು ಕೆಲವರಿಗೆ ಮಾತ್ರ ಸಾಕ್ಷಾತ್ಕೃತವಾಗುತ್ತದೆ. ಈ ದಿವ್ಯರೂಪವು ಇತರರ ಗೋಚರಕ್ಕೆ ಮೀರಿದುದು. ಇದರ ರಸಪಾನವು ಸಾಧ್ಯವಿಲ್ಲ.

**ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ।**

(ಋ. ಸಂ. ೧೦-೮೫-೩)

ದಿವ್ಯತೇಜೋಮಯನಾದ ಈ ಸೋಮನು ಮೂರು ರೀತಿಯ ಪ್ರವಾಹಗಳಿಂದ ಮೂರುಲೋಕಗಳಲ್ಲೂ ಪ್ರವಹಿಸುತ್ತಾನೆ.

**ಸಂ ತ್ರೀ ಪವಿತ್ರಾ ವಿತತಾನ್ಯೇಷ್ಯನ್ವೇಕಂ ಧಾವಸಿ ಪೂಯಮಾನಃ ।**
**ಅಸಿ ಭಗೋ ಅಸಿ ದಾತ್ರಸ್ಯ ದಾತಾಸಿ ಮಘವಾ ಮಘವದ್ಭ್ಯ ಇಂದೋ ॥**

(ಋ. ಸಂ. ೯-೯೭-೫೫)

ಮೂರು ವಿಧವಾದ ವಿಸ್ತೃತವಾದ ನಿನ್ನ ಪ್ರವಾಹಗಳು ಕೊನೆಯಲ್ಲಿ ಐಕ್ಯವನ್ನು ಹೊಂದುತ್ತವೆ. ಎಲೈ ಸೋಮನೇ, ನೀನು ಸಕಲ ಇಷ್ಟಾರ್ಥಪ್ರದನಾಗಿದ್ದೀಯೆ, ಎಂಬ ಈ ವರ್ಣನದಲ್ಲಿ ವಿತತಾ ತ್ರೀ ಪವಿತ್ರಾಣಿ ಎಂಬ ಭಾಗಕ್ಕೆ ತಾತ್ಪರ್ಯವನ್ನು ವಿವರಿಸುತ್ತ **ಅಗ್ನಿ, ವಾಯು, ಸೂರ್ಯಾತ್ಮಕಾನಿ; ಪವಿತ್ರಾಣಿ—ಅಗ್ನಿ, ವಾಯು,** ಮತ್ತು **ಸೂರ್ಯ** ಎಂಬ ಮೂರು ಲೋಕದ ತೇಜೋರೂಪವಾದ ಪ್ರವಾಹಗಳೆಂದು ಸಾಯಣರು ತಮ್ಮ ಭಾಷ್ಯದಲ್ಲಿ ವಿವರಿಸಿದ್ದಾರೆ. ವಿಶ್ವವ್ಯಾಪಕವೂ, ಉಪನಿಷದಾದಿಗಳಲ್ಲಿ ಪರಂಜ್ಯೋತಿಯೆಂದು ವರ್ಣಿತವಾಗಿರುವುದೂ ಆದ ದಿವ್ಯ ತತ್ತ್ವವು ಅಗ್ನಿ, ವಾಯು ಮತ್ತು ಆದಿತ್ಯರೂಪಗಳಾದ ಮೂರು ರೂಪಗಳಲ್ಲಿ ಆವಿರ್ಭೂತವಾಗಿರುವುದನ್ನು ಇಲ್ಲಿ ದಿವ್ಯಜ್ಯೋತೀರೂಪನಾದ ಸೋಮನ ಮೂರು ಪ್ರವಾಹಗಳೆಂದು ಪ್ರಶಂಸಿಸಿದೆ.

## ॥ ಯಜ್ಞಸಾಮಗ್ರಿಯಾದ ಸೋಮರಸ ॥

ಪರಂಜ್ಯೋತಿರೂಪವಾದ ಸೋಮನು ಪೃಥ್ವಿಯಲ್ಲಿ ಸಲಿಲ, ಓಷಧಿ ಮತ್ತು ವನಸ್ಪತಿಗಳಲ್ಲಿ ಗರ್ಭರೂಪದಲ್ಲಿ ಅವತರಿಸುತ್ತಾನೆ ಎಂಬುದು ಒಂದು ವಿಧ ಅಥವಾ ಅದೇ ಸೋಮನನ್ನು ಶ್ಯೇನವು ಸಾಕ್ಷಾತ್ತಾಗಿ ಹೋಗಿ ಪೃಥ್ವಿಗೆ ತಂದಿತು ಎಂದು ಹೇಳುವುದು ಇನ್ನೊಂದು ವಿಧ. ಒಟ್ಟಿನಲ್ಲಿ ಪಾರ್ಥಿವವಾದ ಸೋಮರಸವು ದಿವ್ಯರೂಪಿಯಾದ ಸೋಮದ ಅಂಶವೇ ಎಂದು ಹೇಳಬೇಕು. (ಶ್ಯೇನರೂಪಿಯಾದ ಗಾಯತ್ರಿಯು ಸೋಮವನ್ನು ಕರೆತಂದ ಬಗೆಯನ್ನು ಹಿಂದೆ ಗಾಯತ್ರೀ ಪ್ರಕರಣದಲ್ಲಿಯೂ ಈ ಮಂಡಲದ ಪೀಠಿಕೆಯಲ್ಲಿಯೂ ವಿವರಿಸಿದೆ.

" ಮಹತ್ಸ್ವರೂಪವುಳ್ಳ ಈ ಸೋಮನಿಗೆ ಪರ್ಜನ್ಯನೇ ಪಿತೃವು. ಪರ್ವತಗಳಲ್ಲಿಯೂ ಅಥವಾ ಯಜ್ಞ ಭೂಮಿಯಲ್ಲಿರುವ (ಗಿರಿಸಂಬಂಧವಾದ) ಬೆಟ್ಟಗಳಲ್ಲಿಯೂ ವಾಸಸ್ಥಾನವುಳ್ಳವನು. ಉದಕಗಳೇ ಇವನ ಸಹೋದರಿಯರು ಮತ್ತು ಪಜ್ರೆಯ ಗರ್ಭರೂಪನು" ಇತ್ಯಾದಿಯಾಗಿ ಸೋಮನ ಉತ್ಪತ್ತಿ ವಿವರವಿದೆ ಆದರೆ, **ಪಜ್ರಾಯೋಃ ಗರ್ಭ** ಎಂಬ ಸಂಬೋಧನೆಯ ಅರ್ಥವೇನು ಎಂಬುದು ಒಂದು ಪ್ರಶ್ನೆ. **ಪಜ್ರೆಯೆಂದರೆ** ಪೃಥ್ವಿಯಾಗಬಹುದು ಅಥವಾ ಮಾಧ್ಯಮಿಕಾ ವಾಕ್ಕಾಗಬಹುದು. ಮಾಧ್ಯಮಿಕಾ ವಾಕ್ಕಿನ ಗರ್ಭವೆಂದರೆ ವೃಷ್ಟಿರೂಪನೆಂದರ್ಥ. ಪೃಥ್ವಿಯ ಗರ್ಭನೆಂದರೆ ಓಷಧಿರೂಪನೆಂದರ್ಥ ಎಂದು ಸಾಯಣರು ವಿವರಿಸಿದ್ದಾರೆ. **(ಪಜ್ರಾ ಪೃಥಿವೀತ್ಯಾಹುಃ । ಅಪಿ ವಾ ಮಾಧ್ಯಮಿಕಾ ವಾಕ್ ಪಜ್ರಾ)** ಪಾರ್ಥಿವವಾದ ಸೋಮನು ಪರ್ವತಗಳಲ್ಲಿ ಸ್ಥಾಪಿತನಾಗಿದ್ದಾನೆ. ವರುಣನು ಸೋಮನನ್ನು ಪರ್ವತದಲ್ಲಿ ಸ್ಥಾಪಿಸಿದ್ದಾನೆ. **(ದಿವಿ ಸೂರ್ಯಮದಧಾತ್ ಸೋಮಮದ್ರೌ) ಪರ್ವತಾವೃಧಃ, ಗಿರಿಷ್ಠಾಃ** ಇತ್ಯಾದಿ ವಿಶೇಷಣಗಳಿಂದ ವರ್ಣಿತನಾಗಿದ್ದಾನೆ. ಆತಪಮಯವಾದ ವನವೆಂದು ಸೋಮಲತೆಯು ನಿರ್ದಿಷ್ಟವಾಗಿದೆ. **" ವೃಕ್ಷಸ್ಯ ಶಾಖಾಮರುಣಸ್ಯ ಬಪ್ಸತಃ "** ಅರುಣವರ್ಣವುಳ್ಳ ವೃಕ್ಷದ ಶಾಖೆಗಳನ್ನು ಭಕ್ಷಿಸುತ್ತ ಸೋಮಲತೆಗಳು ಪುಷ್ಟಿಗೊಳ್ಳುತ್ತವೆ. ಇತ್ಯಾದಿವರ್ಣನೆಗಳಿವೆ

ಸೋಮಲತೆಗಳು ಒಂದೇ ಜಾತಿಯಾಗಿರದೇ ಬೇರೆಬೇರೆ ಜಾತಿಯುಳ್ಳವಾಗಿಯೂ ಇರುತ್ತವೆ ಅಥವಾ, ಉತ್ತಮವಾದ ಸೋಮಲತೆಗಳ ಅಭಾವವಿದ್ದಾಗ, ತತ್ಪ್ರತಿನಿಧಿಯಾಗಿ ಅದೇ ವಿಶೇಷಗುಣಗಳುಳ್ಳ ಇತರ ಲತೆಗಳೂ ಗ್ರಾಹ್ಯವಾಗಿರುತ್ತವೆ. ಈ ವಿವರಣವು ಶತಪಥ ಬ್ರಾಹ್ಮಣದಲ್ಲಿ ಈ ರೀತಿಯಿರುತ್ತದೆ. (ಶ. ಬ್ರಾ. ೪, ೫, ೧೦. ೧ ರಿಂದ ೮)

ಸೋಮವು ಅಪಹೃತವಾದಾಗ ಅದನ್ನು ಹುಡುಕಿ ತರಬೇಕಾದುದು ಕರ್ತವ್ಯ. ಒಂದು ವೇಳೆ ಅದು ಸಿಕ್ಕದಿದ್ದರೆ, ಅದಕ್ಕೆ ಪ್ರತಿನಿಧಿಯಾದ ಅದೇ ಶಕ್ತಿಯುಳ್ಳ ಇತರ ಲತೆಗಳಿರುತ್ತವೆ. ಅಥವಾ ಇವೂ ಸೋಮಜಾತಿಗೆ ಸೇರಿದವೂ ಆಗಿರುವುವು ಎಂಬ ಅಭಿಪ್ರಾಯವೂ ಕೆಲವೆಡೆಗಳಲ್ಲಿ ವ್ಯಕ್ತವಾಗಿದೆ.

**" ದ್ವಯಾನಿ ವೈ ಫಾಲ್ಗುನಾನಿ । ಲೋಹಿತಪುಷ್ಪಾಣಿ ಚಾರುಣಪುಷ್ಪಾಣಿ ಚ ॥"** ಫಾಲ್ಗುನ ಲತೆಗಳಲ್ಲಿ ಎರಡು ವಿಧ. ಕೆಂಪುಬಣ್ಣದ ಪುಷ್ಪವುಳ್ಳವು ಮತ್ತು ಹೊಂಬಣ್ಣದ ಪುಷ್ಪವುಳ್ಳವು. ಅವುಗಳಲ್ಲಿ ಹೊಂಬಣ್ಣದ (ಅರುಣ) ಪುಷ್ಪಗಳುಳ್ಳ ಲತೆಯನ್ನು ಹಿಂಡಿದರೆ ಆಗ ಸೋಮಲತೆಯನ್ನು ಹಿಂಡಿದಾಗ ಲಭಿಸುವ ರಸದಂತೆಯೇ ಉತ್ತಮವಾದ ರಸವನ್ನು ಕೊಡುತ್ತದೆ. ಒಂದುವೇಳೆ ಈ ಅರುಣವರ್ಣದ ಪುಷ್ಪವುಳ್ಳ ಫಾಲ್ಗುನಸಂಜ್ಞಕವಾದ ಲತೆಯು ಸಿಕ್ಕದಿದ್ದರೆ, ಆಗ 'ಶ್ಯೇನಹೃತ' ಸಂಜ್ಞಕವಾದ ಲತೆಯನ್ನು ಸಂಪಾದಿಸತಕ್ಕದ್ದು. **(ಶ್ಯೇನಹೃತಮಭಿಷುಣುಯಾದ್ಯತ್ರ ವೈ ಗಾಯತ್ರೀ ಸೋಮಮಚ್ಛಾಪತತ್)** ಗಾಯತ್ರಿಯು ಸೋಮದೊಂದಿಗೆ ಹಾರಿ ಬರುತ್ತಿದ್ದಾಗ, ಸೋಮದ ಒಂದು ಭಾಗವು ಕಳಚಿ ಬಿದ್ದಿತು. ಅದು **ಶ್ಯೇನಹೃತಲತೆಯೆಂದು** ಪ್ರಸಿದ್ಧವಾಯಿತು. ಆದುದರಿಂದ, ಸೋಮದ ಅವಯವವೇ ಆದ ಆ ಶ್ಯೇನಹೃತಲತೆಯನ್ನು ರಸಕ್ಕಾಗಿ **ಹಿಂಡ**ಬಹುದು.

ಒಂದುವೇಳೆ, ಶ್ಯೇನಹೃತಸಂಜ್ಞಕವಾದ ಲತೆಯು ಸಿಕ್ಕದಿದ್ದರೆ, **ಆದಾರ** ಸಂಜ್ಞಕವಾದ ಲತೆಯನ್ನು ತರಬಹುದು. **(ಆದಾರಾನಭಿಷುಣುಯಾತ್)** ಯಜ್ಞದ ಶಿರವು ಛಿನ್ನವಾದಾಗ ಅದರ ರಸದಿಂದ **ಆದಾರ** ಸಂಜ್ಞಕವಾದ ಲತೆಯು ಉತ್ಪನ್ನವಾಯಿತು. ಆದುದರಿಂದ ಯಜ್ಞಸಂಬಂಧಿಯಾದ ಆದಾರ ಲತೆಯನ್ನು ಹಿಂಡಬಹುದು.

ಒಂದುವೇಳೆ ಈ ಆದಾರಲತೆಯು ಸಿಕ್ಕದಿದ್ದರೆ, ಆಗ ಹೊಂಬಣ್ಣದ **ದೂರ್ವಾ** ಸಂಜ್ಞಕವಾದ ಲತೆಯನ್ನು ಹಿಂಡಬಹುದು. ಈ ದೂರ್ವಾ ಲತೆಯು ಸೋಮಕ್ಕೆ ಸಮೀಪ ಸಂಬಂಧಿಯಾದುದು. **(ಏಷ ವೈ ಸೋಮಸ್ಯ ನ್ಯಂಗಃ........ತಸ್ಮಾದರುಣದೂರ್ವಾ ಅಭಿಷುಣುಯಾತ್).**

ಒಂದುವೇಳೆ ಸೋಮಸಂಬಂಧಿಯಾದ ಈ ದೂರ್ವಾಲತೆಯೂ ಸಿಕ್ಕದಿದ್ದರೆ, ಹಳದಿ ಬಣ್ಣದ ಕುಶವನ್ನು ಹಿಂಡಬಹುದು. ಇತ್ಯಾದಿಯಾಗಿ ಸೋಮಲತೆಯ ಗುಣವನ್ನೇ ಹೊಂದಿರುವ ಇತರ ಪ್ರತಿನಿಧಿಗಳೂ ಉಕ್ತವಾಗಿವೆ. ಹೀಗೆ, ಆಯಾ ಸನ್ನಿವೇಶಕ್ಕನುಗುಣವಾಗಿ ಲಭ್ಯವಾಗತಕ್ಕ ಲತೆಗಳನ್ನು ಉಪಯೋಗಿಸುವುದರಿಂದಲೇ, ರಸದ ವರ್ಣವೂ ಸಹ ಒಂದೇ ವಿಧವಾಗಿರುವುದಿಲ್ಲ. ಸೋಮರಸದ ವರ್ಣವನ್ನು ತಿಳಿಸುವಾಗ ಒಂದೊಂದು ಸಲ ಒಂದೊಂದು ವರ್ಣವು ನಿರ್ದಿಷ್ಟವಾಗಿದೆ.

ಸೋಮರಸದ ವರ್ಣವು ಚಿನ್ನದ ಬಣ್ಣವುಳ್ಳದ್ದಾಗಿದೆಯೆಂದು ಅನೇಕಕಡೆಗಳಲ್ಲಿ ವರ್ಣಿಸಿದೆ. ಆದರೆ, ಕಂದುಬಣ್ಣ (ಬಭ್ರು) ಕಂದು ಮತ್ತು ಹಳದಿ ಎರಡೂ ಸೇರಿದ ವರ್ಣ (**ಹರಿಂ ಬಭ್ರುಂ**), ಕೆಂಪು, (**ಅರುಷ**) ಹಳದಿ ಮತ್ತು ಕೆಂಪಿನ ಮಿಶ್ರ (**ಹರಿಂ ಅರುಷಂ**) ಅಥವಾ ಕೊಂಚ ಹಳದಿ (**ಗೌರ**) ಇತ್ಯಾದಿ ವರ್ಣಗಳೆಲ್ಲವೂ ನಿರ್ದಿಷ್ಟವಾಗಿವೆ. ಆದುದರಿಂದಲೇ,

**ವಿಶ್ವಾ ರೂಪಾಣ್ಯಾವಿಶನ್ಪುನಾನೋ ಯಾತಿ ಹರ್ಯತಃ । ಯತ್ರಾಮೃತಾಸ ಆಸತೇ ।**

(ಋ. ಸಂ. ೯-೨೫-೪)

ಆಕರ್ಷಕವಾದ ಸೋಮರಸವು ನಾನಾ ರೂಪಗಳನ್ನು ಹೊಂದುತ್ತಾ ಹರಿಯುತ್ತದೆ. ಎಂಬ ವರ್ಣನವು ಸೋಮ ಪ್ರವಾಹದ ವರ್ಣ ಮತ್ತು ಇತರ ಗುಣಗಳನ್ನು ತಿಳಿಸುತ್ತದೆ.

ಪರಿಶುದ್ಧವಾದ ಸೋಮಲತೆಯಿಂದ ಉತ್ಪನ್ನವಾದ ರಸವು ಪರಿಶುದ್ಧವಾದ ಕ್ಷೀರಕ್ಕೆ ಹೋಲಿಸಲ್ಪಡುತ್ತದೆ. ಆದರೆ, ಕ್ಷೀರದಿಂದ ಮಿಶ್ರವಾದಾಗ ಮಾತ್ರ ಶುಭ್ರವರ್ಣವುಳ್ಳದ್ದಾಗುತ್ತದೆಂದು ಋಕ್ಸಂಹಿತೆಯು ತಿಳಿಸುತ್ತದೆ. (**ಶ್ವೇತಂ ರೂಪಂ ಕೃಣುತೇ ಯತ್ಸಿಷಾಸತಿ ; ಅಧ ಶ್ವೇತಂ ಕಲಶಂ ಗೋಭಿರಕ್ತಂ ॥**) ಸೋಮರಸಪಾನದಿಂದ ಇಂದ್ರಾದಿ ದೇವತೆಗಳು ಯಾವ ರೀತಿ ಪುಷ್ಟರೂ ಚೈತನ್ಯಯುಕ್ತರೂ ಆಗುತ್ತಾರೆಂಬುದನ್ನು ಹಿಂದೆಲ್ಲಾ ಅನೇಕ ಕಡೆಗಳಲ್ಲಿ ವಿವರಿಸಿದೆ. ಪ್ರಕೃತದಲ್ಲಿ ಈ ಸೋಮರಸಪಾನವು ಮಾನವನಾದ ಯಜಮಾನನಿಗೆ ಯಾವ ರೀತಿ ಉಪಕಾರಕವಾಗುತ್ತದೆ ಎಂಬುದನ್ನು ಪರಿಶೀಲಿಸಬೇಕು.

**ತಮಿಷ್ಟರ್ಧಂತು ನೋ ಗಿರೋ ವತ್ಸಂ ಸಂಶಿಶ್ವರೀರಿವ । ಯ ಇಂದ್ರಸ್ಯ ಹೃದಂಸನಿಃ ॥**

(ಋ. ಸಂ. ೯-೬೧-೧೪)

ಪ್ರಭೂತವಾದ ಕ್ಷೀರವುಳ್ಳ ಗೋವುಗಳು ತಮ್ಮ ಕರುಗಳನ್ನು ರಕ್ಷಿಸುವಂತೆ ಇಂದ್ರನಿಗೆ ತೃಪ್ತಿದಾಯಕಗಳಾದ ಸೋಮರಸಗಳು ನಮ್ಮ ಉತ್ತಮವೂ, ಸ್ತುತಿರೂಪವೂ ಆದ ವಾಕ್ಕುಗಳನ್ನು ಪುಷ್ಟಿಗೊಳಿಸಲಿ. ಎಂದು ಪ್ರಾರ್ಥಿಸಿದೆ. ಈ ಸೋಮವು ಯಜಮಾನನಿಗೆ ಎಲ್ಲ ವಿಧದಲ್ಲಿಯೂ ಚೈತನ್ಯದಾಯಿಯಾಗಿರುತ್ತದೆ. ಯಜಮಾನನ ರೂಪವನ್ನು ಆಕರ್ಷಕವನ್ನಾಗಿ ಮಾಡುತ್ತದೆ. ಉತ್ತಮವಾದ ಧ್ಯಾನಕ್ಕೆ ಸಹಾಯಮಾಡುತ್ತದೆ. ಮತ್ತು,

**ಪೇವೋ ದೇವಾನಾಂ ಗುಹ್ಯಾನಿ ನಾಮಾವಿಷ್ಕೃಣೋತಿ ಬರ್ಹಿಷಿ ಪ್ರವಾಚೇ ।**

(ಋ. ಸಂ. ೯-೯೫-೨)

ದೇವತಾತ್ಮನಾದ ಸೋಮರಸವು ಇಂದ್ರಾದಿದೇವತೆಗಳ ರಹಸ್ಯಸ್ವರೂಪವನ್ನು ಪ್ರಕಾಶಪಡಿಸಿ ಯಜಮಾನನಿಗೆ ಗೋಚರವಾಗುವಂತೆ ಮಾಡುತ್ತದೆ.

ಉಳಿದ ಎಲ್ಲಾ ಪಾನೀಯಗಳಿಗಿಂತಲೂ ಸೋಮರಸದ ಪಾನವು ಅತಿಶ್ರೇಷ್ಠವಾದುದು. ಸೋಮರಸವು **ವಯಸ್ಕೃತ್, ವಯೋಧಾಃ**— ಯಜಮಾನನ ಆಯುಸ್ಸನ್ನು ವೃದ್ಧಿಪಡಿಸತಕ್ಕದ್ದು. ಯುದ್ಧರಂಗದಲ್ಲಿ ಚೈತನ್ಯದಾಯಿ; ವೀರ್ಯವನ್ನು ವೃದ್ಧಿಪಡಿಸಿ ಸಂತಾನಕ್ಕೆ ಸಾಧನವಾಗತಕ್ಕದ್ದು. ಇವೆಲ್ಲವೂ ಭೌತಿಕವಾದ ಪುಷ್ಟಿಗೆ ಸೇರಿದವು. ಇವೇ ಅಲ್ಲದೆ,

**ತ್ವಂ ಸೋಮ ಪ್ರ ಚಿಕಿತೋ ಮನೀಷಾ ತ್ವಂ ರಜಿಷ್ಠಮನುನೇಷಿ ಪಂಥಾಂ ।**
**ತವ ಪ್ರಣೀತೀ ಪಿತರೋ ನ ಇಂದೋ ದೇವೇಷು ರತ್ನಮಭಜಂತ ಧೀರಾಃ ॥**

(ಋ. ಸಂ. ೧-೯೧-೧)

ಎಲೈ ಸೋಮದೇವನೇ, ನೀನೇ ನಮಗೆ ಮಾರ್ಗದರ್ಶಕನು. ನಮ್ಮ ಪ್ರಜ್ಞೆಯಿಂದ ನಿನ್ನ ಸ್ವರೂಪವನ್ನರಿತಿದ್ದೇವೆ. ನೀನು ಸಕಲ ಜಗತ್ತನ್ನು ಅಮೃತದಿಂದ ತೋಯಿಸುವಂತೆ ಮಾಡಿದ್ದೀಯೆ. ಉತ್ತಮವಾದ ಕರ್ಮವುಳ್ಳ ನಮ್ಮ ಪಿತೃಗಳನ್ನು ದೇವತೆಗಳ ನಡುವೆ ಸ್ಥಾಪಿಸಿದ್ದೀಯೆ. ನಮಗೆ ಸನ್ಮಾರ್ಗಪ್ರದರ್ಶಕನಾಗಿರು ಇತ್ಯಾದಿಯಾಗಿ ಮಾರ್ಗದರ್ಶಿತ್ವವನ್ನು ಪ್ರಶಂಸಿಸುವುದಲ್ಲದೇ, ಈ ಸೋಮರಸಪಾನದಿಂದ ಆಧ್ಯಾತ್ಮಿಕವಾದ ವಿವೇಕವೂ ಅತೀಂದ್ರಿಯಜ್ಞಾನವೂ ಲಭಿಸುವುದೆಂದೂ ಅನೇಕಕಡೆಗಳಲ್ಲಿ ಸ್ತುತವಾಗಿದೆ. **ಭದ್ರಂ ನೋ ಅಪಿ ವಾತಯ ಮನೋ ದಕ್ಷಮುತ ಕ್ರತುಂ ।** ಈ ಸೋಮರಸಪಾನದಿಂದಲೇ ಸ್ತುತಿಕರ್ತನು ಸ್ತುತಿಯನ್ನು ನಿರ್ಮಿಸಲು ಶಕ್ತನಾದನು. **(ಇತ್ಥಾ ಹಿ ಸೋಮ ಇನ್ಮದೇ ಬ್ರಹ್ಮಾ ಚಕಾರ ವರ್ಧನಂ.)** ಇತ್ಯಾದಿ ಪ್ರಶಂಸೆಗಳೂ ಇವೆ.

ಸೋಮರಸವು ಯಾವ ಅಂಶದಿಂದಲೂ ದೂಷ್ಯವಾದುದಲ್ಲವೆಂಬುದು ನಿರ್ವಿವಾದ ವಿಷಯ. ಸೋಮರಸದ ಪ್ರಭಾವವನ್ನು ವರ್ಣಿಸುವ ನೂರಾರು ವಾಕ್ಯಗಳಲ್ಲಿ ಉದಾಹರಣೆಗೆ ಒಂದೆರಡು ವಾಕ್ಯಗಳನ್ನು ಮಾತ್ರ ಮೇಲೆ ಉದಾಹರಿಸಿದೆ.

ವಿಶ್ವಧಾರಕವಾದ ಯಜ್ಞಕ್ಕೆ ಸೋಮವೇ ಮುಖ್ಯಸಾಧನ. ಈ ಸಾಧನವನ್ನು ಸಂಪಾದಿಸಬೇಕಾದರೆ ಅದಕ್ಕೆ ಅನೇಕ ಕ್ರಿಯಾಕಲಾಪಗಳಿರಬೇಕು. ಲತಾರೂಪವಾದ ಸೋಮವನ್ನು ತಂದು, ಆಯಾ ಯಾಗಕ್ರಿಯಾನುಗುಣವಾಗಿ ವಿಧ್ಯುಕ್ತವಾದ ರೀತಿಯಲ್ಲಿ ಸೋಮವನ್ನು ರಸರೂಪದಲ್ಲಿ ಹಿಂಡಿ, ಅನಂತರ ಯಜ್ಞಸಾಧನರೂಪದಲ್ಲಿ ಉಪಯೋಗಿಸಬೇಕು.

ಸೋಮಾಭಿಷವಕ್ಕೆ ಉಪಯುಕ್ತವಾದ ಸಾಧನಗಳು ಅನೇಕವಾಗಿವೆ. ಅವೆಲ್ಲವನ್ನೂ ವಿಧ್ಯುಕ್ತರೀತಿಯಲ್ಲಿಯೇ ಸಂಪಾದಿಸಬೇಕು. ಅವುಗಳು ಯಾವುವೆಂದರೆ, ಒಟ್ಟಿಗೆ ಸೇರಿಸಿ ಐತರೇಯ ಬ್ರಾಹ್ಮಣದಲ್ಲಿ ಈ ಸಾಧನಗಳು ಹೆಸರುಗಳನ್ನು ಕ್ರಮವಾಗಿ ಈ ರೀತಿ ತಿಳಿಸಿದೆ. ಇವೆಲ್ಲವೂ ಅಧ್ವರ್ಯುವಿನಿಂದ ಸಂಪಾದಿಸಲ್ಪಡತಕ್ಕವು.

**"ಅಧ್ವರ್ಯುಃ ಪುರಸ್ತಾದುಪಕಲ್ಪಯೇತಾಧಿಷವಣಂ ಚರ್ಮಾಧಿಷವಣೇ ಫಲಕೇ ದ್ರೋಣಕಲಶಂ ದಶಾಪವಿತ್ರಮದ್ರೀನ್ ಪೂತಭೃತಂ ಚಾಧವನೀಯಂ ಚ ಸ್ಥಾಲೀಮುದಂಚನಂ ಚಮಸಂ ಚ ತದ್ಯದೇತದ್ರಾಜಾನಂ ಪ್ರಾತರಭಿಷುಣ್ವಂತಿ ತದೇನಾನಿ ದ್ವೇಧಾ ವಿಗೃಹ್ಣೀಯಾತ್ ॥..............."** (ಐ ಬ್ರಾ. ೭-೩೨)

ಹಿಂಡಲು ಬೇಕಾದ ಚರ್ಮ, (**ಅಧಿಷವಣಚರ್ಮ**), ಹಿಂಡಲು ಬೇಕಾದ ಹಲಗೆಗಳು (**ಫಲಕೇ**), **ದ್ರೋಣಕಲಶ, ದಶಾಪವಿತ್ರ**, (ಜಾಲರಿಬಟ್ಟೆ), **ಅದ್ರಿ**, (ಹಿಂಡುವ ಕಲ್ಲು) **ಪೂತಭೃತ್** ಮತ್ತು **ಆಧವನೀಯ** (ಶೋಧಿಸುವ

ಪಾತ್ರೆಗಳು) **ಸ್ಥಾಲೀ, ಉದಂಚನ** (ಸುರಿಯುವ ಪಾತ್ರೆ), **ಚಮಸ** (ಆಹುತಿಯನ್ನರ್ಪಿಸುವ ಅಥವಾ ರಸವನ್ನು ಕುಡಿಯುವ ಸೌಟು).

ಈ ಸಾಧನಗಳು ಸಂಪಾದಿತವಾದನಂತರ, ಸೋಮವನ್ನು ವಿಧ್ಯುಕ್ತವಾಗಿ ಹವಿರ್ಧಾನ ಶಕಟಗಳಿಂದ ತರತಕ್ಕದ್ದು. (ಹವಿರ್ಧಾನ ಶಕಟಗಳ ವಿಷಯವನ್ನು ತಿಳಿಸುವಾಗ ಹಿಂದೆ ಈ ಅಂಶವನ್ನು ತಿಳಿಸಿದೆ). ಅನಂತರ, ಸೋಮಾಭಿಷವವು ಆಯಾ ಸವನಕ್ಕನುಗುಣವಾಗಿರುತ್ತದೆ. (ಇದು ಮೂರು ವಿಭಾಗ. ಪ್ರಾತಃ ಸವನ, ಮಾಧ್ಯಂದಿನ ಸವನ ಮತ್ತು ತೃತೀಯ ಸವನ. ಈ ವಿಭಾಗಗಳನ್ನು ಮಂಡಲದ ಪೀಠಿಕೆಯಲ್ಲಿ ತಿಳಿಸಿದೆ.) ಈ ಅಭಿಷವವು ಆಯಾ ಸವನಸಂಬಂಧಿಗಳಾದ ದೇವತೆಗಳಿಗನುಗುಣವಾಗಿಯೂ ಇರುತ್ತದೆ.

**ತ್ರಯೋ ವೈ ದೇವಾಃ । ವಸವೋ ರುದ್ರಾ ಆದಿತ್ಯಾಸ್ತೇಷಾಂ ವಿಭಕ್ತಾನಿ ಸವನಾನಿ ವಸೂನಾಮೇವ ಪ್ರಾತಃಸವನಗ್ಂ ರುದ್ರಾಣಾಂ ಮಾಧ್ಯಂದಿನಗ್ಂ ಸವನಮಾದಿತ್ಯಾನಾಂ ತೃತೀಯಸವನಂ ತದ್ವಾ ಅಮಿಶ್ರಮೇವ ವಸೂನಾಂ ಪ್ರಾತಃಸವನಮಮಿಶ್ರಗ್ಂ ರುದ್ರಾಣಾಂ ಮಾಧ್ಯಂದಿನಗ್ಂ ಸವನಂ ಮಿಶ್ರಮಾದಿತ್ಯಾನಾಂ ತೃತೀಯ ಸವನಂ ।**

(ಶ ಬ್ರಾ. ೪-೩-೫-೧.)

ದೇವತೆಗಳಲ್ಲಿ ಮೂರು ವಿಧ. ವಸುಗಳು, ರುದ್ರರು ಮತ್ತು ಆದಿತ್ಯರು. ಇವರಲ್ಲಿ ಸವನತ್ರಯವೂ ವಿಭಕ್ತವಾಗಿರುತ್ತದೆ. ವಸುಗಳಿಗೆ ಪ್ರಾತಃಸವನವು. ರುದ್ರರಿಗೆ ಮಾಧ್ಯಂದಿನ ಸವನವು ಆದಿತ್ಯರಿಗೆ ತೃತೀಯ ಸವನವು. ಪ್ರಾತಃ ಸವನವು ಕೇವಲ ವಸುಗಳಿಗೆ ಮಾತ್ರ. ಮಾಧ್ಯಂದಿನ ಸವನವು ಕೇವಲ ರುದ್ರರಿಗೆ ಮಾತ್ರ. ತೃತೀಯ ಸವನವು ಇತರ ದೇವತೆಗಳೊಡಗೂಡಿದ ಆದಿತ್ಯರಿಗೆ ಇದು ಕೇವಲ ಸ್ಥೂಲವಾದ ವಿಭಾಗ. ಇವುಗಳಿಗೆ ಸಂಬಂಧಿಸಿದ ವೈಯಕ್ತಿಕವಾದ ದೇವತೆಗಳು, ಗ್ರಹಪಾತ್ರೆಗಳು, ಶಸ್ತ್ರಮಂತ್ರಗಳು ಇತ್ಯಾದಿ ವಿಷಯಗಳನ್ನು ಮಂಡಲದ ಪೀಠಿಕೆಯಲ್ಲಿ ವಿವರಿಸಲಾಗಿದೆ.

ಸವನತ್ರಯಾತ್ಮಕವಾದ ಸೋಮಯಾಗವನ್ನು ಆಚರಿಸುವುದರಿಂದ ಯಜಮಾನನು ಪಡೆಯುವ ಸದ್ಗತಿಯನ್ನು ಛಾಂದೋಗ್ಯದಲ್ಲಿ ಈ ರೀತಿ ತಿಳಿಸಿದೆ.

ಬ್ರಹ್ಮವಾದಿನೋ ವದಂತಿ । **ಯದ್ವಸೂನಾಂ ಪ್ರಾತಃಸವನಂ ರುದ್ರಾಣಾಂ ಮಾಧ್ಯಂದಿನಂ ಸವನಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ ತೃತೀಯಸವನಂ । ಕ್ವ ತರ್ಹಿ ಯಜಮಾನಸ್ಯ ಲೋಕ ಇತಿ ಸ ಯಸ್ತಂ ನ ವಿದ್ಯಾತ್ಕಥಂ ಕುರ್ಯಾದಥ ವಿದ್ವಾನ್ ಕುರ್ಯಾತ್ ॥**

(ಛಾ. ಉ. ೨, ೨೪. ೧-೨)

ಬ್ರಹ್ಮವಿಷಯಕವಾದ ಜ್ಞಾನವನ್ನು ಹೊಂದಿದ ಮಹರ್ಷಿಗಳು ಈ ರೀತಿ ಪ್ರಶ್ನಿಸುತ್ತಾರೆ. ವಸುಗಳಿಗೆ ಪ್ರಾತಃ ಸವನವೂ, ರುದ್ರರಿಗೆ ಮಾಧ್ಯಂದಿನಸವನವೂ, ಆದಿತ್ಯರಿಗೆ ತೃತೀಯಸವನವೂ ಕ್ಲೃಪ್ತವಾದರೆ, ಆಗ ಯಜಮಾನನ ಲೋಕವೇನು ? ಆ ಲೋಕವಾವುದು ಎಂಬುದು ಅವನಿಗೆ ತಿಳಿಯದಿದ್ದರೆ, ಅವನ ಕರ್ಮಾಚರಣೆಯ ಫಲವು ಹೇಗೆ ಸಿದ್ಧಿಸುತ್ತದೆ ? ಅವನಿಗೆ ಸಿದ್ಧಿಯು ಲಭಿಸಬೇಕಾದರೆ, ಈ ಜ್ಞಾನವು ಅವನಿಗೆ ಅತ್ಯವಶ್ಯಕವಾಗಿರುತ್ತದೆ.

ಪುರಾ ಪ್ರಾತರನುವಾಕಸ್ಯ ಉಪಾಕರಣಾಜ್ಜಘನೇನ ಗಾರ್ಹಪತ್ಯಸ್ಯೋದಙ್ಮುಖ ಉಪವಿಶ್ಯ ಸ ವಾಸವಂ ಸಾಮಮಭಿಗಾಯತಿ ।

**ಲೋಕದ್ವಾರಮಪಾವೃಣು । ಪಶ್ಯೇಮ ತ್ವಾ ವಯಂ ರಾಜ್ಯಾಯ ಇತಿ । ಅಥ ಜುಹೋತಿ ನಮೋಽಗ್ನಯೇ ಪೃಥಿವೀಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ॥**

(ಛಾ. ಉ. ೨–೨೪–೩ ರಿಂದ ೫)

ಪ್ರಾತರನುವಾಕವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಗಾರ್ಹಪತ್ಯಾಗ್ನಿಗೆ ಹಿಂಭಾಗದಲ್ಲಿ ಉತ್ತರಾಭಿಮುಖವಾಗಿ ಕುಳಿತು ವಸುಗಳಿಗೆ ತೃಪ್ತಿಕರವಾದ **"ಲೋಕದ್ವಾರಂ"** ಎಂಬ ಮಂತ್ರವನ್ನು ಪಠಿಸಬೇಕು. ಅದರ ತಾತ್ಪರ್ಯ ವೇನೆಂದರೆ:— "ಎಲೈ ವಸುಗಳೇ, ನಾವು ರಾಜ್ಯವನ್ನು ಪಡೆಯಲು ಸಾಧನವಾದ ನಿಮ್ಮ ದರ್ಶನಕ್ಕಾಗಿ ನಮಗೆ ಬಾಗಿಲನ್ನು ತೆರೆಯಿರಿ'' ಎಂದು ಇರುತ್ತದೆ. ಆಗ "ಪೃಥ್ವೀಸ್ಥನಾದ ಅಗ್ನಿಗೆ ನಮಸ್ಕಾರವು. ಎಲೈ ಅಗ್ನಿಯೇ, ಯಜ್ಞ ಕರ್ತನಾದ ನನಗೆ ಈ ಲೋಕದಲ್ಲಿ ಸ್ಥಾನವನ್ನು ಕಲ್ಪಿಸಿಕೊಡು'' ಎಂದು ಅಗ್ನಿಯನ್ನು ಪೂಜಿಸಿ ಪ್ರಾರ್ಥಿಸಬೇಕು.

**ಪುರಾ ಮಾಧ್ಯಂದಿನಸ್ಯ ಸವನಸ್ಯೋಪಾಕರಣಾಜ್ಜಘನೇನಾಗ್ನೀಧ್ರೀಯಸ್ಯೋದಙ್ಮುಖ ಉಪವಿಶ್ಯ ಸ ರೌದ್ರಂ ಸಾಮಾಭಿಗಾಯತಿ ।**

**ಲೋಕದ್ವಾರಮಪಾವೃಣು ಪಶ್ಯೇಮ ತ್ವಾ ವಯಂ ವೈರಾಜ್ಯಾಯ ಇತಿ ॥**

**ಅಥ ಜುಹೋತಿ ನಮೋ ವಾಯವೇಽಂತರಿಕ್ಷಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ ಲೋಕ ಏತಾಸ್ಮಿ ॥**

(ಛಾ. ಉ. ೨–೨೪–೭ ರಿಂದ ೧೦)

ಮಾಧ್ಯಂದಿನ ಸವನಕ್ಕೆ ಪೂರ್ವಭಾವಿಯಾಗಿ, ಅಗ್ನೀಧ್ರೀಯಾಗ್ನಿಯ ಹಿಂದೆ ಉತ್ತರಾಭಿಮುಖವಾಗಿ ಕುಳಿತು ರುದ್ರರಿಗೆ ತೃಪ್ತಿಕರವಾದ **''ಲೋಕದ್ವಾರಂ''** ಎಂಬ ಮಂತ್ರವನ್ನು ಪಠಿಸಬೇಕು. ಅದರ ತಾತ್ಪರ್ಯವೇನೆಂದರೆ: — "ಎಲೈ ರುದ್ರರೇ, ನಮ್ಮ ವೈರಾಜ್ಯ ಸಂಪಾದನೆಯ ಸಾಧಕವಾದ ನಿಮ್ಮ ದರ್ಶನಕ್ಕಾಗಿ ಬಾಗಿಲನ್ನು ತೆರೆಯಿರಿ'' ಎಂದು ಇರುತ್ತದೆ. ಅನಂತರ, "ಎಲೈ ಅಂತರಿಕ್ಷಸ್ಥರಾದ ವಾಯುಗಳೇ, ಯಜ್ಞಕರ್ತನಾದ ನನಗೂ ನಿಮ್ಮ ಲೋಕದಲ್ಲಿ ಸ್ಥಾನವನ್ನು ಕಲ್ಪಿಸಿಗೊಡಿ'' ಎಂದು ವಾಯುವನ್ನು ಪ್ರಾರ್ಥಿಸಿ ಪೂಜಿಸತಕ್ಕದ್ದು.

**ಪುರಾ ತೃತೀಯಸವನಸ್ಯೋಪಾಕರಣಾಜ್ಜಘನೇನಾಹವನೀಯಸ್ಯೋದಙ್ಮುಖ ಉಪವಿಶ್ಯ ಸ ಆದಿತ್ಯಂ ವೈಶ್ವದೇವಂ ಸಾಮಾಭಿಗಾಯತಿ ।**

**ಲೋಕದ್ವಾರಮಪಾವೃಣು । ಪಶ್ಯೇಮ ತ್ವಾ ವಯಂ ಸಾಂರಾಜ್ಯಾಯ ಇತಿ ॥**

**ಅಥ ಜುಹೋತಿ ನಮ ಆದಿತ್ಯೇಭ್ಯಶ್ಚ ವಿಶ್ವೇಭ್ಯಶ್ಚ ದೇವೇಭ್ಯೋ ದಿವಿಕ್ಷಿದ್ಭ್ಯೋ ಲೋಕಕ್ಷಿದ್ಭ್ಯೋ ಲೋಕಂ ಮೇ ಯಜಮಾನಾಯ ವಿಂದತ ॥**

(ಛಾ. ಉ ೨–೨೪–೯ ರಿಂದ ೧೪)

ತೃತೀಯಸವನಕ್ಕೆ ಪೂರ್ವಭಾವಿಯಾಗಿ ಯಜಮಾನನು ಆಹವನೀಯಾಗ್ನಿಗೆ ಹಿಂದೆ ಉತ್ತರಾಭಿಮುಖವಾಗಿ ಕುಳಿತು ಆದಿತ್ಯರಿಗೂ ವಿಶ್ವೇದೇವತೆಗಳಿಗೂ ತೃಪ್ತಿಕರವಾಗುವಂತೆ **"ಲೋಕದ್ವಾರಂ"** ಎಂಬ ಮಂತ್ರವನ್ನು ಪಠಿಸಬೇಕು ಅದರ ತಾತ್ಪರ್ಯವೇನೆಂದರೆ; ಎಲೈ ಆದಿತ್ಯರೇ, ಎಲೈ ವಿಶ್ವೇದೇವತೆಗಳೇ, ನನಗೂ ಸಾಮ್ರಾಜ್ಯವು ಲಭಿಸುವುದಕ್ಕಾಗಿ ಅದರ ಸಾಧನವಾದ ನಿಮ್ಮ ದರ್ಶನವನ್ನು ಹೊಂದಲು ನಿಮ್ಮ ಲೋಕದ ಬಾಗಿಲನ್ನು ತೆರೆಯಿರಿ'' ಎಂದಿರುತ್ತದೆ.

ಅನಂತರ "ಎಲೈ ದ್ಯುಲೋಕಸ್ಥರಾದ ಆದಿತ್ಯರೇ ಮತ್ತು ವಿಶ್ವದೇವತೆಗಳೇ, ಯಜ್ಞಕರ್ತನಾದ ನನಗೂ ನಿಮ್ಮ ಲೋಕದಲ್ಲಿ ಸ್ಥಾನವನ್ನು ಕಲ್ಪಿಸಿಕೊಡಿ" ಎಂದು ಪ್ರಾರ್ಥಿಸಿ ಪೂಜಿಸತಕ್ಕದ್ದು.

ಹೀಗೆ ಸವನತ್ರಯದ ಆಚರಣೆಯ ಫಲವು ವಿವೃತವಾಗಿದೆ. ಎಂದರೆ, ಸೋಮಯಾಗದ ಅಂಗಗಳಾದ ಮೂರು ಸವನಗಳನ್ನು ವಿಧ್ಯುಕ್ತವಾಗಿ ಆಚರಿಸಿದರೆ ಮೂರು ಲೋಕಗಳಲ್ಲೂ ಉತ್ತಮವಾದ ಸ್ಥಾನವು ಲಭಿಸುವುದು ಎಂದು ತಾತ್ಪರ್ಯ. ಈ ಸರ್ವಲೋಕವ್ಯಾಪಕವಾದ ಪ್ರಭಾವವಿರುವುದರಿಂದಲೇ ಋಕ್ಸಂಹಿತೆಯಲ್ಲಿಯೂ ಸೋಮನ ದಿವ್ಯ ಪ್ರಭಾವವು ಅನೇಕಕಡೆಗಳಲ್ಲಿ ವರ್ಣಿತವಾಗಿದೆ.

ಯಜ್ಞಭೂಮಿಗೆ ಸಂಬಂಧಿಸಿದ ಲೌಕಿಕವಾದ ದಶಾಪವಿತ್ರಾದಿಗಳೂ ಸಹ ವಿಶ್ವವ್ಯಾಪಕವಾದ ಸೋಮನಿಗೆ ಸಕಲಲೋಕಗಳಲ್ಲೂ ಆಧಾರಸ್ಥಾನವಾಗಿರತಕ್ಕವು ಎಂದು ಅನೇಕ ಕಡೆಗಳಲ್ಲಿ ತಿಳಿಸಿದೆ. ಪವಿತ್ರಶಬ್ದಕ್ಕೂ ಸಹ ಒಂದೊಂದೆಡೆಯಲ್ಲಿ ಒಂದೊಂದರ್ಥವಿರುತ್ತದೆ. ಉದಾಹರಣೆಗೆ—

**ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ ।**
**ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥**
(ಋ. ಸಂ. ೯–೮೩–೨)

ಶತ್ರುಗಳಿಗೆ ಹಿಂಸಕನಾದ ಸೋಮನ ಶುದ್ಧಿಜನಕವಾದ ತೇಜಸ್ಸು ದ್ಯುಲೋಕದ ಉಚ್ಛ್ರಿತಸ್ಥಾನದಲ್ಲಿ ವಿಸ್ತೃತವಾಗಿ ಹರಡಿದೆ. ಅವನ ಅಂಶುಗಳು ಪ್ರಕಾಶಮಾನವಾಗಿ ಸರ್ವತ್ರ ಹರಡಿವೆ. ಅವನ ರಸಗಳು ಉತ್ತಮವಾದ ಧ್ಯಾನ ಯುಕ್ತನಾಗಿ ಯಜ್ಞವನ್ನಾಚರಿಸುವ ಯಜಮಾನನನ್ನು ರಕ್ಷಿಸುತ್ತವೆ. ಇತ್ಯಾದಿಯಾಗಿ ಸೋಮದೇವನ ಸರ್ವವ್ಯಾಪಕತ್ವವೂ, ಪ್ರಭಾವವೂ, ಪ್ರಶಂಸಿತವಾಗಿದೆ.

ಆದುದರಿಂದಲೇ ಪ್ರಾರ್ಥನೆಯು,

**"ಯಾವದಿದಂ ಭುವನಂ ವಿಶ್ವಮಸ್ತ್ಯುರುವ್ಯಚಾ ವರಿಮತಾ ಗಭೀರಂ ।**
**ತಾವಾँ ಅಯಂ ಪಾತವೇ ಸೋಮೋ ಅಸ್ತ್ವರಮಿಂದ್ರಾಗ್ನೀ ಮನಸೇ ಯುವಭ್ಯಾಂ ॥**
(ಋ ಸಂ. ೧–೧೦೮–೨)

ಎಲೈ ಇಂದ್ರಾಗ್ನಿಗಳೇ, ನಿಮ್ಮ ವಿಶ್ವವ್ಯಾಪ್ತಿಗಾಗಿ ಪರ್ಯಾಪ್ತವಾಗುವಂತೆ ಈ ಸೋಮವು ನಿಮ್ಮನ್ನು ತೃಪ್ತಿಗೊಳಿಸಲಿ, ಎಂದಿರುವ ಈ ವಾಕ್ಯದಲ್ಲಿ **ಗಭೀರಂ ಮನಸೇ ಯುವಭ್ಯಾಂ** ಇತ್ಯಾದಿ ಪದಗಳು ಬಹಳವಿಧ ತಾತ್ಪರ್ಯವನ್ನು ಹೊಂದಿವೆ. ಸೃಷ್ಟಿಯಿಂದ ಹಿಡಿದು ಸಕಲ ಜಗತ್ತೂ ಬ್ರಹ್ಮನಲ್ಲಿ ಲಯವಾಗಿ ಬ್ರಹ್ಮನ ಆನಂದರೂಪವಾದ ಸ್ಥಿತಿಯನ್ನು ಉಂಟು ಮಾಡುವವರೆಗೆ, ಇಂದ್ರಾಗ್ನಿರೂಪನಾದ ಬ್ರಹ್ಮನಿಗೆ ಚೈತನ್ಯದಾಯಿಯು ಈ ಸೋಮವೇ. ಮೂರು ಲೋಕಗಳ ವ್ಯವಹಾರಗಳಿಗೂ ಮೂಲಕಾರಣನೂ ಸೋಮನೇ–ಮೋಕ್ಷರೂಪವಾದ ಆನಂದದಾಯಕನೂ ಸೋಮನೇ. ಆದುದರಿಂದಲೇ,

**ಯತ್ರ ಜ್ಯೋತಿರಜಸ್ರಂ............ತಸ್ಮಿನ್ಮಾಂ ಧೇಹಿ............॥** (ಋ. ಸಂ ೯-೧೧೩-೭)
**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧೀಂದ್ರಾಯೇಂದೋಪರಿಸ್ರವ ॥**
(ಋ. ಸಂ. ೯, ೧೧೩. ೭–೧೧)

ಎಂದು ಪ್ರಾರ್ಥಿಸಿದೆ.

ಐಹಿಕಸುಖಸಾಧನವಾದ ಐಶ್ವರ್ಯಾದಿಸಂಪತ್ತಿಗೂ, ಯಜಮಾನನಿಗೆ ಈ ಸಂಪತ್ಪ್ರದರಾದ ಇಂದ್ರಾದಿಗಳಿಗೆ ಚೈತನ್ಯಸಂಪಾದನೆಗೂ, ಸರ್ವಲೋಕದ ಸಮನ್ವಯದ ಸಂಪಾದನೆಗೂ, ಮೋಕ್ಷರೂಪವಾದ ಆನಂದಪ್ರಾಪ್ತಿಗೂ ಸೋಮನೇ ಕಾರಣನು. ದೇವಮಾನವಾದಿಗಳ ಯಜ್ಞರೂಪವಾದ ಸಕಲ ವ್ಯವಹಾರಸಿದ್ಧಿಗೂ ಸೋಮನೇ ಸಾಧಕನು, ಅವನೇ ಆಶ್ರಯನು. ಸಾಧ್ಯ, ಸಾಧನ, ಸಿದ್ಧಿ ಸಕಲವೂ ಅವನೇ ಎಂದು ತಾತ್ಪರ್ಯ.

ಆದುದರಿಂದಲೇ, ಒಂಭತ್ತನೆಯ ಮಂಡಲದ ಪ್ರಶಂಸೆಯನ್ನೆಲ್ಲಾ **" ಪಾವಮಾನೀರ್ಯೋ ಅಧ್ಯೇತಿ "** ಎಂಬ ಮಂತ್ರದಲ್ಲಿ ಸಂಕ್ಷಿಪ್ತವಾಗಿ ಅಡಗಿದೆ

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತ ನೃಸಿಂಹರಾಜ ಒಡೆಯರ್,** ಎಂಬ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಆಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ಜಯನಾಮ ಸಂ॥ ಶ್ರಾವಣ ಬ॥ ದಶಮೀ ಸೋಮವಾರ
ತಾ॥ 23-8-1954

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

# ವಿ ಷ ಯಾ ನು ಕ್ರ ಮ ಣಿ ಕೆ

## ಏಳನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

### ಒಂಭತ್ತನೆಯ ಮಂಡಲದ ಸೂಕ್ತಗಳು

## ಮಂಡಲದ ಪೀಠಿಕೆ

ಪೀಠಿಕೆ ಸಮಾಪ್ತವು

ಏಳನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.

---

## ಎರಡನೆಯ ಅಧ್ಯಾಯವು



ಏಳನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವು.

## ಮೂರನೆಯ ಅಧ್ಯಾಯವು



ಏಳನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವು

---

## ನಾಲ್ಕನೆಯ ಅಧ್ಯಾಯ

ಏಳನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವು.

ವಿಷಯಾನುಕ್ರಮಣಿಕೆ ಸಮಾಪ್ತವು.





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

ಭಾಗ ೨೬

## ॥ ಅಥ ಸಪ್ತಮಾಷ್ಟಕೇ ಪ್ರಥಮೋಽಧ್ಯಾಯಃ ॥

ನವಮಂ ಮಂಡಲಂ

## ಏಳನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

ಒಂಭತ್ತನೆಯ ಮಂಡಲದ ಸೂಕ್ತಗಳು

## ಮಂಡಲದ ಪೀಠಿಕೆ.

### ಸೋಮಲತೆಯ ವಿಚಾರ

ಸೋಮಲತೆಯ ವಿಷಯವಾಗಿ ನಾವು ಅನೇಕಾವರ್ತಿ ವಿವರಣೆಯನ್ನು ಮಾಡಿದ್ದೇವೆ. ಆದರೆ ಅಲ್ಲೆಲ್ಲಾ ಸೋಮವು ಸೋಮವೆಂಬ ಒಂದು ವಿಧವಾದ ಲತೆಗಳಿಂದ ತೆಗೆಯುವ ರಸವೆಂದೂ, ಅದನ್ನು ಪಾನಮಾಡುವವರಿಗೆ ಉತ್ಸಾಹವನ್ನೂ ಸಂತೋಷವನ್ನೂ ಮಾಡುವುದೆಂದೂ, ದೇವತೆಗಳನ್ನು ಆಹ್ವಾನಮಾಡುವಾಗ ಆ ದೇವತೆಗಳು ಯಜ್ಞಭೂಮಿಗೆ ಬಂದು ಸೋಮರಸವನ್ನು ಪಾನಮಾಡಬೇಕೆಂದೂ ಅನೇಕ ವರ್ಣನೆಗಳು ಉಕ್ತವಾಗಿವೆ. ಸೋಮವನ್ನು ದೇವತೆಯೆಂದೇ ಭಾವಿಸಿ ಸ್ತೋತ್ರಮಾಡಿರುವ ಸೂಕ್ತಗಳು ಒಂಭತ್ತನೆಯ ಮಂಡಲವನ್ನು ಬಿಟ್ಟರೆ ಇತರ ಮಂಡಲಗಳಲ್ಲಿ ಅತಿವಿರಳ. ಒಂಭತ್ತನೆಯ ಮಂಡಲದಲ್ಲಿರುವ ಸೂಕ್ತಗಳೆಲ್ಲಾ ಸೋಮದೇವತೆಯನ್ನು ಮಾತ್ರವೇ ಸ್ತುತಿಸುವುದಾಗಿವೆ. ಈ ಸಂದರ್ಭದಲ್ಲಿ ಸೋಮವಿಷಯವಾದ ವಿಸ್ತಾರವಾದ ವಿವರಣೆಯು ಅವಶ್ಯಕವಾದರೂ ಇಲ್ಲಿ ಸೂಕ್ಷ್ಮ ವಿವರಣೆಯು ಅಪ್ರಕೃತವಾಗಲಾರದು.

ಸೋಮಯಾಗಗಳು ಋಗ್ವೇದದ ಕರ್ಮಗಳಲ್ಲಿ ಬಹು ಮುಖ್ಯವಾದುದರಿಂದ, ಸೋಮದೇವತೆಯೂ ಪ್ರಧಾನ ದೇವತೆಗಳಲ್ಲಿ ಒಂದಾಗಿರುವುದು ಸ್ವಾಭಾವಿಕವಾದುದೇ. ಒಂಭತ್ತನೆಯ ಮಂಡಲದಲ್ಲಿರುವ ೧೧೪ ಸೂಕ್ತಗಳೂ, ಬೇರೆ ೬ ಸೂಕ್ತಗಳೂ ಸೇರಿ ಒಟ್ಟು ೧೨೦ ಸೂಕ್ತಗಳು ಸೋಮದೇವತೆಯನ್ನು ಹೊಗಳುತ್ತವೆ. ೪-೫ ಸೂಕ್ತಭಾಗಗಳೂ, ಮತ್ತು ಇಂದ್ರ, ಅಗ್ನಿ, ಪೂಷಣ, ಅಥವಾ ರುದ್ರರ ಜೊತೆಯಲ್ಲಿ ೫-೭ ಸೂಕ್ತಗಳೂ, ಸೋಮದೇವತೆಯನ್ನು ಸ್ತುತಿಸುತ್ತವೆ. ಸೋಮ ಎಂಬ ಹೆಸರು ಒಂಟಿಯಾಗಿ ಅಥವಾ ಸಮಸ್ತಪದವಾಗಿ ಸುಮಾರು ೧೨೦ ಸಲ ಬರುತ್ತದೆ. ಸಂಖ್ಯಾದೃಷ್ಟಿಯಿಂದ, ಸೋಮದೇವತೆಯು ಮೂರನೆಯದು. ಮನುಷ್ಯತ್ವಾರೋಪಣೆಯು ಬಹಳ ಮಿತವಾಗಿದೆ. ಸೋಮಲತೆ ಮತ್ತು ಆದರ ರಸಗಳು ಪದೇ ಪದೇ ಉಕ್ತವಾಗಿರುವುದರಿಂದ, ಸಂಪೂರ್ಣವಾಗಿ ಅವುಗಳನ್ನು ಮರೆಯುವುದು ಅಸಾಧ್ಯ. ಅದರಿಂದಲೇ ಆ ದೇವತೆಯ ರೂಪ, ಅಂಗಾಂಗಳು ಅಥವಾ ಚಲನವಲನಾದಿಗಳ ಪ್ರಸಕ್ತಿಯೂ ಅಪರೂಪ. ಪರಾಕ್ರಮಕಾರ್ಯಗಳೇನಾದರೂ ಉಕ್ತವಾಗಿದ್ದರೂ, ಇತರ ದೇವತೆಗಳಿಗೆ ಸಮಾನವಾಗಿದ್ದು, ನಿರ್ವರ್ಣ್ಯ ಅಥವಾ ಅಪ್ರಧಾನವಾಗಿವೆ. ಇತರ ದೇವತೆಗಳಂತೆ, ಇಂದು ಅಥವಾ ಸೋಮ ಎಂಬ ಹೆಸರಿನಿಂದ ಯಾಗಕ್ಕೆ ಬಂದು, ದರ್ಭಾಸನದಲ್ಲಿ ಮಂಡಿಸಿ, ಹೋಮದ್ರವ್ಯಗಳನ್ನು ಸ್ವೀಕರಿಸಬೇಕೆಂದು, ಇವನಿಗೂ ಆಹ್ವಾನವಿದೆ. ಒಂಭತ್ತನೆಯ ಮಂಡಲ ಪೂರ್ತಿ, ಸೋಮರಸದ ವಿಷಯವೇ ಪ್ರಸ್ತುತವಾಗಿರುವುದು ; ಕಲ್ಲುಗಳಿಂದ ರಸವನ್ನು ಹಿಂಡುವುದು, ಊರ್ಣಮಯವಾದ ಜರಡಿಯ ಮೂಲಕ ಮರದಪಾತ್ರೆಗಳಿಗೆ ಶೋಧಿಸುವುದು, ದೇವತೆಗಳಿಗೆ ಪಾನೀಯವಾಗಿ ಅಗ್ನಿಯ ಮೂಲಕ ಅರ್ಪಿಸುವುದು (೧-೯೪-೧೪ ; ೫-೫೧-೧ ; ೮-೪೬-೧೧ ಇತ್ಯಾದಿ), ಅಥವಾ ಋತ್ವಿಜರು ಪಾನಮಾಡುವುದು, ಇತ್ಯಾದಿ ವಿಷಯಗಳೇ ಉಕ್ತವಾಗಿವೆ.

ಸೋಮರಸವು ಮೂರು ವಿಧವಾಗಿ ಮಿಶ್ರಿತವಾಗುತ್ತದೆ. (ತ್ರ್ಯಾಶಿರಃ ೫-೨೭-೫), ಕ್ಷೀರಮಿಶ್ರಿತ (ಗವಾಶಿರ), ದಧಿಮಿಶ್ರಿತ (ದಧ್ಯಾಶಿರ) ಮತ್ತು ಯವ ಮಿಶ್ರಿತ (ಯವಾಶಿರ) ; ಈ ಮಿಶ್ರಣಕ್ಕೆ ವಸ್ತ್ರಧಾರಣವೆಂದು (ವಸ್ತ್ರ, ವಾಸಃ, ಅತ್ಕ) ಹೇಳಿದೆ. "ನಿರ್ಣಿಕ್" (ಹೊಳೆಯುವ ಉಡುಪು ೯-೧೪-೫) ಎಂದು ಹೇಳುವುದೂ ಉಂಟು. ಈ ಪದವು ಜರಡಿಗೂ ಪ್ರಯೋಗಿಸಿದೆ (೯-೭೦-೭) ಇದರಿಂದಲೇ ಸೋಮವನ್ನು ಸೌಂದರ್ಯಯುಕ್ತವಾದುದು (೯-೩೪-೪ ; ಇತ್ಯಾದಿ) ಮತ್ತು ಯಥೇಚ್ಛವಾಗಿ ಒಡವೆಗಳಿಂದ ಅಲಂಕೃತವಾದುದು (೯-೮೧-೨) ಎಂದು ವರ್ಣಿಸಿರುವುದು. ಅಪರೂಪವಾಗಿ ಘೃತ (೯-೮೨-೨) ಅಥವಾ ಉದಕ ಮಿಶ್ರಣವೂ ಉಕ್ತವಾಗಿದೆ ; ಆದರೆ ಇವುಗಳಿಗೆ ಆಶಿರಪದವನ್ನು. ಉಪಯೋಗಿಸಿಲ್ಲ.

ಯಾಗಗಳಲ್ಲಿ ಆಪ್ಯಾಯನ (ಅರ್ಧ ಹಿಂಡಲ್ಪಟ್ಟ ಸೋಮಲತೆಗಳನ್ನು ಪುನಃ ನೀರಿನಲ್ಲಿ ನೆನೆಯಿಸುವುದು.) ವೆನ್ನುವುದೊಂದು ಕರ್ಮ (ವೈ. ಸಂ. ೪-೫-೫). ಋಗ್ವೇದದಲ್ಲಿ ಈ ಧಾತುವು (ಆಪ್ಯಾ) ಸೋಮಕ್ಕೆ ಸಂಬಂಧಿಸಿದಂತೆ ಪ್ರಯೋಗಿಸಲ್ಪಟ್ಟಿದೆ. ಆದರೆ ಇಲ್ಲಿ ಸೋಮನು ಚಂದ್ರನಿಗೆ ಸಮಾನನು ಎಂದು ಸೂಚಿಸುವುದಕ್ಕಾಗಿ ಆ ಧಾತು ಉಪಯೋಗಿಸಿರುವುದು. ಒಂದು ಸ್ಥಳದಲ್ಲಿ (೯-೩೧-೪) ಮಾತ್ರ ಈ ಯಜ್ಞಾಂಗಕರ್ಮವನ್ನು ಸೂಚಿಸಬಹುದು, ಸೋಮರಸವು, ನದಿ ಅಥವಾ ಸಮುದ್ರದಂತೆ ಉಬ್ಬುತ್ತದೆ. (೯-೬೪-೮, ೯-೧೦೭-೧೨) ಎಂದು ಹೇಳಿದೆ.

ಸೋಮವು ದಿನಕ್ಕೆ ಮೂರುಸಲ ಹಿಂಡಲ್ಪಡುತ್ತದೆ. ಋಭು ದೇವತೆಗಳು ಸಾಯಂಸವನಕ್ಕೂ (೪-೩೩-೧೧ : ಇತ್ಯಾದಿ), ಇಂದ್ರನು ಒಬ್ಬನೇ (೪-೩೬-೭) ಮಧ್ಯಾಹ್ನ ಸವನಕ್ಕೂ (೩-೨೧-೧ ಮತ್ತು ೨ : ೮-೩೭-೧), ಮತ್ತು ಇಂದ್ರನು ಪ್ರಥಮ ಪಾನಮಾಡಲು ಪ್ರಾತಃಸವನಕ್ಕೂ ಆಹೂತರಾಗುತ್ತಾರೆ. (೧೦-೧೧೨-೧)

ಸಾಧಾರಣವಾದ ಆಹಾರ ಅಥವಾ ಪಾನೀಯಗಳಲ್ಲಿ ಇರದೇ ಇರುವ, ಅನಿರ್ವಾಚ್ಯವಾದ ಒಂದು ಶಕ್ತಿ ಸೋಮರಸಕ್ಕೆ ಇದೆ ಈ ಶಕ್ತಿಯಿಂದ ಮನುಷ್ಯರನ್ನು, ಅಥವಾ ಅದನ್ನು ಪಾನಮಾಡಿದವರು ಯಾರೇ ಆಗಲಿ, ಅವರನ್ನು ಚೇತನಗೊಳಿಸಿ, ಮನುಷ್ಯರಿಗೆ ಸಾಧ್ಯವಲ್ಲದ ಕಾರ್ಯಗಳನ್ನೂ ಸಾಧಿಸುವಂತೆ ಮಾಡುತ್ತದೆ. ಆದುದರಿಂದಲೇ, ಇದು ದಿವ್ಯವಾದ ಪಾನೀಯ, ಅಮೃತಕ್ಕೆ ಸಮಾನವಾದುದು, ಅದೇ ಅಮೃತ ಎಂಬ ಭಾವನೆಗೆ ಅವಕಾಶವಾಗಿದೆ. ಇದನ್ನು ಪಾನಮಾಡಿದರೆ ಅಮರರಾಗುತ್ತಾರೆ ಎಂದು ಹೇಳಿದರೂ ಅತಿಶಯೋಕ್ತಿಯಾಗಲಾರದು. ದೇವತೆಗಳಿಗೆ ಪ್ರಿಯವಾದ (೯–೮೫–೨) ಮತ್ತು ಅಮರತ್ವಸಾಧಕವಾದ ಮದ್ಯ (೧–೮೪–೪) ; ಮನುಷ್ಯರಿಂದ ಸುತವಾಗಿ, ಕ್ಷೀರ ಮಿಶ್ರಿತವಾದ, ಈ ರಸವನ್ನು ದೇವತೆಗಳೆಲ್ಲರೂ ಪಾನಮಾಡುತ್ತಾರೆ (೯–೧೦೯–೧೫), ಇದರಿಂದ ಅವರಿಗೆ ಶೀಘ್ರವಾಗಿ ಉಲ್ಲಾಸವುಂಟಾಗುತ್ತದೆ (೮–೨–೧೮) ಮತ್ತು ಪಾನಮಾಡಿ ಹೃಷ್ಟರಾಗುತ್ತಾರೆ (೮–೫೮–೧೧). ಸೋಮವು ನಿತ್ಯವಾದುದು (೧–೪೩–೯ ; ೮–೮೮–೧೨ ; ೯–೩–೧ ಇತ್ಯಾದಿ), ದೇವತೆಗಳು ಅಮರತ್ವಪ್ರಾಪ್ತಿಗಾಗಿ ಅದನ್ನು ಪಾನಮಾಡಿದರು (೯–೧೦೬–೮). ಅವನು (ಸೋಮದೇವತೆಯು) ದೇವತೆಗಳಿಗೆ (೧–೯೧–೬ ; ೯–೧೦೮–೩) ಮತ್ತು ಮನುಷ್ಯರಿಗೆ ಅಮರತ್ವವನ್ನು ಅನುಗ್ರಹಿಸುತ್ತಾನೆ (೧–೯೧–೧ ; ೮–೮೯–೩). ಶಾಶ್ವತವಾದ ತೇಜಸ್ಸು ಮತ್ತು ಯಶಸ್ಸುಗಳಿಗೆ ಸ್ಥಾನವೂ, ಅವಿನಾಶಿಯೂ, ವೈವಸ್ವತನ ವಾಸಸ್ಥಳವೂ ಆದ ಲೋಕದಲ್ಲಿ, ತನ್ನ ಆರಾಧಕನನ್ನು ಅಮರನನ್ನಾಗಿ ಮಾಡಿ, ಇರಿಸುತ್ತಾನೆ (೯–೧೧೩–೭ ಮತ್ತು ೮) ಇತ್ಯಾದಿ ವರ್ಣನೆಗಳಿವೆ.

ಸೋಮರಸಪಾನದಿಂದ ಮನುಷ್ಯನಿಗೆ ಉತ್ಸಾಹವು ಹೆಚ್ಚುತ್ತದೆ. ಆದರೆ ಸೋಮರಸವು ಮುಖ್ಯವಾಗಿ ದೇವತೆಗಳಿಗೆ ಅರ್ಪಿತವಾಗುತ್ತದೆ. ಆದುದರಿಂದ ಸೋಮಜನ್ಯವಾದ ಸಂತೋಷ, ಉತ್ಸಾಹಗಳು ದೇವತೆಗಳಿಗೆ ಉಂಟಾಗುತ್ತವೆ. ಸೋಮಜನ್ಯವಾದ ಮದದ ಪರಿಣಾಮವು ಹೆಚ್ಚಾಗಿ ಇಂದ್ರನ ಮೇಲೆಯೇ ಆಗಿದೆ. ವಾಯುಮಂಡಲದಲ್ಲಿರುವ ವಿರುದ್ಧಶಕ್ತಿಗಳನ್ನು ಅಡಗಿಸುವುದಕ್ಕೆ ಇಂದ್ರನಿಗೆ ಸಹಕಾರಿಯಾಗುತ್ತದೆ. ವೃತ್ರನೊಡನೆ ಯುದ್ಧಮಾಡಲು ಬೇಕಾದ ವಿಶೇಷ ಶಕ್ತಿಯು, ಸಾಮರ್ಥ್ಯವು ಸೋಮರಸದಿಂದ ಬಂದಿತೆಂದು ಅನೇಕಸಲ ಉಕ್ತವಾಗಿದೆ (೮–೮೧–೧೭ ಇತ್ಯಾದಿ) ಸೋಮರಸದಿಂದುಟಾದ ಮದದಲ್ಲಿ, ಇಂದ್ರನು ಎಲ್ಲಾ ಶತ್ರುಗಳನ್ನೂ ಸೋಲಿಸುತ್ತಾನೆ. (೯–೧–೧೦) ಮತ್ತು ಸೋಮಪಾನಮಾಡಿದ ಇಂದ್ರನನ್ನು ಸಂಗ್ರಾಮದಲ್ಲಿ ಯಾರೂ ಎದುರಿಸಲಾರರು (೬–೪೭–೧). ಸೋಮವೇ ಇಂದ್ರನ ಆತ್ಮ (೯–೮೫–೩) ; ಶುಭಕಾರಕನಾದ ಮಿತ್ರನು (೧೦–೨೫–೯) ಇಂದ್ರನ ಪರಾಕ್ರಮವನ್ನು ಅಭಿವೃದ್ಧಿಪಡಿಸುತ್ತಾನೆ (೯–೭೬–೨) ; ಮತ್ತು ವೃತ್ರವಧೆಯಲ್ಲಿ ಸಹಾಯಮಾಡುತ್ತಾನೆ (೯–೬೧–೨೨). ಸೋಮಸಹಚರಿತನಾಗಿ, ಇಂದ್ರನು ಮನುಷ್ಯರಿಗೋಸ್ಕರ ನೀರು ಹರಿಯುವಂತೆ ಮಾಡಿದನು ಮತ್ತು ಅಹಿಯನ್ನು ವಧಿಸಿದನು (೪–೨೮–೧). ಇದರಿಂದ ಒಂದೊಂದುಸಲ ಸೋಮವೇ ಇಂದ್ರನ ವಜ್ರಾಯುಧವೆಂದೂ ಹೇಳಲ್ಪಡುತ್ತದೆ. (೯–೭೨–೭ ; ೯–೭೭–೧ ; ೯–೧೧೧–೩). ಇಂದ್ರಸಂಬಂಧಿಯಾದ, ಈ ಸೋಮರಸವು ಸಹಸ್ರಜಯಪ್ರಾಪಕವಾದ ವಜ್ರಾಯುಧವಾಗುತ್ತದೆ (೯–೪೭–೩). ನೂರಾರು ದುರ್ಗಗಳನ್ನು ನಾಶಮಾಡಬಲ್ಲ ಮದ್ಯವೇ ಸೋಮರಸ (೯–೪೮–೨) ಮತ್ತು ವೃತ್ರವಧಕಾರಿಯೂ, ಮದಕಾರಿಯೂ ಆದ ಲತೆ (೬–೧೭–೧೧). ಈ ರೀತಿಯಲ್ಲಿ ಸೋಮದೇವತೆಯೇ ಇಂದ್ರನಂತೆ, ವೃತ್ರವಧೆಯನ್ನು ಮಾಡುವವನು ಮತ್ತು ದುರ್ಗಗಳನ್ನು ಭೇದಿಸುವವನು (೯–೮೮–೪) ಎನ್ನಿಸಿಕೊಳ್ಳುತ್ತಾನೆ. ಇಂದ್ರನ ವೈಯಕ್ತಿಕವಿಶೇಷಣವಾದ 'ವೃತ್ರಹಾ' ಎಂಬುದು ಸೋಮನಿಗೆ ಐದಾರುಸಲ ಪ್ರಯೋಗಿಸಲ್ಪಟ್ಟಿದೆ.

ಅತಿಮುಖ್ಯವಾದ ಲತೆಯಾದುದರಿಂದ, ಸೋಮಲತೆಯನ್ನು ಸಸ್ಯಗಳಿಗೆಲ್ಲಾ ಅಧಿಪತಿಯೆಂತಲೂ (೯–೧೧೪–೨), ರಾಜನೆಂತಲೂ (೯–೯೭–೧೮ ಮತ್ತು ೧೯) ವನಸ್ಪತಿ (೧–೯೧–೬ ; ೯–೧೨–೭) ಮತ್ತು ಸಸ್ಯಗಳಿಗೆಲ್ಲಾ

ಮೂಲಭೂತವಾದುದು (೧-೯೧-೨೨) ಎಂದೂ ಹೇಳಿದೆ. ಬ್ರಾಹ್ಮಣಗಳಲ್ಲಿ ವೃಕ್ಷಗಳಿಗೆಲ್ಲಾ, ಸೌಮ್ಯ (ಸೋಮಸಂಬಂಧವುಳ್ಳವು, (ಶ. ಬ್ರಾ. ೧೨-೧-೧-೨) ಎಂದು ಹೆಸರಿದೆ. ಅಲ್ಲದೆ, ಇತರ ಪ್ರಮುಖ ದೇವತೆಗಳಂತೆ, ಸೋಮನಿಗೂ ರಾಜನೆಂಬ ಹೆಸರಿದೆ. ನದಿಗಳಿಗೆ (೯-೮೯-೨) ಇಡೀ ಪ್ರಪಂಚಕ್ಕೆ (೯-೯೭-೫೮) ರಾಜನು. ದೇವತೆಗಳಿಗೆ ರಾಜ ಅಥವಾ ತಂದೆ (೯-೮೬-೧೦ ; ೯-೮೭-೨ ; ೯-೧೦೯-೪) ; ದೇವಮಾನವರಿಗೆ (೯-೯೭-೨೪), ಬ್ರಾಹ್ಮಣರಿಗೆ (ವಾ. ಸಂ. ೯-೪೦ ; ತೈ. ಸಂ. ೧-೮-೧೦; ಮೈ. ಸಂ. ೨-೬-೯) ರಾಜನು. ದೇವತೆಯೆಂಬುದೇನೋ ಅನೇಕಸಲ ಹೇಳಲ್ಪಟ್ಟಿದೆ ; ಒಂದು ಕಡೆ ಮಾತ್ರ ಅವನು ದೇವತೆಗೋಸ್ಕರ ಸುತ (ಹಿಂಡಲ್ಪಡುವನಾಗುವ) ದೇವತೆ (೯-೩-೬ ಮತ್ತು ೭) ಎಂದು ಉಕ್ತವಾಗಿದೆ.

ಈಚಿನ ಸಾಹಿತ್ಯದಲ್ಲಿ 'ಸೋಮ' ಎಂಬುದು ಚಂದ್ರನ ಹೆಸರು. ದೇವತೆಗಳು ಇವನನ್ನು ಪಾನಮಾಡಿದುದರಿಂದ ಅವನು ಕ್ಷಯಿಸಿಹೋದಾಗ, ಸೂರ್ಯನು ಅವನನ್ನು ಪೂರ್ಣಮಾಡುತ್ತಾನೆ. ಛಾಂದೋಗ್ಯೋಪನಿಷತ್ತಿನಲ್ಲಿ (೫-೧೦-೧), ಚಂದ್ರನೇ ಸೋಮನೆಂದೂ, ಅವನು ದೇವತೆಗಳ ಆಹಾರವೆಂದೂ, ಅವರು ಅವನನ್ನು ಪಾನಮಾಡಿಬಿಡುವರೆಂದೂ ಇದೆ. ಬ್ರಾಹ್ಮಣಗಳಲ್ಲಿಯೇ ಚಂದ್ರ ಸೋಮರ ಐಕ್ಯವು ಸಾಧಾರಣವಾದ ವಿಷಯವಾಗಿದೆ. ರಾಜನಾದ ಸೋಮನು ದೇವತೆಗಳ ಆಹಾರ ಮತ್ತು ಅವನೇ ಚಂದ್ರ. (ಶ. ಬ್ರಾ. ೧-೬-೪-೫) ಯಾಗೋಪಯುಕ್ತವಾದ ಆ ಗಿಡ ಅಥವಾ ಅದರ ರಸವು ಚಂದ್ರದೇವತೆಯನ್ನು ಸೂಚಿಸುತ್ತದೆ. (ಕೌ. ಬ್ರಾ. ೭-೧೦ ; ೪-೪), ಪಿತೃಗಳು ಮತ್ತು ದೇವತೆಗಳು ಅಮೃತಸ್ವರೂಪಿಯಾದ ಅವನನ್ನು ಭಕ್ಷಿಸುವುದರಿಂದ ಚಂದ್ರನು ದಿನೇ ದಿನೇ ಕ್ಷಯಿಸಿಹೋಗುತ್ತಾನೆ ಎಂಬುದೇ ಬ್ರಾಹ್ಮಣಗಳ ಅಭಿಪ್ರಾಯ. ಯಜುರ್ವೇದದಲ್ಲಿ, ಚಂದ್ರನಿಗೆ ಪ್ರಜಾಪತಿಯ ಪುತ್ರಿಯರು ಪತ್ನಿಯರೆಂದೂ, ಅವರೇ ನಕ್ಷತ್ರಪುಂಜವೆಂದೂ ಉಕ್ತವಾಗಿದೆ. ಅಥರ್ವವೇದದಲ್ಲಿ, (ಅ. ವ. ೭-೮೧-೩ ಮತ್ತು ೪ ; ೧೧-೬-೭ ಇತ್ಯಾದಿ) ಸಾಧಾರಣವಾಗಿ ಸೋಮ ಎಂದಿರುವೆಡೆಯಲ್ಲೆಲ್ಲಾ ಚಂದ್ರನೆಂದೇ ಅಭಿಪ್ರಾಯ. ಚಂದ್ರಸೋಮರ ಐಕ್ಯವನ್ನು ಹೇಳುವ ವಾಕ್ಯಗಳಲ್ಲಿ ಸೋಮ ಮತ್ತು ಸೂರ್ಯೆಯರ ವಿವಾಹವನ್ನು ವರ್ಣಿಸುವ ೧೦-೮೫ ನೇ ಸೂಕ್ತವೇ ಮುಖ್ಯವಾದುದು. ಇಲ್ಲಿ ಸೋಮವು ನಕ್ಷತ್ರಗಳ ಅಂಕದಲ್ಲಿದೆ. ಋತ್ವಿಜರಿಗೆ ಪರಿಚಿತವಾದ ಸೋಮವನ್ನು ಯಾರೂ ಭುಜಿಸುವುದಿಲ್ಲ ಮತ್ತು ಈ ಸೋಮಕ್ಕೂ, ಅವರು ಅಭಿಷವ ಮಾಡಬೇಕಾದುದಕ್ಕೂ ಭೇದವಿದೆ ಎಂದು ಹೇಳಿದೆ. ಇದರ ಗುಟ್ಟು ಬ್ರಾಹ್ಮಣರಿಗೆ ಮಾತ್ರ ತಿಳಿದಿದೆ. ಸೋಮವು ಸ್ವರ್ಗೀಯ, ಕಾಂತಿಯುಕ್ತ, ತಮೋನಿವಾರಕ ಇತ್ಯಾದಿಯಾಗಿ ವರ್ಣನೆಗಳು ಇದ್ದೇ ಇವೆ ; ಅದಕ್ಕೆ 'ಇಂದು' ಎಂದು ಹೆಸರು (೬-೪೪-೨೧). ಪಾತ್ರೆಗಳಲ್ಲಿರುವ ನೀರಿನಲ್ಲಿ ಪ್ರತಿಬಿಂಬಿತವಾದ ಚಂದ್ರನಿಗೆ ಹೋಲಿಸಿದೆ (೮-೭೧-೮ ; ೧-೧೦೫-೧ ನ್ನು ಹೋಲಿಸಿ). ದ್ರಪ್ಸ (ಹನಿ, ಬಿಂದು) ಎಂದು ವರ್ಣಿತವಾಗಿ, ಸಮುದ್ರಕ್ಕೆ ಹೋಗುವ (೧೦-೧೨೩-೮) ಸೋಮವೂ ಚಂದ್ರನೇ ಇರಬೇಕು.

ಕೆಲವರ ಅಭಿಪ್ರಾಯದಲ್ಲಿ ಸೋಮವೆಂದರೆ ಚಂದ್ರನೇ ಹೊರತು ಬೇರೆ ದೇವತೆಯೇ ಅಲ್ಲ. ಒಂಭತ್ತನೆಯ ಮಂಡಲವೆಲ್ಲಾ ಈ ಚಂದ್ರನನ್ನೇ ಸ್ತುತಿಸುತ್ತವೆ. ಋಗ್ವೇದದಲ್ಲಿ ಈ ಪದವು ಎಲ್ಲಿ ಬಂದರೂ ಸೋಮಲತೆ ಅಥವಾ ಚಂದ್ರ ಇವೆರಡನ್ನೇ ಸೂಚಿಸುವುದು. ಆ ಲತೆಯಿಂದ ಬರುವ ರಸವೇ ಅಮೃತವೆಂತಲೂ, ಆ ಅಮೃತಕ್ಕೆ ಚಂದ್ರನು ಆಶ್ರಯನೆಂತಲೂ, ಸೂರ್ಯನಿಗಿಂತಲೂ ಚಂದ್ರನೇ ಮುಖ್ಯ ದೇವತೆ ಮತ್ತು ಇವನ ನಂತರ ಇಂದ್ರನು ಎಂತಲೂ ವಾದಿಸುತ್ತಾರೆ.

ಮತ್ತೆ ಕೆಲವರು ಈ ಮೇಲಿನ ಅಭಿಪ್ರಾಯಕ್ಕೆ ಋಗ್ವೇದದಲ್ಲಿ ಆಧಾರ ಸಾಲದು ಅಥವಾ ಇಲ್ಲವೆಂತಲೇ ಹೇಳುತ್ತಾರೆ. ಈಚಿನ ಗ್ರಂಥಗಳಲ್ಲಿ ಚಂದ್ರಸೋಮರ ಐಕ್ಯಕ್ಕೆ ಪುಷ್ಟಿಯು ಎಷ್ಟೇ ದೊರೆತರೂ ಋಗ್ವೇದದಲ್ಲಿ ಸೋಮದೇವ

ತಾಕವಾದ ನೂರಾರು ಋಕ್ಕುಗಳಲ್ಲಿ ಅಪರೂಪವಾಗಿ ಒಂದೊಂದು ಕಡೆ ಇದು ಸೂಚಿತವಾದರೂ ಎಲ್ಲಿಯೂ ಸ್ಪಷ್ಟವಾಗಿ ಹೇಳಿಲ್ಲ. ಅದೂ ಅಲ್ಲದೇ ವ್ಯಾಖ್ಯಾನಕಾರರು ಯಾರೂ ಈ ಅಂಶಕ್ಕೆ ವೇದದಲ್ಲಿ ಆಧಾರವಿದೆಯೆಂದು ಹೇಳಿಲ್ಲ.

## ಸೋಮಶಬ್ದದ ನಿರ್ವಚನ

ನಿರುಕ್ತಕಾರರು, **ಓಷಧಿಸ್ಸೋಮಃ ಸುನೋತೇರ್ಯದೇನಮಭಿಷುಣ್ವಂತಿ**— ಸೋಮ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಮೂಲಿಕೆಯು ಇದನ್ನು

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪–೨೬–೭)

ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗದಿಂದ ಭೂಮಿಗೆ ತಂದಿರುವುದೆಂದೂ, ಇಂದ್ರನು ಈ ಸೋಮವನ್ನು ಪಾನಮಾಡುವ ಸನ್ನಿವೇಶಗಳಿಂದ ಸಹಸ್ರಸುತ್ಯಗಳುಳ್ಳ ಯಜ್ಞಗಳನ್ನು ನೆರವೇರಿಸಿ ಯಜಮಾನರು ಅಯುತಸಂಖ್ಯಾಕವಾದ ದಕ್ಷಿಣೆಯನ್ನು ದಾನಮಾಡಿರುವರೆಂದೂ ಸೋಮದ ಮಹಾತ್ಮ್ಯವನ್ನು ವಿವರಿಸಿದ್ದಾರೆ. ಮತ್ತು **ಬಹುಲಮಸ್ಯ ನೈಘಂಟುಕಂ ವೃತ್ತಂ ಆಶ್ಚರ್ಯಮಿವ ಪ್ರಾಧಾನ್ಯೇನ**— ಈ ಸೋಮದ ಸ್ತುತಿಯೂ ಇದರ ಪ್ರಾಮುಖ್ಯತೆಯನ್ನು ಸೂಚಿಸುವುದಾಗಿರುತ್ತದೆ. ಮತ್ತು ಆಶ್ಚರ್ಯಜನಕವಾಗಿ ಇರುತ್ತದೆ ಎಂದು ಒಂಭತ್ತನೆಯ ಮಂಡಲದಲ್ಲಿ ಪಠಿತವಾಗಿದೆ. ಮತ್ತು ಈ ಸೋಮದ ಮಹಿಮೆಯು ಸ್ತುತಿರೂಪದಿಂದ—

**ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ।**

(ಋ. ಸಂ. ೯–೧–೧)

ಎಂಬ ಈ ಋಕ್ಕಿನಲ್ಲಿ ಉಕ್ತವಾಗಿದೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಂ ।**
**ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾಶ್ನಾತಿ ಕಶ್ಚನ ॥**

(ಋ. ಸಂ. ೧೦–೮೫–೩)

ಸೋಮಂ ಎಂಬ ಪದಕ್ಕೆ ಚಂದ್ರನೆಂದು ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಸೋಮಲತೆ, ಚಂದ್ರ ಇವರಿಬ್ಬರನ್ನು ಸ್ತುತಿಸಿರುವುದು. ಆದರೆ, ಪ್ರಸಿದ್ಧನಾದ ಚಂದ್ರನಿಗಿಂತಲೂ ಈ ಸೋಮಕ್ಕೆ ಪ್ರಾಧಾನ್ಯವನ್ನು ಈ ರೀತಿಯಾಗಿ ಯಾಸ್ಕರು ವರ್ಣಿಸಿದ್ದಾರೆ.

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ವೃಥಾಸುತಮಸೋಮಮಾಹ ಸೋಮಂ ಯಂ ಬ್ರಹ್ಮಾಣೋ ವಿದುರಿತಿ ನ ತಸ್ಯಾಶ್ನಾತಿ ಕಶ್ಚನಾಯಜ್ವೇತ್ಯಧಿಯಜ್ಞಂ । ಅಥಾಧಿದೈವತಂ ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಮಿತಿ ಯಜುಸ್ಸುತಮಸೋಮಮಾಹ ಸೋಮಂ ಯಂ ಬ್ರಹಾಣೋ ವಿದುಶ್ಚಂದ್ರಮಸಂ ನ ತಸ್ಯಾಶ್ನಾತಿ ಕಶ್ಚನಾದೇವ ಇತಿ ।** (ನಿ. ೧೧–೪)

ರಸಾಯನಾದಿಗಳನ್ನು ಮಾಡುವವರು ಸೋಮವನ್ನು ತಂದು ರಸವನ್ನು ಹಿಂಡಿ ಪಾನಮಾಡುವರಾದರೂ, ಅವರು ಯಜ್ಞದಲ್ಲಿ ಸೋಮಪಾನಮಾಡುವ ಸೋಮಪರೆಂದು ಪ್ರಸಿದ್ಧರಾಗುವುದಿಲ್ಲವಾದುದರಿಂದ ಯಜ್ಞಾಂಗವಾಗಿ ಉಪ

ಯೋಗಿಸಲ್ಪಟ್ಟಕಾರಣ ಸೋಮವು ಯಜಮಾನರಿಗೆ ಮಾತ್ರವೇ ವಿಧ್ಯುಕ್ತವಾದ ರೀತಿಯಿಂದ ಸೋಮಪನೆಂಬ ಪ್ರಸಿದ್ಧಿಯನ್ನು ಉಂಟುಮಾಡುವುದೆಂದು ಸ್ತುತಿಸಿದೆ. ಅಧಿದೈವತಪಕ್ಷದಲ್ಲಿಯೂ, (ಸೋಮಪದಕ್ಕೆ ಚಂದ್ರನೆಂಬ ಅರ್ಥವನ್ನು ವಿವರಿಸುವಲ್ಲಿಯೂ) ಯಜ್ಞಾಂಗವಾಗಿರುವ ಸೋಮನನ್ನು ಸೋಮಪದದಿಂದ ನಿರ್ದೇಶಮಾಡಿದೆ. "**ಸೋಮೋ ನೂನಮೇಷ ಯದ್ದೇವಾನಾಮನ್ನಂ**" ಎಂಬ ಶ್ರುತಿವಾಕ್ಯದಿಂದ ಚಂದ್ರನು ಸೋಮಪದವಾಚ್ಯನಾಗಿದ್ದರೂ ಅವನು ದೇವತೆಗಳಿಗೆ ಮಾತ್ರವೇ ಅನ್ನವಾಗಿರುವನು. ಆದ್ದರಿಂದ **ಸೋಮಂ ಮನ್ಯತೇ** ಎಂಬ ಮಂತ್ರದಿಂದ ಅಧಿಯಜ್ಞ ಅಧಿದೈವ ಎಂಬ ಎರಡುವಿಧವಾದ ಅರ್ಥವನ್ನು ಸೋಮಪದಕ್ಕೆ ಹೇಳಿದರೂ, ಓಷಧಿರೂಪವಾದ ಸೋಮಕ್ಕೇ ಯಾಜ್ಞಿಕರು ಯಜ್ಞದಲ್ಲಿ ಪ್ರಾಧಾನ್ಯವನ್ನು ಹೇಳಿರುತ್ತಾರೆ.

**ಯತ್ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ ।**
**ವಾಯುಸ್ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥**

(ಋ. ಸಂ. ೧೦-೮೫-೫)

**ಯತ್ತ್ವಾ ದೇವ ಪ್ರಪಿಬಂತಿ ತತ ಆಪ್ಯಾಯಸೇ ಪುನರಿತಿ ನಾರಾಶಂಸಾನಭಿಪ್ರೇತ್ಯ ಪೂರ್ವಪಕ್ಷಾಪರಪಕ್ಷಾವಿತಿ ವಾ ವಾಯುಸ್ಸೋಮಸ್ಯ ರಕ್ಷಿತಾ ವಾಯುಮಸ್ಯ ರಕ್ಷಿತಾರಮಾಹ ಸಾಹಚರ್ಯಾತ್ ರಸಹರಣಾದ್ವಾ । ಸಮಾನಾಂ ಸಂವತ್ಸರಾಣಾಂ ಮಾಸ ಆಕೃತಿಃ ಸೋಮೋ ರೂಪವಿಶೇಷೈರೋಷಧಿಶ್ಚಂದ್ರಮಾ ವಾ ।** ಅಧಿಯಜ್ಞಪರವಾದ ಅರ್ಥದಲ್ಲಿ ಸೋಮವನ್ನು ಮೂರುಸವನಗಳಲ್ಲಿಯೂ, ಯಜಮಾನರೇ ಮೊದಲಾದ ಋತ್ವಿಜರು ಪಾನಮಾಡುತ್ತಾರೆ. ಇದರಿಂದ ಈ ಸೋಮನು ಆಪ್ಯಾಯನಮಾಡುವವನಾಗಿರುವನು. ವಾಯುವು ಓಷಧಿಗಳ ರಸವನ್ನು ಹೀರುವವನಾದರೂ ಸೋಮರಸವನ್ನು ಹೀರದೇ ಇರುವುದರಿಂದ ಅದರ ರಕ್ಷಕನಾಗಿರುವನು. ಆಯುರ್ವೇದವನ್ನು ತಿಳಿದ ರಸಾಯನಕಾರರು ಈ ಸೋಮನು ಆಯಾಯ ಮಾಸದ ಶುಕ್ಲಪಕ್ಷಗಳಿರುವ ತಿಥಿಗಳಿಗನುಸಾರವಾಗಿ ಪರ್ಣಗಳ (ಎಲೆಗಳ) ಅಭಿವೃದ್ಧಿಯನ್ನೂ ಕೃಷ್ಣಪಕ್ಷಗಳಿರುವ ತಿಥಿಗಳಿಗೆ ಅನುಗುಣವಾಗಿ ಪರ್ಣಗಳ (ಅಪಚಿತಿ) ಹ್ರಾಸವನ್ನೂ ಹೊಂದುವನು. ಅಧಿದೈವತಪಕ್ಷದಲ್ಲಿ ಸೋಮಪದವಾಚ್ಯನಾದ ಚಂದ್ರನು ತನ್ನ ಕಲೆಗಳಿಂದ ಆಯಾಯ ತಿಥಿಗಳಿಗನುಗುಣವಾಗಿ ದೇವತೆಗಳ ಆಪ್ಯಾಯಕನಾಗಿರುವನು. ಚಂದ್ರನ ಕಲೆಗಳನ್ನು ದೇವತೆಗಳೂ ಪಾನಮಾಡುವರು. ಆಯಾಯ ಪಕ್ಷಗಳಲ್ಲಿ ವೃದ್ಧಿಹ್ರಾಸಗಳನ್ನು ತನ್ನ ಕಲೆಗಳ ಮೂಲಕ ಚಂದ್ರನು ಹೊಂದುವನು ಎಂದು ಅಧಿಯಜ್ಞ ಅಧಿದೈವ ಎಂಬ ಎರಡು ಪ್ರಕಾರಗಳಲ್ಲಿಯೂ ಸೋಮಲತೆಗೆ ಚಂದ್ರನ (ಸಮಾನಸ್ಥಿತಿಯನ್ನು) ಸಾದೃಶ್ಯವನ್ನು ಹೇಳಿ ಸೋಮತಾದಾತ್ಮ್ಯವನ್ನು ಉಪಪಾದನೆಮಾಡಿ ಪ್ರಭೂತವಾದ ಮಾಹಾತ್ಮ್ಯಪೂರಿತವೆಂದು ಸೋಮಲತೆಯನ್ನು ಪ್ರಶಂಸಿಸಿದೆ.

## ಸೋಮಾಹರಣೋಪಾಖ್ಯಾನ

**ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ ॥**

(ಐ. ಬ್ರಾ. ೧೩-೨೫)

ಪೂರ್ವದಲ್ಲಿ ಸೋಮರಾಜನು (ಸೋಮಲತೆಯು; ಗೌರವಾರ್ಥವಾಗಿ ಸೋಮಲತೆಯನ್ನು ಸೋಮರಾಜನೆಂದು ಕರೆಯುವ ರೂಢಿ ಇದೆ) ಎಂದರೆ ಸೋಮಲತೆಯು ಸ್ವರ್ಗದಲ್ಲಿದ್ದಿತು. ಈ ಲೋಕದಲ್ಲಿರಲಿಲ್ಲ. ಇದನ್ನು ತಿಳಿದು ದೇವತೆಗಳೂ ಋಷಿಗಳೂ ಈ ಸೋಮವನ್ನು ಇಲ್ಲಿಗೆ ತರುವ ಬಗೆ ಹೇಗೆ ಎಂದು ಆಲೋಚಿಸಿದರು. ಬಳಿಕ ಅವರು ಈ ವಿಚಾರವನ್ನು ವಿಮರ್ಶೆಮಾಡಿ ಸೋಮವನ್ನು ಸ್ವರ್ಗದಿಂದ ಭೂಮಿಗೆ ತರುವ ಶಕ್ತಿಯು ಛಂದಸ್ಸುಗಳಿಗೆ ಇರುವುದೆಂದು ತಿಳಿದು ಛಂದಸ್ಸುಗಳನ್ನು ಕುರಿತು— ಎಲೈ ಛಂದಸ್ಸುಗಳೇ, ನಮಗೋಸ್ಕರ ಎಂದರೆ ನಮ್ಮ ಯಜ್ಞದಲ್ಲಿ ಉಪಯೋಗಿಸುವುದಕ್ಕೋಸ್ಕರ ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನಂಗೀಕರಿಸಿ ಛಂದಸ್ಸುಗಳು ಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಪಕ್ಷಿಗಳ ರೂಪಗಳನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋದವು. ರೆಕ್ಕೆಗಳಿಂದ ಕೂಡಿದ ಪಕ್ಷಿಗಳಿಗೆ ಸುಪರ್ಣವೆಂದು ಹೆಸರಿರುವುದರಿಂದಲೂ, ಈ ಪಕ್ಷಿಗಳು ಸೋಮಾಹರಣದಲ್ಲಿ ಪ್ರವೃತ್ತಿಸಿದ್ದರಿಂದಲೂ ಈ ಸೋಮಾಹರಣವೆಂಬ ಉಪಾಖ್ಯಾನಕ್ಕೆ ಸೌಪರ್ಣಾಖ್ಯಾನವೆಂದು ಕರೆಯುವುದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ:

> **ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಛಂದಾಂಸ್ಯಾಸನ್ತ್ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾರ್ಧಮಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯ ತ್ರೀಣ್ಯಕ್ಷರಾಣ್ಯೇಕಾಕ್ಷರಾ ಭೂತ್ವಾ ದೀಕ್ಷಾಂ ಚ ತಪಶ್ಚ ಹರಂತೀ ಪುನರಭ್ಯವಾಪತತ್ತಸ್ಮಾತ್ತಸ್ಯ ವಿತ್ತಾ ದೀಕ್ಷಾ ವಿತ್ತಂ ತಪೋ ಯಸ್ಯ ಪಶವಃ ಸಂತಿ ಜಾಗತಾ ಹಿ ಪಶವೋ ಜಗತೀ ಹಿ ತಾನಾಹರತ್ ॥**
>
> (ಐ ಬ್ರಾ. ೧೩-೨೫)

ಬಳಿಕ ಗಾಯತ್ರಿಯೇ ಮೊದಲಾದ ಛಂದಸ್ಸುಗಳು ಪಕ್ಷಿರೂಪಗಳನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋಗಲು ಸಿದ್ಧವಾದವು. ಆ ಕಾಲದಲ್ಲಿ ಗಾಯತ್ರಿಯೇ ಮೊದಲಾದ ಎಲ್ಲಾ ಛಂದಸ್ಸುಗಳಿಗೂ (ಪ್ರತಿಪಾದದಲ್ಲಿಯೂ) ನಾಲ್ಕು ಅಕ್ಷರಗಳು ಮಾತ್ರ ಇದ್ದುವು. ಯಾವ ಛಂದಸ್ಸಿಗೂ ನಾಲ್ಕು ಅಕ್ಷರಗಳಿಗಿಂತ ಹೆಚ್ಚಾಗಿರಲಿಲ್ಲ. ಮೊದಲು ಜಗತೀ ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಸೋಮವಿರುವ ಸ್ವರ್ಗವನ್ನು ಕುರಿತು ಹಾರಿಹೋಯಿತು. ಅರ್ಧದಾರಿ ಹಾರಿಹೋಗುವಷ್ಟರಲ್ಲಿ ಅದು ಆಯಾಸದಿಂದ ಬಳಲಿ ಮುಂದಕ್ಕೆ ಹಾರಿಹೋಗಲು ಶಕ್ತಿಯಿಲ್ಲದೆ ಹಿಂತಿರುಗಬೇಕಾಯಿತು. ಅಷ್ಟು ದೂರ ಹೋದ ಆಯಾಸದಿಂದ ಜಗತೀಛಂದಸ್ಸಿನಲ್ಲಿದ್ದ ನಾಲ್ಕು ಅಕ್ಷರಗಳಲ್ಲಿ ಮೂರು ಅಕ್ಷರಗಳನ್ನು ಕಳೆದುಕೊಂಡಿತು. ಉಳಿದ ಒಂದೇ ಅಕ್ಷರದಿಂದ ಹಿಂತಿರುಗಬೇಕಾಯಿತು. ಈ ರೀತಿ ಸೋಮವನ್ನು ತರಲು ಶಕ್ತಿಯಿಲ್ಲದೆ ಹಿಂತಿರುಗಿ ಬರುವಾಗ ತನ್ನ ಜೊತೆಯಲ್ಲಿ ಸೋಮಯಾಗಸಂಬಂಧವಾದ ದೀಕ್ಷೆಯನ್ನೂ ಎಂದರೆ ದೀಕ್ಷಣೀಯೇಷ್ಟಿರೂಪವಾದ ದೀಕ್ಷಾವಿಧಿಯನ್ನೂ ಕ್ಷೀರಪಾನಾದಿರೂಪವಾದ ತಪಸ್ಸನ್ನೂ ತಂದಿತು. ಆದ್ದರಿಂದ ಜಗತೀಛಂದಸ್ಸಿನ ಋಕ್ಕುಗಳಿಂದ ದೀಕ್ಷೆಯನ್ನು ಕೈಗೊಳ್ಳುವರು. ಜಗತೀಛಂದಸ್ಸಿಗೆ ಪಶುಸಂಪತ್ತನ್ನು ವೃದ್ಧಿಪಡಿಸುವ ಶಕ್ತಿ ಇರುವುದು ಅದ್ದರಿಂದ ಪಶುಸಂಪತ್ತುಳ್ಳ ಪುರುಷನಿಗೆ ದೀಕ್ಷೆಯೂ ಧನವೂ ಸುಲಭವಾಗಿ ದೊರೆಯುವುದು. ಜಗತೀಛಂದಸ್ಸು ಪಶುಗಳನ್ನು ತಂದದ್ದರಿಂದ ಜಗತೀಛಂದಸ್ಸಿಗೆ ಪಶುಗಳನ್ನು ಕೊಡುವ ಶಕ್ತಿ ಇರುವುದೆಂದು **ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ** (ತೈ. ಸಂ. ೬-೧-೬-೨) ಎಂದು ಯಜುರ್ವೇದದಲ್ಲಿ ಹೇಳಿದೆ.

ಅಥ ತ್ರಿಷ್ಟುಬುದಪತತ್ಸಾ ಪತಿತ್ವಾ ಭೂಯೋಽರ್ಧಾದಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯೈಕ-ಮಕ್ಷರಂ ತ್ರ್ಯಕ್ಷರಾ ಭೂತ್ವಾ ದಕ್ಷಿಣಾ ಹರಂತೀ ಪುನರಭ್ಯವಾಪತತ್ತಸ್ಮಾನ್ಮಧ್ಯಂದಿನೇ ದಕ್ಷಿಣಾ ನೀಯಂತೇ ತ್ರಿಷ್ಟುಭೋ ಲೋಕೇ ತ್ರಿಷ್ಟುಭ್ಭಿ ತಾ ಆಹರತ್ ||

(ಐ. ಬ್ರಾ. ೧೩–೨೫)

ಬಳಿಕ ತ್ರಿಷ್ಟುಪ್ ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಅರ್ಧ ದಾರಿಗಿಂತ ಸ್ವಲ್ಪ ದೂರ ಹೋಗುವುದರೊಳಗಾಗಿ ಆಯಾಸದಿಂದ ಬಳಲಿ, ತನ್ನಲ್ಲಿದ್ದ ನಾಲ್ಕು ಅಕ್ಷರಗಳಲ್ಲಿ ಒಂದನ್ನು ಅಲ್ಲಿಯೇ ಬಿಟ್ಟು ಉಳಿದ ಮೂರು ಅಕ್ಷರಗಳೊಡನೆ ಹಿಂತಿರುಗಿತು. ಬರುವಾಗ ದಕ್ಷಿಣೆಯನ್ನು (ಯಜ್ಞದಲ್ಲಿ ಋತ್ವಿಗ್ಜನರಿಗೆ ಕೊಡುವ ದಕ್ಷಿಣಾಕ್ರಮವನ್ನು) ತನ್ನ ಜತೆಯಲ್ಲಿ ತಂದಿತು. ಈ ರೀತಿ ತ್ರಿಷ್ಟುಪ್‌ಛಂದಸ್ಸು ದಕ್ಷಿಣೆಯನ್ನು ತಂದದ್ದರಿಂದಲೂ, ತ್ರಿಷ್ಟುಪ್‌ಛಂದಸ್ಸಿಗೂ ಮಾಧ್ಯಂದಿನಸವನಕ್ಕೂ ಸಂಬಂಧವಿರುವುದರಿಂದಲೂ, ಯಜ್ಞದಲ್ಲಿ ನೆರವೇರುವ ಮಾಧ್ಯಂದಿನಸವನಕಾಲದಲ್ಲಿ ಋತ್ವಿಗ್ಜನರಿಗೆ ದಕ್ಷಿಣೆಯನ್ನು (ಸಂಭಾವನೆ) ಕೊಡುವ ಪದ್ಧತಿ ಇರುವುದು.

ತೇ ದೇವಾ ಅಬ್ರುವನ್ ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ತತ್ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇ-ತೇನಾನುಮಂತ್ರಯೇತ ಪ್ರೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತಿ ಪುನರಾಗಚ್ಛತಿ ||

(ಐ. ಬ್ರಾ. ೧೩–೨೬)

ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಸೋಮವನ್ನು ತರಲು ಸಾಮರ್ಥ್ಯವಿಲ್ಲದೆ ಹಿಂತಿರುಗಿ ಬಂದುದನ್ನು ದೇವತೆಗಳು ನೋಡಿ ಗಾಯತ್ರೀಛಂದಸ್ಸಿನ ಸಮೀಪಕ್ಕೆ ಹೋಗಿ—ಎಲೈ ಗಾಯತ್ರಿಯೇ, ನಮಗಾಗಿ ನೀನು ಸ್ವರ್ಗದಿಂದ ಸೋಮವನ್ನು ತರಬೇಕೆಂದು ಪ್ರಾರ್ಥಿಸಿದರು. ಗಾಯತ್ರಿಯು ಹಾಗೆಯೇ ಆಗಲೆಂದೊಪ್ಪಿ ದೇವತೆಗಳನ್ನು ಕುರಿತು—ಎಲೈ ದೇವತೆಗಳೇ, ನಿಮ್ಮ ಮಾತಿನಂತೆ ನಾನು ಸೋಮವನ್ನು ತರಲು ಸ್ವರ್ಗಕ್ಕೆ ಹೋಗುವೆನು. ಆದರೆ ನಾನು ಪ್ರಯಾಣ ಮಾಡುವ ಕಾಲದಲ್ಲಿಯೂ, ನಾನು ಕ್ಷೇಮವಾಗಿ ಹಿಂತಿರುಗಿ ಬರುವುದಕ್ಕಾಗಿಯೂ ನೀವು ಆಶೀರ್ವಾದ ರೂಪವಾದ ಸ್ವಸ್ತ್ಯಯನ ಮಂತ್ರಗಳನ್ನು ಜಪಿಸುತ್ತಾ, ನಾನು ಕ್ಷೇಮವಾಗಿ ಹಿಂತಿರುಗಿ ಬರಬೇಕೆಂದು ನಾನು ಬರುವ ವರಿಗೂ ಪ್ರಾರ್ಥಿಸುತ್ತಿರಬೇಕು. ಎಂದು ಹೇಳಿ ಶ್ಯೇನ ಪಕ್ಷಿಯ ರೂಪವನ್ನು ಧರಿಸಿ ಅಂತರಿಕ್ಷಮಾರ್ಗವಾಗಿ ಹಾರಿ ಹೋಯಿತು. ದೇವತೆಗಳು ಹಾಗೆಯೇ ಆಗಲೆಂದು ಅದರ ಮಾತನ್ನಂಗೀಕರಿಸಿ, ಗಾಯತ್ರಿಯು ಕ್ಷೇಮವಾಗಿ ಹಿಂತಿರುಗಿ ಬರಲೆಂದು ಸ್ವಸ್ತ್ಯಯನ ಮಂತ್ರಗಳನ್ನೂ ಜಪಿಸುತ್ತಿದ್ದರು. ಆ ಮಂತ್ರವು ಯಾವುದೆಂದರೆ—**ಪ್ರಾ ಚ ಚ** ಎಂದು. ಇಲ್ಲಿ **ಪ್ರ** ಎಂಬುದು ಒಂದು ಮಂತ್ರ; **ಆ** ಎಂಬುದು ಎರಡನೆಯ ಮಂತ್ರ ಇವೆರಡನ್ನೂ ಸೇರಿಸುವ ಸಮುಚ್ಚಯಾರ್ಥವನ್ನು ಸೂಚಿಸುವುದಕ್ಕಾಗಿ ಎರಡು ಚಕಾರಗಳಿರುವವು. ಕ್ಷೇಮವಾಗಿ ಸೋಮವಿದ್ದೆಡೆಗೆ ಹೋಗಿ ; ಅದನ್ನು ತೆಗೆದುಕೊಂಡು ಪುನಃ ಹಿಂದಕ್ಕೆ ಸುರಕ್ಷಿತವಾಗಿ ಬಾ ಎಂದು ಈ ಮಂತ್ರಗಳ ಅರ್ಥವು. ಇದಕ್ಕಿಂತಲೂ ಉತ್ತಮವಾದ ಸ್ವಸ್ತ್ಯಯನ ಮಂತ್ರವಿರುವುದಿಲ್ಲ. ಆದ್ದರಿಂದ ಲೋಕದಲ್ಲಿ ಸ್ನೇಹಿತರು, ಬಂಧುಗಳು ಮುಂತಾದವರು ಪ್ರಯಾಣ ಮಾಡಬೇಕಾದ ಸಂದರ್ಭದಲ್ಲಿ ಈ ಮಂತ್ರವನ್ನು ಪಠಿಸುವರು. ಈ ಮಂತ್ರಪಠನಸಾಮರ್ಥ್ಯದಿಂದ ಪ್ರಯಾಣ ಮಾಡಿದವರು ಸುರಕ್ಷಿತವಾಗಿ ಹಿಂದಕ್ಕೆ ಬಂದು ಸೇರುವರು ಎಂದು ಪ್ರಸಿದ್ಧಿಯು.

**ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ॥**

ಬಳಿಕ ಶ್ಯೇನಪಕ್ಷಿ ರೂಪದಲ್ಲಿದ್ದ ಗಾಯತ್ರಿಯು ಸ್ವರ್ಗಕ್ಕೆ ಹಾರಿಹೋಗಿ, ಅಲ್ಲಿ ಸೋಮವನ್ನು ಕಾಯುತ್ತಿದ್ದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರನ್ನು ತನ್ನ ಕರ್ಕಶವಾದ ಧ್ವನಿಯಿಂದಲೂ, ತೀಕ್ಷ್ಣವಾದ ಕೊಕ್ಕೆ, ಉಗುರು ಮೊದಲಾದ ಆಯುಧಗಳಿಂದಲೂ ಹೆದರಿಸಿತು. ಅದನ್ನು ನೋಡಿ ಸೋಮಪಾಲಕರು ಸ್ವಲ್ಪ ದೂರ ಓಡಿಹೋಗಲು, ಆಗ ಶ್ಯೇನ ಪಕ್ಷಿಯು ಅಲ್ಲಿದ್ದ ಸೋಮವನ್ನು (ಸೋಮಲತೆಗಳನ್ನು) ತನ್ನ ಎರಡು ಕಾಲುಗಳಿಂದಲೂ, ಕೊಕ್ಕಿನಿಂದಲೂ ಕಚ್ಚಿ ಹಿಡಿದುಕೊಂಡು ಹಿಂದಕ್ಕೆ ಎಂದರೆ ಭೂಮಿಗೆ ಹಾರಿ ಬರಲು ಪ್ರಯತ್ನಿಸಿತು. ಸ್ವರ್ಗದಲ್ಲಿ ಸೋಮವನ್ನು ರಕ್ಷಿಸುತ್ತಿದ್ದ ಸೋಮಪಾಲಕರು ಯಾರು? ಅವರ ಹೆಸರುಗಳೇನು ? ಎಂಬ ವಿಷಯವನ್ನು—

**ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾಸ್ತಾನ ರಕ್ಷಧ್ವಂ ಮಾ ವೋ ದಭನ್ ॥**

(ತೈ. ಸಂ. ೧-೨-೭-೧)

**ಸ್ವಾನ ಭ್ರಾಜೇತ್ಯಾಹೈತೇ ವಾ ಅಮುಷ್ಮಿನ್ ಲೋಕೇ ಸೋಮಮರಕ್ಷನ್ ॥**

(ತೈ. ಸಂ. ೬-೧-೧೦-೫)

ಎಂಬ ಯಜುರ್ವೇದ ಮಂತ್ರಗಳಲ್ಲಿ ಹೇಳಿರುವುದು. ಎಂದರೆ—**ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು** ಎಂಬುವರು ಸೋಮಪಾಲಕರು. ಎಲೈ ಸೋಮಪಾಲಕರೇ, ನಿಮ್ಮ ಅಧೀನದಲ್ಲಿರುವ ಈ ಸೋಮವನ್ನು ಯಾರೂ ಅಪಹರಿಸದಂತೆ ಅದನ್ನು ಜಾಗರೂಕತೆಯಿಂದ ರಕ್ಷಿಸಿ ಎಂದು ಮೊದಲನೆಯ ಮಂತ್ರದ ಅರ್ಥವು. ಸ್ವಾನ, ಭ್ರಾಜ ಮೊದಲಾದ ಸೋಮರಕ್ಷಕರು ಸ್ವರ್ಗದಲ್ಲಿದ್ದ ಸೋಮವನ್ನು ರಕ್ಷಿಸುತ್ತಿದ್ದರು ಎಂದು ಎರಡನೆಯ ಮಂತ್ರದ ಅರ್ಥವು. ಮೇಲೆ ಹೇಳಿದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರ ರಕ್ಷಣೆಗೊಳಪಟ್ಟಿದ್ದ ಸೆ
ಶ್ಯೇನಪಕ್ಷಿಯು ಈ ರೀತಿ ಅಪಹರಿಸಿ ಭೂಮಿಗೆ ತರುವಾಗ ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸುಗಳು ಕೇ
ನಾಲ್ಕು ಅಕ್ಷರಗಳನ್ನು ಹಿಂದಕ್ಕೆ ತಂದಿತು. ಈ ನಾಲ್ಕು ಅಕ್ಷರಗಳೂ, ಗಾಯತ್ರಿಗೆ ಪೂರ್ವದಲ್ಲಿ
ಸೇರಿ ಗಾಯತ್ರಿಯು ಪಾದಕ್ಕೆ ಎಂಟಕ್ಷರಗಳಾದವು.

**ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮ ಕೋಽಭವತ್ತಸ್ಮಾತ್ಸ ನಖಮಿವ ಯಚ್ಛಶಮಸ್ರವತ್ತಾ ವಶಾಭವತ್ತಸ್ಮಾತ್ಸಾ ಹವಿರಿವಾಥ ಶಲ್ಯೋ ಯದನೀಕಮಾಸೀತ್ಸ ಸರ್ಪೋ ನಿರ್ದಂಶ್ಯಭವತ್ಸಹಸಃ ಸ್ವಜೋ ಯಾನಿ ಪಣಾ ತೇ ಮಂಥಾವಲಾ ಯಾನಿ ಸ್ನಾವಾನಿ ತೇ ಗಂಡೂಪದಾ ಯತ್ತೇಜನಂ ಸೋಽನ್ಧಾಹಿಃ ಸೋ ಸಾ ತಥೇಷುರಭವತ್ ॥**

(ಐ. ಬ್ರಾ. ೧೩-೨೬)

ಸ್ವರ್ಗದಲ್ಲಿ ಸೋಮವನ್ನು ರಕ್ಷಿಸುತ್ತಿದ್ದ ಗಂಧರ್ವರು ಸ್ವಾನ, ಭ್ರಾಜ ಮೊದಲಾದ ಏಳುಮಂದಿ. ಇವರಲ್ಲಿ ಕೃಶಾನು ಎಂಬುವನು ಏಳನೆಯವನು. ಈ ಕೃಶಾನುವು—ಗಾಯತ್ರಿಯು ಶ್ಯೇನರೂಪದಿಂದ ಸೋಮವನ್ನು ಅಪಹರಿಸಿಕೊಂಡು ಹೋಗುತ್ತಿರುವುದನ್ನು ನೋಡಿ, ಅದನ್ನು ಅಟ್ಟಿಸಿಕೊಂಡುಹೋಗಿ ಅದನ್ನು ಹಿಡಿಯಲು ಸಾಧ್ಯವಾಗದ್ದರಿಂದ ತನ್ನ ಕೈಲಿದ್ದ ಧನುಸ್ಸಿನಿಂದ ಒಂದು ಬಾಣವನ್ನು ಬಿಟ್ಟನು. ಅದು ಶ್ಯೇನಪಕ್ಷಿಯ ಎಡಗಾಲಿನ ಉಗುರಿಗೆತಗಲಿ ಅದು

ಕತ್ತರಿಸಿಹೋಯಿತು. ಕತ್ತರಿಸಿಹೋದ ಆ ನಖವು (ಉಗುರು) ಒಂದು ಕೋತಿಯ ಗಾತ್ರವಿರುವ ಒಂದು ಮುಳ್ಳು ಹಂದಿಯಾಗಿ (Porcupine) ಪರಿಣಮಿಸಿತು. ಈ ಮುಳ್ಳುಹಂದಿಯ ಪುಚ್ಛಾಗ್ರಭಾಗದಲ್ಲಿ ಪ್ರಾದೇಶಮಾತ್ರಪರಿಮಿತವಾದ ತೀಕ್ಷ್ಣಾಗ್ರಭಾಗವುಳ್ಳ ಮತ್ತು ಕಬ್ಬಿಣದ ಸಲಾಕೆಗಳಂತೆ ಕಠಿನವಾಗಿಯೂ ಮೊನಚಾಗಿಯೂ ಇರುವ ಅನೇಕ ಮುಳ್ಳುಗಳಿರುವವು. ಇಂತಹ ಮೃಗಕ್ಕೆ ಶಲ್ಯ ಅಥವಾ ಶಲ್ಯಕ (ಮುಳ್ಳುಹಂದಿ) ಎಂದು ಹೆಸರು. ಈ ಮೃಗವು ಶ್ಯೇನಪಕ್ಷಿಯು ಕತ್ತರಿಸಿದ ನಖದಿಂದ ಉತ್ಪನ್ನವಾದ ಕಾರಣ ಇದರ ಮುಳ್ಳುಗಳು ಉಗುರಿನಂತೆ ಅತಿ ತೀಕ್ಷ್ಣವಾಗಿರುವವು. ಬಾಣದಿಂದ ಉಗುರು ಕತ್ತರಿಸಿ ಬೀಳುವಾಗ ಉಗುರಿನ ಸಮೀಪದಲ್ಲಿದ್ದ ದ್ರವರೂಪವಾದ ವಶಾ ಅಥವಾ ಮೇದಸ್ಸು ಸ್ರವಿಸುತ್ತಿದ್ದಿತು. ಈ ಮೇದಸ್ಸು ಅಜಾ, ಅವಿ (ಹೆಣ್ಣು ಆಡು) ಯಾಗಿ ಪರಿವರ್ತಿತವಾಯಿತು. ಶ್ಯೇನರೂಪದಲ್ಲಿದ್ದ ಗಾಯತ್ರಿಯಿಂದ ಈ ಅಜವು ಉತ್ಪನ್ನವಾದುದರಿಂದ ಇದು ದೇವತಾಯೋಗ್ಯವಾಗಿ ಯಜ್ಞಾದಿಗಳಲ್ಲಿ ಯೋಗ್ಯವಾದ ಹವಿಸ್ಸೆಂದು ನಿಶ್ಚಯಿಸಲ್ಪಟ್ಟಿತು. ಯಜುರ್ವೇದಾದಿಗಳಲ್ಲಿ ಈ ವಿಷಯವು—**ಏತಾಮೇವ ವಶಾಮಾದಿತ್ಯೇಭ್ಯಃ ಕಾಮಾಯಾಲಭೇತ** ಇತ್ಯಾದಿ ಮಂತ್ರಗಳಿಂದ ನಿರ್ದೇಶಿಸಲ್ಪಟ್ಟಿರುವುದು. ಕೃಶಾನುವೆಂಬ ಗಂಧರ್ವನಿಂದ ಶ್ಯೇನಪಕ್ಷಿಯ ಮೇಲೆ ಬಿಟ್ಟ ಬಾಣವು ಅದರ ನಖವನ್ನು ಕತ್ತರಿಸುವಾಗ ಕಠಿಣವಾದ ನಖಕ್ಕೆ ತಗಲಿ, ಆ ಬಾಣದ ಮೊನಚಾದ ತುದಿಯು ಮೊಂಡಾಯಿತು. ಬಾಣದ ಶಲಾಕ ಅಥವಾ ಕಡ್ಡಿಯು ಕಚ್ಚಲು ಶಕ್ತಿಯಿಲ್ಲದ ಒಂದು ಸರ್ಪವಾಗಿ ಪರಿಮಿಸಿತು. ಇದಕ್ಕೆ ದುಂದುಭವೆಂದು ಹೆಸರು. ಈ ದುಂದುಭವೆಂಬ ಸರ್ಪವು ಯಾವಾಗಲೂ ನೀರಿನಲ್ಲಿಯೇ ಸಂಚರಿಸುವ ಹಾವಾಗಿ ವಿಷವಿಲ್ಲದಿರುವುದರಿಂದ ಇದು ಯಾವ ಪ್ರಾಣಿಯನ್ನೂ ಕಚ್ಚಿ ಕೊಲ್ಲಲು ಸಮರ್ಥವಾಗಿರುವುದಿಲ್ಲ. ಬಾಣದ ಮೊನುಚಾಗಿರುವ ಲೋಹಮಯವಾದ (ಕಬ್ಬಿಣದ) ತುದಿಯು ತನ್ನ ಹರಿತವನ್ನು ಕಳೆದುಕೊಂಡು ಮೊಂಡಾಗಿ ಸ್ವಜವೆಂಬ ಎರಡು ಶಿರಸ್ಸುಗಳುಳ್ಳ ಹಾವಾಯಿತು. ಬಾಣವು ವೇಗವಾಗಿ ಹೋಗುವುದಕ್ಕಾಗಿ ಅದರ ಬುಡದಲ್ಲಿ ಕಟ್ಟಿದ್ದ ಪಕ್ಷಿಯ ರೆಕ್ಕೆಗಳು ಆಲ ಮೊದಲಾದ ವೃಕ್ಷಗಳ ಬೀಳುಗಳಾದವು ಅಲದ ಮರದ ಶಾಖೆಗಳಿಂದ ಅಧೋಮುಖವಾಗಿ ಬೀಳು ಬಿಟ್ಟು ಭೂಮಿಯನ್ನು ಸಂಸ್ಪರ್ಶದಾಡಿ, ಬೇರುಗಳಾಗುವ ಬೀಳು ಅಥವಾ ಜೋಲುಗಳಿಗೆ ಮಂಥಾವಲಾ ಎಂದು ಹೆಸರು. ಬಾಣದಲ್ಲಿ ಕಟ್ಟಿದ್ದ ರೆಕ್ಕೆಗಳೇ ಈ ಮಂಥಾವಲಗಳಾದವು. ಬಾಣಕ್ಕೆ ರೆಕ್ಕೆಗಳನ್ನು ಸೇರಿಸಿ ಕಟ್ಟಿದ್ದ ದಾರದಂತಿರುವ ಸ್ನಾಯುಗಳು (ನರಗಳು) ಗಂಡೂಪದವೆಂಬ ಕ್ರಿಮಿವಿಶೇಷಗಳಾದವು. ಆ ಬಾಣವನ್ನು ನಿರ್ಮಿಸುವುದಕ್ಕಾಗಿ ಉಪಯೋಗಿಸುವ ಮರದ ಕಡ್ಡಿಯು ದೃಷ್ಟಿರಹಿತವಾದ, ಕಣ್ಣುಗಳಿಲ್ಲದ ಅಂಧಾಹಿಃ ಎಂಬ ಸರ್ಪವಾಯಿತು. ಕೃಶಾನುವೆಂಬ ಗಂಧರ್ವನಿಂದ ಬಿಟ್ಟ ಆ ಬಾಣವು ಮೇಲೆ ಹೇಳಿದ ಅನೇಕ ವಿಧ ಪ್ರಾಣಿಗಳಾದವು.

**ಸಾ ಯದ್ದಕ್ಷಿಣೇನ ಪದಾ ಸಮುಗೃಭ್ಣಾತ್ತತ್ಪ್ರಾತಃಸವನಸಮುಭವತ್ತದ್ಗಾಯತ್ರೀ ಸ್ವಮಾಯತನಮುಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ [ಏವಂ ವೇದಾಥ ಯತ್ಸವ್ಯೇನ ಪದಾ ಸಮುಗೃಭ್ಣಾತ್ತನ್ಮಾಧ್ಯಂದಿನಂ ಸವನಸಮುಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮುಪಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ [ಸವನಾಭ್ಯಾಂ [ಸಮಾವದ್ವೀರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮುಗೃಭ್ಣಾತ್ತತ್ತೃತೀಯಸವನಸಮುಭವತ್ ||**

ಶ್ಯೇನಪಕ್ಷಿಯು ಸ್ವರ್ಗದಿಂದ ಸೋಮವನ್ನು ತರುವಾಗ ಸೋಮಲತೆಗಳನ್ನು ತನ್ನ ಎರಡು ಕಾಲುಗಳಿಂದಲೂ, ಕೊಕ್ಕಿನಿಂದಲೂ ಕಚ್ಚಿಕೊಂಡು ತಂದಿತೆಂದು ಹಿಂದೆಯೇ ಹೇಳಿದೆಯಷ್ಟೆ. ಆ ರೀತಿ ತರುತ್ತಿರುವಾಗ ಪಕ್ಷಿಯು ತನ್ನ ಬಲಗಾಲಿನಿಂದ ಹಿಡಿದುಕೊಂಡು ತಂದ ಸೋಮವು (ಅಥವಾ ಸೋಮಲತೆಯು) ಪ್ರಾತಃಸವನವಾಯಿತು. ಗಾಯತ್ರಿಯು ಅದನ್ನು ಎಂದರೆ ಪ್ರಾತಸ್ಸವನವನ್ನು ತನ್ನ ಸ್ವಕೀಯ ಸ್ಥಾನವನ್ನಾಗಿ ಮಾಡಿಕೊಂಡಿತು. ಆದ್ದರಿಂದ ಸಮಸ್ತ ಸವನಗಳಲ್ಲಿಯೂ ಪ್ರಾತಃಸವನವೇ ಸರ್ವ ಶ್ರೇಷ್ಠವೆಂದು ಯಾಜ್ಞಿಕರ ಅಭಿಮತವು. ಆ ಪ್ರಾತಸ್ಸವನಕಾಲದಲ್ಲಿ ಮಂತ್ರಾದಿಗಳ ಪ್ರಯೋಗವೂ ವಿಶೇಷವಾಗಿರುವುದು. ಆದುದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವ ಪುರುಷನು ತನ್ನ ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನೂ ಮುಖ್ಯನೂ ಆಗಿರುವನೆಂದು ಪರಿಗಣಿಸಲ್ಪಡುವನು. ಗಾಯತ್ರಿಯು ಎಡಗಾಲಿನಿಂದ ಹಿಡಿದುಕೊಂಡು ತಂದ ಸೋಮದ ಭಾಗವು ಮಾಧ್ಯಂದಿನಸವನವೆಂದು ಪ್ರಸಿದ್ಧವಾಯಿತು. ಎಡಗಾಲಿನಿಂದ ಸೋಮಲತೆಯನ್ನು ಹಿಡಿದುಕೊಂಡು ತರುವಾಗ ಬಲಗಾಲಿಗಿರುವಷ್ಟು ಶಕ್ತಿಯು ಎಡಗಾಲಿಗಿಲ್ಲದಿರುವುದರಿಂದ ಆ ಲತೆಗಳು ಕಾಲಿನಿಂದ ಆಗಾಗ ಸ್ವಲ್ಪ ಸ್ವಲ್ಪ ಜಾರುತ್ತಿದ್ದಿತು. ಈ ಕಾರಣದಿಂದ ಈ ಮಾಧ್ಯಂದಿನಸವನವು ಪ್ರಾತಃಸವನದಂತೆ ಶಕ್ತಿ ಸಾಮರ್ಥ್ಯಗಳಲ್ಲಿ ಸರಿಸಮನಾಗಲಿಲ್ಲ. ಇದನ್ನು ಕಂಡು ದೇವತೆಗಳು ವಿಚಾರ ವಿಮರ್ಶೆಮಾಡಿ, ಮಾಧ್ಯಂದಿನಸವನಕರ್ಮದಲ್ಲಿ ಉಪಯೋಗಿಸುವ ಛಂದಸ್ಸುಗಳಿಗಾಗಿ ತ್ರಿಷ್ಟುಪ್‌ಛಂದಸ್ಸನ್ನೂ, ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನನ್ನೂ ಸ್ಥಾಪಿಸಿದರು. ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಮತ್ತು ಅವನಿಗೆ ಪ್ರಿಯವಾದ ತ್ರಿಷ್ಟುಪ್‌ಛಂದಸ್ಸಿನ ಸಾಹಚರ್ಯದಿಂದ ಮಾಧ್ಯಂದಿನಸವನವು ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಪ್ರಾತಃಸವನಕ್ಕೆ ಸರಿಸಮನಾದ ಸ್ಥಾನವನ್ನು ಪಡೆಯಿತು. ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳ ಈ ವಿಧವಾದ ಸರಿಸಮಾನತೆಯನ್ನೂ, ಶಕ್ತಿಸಾಮರ್ಥ್ಯಗಳನ್ನೂ, ಶ್ರೇಷ್ಠತೆಯನ್ನೂ ತಿಳಿದಿರುವ ಪುರುಷನು ಧನಾದಿಗಳಲ್ಲಿ ಸಮೃದ್ಧಿಯನ್ನೂ, ಶ್ರೇಯಸ್ಸನ್ನೂ ಪಡೆದು ಸುಖಿಸುವನು. ಬಳಿಕ ಶ್ಯೇನರೂಪದಿಂದಿದ್ದ ಆ ಗಾಯತ್ರಿಯು ತನ್ನ ಕೊಕ್ಕಿನಿಂದ ಕಚ್ಚಿ ತಂದ ಸೋಮದ ಭಾಗವು ತೃತೀಯಸವನವೆಂದು ಪ್ರಸಿದ್ಧವಾಯಿತು.

> **ತಸ್ಯ ಪತಂತೀ ರಸಮಧಯತ್ತದ್ವೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ಟಪಶ್ಯಂಸ್ತದ್ಯದಾಶಿರಮವನಯಂತ್ಯಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸವೈಃ ಸವನೈಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ||**
>
> (ಐ. ಬ್ರಾ. ೧೩-೨೭)

ಗಾಯತ್ರಿಯು (ಶ್ಯೇನವು) ತನ್ನ ಕೊಕ್ಕಿನಿಂದ ಸೋಮಲತೆಯನ್ನು ಕಚ್ಚಿಕೊಂಡು ಬರುತ್ತಿರುವಾಗ ಆ ಲತೆಯಲ್ಲಿದ್ದ ರಸವನ್ನು ಸ್ವಲ್ಪಸ್ವಲ್ಪವಾಗಿ ಹೀರಿ ಕುಡಿಯುತ್ತಿದ್ದಿತು. ಆದ್ದರಿಂದ ಎಂದರೆ ಕೊಕ್ಕಿನಿಂದ ತಂದ ಸೋಮಲತೆಗಳಲ್ಲಿ ರಸವು ಹೆಚ್ಚಾಗಿಲ್ಲದೆ ಕಮ್ಮಿಯಾಗಿದ್ದುದರಿಂದ ಈ ತೃತೀಯಸವನವು ಶಕ್ತಿಸಾಮರ್ಥ್ಯಾದಿಗಳಲ್ಲಿ ಪ್ರಾತಃಸವನ ಮಾಧ್ಯಂದಿನಸವನಗಳಿಗೆ ಸರಿಸಮನಾಗಲಿಲ್ಲ. ಆದ್ದರಿಂದ ಈ ವಿಷಯವನ್ನು ಕಂಡ ದೇವತೆಗಳು ವಿಚಾರಮಾಡಿ ಇದಕ್ಕೆ ತಕ್ಕ ಸಾಧನೋಪಾಯವು ಪಶುಗಳಲ್ಲಿರುವುದೆಂದು ಕಂಡುಕೊಂಡರು. ಪಶುಗಳಲ್ಲಿ ಹಾಲು, ಅದರಿಂದ ಲಬ್ಧವಾಗುವ ಮೊಸರು, ಆಜ್ಯ (ತುಪ್ಪ) ಮೊದಲಾದ ಹವಿರ್ದ್ರವ್ಯಗಳು ದೊರಕುವವು. ಕ್ಷೀರವನ್ನು ಅಥವಾ ಹಾಲನ್ನು ಲತೆಗಳಲ್ಲಿ ಕಮ್ಮಿಯಾಗಿರುವ ಸೋಮರಸಕ್ಕೆ ಬೆರಸಿದರೆ ಆ ರಸವು ಶಕ್ತಿಯುತವಾಗುವುದು. ಆಜ್ಯದಿಂದಲೂ, ಪಶುಗಳ ಅವಯವ ಗಳಿಂದಲೂ ಹೋಮಾದಿಗಳನ್ನು ಮಾಡಿದರೆ ಸವನಕರ್ಮವು ಸಾಂಗವಾಗುವುದು. ಆದುದರಿಂದ ಯಜ್ಞಕ್ರಮ

ವನ್ನು ತಿಳಿದವರು ತೃತೀಯಸವನದಲ್ಲಿ ಉಪಯೋಗಿಸುವ ಋಜೀಷಕ್ಕೆ (ಪ್ರಾತಃಸವನ ಮಾಧ್ಯಂದಿನಸವನಗಳಲ್ಲಿ ರಸ ವನ್ನು ತೆಗೆದ ಬಳಿಕ ಉಳಿದಿರುವ ಸೋಮಲತೆಯ ಸಿಪ್ಪೆಗಳಿಗೆ ಋಜೀಷವೆಂದು ಹೇಳುವರು) ಹಾಲು ಮೊದಲಾದ ಆಶಿರ ದ್ರವ್ಯಗಳನ್ನು ಸೇರಿಸುವುದರಿಂದ, ಪಶುಗಳಿಗೆ ಲಭಿಸತಕ್ಕ ಆಜ್ಯದಿಂದ ಮತ್ತು ಪಶುಗಳ ಹೃದಯಾದ್ಯಂಗಗಳಿಂದ ಹೋಮಗಳನ್ನು ಮಾಡುವುದರಿಂದಲೂ ತೃತೀಯಸವನಕರ್ಮವು ಪ್ರಾತಸ್ಸವನಮಾಧ್ಯಂದಿನಸವನಗಳಿಗೆ ಶಕ್ತಿ ಸಾಮರ್ಥ್ಯಾದಿಗಳಲ್ಲಿ ಸರಿಸಮನಾಗುವುದು ಎಂದು ತಿಳಿದು ಅದರಂತೆ ಆಚರಿಸುವರು. ಈ ವಿಷಯವು ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾ-ತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನ-ಯತಿ ಸಶುಕ್ರತ್ವಾಯ ||**

(ತೈ. ಸಂ. ೬-೧-೬-೪)

ಎಂದು ತೈತ್ತಿರೀಯಸಂಹಿತೆಯಲ್ಲಿ ಇದೇ ಅಭಿಪ್ರಾಯವು ಉಕ್ತವಾಗಿದೆ. ಈ ವಿಷಯವು ಎಂದರೆ ಪ್ರಾತಃಸವನ ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳೂ ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಸರಿಸಮನಾದ ಸ್ಥಾನವನ್ನು ಪಡೆದಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಸರ್ವ ಸಮೃದ್ಧಿಯುಕ್ತನಾಗಿ ಸುಖಿಸುವನು.

**ತೇ ವಾ ಇಮೇ ಇತರೇ ಛಂದಸೀ ಗಾಯತ್ರೀಮಭ್ಯವದೇತಾಂ ವಿತ್ತಂ ನಾವಕ್ಷರಾಣ್ಯನುಪರ್ಯಾ-ಗುರಿತಿ ನೇತ್ಯಬ್ರವೀದ್ಗಾಯತ್ರೀ ಯಥಾವಿತ್ತಮೇವ ನ ಇತಿ ತೇ ದೇವೇಷು ಪ್ರಶ್ನಮೈತಾಂ ತೇ ದೇವಾ ಅಬ್ರುವನ್ಯಥಾವಿತ್ತಮೇವ ವ ಇತಿ ತಸ್ಮಾದ್ಧಾಪ್ಯೇತರ್ಹಿ ವಿತ್ತ್ಯಾಂ ವ್ಯಾಹುರ್ಯ-ಥಾವಿತ್ತಮೇವ ನ ಇತಿ ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವತ್ತ್ರ್ಯಕ್ಷರಾ ತ್ರಿಷ್ಟುಬೇಕಾಕ್ಷರಾ ಜಗತೀ ||**

(ಐ. ಬ್ರಾ. ೧೩-೨೮)

ಹಿಂದೆ ತ್ರಿಷ್ಟುಪ್ ಜಗತೀ ಛಂದಸ್ಸುಗಳು ಸೋಮವನ್ನು ತರುವುದಕ್ಕಾಗಿ ಸ್ವರ್ಗಕ್ಕೆ ಹಾರಿಹೋಗುವಾಗ ಸ್ವರ್ಗವನ್ನು ತಲುಪದೆ ಅರ್ಧದಾರಿಯಲ್ಲಿಯೇ ಬಳಲಿ ಹಿಂತಿರುಗಬೇಕಾಯಿತೆಂದೂ, ಆ ಕಾರಣಕ್ಕಾಗಿ ಅವು ತಮ್ಮ ನಾಲ್ಕು ಅಕ್ಷರ ಗಳಲ್ಲಿ ಜಗತೀಛಂದಸ್ಸು ಮೂರು ಅಕ್ಷರಗಳನ್ನೂ, ತ್ರಿಷ್ಟುಪ್ ಛಂದಸ್ಸು ಒಂದು ಅಕ್ಷರವನ್ನೂ ಕಳೆದುಕೊಂಡವೆಂದೂ ಹಿಂದೆಯೇ ಹೇಳಲಾಗಿದೆಯಷ್ಟೆ. ಗಾಯತ್ರಿಯು ಸೋಮವನ್ನು ತಂದಾಗ ತ್ರಿಷ್ಟುಬ್ಜಗತಿಗಳು ಕಳೆದುಕೊಂಡಿದ್ದ ನಾಲ್ಕು ಅಕ್ಷರಗಳನ್ನು ಹಿಂದಕ್ಕೆ ತಂದು ಅದನ್ನು ತನ್ನ ಸ್ವಕೀಯವಾದ ನಾಲ್ಕು ಅಕ್ಷರಗಳ ಜತೆಗೆ ಸೇರಿಸಿಕೊಂಡು ತನಗೆ ಒಟ್ಟು ಎಂಟು ಅಕ್ಷರಗಳಾಗುವಂತೆ ಮಾಡಿಕೊಂಡಿತೆಂದೂ ಸಹ ಹಿಂದೆ ಹೇಳಿದೆ. ಇದನ್ನು ಕಂಡು ತ್ರಿಷ್ಟುಬ್ಜಗ ತೀಛಂದಸ್ಸುಗಳು ಗಾಯತ್ರಿಯ ಸಮೀಪಕ್ಕೆ ಬಂದು ಎಲೈ ಗಾಯತ್ರಿಯೇ, ಸ್ವರ್ಗದಲ್ಲಿ ನಾವು ಬಿಟ್ಟುಬಂದ ನಾಲ್ಕು ಅಕ್ಷರಗಳನ್ನು ನೀನು ಹಿಂದಕ್ಕೆ ತಂದದ್ದೇನೋ ಸರಿಹೋಯಿತು. ಆದರೆ ಅವುಗಳನ್ನು ನಿನ್ನ ನಾಲ್ಕು ಅಕ್ಷರಗಳ ಜತೆಗೆ

ಸೇರಿಸಿಕೊಂಡಿರುವುದು ಮಾತ್ರ ಸರಿಯಲ್ಲ. ಆ ಅಕ್ಷರಗಳು ನಮಗೆ ಸೇರಿದ್ದಾದುದರಿಂದ ಅದನ್ನು ನಮಗೆ ನೀನು ಹಿಂದಕ್ಕೆ ಕೊಡಬೇಕು ಎಂದು ಕೇಳಿದವು. ಅವುಗಳ ಮಾತನ್ನು ಗಾಯತ್ರಿಯು ನಿರಾಕರಿಸುತ್ತಾ ಇಂತೆಂದಿತು— ನಮ್ಮ ವಶದಲ್ಲಿ ಯಾವ ಪದಾರ್ಥವಿರುವುದೋ ಎಂದರೆ, ಯಾವುದನ್ನು ನಾವು ಸಂಪಾದಿಸಿರುವೆವೋ ಅದು ನಮಗೇ ಸೇರಬೇಕಾದುದು ಧರ್ಮವು. ಲೋಕವ್ಯವಹಾರದಲ್ಲಿಯೂ ಸಹ ಒಂದು ವಸ್ತುವು ಒಬ್ಬನ ಸ್ವಾಧೀನಾನುಭವದಲ್ಲಿದ್ದರೆ ಅದು ಅವನಿಗೇ ಸೇರಿರುವುದೆಂದು ನ್ಯಾಯವನ್ನು ತಿಳಿದವರು ಹೇಳುವರು. ಸ್ವರ್ಗಲೋಕಕ್ಕೆ ಹೋಗಿ ಸೋಮವನ್ನು ತರುವುದರಲ್ಲಿ ಕಾರ್ಯಸಿದ್ಧಿಯನ್ನು ಮಾಡಿಕೊಂಡು, ನೀವು ಕಳೆದುಕೊಂಡಿದ್ದ ಅಕ್ಷರಗಳನ್ನು ಹಿಂದಕ್ಕೆ ತಂದ ನನಗೆ ಮಾತ್ರ ಆ ಅಕ್ಷರಗಳು ಸೇರಬೇಕು. ಅವುಗಳನ್ನು ನಿಮಗೆ ಕೊಡುವುದಕ್ಕಾಗುವುದಿಲ್ಲ ಎಂದಿತು. ಇದನ್ನು ಕೇಳಿ ಆ ತ್ರಿಷ್ಟುಬ್ಜಗತಿಗಳು ದೇವತೆಗಳ ಸಮೀಪಕ್ಕೆ ಹೋಗಿ ಅವರಲ್ಲಿ ತಮ್ಮ ದೂರನ್ನು ಹೇಳಿಕೊಂಡವು. ಅವರೂ ಸಹ ಲೋಕವ್ಯವಹಾರದಲ್ಲಿ ಬಳಕೆಯಲ್ಲಿರುವ ಎಂದರೆ, ಒಂದು ವಸ್ತುವು ಯಾರ ಸ್ವಾಧೀನದಲ್ಲಿರುವುದೋ ಅದು ಅವರಿಗೇ ಸೇರಿದ್ದು ಎಂಬ ನ್ಯಾಯವನ್ನೇ ಎತ್ತಿ ಹಿಡಿದು ಅದನ್ನು ಸಮರ್ಥಿಸುತ್ತಾ, ಗಾಯತ್ರಿಯು ಹೇಳುವ ನ್ಯಾಯವೇ ಸರಿ. ಆ ಅಕ್ಷರಗಳನ್ನು ತಂದದ್ದರಿಂದ ಅವುಗಳು ಅದಕ್ಕೇ (ಗಾಯತ್ರಿಗೇ) ಸೇರಬೇಕು ಎಂದು ನುಡಿದರು. ಹೇಗೆಂದರೆ— ಯುದ್ಧಾದಿಗಳಲ್ಲಿ ಸೋತು ಓಡಿಹೋಗುತ್ತಿರುವ ಶತ್ರು ಸೇನೆಗಳು ಬಿಟ್ಟುಹೋದ ವಸ್ತುಗಳನ್ನು ಗೆದ್ದವರಲ್ಲಿ ಯಾರಿಗೆ ಯಾವುದು ಸಿಕ್ಕುವುದೋ ಅದು ಅವರದೇ ಎಂದು ಎಲ್ಲರೂ ಒಪ್ಪುವರು. ಅದರಂತೆ ಇಲ್ಲಿಯೂ ಸಹ ನಡೆಯಬೇಕು ಎಂದು ದೇವತೆಗಳು ನ್ಯಾಯವನ್ನು ಪ್ರತಿಪಾದಿಸಿದರು. ಆದ್ದರಿಂದ ಗಾಯತ್ರಿಗೆ ತನ್ನ ಸ್ವಂತ ನಾಲ್ಕು ಅಕ್ಷರಗಳ ಜತೆಗೆ ಸ್ವರ್ಗದಿಂದ ತಂದ ತ್ರಿಷ್ಟುಬ್ಜಗತಿಗಳ ನಾಲ್ಕು ಅಕ್ಷರಗಳೂ ಸೇರಿ ಒಟ್ಟು ಎಂಟಕ್ಷರಗಳಾದವು. ತ್ರಿಷ್ಟುಪ್‌ಛಂದಸ್ಸಿಗೆ ಮೂರು ಅಕ್ಷರಗಳೇ ಉಳಿದವು. ಜಗತೀಛಂದಸ್ಸಿಗೆ ಒಂದು ಅಕ್ಷರ ಮಾತ್ರ ಉಳಿಯಿತು.

> **ಸಾಷ್ಟಾಕ್ಷರಾ ಗಾಯತ್ರೀ ಪ್ರಾತಸ್ಸವನಮುದಯಚ್ಛನ್ನಾಶಕ್ನೋತ್ತ್ರಿಷ್ಟುಪ್ ತ್ರ್ಯಕ್ಷರಾ ಮಾಧ್ಯಂದಿನಂ ಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀತ್ತ್ರಿಷ್ಟುಪ್ತಾಂ ವೈ ಮೈತೈರಷ್ಟಾಭಿರಕ್ಷರೈರುಪಸಂಧೇಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾಯತ್ರ್ಯೈ ಮಧ್ಯಂದಿನೇ ಯನ್ಮರುತ್ವತೀಯಸ್ಯೋತ್ತರೇ ಪ್ರತಿಪದೋಯಶ್ಚಾನುಚರಃ ಸೈಕಾದಶಾಕ್ಷರಾ ಭೂತ್ವಾ ಮಾಧ್ಯಂದಿನಂ ಸವನಮುದಯಚ್ಛತ್ ||**

ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಮೂರು ಸವನಗಳಿರುವುವು ಎಂಬುದನ್ನು ಹಿಂದೆಯೇ ವಿವರಿಸಿದೆ. ಪ್ರಾತಃಸವನದಲ್ಲಿ ನಡೆಯಬೇಕಾಗಿರುವ ಕಾರ್ಯಕಲಾಪಗಳನ್ನು ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೂ, ಮಾಧ್ಯಂದಿನಸವನದ ಕಾರ್ಯಕಲಾಪಗಳನ್ನು ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ, ತೃತೀಯಸವನದ ಕಾರ್ಯಕಲಾಪಗಳನ್ನು ಜಗತೀಛಂದಸ್ಸಿನ ಮಂತ್ರಗಳಿಂದಲೂ ನೆರವೇರಿಸಬೇಕೆಂಬ ವಿಧಿ ಇರುವುದು.

ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳಾದುದರಿಂದ ಅದು ಪೂರ್ಣವಾದಂತಾಗಿ ಪ್ರಾತಃಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಸಮರ್ಥವಾಯಿತು. ಆದರೆ ತ್ರಿಷ್ಟುಪ್‌ಛಂದಸ್ಸು ಒಂದು ಅಕ್ಷರವನ್ನು ಕಳೆದುಕೊಂಡು ಮೂರೇ ಅಕ್ಷರಗಳುಳ್ಳದ್ದಾಗಿರುವುದರಿಂದ ಅದಕ್ಕೆ ಮಾಧ್ಯಂದಿನಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಸಾಮರ್ಥ್ಯವಿಲ್ಲದಾಯಿತು. ಈ ರೀತಿ ಸಾಮರ್ಥ್ಯವಿಲ್ಲದಿದ್ದ ತ್ರಿಷ್ಟುಪ್‌ಛಂದಸ್ಸನ್ನು ನೋಡಿ ಗಾಯತ್ರಿಯು—ಎಲೈ ತ್ರಿಷ್ಟುಪ್‌ಛಂದಸ್ಸೇ, ನಿನಗೆ ಕಾರ್ಯನಿರ್ವಾಹಶಕ್ತಿ ಇಲ್ಲದ್ದರಿಂದ ನಾನು ಮಾಧ್ಯಂದಿನಸವನಕಾರ್ಯಕಲಾಪಗಳಲ್ಲಿ ನಿನಗೆ

ಸಹಾಯಾರ್ಥವಾಗಿ ಬರುವೆನು. ಆದರೆ ಆ ಸಹಾಯಕ್ಕೆ ಪ್ರತಿಫಲವಾಗಿ ಮಾಧ್ಯಂದಿನಸವನದಲ್ಲಿ ನನಗೂ ಒಂದು ಭಾಗವಿರಬೇಕು. ಅದಕ್ಕೆ ನೀನು ಒಪ್ಪುವಿಯಾದರೆ ನಾನು ನಿನಗೆ ಸಹಾಯಮಾಡುವೆನು ಎಂದಿತು. ಇದನ್ನು ಕೇಳಿ ತ್ರಿಷ್ಟುಪ್‌ಛಂದಸ್ಸು ಹಾಗೆಯೇ ಆಗಲೆಂದೊಪ್ಪಿ, ಎಲೈ ಗಾಯತ್ರಿಯೇ, ಈಗ ನನ್ನಲ್ಲಿ ಮೂರು ಅಕ್ಷರಗಳು ಮಾತ್ರವಿರುವವು. ಅವುಗಳ ಜತೆಗೆ ನಿನ್ನ ಎಂಟು ಅಕ್ಷರಗಳನ್ನು ಸೇರಿಸಿದರೆ ನನಗೆ ಹನ್ನೊಂದು ಅಕ್ಷರಗಳಾಗುವುದರಿಂದ ಕಾರ್ಯನಿರ್ವಾಹಮಾಡಲು ಶಕ್ತಿಯುಂಟಾಗುವುದು ಎಂದು ಹೇಳಿತು. ಅದರಂತೆ ಗಾಯತ್ರಿಯು ತನ್ನ ಎಂಟು ಅಕ್ಷರಗಳನ್ನು ತ್ರಿಷ್ಟುಪ್‌ಛಂದಸ್ಸಿನ ಮೂರು ಅಕ್ಷರಗಳೊಡನೆ ಸೇರಿಸಿತು. ಈ ರೀತಿ ಮಾಡಿದ್ದರಿಂದ ತ್ರಿಷ್ಟುಪ್‌ಛಂದಸ್ಸೂ ಸಹ ಮಾಧ್ಯಂದಿನಸವನದಲ್ಲಿ ಕಾರ್ಯನಿರ್ವಾಹವನ್ನು ಮಾಡಲು ಸಮರ್ಥವಾಯಿತು. ಮಾಧ್ಯಂದಿನಸವನದಲ್ಲಿ ತನಗೂ ಒಂದು ಭಾಗವಿರಬೇಕೆಂದು ಗಾಯತ್ರಿಯು ಕೇಳಿದ್ದಕ್ಕೆ ತ್ರಿಷ್ಟುಪ್ ಹಾಗೆಯೇ ಆಗಲೆಂದು ಹೇಳಿರುವುದು ಸರಿಯಷ್ಟೆ. ಮಾಧ್ಯಂದಿನಸವನದಲ್ಲಿ ಗಾಯತ್ರಿಯ ಭಾಗವು ಯಾವುದು ಎಂದರೆ— ಮಾಧ್ಯಂದಿನಸವನಕಾಲದಲ್ಲಿ ಪಠಿಸುವ ಮರುತ್ವತೀಯ ಶಸ್ತ್ರಮಂತ್ರಗಳ ಕೊನೆಯ ಭಾಗದಲ್ಲಿ **ಆ ತ್ವಾ ರಥಂ ಯಥೋತಯೇ** (ಋ. ಸಂ. ೬-೬೮-೧) ಎಂದು ಪ್ರಾರಂಭವಾಗುವ ತೃಚದಲ್ಲಿಯೂ (ತೃಚವೆಂದರೆ ೩ ಋಕ್ಕುಗಳು) ಅದರ ಮುಂದಿನ **ವಿಶ್ವಾನರಸ್ಯ ವಸ್ಪತಿಃ** (ಋ. ಸಂ. ೮-೬೮-೪) ಎಂಬ ತೃಚದಲ್ಲಿಯೂ ಎರಡೆರಡು ಋಕ್ಕುಗಳು ಗಾಯತ್ರೀಛಂದಸ್ಕಗಳಾಗಿರುವವು. ಎಂದರೆ, **ಆ ತ್ವಾ ರಥಂ ಯಥೋತಯೇ** ಎಂಬ ತೃಚದಲ್ಲಿ **ತುವಿಶುಷ್ಮ ತುವಿಕ್ರತೋ** ಮತ್ತು **ಯಸ್ಯ ತೇ ಮಹಿನಾ ಮಹಃ** (ಋ. ಸಂ. ೬-೬೮-೨, ೩ ನೆಯ ಋಕ್ಕುಗಳು) ಎಂಬ ಎರಡು ಋಕ್ಕುಗಳೂ, **ವಿಶ್ವಾನರಸ್ಯ ವಸ್ಪತಿಃ** ಎಂಬ ಎರಡನೆಯ ತೃಚದಲ್ಲಿ **ಅಭಿಷ್ಟಯೇ ಸದಾವೃಧಂ** ಮತ್ತು **ಪರೋಮಾತ್ರಮೃಚೀಷಂ** (ಋ. ಸಂ. ೬-೬೮-, ೬ನೆಯ ಋಕ್ಕುಗಳು) ಎಂಬ ಎರಡು ಋಕ್ಕುಗಳೂ ಸೇರಿ ಪ್ರತಿಪತ್ತೃಚದಲ್ಲಿ ನಾಲ್ಕು ಗಾಯತ್ರೀಛಂದಸ್ಸಿನ ಮಂತ್ರಗಳಿರುವವು. ಪ್ರತಿಪತ್ತೃಚವೆಂದರೆ—ಪ್ರಾರಂಭದಲ್ಲಿ ಪಠಿಸುವ ಋಕ್ಕುಗಳು. ಇನ್ನು ಅನುಚರವೆಂಬ ಕೊನೆಯಲ್ಲಿ ಪಠಿಸುವ ತೃಚದ ಮೊದಲನೆಯ ಋಕ್ಕಾದ **ಇದಂ ವಸೋ ಸುತಮಂಧಃ** ಎಂಬ ಮಂತ್ರವೂ ಗಾಯತ್ರೀಛಂದಸ್ಕವು. ಆದ್ದರಿಂದ ಪ್ರತಿಪತ್ತೃಚಗಳಲ್ಲಿರುವ ೪ ಗಾಯತ್ರೀಛಂದಸ್ಸಿನ ಋಕ್ಕುಗಳೂ, ಅನುಚರತೃಚದಲ್ಲಿರುವ ೧ ಗಾಯತ್ರೀ ಛಂದಸ್ಸಿನ ಋಕ್ಕೂ ಸೇರಿ ಒಟ್ಟು ೫ ಗಾಯತ್ರೀಛಂದಸ್ಕವಾದ ಋಕ್ಕುಗಳು ಮಾಧ್ಯಂದಿನಸವನದಲ್ಲಿರುವವು. ಈ ೫ ಋಕ್ಕುಗಳೇ ಮಾಧ್ಯಂದಿನಸವನದಲ್ಲಿ ಗಾಯತ್ರಿಗೆ ಸಲ್ಲಬೇಕಾದ ಭಾಗವೆಂದು ನಿರ್ದಿಷ್ಟವಾಗಿರುವುದು.

**ನಾಶಕ್ನೋಜ್ಜಗತ್ಯೇಕಾಕ್ಷರಾ ತೃತೀಯಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀಜ್ಜಗತೀ ತಾಂ ವೈ ಮೈತೈರೇಕಾದಶಭಿರಕ್ಷರೈರುಪಸಂಧೇಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾಯತ್ರ್ಯೈ ತೃತೀಯಸವನೇ ಯಜ್ಜೈಷ್ಟದೇವಸ್ಯೋತ್ತರೇ ಪ್ರತಿಪದೋ ಯಶ್ಚಾನುಚರಃ ಸಾ ದ್ವಾದಶಾಕ್ಷರಾ ಭೂತ್ವಾ ತೃತೀಯಸವನಮುದಯಚ್ಛತ್ ||**

ಜಗತೀಛಂದಸ್ಸೂ ಸಹ ಮೂರು ಅಕ್ಷರಗಳನ್ನು ಕಳೆದುಕೊಂಡು ಒಂದೇ ಅಕ್ಷರವುಳ್ಳದ್ದಾಗಿದ್ದಿತು. ಆದ್ದರಿಂದ ಅದೂ ಸಹ ತೃತೀಯಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಅಸಮರ್ಥವಾಯಿತು. ಆಗಲೂ ಗಾಯತ್ರಿಯು ಜಗತಿಯನ್ನುದ್ದೇಶಿಸಿ—ಎಲೈ ಜಗತಿಯೇ, ತೃತೀಯಸವನದ ಕಾರ್ಯಕಲಾಪಗಳಲ್ಲಿ ನಾನು ನಿನಗೆ ಸಹಾಯ ಮಾಡುವೆನು. ಆದರೆ ಅದರಲ್ಲಿ ನನಗೂ ಒಂದು ಭಾಗವಿರಬೇಕೆಂದಿತು. ಜಗತಿಯು ಅದಕ್ಕೊಪ್ಪಿ ಹಾಗೆಯೇ ಮಾಡೆಂದಿತು. ಎಂದರೆ ಗಾಯತ್ರಿಯ ಎಂಟು ಅಕ್ಷರಗಳೂ, ತ್ರಿಷ್ಟುಪಿನ ಮೂರು ಅಕ್ಷರಗಳೂ ಸೇರಿ ಹನ್ನೊಂದು ಅಕ್ಷರಗಳಾಗಿ ಮಾಧ್ಯಂದಿನ

ಸವನದಲ್ಲಿ ಕಾರ್ಯವನ್ನು ನಿರ್ವಹಿಸಲು ಸಮರ್ಥವಾಯಿತಷ್ಟೆ. ಆ ಹನ್ನೊಂದಕ್ಷರಗಳೂ ಈಗ ತೃತೀಯಸವನದಲ್ಲಿ ಜಗತಿಯ ಒಂದು ಅಕ್ಷರಕ್ಕೆ ಸೇರಿ ಹನ್ನೆರಡಕ್ಷರಗಳಾಗಿ ತೃತೀಯಸವನದ ಕಾರ್ಯಕಲಾಪಗಳನ್ನು ನಿರ್ವಹಿಸಲು ಸಮರ್ಥವಾಯಿತು. ಹೇಗೆಂದರೆ, ತೃತೀಯಸವನಕಾಲದಲ್ಲಿ ಪಠಿಸುವ ವೈಶ್ವದೇವಶಸ್ತ್ರಮಂತ್ರಗಳ ಕೊನೆಯಲ್ಲಿ ಪ್ರತಿಪತ್ತ್ಯೃಚಗಳಿಗಾಗಿ ಪಠಿಸುವ ಋಕ್ಕುಗಳೂ, ಅನುಚರರೂಪವಾಗಿ ಪಠಿಸುವ ಋಕ್ಕುಗಳೂ ಸಹ ಗಾಯತ್ರೀ ಛಂದಸ್ಸಿನ ಮಂತ್ರಗಳು. ಈ ರೀತಿ ಈ ಮಂತ್ರಗಳು ಒಟ್ಟು ಹನ್ನೆರಡು ಅಕ್ಷರಗಳುಳ್ಳ ಜಗತೀಛಂದಸ್ಕಗಳಾಗಿ ತೃತೀಯಸವನ ಕಾರ್ಯಗಳನ್ನು ನೆರವೇರಿಸಲು ಸಮರ್ಥವಾದವು ಎಂದಭಿಪ್ರಾಯವು.

> **ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವದೇಕಾದಶಾಕ್ಷರಾ ತ್ರಿಷ್ಟುಬ್ದ್ವಾದಶಾಕ್ಷರಾ ಜಗತೀ । ಸರ್ವೈಶ್ಛಂದೋಭಿಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ । ಏಕಂ ವೈ ಸತ್ತ್ರೇಧಾಭವತ್ತಸ್ಮಾದಾಹುರ್ದಾತವ್ಯಮೇವಂ ವಿದುಷ ಇತ್ಯೇಕಂ ಹಿ ಸತ್ತ್ರೇಧಾಭವತ್ ॥**
>
> (ಐ. ಬ್ರಾ. ೧೩-೨೮)

ಆದ್ದರಿಂದ ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳೂ, ತ್ರಿಷ್ಟುಪ್‌ಛಂದಸ್ಸಿಗೆ ಹನ್ನೊಂದಕ್ಷರಗಳೂ, ಜಗತೀಛಂದಸ್ಸಿಗೆ ಹನ್ನೆರಡು ಅಕ್ಷರಗಳೂ ಉಂಟಾದವು. ಈ ಮೂರು ಛಂದಸ್ಸುಗಳೂ ಇತರ ಸಮಸ್ತ ಛಂದಸ್ಸುಗಳಿಗೆ ಸರಿಸಮನಾದ ಸ್ಥಾನಮಾನಗಳನ್ನೂ ಶ್ರೇಷ್ಠತೆಯನ್ನೂ ಪಡೆದವು. ಈ ವಿಷಯವನ್ನು ತಿಳಿದ ಪುರುಷನು ಶ್ರೇಷ್ಠತೆಯನ್ನೂ, ಗಣ್ಯ ಸ್ಥಾನವನ್ನೂ ಪಡೆಯುವನು. ಗಾಯತ್ರಿಯ ಸ್ವರೂಪವು ಪೂರ್ವದಲ್ಲಿ ನಾಲ್ಕು ಅಕ್ಷರಮಾತ್ರವಿದ್ದು ಅನಂತರ ಮತ್ತೆ ನಾಲ್ಕು ಅಕ್ಷರಗಳನ್ನು ಅಧಿಕವಾಗಿ ಸಂಪಾದನೆ ಮಾಡಿ ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸುಗಳಲ್ಲಿಯೂ ಪ್ರವೇಶ ಮಾಡಿದ್ದರಿಂದ (ಎಂದರೆ, ತನ್ನ ಎಂಟು ಅಕ್ಷರಗಳನ್ನು ತ್ರಿಷ್ಟುಪ್ ಮತ್ತು ಜಗತೀಛಂದಸ್ಸಿನ ಅಕ್ಷರಗಳೊಡನೆ ಬೆರೆತಿದ್ದರಿಂದ) ಅದರ ಸ್ವರೂಪವು ಎಂದರೆ ಅದರ ಮಹಿಮೆಯು ಮೂರರಷ್ಟು ಅಧಿಕವಾಯಿತು. ಆದ್ದರಿಂದ ಈ ವಿಧವಾದ ಗಾಯತ್ರಿಯ ಮಹಿಮೆಯನ್ನು ತಿಳಿದ ಪುರುಷನಿಗೆ ಸುವರ್ಣಾದಿಗಳನ್ನು ದಾನವಾಗಿ ಕೊಡಬೇಕೆಂದು ಧರ್ಮರಹಸ್ಯವನ್ನು ತಿಳಿದ ಪ್ರಾಜ್ಞರು ಹೇಳುವರು.

ಸೋಮಾಹರಣೋಪಾಖ್ಯಾನವು (ಸೌಪರ್ಣಾಖ್ಯಾನವು) ಸಮಾಪ್ತವು.

## ಸೋಮಾಹರಣಪ್ರಸಂಗದಲ್ಲಿ ಋಗ್ವೇದಾದಿಗಳಲ್ಲಿರುವ ಈ ವಿಷಯವಾದ ಕೆಲವು ಋಕ್ಕುಗಳು ಇತ್ಯಾದಿ.

### ಸೋಮಾಹರಣದ ಪ್ರಸಂಗ. ಶ್ಯೇನಪಕ್ಷಿಯ ಪ್ರಯತ್ನ.

ಮೊದಲನೆಯದಾಗಿ—**ಸೋಮಾಹರಣಾತ್**— ಯಜ್ಞಪ್ರಧಾನವಾದ **ಸೋಮ**ವನ್ನು ತಂದೊದಗಿಸಿದುದರಿಂದ ಎಂದು ಗಾಯತ್ರಿಯ ಶಕ್ತಿವೈಶಿಷ್ಟ್ಯವು ಸೂಚಿತವಾಗಿದೆಯಷ್ಟೆ. ಈ ಸೋಮಾಹರಣದ ಪ್ರಸಂಗವು ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅತಿಮುಖ್ಯವಾದೆಡೆಗಳಲ್ಲೆಲ್ಲಾ ವರ್ಣಿತವಾಗಿದೆ. ಎಲ್ಲಕ್ಕಿಂತಲೂ ಪ್ರಥಮದಲ್ಲಿ ಋಕ್ಸಂಹಿತೆಯಲ್ಲಿಯೇ ಈ ಪ್ರಸಂಗವು ಕಥಾರೂಪದಲ್ಲಿ ಉಕ್ತವಾಗಿದೆ. ಋ. ಸಂ. ೪-೨೬ ಮತ್ತು ೪-೨೭ ನೇ ಸೂಕ್ತ

ಗಳಲ್ಲಿ ಇಂದ್ರನು ತನ್ನ ಪರಾಕ್ರಮವನ್ನು ವರ್ಣಿಸಿಕೊಳ್ಳುವಕಾಲದಲ್ಲಿ ಸೋಮಪಾನದಿಂದ ಆ ಪರಾಕ್ರಮವು ವೃದ್ಧಿಯಾದುದನ್ನೂ ಆ ಸೋಮವನ್ನು ಗಾಯತ್ರಿಯು ತಂದೊದಗಿಸಿದ ಬಗೆಯನ್ನೂ ವಿವರಿಸುತ್ತಾನೆ.

[ಈ ವರ್ಣನವು ವಾಮದೇವಋಷಿಯ ವಾಕ್ಯವೇ ಅಥವಾ ಇಂದ್ರವಾಕ್ಯವೇ ಎಂಬುದೂ ಮತ್ತು ಈ ಸೂಕ್ತಗಳ ದೇವತೆಯು ಇಂದ್ರನೇ ಅಥವಾ ಪರಮಾತ್ಮನೇ ಎಂಬುದೂ ಸಹ ಗಮನಿಸಬೇಕಾದ ವಿಷಯ. ಪ್ರಕೃತದಲ್ಲಿ ಆ ಚರ್ಚೆಯು ಅನಾವಶ್ಯಕ.]

**ಪ್ರ ಸು ಷ ವಿಭ್ಯೋ ಮರುತೋ ವಿರಸ್ತು ಪ್ರ ಶ್ಯೇನಃ ಶ್ಯೇನೇಭ್ಯ ಆಶುಪತ್ವಾ ।**
**ಅಚಕ್ರಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ॥**
(ಋ. ಸಂ. ೪-೨೬-೪)

ಎಲೈ ಮರುತ್ತುಗಳೇ, ದೇವತೆಗಳಿಂದ ಅಪೇಕ್ಷಿತವಾದ ಈ ಸೋಮವನ್ನು ಮನುವಿಗೆ ತಂದೊದಗಿಸಿದ ಈ ಸುಪರ್ಣವು ಚಕ್ರರಹಿತವಾದ ರಥದಲ್ಲಿ ಶೀಘ್ರವಾಗಿ ತಂದೊದಗಿಸಿದ ಇತರ ಶ್ಯೇನಪಕ್ಷಿಗಳಿಗಿಂತಲೂ ವೀರ್ಯದಲ್ಲಿ ಅಧಿಕವಾಗಿರಲಿ ಮತ್ತು ಅಧಿಕವಾದ ಗೌರವವನ್ನು ಪಡೆಯಲಿ.

**ಭರದ್ಯದಿ ವಿರತೋ ವೇವಿಜಾನಃ ಪಥೋರುಣಾ ಮನೋಜವಾ ಅಸರ್ಜಿ ।**
**ತೂಯಂ ಯಯೌ ಮಧುನಾ ಸೋಮ್ಯೇನೋತ ಶ್ರವೋ ವಿವಿದೇ ಶ್ಯೇನೋ ಅತ್ರ ॥**
(ಋ. ಸಂ. ೪-೨೬-೫)

ಈ ಶ್ಯೇನಪಕ್ಷಿಯು ಸೋಮಪಾಲಕರನ್ನು ಗದರಿಸಿ ಸೋಮಾಹರಣವನ್ನು ಮಾಡಿ ಅಂತರಿಕ್ಷದಲ್ಲಿ ಮನೋವೇಗದಿಂದ ಹಾರಿ ಬಂದು ಉಪಕಾರಮಾಡಿದುದರಿಂದ ಈ ಶ್ಯೇನಪಕ್ಷಿಯ ಸಮೂಹಕ್ಕೇ ಪೃಥ್ವಿಯಲ್ಲಿ ಗೌರವವು ಲಭಿಸಿತು.

**ಋಜೀಪೀ ಶ್ಯೇನೋ ದದಮಾನೋ ಅಂಶುಂ ಪರಾವತಃ ಶಕುನೋ ಮಂದ್ರಂ ಮದಂ ।**
**ಸೋಮಂ ಭರದ್ದಾದೃಹಾಣೋ ದೇವಾವಾನ್ದಿವೋ ಅಮುಷ್ಮಾದುತ್ತರಾದಾದಾಯ ॥**
(ಋ. ಸಂ. ೪-೨೬-೬)

ಅಂತರಿಕ್ಷದಲ್ಲಿ ಮನೋವೇಗದಲ್ಲಿ ನೇರವಾಗಿ ಹಾರಿಬರತಕ್ಕ ಈ ಪಕ್ಷಿಯು ದೇವತೆಗಳಿಂದ ಅನುಸರಿಸಲ್ಪಟ್ಟು ಸೋಮವನ್ನು ತಂದು ಅವರೊಂದಿಗೆ ಸಂಕಲ್ಪಶಕ್ತಿಯನ್ನೂ ಶ್ರದ್ಧೆಯನ್ನು ವೃದ್ಧಿಪಡಿಸಿತು. ಸೋಮಾಹರಣದಿಂದ ಲೋಕಕ್ಕೆ ಉಪಕಾರವನ್ನು ಮಾಡಿತು.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**
(ಋ. ಸಂ. ೪-೨೬-೭)

ದ್ಯುಲೋಕದಿಂದ ಈ ಶ್ಯೇನಪಕ್ಷಿಯು ಸೋಮವನ್ನು ತಂದು ಸಹಸ್ರಾರು ಯಾಗಗಳ ನಿರ್ವಹಣಕ್ಕೆ ಸಹಾಯಮಾಡಿತು. ಈ ಸೋಮಪಾನದಿಂದ ತೃಪ್ತನಾದ ಇಂದ್ರನ ಪರಾಕ್ರಮವು ವೃದ್ಧಿಯಾಗಿ ಅವನು ತನ್ನ ಸಕಲ ಶತ್ರುಗಳನ್ನೂ ಸದೆಬಡಿದನು.

**ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ |**
**ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ||**

(ಋ. ಸಂ ೪-೨೭-೩)

ಸೋಮಾಹರಣವನ್ನು ಮಾಡಿ ಶ್ಯೇನವು ಸಂತೋಷವನ್ನು ವ್ಯಕ್ತಪಡಿಸುತ್ತಾ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಸೋಮಪಾಲಕರಲ್ಲೊಬ್ಬನೂ ಧನ್ವಿಯೂ ಆದ ಕೃಶಾನುವೂ ಸಹ ಮನೋವೇಗದಿಂದ ಕೆಳಕ್ಕೆ ಇಳಿದು ಇದನ್ನು ಅಟ್ಟಿಸಿಕೊಂಡು ಬಂದು ಧನುಸ್ಸಿನಿಂದ ಇದರ ಕಡೆಗೆ ಬಾಣವನ್ನು ಬಿಟ್ಟನು.

**ಋಜಿಪ್ಯ ಈಮಿಂದ್ರಾವತೋ ನ ಭುಜ್ಯುಂ ಶ್ಯೇನೋ ಜಭಾರ ಬೃಹತೋ ಅಧಿ ಷ್ಣೋಃ |**
**ಅಂತಃ ಪತತ್ಪತತ್ರ್ಯಸ್ಯ ಪರ್ಣಮಧ ಯಾಮನಿ ಪ್ರಸಿತಸ್ಯ ತದ್ವೇಃ ||**

(ಋ. ಸಂ. ೪-೨೭-೪)

ಈ ಶ್ಯೇನವು ಇಂದ್ರನ ಪ್ರಭುತ್ವಕ್ಕೊಳಗಾದ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಕೃಶಾನುವಿನ ಬಾಣದಿಂದ ಹೊಡೆಯಲ್ಪಟ್ಟು ತನ್ನ ಹೋರಾಟದ ಕಾಲದಲ್ಲಿ ತನ್ನ ದೇಹಸ್ಥವಾದ ಒಂದು ರೆಕ್ಕೆಯನ್ನು ಕಳೆದುಕೊಂಡು ಗಾಯಹೊಂದಿತು.

ಈ ರೀತಿ ಕಥಾಭಾಗವಿರುವಾಗ ಇಲ್ಲಿ ತತ್ತ್ವವೇನೆಂದರಿಯಲು ಶ್ರಮಸಾಧ್ಯವೇ ಆಗುತ್ತದೆ. ಆದರೂ ಸಹ ಈ ಸೂಕ್ತಕರ್ತೃವಾದ ವಾಮದೇವಋಷಿಯ ಪರಿಚಯವನ್ನು ಮಾಡಿಕೊಡುತ್ತಾ ಐತರೇಯಾರಣ್ಯಕದಲ್ಲಿ ಇದೇ ಸಂದರ್ಭವನ್ನು ತಾತ್ತ್ವಿಕದೃಷ್ಟಿಯಿಂದ ವಿವರಿಸಿದೆ. ಅಲ್ಲಿ ಋಕ್ಸಂಹಿತೆಯ,

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ |**
**ಶತಂ ಮಾ ಪುರ ಆಯಸೀರರಕ್ಷನ್ನಧ ಶ್ಯೇನೋ ಜವಸಾ ನಿರದೀಯಂ ||**

(ಋ. ಸಂ. ೪-೨೭-೧)

ಎಂಬ ಋಕ್ಕನ್ನುದಾಹರಿಸಿ **ಗರ್ಭ ಏವ ಏತಚ್ಛಯಾನೋ ವಾಮದೇವ ಏವಮುವಾಚ** (ಐ. ಆ. ೨-೫). ವಾಮದೇವನು ಗರ್ಭಸ್ಥನಾಗಿರುವಾಗಲೇ ಈ ತತ್ತ್ವಾರ್ಥವನ್ನು ತಿಳಿದುಹೇಳಿದನು ಎಂದಿದೆ. ಮೇಲಿನ ಮಂತ್ರದ ಅರ್ಥವೇನೆಂದರೆ, ವಾಮದೇವನಿಗೆ ಗರ್ಭದಲ್ಲಿರುವಾಗಲೇ ಸಕಲದೇವತೆಗಳ ಉತ್ಪತ್ತಿಸ್ವರೂಪಗಳೂ ಬೋಧವಾದವೆಂದೂ, ನೂರಾರು ಅಯಶ್ಶಲಾಕೆಗಳಿಂದ ನಿರ್ಮಿತವಾದ ಬಂಧವಿದ್ದರೂ ಸಹ ಶ್ಯೇನಪಕ್ಷಿಯಂತೆ ಅದನ್ನು ತಪ್ಪಿಸಿಕೊಂಡು ಪೃಥಿವ್ಯಭಿಮುಖವಾಗಿ ಹಾರಿಬಂದನೆಂದೂ ತಿಳಿಯುತ್ತದೆ. ಈ ಭಾಗದ ತಾತ್ಪರ್ಯವು ಸುಲಭವಲ್ಲ. ಶಂಕರಾಚಾರ್ಯರೂ, ಆನಂದತೀರ್ಥರೂ, ಸಾಯಣರೂ ಸಹ ಈ ಸಂದರ್ಭವನ್ನು ವಿವರಿಸುವಾಗ ವಾಮದೇವನು ನೂರಾರು ಬಂಧರೂಪವಾದ ಶರೀರಗಳನ್ನು ಪ್ರವೇಶಿಸಿ ಕೊನೆಗೆ ಜ್ಞಾನಿಯಾಗಿ ಅವುಗಳಿಂದ ಮುಕ್ತನಾದನು ಮತ್ತು ಮೋಕ್ಷವನ್ನು ಹೊಂದಿದನು ಎಂದು ತಾತ್ಪರ್ಯವೆಂಬುದಾಗಿ ಅಭಿಪ್ರಾಯಪಡುತ್ತಾರೆ. ಆದರೆ ಐತರೇಯ ಆರಣ್ಯಕದ ಸಂದರ್ಭವನ್ನು ಪರಿಶೀಲಿಸಿದರೆ **ಸ ಏವಂ ವಿದ್ವಾನ್ ಅಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಮೃತಃ ಸಮಭವತ್ಸಮಭವತ್ |** (ಐ. ಅ. ೨-೫). ಗರ್ಭಸ್ಥನಾಗಿರುವಾಗಲೇ ಈ ತತ್ತ್ವವನ್ನು ತಿಳಿದ ವಾಮದೇವನು ಪಾರ್ಥಿವಶರೀರವನ್ನು ತ್ಯಾಗಮಾಡಿ ಮುಕ್ತಿಯನ್ನು ಪಡೆದನು ಎಂದಿದೆ. ಆದುದರಿಂದ ಋ. ಸಂ. ೪-೨೭-೧ ನೇ ಮಂತ್ರದ ವಾಕ್ಯವು ವಾಮದೇವನಿಗೇ ಅನ್ವಯಿಸುವುದೆಂದಭಿ

ಪ್ರಾಯವಾಗುತ್ತದೆ. ಅಲ್ಲದೇ, ೧-೩೨-೧೪ ಮತ್ತು ೧೦-೯೯-೮ ಇತ್ಯಾದಿ ಮಂತ್ರಗಳಲ್ಲಿ ಇಂದ್ರನು ಶ್ಯೇನಪಕ್ಷಿಗೆ ಸದೃಶನಾಗಿರುವನೆಂದು ವರ್ಣಿತವಾಗಿರುವನೆಂಬ ವಾಕ್ಯದ ಆಧಾರದ ಮೇಲೆ ಕೆಲವು ಪಂಡಿತರು **ಗರ್ಭೇ ನು** .... ... ಎಂಬ ಮಂತ್ರವು ಇಂದ್ರನನ್ನೇ ನಿರ್ದೇಶಿಸುವುದೆಂದಭಿಪ್ರಾಯಪಡುತ್ತಾರೆ. ಆದರೆ ಅದು ತಪ್ಪಾಗುತ್ತದೆ. ಇನ್ನು ಕೆಲವರು ಇದು ಸೋಮನ ವಾಕ್ಯವೆಂದೂ ತಿಳಿಸಿದ್ದಾರೆ. (Ludwig).

## 2. ಪಕ್ಷ್ಯಾಕಾರವಾದ ಗಾಯತ್ರಿಯೇ ಶ್ಯೇನವು.

ಸಾಯಣರು ಮಾತ್ರ,

**ಶ್ಯೇನಭಾವಂ ಸಮಾಸ್ಥಾಯ ಗರ್ಭಾದ್ಯೋಗೇನ ನಿಸ್ಸೃತಃ ।**
**ಋಷಿಗರ್ಭೇ ಶಯಾನಃಸನ್ ಬ್ರೂತೇ ಗರ್ಭೇ ನು ಸನ್ನಿತಿ ॥**

(ಋ. ಸಂ. ೪-೨೭-೧ ಭಾಷ್ಯಕ್ಕೆ ಪೀಠಿಕೆ)

ಎಂಬುದಾಗಿ ವಾಮದೇವನೇ ತನ್ನ ಯೋಗಮಹಿಮೆಯಿಂದ ಗರ್ಭದಿಂದ ಮುಕ್ತನಾಗಿ ಈ ವಾಕ್ಯವನ್ನು ಪಠಿಸುತ್ತಾನೆ ಎಂದು ಹೇಳಿದ್ದಾರೆ Ludwig ಮುಂತಾದ ಆಂಗ್ಲವಿಮರ್ಶಕರಾರೂ ಸಹ ಈ ಶ್ಯೇನವು ಗಾಯತ್ರೀರೂಪದಲ್ಲಿ ವರ್ಣಿತವಾಗಿರಲು ಕಾರಣ ಮತ್ತು ಆಧಾರಗಳೇನು ಎಂಬುದನ್ನು ವಿಮರ್ಶಿಸಿಲ್ಲ. ಇದೇ ಸಂದರ್ಭವನ್ನು ವರ್ಣಿಸುವಾಗ ಶ್ಯೇನವು ಸುಪರ್ಣಪದದಿಂದಲೂ ವ್ಯವಹೃತವಾಗಿದೆ, ಗಾಯತ್ರೀಪದದಿಂದಲೂ ವ್ಯವಹೃತವಾಗಿದೆ. ಸಾಯಣರು ಕೆಲವೆಡೆಗಳಲ್ಲಿ ಶ್ಯೇನ ಶಬ್ದವನ್ನು ವಿವರಿಸುವಾಗ **ಶ್ಯೇನಃ ಶಂಸನೀಯಗತಿಮಾನ್ಪಕ್ಷೀ ಪಕ್ಷ್ಯಾಕಾರಾ ಗಾಯತ್ರೀ** ಎಂದು ವಿವರಿಸಿದ್ದಾರೆ. ಈ ರೀತಿ **ಶ್ಯೇನ, ಸುಪರ್ಣ, ಗಾಯತ್ರೀ** ಎಂಬ ಬೇರೆ ಬೇರೆ ಪದಗಳನ್ನು ಈ ಸಂದರ್ಭಗಳಲ್ಲಿ ಉಪಯೋಗಿಸಿರುವುದರಿಂದ ಈ ಕಥಾವಿವರಣೆಯನ್ನು ತಿಳಿದ ಹೊರತು ಇಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೇಳಲಾಗುವುದಿಲ್ಲ. ಆದುದರಿಂದ ತೈತ್ತಿರೀಯಸಂಹಿತೆ, ಐತರೇಯಬ್ರಾಹ್ಮಣ ಮತ್ತು ಶತಪಥಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಈ ಕಥಾಭಾಗವನ್ನು ತಿಳಿದನಂತರ ಗಾಯತ್ರಿಯು ಸೋಮವನ್ನು ತಂದ ವಿಚಾರದಲ್ಲಿ ತತ್ತ್ವಾರ್ಥವೇನೆಂಬುದನ್ನು ಪರಿಶೀಲಿಸಬಹುದು.

## 3. ಪ್ರಾಸಂಗಿಕವಾದ ಕದ್ರು ಸುಪರ್ಣಿಯರ ಕಥೆ. ಸುಪರ್ಣಿಯ ಪುತ್ರರೇ ಛಂದಸ್ಸುಗಳು.

ತೈತ್ತಿರೀಯಸಂಹಿತೆಯಲ್ಲಿ ಈ ಕಥಾಭಾಗವು ಈ ರೀತಿ ವರ್ಣಿತವಾಗಿದೆ.

**ಕದ್ರೂಶ್ಚ ವೈ ಸುಪರ್ಣೀ ಚಾತ್ಮರೂಪಯೋರಸ್ಪರ್ಧೇತಾಗ್ಂ ಸಾ ಕದ್ರೂಸ್ಸುಪರ್ಣೀಮಜಯ-ತ್ಸಾಬ್ರವೀತ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀಣೀಷ್ವೇತೀಯಂ ವೈ ಕದ್ರೂರಸೌ ಸುಪರ್ಣೀ ಛಂದಾಗ್ಂಸಿ ಸೌಪರ್ಣೇಯಾಸ್ಸಾಬ್ರವೀದಸ್ಮೈ ವೈ ಪಿತರೌ ಪುತ್ರಾನ್ ಬಿಭೃತಸ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀಣೀಷ್ವೇತಿ ಮಾ ಕದ್ರೂರವೋಚದಿತಿ ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ**

ಅಕ್ಷರೇ ಅಭಿನಾಯೇತಾಗ್‌ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಸ್ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯ-ರುಂಧ ತದಜಾಯಾ ಅಜತ್ವಗ್‌ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್‌ಂ ಸತೀ ಯಜ್ಞಮುಖಂ ಪರಿಯಾಯೇತಿ ಯದೇವಾದಸ್ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮು-ಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂ-ದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ।

(ತೈ. ಸಂ. ೬-೧-೬-೧ ರಿಂದ ೩)

ಕದ್ರು ಮತ್ತು ಸುಪರ್ಣೀ ಎಂಬಿಬ್ಬರಿಗೂ ಸಹ ತಮ್ಮ ರೂಪದ ವಿಷಯದಲ್ಲಿ ಯಾರಧಿಕರೆಂಬ ಸ್ಪರ್ಧೆಯುಂಟಾಯಿತು. ಕದ್ರುವೇ ಜಯಿಸಿ ಸುಪರ್ಣಿಯನ್ನು ಸೋಲಿಸಿ ತನ್ನ ಅಧೀನದಲ್ಲಿರಿಸಿಕೊಂಡಳು. ಆಗ ಸೋತ ಸುಪರ್ಣಿಯನ್ನು ಕುರಿತು ಮೂರನೇ ಸ್ವರ್ಗಭಾಗದಲ್ಲಿ ಸೋಮವು ಇದೆ. ಅದನ್ನು ತಂದು ಕೊಟ್ಟು ನೀನು ಬಿಡುಗಡೆಯನ್ನು ಹೊಂದಬಹುದು ಎಂದು ಭರವಸೆಯನ್ನು ಕೊಟ್ಟಳು. ಕದ್ರುವೇ ಈ ಪೃಥ್ವಿಯು; ಸುಪರ್ಣಿಯೇ ಅಂತರಿಕ್ಷವು. ಛಂದಸ್ಸುಗಳೇ ಸುಪರ್ಣಿಯ ಸಂತಾನಗಳು. ತಾಯಿಯ ಸೇವೆಗಾಗಿಯೇ ಪೋಷಿಸಲ್ಪಡತಕ್ಕ ಮಕ್ಕಳುಗಳ ಸಹಾಯದಿಂದ ನೀನು ಸೋಮವನ್ನು ತರಿಸಿಕೊಟ್ಟು ನಿನ್ನ ಮುಕ್ತಿಯನ್ನು ಪಡೆಯಬಹುದೆಂದು ಕದ್ರುವು ಸುಪರ್ಣಿಗೆ ಹೇಳಿದಳು. ಆಗ ಅದೇರೀತಿ ಸುಪರ್ಣಿಯೂ ಸಹ ತನ್ನ ಮಕ್ಕಳಿಗೆ ಈ ಸಂದರ್ಭವನ್ನು ತಿಳಿಸಿದಳು. ಆಗ ಹದಿನಾಲ್ಕು ಅಕ್ಷರಾತ್ಮಕವಾದ ಜಗತಿಯು ಅಂತರಿಕ್ಷಕ್ಕೆ ಹಾರಿತು. ಆದರೆ ಸೋಮವನ್ನು ಪಡೆಯಲಾಗದೇ ಹಿಂತಿರುಗಿತು. ಹದಿನಾಲ್ಕರಲ್ಲಿ ಎರಡಕ್ಷರಗಳನ್ನು ಕಳೆದುಕೊಂಡಿತು, ಮತ್ತು ಯಜ್ಞಪಶುಗಳೊಡನೆಯೂ ಹಿಂತಿರುಗಿತು. ಆದುದರಿಂದಲೇ ಜಗತೀ ಛಂದಸ್ಸು ಪಶುಸಂಪತ್ಸಮೃದ್ಧಿಯಿಂದ ಕೂಡಿದೆ. ಪಶುಸಂಪತ್ಸಮೃದ್ಧನಾದ ಪುರುಷನು ಅಭಿಷಿಕ್ತನಾಗಲರ್ಹನಾಗುತ್ತಾನೆ. ನಂತರ ಹದಿಮೂರು ಅಕ್ಷರಗಳೊಡನೆ ಕೂಡಿದ ತ್ರಿಷ್ಟುಪ್‌ಛಂದಸ್ಸು ಅಂತರಿಕ್ಷಕ್ಕೆ ಹಾರಿತು. ಅದಕ್ಕೂ ಕೂಡ ಎರಡು ಅಕ್ಷರಗಳು ಹೀನವಾಗಿ ಸೋಮವು ಲಭಿಸಲಿಲ್ಲ. ಆದರೆ ಅದು ಹಿಂತಿರುಗಿ ಬರುವಾಗ ಯಜ್ಞಕ್ಕೆ ಉಪಯುಕ್ತವಾದ ದಕ್ಷಿಣೆಯೊಡನೆಯೂ, ತಪಸ್ಸಾಮಗ್ರಿಗಳೊಡನೆಯೂ ಹಿಂತಿರುಗಿತು. ಆದುದರಿಂದ ಲೋಕವ್ಯವಹಾರದಲ್ಲಿ ಮಾಧ್ಯಂದಿನಸವನಕಾಲದಲ್ಲಿ ದಕ್ಷಿಣೆಯು ಅರ್ಪಿತವಾಗುತ್ತದೆ. ಯಾವನು ತನ್ನ ಸಂಪತ್ತನ್ನು ದಾನರೂಪದಲ್ಲರ್ಪಿಸುವನೋ ಅದೇ ತಪಃಕ್ರಿಯೆಯೆನಿಸಿಕೊಳ್ಳುವುದು. ಅನಂತರ ನಾಲ್ಕು ಅಕ್ಷರಾತ್ಮಕವಾದ ಗಾಯತ್ರಿಯು ತನ್ನೊಡನೆ ಜ್ಯೋತೀರೂಪವಾದ ಒಂದು ಅಜದೊಡನೆ ಅಂತರಿಕ್ಷಾಭಿಮುಖವಾಗಿ ಹೊರಟಿತು. ಆ ಅಜವು ಗಾಯತ್ರಿಗೆ ಸೋಮವು ಲಭಿಸುವಂತೆ ಮಾಡಿತು. ಆಗ ಗಾಯತ್ರಿಯು ಸೋಮವನ್ನು ತೆಗೆದುಕೊಂಡು ಬರುವಾಗ ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟುಬಂದ ನಾಲ್ಕು ಅಕ್ಷರಗಳನ್ನು ಹಿಂದಕ್ಕೆ ತೆಗೆದುಕೊಂಡು ಬಂದುದರಿಂದ ತನ್ನ ಪೂರ್ವಸ್ಥಿತಿಯಲ್ಲಿದ್ದ ನಾಲ್ಕು ಅಕ್ಷರಗಳೊಡನೆ ಈ ನಾಲ್ಕು ಅಕ್ಷರಗಳೂ ಸೇರಿಕೊಂಡು ಒಟ್ಟು ಅಷ್ಟಾಕ್ಷರಾತ್ಮಕವಾಯಿತು. ಹೀಗೆ ಛಂದಸ್ಸುಗಳೆಲ್ಲೆಲ್ಲಾ ಅತಿ ಚಿಕ್ಕದಾದರೂ ಸಹ ಯಜ್ಞಕ್ಕೆ ಅತಿ ಮುಖ್ಯವಾದ ಸೋಮವನ್ನು ತಂದುದಕ್ಕಾಗಿ ಯಜ್ಞ

ಕಾರ್ಯದಲ್ಲಿ ಅತಿ ಪ್ರಧಾನವಾದ ಸ್ಥಾನವನ್ನು ಹೊಂದಿದೆಯೆಂದು ಬ್ರಹ್ಮವಾದಿಗಳ ಮತವಾಗಿದೆ ಆದುದರಿಂದಲೇ ಅದು ಛಂದಸ್ಸುಗಳಲ್ಲೆಲ್ಲಾ ಅತ್ಯಂತ ತೇಜಸ್ವಿಯಾಗಿದೆ. ಅದು (ಪಕ್ಷಿರೂಪವಾದ ಗಾಯತ್ರಿಯು) ಎರಡು ಪಾದಗಳಿಂದಲ ಎರಡು ಸವನಗಳನ್ನೂ, ಮುಖದಿಂದ ಒಂದನ್ನೂ ತಂದಿತು. ಮುಖದಿಂದ ತಂದ ಸವನವನ್ನು ಪಾನಮಾಡಿತು. ಆದುದರಿಂದಲೇ ಪ್ರಾತಃಸವನವೂ, ಮಾಧ್ಯಂದಿನಸವನವೂ ಶುಭ್ರವಾದ ಸೋಮಯುಕ್ತವಾಗಿಯೂ ಮತ್ತು ತೃತೀಯ ಸವನವು ಖುಜೀಷ (ಹಿಂಡಿದ ರಸವುಳ್ಳದ್ದು) ಯುಕ್ತವಾಗಿಯೂ ಇರುತ್ತದೆ. ಇದು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿರುವ ಕ್ರಮ. ಐತರೇಯ ಬ್ರಾಹ್ಮಣದಲ್ಲಿ ಈ ವಿವರಣೆಯು ಕೊಂಚ ವ್ಯತ್ಯಸ್ತವಾಗಿದೆ. ಇದು ಎರಡು ಪ್ರಕರಣಗಳಲ್ಲಿ ಹೇಳಲ್ಪಟ್ಟಿದೆ. ಮೊದಲನೆಯದಾಗಿ,

**ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯ-ಮಸ್ಮಾನ್ಸೋಮೋ ರಾಜಾಗಚ್ಛೇದಿತಿ ಸಾ ವಾಗಬ್ರವೀತ್ ಸ್ತ್ರೀಕಾಮಾ ವೈ ಗಂಧರ್ವಾ ಮಯ್ಯೈವ ಸ್ತ್ರಿಯಾ ಭೂತಯಾ ಪಣಧ್ವಮಿತಿ ನೇತಿ ದೇವಾ ಅಬ್ರುವನ್ಕಥಂ ವಯಂ ತ್ವದೃತೇ ಸ್ಯಾಮೇತಿ ಸಾಬ್ರವೀತ್ಕ್ರೀಣೀತೈವ ಯರ್ಹಿ ವಾವ ವೋ ಮಯಾರ್ಥೋ ಭವಿತಾ ತರ್ಹ್ಯೇವ ವೋಽಹಂ ಪುನರಾಗಂತಾಸ್ಮೀತಿ ತಥೇತಿ ತಯಾ ಮಹಾನಗ್ನ್ಯಾ ಭೂತಯಾ ಸೋಮಂ ರಾಜಾನಮಕ್ರೀಣನ್.**

(ಐ. ಬ್ರಾ. ೫-೨೭)

ಸೋಮರಾಜನು ಗಂಧರ್ವರೊಂದಿಗೆ ವಾಸಿಸುತ್ತಿದ್ದಾಗ ದೇವತೆಗಳೂ, ಋಷಿಗಳೂ ಸಹ ಅದನ್ನು ಪಡೆಯಬೇಕೆಂದಿಚ್ಛಿಸಿ ತದ್ಧ್ಯಾನನಿರತರಾದರು. ಅದನ್ನು ಪಡೆಯುವ ಕ್ರಮವೇನೆಂಬುದನ್ನು ಚಿಂತಿಸುತ್ತಿದ್ದಾಗ ವಾಗ್ದೇವಿಯು ಅವರೆದುರಿಗೆ ಬಂದು, "ಗಂಧರ್ವರು ಸ್ತ್ರೀಕಾಮರು. ನನ್ನನ್ನು ಕಳುಹಿಸಿ, ನಾನು ನಿಮಗೆ ಸೋಮವನ್ನು ತಂದೊಪ್ಪಿಸುತ್ತೇನೆ" ಎಂದಳು. ಅದಕ್ಕೆ ದೇವತೆಗಳು "ನಾವು ನಿನ್ನನ್ನು ಬಿಟ್ಟಿರಲಾರೆವು. ಅದಾಗುವುದಿಲ್ಲ" ಎಂದರು. ಆಗ ವಾಗ್ದೇವಿಯು "ಸದ್ಯಕ್ಕೆ ನನ್ನನ್ನು ಕಳುಹಿ ಸೋಮವನ್ನು ಪಡೆಯಿರಿ. ಅನಂತರ ನೀವು ನನ್ನನ್ನು ಅಪೇಕ್ಷಿಸಿದೊಡನೆಯೇ ನಾನು ನಿಮ್ಮಲ್ಲಿಗೆ ಬರುತ್ತೇನೆ" ಎಂದು ಭರವಸೆಯನ್ನು ಕೊಟ್ಟನಂತರ ಅವಳ ಸಹಾಯದಿಂದ ಅವರು ಸೋಮವನ್ನು ಪಡೆದರು ಎಂದಿದೆ. ಇದೇ ಸಂದರ್ಭವನ್ನು ಬೇರೆ ಕಡೆಯಲ್ಲಿ ಈ ರೀತಿ ತಿಳಿಸಿದೆ.

### 4. ಸೋಮಾಹರಣಕ್ಕಾಗಿ ಛಂದಸ್ಸುಗಳ ಪ್ರಯತ್ನ ಮತ್ತು ಪರಾಭವ

**ಓಂ ಸೋಮೋ ವೈ ರಾಜಾಮುಷ್ಮಿಁಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯ-ನ್ಕಥಮಯಮಸ್ಮಾನ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ। ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಛಂದಾಂಸ್ಯಾಸನ್ ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾರ್ಧಮಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯ ತ್ರೀಣ್ಯಕ್ಷರಾಣ್ಯೇಕಾಕ್ಷರಾ ಭೂತ್ವಾ**

ದೀಕ್ಷಾಂ ಚ ತಪಶ್ಚ ಹರಂತೀ ಪುನರಭ್ಯವಾಪತತ್ತಸ್ಮಾತ್ತಸ್ಯ ವಿತ್ತಾ ದೀಕ್ಷಾ ವಿತ್ತಂ ತಪೋ ಯಸ್ಯ ಪಶವಃ ಸಂತಿ ಜಾಗತಾ ಹಿ ಪಶವೋ ಜಗತೀ ಹಿ ತಾನಾಹರದಥ ತ್ರಿಷ್ಟುಬುದಪತತ್ಸಾ ಪತಿತ್ವಾ ಭೂಯೋಽರ್ಧಾದಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯೈಕಮಕ್ಷರಂ ತ್ರ್ಯಕ್ಷರಾ ಭೂತ್ವಾ ದಕ್ಷಿಣಾ ಹರಂತೀ ಪುನರಭ್ಯವಾಪತತ್ತಸ್ಮಾನ್ಮಾಧ್ಯಂದಿನೇ ದಕ್ಷಿಣಾ ನೀಯಂತೇ ತ್ರಿಷ್ಟುಭೋ ಲೋಕೇ ತ್ರಿಷ್ಟುಬ್ಭಿ ತಾ ಆಹರತ್ । (ಐ. ಬ್ರಾ. ೧೩-೨೫)

ಅಂತರಿಕ್ಷಸ್ಥವಾದ ಸೋಮನನ್ನು ಹೇಗೆ ಪಡೆಯಬಹುದೆಂದು ದೇವತೆಗಳು ಬಹುಕಾಲ ಚಿಂತಿಸಿ, ಅನಂತರ ಛಂದಸ್ಸುಗಳನ್ನು ಸಮೀಪಿಸಿ, "ನೀವು ನಮಗಾಗಿ ಅಂತರಿಕ್ಷಸ್ಥವಾದ ಸೋಮವನ್ನು ತಂದು ಕೊಡಿ'' ಎಂದು ಯಾಚಿಸಿದರು. "ತಥಾಸ್ತು" ಎಂದು ಭರವಸೆಯನ್ನು ಕೊಟ್ಟು, ಪಕ್ಷಿರೂಪವನ್ನು ಹೊಂದಿ ಅವು ಅಂತರಿಕ್ಷಕ್ಕೆ ಹಾರಿದವು. ಅವು ಸುಪರ್ಣರೂಪದಲ್ಲಿ ಪರಿವರ್ತಿತವಾಗಿ ಸೋಮಾಹರಣಕ್ಕೆ ಹಾರಿದುದರಿಂದ ಈ ಸನ್ನಿವೇಶವು ಸುಪರ್ಣೋಪಾಖ್ಯಾನ ಎಂದು ಪ್ರಸಿದ್ಧಿವಾಯಿತು. ಈ ರೀತಿ ಆ ಪಕ್ಷಿರೂಪವಾದ ಛಂದಸ್ಸುಗಳು ಸೋಮನಲ್ಲಿಗೆ ಹಾರಿದಾಗ ಪ್ರತಿಯೊಂದೂ ಚತುರಕ್ಷರಾತ್ಮಕ (ನಾಲ್ಕು ಅಕ್ಷರಗಳು) ವಾಗಿ ಮಾತ್ರ ಇದ್ದವು. ಚತುರಕ್ಷರಾತ್ಮಕವಾದ ಜಗತಿಯು ಪ್ರಥಮತಃ ಅಂತರಿಕ್ಷಕ್ಕೆ ಹಾರುತ್ತಿದ್ದಾಗ ಅರ್ಧದಾರಿಯಲ್ಲಿಯೇ ಬಳಲಿತು. ತನ್ನ ಮೂರು ಅಕ್ಷರಗಳನ್ನು ಅಲ್ಲೇ ಬಿಟ್ಟು ಉಳಿದ ಒಂದಕ್ಷರದೊಂದಿಗೆ ಮಾತ್ರ ಹಿಂತಿರುಗಿತು. ಆದರೆ ಹಿಂದಕ್ಕೆ ಬರುವಾಗ ಯಾಗದೀಕ್ಷೆಯನ್ನೂ. ತಪಸ್ಸನ್ನೂ ಪಡೆದುಕೊಂಡು ಬಂದಿತು ಜಗತಿಗೂ, ಪಶುಸಂಪತ್ತಿಗೂ ಸಮೀಪ ಸಂಬಂಧವಿರುವುದರಿಂದ ಪಶುಸಂಪತ್ತುಳ್ಳವನು ಶ್ರದ್ಧೆಯನ್ನೂ, ತಪಶ್ಶಕ್ತಿಯನ್ನೂ ಪಡೆಯುತ್ತಾನೆ. ಅನಂತರ ತ್ರಿಷ್ಟುಪ್ಪೂ ಸಹ ಅರ್ಧದಾರಿಯನ್ನು ಮೀರಿ ಕೊಂಚ ದೂರ ಹೋಗುವುದರಲ್ಲಿಯೇ ಬಳಲಿತು. ತನ್ನ ಒಂದು ಅಕ್ಷರವನ್ನು ಮಾತ್ರ ಅಲ್ಲಿ ಬಿಟ್ಟು, ಉಳಿದ ಮೂರು ಅಕ್ಷರಗಳೊಡನೆ ಹಿಂತಿರುಗಿತು. ಬರುವಾಗ ಯಜ್ಞಸಾಮಗ್ರಿಯಾದ ದಕ್ಷಿಣೆಯನ್ನು ತಂದಿತು. ಆದುದರಿಂದಲೇ ಮಾಧ್ಯಂದಿನಸವನದ ಕಾಲದಲ್ಲಿ ದಕ್ಷಿಣೆಗೆ ಪ್ರಾಶಸ್ತ್ಯವಿದೆ.

### 5. ಗಾಯತ್ರಿಯ ವಿಜಯ.

ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತಿ ಪುನರಾಗಚ್ಛತಿ ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸನಖಮಿವ ಯದ್ವಶಮಸ್ರವತ್ಸಾ ವಶಾಭವತ್ತಸ್ಮಾತ್ಸಾ ಹವಿರಿವಾಥ ಯಃ ಶಲ್ಯೋ ಯದನೀಕಮಾಸೀತ್ಸ ಸರ್ಪೋ ನಿರ್ದಂಶ್ಯಭವತ್ಸಹಸಸ್ಸ್ವಜೋ ಯಾನಿ

**ಪರ್ಣಾನಿ ತೇ ಮಂಥಾವಲಾ ಯೋನಿ ಸ್ನಾವಾನಿ ತೇ ಗಂಡೂಪದಾ ಯತ್ತ್ರೇಜನಂ ಸೋಽಂಧಾಹಿಃ ಸೋ ಸಾ ತಥೇಷುರಭವತ್ ।**

(ಐ. ಬ್ರಾ. ೧೩-೨೬)

ಅನಂತರ ದೇವತೆಗಳು ಗಾಯತ್ರಿಯನ್ನು ಸಮಿಾಪಿಸಿ ನಮಗೆ ಸೋಮರಾಜನನ್ನು ತಂದುಕೊಡು ಎಂದು ಪ್ರಾರ್ಥಿಸಿದರು. ಹಾಗೇ ಆಗಲೆಂದು ಗಾಯತ್ರಿಯು ಒಪ್ಪಿ ದೇವತೆಗಳು ಸ್ವಸ್ತ್ಯಯನಮಂತ್ರವನ್ನು ಪಠಿಸುತ್ತಾ ತನ್ನನ್ನು ಹಿಂಬಾಲಿಸಬೇಕೆಂದಿತು. ದೇವತೆಗಳು ಸಂತೋಷದಿಂದ ಅದನ್ನು ಅಂಗೀಕರಿಸಿ, "ಪ್ರಮತ್ತು ಆ" ಎಂಬ ಸ್ವಸ್ತ್ಯಯನಮಂತ್ರವನ್ನು ಪಠಿಸುತ್ತಾ ಹೊರಟರು. ಈ ಮಂತ್ರದ ಪಠನದಿಂದ ಪ್ರಯಾಣವು ನಿರ್ವಿಘ್ನವಾಗಿ ನೆರವೇರಿ, ಕಾರ್ಯವು ಸಿದ್ಧಿಸುವುದರಿಂದ ದೇವತೆಗಳು ಇದನ್ನು ಪಠಿಸಿದರು. ಗಾಯತ್ರಿಯು ನಿರ್ವಿಘ್ನವಾಗಿ ಸೋಮವಿರುವ ಪ್ರದೇಶವನ್ನು ಸೇರಿ ತನ್ನ ಪಾದಗಳಿಂದಲೂ ಮುಖದಿಂದಲೂ ಸೋಮವನ್ನೆತ್ತಿಕೊಂಡು ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟುಬಂದಿದ್ದ ಚತುರಕ್ಷರಗಳನ್ನೂ (೩+೧) ತೆಗೆದುಕೊಂಡು ಹಿಂತಿರುಗಿತು. ಆದರೆ ಸೋಮಪಾಲಕನಾದ ಕೃಶಾನುವು ಇದರ ಎಡಗಡೆ ಪಾದದ ನಖವನ್ನು ಕತ್ತರಿಸಿಹಾಕಿದನು. ಅದು ಮುಳ್ಳುಹಂದಿ ರೂಪಕ್ಕೆ ಪರಿವರ್ತಿತವಾಗಿ ಶಲ್ಯರೂಪಕ್ಕೆ ತಿರುಗಿತು. ಅದರಿಂದ ಸುರಿದ ರಕ್ತವು ಬಂಜೆ ಹಸುವಾಗಿಯೂ, ಎಲುಬು ಗೂಡು ಸರ್ಪರೂಪಕ್ಕೂ ತಿರುಗಿತು. ಆದರೆ ವಿಷವನ್ನು ಕಾರಿ ಕಚ್ಚುವಂತಾಗಲಿಲ್ಲ ಹೀಗೆಯೇ ರೆಕ್ಕೆ ಬಾವಲಿಯೂ, ಸ್ನಾಯುವಿನಿಂದ ಮಣ್ಣುಹುಳುವೂ ಉತ್ಪನ್ನವಾಗಿ ಇಷುವಿನ ಸ್ವರೂಪವು ಈರೀತಿಯಾಯಿತು.

## 6. ಗಾಯತ್ರಿಗೆ ಸವನಕಾಲಗಳಲ್ಲಿರುವ ಪ್ರಾಧಾನ್ಯ.

**ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮಗೃಭ್ಣಾತ್ತತ್ತೃತೀಯಸವನಮಭವತ್ತಸ್ಯ ಪತಂತೀ ರಸಮಧಯತ್ತದ್ಧೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯದಾಶಿರಮವನಯನ್ನಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನೈಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ।**

(ಐ ಬ್ರಾ. ೧೩-೨೬)

ಗಾಯತ್ರಿಯು ತನ್ನ ಬಲಭಾಗದ ಪಾದದಿಂದ ಹಿಡಿದುಕೊಂಡ ಸೋಮದ ಭಾಗವು ಪ್ರಾತಃಸವನವಾಯಿತು. ಈ ಪ್ರಾತಃಸವನವೇ ಗಾಯತ್ರಿಯ ನಿವಾಸಸ್ಥಾನವಾಯಿತು. ಆದುದರಿಂದಲೇ ಪ್ರಾತಃಸವನವನ್ನು ಸವನಗಳಲ್ಲೆಲ್ಲಾ ಸಮೃದ್ಧತಮವೆಂದು ತಿಳಿದಿದ್ದಾರೆ. ಈ ತತ್ತ್ವವನ್ನು ತಿಳಿದವನು ಯಜ್ಞಕರ್ತರಲ್ಲಿ ಅಗ್ರಗಣ್ಯನೂ, ಅತಿಮುಖ್ಯನೂ

ಆಗುತ್ತಾನೆ. ಎಡಭಾಗದ ಪಾದದಿಂದ ಗಾಯತ್ರಿಯು ಹಿಡಿದುಕೊಂಡ ಸೋಮದ ಭಾಗವು ಮಾಧ್ಯಂದಿನಸವನವಾಯಿತು. ಅದು ಜಾರಿಹೋದುದರಿಂದ ಪ್ರಾತಃಸವನದ ಶ್ರೇಷ್ಠತೆಯು ಅದಕ್ಕೆ ಲಭಿಸಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಲು ಪ್ರಯತ್ನಿಸಿ, ಅದರಲ್ಲಿ ಛಂದಸ್ಸುಗಳಲ್ಲಿ ತ್ರಿಷ್ಟುಪ್ಪನ್ನೂ, ದೇವತೆಗಳಲ್ಲಿ ಇಂದ್ರನನ್ನೂ ಸ್ಥಾಪಿಸಿದರು. ಅನಂತರ ಅದೂ ಸಹ ಪ್ರಾತಃಸವನದ ವೀರ್ಯವನ್ನೇ ಪಡೆಯಿತು. ಈ ಎರಡು ಸವನಗಳ ಸಮಾನ ಶಕ್ತಿಯನ್ನೂ ಸಂಪತ್ತನ್ನೂ ತಿಳಿದ ಪುರುಷನು ವೃದ್ಧಿಯನ್ನು ಹೊಂದುತ್ತಾನೆ. ಮುಖದಿಂದ ಹಿಡಿದುಕೊಂಡ ಸೋಮದ ಭಾಗವು ತೃತೀಯಸವನವಾಯಿತು. ಹಾರುತ್ತಿರುವಾಗಲೇ ಗಾಯತ್ರೀರೂಪವಾದ ಶ್ಯೇನವು ಅದನ್ನು ಪಾನಮಾಡಿತು. ಆದುದರಿಂದಲೇ ಅದು ಮೊದಲಿನ ಎರಡು ಸವನಗಳ ಶಕ್ತಿಸಮಾನತೆಯನ್ನು ಪಡೆಯಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಬೇಕೆಂದರಿತರು. ಅವರು ಅನಂತರ ಅದನ್ನು ಪಶುಗಳಲ್ಲಿ ವೀಕ್ಷಿಸಿ ಅನಂತರ ಆಶಿರದಿಂದಲೂ ಆಜ್ಯಾರ್ಪಣೆಯಿಂದಲೂ ಆರಾಧಿಸಿದರು. ಅನಂತರ ಅದೂ ಸಹ ಮೊದಲಿನ ಎರಡು ಸವನಗಳ ಶಕ್ತಿಯನ್ನು ಪಡೆಯಿತು. ಈ ತತ್ತ್ವವನ್ನರಿತವನು ವೃದ್ಧಿಯನ್ನು ಪಡೆಯುತ್ತಾನೆ

### 7. ಛಂದಸ್ಸುಗಳ ಅಕ್ಷರವಿಭಾಗ ಪ್ರಕರಣ.

**ತೇ ವಾ ಇಮೇ ಇತರೇ ಛಂದಸೀ ಗಾಯತ್ರೀಮಭ್ಯವದೇತಾಂ ವಿತ್ತಂ ನಾವಕ್ಷರಾಣ್ಯನುಪರಾಗುರಿತಿ ನೇತ್ಯಬ್ರವೀದ್ಗಾಯತ್ರೀ ಯಥಾ ವಿತ್ತಮೇವ ನ ಇತಿ ತೇ್ದೇವೇಷು ಪ್ರಶ್ನಮೈತಾಂ ತೇ ದೇವಾ ಅಬ್ರುವನ್ಯಥಾವಿತ್ತಮೇವ ವ ಇತಿ ತಸ್ಮಾದ್ಧಾಪ್ಯೇತರ್ಹಿ ವಿತ್ತ್ಯಾಂ ವ್ಯಾಹುರ್ಯಥಾ ವಿತ್ತಮೇವ ನ ಇತಿ ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವತ್ತ್ರ್ಯಕ್ಷರಾ ತ್ರಿಷ್ಟುಬೇಕಾಕ್ಷರಾ ಜಗತೀ ಸಾಷ್ಟಾಕ್ಷರಾ ಗಾಯತ್ರೀ ಪ್ರಾತಃಸವನಮುದಯಚ್ಛನ್ನಾಶಕ್ನೋತ್ತ್ರಿಷ್ಟುಪ್ತ್ರ್ಯಕ್ಷರಾ ಮಾಧ್ಯಂದಿನಂ ಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀತ್ ತ್ರಿಷ್ಟುಪ್ ತಾಂ ವೈ ನ್ಯೈತೈರಷ್ಟಾಭಿರಕ್ಷರೈರುಪಸಂಧೇಹೀತಿ ತಥೇತಿ ........................................**

**ಸಾ ದ್ವಾದಶಾಕ್ಷರಾ ಭೂತ್ವಾ ತೃತೀಯಸವನಮುದಯಚ್ಛತ್ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವದೇಕಾದಶಾಕ್ಷರಾ ತ್ರಿಷ್ಟುಬ್ ದ್ವಾದಶಾಕ್ಷರಾ ಜಗತೀ ಸರ್ವೈಶ್ಛಂದೋಭಿಃ ಸಮಾವದ್ವೀರ್ಯೈಃ ಸಮಾನಜಾಮಿಭೀ ರಾಧ್ನೋತಿ ಯ ಏವಂ ವೇದ ||**

(ಐ. ಬ್ರಾ. ೧೩-೨೮)

ಗಾಯತ್ರಿಯು ತ್ರಿಷ್ಟುಪ್ಪಿನ ಮೂರು ಅಕ್ಷರಗಳನ್ನೂ, ಜಗತಿಯು ಒಂದಕ್ಷರವನ್ನೂ ತೆಗೆದುಕೊಂಡು ಹಿಂತಿರುಗಿದ ನಂತರ ಅವೆರಡೂ ಇದನ್ನು ಸಮಿಾಪಿಸಿ ನಮ್ಮ ಐಶ್ವರ್ಯವಾದ ಅಕ್ಷರಗಳು ನಿನ್ನೊಡನೆ ಸೇರಿ ಬಂದಿವೆ. ಅವನ್ನು ಹಿಂತಿರುಗಿಸು, ಎಂದು ಪ್ರಾರ್ಥಿಸಿದಾಗ ಗಾಯತ್ರಿಯು ಇಲ್ಲ, ಅವು ನಿಮ್ಮವಲ್ಲ, ನಾನು ಅದನ್ನು ತಂದುದರಿಂದ ಅದು ನನ್ನದೇ ಆಯಿತು ಎಂದಿತು. ಅನಂತರ ಅವೆರಡೂ ದೇವತೆಗಳನ್ನು ಸಮಿಾಪಿಸಿ ತಮ್ಮ ದೂರನ್ನು ಹೇಳಿಕೊಂಡವು. ದೇವತೆಗಳು ಗಾಯತ್ರಿಯ ಪಕ್ಷವನ್ನೇ ವಹಿಸಿ, ನೀನು ಅವನ್ನು ತಂದುದರಿಂದ ಆ ನಾಲ್ಕಕ್ಷರಗಳೂ ನಿನ್ನದೇ ಆಯಿತು. ಲೌಕಿಕವಾದ ವ್ಯವಹಾರಗಳಲ್ಲೂ ಸಹ ನಾವು ಪಡೆದ ಯಾವುದೇ ಆಸ್ತಿಯಾಗಲಿ ಅದು ನಮ್ಮದೇ ಆಯಿತು ಎನ್ನುವ ರೂಢಿಯಿರುವಂತೆಯೇ ಅವನ್ನು ಸ್ವಾಯತ್ತೀಕರಿಸಿಕೊಳ್ಳುವ ಅಧಿಕಾರವು ನಿನಗಿದೆ

ಎಂದರು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ತ್ರ್ಯಕ್ಷರಾತ್ಮಕವಾಗಿಯೂ ಜಗತಿಯು ಏಕಾಕ್ಷರಾತ್ಮಕವಾದುದೂ ಆದವು. ಆಗ ಗಾಯತ್ರಿಯು ಅಷ್ಟಾಕ್ಷರಗಳೊಡನೆ ಪ್ರಾತಃಸವನದಲ್ಲಿ ಭಾಗವಹಿಸಲು ಸಮರ್ಥವಾಯಿತು. ಆದರೆ, ತ್ರಿಷ್ಟುಪ್ಪು ತನ್ನ ಮೂರು ಅಕ್ಷರಗಳೊಡನೆ ಮಾಧ್ಯಂದಿನಸವನದಲ್ಲಿ ಭಾಗವಹಿಸಲಾಗಲಿಲ್ಲ ಆಗ ಗಾಯತ್ರಿಯು ನಾನೂ ಸಹ ಮಾಧ್ಯಂದಿನಸವನದಲ್ಲಿ ಭಾಗವಹಿಸುತ್ತೇನೆ. ನನಗೂ ಅದರ ಯಜ್ಞಭಾಗ ವಿರಬೇಕೆಂದಿತು. ಹಾಗೇ ಆಗಲಿ, ನೀನು ನಿನ್ನ ಅಷ್ಟಾಕ್ಷರಗಳೊಡನೆ ನನ್ನೊಂದಿಗೆ ಸೇರಿಕೋ ಎಂದು ತ್ರಿಷ್ಟುಪ್ಪು ಹೇಳಿತು. ಒಟ್ಟಿಗೆ ಏಕಾದಶಾಕ್ಷರಾತ್ಮಕರಾಗಿ ಮಾಧ್ಯಂದಿನಸವನಕ್ಕೆ ಸಹಾಯಕವಾಯಿತು. ಜಗತಿಯು ಏಕಾಕ್ಷರಾತ್ಮಕವಾಗಿ ತೃತೀಯಸವನದ ನಿರ್ವಹಣಕ್ಕೆ ಅಸಮರ್ಥವಾಯಿತು. ಆಗ ಪುನಃ ಗಾಯತ್ರಿಯು ಅದರೊಂದಿಗೆ ತಾನು ಸೇರುವುದಾಗಿಯೂ ತನಗೆ ತೃತೀಯಸವನದಲ್ಲೂ ಭಾಗವಿರಬೇಕೆಂದೂ ಕೇಳಿತು. ಜಗತಿಯು ಹಾಗೇ ಆಗಲೆಂದು ಒಪ್ಪಲಾಗಿ ತೃತೀಯಸವನದ ಕಾಲದಲ್ಲಿ ಅದರೊಂದಿಗೆ ಸೇರಿಕೊಂಡಿತು. ಆಗ ದ್ವಾದಶಾಕ್ಷರಾತ್ಮಕವಾಗಿ ತೃತೀಯಸವನಕ್ಕೆ ಸಾಹಾಯಕವಾಯಿತು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ಏಕಾದಶಾಕ್ಷ ರಾತ್ಮಕವಾಗಿಯೂ ಜಗತಿಯು ದ್ವಾದಶಾಕ್ಷರಾತ್ಮಕವಾಗಿಯೂ ಆದವು. ಈ ತತ್ತ್ವವನ್ನು ತಿಳಿದವನು ಸಮಾನ ವಾದ ಶಕ್ತಿಯನ್ನೂ ವೈಭವವನ್ನೂ ಪಡೆದಿರುವ ಈ ಛಂದಸ್ಸುಗಳ ಅನುಗ್ರಹದಿಂದ ಸಕಲ ಸಂಪತ್ತನ್ನೂ ಪಡೆಯುತ್ತಾನೆ ಎಂದು ಗಾಯತ್ರೀಸ್ತುತಿಯಿದೆ.

## ॥ ಸೋಮಪ್ರವಾಹಣ ಕರ್ಮದ ಪೂರ್ವಪೀಠಿಕೆ ॥

ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ತರಲು ಯಾರಿಂದಲೂ ಸಾಧ್ಯವಾಗದೆ ಇರುವಾಗ ಗಾಯತ್ರಿಯು ಶ್ಯೇನಪಕ್ಷಿಯ ರೂಪದಿಂದ ಸ್ವರ್ಗಕ್ಕೆ ಹೋಗಿ ಅಲ್ಲಿದ್ದವರ ಪ್ರತಿಭಟನೆಯನ್ನು ತಿರಸ್ಕರಿಸಿ ಅದನ್ನು ಭೂಮಿಗೆ ತಂದಿತು. ಅದನ್ನು ತರುತ್ತಿರುವಾಗ ದಾರಿಯಲ್ಲಿ ವಿಶ್ವಾವಸುವೆಂಬ ಗಂಧರ್ವನು ಆ ಸೋಮವನ್ನು ಅಪಹರಿಸಿ ತನ್ನಲ್ಲಿಟ್ಟನು. ಅದನ್ನು ಅವನಿಂದ ತರುವ ಬಗೆ ಹೇಗೆಂದು ದೇವತೆಗಳು ಯೋಚಿಸಿ, ಗಂಧರ್ವರು ಸ್ತ್ರೀಯರಲ್ಲಿ ಹೆಚ್ಚಾಗಿ ಆಸಕ್ತರಾಗಿ ಕಾಮಾಭಿಲಾಷೆಯುಳ್ಳವರಾದುದರಿಂದ ಅವರಿಗೆ ಸ್ತ್ರೀಯರ ಆಸೆಯನ್ನು ತೋರಿಸಿ ಸೋಮವನ್ನು ಹಿಂದಕ್ಕೆ ಪಡೆಯಬೇಕೆಂದು ನಿಶ್ಚಯಿಸಿದರು. ಅದಕ್ಕಾಗಿ ವಾಗ್ದೇವತೆಯ ಸಮೀಪಕ್ಕೆ ಹೋಗಿ ವಿಷಯವನ್ನೆಲ್ಲಾ ತಿಳಿಸಿ, ವಾಗ್ದೇವತೆಯು ಸುಂದರಸ್ತ್ರೀಯಾಗುವಂತೆಯೂ ಅವಳನ್ನು ಗಂಧರ್ವರಿಗೆ ಮಾರಿ ಅದಕ್ಕೆ ಬದಲಾಗಿ ಸೋಮವನ್ನು ತರುವಂತೆಯೂ ನಿಷ್ಕರ್ಷೆಮಾಡಿದರು. ಅದರಂತೆ ವಾಗ್ದೇವತೆಯು ಸುಂದರ ಸ್ತ್ರೀಯ ಆಕಾರವನ್ನು ಧರಿಸಲು ಅವಳನ್ನು ಗಂಧರ್ವರಿಗೆ ಕೊಟ್ಟು ಸೋಮವನ್ನು ಹಿಂದಕ್ಕೆ ತಂದರು. ಸೋಮವು ದೇವತೆಯ ವಶವಾದ ಮೇಲೆ ಸುಂದರ ಸ್ತ್ರೀಯ ಆಕಾರದಲ್ಲಿದ್ದ ವಾಗ್ದೇವತೆಯು ಜಿಂಕೆಯ ರೂಪವನ್ನು ಧರಿಸಿ ಗಂಧರ್ವರಿಂದ ತಪ್ಪಿಸಿಕೊಂಡು ಓಡಿಬಂದು ದೇವತೆಗಳಲ್ಲಿಗೆ ಬಂದು ಸೇರಿತು. ಆದುದರಿಂದ ಆಲಾಗಾಯಿತು ಯಜ್ಞಗಳಲ್ಲಿ ಉಪಯೋಗಿಸುವುದಕ್ಕಾಗಿ ಸೋಮಲತೆಗಳನ್ನು ಕೊಂಡುತರುವುದು ರೂಢಿಗೆ ಬಂದಿತು. ಸೋಮವಿಕ್ರಯಣವೆಂಬ ಕರ್ಮವು ಯಜ್ಞದಲ್ಲಿ ಈಗಲೂ ನಡೆಯುವುದು. ಇದಲ್ಲದೆ ಉತ್ತಮವಾದ ಸೋಮಲತೆಗಳು ಎತ್ತರವಾದ ಪರ್ವತ ಪ್ರದೇಶಗಳಲ್ಲಿ ಬೆಳೆಯುವುದರಿಂದ (ಮೂಜವತವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧವಾಗಿರುವುದು) ಅವನ್ನು ತರ ಬೇಕಾದರೆ ಬಹಳ ಶ್ರಮವಾಗಿರುವುದು. ಆದುದರಿಂದ ದ್ರವ್ಯದ ಆಶೆಗಾಗಿ ಶ್ರಮವನ್ನು ಸಹಿಸಿ ಪರ್ವತಗಳಿಗೆ ಹೋಗಿ ಸೋಮವನ್ನು ತಂದವರಿಂದ ಅದಕ್ಕೆ ತಕ್ಕ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುವುದು ರೂಢಿಗೆ ಬಂದಂತೆ ತೋರುತ್ತದೆ. ಹಿಂದೆ ಸೋಮವನ್ನು ಗಂಧರ್ವನು ಅಪಹರಿಸಿದಾಗ ಅದು ಅವನಲ್ಲಿ ಮೂರು ರಾತ್ರಿಗಳವರೆಗೆ ಇದ್ದುದರಿಂದ ಕ್ರಯಕ್ಕೆ

ತೆಗೆದುಕೊಂಡ ಸೋಮವು ಮೂರು ರಾತ್ರಿಗಳವರೆಗೆ ಇರಬೇಕೆಂಬ ನಿಯಮವಿದೆ. (ಈ ವಿಷಯವೆಲ್ಲವೂ ಐತರೇಯ ಬ್ರಾಹ್ಮಣ ಮತ್ತು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿದೆ) ಸೋಮಕ್ರಯಣಾನಂತರ ಅದನ್ನು ಹವಿರ್ಧಾನವೆಂಬ ಎರಡು ಗಾಡಿಗಳಲ್ಲಿ ತಂದು ಯಜ್ಞಶಾಲೆ ಅಥವಾ ಪ್ರಾಚೀನವಂಶದ ಸಮೀಪದಲ್ಲಿ ಬಿಟ್ಟಿರುವರು. ಆ ಸೋಮವನ್ನು ಮಂತ್ರಪೂರ್ವಕವಾಗಿ ಉತ್ತರವೇದಿಯ ಬಳಿಗೆ ತರುವ ಕರ್ಮಾಂಗವೇ ಸೋಮಪ್ರವಾಹಣವೆಂದು ಹೇಳಲ್ಪಟ್ಟಿರು ವುದರಿಂದ ಆ ಕ್ರಮವು ಐತರೇಯ ಬ್ರಾಹ್ಮಣದಲ್ಲಿರುವಂತೆ (ಐ. ಬ್ರಾ. ೩-೧೨) ಇಲ್ಲಿ ಹೇಳಲ್ಪಡುವುದು.

**ಪ್ರಾಚ್ಯಾಂ ವೈ ದಿಶಿ ದೇವಾಃ ಸೋಮಂ ರಾಜಾನಮಕ್ರೀಣಂಸ್ತಸ್ಮಾತ್ಪ್ರಾಚ್ಯಾಂ ದಿಶಿ ಕ್ರೀಯತೇ ।**

ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಸೋಮವನ್ನು ಪ್ರಾಚೀನವಂಶದ (ಯಜ್ಞವೇದಿಯ) ಪೂರ್ವ ದಿಕ್ಕಿನಲ್ಲಿರುವ ಪ್ರದೇಶದಿಂದ ಕೊಂಡುತಂದರು. ಆದುದರಿಂದ ಈಗಲೂ ಸೋಮವನ್ನು ಪೂರ್ವದಿಕ್ಕಿನಿಂದಲೇ ಕೊಂಡು ತರಬೇಕು.

**ತಂ ತ್ರಯೋದಶಾನ್ಮಾಸಾದಕ್ರೀಣಂಸ್ತಸ್ಮಾತ್ತ್ರಯೋದಶೋ ಮಾಸೋ ನಾನುವಿದ್ಯತೇ ನ ವೈ ಸೋಮವಿಕ್ರಯ್ಯನುವಿದ್ಯತೇ ಪಾಪೋ ಹಿ ಸೋಮವಿಕ್ರಯೀ ।**

ಪೂರ್ವದಲ್ಲಿ ಒಂದು ಸಂವತ್ಸರಕ್ಕೆ ಹದಿಮೂರು ತಿಂಗಳುಗಳಿದ್ದುವು. ದೇವತೆಗಳು ಸೋಮವನ್ನು ಹದಿಮೂರನೇ ಮಾಸಾಭಿಮಾನಿಯಿಂದ ಕೊಂಡುಕೊಂಡರು. ಈಗ ಸಂವತ್ಸರದಲ್ಲಿ ಹದಿಮೂರನೇ ಮಾಸವಿಲ್ಲ. ಹನ್ನೆರಡೇ ಮಾಸ ಗಳಿರುವುವು. ಕೆಲವು ಸಂದರ್ಭದಲ್ಲಿ ಅಧಿಕಮಾಸವೆಂಬ ಹದಿಮೂರನೇ ಮಾಸವಿದ್ದರೂ ಅದು ಯಾವ ಶುಭಕರ್ಮಾದಿ ಗಳಿಗೂ ಉಪಯೋಗವಿಲ್ಲದ್ದರಿಂದ ಅದರಲ್ಲಿ ಕೊಳ್ಳುವ ರೂಢಿ ಇಲ್ಲ. ಸೋಮವಿಕ್ರಯಮಾಡುವುದು ಬಹಳ ಪಾಪ ಕಾರ್ಯವೆಂದು ಪರಿಗಣಿಸಲ್ಪಟ್ಟಿರುವುದರಿಂದ ಸೋಮವಿಕ್ರಯಮಾಡುವ ಪುರುಷನೂ ಪಾಪಿಷ್ಠನು. ಅವನೊಡನೆ ಯಾವ ಶಿಷ್ಟಾಚಾರ ವ್ಯವಹಾರಗಳೂ ನಡೆಯಲವಕಾಶವಿಲ್ಲ. ಈ ವಿಷಯದಲ್ಲಿ ತೈತ್ತಿರೀಯ ಶ್ರುತಿಯು—**ಅಸ್ಮೇ ಜ್ಯೋತಿಃ ಸೋಮವಿಕ್ರಯಿಣಿ ತಮ ಇತ್ಯಾಹ । ಜ್ಯೋತಿರೇವ ಯಜಮಾನೇ ದಧಾತಿ । ತಮಃ ಸೋಮ-ವಿಕ್ರಯಿಣಮರ್ಪಯತಿ ।** ಇಲ್ಲಿ **ತಮಃ** ಎಂದರೆ ಪಾಪವು. ಸೋಮವಿಕ್ರಯಮಾಡುವವನ **ಜ್ಯೋತಿಃ** ಎಂದರೆ ಶಕ್ತಿಸಾಮರ್ಥ್ಯವು ಅವನನ್ನು ಬಿಟ್ಟುಹೋಗಿ ಸೋಮವನ್ನು ಕೊಂಡು ಯಜ್ಞಮಾಡುವ ಯಜಮಾನನಲ್ಲಿ ಸೇರುವುದು. ಸೋಮವಿಕ್ರಯಮಾಡುವವನಿಗೆ ಪಾಪವೇ ಸಂಭವಿಸುವುದು ಎಂದು ಶ್ರುತಿವಾಕ್ಯದ ಅರ್ಥವು. ಸೋಮಕ್ರಯಾನಂತರ ಅದನ್ನು ಪ್ರಾಚೀನವಂಶದ ಸಮೀಪಕ್ಕೆ ತರುವಾಗ ಎಂಟು ಋಕ್ಕುಗಳನ್ನು ಪಠಿಸಬೇಕೆಂಬ ವಿಧಿಯಿರುವುದು. ಏಕೆಂದರೆ ಇದಕ್ಕೆ ಕಾರಣವೂ ಇರುವುದು. ಅದನ್ನು ಇಲ್ಲಿ ಹೇಳಲಾಗಿದೆ—

**ತಸ್ಯ ಕ್ರೀತಸ್ಯ ಮನುಷ್ಯಾನಭ್ಯುಪಾವರ್ತಮಾನಸ್ಯ ದಿಶೋ ವೀರ್ಯಾಣೀಂದ್ರಿಯಾಣಿ ವ್ಯುದಸೀದಂಸ್ತಾನ್ಯೇಕಯರ್ಚಾವಾರುರುತ್ಸಂತ ತಾನಿ ನಾಶಕ್ನುವಂಸ್ತಾನಿ ದ್ವಾಭ್ಯಾಂ ತಾನಿ ತಿಸೃಭಿಸ್ತಾನಿ ಚತಸೃಭಿಸ್ತಾನಿ ಪಂಚಭಿಸ್ತಾನಿ ಷಡ್ಭಿಸ್ತಾನಿ ಸಪ್ತಭಿರ್ನೈವಾವರುಂಧತ ತಾನ್ಯಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ಯದಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ತದಷ್ಟಾನಾಮಷ್ಟತ್ವಮಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ।**

ಸೋಮವನ್ನು ಕೊಂಡುತಂದಮೇಲೆ ಅದು ಮನುಷ್ಯರ (ಯಜಮಾನರ) ಸಮೀಪಕ್ಕೆ ಬಂದಾಗ ಅದರ ಶಕ್ತಿಸಾಮರ್ಥ್ಯ ಗಳು ಕುಗ್ಗಿಹೋದವು. ಎಂದರೆ ಸೋಮಕ್ಕೆ ಇರಬೇಕಾದ (ಸೋಮಪಾನಮಾಡಿದವರಿಗೆ ದೊರೆಯಬಹುದಾದ)

ಬಲಪ್ರದಾನ, ಚಕ್ಷುರಾದೀಂದ್ರಿಯಗಳಿಗೆ ಪಟುತ್ವವನ್ನುಂಟುಮಾಡುವ ಸಾಮರ್ಥ್ಯ, ಇವೆಲ್ಲವೂ ನಷ್ಟವಾಯಿತು. ಆಗ ಆ ಯಜಮಾನರು ಆ ಶಕ್ತಿಸಾಮರ್ಥ್ಯಗಳು ಹೋಗದಂತೆ ತಡೆಗಟ್ಟಬೇಕೆಂದು ದಿಗ್ಬಂಧನಮಾಡುವುದಕ್ಕಾಗಿ ಒಂದು ಋಕ್ಕನ್ನು ಪಠಿಸಿ ಪ್ರಯತ್ನಮಾಡಿ ನೋಡಿದರು. ಸಾಧ್ಯವಾಗಲಿಲ್ಲ ಅನಂತರ, ಎರಡು ಋಕ್ಕುಗಳನ್ನೂ, ಬಳಿಕ, ಮೂರು, ನಾಲ್ಕು, ಐದು, ಆರು, ಏಳರವರೆಗೆ ಋಕ್ಕುಗಳನ್ನು ಪಠಿಸಿನೋಡಿದರೂ ಸಾಧ್ಯವಾಗಲಿಲ್ಲ. ಅನಂತರ ಎಂಟು ಋಕ್ಕುಗಳನ್ನು ಪಠಿಸಲು, ಬಂಧಿಸಲು ಸಾಧ್ಯವಾಯಿತು. ಆದುದರಿಂದ ಎಂಟು ಋಕ್ಕುಗಳನ್ನು ಪಠಿಸಿ ಕಾರ್ಯವನ್ನು ಸಾಧಿಸಿದುದರಿಂದ ಅಷ್ಟ ಎಂಬ ಶಬ್ದಪ್ರಯೋಗವು (ಅಶ್ ಪ್ರಾಪ್ತೌ) ಇಲ್ಲಿ ಸಮನ್ವಯವಾಗಿರುವುದು. ಈ ವಿಷಯವನ್ನು ತಿಳಿದ ಪುರುಷನು ತನ್ನ ಇಷ್ಟಾರ್ಥವನ್ನು ಪಡೆಯುವನು.

**ತಸ್ಮಾದೇತೇಷು ಕರ್ಮಸ್ವಷ್ಟಾವನೂಚ್ಯಂತೆ ಇಂದ್ರಿಯಾಣಾಂ ವೀರ್ಯಾಣಾಮನುವರುಧ್ಯೈ ।**

(ಐ. ಬ್ರಾ. ೩-೧೨)

ಆದುದರಿಂದ ಈ ಸೋಮಪ್ರವಾಹಣ ಕರ್ಮಗಳಲ್ಲಿ ಹೋತೃವು ಎಂಟು ಋಕ್ಕುಗಳನ್ನು ಪ್ರತ್ಯೇಕವಾಗಿ ಪಠಿಸಬೇಕು. ಹೀಗೆ ಪಠಿಸುವುದರಿಂದ ಇಂದ್ರಿಯ ಮತ್ತು ವೀರ್ಯಗಳು (ಶಕ್ತಿಸಾಮರ್ಥ್ಯಗಳು) ನಾಶವಾಗದಂತೆ ತಡೆಗಟ್ಟಲು ಸಾಧ್ಯವಾಗುವುದು.

ಇಲ್ಲಿಗೆ ಪೂರ್ವಪೀಠಿಕೆಯು ಸಮಾಪ್ತವು.

## ಸೋಮಪ್ರವಾಹಣವೆಂಬ ಕರ್ಮ

**(ಸೋಮವನ್ನು ಪ್ರಾಚೀನವಂಶ ಅಥವಾ ಯಜ್ಞವೇದಿಕೆಯ ಸಮೀಪದಿಂದ ಪಶ್ಚಿಮದಿಕ್ಕಿನಲ್ಲಿರುವ ಉತ್ತರವೇದಿಯ ಸಮೀಪಕ್ಕೆ ತರುವ ಕರ್ಮ)**

ಇದುವರೆಗೂ ಈ ಸೋಮಪ್ರವಾಹಣಕರ್ಮದಲ್ಲಿ ಉಪಯೋಗಿಸಬೇಕಾದ ಋಕ್ಕುಗಳ ಸಂಖ್ಯೆಯನ್ನು ಸ್ಪಷ್ಟಪಡಿಸಲಾಯಿತು. ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರವನ್ನು ಪಠಿಸುವನು—

**ಸೋಮಾಯ ಕ್ರೀತಾಯ ಪ್ರೋಹ್ಯಮಾಣಾಯಾನುಬ್ರೂ ಹಿ ಹೀತ್ಯಾಹಾಧ್ವರ್ಯುಃ ।**

ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಎಲೈ ಹೋತೃವೇ, ಸೋಮಾಯ ಕ್ರೀತಾಯ ಪ್ರೋಹ್ಯಮಾಣಾಯಾನು- ಬ್ರೂ ಹಿ—ಎಂದರೆ ಕ್ರಯಕ್ಕೆ ತೆಗೆದುಕೊಂಡು ಬಂದ ಸೋಮವನ್ನು ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗುವುದಕ್ಕಾಗಿ ನೆರವೇರಿಸುವ ಸೋಮಪ್ರವಾಹಣವೆಂಬ ಈ ಕರ್ಮದಲ್ಲಿ ಅವಶ್ಯಕವಾದ ಮಂತ್ರವನ್ನು ಪಠಿಸು ಎಂದು ನಿರ್ದೇಶಿಸಿ ಹೇಳುವನು.

**ಭದ್ರಾದಭಿ ಶ್ರೇಯಃ ಪ್ರೇಹೀತ್ಯನ್ವಾಹ ।**

ಇದನ್ನು ಕೇಳಿ ಹೋತೃವು **ಭದ್ರಾದಭಿ ಶ್ರೇಯಃ ಪ್ರೇಹಿ** ಎಂಬ ಮಂತ್ರವನ್ನು ಪಠಿಸುವನು. ಈ ಮಂತ್ರವು ಋಗ್ವೇದಸಂಹಿತೆಯಲ್ಲಿಲ್ಲ. ತೈತ್ತಿರೀಯಶಾಖೆಯಲ್ಲಿ ಎಂದರೆ ಯಜುರ್ವೇದದಲ್ಲಿ ಹೇಳಿರುವುದು. ಈ ಮಂತ್ರವು —

**ಭದ್ರಾದಧಿ ಶ್ರೇಯಃ ಪ್ರೇಹಿ ಬೃಹಸ್ಪತಿಃ ಪುರ ಏತಾ ತೇ ಅಸ್ತು ।**
**ಅಥೇಮವಸ್ಯ ವರ ಆ ಪೃಥಿವ್ಯಾ ಆರೇ ಶತ್ರೂನ್ ಕೃಣುಹಿ ಸರ್ವವೀರಃ ॥**
(ತೈ. ಸಂ. ೧-೨-೩-೩)

ಎಂದು ಇರುವುದು. ಇದರ ಅರ್ಥವು ಈ ರೀತಿ ಇರುವುದು—ಎಲೈ ಸೋಮವೇ, ಮಂಗಳಕರವಾದುದೂ, ಶ್ರೇಯ ದೇಶವಾದುದೂ ಆದ ಈ ಭೂಲೋಕದಿಂದ ಸ್ವರ್ಗಸ್ಥಾನಕ್ಕೆ ಸಮವಾದ ಪ್ರಾಚೀನವಂಶದೇಶಾಭಿಮುಖನಾಗಿ ಹೊರಡು. ಆ ರೀತಿ ಹೋಗುವ ನಿನಗೆ ಬೃಹಸ್ಪತಿಯು ಮಾರ್ಗದರ್ಶಕನಾಗಿ ನಿನ್ನ ಮುಂದೆ ಹೋಗುವನು. ಅಲ್ಲಿಗೆ ಹೋದ ಬಳಿಕ ಪೃಥಿವೀಸಂಬಂಧವಾದ ದೇವಯಜನಪ್ರದೇಶದಲ್ಲಿ ನೀನು ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಮತ್ತು ಶ್ರೇಷ್ಠವಾದ ಸ್ಥಾನವನ್ನು ನಿಷ್ಕರ್ಷಿಸು. ಅನಂತರ ಸರ್ವರಿಗಿಂತಲೂ ಶೂರನಾದ ನೀನು ಪಾಪಿಷ್ಠರಾದ ಮತ್ತು ಯಜ್ಞವಿದ್ವೇಷಿಗಳಾದ ಸಮಸ್ತ ಶತ್ರುಗಳನ್ನೂ ದೂರವಾಗಿಡುವಂತೆ ಮಾಡು. ಎಂದರೆ ಅವರನ್ನು ದೂರವಾಗಿ ಹೊರಟು ಹೋಗುವಂತೆ ಮಾಡು, ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಪಠಿಸುವುದರಿಂದ ಉಂಟಾಗುವ ಪರಿಣಾಮವನ್ನು ವಿವರಿಸುತ್ತಾ ಪ್ರಥಮ ಪಾದದ ವಿವರಣೆಯನ್ನು ಮಾಡಲಾಗಿದೆ.

**ಅಯಂ ವಾವ ಲೋಕೋ ಭದ್ರಸ್ತಸ್ಮಾದಸಾವೇವ ಲೋಕಃ ಶ್ರೇಯಾನ್ ಸ್ವರ್ಗಮೇವ ತಲ್ಲೋಕಂ ಯಜಮಾನಂ ಗಮಯತಿ ।**

ಪ್ರಥಮಪಾದದಲ್ಲಿ ಹೇಳಿರುವಂತೆ ಈ ಭೂಲೋಕವು ಮಂಗಳಕರವಾದುದು. ಆದರೆ ಈ ಲೋಕಕ್ಕಿಂತಲೂ ಸ್ವರ್ಗಲೋಕವು ಅತ್ಯಂತ ಶ್ರೇಯಃಪ್ರದವಾದುದು. ಈ ಮಂತ್ರಪಠನವು ಯಜ್ಞಮಾಡುವ ಯಜಮಾನನಿಗೆ ಅಂತಹ ಸ್ವರ್ಗಲೋಕವನ್ನು ಒದಗಿಸಿಕೊಡುವುದು.

**ಬೃಹಸ್ಪತಿಃ ಪುರ ಏತಾ ತೇ ಅಸ್ತ್ವಿತಿ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮೈವಾಸಾ ಏತತ್ಪುರೋಗವ-ಕರ್ನ ವೈ ಬ್ರಹ್ಮಣ್ವದ್ರಿಷ್ಯತಿ ॥**

ಅನಂತರ ಹೋತೃವು **ಬೃಹಸ್ಪತಿಃ ಪುರಾ ಏತಾ ತೇ ಅಸ್ತು** ಎಂಬ ಎರಡನೆಯ ಪಾದವನ್ನು ಪಠಿಸುವನು. ದೇವತೆಗಳಿಗೆ ಬೃಹಸ್ಪತಿಯೇ ಬ್ರಹ್ಮನೆಂಬ ಋತ್ವಿಜನು. ಬ್ರಾಹ್ಮಣಶ್ರೇಷ್ಠನಾದ ಬ್ರಹ್ಮನೆಂಬ ಋತ್ವಿಜನು ಮಾರ್ಗದರ್ಶಕನಾಗಿರುವನು, ಎಂದು ಹೇಳಿರುವುದರಿಂದ ಬ್ರಾಹ್ಮಣನೇತೃತ್ವದಲ್ಲಿ ನೆರವೇರುವ ಯಜ್ಞಕರ್ಮವು ಸರ್ವಥಾ ಕೆಡುವುದಿಲ್ಲ. ಕಲ್ಯಾಣಪ್ರದವಾಗಿ ಪರಿಸಮಾಪ್ತಿಯನ್ನೈದುವುದು.

**ಅಥೇಮವಸ್ಯ ವರ ಆ ಪೃಥಿವ್ಯಾ ಇತಿ ದೇವಯಜನಂ ವೈ ವರಂ ಪೃಥಿವ್ಯೈ ದೇವಯಜನ ಏವೈನಂ ತದವಸಾಯಯತ್ಯಾರೇ ಶತ್ರೂನ್ಕೃಣುಹಿ ಸರ್ವವೀರ ಇತಿ ದ್ವಿಷಂತಮೇವಾಸ್ಮೈ ತತ್ಪಾಪ್ಮಾನಂ ಭ್ರಾತೃವ್ಯಮಪಬಾಧತೇಽಧರಂ ಪಾದಯತಿ ।**

ಈಗ ಮೂರನೇ ಪಾದವನ್ನು ವಿವರಿಸುವರು— **ಅಥೇಮವಸ್ಯ ವರ ಆ ಪೃಥಿವ್ಯಾಃ** ಎಂಬುವುದು ಮೂರನೆಯ ಪಾದವು. ಪೃಥಿವಿಯಲ್ಲಿ ಶ್ರೇಷ್ಠವಾದ ಪ್ರದೇಶವೆಂದರೆ ದೇವಯಜನ ಪ್ರದೇಶವು. ಈ ಮೂರನೇ ಪಾದವನ್ನು ಪಠಿಸುವುದರಿಂದ ಸೋಮವು ಪೃಥಿವೀ ಸಂಬಂಧವಾದ ಶ್ರೇಷ್ಠಸ್ಥಾನದಲ್ಲಿ ಎಂದರೆ ದೇವಯಜನ ಪ್ರದೇಶದಲ್ಲಿ ನೆಲಸು

ವಂತೆ ಮಾಡುವನು. ಇನ್ನು ನಾಲ್ಕನೆಯ ಪಾದವಾದ **ಆರೇ ಶತ್ರೂನ್ಕೃಣುಹಿ ಸರ್ವವೀರಃ** ಎಂಬುದನ್ನು ಪಠಿಸುವುದರಿಂದ ಯಜಮಾನನನ್ನು ದ್ವೇಷಿಸುವ ಪಾಪರೂಪವಾದ ಶತ್ರುವನ್ನು ಓಡಿಸುವುದಕ್ಕೆ ಸಹಾಯವಾಗುವುದು. ಆದುದರಿಂದ ಹೋತೃವು ಈ ನಾಲ್ಕನೆಯ ಪಾದವನ್ನು ಪಠಿಸಿ ಯಜಮಾನನಿಗೆ ಕೇಡನ್ನುಂಟುಮಾಡುವ ಶತ್ರುವನ್ನು ಓಡಿಸಿ ಆ ಶತ್ರುವು ನಿಕೃಷ್ಟವಾದ (ಬಹಳ ಕೀಳಾದ) ಪ್ರದೇಶಕ್ಕೆ ಹೋಗುವಂತೆ ಮಾಡುವನು.

**ಸೋಮ ಯಾಸ್ತೇ ಮಯೋಭುವ ಇತಿ ತೃಚಂ ಸೌಮ್ಯಂ ಗಾಯತ್ರಮನ್ವಾಹ ಸೋಮೇ ರಾಜನಿ ಪ್ರೋಹ್ಯಮಾಣೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ।**

ಅನಂತರ ಹೋತೃವು—

**ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ ದಾಶುಷೇ ।**
**ತಾಭಿರ್ನೋಽವಿತಾ ಭವ ॥**
**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।**
**ಸೋಮ ತ್ವಂ ನೋ ವೃಧೇ ಭವ ॥**
**ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ ।**
**ಸುಮೃಳೀಕೋ ನ ಆ ವಿಶ ॥**

(ಋ. ಸಂ. ೧-೯೧-೯, ೧೦, ೧೧)

ಎಂಬ ಮೂರು ಋಕ್ಕುಗಳನ್ನೂ ಪಠಿಸುವನು. ಈ ಮೂರು ಋಕ್ಕುಗಳೂ ಸೋಮದೇವತಾಕವು ಮತ್ತು ಗಾಯತ್ರೀ ಛಂದಸ್ಸಿನವು. ಇವುಗಳನ್ನು ಸೋಮಾನಯನ ಕಾಲದಲ್ಲಿ ಪಠಿಸಬೇಕು. ಸೋಮದೇವತೆಯನ್ನೇ ಸ್ತುತಿಸುವ ಮತ್ತು ಸೋಮದೇವತೆಗೆ ಪ್ರಿಯವಾಗಿರುವ ಗಾಯತ್ರೀ ಛಂದೋಬದ್ಧವಾದ ಋಕ್ಕುಗಳನ್ನು ಪಠಿಸುವುದರಿಂದ ಸೋಮದೇವತೆಯನ್ನು ತನ್ನ ಸ್ವಂತಮಂತ್ರಗಳಿಂದಲೂ, ಸ್ವಕೀಯವಾದ ಗಾಯತ್ರೀ ಛಂದಸ್ಸಿನಿಂದಲೂ ಸ್ತುತಿಸಿದಂತೆ ಆಗಿ ಸೋಮದೇವತೆಯು ಸಮೃದ್ಧವಾಗುವನು ಎಂದರೆ ಸಂತೋಷಚಿತ್ತನಾಗುವನು. ಇಲ್ಲಿ ತರಲ್ಪಡುವ ದ್ರವ್ಯವೂ ಸೋಮವೂ, ಸ್ತುತಿಸುವ ಮಂತ್ರಗಳೂ ಸೋಮದೇವತಾಕವಾದವುಗಳು. ಆದುದರಿಂದ ಮಂತ್ರಗಳು ಸೋಮದೇವತೆಗೆ ಸ್ವಕೀಯವೆಂದು ಹೇಳಲ್ಪಡುವವು. ಸ್ವರ್ಗದಲ್ಲಿದ್ದ ಸೋಮವನ್ನು ಭೂಮಿಗೆ ತಂದುದು ಗಾಯತ್ರಿಯೇ ಆದುದರಿಂದ ಗಾಯತ್ರೀ ಛಂದಸ್ಸು ಸೋಮದೇವತೆಗೆ ಸ್ವಕೀಯವೆನಿಸುವುದು. ಈ ವಿಷಯವು ತೈತ್ತಿರೀಯಸಂಹಿತೆಯಲ್ಲಿ **ಕದ್ರೂಶ್ಚ ವೈ** ಎಂಬ ಅನುವಾಕದಲ್ಲಿ (ತೈ. ಸಂ. ೬ ೧-೬) ಹೇಳಿರುವುದು. ಆದುದರಿಂದ ಇಲ್ಲಿ ಮೇಲೆ ಹೇಳಿದ ಮೂರು ಋಕ್ಕುಗಳೂ ಗಾಯತ್ರೀ ಛಂದಸ್ಸೂ ಸಹ ಸೋಮನಿಗೆ ಸ್ವಕೀಯವೆಂದು ವಿವರಿಸಲಾಗಿದೆ.

**ಸರ್ವೇ ನಂದಂತಿ ಯಶಸಾಗತೇನೇತ್ಯನ್ವಾಹ ।**

ಎಂದು ಹೋತೃವು ಐದನೆಯ ಋಕ್ಕಾದ—

**ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ ।**
**ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ॥**

(ಋ. ಸಂ. ೧೦-೭೧-೧೦)

ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕು ಋಗ್ವೇದಸಂಹಿತೆಯಲ್ಲಿಯೇ ಇದೆ. ಈ ಋಕ್ಕಿನ ಮುಖ್ಯಾಭಿಪ್ರಾಯವು ಈ ರೀತಿ ಇರುವುದು. ಯಜಮಾನ ಋತ್ವಿಕ್ಕುಗಳು ಮೊದಲಾದ ಯಜ್ಞದಲ್ಲಿ ಭಾಗವಹಿಸುವ ಜನರು, ಸ್ನೇಹಿತನಂತೆ ಸರ್ವರಿಗೂ ಆಪ್ತನಾದ ಈ ಸೋಮದೇವನು ಯಜ್ಞಭೂಮಿಗೆ ಬಂದುದನ್ನು ನೋಡಿ ಸಂತೋಷ ಪಡುತ್ತಿರುವರು. ಈ ಸೋಮನು ಕೀರ್ತಿಯನ್ನುಂಟುಮಾಡುವವನು; ವಿದ್ವತ್ಸಭೆಯಲ್ಲಿ ತನ್ನ ಅಸಾಧಾರಣವಾದ ವಿದ್ಯೆಯಿಂದ ಎಲ್ಲರನ್ನೂ ಪರಾಭವಗೊಳಿಸುವ ವಿದ್ವಾಂಸನು ಸಭೆಯನ್ನು ಪ್ರವೇಶಿಸಿ ಎಲ್ಲರಿಗೂ ಸಂತೋಷವನ್ನುಂಟು ಮಾಡುವಂತೆ ಈ ಸೋಮದೇವನ ಆಗಮನದಿಂದ ಸರ್ವರೂ ಸಂತೋಷಪಡುವರು; ಮತ್ತು ಈ ಸೋಮನು ಋತ್ವಿಗ್ಯಜಮಾನರ ಕಿಲ್ಬಿಷಗಳನ್ನು ಎಂದರೆ ಪಾಪಗಳನ್ನೂ, ದೋಷಗಳನ್ನೂ ನಾಶಮಾಡಿ ಅವರನ್ನು ಸಂರಕ್ಷಿಸುವನು; ಅವರಿಗೆ ಅನ್ನದಾತೃವಾಗಿರುವನು ಎಂದರೆ ಸೋಮಪಾನದಿಂದ ಎಲ್ಲರಿಗೂ ತೃಪ್ತಿಯಾಗುವುದು. ಇಂತಹ ಮಹತ್ತ್ವಗುಣವಿಶಿಷ್ಟನಾದ ಸೋಮನು ಸಮಸ್ತರಿಗೂ ಅನ್ನ, ಇಂದ್ರಿಯ, ವೀರ್ಯ, ಇವುಗಳನ್ನು ಕೊಟ್ಟು ಅನುಗ್ರಹ ಮಾಡುವುದಕ್ಕಾಗಿ ಈ ಯಜ್ಞವೇದಿಗೆ ಆಸೀನನಾಗಿ ಇಲ್ಲಿ ಇಡಲ್ಪಟ್ಟಿರುವನು. ಈ ವಿಷಯವು ಪ್ರಸಿದ್ಧವಾಗಿರುವುದು. ಎಂದು ಈ ಋಕ್ಕಿನ ಅಭಿಪ್ರಾಯವು.

**ಯಶೋ ವೈ ಸೋಮೋ ರಾಜಾ ಸರ್ವೋ ಹ ವಾ ಏತೇನ ಕ್ರಿಯಮಾಣೇನ ನಂದಂತಿ ಯಶ ಯಜ್ಞೋ ಲಪ್ಸ್ಯಮಾನೋ ಭವತಿ ಯಜ್ಞ ನ ।**

ಈ ಋಕ್ಕಿನ ಪ್ರಥಮಪಾದವನ್ನು ವಿವರಿಸುವರು. ಸೋಮದೇವನು ಯಶಸ್ಸಿಗೆ ಕಾರಣನು. ಇಂದ್ರನೇ ಮೊದಲಾದವರು ಸೋಮಪಾನಮಾಡಿ ಅನೇಕ ಸಾಹಸಕಾರ್ಯಗಳನ್ನು ಮಾಡಿ ಯಶಸ್ವಿಯಾಗಿರುವರು. ಆದುದರಿಂದ ಸೋಮನು ಯಶಃಸ್ವರೂಪನಾಗಿರುವನು ಎಂದು ಹೇಳಲ್ಪಡುವುದು. ಯಜ್ಞದಲ್ಲಿ ಋತ್ವಿಕ್ಕುಗಳ ಕರ್ಮಗಳನ್ನು ನೆರವೇರಿಸಿ ಕೆಲವರು ಧನಸಂಪಾದನೆಮಾಡುವರು, ಕೆಲವರು ಯಜ್ಞವನ್ನು ನೋಡಿಯೇ ಸಂತೋಷಪಡುವರು. ಆದುದರಿಂದ ಎಲ್ಲರೂ ವಿಕ್ರೀತವಾಗಿ ಯಜ್ಞಭೂಮಿಗೆ ತರಲ್ಪಟ್ಟ ಈ ಸೋಮವನ್ನು ನೋಡಿ ಸಂತೋಷಪಡುವರು.

**ಸಭಾಸಾಹೇನ ಸಖ್ಯಾ ಸಖಾಯ ಇತ್ಯೇಷ ವೈ ಬ್ರಾಹ್ಮಣಾನಾಂ ಸಭಾಸಹಃ ಸಖಾ ಯತ್ಸೋಮೋ ರಾಜಾ ।**

ಎರಡನೆಯ ಪಾದವನ್ನು ವಿವರಿಸುವರು—ಪ್ರಕಾಶಮಾನವಾಗಿ ಬೆಳಗುತ್ತಿರುವ ಈ ಸೋಮನು ಬ್ರಾಹ್ಮಣರ ವಿದ್ವತ್ಸಭೆಗಳಲ್ಲಿ ಎಲ್ಲರನ್ನೂ ಗೆದ್ದು ತನ್ನ ವಿದ್ವತ್ತಿನಿಂದ ಬೆಳಗುವನು. ಈ ದೇವನು ಬ್ರಾಹ್ಮಣರಿಗೂ ಋತ್ವಿಗ್ಯಜಮಾನರಿಗೂ ಹಿತವನ್ನುಂಟುಮಾಡುವುದರಿಂದ ಸ್ನೇಹಿತನಾಗುವನು.

**ಕಿಲ್ಬಿಷಸ್ಪೃದಿತ್ಯೇಷ ಉ ಏವ ಕಿಲ್ಬಿಷಸ್ಪೃತ್ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಕಿಲ್ಬಿಷಂ ಭವತಿ । ತಸ್ಮಾದಾಹುರ್ಮಾನುವೋಚೋ ಮಾ ಪ್ರಚಾರೀಃ ಕಿಲ್ಬಿಷಂ ನು ಮಾ ಯಾತಯನ್ನಿತಿ ।**

ಮೂರನೆಯ ಪಾದವನ್ನು ವಿವರಿಸುವರು— ಈ ಸೋಮದೇವನು ಕಿಲ್ಬಿಷ ಅಥವಾ ಪಾಪವನ್ನು ಪರಿಹರಿಸಿ ಕಾಪಾಡುವವನು. ತನ್ನ ಸಮಸ್ತ ಇಷ್ಟಾರ್ಥಗಳನ್ನು ಪಡೆಯುವುದಕ್ಕಾಗಿ ಮಾಡುವ ಸೋಮಯಾಗದಲ್ಲಿ ಕಿಲ್ಬಿಷ ಎಂದರೆ ಲೋಪದೋಷಗಳು, ನ್ಯೂನತೆಗಳು, ಪಾಪಗಳು ಮೊದಲಾದವು ಉಂಟಾಗುವ ಸಂಭವವುಂಟು. ಅಂತಹ ಸಂದರ್ಭ

ಗಳಲ್ಲಿ ಆ ಲೋಪದೋಷಗಳನ್ನೂ ಪಾಪಗಳನ್ನೂ ಸೋಮದೇವತೆಯು ಪರಿಹಾರಮಾಡಿ ಯಜಮಾನನನ್ನು ರಕ್ಷಿಸುವನು. ಯಜ್ಞಮಾಡುತ್ತಿರುವಾಗ ಋತ್ವಿಗ್ಯಜಮಾನರಿಗೆ ಕಿಲ್ಬಿಷವು ಸಂಭವಿಸುವ ಪ್ರಮೇಯವೇನಿದೆ ಎಂದರೆ, ಯಜ್ಞಕರ್ಮದಲ್ಲಿ ಪ್ರವೃತ್ತನಾಗಿರುವ ಪುರುಷನು ಬಹಳ ಬುದ್ಧಿವಂತಿಕೆಯಿಂದ ನಡೆಸಬೇಕಾಗಿರುವ ಪ್ರೌಢವಾದ ಯಜ್ಞದಲ್ಲಿ ಮಂತ್ರಾದಿಗಳನ್ನು ಪಠಿಸುತ್ತಿರುವಾಗ ಅದನ್ನು ಬೇಗ ಮುಗಿಸಬೇಕೆಂಬ ಇಚ್ಛೆಯಿಂದಲೂ ತಾನೇ ಮಂತ್ರ ಪ್ರಯೋಗಾದಿಗಳಲ್ಲಿ ಅತ್ಯಂತ ಸಮರ್ಥನೆಂದೂ ತನಗೆ ಸಮಾನರು ಯಾರೂ ಇಲ್ಲವೆಂಬ ದುರಭಿಮಾನದಿಂದಲೂ ಕೂಡಿ ಮಂತ್ರಪಠನಮಾಡುವುದರಿಂದ ಮಂತ್ರೋಚ್ಚಾರಣೆಯಲ್ಲಿಯೂ ಕ್ರಮದಲ್ಲಿಯೂ ಅಕ್ಷರಲೋಪ, ಕರ್ಮಲೋಪ ಮೊದಲಾದ ದೋಷಗಳಿಂದ ಕರ್ಮನ್ಯೂನತೆಯುಂಟಾಗಿ ಪಾಪವು ಸಂಭವಿಸುವುದು. ಮತ್ತು ಯಜಮಾನನು ಋತ್ವಿಜರನ್ನು ಕುರಿತು ಈ ರೀತಿ ಹೇಳುವನು—ಎಲೈ ಹೋತೃವೇ, ಮಂತ್ರಪಠನಕಾಲದಲ್ಲಿ ನಿನ್ನ ಮನಸ್ಸು ಮಂತ್ರ ಪಠನ, ಮಂತ್ರಾರ್ಥಗಳಲ್ಲಿಯೇ ಆಸಕ್ತವಾಗಿರಲಿ, ಬೇರೆ ಕಡೆ ಮನಸ್ಸು ಹೋಗದಂತೆ ಸ್ಥಿರಚಿತ್ತನಾಗಿ ಪುರೋನುವಾಕ್ಯಾದಿ ಮಂತ್ರಾರ್ಥಗಳನ್ನು ಪಠಿಸು ; ಎಲೈ ಅಧ್ವರ್ಯುವೇ, ಕೆಲಸದ ಗಡಿಬಿಡಿಯಲ್ಲಿ ಮಾಡಬೇಕಾದ ಕೆಲಸ ಕಾರ್ಯಗಳು ವ್ಯತ್ಯಾಸವಾಗದಂತೆಯೂ, ನಿನ್ನ ಗಮನವು ಬೇರೆ ಕಡೆ ಇದ್ದು ಕಾರ್ಯವು ಕೆಟ್ಟುಹೋಗದಂತೆಯೂ ಜಾಗ್ರತೆಯಾಗಿ ಕಾರ್ಯವು ಮುಗಿಯಬೇಕೆಂಬ ಆತುರವನ್ನು ಬಿಟ್ಟು ಸಾವಧಾನವಾಗಿ ಕಾರ್ಯಗಳನ್ನು ನೆರವೇರಿಸು. ನೀವು ಮಾಡುವ ಲೋಪದೋಷಗಳಿಂದ ಯಜಮಾನನಾದ ನನಗೆ ಕಿಲ್ಬಿಷವು ಎಂದರೆ ಪಾಪವು ಸಂಭವಿಸದಂತೆ ಎಚ್ಚರಿಕೆಯಿಂದ ಇರಿ ಎಂದು ಯಜಮಾನನು ಹೇಳಬೇಕಾಗುವುದು. ಇಂತಹ ಪಾಪಗಳಿಂದ ಸೋಮದೇವತೆಯು ಋತ್ವಿಗ್ಯಜಮಾನರನ್ನು ಕಾಪಾಡಲಿ ಎಂದು ಹೇಳಿರುವುದು.

**ಪಿತುಷಣಿರಿತ್ಯನ್ನಂ ವೈ ಪಿತು ದಕ್ಷಿಣಾ ವೈ ಪಿತು ತಾಮೇನೇನ ಸನೋತ್ಯನ್ನಸನಿಮೇನೈನಂ ತತ್ಕರೋತಿ ।**

ನಾಲ್ಕನೆಯ ಪಾದವನ್ನು ವಿವರಿಸುತ್ತಾ ಪಿತುಷಣಿ ಶಬ್ದಾರ್ಥವನ್ನು ವಿವರಿಸುವವರು— ಪಿತು ಶಬ್ದಕ್ಕೆ ಅನ್ನವೆಂಬ ಹೆಸರು ಇರುವುದಲ್ಲದೆ ಯಜ್ಞಾದಿಗಳಲ್ಲಿ ಋತ್ವಿಜರಿಗೆ ಕೊಡುವ ದಕ್ಷಿಣೆಯೆಂದೂ ಅರ್ಥವು. ಈ ಸೋಮಯಾಗದಲ್ಲಿ ಪಾತ್ರವಹಿಸುವ ಋತ್ವಿಜರಿಗೆ ಸೋಮನು ದಕ್ಷಿಣಾದಿಗಳನ್ನೂ ಅನ್ನವನ್ನೂ ಕೊಡುವನು.

**ಅರಂ ಹಿತೋ ಭವತಿ ವಾಜಿನಾಯೇತೀಂದ್ರಿಯಂ ವೈ ವೀರ್ಯಂ ವಾಜಿನಂ ಅಜರಸಂ ಹಾಸ್ಮೈ ವಾಜಿನಂ ನಾಪಚ್ಛಿದ್ಯತೇ ಯ ಏವಂ ವೇದ ।**

ಮತ್ತು ಸೋಮನು ಋತ್ವಿಗ್ಯಜಮಾನರಿಗೆ ಮುಪ್ಪಿನ ಪರ್ಯಂತವೂ ಇಂದ್ರಿಯಗಳ ಪಟುತ್ವವನ್ನೂ, ವೀರ್ಯವನ್ನೂ, ಸಾಮರ್ಥ್ಯವನ್ನೂ ಕೊಡುವನು. ಈ ವಿಷಯವನ್ನು ಯಾವನು ತಿಳಿದಿರುವನೋ ಅವನಿಗೆ ಇಂದ್ರಿಯಪಟುತ್ವಾದಿಗಳು ಮಧ್ಯೆ ನಾಶವಾಗುವಂತೆ ಸೋಮದೇವನು ಅನುಗ್ರಹಿಸುವನು. ಇಂತಹ ಸೋಮನು ಯಜ್ಞವೇದಿಗೆ ಆನೀತನಾಗಿ ಸ್ವಸ್ಥಾನದಲ್ಲಿ ಇಡಲ್ಪಟ್ಟಿರುವುದನ್ನು ನೋಡಿ ಸಮಸ್ತಜನರೂ ಸಂತೋಷದಿಂದಿರುವರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವನ್ನು ವರ್ಣಿಸಿದೆ.

**ಆಗನ್ದೇವ ಇತ್ಯನ್ವಾಹ ।**

ಇನ್ನು ಆರನೆಯ ಋಕ್ಕಾದ—

**ಆಗನ್ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾಮಿಷಂ ।**
**ಸ ನಃ ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ॥**
(ಋ. ಸಂ. ೪–೫೩–೭)

ಎಂಬ ಋಕ್ಕನ್ನು ಪಠಿಸುವನು. ಈ ಮಂತ್ರವು ಋಗ್ವೇದ ಸಂಹಿತೆಯಲ್ಲಿಯೇ ಇದೆ. ಇದರ ಮುಖ್ಯಾಭಿಪ್ರಾಯವು— ಈ ಸೋಮದೇವನು ನಮ್ಮ ಯಜ್ಞಭೂಮಿಗೆ ದಯಮಾಡಿಸಲಿ ; ಇಲ್ಲಿಗೆ ಬಂದು ಋತುಗಳಿಂದ ಕೂಡಿ ನಿವಾಸಸ್ಥಾನವನ್ನು ವೃದ್ಧಿಪಡಿಸಲಿ ; ಮತ್ತು ಈ ಸೋಮದೇವನು ನಮಗೆ ಪ್ರೇರಕನಾಗಿ ಉತ್ತಮವಾದ ಪುತ್ರಪೌತ್ರಾದಿ ಸಂತತಿಯನ್ನೂ, ಅನ್ನವನ್ನೂ ನಮಗೆ ಒದಗಿಸಿಕೊಡಲಿ ; ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮಗೆ ಸಂತೋಷವನ್ನುಂಟುಮಾಡಲಿ ; ಪ್ರಜೆಗಳನ್ನೂ (ಪುತ್ರಾದಿಗಳನ್ನೂ) ಧನವನ್ನೂ ನಮಗೆ ಸಂಪಾದಿಸಿಕೊಡಲಿ.

**ಆಗತೋ ಹಿ ಸ ತರ್ಹಿ ಭವತಿ ಋತುಭಿರ್ವರ್ಧತು ಕ್ಷಯಮಿತ್ಯೃತವೋ ವೈ ಸೋಮಸ್ಯ ರಾಜ್ಞೋ ರಾಜಭ್ರಾತರೋ ಯಥಾ ಮನುಷ್ಯಸ್ಯತೈರೇವೈನಂ ತತ್ಸಹಾಗಮಯತಿ ।**

ಈ ಋಕ್ಕಿನ ಪ್ರಥಮ ಪಾದಾರ್ಥವನ್ನು ವಿವರಿಸುವರು— ಈ ಋಕ್ಕಿನ ಪ್ರಾರಂಭದಲ್ಲಿರುವ ಆಗನ್ ಎಂಬ ಶಬ್ದವು ಸೋಮಕ್ರಯಣಾನಂತರ ಸೋಮನು ಯಜ್ಞಭೂಮಿಗೆ ಬಂದಿರುವನು ಎಂಬುದನ್ನು ಸೂಚಿಸುವುದು. ಲೋಕವ್ಯವಹಾರದಲ್ಲಿ ಮನುಷ್ಯರಿಗೆ ಸಹೋದರರು ಜತೆಯಲ್ಲಿರುವಂತೆ ರಾಜರಿಗೂ ಸಹೋದರರಿರುವರು. ಇಲ್ಲಿ ಸೋಮನೇ ರಾಜನು. ಋತುಗಳೇ ಅವನ ಸಹೋದರರು. ಈ ಋತುಗಳೆಂಬ ಸಹೋದರರೊಡನೆ ಈ ಸೋಮರಾಜನು ಇಲ್ಲಿಗೆ ದಯಮಾಡಿಸಿರುವನು. ಈ ಅರ್ಥವುಳ್ಳ ಪ್ರಥಮಪಾದವನ್ನು ಹೋತೃವು ಪಠಿಸಿ ಸಹೋದರರಿಂದ ಸಹಿತನಾದ ಸೋಮರಾಜನಿಗೆ ಸ್ವಾಗತವನ್ನು ಬಯಸಿರುವನು.

**ದಧಾತು ನಃ ಸವಿತಾ ಸುಪ್ರಜಾಮಿಷಮಿತ್ಯಾಶಿಷಮಾಶಾಸ್ತೇ । ಸ ನಃ ಕ್ಷಪಾಭಿರಹಭಿಶ್ಚ ಜಿನ್ವತ್ವಿತ್ಯಹಾನಿ ವಾ ಅಹಾನಿ ರಾತ್ರಯಃ ಕ್ಷಪಾ ಅಹೋರಾತ್ರೈರೇವಾಸ್ಮಾ ಏತಾಮಾಶಿಷಮಾಶಾಸ್ತೇ ಪ್ರಜಾವಂತಂ ರಯಿಮಸ್ಮೇ ಸಮಿನ್ವತ್ವಿತ್ಯಾಶಿಷಮೇವಾಶಾಸ್ತೇ ।**

ಪ್ರಥಮಪಾದವನ್ನು ವಿವರಿಸಿ ಮುಂದಿನ ಪಾದಗಳ ಅರ್ಥವನ್ನು ವಿವರಿಸುವರು. ಸಮಸ್ತರನ್ನೂ ಪ್ರೇರಿಸುವ ಈ ಸೋಮದೇವನು ನಮಗೆ ಸುಪುತ್ರರನ್ನೂ ಅನ್ನವನ್ನೂ ಕೊಟ್ಟು ಕಾಪಾಡಲಿ. ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮ್ಮನ್ನು ಸಂತೋಷಗೊಳಿಸುತ್ತಾ ನಮಗೆ ಪುತ್ರಪೌತ್ರಾದಿ ಪ್ರಜಾಸಂತತಿಯನ್ನೂ ಧನವನ್ನೂ ಕೊಟ್ಟು ಸಂರಕ್ಷಿಸಲಿ ಎಂಬ ಆಶಂಸನೆಯು ಉಕ್ತವಾಗಿದೆ.

[ಮೇಲೆ ಉದಾಹೃತವಾಗಿರುವ ಆಗನ್ ಎಂಬ ಋಕ್ಕು ಸವಿತೃದೇವತಾಕವು. ವಾಮದೇವಋಷಿದೃಷ್ಟವಾದ ಏಳು ಋಕ್ಕಿನ ಈ ಸೂಕ್ತವೆಲ್ಲವೂ ಸವಿತೃದೇವತೆಯ ಪರವಾಗಿಯೇ ಇದೆ. ಆದರೂ ಅಲ್ಲಿ ಸೋಮದೇವತೆಯ ಪರವಾಗಿ ಅರ್ಥಮಾಡಿ ಉಪಯೋಗಿಸಲಾಗಿದೆ. ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳು ಸೋಮಾನಯನಕಾಲದಲ್ಲಿ ಸಂದರ್ಭೋಚಿತವಾದ ವಿಷಯಗಳನ್ನೊಳಗೊಂಡಿರುವುದರಿಂದ ಈ ಋಕ್ಕನ್ನು ಸೋಮದೇವತೆಯ ಪರವಾಗಿ ಉಪಯೋಗಿಸಿರುವುದು ಸಹಜವಾಗಿದೆ. ಯಜ್ಞಾದಿಕರ್ಮಗಳಲ್ಲಿ—

**ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ।**
(ಐ. ಬ್ರಾ. ೩-೧೩)

ಎಂಬ ಶ್ರುತಿವಚನದ ಪ್ರಕಾರ ಆಯಾ ಕರ್ಮಗಳಲ್ಲಿ ಆಯಾ ಕರ್ಮಗಳ ವಿಷಯಗಳನ್ನು ಪ್ರತಿಪಾದಿಸುವ ಸಂದರ್ಭೋಚಿತವಾದ ಅರ್ಥವನ್ನು ವಿವರಿಸುವ ಋಕ್ಕುಗಳನ್ನು ಉಪಯೋಗಿಸಬೇಕೆಂದು ಹೇಳಿರುವುದರಿಂದಲೂ ಇಲ್ಲಿ ಸೋಮಾನಯನ ಕಾಲದಲ್ಲಿ ಋತ್ವಿಗ್ಯಜಮಾನರು ಸೋಮದೇವತೆಯನ್ನು ಪ್ರಾರ್ಥಿಸಿರುವ ವಿಷಯಗಳೆಲ್ಲವೂ ಈ ಋಕ್ಕಿನಲ್ಲಿರುವುದರಿಂದಲೂ ಈ ಋಕ್ಕನ್ನು—ಬೇರೆ ದೇವತೆಯ ಪರವಾಗಿದ್ದರೂ—ಇಲ್ಲಿ ಸೋಮದೇವತೆಯ ಪರವಾಗಿಯೇ ಇದೆಯೆಂದು ಭಾವಿಸಿ ಪಠಿಸಲಾಗಿದೆ. ಇದರಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ.]

ಅನಂತರ ಹೋತೃವು ಈ ಕರ್ಮದಲ್ಲಿ ಏಳನೆಯ ಋಕ್ಕನ್ನು ಪಠಿಸುವನು.

**ಯಾ ತೇ ಧಾಮಾನಿ ಹವಿಷಾ ಯಜಂತೀತ್ಯನ್ವಾಹ ।**

ಹೋತೃವು ಪಠಿಸುವ ಏಳನೆಯ ಋಕ್ಕು ಋಗ್ವೇದಸಂಹಿತೆಯಲ್ಲಿಯೇ ಇದೆ—

**ಯಾ ತೇ ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ।**
**ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರಚರಾ ಸೋಮ ದುರ್ಯಾನ್ ॥**
(ಋ. ಸಂ. ೧-೯೧-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಸೋಮನೇ, ಉತ್ತರವೇದಿಗಳೇ ಮೊದಲಾದ ನಿನ್ನ ಸ್ಥಾನಗಳನ್ನು, ಯಜ್ಞ ಮಾಡುವ ಯಜಮಾನರು ಹವಿರಾದಿಗಳಿಂದ ಪೂಜಿಸುತ್ತಾರೆ. ಆ ನಿನ್ನ ಸ್ಥಾನಗಳು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿರುವುದರಿಂದ ನೀನು ಯಜ್ಞಪ್ರದೇಶವನ್ನು ಸುತ್ತುವರೆದು ನೆಲಸಿರುವೆ, ಮತ್ತು ನೀನು ನಮ್ಮ ಗೋವುಗಳನ್ನು ಪೋಷಿಸಿ ವೃದ್ಧಿಪಡಿಸುವವನು; ನಮ್ಮನ್ನು ಸಮಸ್ತ ಸಂಕಟಗಳಿಂದ ಪಾರುಮಾಡುವವನು; ನಮಗೆ ನೀನು ಒಳ್ಳೆಯ ಪುತ್ರಪೌತ್ರಾದಿಗಳನ್ನು ಕೊಡುವವನು; ಇದಲ್ಲದೆ, ಎಲೈ ಸೋಮದೇವನೇ, ನೀನು ನಮ್ಮಲ್ಲಿರುವ ಉತ್ತಮ ವೀರರನ್ನು ಕೊಲ್ಲುವವನಲ್ಲ. ಇಂತಹ ನೀನು ಈಗ ನಮ್ಮ ಗೃಹಾಭಿಮುಖವಾಗಿ ದಯಮಾಡು.

**ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ಗಯಸ್ಫಾನಃ ಪ್ರತರಣಃ ಸುವೀರ ಇತಿ ಗವಾಂ ನಃ ಸ್ಫಾವಯಿತಾ ಪ್ರತಾರಯಿತೈಧೀತ್ಯೇವ ತದಾಹ ॥**

ಮೊದಲನೆಯ ಪಾದದ ಅರ್ಥವು ಸ್ಪಷ್ಟವಾಗಿರುವುದರಿಂದ ಎರಡನೆಯ ಮತ್ತು ಮೂರನೆಯ ಪಾದವನ್ನು ವಿವರಿಸಿರುವರು. ಇದರ ಅರ್ಥವನ್ನು ಸಹ ಮೇಲೆಯೇ ತಿಳಿಸಿರುವುದರಿಂದ ಪುನಃ ಹೇಳುವ ಅವಶ್ಯಕತೆ ಇಲ್ಲ.

**ಅವೀರಹಾ ಪ್ರಚರಾ ಸೋಮ ದುರ್ಯಾನಿತಿ ಗೃಹಾ ವೈ ದುರ್ಯಾ ಬಿಭ್ಯತಿ ವೈ ಸೋಮಾದ್ರಾಜ್ಞ ಆಯತೋ ಯಜಮಾನಸ್ಯ ಗೃಹಾಃ ಸ ಯದೇತಾಮನ್ವಾಹ ಶಾಂತ್ಯೈವೈನಂ ತಚ್ಛಮಯತಿ ಸೋಽಸ್ಯ ಶಾಂತೋ ನ ಪ್ರಜಾಂ ನ ಪಶೂನ್ ಹಿನಸ್ತಿ ।**

ಈಗ ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು—ಯಜಮಾನನ ಗೃಹಾಭಿಮುಖವಾಗಿ ಬರುತ್ತಿರುವ ಈ ಸೋಮರಾಜನನ್ನು ನೋಡಿ ಯಜಮಾನನ ಗೃಹದಲ್ಲಿರುವ ವೀರಪುರುಷರು, ನಾವು ಈ ಸೋಮರಾಜನಿಗೆ ಮಾಡುವ

ಸೇವೆಯಲ್ಲಿ ಹೆಚ್ಚುಕಡಿಮೆಯಾಗಿ ಅದರಿಂದ ಈ ದೇವನು ಕೋಪಗೊಳ್ಳುವನೆಂದು, ಗೃಹದಲ್ಲಿ ವೀರಪುರುಷರೇ ಮೊದಲಾದವರು ಭಯಪಡುವರು. ಆಗ ಹೋತೃವು ಆ ಭಯವನ್ನು ಪರಿಹಾರಮಾಡುವುದಕ್ಕಾಗಿ ಅವೀರಹಾ—ಈ ಸೋಮದೇವನು ವೀರಪುರುಷರನ್ನು ಕೊಲ್ಲುವವನಲ್ಲ ಎಂಬ ಶಬ್ದವಿರುವ ನಾಲ್ಕನೆಯ ಪಾದವನ್ನು ಪಠಿಸಿ ಸೋಮ ರಾಜನಿಗೆ ಶಾಂತಿವಚನವನ್ನು ಹೇಳಿ ಸಮಾಧಾನಪಡಿಸುವನು. ಸೋಮರಾಜನೂ ಸಹ ಆ ಶಾಂತಿವಚನಗಳಿಂದ ತೃಪ್ತ ನಾಗಿ ಯಜಮಾನನ ಪುತ್ರಾದಿಗಳನ್ನೂ ಗೋವುಗಳನ್ನೂ ಪರಿವಾರದವರನ್ನೂ ಹಿಂಸಿಸುವುದಿಲ್ಲ.

**ಇಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ವಾರುಣ್ಯಾ ಪರಿದಧಾತಿ ।**

ಈಗ ಹೋತೃವು **ಇಮಾಂ ಧಿಯಂ** ಎಂಬ ವರುಣದೇವತಾಕವಾದ ಎಂಟನೆಯ ಋಕ್ಕನ್ನು ಪಠಿಸಿ ಈ ಸೋಮ ಪ್ರವಾಹಣವೆಂಬ ಕರ್ಮವನ್ನು ಸಮಾಪ್ತಿಗೊಳಿಸುವನು.

**ಇಮಾಂ ಧಿಯಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಂಶಿಶಾಧಿ ।**
**ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮ ॥**

(ಋ. ಸಂ. ೮-೪೨-೩)

ಈ ಋಕ್ಕು ಸಹ ಋಗ್ವೇದಸಂಹಿತೆಯಲ್ಲಿಯೇ ಇರುವುದು. ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ವರುಣ ದೇವನೇ, ಈ ಯಜ್ಞಾನುಷ್ಠಾನ ವಿಷಯದಲ್ಲಿ ಪ್ರವರ್ತಿತವಾದ ಬುದ್ಧಿಯಲ್ಲಿ ಆಸಕ್ತನಾಗಿರುವ (ಎಂದರೆ ಯಜ್ಞಾನು ಷ್ಠಾನವನ್ನು ವಿಧ್ಯುಕ್ತರೀತಿಯಿಂದ ಮಾಡಬೇಕೆಂದು ಬಯಸುತ್ತಿರುವ) ಈ ಯಜಮಾನನಿಗೆ ನೀನು ಯಜ್ಞವಿಷಯ ವಾದ ಸಾಮರ್ಥ್ಯವನ್ನೂ, ಕುಶಲತೆಯನ್ನೂ, ಜ್ಞಾನವನ್ನೂ ಚೆನ್ನಾಗಿ ಉಪದೇಶಮಾಡು. ನಿನ್ನ ವಾಗ್ರೂಪವಾದ ಉಪ ದೇಶವೆಂಬ ನಾವೆಯನ್ನು ಹತ್ತಿಕುಳಿತು ಸಮಸ್ತವಾದ ದುರಿತಗಳನ್ನೂ ಪಾಪಗಳನ್ನೂ ದಾಟಿ ಪಾರಾಗೋಣ.

**ವರುಣದೇವತ್ಯೋ ವಾ ಏಷ ತಾವದ್ಯಾವದುಪನದ್ಧೋ ಯಾವತ್ಪರಿಶ್ರಿತಾನಿ ಪ್ರಪದ್ಯತೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ।**

ಈ ಸೋಮಪ್ರವಾಹಣಕರ್ಮವನ್ನು ಸಮಾಪ್ತಿಗೊಳಿಸಲು ವರುಣದೇವತಾಕವಾದ ಋಕ್ಕನ್ನು ಏತಕ್ಕೆ ಪಠಿಸ ಬೇಕೆಂದರೆ ಅದಕ್ಕೆ ಕಾರಣವನ್ನು ಹೇಳುವರು. ವಿಕ್ರಯಮಾಡಿ ತಂದ ಸೋಮವನ್ನು ಇದುವರೆಗೂ ಹಗ್ಗ ಮುಂತಾದ ಬಂಧನಗಳಿಂದ ಕಟ್ಟಿ ವಸ್ತ್ರಾದಿಗಳಿಂದ ಆಚ್ಛಾದಿಸಿ ಪ್ರಾಚೀನವಂಶ ಮೊದಲಾದ ಸ್ಥಾನಗಳಿಗೆ ತರಲಾಗಿದ್ದಿತು. ಯಾವ ವಸ್ತುವನ್ನೇ ಆಗಲಿ ಕಟ್ಟಿರುವ ಬಂಧನವು ಅಥವಾ ಅದರ ಮೇಲೆ ಹೊದ್ದಿಸಿರುವ ವಸ್ತ್ರಾದಿ ಆಚ್ಛಾದನವು ವರುಣ ದೇವನ ಪಾಶಾಧೀನವಾಗಿರುವುದು. ಅದನ್ನು ಬಿಚ್ಚಬೇಕಾದರೆ ವರುಣದೇವನನ್ನು ಪ್ರಾರ್ಥಿಸುವ ಋಕ್ಕನ್ನು ಪಠಿಸ ಬೇಕೆಂಬ ನಿಯಮಪ್ರಕಾರ ಹೋತೃವು ವರುಣದೇವತಾಕವಾದ ಮಂತ್ರವನ್ನು ಪಠಿಸುವನು. ಹಿಂದೆ ಸೋಮನನ್ನು ಪ್ರಾರ್ಥಿಸುವಾಗ ಸೋಮದೇವನಿಗೆ ಪ್ರಿಯವಾದ ಅಥವಾ ಸ್ವಕೀಯವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಸ್ತುತಿಸಲಾಗಿತ್ತಷ್ಟೆ. ಈಗ ಕರ್ಮಸಮಾಪ್ತಿಕಾಲದಲ್ಲಿ ಸ್ತುತಿಸುವ ವರುಣದೇವತಾಕವಾದ ಈ ಮಂತ್ರವು ತ್ರಿಷ್ಟುಪ್ ಛಂದಸ್ಸಿನದು. ಅದೂ ಸೋಮನಿಗೆ ಸ್ವಕೀಯ ಛಂದಸ್ಸೇ ಆಗಿರುವುದು. ಹೇಗೆಂದರೆ—

ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಪೂರ್ವದಲ್ಲಿ ಸೋಮವು ದೇವಲೋಕದಲ್ಲಿ ಇದ್ದಿತಷ್ಟೆ. ಅದನ್ನು ಭೂಮಿಗೆ ತರಬೇಕೆಂದು ದೇವತೆಗಳು ಯೋಚಿಸಿ ಇದನ್ನು ತರಲು ಶಕ್ತರಾರು ಎಂದು ಆಲೋಚಿಸಿದಾಗ ಗಾಯತ್ರ್ಯಾದಿ ಛಂದಸ್ಸುಗಳೇ ಸೋಮವನ್ನು ತರಲು ಸಮರ್ಥವಾಗಿರುವವು ಎಂದು ನಿಶ್ಚಯಿಸಲಾಯಿತು.

ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾಽಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್‌ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾ ಸತೀ ಸಾಽಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್‌ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಃ ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯರುಂಧತ ತದಜಾಯಾ ಅಜತ್ವಗ್‌ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್‌ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನನ್ಯೃಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನಯತಿ ಸಶುಕ್ರತ್ವಾಯಾಥೋ ಸಂಭರತ್ಯೇವೈನತ್ ।

(ತೈ. ಸಂ. ೬-೧-೬-೨, ೩, ೪, ೫)

ಆಗ ಮೊದಲು ಜಗತೀಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೊರಟು ಅಂತರಿಕ್ಷಕ್ಕೆ ನೆಗೆಯಿತು. ಆ ಕಾಲದಲ್ಲಿ ಜಗತೀಛಂದಸ್ಸಿನ ಒಂದೊಂದು ಪಾದಕ್ಕೂ ಹದಿನಾಲ್ಕು ಅಕ್ಷರಗಳಿದ್ದುವು. ಆದರೆ ಸೋಮವನ್ನು ತರಲು ಸಾಧ್ಯವಾಗದೆ ಬಳಲಿ ಆಯಾಸದಿಂದ ಹಿಂದಕ್ಕೆ ಬಂದಿತು. ಆಗ ಅದು ಹದಿನಾಲ್ಕು ಅಕ್ಷರಗಳಲ್ಲಿ ಎರಡು ಅಕ್ಷರಗಳನ್ನು ಕಳೆದುಕೊಂಡಿತು ಆದರೆ ಬರುವಾಗ ಅಲ್ಲಿದ್ದ ಯಜ್ಞಪಶುಗಳನ್ನೂ ದೀಕ್ಷಾಕ್ರಮವನ್ನೂ (ಯಜ್ಞದಲ್ಲಿ ದೀಕ್ಷವಹಿಸುವ ವಿಧಿ) ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಲೋಕದಲ್ಲಿ ಜಗತೀಛಂದಸ್ಸು ಬಹುಪಶುಗಳುಳ್ಳದೆಂದು ಪ್ರಸಿದ್ಧಿಯಾಯಿತು. ಮತ್ತು ಪಶುಸಂಪತ್ತಿನಿಂದ ಕೂಡಿದ ಯಜಮಾನನನ್ನು ದೀಕ್ಷೆಯು ಅನುಸರಿಸಿಯೇ ಇರುವುದು. ಅನಂತರ ತ್ರಿಷ್ಟುಪ್‌ಛಂದಸ್ಸು ತಾನೇ ಸೋಮವನ್ನು ತರುತ್ತೇನೆಂದು ಅಂತರಿಕ್ಷಕ್ಕೆ ನೆಗೆಯಿತು. ಆಗ ತ್ರಿಷ್ಟುಪ್‌ಛಂದಸ್ಸಿನ ಒಂದೊಂದು ಪಾದಕ್ಕೂ ಹದಿಮೂರು ಅಕ್ಷರಗಳಿದ್ದುವು. ತ್ರಿಷ್ಟುಪ್ ಛಂದಸ್ಸೂ ಸಹ ಸೋಮವನ್ನು ತರಲಾರದೆ ಬಳಲಿ ಬೆಂಡಾಗಿ ತನ್ನಲ್ಲಿದ್ದ ಹದಿಮೂರು ಅಕ್ಷರಗಳಲ್ಲಿ ಎರಡಕ್ಷರಗಳನ್ನು ಕಳೆದುಕೊಂಡು ಹಿಂತಿರುಗಿ ಬಂದಿತು. ಬರುವಾಗ ಯಜ್ಞದಕ್ಷಿಣೆಯನ್ನೂ ತಪಸ್ಸನ್ನೂ ತನ್ನ ಜೊತೆಯಲ್ಲಿ ತಂದಿತು. ಆದುದರಿಂದ ಯಜ್ಞಮಾಡುವಾಗ ಮಾಧ್ಯಂದಿನಸವನದಲ್ಲಿ (ಋತ್ವಿಗ್ಜನರಿಗೆ) ದಕ್ಷಿಣೆಗಳನ್ನು ತಂದುಕೊಡುವರು. ತನ್ನಲ್ಲಿರುವ ವಸ್ತುವನ್ನು ದಾನಮಾಡುವುದೇ ತಪಸ್ಸೆಂದು ಹೇಳಲ್ಪಡುವುದು. ಅನಂತರ ಗಾಯತ್ರೀಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೊರಟು ಅಂತರಿಕ್ಷಕ್ಕೆ ಶ್ಯೇನಪಕ್ಷಿರೂಪದಿಂದ ಹಾರಿತು. ಆಗ ಗಾಯಿತ್ರೀಛಂದಸ್ಸಿಗೆ ಒಂದೊಂದು ಪಾದಕ್ಕೆ ನಾಲ್ಕು ಅಕ್ಷರಗಳಿದ್ದುವು ಹೊರಡುವಾಗ ಗಾಯತ್ರಿಯು ತನ್ನ ಜೊತೆಯ ಸಹಾಯಕ್ಕಾಗಿ ಪ್ರಕಾಶಮಾನವಾದ ಒಂದು ಹೆಣ್ಣು ಆಡನ್ನು ತೆಗೆದುಕೊಂಡುಹೋಯಿತು. ಈ ಆಡು ಸೋಮವನ್ನು ತರುವಾಗ ಗಾಯತ್ರಿಗೆ ಸಹಾಯಮಾಡಿತು. ಆದುದರಿಂದ ಆಡಿಗೆ ಅಜಾ ಎಂಬ ಹೆಸರು ಪ್ರಸಿದ್ಧವಾಯಿತು. ಅನಂತರ ಗಾಯತ್ರಿಯು ಸ್ವರ್ಗದಲ್ಲಿದ್ದ ಸೋಮವನ್ನೂ ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಕಳೆದುಕೊಂಡಿದ್ದ ನಾಲ್ಕುಅಕ್ಷರಗಳನ್ನೂ

ಹಿಂದಕ್ಕೆ ತಂದಿತು. ತಾನು ಹಿಂದಕ್ಕೆ ತಂದ ನಾಲ್ಕು ಅಕ್ಷರಗಳೂ ತನಗೆ ಹಿಂದೆ ಇದ್ದ ನಾಲ್ಕು ಅಕ್ಷರಗಳೊ ಸೇರಿ ಗಾಯತ್ರಿಯ ಪ್ರತಿಯೊಂದು ಪಾದಕ್ಕೂ ಎಂಟು ಅಕ್ಷರಗಳಾದವು. (ಜಗತೀ ಛಂದಸ್ಸಿಗೆ ಹನ್ನೆರಡು ಅಕ್ಷರಗಳೂ ತ್ರಿಷ್ಟುಪ್‌ಛಂದಸ್ಸಿಗೆ ೧೧ ಅಕ್ಷರಗಳೂ ಆದವು) ಬ್ರಹ್ಮವಾದಿಗಳು ಹೇಳುವಂತೆ ಇಲ್ಲಿ ಒಂದು ಸಂಶಯವು ತಲೆದೋರುವುದು. ಗಾಯತ್ರೀಛಂದಸ್ಸು ಎಲ್ಲಾ ಛಂದಸ್ಸುಗಳಿಗಿಂತಲೂ ಬಹಳ ಚಿಕ್ಕದಾಗಿದ್ದರೂ ಯಜ್ಞದಲ್ಲಿ ಹೇಗೆ ಪ್ರಾಮುಖ್ಯತೆಯನ್ನು ಪಡೆಯಿತು ? ಎಂದರೆ, ಈ ಗಾಯತ್ರಿಯು ಸೋಮವನ್ನು ತಂದಿತು. ಆದುದರಿಂದ ಯಜ್ಞಕರ್ಮಗಳಲ್ಲಿ ಗಾಯತ್ರಿಗೇ ಪ್ರಾಧಾನ್ಯತೆಯು ಉಂಟಾಗಿರುವುದು ಮತ್ತು ಇದು ಬಹಳ ತೇಜಸ್ಸಿನಿಂದಲೂ ಬೆಳಗುತ್ತಿರುವುದು. ಈ ಗಾಯತ್ರಿಯು ಸ್ವರ್ಗದಿಂದ ಸೋಮವನ್ನು ತರುವಾಗ ಶ್ಯೇನಪಕ್ಷಿಯ ರೂಪವನ್ನು ಧರಿಸಿ ತನ್ನ ಎರಡು ಪಾದಗಳಿಂದ (ಗಾಯತ್ರಿಯ ಎಂಟು ಅಕ್ಷರಗಳ ಮೂರು ಪಾದಗಳಲ್ಲಿ ಎರಡು ಕಾಲುಗಳೆಂದೂ ಮೂರನೆಯದು ಮುಖವೆಂದೂ ಹೇಳಲ್ಪಡುವುದು) ಪ್ರಾತಸ್ಸವನ ಮತ್ತು ಮಾಧ್ಯಂದಿನಸವನ ಎಂಬ ಎರಡು ವಿಧವಾದ ಸವನಗಳನ್ನು ಹಿಡಿದುಕೊಂಡೂ ಮುಖದಿಂದ (ಕೊಕ್ಕಿನಿಂದ) ಮೂರನೆಯದಾದ ತೃತೀಯಸವನವನ್ನು ಕಚ್ಚಿಕೊಂಡೂ ತಂದಿತು. ಕಾಲುಗಳಲ್ಲಿ ಹಿಡಿದಿದ್ದ ಪ್ರಾತಸ್ಸವನ ಮತ್ತು ಮಾಧ್ಯಂದಿನ ಸವನಗಳು ಏನೂ ವ್ಯತ್ಯಾಸವನ್ನೂ ಹೊಂದದೆ ಹಾಗೆಯೇ ಇದ್ದುದರಿಂದ ಆ ಎರಡು ಸವನಗಳಲ್ಲಿಯೂ ಸೋಮಲತೆಗಳನ್ನು ಜಜ್ಜಿ ಪ್ರಕಾಶಮಾನವಾದ ಮತ್ತುಶುದ್ಧವಾದ ರಸವನ್ನು ಹಿಂಡಿ ತೆಗೆಯುವರು. ಆದರೆ ಕೊಕ್ಕಿನಿಂದ ತೃತೀಯಸವನವನ್ನು ತರುವಾಗ ಆ ಸೋಮಲತೆಯನ್ನು ಸ್ವಲ್ಪಮಟ್ಟಿಗೆ ಕಚ್ಚಿ ರಸವನ್ನು ಹಿಂಡಿ ಪಾನಮಾಡಿತೆಂದು ಭಾವಿಸುವುದರಿಂದ ತೃತೀಯಸವನ ಕಾಲದಲ್ಲಿ ಹೊಸ ಸೋಮಲತೆಯನ್ನು ಉಪಯೋಗಿಸದೆ ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ರಸವನ್ನು ಒಂದಾವರ್ತಿ ಹಿಂಡಿ ತೆಗೆದು ಉಳಿದ ಸಿಪ್ಪೆಯಂತಿರುವ (ಋಜೀಷ) ಜಜ್ಜಿದ ಲತೆಗಳಿಂದಲೇ ಅಳಿದುಳಿದಿರುವ ರಸವನ್ನು ಮತ್ತೊಂದಾವರ್ತಿ ಚೆನ್ನಾಗಿ ಹಿಂಡಿ ತೆಗೆಯುವರು, ಹೀಗೆ ತೆಗೆಯುವ ರಸವು ಹೆಚ್ಚಾಗಿಲ್ಲವಾಧುರಿಂದ ಇದರ ಜೊತೆಗೆ ಆಶಿರ ದ್ರವ್ಯಗಳನ್ನು (ಹಾಲು, ಮೊಸರು, ಹಿಟ್ಟು) ಸೇರಿಸಿ ಪಾನಯೋಗ್ಯವಾಗುವಂತೆ ಮಾಡುವರು.

ಈ ಇತಿಹಾಸದಲ್ಲಿ ಹೇಳಿರುವಂತೆ ತ್ರಿಷ್ಟುಪ್‌ಛಂದಸ್ಸು ಸಹಾ ಸ್ವರ್ಗದಿಂದ ಸೋಮವನ್ನು ತರುವುದಕ್ಕಾಗಿ ಪ್ರಯತ್ನಪಟ್ಟಿತು. ಆದುದರಿಂದ ಇಲ್ಲಿ ತ್ರಿಷ್ಟುಪ್ ಛಂದಸ್ಸೂ ಸಹ ಸೋಮದೇವತೆಗೆ ಸ್ವಕೀಯವೆಂದೇ ಹೇಳಲ್ಪಟ್ಟಿದೆ.

**ಶಿಕ್ಷಮಾಣಸ್ಯ ದೇವೇತಿ ಶಿಕ್ಷತೇ ವಾ ಏಷ ಯೋ ಯಜತೇ ಕ್ರತುಂ ದಕ್ಷಂ ವರುಣ ಸಂಶಿಶಾಧೀತಿ ವೀರ್ಯಂ ಪ್ರಜ್ಞಾನಂ ವರುಣ ಸಂಶಿಶಾಧೀತ್ಯೇವ ತದಾಹ ।**

ಸೋಮಲತೆಗಳನ್ನು ಹಗ್ಗದಿಂದ ಕಟ್ಟಿ, ವಸ್ತ್ರದಿಂದ ಆಚ್ಛಾದಿಸಿರುವ ಪರ್ಯಂತರ ಅದು ವರುಣನ ಸ್ವಾಧೀನದಲ್ಲಿದ್ದಂತೆ ಭಾವಿಸಲಾಗುವುದು. ಈಗ ಬಂಧನವನ್ನು ತೆಗೆದು ವಸ್ತ್ರವನ್ನು ತೆಗೆಯುವುದಕ್ಕಾಗಿ ವರುಣನನ್ನು ಪ್ರಾರ್ಥಿಸಲಾಗಿದೆ. ಹೀಗೆ ಪ್ರಾರ್ಥಿಸುವಾಗ ಎಲೈ ವರುಣನೇ, ಈ ಯಜ್ಞವನ್ನು ಮಾಡುತ್ತಿರುವ ಯಜಮಾನನಿಗೆ ಸರಿಯಾದ ತಿಳುವಳಿಯನ್ನು ಕೊಡು. ಇಂದ್ರಿಯ ಪಟುತ್ವವನ್ನೂ, ಯಜ್ಞ ಮಾಡುವ ಸಾಮರ್ಥ್ಯವನ್ನೂ, ಜ್ಞಾನವನ್ನೂ ಕೊಡು ಎಂದು ಹೋತೃವು ಈ ಮಂತ್ರಪಠನದಿಂದ ವರುಣನನ್ನು ಪ್ರಾರ್ಥಿಸುವನು.

**ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮೇತಿ ಯಜ್ಞೋ ವೈ ಸುತರ್ಮಾ ನೌಃ ಕೃಷ್ಣಾಜಿನಂ ವೈ ಸುತರ್ಮಾ ನೌರ್ವಾಗ್ವೈ ಸುತರ್ಮಾ ನೌರ್ವಾಚಮೇವ ತದಾರುಹ್ಯ ತಯಾ ಸ್ವರ್ಗಂ ಲೋಕಮಭಿ ಸಂತರತಿ ।**

ಇಲ್ಲಿ ನಾವೆಯೆಂದರೆ ಯಜ್ಞವು; ಯಜ್ಞದಲ್ಲಿ ದೀಕ್ಷೆಗಾಗಿ ಉಪಯೋಗಿಸುವ ಕೃಷ್ಣಾಜಿನವೇ ನಾವೆಯು; ಮಂತ್ರ ರೂಪವಾದ ವಾಕ್ಯಗಳೇ ನಾವೆಯು; ಇಂತಹ ನಾವೆಯನ್ನೇರಿ ಎಂದರೆ ನಾವು ಯಜ್ಞವನ್ನು ಪ್ರಾರಂಭಿಸಿ, ಅದರಲ್ಲಿ ದೀಕ್ಷೆಯನ್ನು ಹೊಂದಿ, ಸಮಯಾನುಸಾರವಾದ ಮಂತ್ರಗಳನ್ನು ಪಠಿಸುತ್ತಾ, ಯಜ್ಞ ಮಾಡುವುದರಿಂದ ಪಾಪಗಳನ್ನೆಲ್ಲಾ ಕಳೆದುಕೊಂಡು ಸ್ವರ್ಗಲೋಕವನ್ನು ಪಡೆಯುವಂತಾಗಲಿ ಎಂದಭಿಪ್ರಾಯವು. ಇಂತಹ ಅರ್ಥವುಳ್ಳ ಋಕ್ಕನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನು ಸ್ವರ್ಗವನ್ನು ಪಡೆಯುವನು.

**ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ॥**

ಈ ಎಂಟು ಋಕ್ಕುಗಳೂ ಸೇರಿ ಸೋಮಪ್ರವಾಹಣವೆಂಬ ಕರ್ಮವು ಪೂರ್ತಿಯಾಗುವುದು. ಕರ್ಮಪೂರ್ತಿಯಾಗುವ ಋಕ್ಕುಗಳನ್ನು ಪಠಿಸುವುದರಿಂದ ಯಜ್ಞವು ಸಾಂಗವಾಗಿ ನೆರವೇರಿದಂತಾಗುವುದು ಮತ್ತು ಆಯಾ ಕರ್ಮಕ್ಕೆ ಸಂಬಂಧಪಟ್ಟ ಮತ್ತು ಅದೇ ಅರ್ಥವನ್ನೊಳಗೊಂಡ ಋಕ್ಕುಗಳನ್ನು ಪಠಿಸುವುದರಿಂದಲೇ ಆಯಾ ಕರ್ಮಗಳು ಪೂರ್ತಿಯಾಗಿ ಯಜ್ಞವು ಸಾಂಗವಾಗಿ ನೆರವೇರುವುದು.

**ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ । ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ । ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥**

(ಐ. ಬ್ರಾ. ೩-೧೪)

ಈ ಎಂಟು ಋಕ್ಕುಗಳನ್ನು ಪಠಿಸುವಾಗ, ಮೊದಲನೆಯ ಋಕ್ಕನ್ನೂ, ಕೊನೆಯ ಋಕ್ಕನ್ನೂ ಮೂರುಮೂರಾವರ್ತಿ ಪಠಿಸುವನು. ಇದರಿಂದ ಒಟ್ಟು ಹನ್ನೆರಡು ಋಕ್ಕುಗಳನ್ನು ಪಠಿಸಿದಂತಾಗುವುದು. ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವುವು. ಸಂವತ್ಸರವು ಪ್ರಜಾಪತಿ ಸ್ವರೂಪವು. ಮೇಲೆ ಹೇಳಿದ ಈ ಋಕ್ಕುಗಳೂ ಪ್ರಜಾಪತಿಯಲ್ಲೇ ನೆಲಸಿರುವುವು. ಇದನ್ನು ತಿಳಿದವನು ಈ ಋಕ್ಕುಗಳನ್ನು ಪಠಿಸುವುದರಿಂದ ಆಯಾ ಕಾರ್ಯಗಳಲ್ಲಿ ಜಯಶೀಲನಾಗುವನು. ಕರ್ಮದ ಆದಿಯಲ್ಲಿಯೂ ಕೊನೆಯಲ್ಲಿಯೂ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರು ಮೂರಾವರ್ತಿ ಪಠಿಸುವುದರಿಂದ ಯಜ್ಞವೆಂಬ ಕರ್ಮವು ಮಂತ್ರಗಳೆಂಬ ಹಗ್ಗಗಳಿಂದ ಬಲವಾಗಿ ಕಟ್ಟಲ್ಪಟ್ಟು, ಜಾರಿ ಹೋಗದಂತೆ ದೃಢವಾಗಿರುವಂತಾಗುವುದು.

ಇಲ್ಲಿಗೆ ಸೋಮಪ್ರವಾಹಣವೆಂಬ ಕರ್ಮವು ಸಮಾಪ್ತವು.

## ಉತ್ತರಪೀಠಿಕೆ

ಇದುವರೆಗೂ ಸೋಮಪ್ರವಾಹಣಸಂಬಂಧವಾದ ಋಕ್ಕುಗಳನ್ನು ವಿವರಿಸಿ, ಈಗ ಸೋಮವನ್ನು ಗಾಡಿಯಿಂದ ಇಳಿಸುವ ಸಂದರ್ಭದಲ್ಲಿ ನಡೆಸಬೇಕಾದ ಕ್ರಮವನ್ನು ವಿವರಿಸಿರುವರು—

**ಪ್ರಜಾಪತಿರ್ವೈ ಪಿತ ಋಭೂನ್ಮರ್ತ್ಯಾನ್ಸತೋಽಮರ್ತ್ಯಾನ್ಕೃತ್ವಾ ತೃತೀಯಸವನ ಆಭಜತ್ತಸ್ಮಾನ್ನಾರ್ಭವೀಷು ಸ್ತುವತೇಽಥಾರ್ಭವಃ ಪವಮಾನ ಇತ್ಯಾಚಕ್ಷತೇ ।**

ತೃತೀಯಸವನಕಾಲದಲ್ಲಿ ಪಠಿಸುವ ಪವಮಾನಸ್ತೋತ್ರವನ್ನು ಆರ್ಭವ (ಋಭುಸಹಿತರಾದ) ಪವಮಾನವೆಂದು ಏತಕ್ಕೆ ಕರೆಯುತ್ತಾರೆ ? ಈ ಸ್ತೋತ್ರದ ಋಕ್ಕುಗಳೂ ಋಭುದೇವತಾಕವಾದ ಮಂತ್ರಗಳಿರುವುದಿಲ್ಲವಲ್ಲಾ ಎಂದರೆ ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಪೂರ್ವದಲ್ಲಿ ಸಕಲರಿಗೂ ತಂದೆಯಾದ ಪ್ರಜಾಪತಿಯು ಮನುಷ್ಯರಾಗಿದ್ದ ಋಭುಗಳನ್ನು ಮರಣರಹಿತರಾದ ದೇವತೆಗಳನ್ನಾಗಿಮಾಡಿ (ಈ ವಿಷಯವನ್ನು ನಾವು ಹಿಂದೆ ಋಭು ಸೂಕ್ತಗಳಲ್ಲಿ ವಿವರಿಸಿದೇವೆ.) ತೃತೀಯಸವನದಲ್ಲಿ ಅವರಿಗೂ ಸೋಮಪಾನಮಾಡುವ ಅರ್ಹತೆಯನ್ನು ಕಲ್ಪಿಸಿ ಕೊಟ್ಟನು. ಆದ್ದರಿಂದ ಋಭುಗಳು ತೃತೀಯಸವನದಲ್ಲಿ ಮಾತ್ರ ಸೋಮಭಾಗಾರ್ಹರು ಈ ಕಾರಣದಿಂದ ಇಲ್ಲಿ **ಆರ್ಭವಂ ಶಂಸತಿ** (ಋಭುಗಳನ್ನು ಸ್ತುತಿಸಲಾಗುವುದು) ಎಂದು ಹೇಳಲಾಗಿದೆ. ಹೀಗಿರುವುದರಿಂದ ಋಭುಗಳಿಗೆ ಸ್ತೋತ್ರಗಳಲ್ಲಿ ದೇವತಾತ್ವಭಾವವಿಲ್ಲದಿರುವುದರಿಂದ ಸಾಮಗಾಯಕರಾದ ಉದ್ಗಾತ್ರಾದಿ ಋತ್ವಿಜರು ಪವಮಾನ ಸ್ತೋತ್ರಗಳಲ್ಲಿ ಋಭುಗಳನ್ನು ಸ್ತುತಿಸುವುದಿಲ್ಲ. ಆದರೂ ಅನ್ಯದೇವತೆಯನ್ನು (ಪವಮಾನಸೋಮ) ಸ್ತುತಿಸುವ ಪವಮಾನಸೂಕ್ತವೇ ಆರ್ಭವಪವಮಾನಸೂಕ್ತವೆಂದು ಹೇಳಲ್ಪಡುವುದು.

**ಅಥಾಹ ಯದ್ಯಥಾಛಂದಸಂ ಪೂರ್ವಯೋಃ ಸವನಯೋರನ್ವಾಹ ಗಾಯತ್ರೀಃ ಪ್ರಾತಃಸವನೇ ತ್ರಿಷ್ಟುಭೋ ಮಾಧ್ಯಂದಿನೇಽಥ ಕಸ್ಮಾಜ್ಜಾಗತೇ ಸತಿ ತೃತೀಯಸವನೇ ತ್ರಿಷ್ಟುಭೋಽನ್ವಾಹೇತಿ ।**

ತೃತೀಯಸವನದಲ್ಲಿ ಋಭುಗಳಿಗಿರುವ ಸೋಮಪಾನಸಂಬಂಧವನ್ನು ಹೇಳಿದ್ದಾಯಿತು. ಈಗ ತೃತೀಯಸವನದಲ್ಲಿ ಪಠಿಸುವ ಉನ್ನೀಯಮಾನಸೂಕ್ತದ ಛಂದಸ್ಸಿನ ವಿಷಯವಾಗಿ ಒಂದು ವಿಚಿತ್ರ ಸಂಗತಿ ಇರುವುದನ್ನು ವಿಮರ್ಶೆ ಮಾಡುವರು. ಪ್ರಾತಃಸವನದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳನ್ನೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೂ ತೃತೀಯಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳನ್ನೂ ಪಠಿಸಬೇಕೆಂಬ ವಿಧಿ ಇರುವುದನ್ನು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಅದರಂತೆ ಪ್ರಾತಃಸವನದಲ್ಲಿ ಉನ್ನೀಯಮಾನಸೂಕ್ತವನ್ನು ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಂದಲೂ ಪಠಿಸುತ್ತಿರುವುದು ನ್ಯಾಯವಾಗಿದೆ. ಆದರೆ ತೃತೀಯಸವನದಲ್ಲಿ ಪಠಿಸುವ— **ಇಹೋಪ ಯಾತ** (ಋ. ಸಂ. ೪-೩೫) ಎಂಬ ಉನ್ನೀಯಮಾನಸೂಕ್ತದಲ್ಲಿ ಜಗತೀಛಂದಸ್ಸಿನ ಋಕ್ಕುಗಳಿರುವುದಿಲ್ಲ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳೇ ಇರುವವು. **ಜಾಗತಂ ತೃತೀಯಸವನಂ** ಎಂಬ ಶ್ರುತಿವಾಕ್ಯವನ್ನತಿಕ್ರಮಿಸಿ ತ್ರಿಷ್ಟುಪ್‌ಛಂದಸ್ಸಿನ **ಇಹೋಪ ಯಾತ** ಎಂಬೀ ಉನ್ನೀಯಮಾನಸೂಕ್ತವನ್ನು ಪಠಿಸಿರುವುದು ವಿಚಿತ್ರವಾಗಿ ಕಾಣಿಸುವುದಲ್ಲವೇ ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು.

**ಧೀತರಸಂ ವೈ ತೃತೀಯಸವನಮಥೈತದಧೀತರಸಂ ಶುಕ್ರಿಯಂ ಛಂದೋ ಯತ್ತ್ರಿಷ್ಟುಪ್ಸವನಸ್ಯ ಸರಸತಾಯಾ ಇತಿ ಬ್ರೂಯಾದಥೋ ಇಂದ್ರಮೇವೈತತ್ಸವನೇಽನ್ವಾಭಜತೀತಿ ।**

ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಲ್ಲಿರುವಂತೆ ತೃತೀಯಸವನದಲ್ಲಿ ಜಜ್ಜುವ ಸೋಮಲತೆಗಳಲ್ಲಿ ರಸವಿರುವುದಿಲ್ಲ. ಆದರ ರಸವು ಪೂರ್ವದಲ್ಲಿಯೇ ಶ್ಯೇನರೂಪವಾದ ಗಾಯತ್ರಿಯಿಂದ ಪಾನಮಾಡಲ್ಪಟ್ಟಿರುವುದರಿಂದ ಅದು

ಅರಸವಾಗಿರುವುದು. ಹೇಗೆಂದರೆ—ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ಯಜ್ಞಗಳಲ್ಲಿ ಉಪಯೋಗಿಸುವುದಕ್ಕಾಗಿ ಭೂಮಿಗೆ ತರಬೇಕೆಂದು ದೇವತೆಗಳು ಯೋಚಿಸಿ ಅದಕ್ಕೊಂದು ಉಪಾಯವನ್ನು ಮಾಡಿದರು. ಗಾಯತ್ರೀ ಮೊದಲಾದ ಛಂದಸ್ಸುಗಳಿಗೆ ಸ್ವರ್ಗಕ್ಕೆ ಹೋಗಿ ಸೋಮವನ್ನು ತರುವ ಶಕ್ತಿ ಇರುವುದು. ಆದುದರಿಂದ ಸೋಮವನ್ನು ಭೂಮಿಗೆ ತರಬೇಕೆಂದು ದೇವತೆಗಳು ಗಾಯತ್ರ್ಯಾದಿಛಂದಸ್ಸುಗಳನ್ನು ಪ್ರಾರ್ಥಿಸಿದರು. ಆ ಪ್ರಾರ್ಥನೆಯನ್ನಂಗೀಕರಿಸಿ ಗಾಯತ್ರ್ಯಾದಿ ಛಂದಸ್ಸುಗಳು ಸ್ವರ್ಗಕ್ಕೆ ಹೋಗಲು ಸಮ್ಮತಿಸಿದವು. ಈ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು. ಅದನ್ನು ಭಾಷ್ಯಕಾರರು ಇಲ್ಲಿ ಉದಾಹರಿಸಿರುವರು—

**ಜಗತ್ಯುದಪತಚ್ಚತುರ್ದಶಾಕ್ಷರಾಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಃ ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯರುಂಧತ ತದಜಾಯಾ ಅಜತ್ವಗ್ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ।**

(ತೈ. ಸಂ. ೬-೧-೬-೨, ೩, ೪)

ಮೊದಲು ಜಗತೀಛಂದಸ್ಸು ತಾನು ಹೋಗುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಸ್ವಲ್ಪ ದೂರ ಹೋಗುವುದರೊಳಗಾಗಿ ಶಕ್ತಿಗುಂದಿ, ಮುಂದಕ್ಕೆ ಹೋಗಲು ಸಾಮರ್ಥ್ಯವಿಲ್ಲದೆ ಹಿಂತಿರುಗಬೇಕಾಯಿತು. ಇದರಿಂದ ಜಗತೀಛಂದಸ್ಸಿನ ಪಾದದಲ್ಲಿ ಮುಂಚೆ ಇದ್ದ ಹದಿನಾಲ್ಕು ಅಕ್ಷರಗಳಲ್ಲಿ ಎರಡಕ್ಷರಗಳನ್ನು ಕಳೆದುಕೊಂಡಿತು. ಆದುದರಿಂದ ಈಗ ಜಗತೀಛಂಧಸ್ಸಿನ ಪ್ರತಿಯೊಂದು ಪಾದಕ್ಕೂ ಹನ್ನೆರಡು ಅಕ್ಷರಗಳು ಮಾತ್ರವಿರುವವು. ಈ ರೀತಿ ಮುಂದೆ ಹೋಗಲು ಸಾಮರ್ಥ್ಯವಿಲ್ಲದೆ ಹಿಂದಕ್ಕೆ ಬರುವಾಗ ಆ ಜಗತೀಛಂದಸ್ಸು ತನ್ನ ಜತೆಯಲ್ಲಿ ಯಜ್ಞಸಾಧನವಾದ ಪಶುವನ್ನೂ ದೀಕ್ಷಾಕ್ರವನ್ನೂ ತಂದಿತು.

ಆದುದರಿಂದ ಜಗತೀಛಂದಸ್ಸಿಗೆ ಪಶುಗಳನ್ನು ಕೊಡುವ ಶಕ್ತಿ ಇರುವುದು. ಯಜ್ಞವಾಡುವ ಯಜಮಾನನು ಪಶುಸಂಪತ್ತನ್ನು ಅಪೇಕ್ಷಿಸುವವನಾದರೆ ಅವನನ್ನು ಯಜ್ಞದಲ್ಲಿ ದೀಕ್ಷೆಯಿಂದ ಸಂಸ್ಕರಿಸುವಾಗ ಜಗತೀಛಂದಸ್ಸಿನ ಮಂತ್ರಗಳಿಂದಲೇ ಸಂಸ್ಕರಿಸುವರು. ಅನಂತರ ತ್ರಿಷ್ಟುಪ್‌ಛಂದಸ್ಸು ತಾನು ಹೋಗುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಸ್ವಲ್ಪದೂರ ಹೋಗುವುದರೊಳಗಾಗಿ ಅದಕ್ಕೂ ಆಯಾಸವಾಗಿ ಅದೂ ಹಿಂತಿರುಗಬೇಕಾಯಿತು. ಆಗ

ತ್ರಿಷ್ಟುಪ್‌ಛಂದಸ್ಸಿನ ಪಾದದಲ್ಲಿ ಹದಿಮೂರು ಅಕ್ಷರಗಳಲ್ಲಿ ಎರಡು ಅಕ್ಷರಗಳನ್ನು ಕಳೆದುಕೊಂಡದ್ದರಿಂದ ತ್ರಿಷ್ಟುಪ್ ಛಂದಸ್ಸಿನ ಪಾದಕ್ಕೆ ಈಗ ಹನ್ನೊಂದಕ್ಷರಗಳುಮಾತ್ರವಿರುವವು. ಈ ತ್ರಿಷ್ಟುಪ್‌ಛಂದಸ್ಸು ಹಿಂತಿರುಗುವಾಗ ತನ್ನ ಜೊತೆಯಲ್ಲಿ ಯಜ್ಞಕ್ಕೆ ಸಾಧನಭೂತವಾದ ದಕ್ಷಿಣೆಯನ್ನೂ, ತಪಸ್ಸನ್ನೂ ಸ್ವರ್ಗದಿಂದ ತಂದಿತು.

ಆದುದರಿಂದ ಈಗಲೂ ಲೋಕವ್ಯವಹಾರದಲ್ಲಿ ಯಜ್ಞಮಾಡುವಾಗ ಮಾಧ್ಯಂದಿನ ಸವನಕಾಲದಲ್ಲಿ ಋತ್ವಿಜರಿಗೆ ದಕ್ಷಿಣೆಯನ್ನು ಕೊಡುವ ಪದ್ಧತಿ ಇರುವುದು. ಈ ರೀತಿ ಸ್ವಯಾರ್ಜಿತವಾದ ಧನವನ್ನು ದಾನಮಾಡುವುದೇ ತಪಸ್ಸೆಂದು ಹೇಳಲ್ಪಡುವುದು. ಅನಂತರ ಗಾಯತ್ರಿಯು ತಾನು ಹೋಗುತ್ತೇನೆಂದು ಹೇಳಿ ಶ್ಯೇನಪಕ್ಷಿಯ ರೂಪದಿಂದ ಅಂತರಿಕ್ಷಕ್ಕೆ ನೆಗದು ಹಾರಿಹೋಯಿತು. ಹೋಗುವಾಗ ಸಹಾಯಕ್ಕಾಗಿ ತನ್ನ ಜತೆಯಲ್ಲಿ ಒಂದು ಹೆಣ್ಣು ಆಡನ್ನು ಕರೆದುಕೊಂಡು ಹೋಯಿತು. ಹೋಗುವಾಗ ಗಾಯತ್ರೀಛಂದಸ್ಸಿನ ಪಾದಗಳಿಗೆ ನಾಲ್ಕು ಅಕ್ಷರಗಳುಮಾತ್ರ ವಿದ್ದಿತು. ಛಂದಸ್ಸುಗಳಲ್ಲೆಲ್ಲಾ ಅಕ್ಷರಪರಿಮಿತಿಯಿಂದ ಗಾಯತ್ರಿಯು ಸಣ್ಣದಾಗಿದ್ದರೂ ಆದು ತನ್ನ ಸಾಮರ್ಥ್ಯದಿಂದ ಸ್ವರ್ಗವನ್ನು ಸೇರಿ, ಅಲ್ಲಿದ್ದ ಕಾವಲುಗಾರರನ್ನು ಗೆದ್ದು ಸೋಮವನ್ನು ತಂದಿತು. ಸೋಮರಸವನ್ನು ತರುವಾಗ ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಕಳೆದುಕೊಂಡಿದ್ದ ಎರಡೆರಡು ಅಕ್ಷರಗಳನ್ನು ಹಿಂದಕ್ಕೆ ತಂದಿತು. ಆ ನಾಲ್ಕು ಅಕ್ಷರಗಳೂ ಗಾಯತ್ರೀಛಂದಸ್ಸಿನ ಮೊದಲಿದ್ದ ನಾಲ್ಕು ಅಕ್ಷರಗಳಿಗೆ ಸೇರಿ ಗಾಯತ್ರಿಯ ಪ್ರತಿಪಾದಕ್ಕೂ ಎಂಟು ಅಕ್ಷರಗಳಾದವು. ಸೋಮವನ್ನು ಸ್ವರ್ಗದಿಂದ ತಂದಿದ್ದರಿಂದ ಗಾಯತ್ರಿಯು ಪ್ರಮಾಣದಲ್ಲಿ ಚಿಕ್ಕದಾಗಿದ್ದರೂ ಅದಕ್ಕೆ ಹೆಚ್ಚಿನ ಶ್ರೇಷ್ಠತೆಯು ದೊರಕಿತು. ಸೋಮವನ್ನು ಭೂಮಿಗೆ ತರುವಾಗ ಶ್ಯೇನಪಕ್ಷಿಯ ರೂಪದಲ್ಲಿದ್ದ ಗಾಯತ್ರಿಯು ಸೋಮವನ್ನು ತನ್ನ ಎರಡು ಪಾದಗಳಲ್ಲಿ ಹಿಡಿದುಕೊಂಡು, ಮತ್ತೊಂದು ಭಾಗವನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಬಂದಿತು. ಎರಡು ಪಾದಗಳಲ್ಲಿ ಹಿಡಿದಿದ್ದ ಸೋಮಲತೆಗಳ ಭಾಗವು ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಾದವು. ಕೊಕ್ಕಿನಲ್ಲಿ ಕಚ್ಚಿ ತಂದಿದ್ದ ಭಾಗವು ತೃತೀಯಸವನವಾಯಿತು. ಕೊಕ್ಕಿನಲ್ಲಿ ಕಚ್ಚಿ ತರುವಾಗ ಆ ಶ್ಯೇನ ಪಕ್ಷಿಯು ಸೋಮಲತೆಯನ್ನು ಕಚ್ಚಿ ರಸವನ್ನು ಹೀರಿದ್ದುದರಿಂದ ಆ ಲತೆಗಳಲ್ಲಿ ಸೋಮರಸವು ಹೆಚ್ಚಾಗಿಲ್ಲದೆ ನಿಸ್ಸಾರ ವಾಯಿತು. ಅದನ್ನೇ ಇಲ್ಲಿ ತೃತೀಯಸವನವು ಸಾರವತ್ತಾಗಿಲ್ಲದೆ ಅರಸವಾಗಿರುವುದೆಂದು ಹೇಳಿದೆ. ಈಗಲೂ ತೃತೀಯಸವನದಲ್ಲಿ ಹೊಸದಾಗಿ ಸೋಮಲತೆಗಳನ್ನು ಜಜ್ಜಿ ಹಿಂಡದೆ, ಮಾಧ್ಯಂದಿನಸವನಕಾಲದಲ್ಲಿ ರಸವನ್ನು ಹಿಂಡಿ ಉಳಿದಿದ್ದ ಸಿಪ್ಪೆಯಂತಿರುವ ಲತೆಗಳನ್ನೇ ನೀರಿನಲ್ಲಿ ನೆನೆಸಿ ಪುನಃ ರಸವನ್ನು ಹಿಂಡಿ ತೆಗೆಯುವರು. ಈ ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿರುವುದಿಲ್ಲವಾದ್ದರಿಂದ ಇದರ ರಸವನ್ನು ಹೆಚ್ಚಿಸುವುದಕ್ಕಾಗಿ ಇದಕ್ಕೆ ಮಾಧ್ಯಂದಿನಸಂಬಂಧವನ್ನು ಉಂಟುಮಾಡುವರು ಎಂದರೆ, ಮಾಧ್ಯಂದಿನಸವನದಲ್ಲಿ ಉಪಯೋಗಿಸುವ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನೇ ತೃತೀಯಸವನದಲ್ಲಿಯೂ, ಉನ್ನೀಯಮಾನಸೂಕ್ತದಲ್ಲಿಯೂ ಪಠಿಸುವರು. ಹೇಗೆಂದರೆ ಆರಿಹೋದ ಅಥವಾ ಆರಿ ಹೋಗುತ್ತಿರುವ ಅಗ್ನಿಯನ್ನು ಹೊಸದಾಗಿ ಕಾಷ್ಠಗಳನ್ನು ಹಾಕಿ ಚೆನ್ನಾಗಿ ಉರಿಯುವ ಹಾಗೆ ಮಾಡುವಂತೆ ತೃತೀಯ ಸವನದಲ್ಲಿ ರಸಕ್ಕಾಗಿ ಉಪಯೋಗಿಸುವ ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿ ಬರುವುದಕ್ಕಾಗಿ ಮಾಧ್ಯಂದಿನ ಸವನದಂತೆ ತೃತೀಯಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳನ್ನು ಪಠಿಸಿ ಇದಕ್ಕೆ ಮಾಧ್ಯಂದಿನಸಂಬಂಧವನ್ನು ಕಲ್ಪಿಸುವರು. ಈ ರೀತಿ ಸಂಬಂಧಕಲ್ಪನೆಗೆ **ಶುಕ್ರಿಯಂ** ಎಂದು ಹೆಸರು. ಎಂದರೆ, ಆರಿಹೋಗಿರುವುದನ್ನೂ ಪುನಃ ಉದ್ದೀಪನಗೊಳಿಸುವುದು ಎಂದರ್ಥವು. ಈ ರೀತಿ ತೃತಿಯಸವನದಲ್ಲಿ ಉದ್ದೀಪನಗೊಳಿಸುವುದಕ್ಕಾಗಿಯೂ, ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿ ಬರುವುದಕ್ಕಾಗಿಯೂ ತ್ರಿಷ್ಟುಪ್‌ಛಂದಸ್ಸು ಇಂದ್ರನಿಗೆ ಪ್ರಿಯವಾಗಿರುವುದರಿಂದ ಇಂದ್ರನಿಗೆ ಹಿತವನ್ನುಂಟುಮಾಡಿ ತೃತೀಯಸವನದಲ್ಲಿ ಇಂದ್ರನಿಗೂ ಸಂಬಂಧವನ್ನು ಕಲ್ಪಿಸುವುದಕ್ಕಾಗಿಯೂ, ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳುಳ್ಳ

ಉನ್ನೀಯಮಾನಸೂಕ್ತವನ್ನು ತೃತೀಯಸವನದಲ್ಲಿ ಪಠಿಸುವರು. ಜಗತೀಛಂದಸ್ಸಿನ ಋಕ್ಕುಗಳನ್ನು ಉಪಯೋಗಿಸದಿರುವುದಕ್ಕೆ ಇದೇ ಕಾರಣವು.

**ಅಥಾಹ ಯದ್ಯೈಂದ್ರಾರ್ಭವಂ ವೈ ತೃತೀಯಸವನಮಥ ಕಸ್ಮಾದೇಷ ಏವ ತೃತೀಯಸವನೇ ಪ್ರಸ್ಥಿತಾನಾಂ ಪ್ರತ್ಯಕ್ಷಾದ್ಯೈಂದ್ರಾರ್ಭವ್ಯಾ ಯಜತೀಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಮಿತಿ ಹೋತೈವ ನಾನಾದೇವತ್ಯಾಭಿರಿತರೇ ಕಥಂ ತೇಷಾಮೈಂದ್ರಾರ್ಭವ್ಯೋ ಭವಂತೀತಿ ।**

ಇದುವರೆಗೂ ತೃತೀಯಸವನಕ್ಕಾಗಿ ಪಠಿಸುವ ಉನ್ನೀಯಮಾನಸೂಕ್ತದಲ್ಲಿ ಜಗತೀಛಂದಸ್ಸಿಗೆ ಬದಲಾಗಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನು ಉಪಯೋಗಿಸಿರುವ ವಿಷಯದಲ್ಲಿ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಿ ಈಗ ಪ್ರಸ್ಥಿತ ಯಾಜ್ಯಾ ಋಕ್ಕುಗಳ ವಿಷಯದಲ್ಲಿ ಉದ್ಭವಿಸುವ ಸಂಶಯಾದಿಗಳಿಗೆ ಸಮಾಧಾನವನ್ನು ಹೇಳುವರು. ಉನ್ನೀಯಮಾನಸೂಕ್ತಪಠನಾನಂತರ ತೃತೀಯಸವನದಲ್ಲಿ ಹೋತ್ರಾದಿಸಪ್ತಋತ್ವಿಕ್ಕುಗಳು ಪ್ರಸ್ಥಿತಯಾಜ್ಯಾಮಂತ್ರಗಳನ್ನೂ ಐಂದ್ರಾರ್ಭವ ಎಂದರೆ ಇಂದ್ರ ಮತ್ತು ಋಭುದೇವತಾಕವಾದ ಋಕ್ಕುಗಳಿಂದ ಪಠಿಸುವರೆಂದು ಹಿಂದೆ ಹೇಳಿದೆ. ಆದರೆ ಪ್ರಸ್ಥಿತಯಾಜ್ಯಾಮಂತ್ರಪಠನಕಾಲದಲ್ಲಿ ಹೋತೃವೆಂಬ ಋತ್ವಿಜನು ಇಂದ್ರ ಮತ್ತು ಋಭುಶಬ್ದಗಳನ್ನೊಳಗೊಂಡಿರುವ ಎಂದರೆ **ಇಂದ್ರ ಋಭುಭಿರ್ವಾಜವದ್ಭಿಃ** (ಋ. ಸಂ. ೩-೬೦-೫) ಎಂಬ ಐಂದ್ರಾರ್ಭವದೇವತಾಕವಾದ ಯಾಜ್ಯಾ ಮಂತ್ರವನ್ನು ಪಠಿಸುವನು. ಏಕೆಂದರೆ ಹೋತೃವು ಪಠಿಸುವ ಯಾಜ್ಯಾಮಂತ್ರದಲ್ಲಿ **ಇಂದ್ರ ಋಭುಭಿಃ** ಎಂಬ ಶಬ್ದಗಳ ಪ್ರಯೋಗವಿರುವುದು. ಹೋತೃವು ಮಾತ್ರ ಇಂತಹ ದ್ವಿದೇವತಾಕವಾದ ಮಂತ್ರವನ್ನು ಪಠಿಸಿ ಹೋಮಮಾಡುವನು. ಆದರೆ ಇತರ ಆರುಮಂದಿ ಋತ್ವಿಜರು ಹಾಗೆ ಮಾಡುವುದಿಲ್ಲ. ಆದರೆ ಅವರು ನಾನಾದೇವತಾಕವಾದ ಮಂತ್ರಗಳನ್ನು ಪಠಿಸಿ ಹೋಮಮಾಡುವರು. ಆದುದರಿಂದ ಈ ಆರುಮಂದಿ ಋತ್ವಿಜರು ಪಠಿಸುವ ಯಾಜ್ಯಾಮಂತ್ರಗಳು ಹೇಗೆ ಐಂದ್ರಾರ್ಭವ ಮಂತ್ರಗಳಾಗುವವು ? ಎಂದರೆ, ಇವರ ಮಂತ್ರಗಳಲ್ಲಿ ಇಂದ್ರ ಮತ್ತು ಋಭುಗಳು ಪ್ರಸ್ತಾಪವಿಲ್ಲದಿರುವುದರಿಂದ ಇವರ ಯಾಜ್ಯಾಮಂತ್ರಗಳು ತೃತೀಯಸವನದಲ್ಲಿ ಮುಖ್ಯದೇವತೆಗಳಾದ ಇಂದ್ರ ಮತ್ತು ಋಭುಗಳನ್ನು ಹೇಗೆ ಸ್ತುತಿಸುವವು ? ಇದು ವಿಚಿತ್ರವಲ್ಲವೇ ?

**ಇಂದ್ರಾವರುಣಾ ಸುತಪಾವಿಮಂ ಸುತಮಿತಿ ಮೈತ್ರಾವರುಣೋ ಯಜತಿ ಯುವೋ ರಥೋ ಅಧ್ವರಂ ದೇವವೀತಯ ಇತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ಹಿಂದೆ ಹೋತೃವು— **ಇಂದ್ರ ಋಭುಭಿರ್ವಾಜವದ್ಭಿಃ** ಎಂಬ ಐಂದ್ರಾರ್ಭವ ದೇವತಾಕವಾದ ಯಾಜ್ಯಾಮಂತ್ರವನ್ನು ಪಠಿಸುವನೆಂದು ಹೇಳಿದೆಯಷ್ಟೆ. ಈಗ ಇತರ ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳಲ್ಲಿ ಐಂದ್ರಾರ್ಭವತ್ವವು ...ದರೆ ಇಂದ್ರ ಮತ್ತು ಋಭುದೇವತಾಕವಾದ ಸ್ತುತಿಯು ಇರುವುದನ್ನು ವಿವರಿಸುವರು. ಮೊದಲು, ಮೈತ್ರಾವರುಣನು ...ಸುವ— **ಇಂದ್ರಾವರುಣಾ ಸುತಪಾವಿಮಂ** (ಋ. ಸಂ. ೬-೬೮-೧೦) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ...ಠಿಸುವನು. ಈ ಋಕ್ಕಿನ— **ಯುವೋ ರಥೋ ಅಧ್ವರಂ ದೇವವೀತಯೇ** ಎಂಬ ತೃತೀಯ ಪಾದದಲ್ಲಿ ದೇವವೀತಯೇ ಎಂಬ ಪದವಿರುವುದು. ಈ ಶಬ್ದಕ್ಕೆ ಸಮಾಸಮಾಡುವಾಗ— **ದೇವಾನಾಂ ವೀತಿಃ ಪ್ರಾಪ್ತಿರ್ದೇವವೀತಿರಿತಿ ತಸ್ಯ ಸಮಾಸಃ । ತಸ್ಯ ಸಮಾಸೇ ಷಷ್ಠೀಬಹುವಚನತ್ವೇನ ಶಬ್ದೇನ ಬಹೂನ್ಯೇವ ರೂಪಾಣಿ ಪ್ರತೀಯಂತೇ । ತತ್ರ ಬಹುತ್ವಮೃಭೂಣಾಂ ಸ್ವರೂಪಂ ।** ಎಂದಿರುವುದರಿಂದ ಈ ಶಬ್ದಕ್ಕೆ ದೇವತೆಗಳ

ಪ್ರಾಪ್ತಿಗಾಗಿ ಎಂದರ್ಥವಿರುವುದು. ದೇವತೆಗಳ ಎಂಬ ಶಬ್ದವು ಷಷ್ಠೀವಿಭಕ್ತಿಯ ಬಹುವಚನವು. ಈ ಋಕ್ಕಿನಲ್ಲಿ ಇಂದ್ರಶಬ್ದವು ಪ್ರತ್ಯಕ್ಷವಾಗಿ ಇರುವುದರಿಂದ ಬಹುವಚನಶಬ್ದದಿಂದ ಬೋಧ್ಯವಾದ ದೇವತೆಗಳ ಎಂಬ ಪದವು ಮೂರು ಮಂದಿ ಇರುವ ಋಭುಗಳಿಗೇ ಅನ್ವಯಿಸುವುದು. ಆದುದರಿಂದ ಈ ಋಕ್ಕಿನಲ್ಲಿ ಇಂದ್ರನೂ ಮತ್ತು ಋಭುಗಳೂ ಸ್ತುತರಾಗಿರುವರೆಂದು ಊಹಿಸಬೇಕು.

**ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತ ಇತಿ ಬ್ರಾಹ್ಮಣಾಚ್ಛಂಸೀ ಯಜತ್ಯಾ ವಾಂ ವಿಶಂತ್ವಿಂದವಃ ಸ್ವಾಭುವ ಇತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ಬ್ರಾಹ್ಮಣಾಚ್ಛಂಸಿಯು—**ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇ** (ಋ. ಸಂ. ೪-೫೦-೧೦) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿಯೂ ಇಂದ್ರಶಬ್ದಪ್ರಯೋಗವಿರುವುದು. ಈ ಋಕ್ಕಿನ **ಆ ವಾಂ ವಿಶಂತ್ವಿಂದವಃ ಸ್ವಾಭುವಃ** ಎಂಬ ಮೂರನೆಯ ಪಾದದಲ್ಲಿ ಇಂದವಃ ಎಂದು ಬಹುವಚನಶಬ್ದಪ್ರಯೋಗವು ಋಭುಗಳಿಗೆ ಅನ್ವಯಿಸುವುದರಿಂದ ಈ ಋಕ್ಕಿನಲ್ಲಿಯೂ ಐಂದ್ರಾರ್ಭವವಿದ್ದಂತಾಯಿತು.

**ಆ ವೋ ವಹಂತು ಸಪ್ತಯೋ ರಘುಷ್ಯದ ಇತಿ ಪೋತಾ ಯಜತಿ ರಘುಪತ್ವಾನಃ ಪ್ರ ಜಿಗಾತ ಬಾಹುಭಿರಿತಿ ಬಹೂನಿ ವಾಹ ತದೃಭೂಣಾಂ ರೂಪಂ ।**

**ಪೋತೃ**ವೆಂಬ ಋತ್ವಿಜನು—**ಆ ವೋ ವಹಂತು ಸಪ್ತಯೋ ರಘುಷ್ಯದಃ** (ಋ ಸಂ. ೧-೮೫-೬) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿ ಎರಡನೆಯ ಪಾದದಲ್ಲಿ **ರಘುಪತ್ವಾನಃ** ಎಂಬ ಬಹುವಚನಾಂತಶಬ್ದವೂ ಇನ್ನೂ ಇತರ ಬಹುವಚನಾಂತಶಬ್ದಗಳೂ ಇರುವುದರಿಂದ ಬಹುವಚನಶಬ್ದಗಳ ಪ್ರಯೋಗವು ಋಭುಗಳನ್ನೂ ನಿರ್ದೇಶಿಸುವುದೆಂದೂ ತಿಳಿಯಬೇಕು.

**ಅಮೇವ ನಃ ಸುಹವಾ ಆ ಹಿ ಗಂತನೇತಿ ನೇಷ್ಟಾ ಯಜತಿ ಗಂತನೇತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ನೇಷ್ಟೃವೆಂಬ ಋತ್ವಿಜನು—**ಅಮೇವ ನಃ ಸುಹವಾ ಆ ಹಿ ಗಂತನ** (ಋ. ಸಂ. ೨-೩೬-೩) ಎಂಬ ಋಕ್ಕನ್ನು ಪಠಿಸಿ ಹೋಮಮಾಡುವನು. ಈ ಯಾಜ್ಯಾಮಂತ್ರದಲ್ಲಿಯೂ ಸಹ ಗಂತನ ಎಂದು ಲೋಣ್ಮಧ್ಯಮಪುರುಷ ಬಹುವಚನಾಂತಪದವಿರುವುದರಿಂದ ಈ ಋಕ್ಕಿನಲ್ಲಿಯೂ ಐಂದ್ರಾರ್ಭವಪ್ರತಿಪಾದನೆ ಇರುವುದೆಂದು ತಿಳಿಯಬೇಕು.

**ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯೇತ್ಯಚ್ಛಾವಾಕೋ ಯಜತ್ಯಾವಾಮಂಧಾಂಸಿ ಮದಿರಾಣ್ಯಗ್ಮನ್ನಿತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ಅಚ್ಛಾವಾಕನೆಂಬ ಋತ್ವಿಜನು—**ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ** (ಋ. ಸಂ. ೬-೭೦-೭) ಎಂಬ ಯಾಜ್ಯಾಮಂತ್ರವನ್ನು ಪಠಿಸಿ ಹೋಮ ಮಾಡುವನು. ಈ ಋಕ್ಕಿನ ತೃತೀಯಪಾದದಲ್ಲಿ ಬಹುವಚನಾಂತಶಬ್ದಗಳಾದ **ಅಂಧಾಂಸಿ** ಮೊದಲಾದ ಶಬ್ದಗಳ ಪ್ರಯೋಗವಿರುವುದರಿಂದ ಇಲ್ಲಿಯೂ ಬಹುವಚನವು ಋಭುಗಳನ್ನು ನಿರ್ದೇಶಿಸುವುದು.

**ಇಮಂ ಸ್ತೋಮಮರ್ಹತೇ ಜಾತವೇದಸ ಇತ್ಯಾಗ್ನೀಧ್ರೋ ಯಜತಿ ರಥಮಿವ ಸಂ ಮಹೇಮಾ ಮನೀಷಯೇತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ಆಗ್ನೀಧ್ರನೆಂಬ ಋತ್ವಿಜನು— **ಇಮಂ ಸ್ತೋಮಮರ್ಹತೇ ಜಾತವೇದಸೇ** (ಋ. ಸಂ. ೧-೯೪-೧) ಎಂಬ ಋಕ್ಕನ್ನು ಪಠಿಸಿ ಹೋಮಮಾಡುವನು. ಈ ಋಕ್ಕಿನ ದ್ವಿತೀಯ ಪಾದದಲ್ಲಿ **ಮಹೇಮ** ಎಂದು ಮೊದಲಾದ ಬಹುವಚನಾಂತ ಶಬ್ದಗಳ ಪ್ರಯೋಗವಿರುವುದರಿಂದ, ಈ ಮಂತ್ರವು ಋಭುಗಳ ಸ್ವರೂಪವನ್ನು ವಿವರಿಸುವುದೆಂದು ತಿಳಿಯಬೇಕು.

**ಏವಮು ಹ್ಯೆತಾ ಐಂದ್ರಾರ್ಭವ್ಯೋ ಭವಂತಿ ಯನ್ನಾನಾದೇವಾತ್ಯಾಸ್ತೇನಾನ್ಯಾ ದೇವತಾಃ ಪ್ರೀಣಾತಿ ।**

ಈ ರೀತಿ ಹಿಂದೆ ಹೇಳಿದ ಏಳು ಯಾಜ್ಯಾ ಮಂತ್ರಗಳು ಇಂದ್ರ ಮತ್ತು ಋಭು ದೇವತೆಗಳನ್ನು ಪ್ರತಿಪಾದಿಸುವುದಲ್ಲದೆ ನಾನಾದೇವತಾಕವಾಗಿರುವುದರಿಂದ ನಾನಾ ದೇವತೆಗಳನ್ನೂ ಸಂತೋಷಪಡಿಸುವುದು.

**ಯದು ಜಗತ್ಪ್ರಾಸಹಾ ಜಾಗತಂ ವೈ ತೃತೀಯಸವನಂ ತೃತೀಯಸವನಸ್ಯೈವ ಸಮೃಧ್ಯೈ ॥**

(ಐ. ಬ್ರಾ. ೨೮-೧೨)

ಇಲ್ಲಿ **ಜಗತ್** ಎಂದರೆ ಜಗತೀಛಂದಸ್ಸು. **ಪ್ರಾಸಹಾ** ಶಬ್ದವು ಬಹುತ್ವವನ್ನು ನಿರ್ದೇಶಿಸಿಸುವುದು. ಆದುದರಿಂದ **ಜಗತ್ಪ್ರಾಸಹಾ** ಎಂದರೆ, ಜಗತೀಛಂದಸ್ಸೂ ಮತ್ತು ಬಹುವಚನಾಂತಶಬ್ದಗಳೂ ಇರುವ ಸೂಕ್ತ ಅಥವಾ ಮಂತ್ರಗಳೆಂದರ್ಥವು. ಈ ವಿಧವಾದ ಮಂತ್ರಗಳು ತೃತೀಯಸವನದ ಉನ್ನೀಯಮಾನಸೂಕ್ತದಲ್ಲಿಯೂ, ಯಾಜ್ಯಾಮಂತ್ರಗಳಲ್ಲಿಯೂ ಇರುವುದರಿಂದ— **ಜಾಗತಂ ವೈ ತೃತೀಯಸವನಂ** ತೃತೀಯಸವನವು ಜಗತೀಛಂದಸ್ಸಿನ ಸ್ವರೂಪವಾಗಿರುವುದು ಎಂದು ಹೇಳಲ್ಪಡುವುದು. ಇಂತಹ ಸೂಕ್ತ ಮತ್ತು ಋಕ್ಕುಗಳಿಂದ ನೆರವೇರಿಸಲ್ಪಡುವ ತೃತೀಯಸವನಕರ್ಮವು ಯಜ್ಞ ಮಾಡುವ ಯಜಮಾನನಿಗೆ ಸಮೃದ್ಧಿಯನ್ನುಂಟುಮಾಡುವುದು.

ಇಲ್ಲಿಗೆ ತೃತೀಯಸವನವು ಸಮಾಪ್ತವು.

---

## ಸೋಮಲತೆಯ ವಿಚಾರ

ಸೋಮದ ವಿಷಯವಾಗಿ ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾದ ವಿವರಣೆಯನ್ನು ಕೊಟ್ಟಿದ್ದೇವೆ. ಆದರೂ ಈಗ ಅದರ ವಿಷಯವಾಗಿ ಸೂಕ್ಷ್ಮವಾದ ವಿವರಣೆಯನ್ನು ಕೊಡುವುದು ಅವಶ್ಯಕವಾಗಿರುವುದು.

ವೇದದಲ್ಲಿ ಸೋಮವಿಚಾರವಾದ ಅನೇಕ ಮಂತ್ರಗಳಿವೆ. ಒಂಭತ್ತನೆಯ ಮಂಡಲವೆಲ್ಲವೂ ಸೋಮದ ಸ್ತುತಿಯೇ ಆಗಿದೆ. ಅನೇಕ ದೇವತೆಗಳನ್ನು ಆಹ್ವಾನಮಾಡುವ ಕಾಲದಲ್ಲಿ ಸೋಮಪಾನಕ್ಕಾಗಿ ಈ ಯಜ್ಞಕ್ಕೆ ಬರಬೇಕೆಂದು ಕರೆಯಲಾಗಿದೆ. ಸೋಮಸಂಬಂಧವಾದ ಅನೇಕ ಯಾಗಗಳಿವೆ. ಅವುಗಳಲ್ಲಿ ಅಗ್ನಿಷ್ಟೋಮಯಾಗವೇ ಮುಖ್ಯವಾದುದು. ಈ ಯಾಗದಲ್ಲಿ ಸ್ತೋತ್ರಶಸ್ತ್ರಾದಿ ಮಂತ್ರಪಠನದಿಂದ ವಿಧ್ಯುಕ್ತವಾಗಿ ಸೋಮವನ್ನು ಮೂರು ಸವನಗಳಲ್ಲಿಯೂ (ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ) ತೆಗೆದು ಸಂಸ್ಕಾರಮಾಡಿ, ಯಜಮಾನನೂ ಋತ್ವಿಜರೂ ಪಾನಮಾಡುವರು. ಇತರ ಸೋಮಯಾಗಗಳಲ್ಲಿಯೂ ಕೆಲವು ವ್ಯತ್ಯಾಸಗಳೊಡನೆ ಇದೇಕ್ರಮವು ಅನುಸರಿಸಲ್ಪಡುವುದು.

ಈಗ ಸೋಮವೆಂದರೇನು ಎಂಬುದನ್ನು ವಿಮರ್ಶೆಮಾಡಬೇಕಾಗಿದೆ. ಸೋಮವು ಒಂದುವಿಧವಾದ ಲತಾವಿಶೇಷವು. ಈ ಸೋಮಲತೆಯು ಈಗ ಇಂಡಿಯಾದೇಶದಲ್ಲೆಲ್ಲಿಯೂ ದೊರಕುವುದಿಲ್ಲ. ಇದು ವಿಶೇಷವಾಗಿ ಬಯಲುಗಳಲ್ಲಿಯೂ, ನದೀತೀರಗಳಲ್ಲಿಯೂ, ಬೆಟ್ಟಗಳಲ್ಲಿಯೂ ಬೆಳೆಯುವುದು. ಎಷ್ಟೆಷ್ಟು ಎತ್ತರದಲ್ಲಿ ಬೆಳೆದಿದ್ದರೆ ಅಷ್ಟಷ್ಟು

ಹೆಚ್ಚು ರಸವನ್ನು ಕೊಡುವುದು. ಸುಮಾರು ೭೦೦೦ ಅಡಿಯ ಎತ್ತರದಲ್ಲಿಯೂ ಇದು ಬೆಳೆಯುವುದು ಆದುದರಿಂದ ಈ ಸೋಮವನ್ನು ಬೆಟ್ಟಗಳಿಂದ ತಂದ ವರ್ಣನೆಗಳು ಋಗ್ವೇದದಲ್ಲಿ (ಋ. ಸಂ. ೧-೯೩-೬ ; ೩-೪೮-೨ ; ೫-೪೩-೪ ಇತ್ಯಾದಿ) ಅನೇಕ ಕಡೆ ಇವೆ. **ಮೌಜವತ**ವೆಂಬ ಪರ್ವತವು ಸೋಮಲತೆಗೆ ಪ್ರಸಿದ್ಧಿಯಾಗಿದೆ.(ಋ. ಸಂ. ೧೦-೩೪-೧ ; ವಾ. ಸಂ. ೩-೬೧-೧; ನಿ. ೯-೮ ಇತ್ಯಾದಿ) **ಶರ್ಯಣಾವತ್** ಎಂಬ ಸರೋವರದ ದಡಗಳಲ್ಲಿ ಸೋಮಲತೆಯು ದೊರೆಯುವುದೆಂದು ಋಗ್ವೇದದಲ್ಲಿ (ಋ. ಸಂ. ೮-೭-೨೯, ೮-೬೪-೧೧, ೯-೬೫-೨೨ ಇತ್ಯಾದಿ) ಅಲ್ಲಲ್ಲಿ ಹೇಳಿದೆ. ಮತ್ತು **ಅರ್ಜೀಕ** ಎಂಬ ಸ್ಥಳದಲ್ಲಿಯೂ (ಋ. ಸಂ. ೮-೭-೨೯, ೮-೬೪-೧೧ ಇತ್ಯಾದಿ) **ಪಸ್ತ್ಯಾ** ಎಂಬ ದೇಶದಲ್ಲಿಯೂ (ಋ. ಸಂ. ೯-೬೫-೩) ಪಂಚಜನರೆಂಬ ಐದು ಪಂಗಡದವರು ವಾಸಿಸುವ ಸ್ಥಳದಲ್ಲಿಯೂ (ಋ. ಸಂ. ೯-೬೫-೨೩, ೯-೯೨-೩ ಇತ್ಯಾ) **ಸುಷೋಮಾ** ಎಂಬ ನದಿಯ ಸುತ್ತಮುತ್ತ ಪ್ರದೇಶಗಳಲ್ಲಿಯೂ (ಋ. ಸಂ. ೮-೭-೨೯, ೮-೬೪-೧೧ ಇತ್ಯಾದಿ) ಸೋಮವು ದೊರೆಯುವುದೆಂದು ಹೇಳಿದೆ. ಕಡೆಯದಾದ **ಸುಷೋಮಾ** ಎಂದರೆ ಸು+ಸೋಮ=ಒಳ್ಳೆಯ ಸೋಮವು ಸಿಕ್ಕುವ ಸ್ಥಳವಾದ್ದರಿಂದ ಈ ಪ್ರದೇಶಕ್ಕೆ ಸುಷೋಮವೆಂದು ಹೆಸರು ಬಂದಿರಬಹುದು. ಆದುದರಿಂದ ಋಗ್ವೇದಕಾಲದಲ್ಲಿ ಈಗಿನ ಪಂಜಾಬು ದೇಶದ ಬಯಲುಗಳಲ್ಲಿಯೂ ನದೀತೀರಗಳಲ್ಲಿಯೂ ಸೋಮಲತೆಯು ಯಥೇಷ್ಟವಾಗಿ ಬೆಳಯುತ್ತಿತ್ತೆಂದು ತಿಳಿದುಬರುವುದು. ಬಯಲಿನಲ್ಲಿ ಬೆಳೆಯುವ ಲತೆಯಿಂದ ಬೆಟ್ಟದಲ್ಲಿ ಬೆಳೆಯುವ ಲತೆಯಷ್ಟು ರಸವು ದೊರೆಯುತ್ತಿರಲಿಲ್ಲವಾಗಿ ಬಯಲಿನ ಲತೆಯನ್ನು ನೀರಿನಲ್ಲಿ ಚೆನ್ನಾಗಿ ನೆನೆಯಿಸಿ ಉಪಯೋಗಿಸುತ್ತಿದ್ದರು. (ಋ. ಸಂ. ೯-೬೩-೪, ೯-೭೪-೯, ೯-೭೯-೪ ಇತ್ಯಾದಿ)

ಈ ಲತೆಯ ಕಾಂಡವು ಸುಮಾರು ೪ ಅಡಿಯ ಎತ್ತರಕ್ಕೆ ಬೆಳೆಯುವುದು. ಇದರ ಕಾಂಡವು ದುಂಡಾಗಿಯೂ, ಮೃದುವಾಗಿಯೂ, ಬಿಳುಪು ಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿಯೂ ಇರುವುದು. ಮತ್ತು ಒಂದು ಬೆಟ್ಟುಗಾತ್ರ ದಪ್ಪನಾಗಿರುವುದು. ಎಲೆಗಳು ಬಹಳ ಸ್ವಲ್ಪ ಮತ್ತು ಬಿಳುಪಾಗಿಯೂ ಸಣ್ಣನಾಗಿಯೂ ಇರುವುವು. ಸಾಧಾರಣವಾಗಿ ಎಲೆಗಳು ಉದುರಿಹೋಗುವುವು. ಗಿಡದ ತುದಿಯಲ್ಲಿ ಕೆಲವು ಬೀಜಗಳಿಂದ ಕೂಡಿದ (ಜೋಳದಂತಿರುವ) ಗೊಂಚಲು ಇರುವುದು ಇದರ ರಸವು ಹಸುರುಮಿಶ್ರವಾದ ಬಿಳುಪಾಗಿರುವುದು. ರುಚಿಯಲ್ಲಿ ಸ್ವಲ್ಪ ಸಿಹಿಯಾಗಿರುವುದಾದರೂ ಕೆಲವು ದಿನಗಳವರೆಗೆ ಇಟ್ಟಿದ್ದರೆ ಹುಳಿಯಾಗುವುದು. ದೊಡ್ಡಮರದ ಸಮೀಪದಲ್ಲಿ ಬೆಳೆಯುವ ಸಂದರ್ಭದಲ್ಲಿ ಇದು ಲತೆಯಂತೆ ಮರದ ಸುತ್ತಲೂ ಹಬ್ಬಿ ಬೆಳೆಯುವುದು. ಅಲ್ಲಲ್ಲಿ ಗಿಣ್ಣುಗಳಿರುವುವು. ಇದನ್ನು ಸುಲಭವಾಗಿ ಮುರಿಯಬಹುದು.

ಸೋಮರಸವನ್ನು ಸಿದ್ಧಪಡಿಸುವಾಗ ಆಚರಿಸಬೇಕಾದ ಕ್ರಮವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು— ನದೀತೀರಗಳಲ್ಲಿಯೂ, ಪರ್ವತದ ಮೇಲೆಯೂ ಬೆಳೆಯುತ್ತಿದ್ದ ಸೋಮಲತೆಯನ್ನು ಬಹು ಪ್ರಯಾಸದಿಂದ ತಂದು ಅಥವಾ ತಂದವರಿಂದ ಕ್ರಯಕ್ಕೆ ತೆಗೆದುಕೊಂಡು ಯಜ್ಞಗಳಲ್ಲಿ ಉಪಯೋಗಿಸುತ್ತಿದ್ದರು. ಈಗಲೂ ಯಜ್ಞಗಳಲ್ಲಿ ಸೋಮವಿಕ್ರಯಣವೆಂಬ ಕರ್ಮವು ನಡೆಯುತ್ತಿರುವುದು. ಸೋಮಲತೆಯನ್ನು ತಂದಮೇಲೆ ಅದನ್ನು ಕಲ್ಲುಗಳಿಂದ (ಗ್ರಾವ, ಅದ್ರಿ) ಜಜ್ಜಿ, ಹಿಂಡಿ ಬಟ್ಟೆಯಿಂದ ಸೋಸಿ ಸಂದರ್ಭಾನುಸಾರ ಅದಕ್ಕೆ ಮೊಸರು, ಹಾಲು, ಹಿಟ್ಟುಗಳನ್ನು ಬೆರಸಿ ದೇವತೆಗಳಿಗೆ ಅರ್ಪಿಸಿ ಬಳಿಕ ಯಜಮಾನ ಋತ್ವಿಜರು ಪಾನಮಾಡುವುದು ರೂಢಿಯಾಗಿದೆ. ಈ ರೀತಿ ಸೋಮರಸವನ್ನು ಸಿದ್ಧಪಡಿಸುವುದು ಯಜ್ಞದಲ್ಲಿ ಮುಖ್ಯವಾದ ದಿವಸಗಳಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವುದು. ಇವಕ್ಕೆ ಅಭಿಷವಣ ಅಥವಾ ಸವನ (ರಸವನ್ನು ಹಿಂಡಿ ತೆಗೆಯುವುದು) ಎಂದು ಹೆಸರು. ಸಾಯಂಕಾಲದಲ್ಲಿ ಮಾಡುವ ಸವನಕ್ಕೆ **ತೃತೀಯಸವನ**ವೆಂದು ಹೆಸರು.

ಸೋಮಲತೆಯು (ಬಳ್ಳಿಗಳು) **ಬಭ್ರು, ಅರುಣ** (ಮಾಸಲು ಕೆಂಪು) ಅಥವಾ ಹಳದಿಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರುವುದು. ಪರ್ವತಗಳಲ್ಲಿ ಬಹಳ ಎತ್ತರದಲ್ಲಿ ಬೆಳೆದಿರುವ ಲತೆಯು ಶ್ರೇಷ್ಠವೆಂದೂ ಅದರಿಂದ ಹೆಚ್ಚು ರಸವನ್ನು ತೆಗೆಯಬಹುದೆಂದೂ ಹೇಳಿರುವುದರಿಂದ ಸಾಧ್ಯವಾದ ಸಂದರ್ಭಗಳಲ್ಲಿ ಸೋಮಲತೆಯನ್ನು ಪರ್ವತಗಳಿಂದಲೇ ತರುತ್ತಿದ್ದರು. ಇಂತಹ ಪರ್ವತಗಳಲ್ಲಿ **ಮೂಜವತ**ವೆಂಬ ಪರ್ವತವು ಪ್ರಸಿದ್ಧವಾಗಿದ್ದಿತು. ಈ ಸೋಮಲತೆಯ ಕುಡಿಯು **ಅಂಸ**ನೆಂಬ ಹೆಸರಿಂದಲೂ (ಋ. ಸಂ. ೧-೧೬೮-೩; ३-೪೮-೨ ಇತ್ಯಾದಿ) ಚಿಗುರುಗಳಿಂದ ಕೂಡಿದ ಕುಡಿಗೆ **ವಕ್ಷಣಾ** ಎಂದೂ (ಋ. ಸಂ. ೮-೧-೧೭) **ವಾಣ** ಎಂದೂ (ಋ. ಸಂ. ೪-೨೮-೯ ; ೯-೫೦-೧) ಸೋಮ ರಸಕ್ಕೆ **ಅಂಧಃ** (ಋ. ಸಂ. ೧-೨೮-೭ ; ೩-೪೮-೧; ೪-೧೬ ೧) ಎಂದೂ ಸೋಮಲತೆಯ ದಂಡಕ್ಕೆ (ಬಳ್ಳಿಗೆ) **ಪರ್ವನ್** (ಋ. ಸಂ. ೧-೯-೧) ಎಂದೂ ಹೇಳುವ ರೂಢಿಯಿರುವುದು.

## ಸೋಮರಸವನ್ನು ಸಿದ್ಧಪಡಿಸುವ ಕ್ರಮ

ಸೋಮಲತೆಯಲ್ಲಿರುವ ಅಥವಾ ಬಳ್ಳಿಯಲ್ಲಿರುವ ಎಲೆಗಳನ್ನು ತೆಗೆದುಹಾಕಿ ಅದನ್ನು ಒರಳಿನಲ್ಲಿ ಹಾಕಿ ಕಲ್ಲಿನಿಂದ ಜಜ್ಜುವರು. ಲತೆಯು ಹೊಸದಲ್ಲದಿದ್ದರೆ ಒಂದೆರಡು ದಿನ ನೀರಿನಲ್ಲಿ ನೆನೆಹಾಕಿ ಮೆತ್ತಗಾದ ಮೇಲೆ ರಸವನ್ನು ತೆಗೆಯುವರು. ಸೋಮಲತೆಯನ್ನು ಜಜ್ಜುವ ಒರಳಿಗೆ **ಉಲೂಖಲ**ವೆಂದು ಹೆಸರು. ಇದು ಸಾಧಾರಣವಾಗಿ ಕಲ್ಲಿನಿಂದಲೇ ನಿರ್ಮಿತವಾಗಿರುವುದು, ಮರದಿಂದ ಮಾಡುವುದೂ ಉಂಟು. ಒರಳಿನಲ್ಲಿ ಹಾಕಿ ಮೇಲಿನಿಂದ ಕುಟ್ಟುವ ಕಲ್ಲಿಗೆ **ಗ್ರಾವಾ,** (ಋ. ಸಂ. ೧-೮೩-೬ ; ೧-೧೩೫-೭)**ಅದ್ರಿ**, (ಋ. ಸಂ. ೧-೧೩೦-೨ ; ೧-೧೩೫-೫ ; ೧-೧೩೭-೧) ಎಂಬ ಹೆಸರುಗಳಿರುವವು. **ಉಲೂಖಲ**ವೆಂದರೆ ಈಗ ನಾವು ಉಪಯೋಗಿಸುತ್ತಿರುವ ಒರಳಿನಂತಿದ್ದ ಒಂದು ಕಲ್ಲಿನ ಮಧ್ಯಭಾಗದಲ್ಲಿ ಸ್ವಲ್ಪ ಹಳ್ಳ ಮಾತ್ರವಾಗಿತ್ತೆಂದು ಊಹಿಸಬಹುದು. ಈ ಉಲೂಖಲವೆಂಬ ಒರಳು **ಮುಸಲ** (ಒನಕೆ) ದಿಂದ ಧಾನ್ಯವನ್ನು ಕುಟ್ಟುವುದಕ್ಕಾಗಿ ಉಪಯೋಗಿಸಲ್ಪಡುತ್ತಿತ್ತು.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆ ಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವ, ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಫಲಕ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಬಟದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ. ಶುಚಿ ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪು ಬಣ್ಣವುಳ್ಳದ್ದಾಗಿರು ವುದು. ಇಂದ್ರನಿಗೂ, ವಾಯುವಿಗೂ ಶುದ್ಧವಾದ ಎಂದರೆ ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸು ವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದ ಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸು

ವುದುಂಟು. ಇವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ, ಯವಾಶಿರ** ಎಂಬ ಹೆಸರುಗಳಿವೆ.

## ಸೋಮರಸವನ್ನಿಡುವ ಪಾತ್ರೆಗಳು

ದೇವತೆಗಳಿಗೆ ಸೋಮವನ್ನು ಅರ್ಪಿಸಲು ಇಡುವ ಪಾತ್ರೆಗೆ **ಚಮೂ** ಎಂದು ಹೆಸರು. ಋತ್ವಿಗ್ಜನರು ಸೋಮಪಾನಮಾಡುವುದಕ್ಕೆ ಉಪಯೋಗಿಸುವ ಪಾತ್ರೆಗಳಿಗೆ **ಕಲಶ, ಚಮಸ** ಎಂದು ಹೆಸರು. ಕೆಲವು ಸಂದರ್ಭಗಳಲ್ಲಿ **ಚಮೂ** ಎಂಬ ಶಬ್ದವು **ಉಲೂಖಲ ಗ್ರಾವಾ** (ಒರಳು ಮತ್ತು ಜಜ್ಜುವಕಲ್ಲು, mortar and pestle) ಇವುಗಳನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಲ್ಪಟ್ಟಿರುವುದು. (ಋ. ಸಂ. ೧–೨೮–೯; ೪–೧೮–೩; ೬–೫–೨)

ಸೋಮಲತೆಯನ್ನು ಜಜ್ಜುವಾಗ ಸಾಧಾರಣವಾಗಿ ಅವುಗಳನ್ನು ಚರ್ಮಗಳ ಮೇಲೆ ಇಡುವುದು ರೂಢಿಯು ಈ ಚರ್ಮಕ್ಕೆ **ತ್ವಕ್** ಎಂದ ಹೆಸರು. ಇದಕ್ಕಾಗಿ ಗೋಚರ್ಮವನ್ನು ಉಪಯೋಗಿಸುತ್ತಿದ್ದರು. (ಋ. ಸಂ. ೧೦-೯೪-೯; ೧೦–೧೧೬–೪) ಸೋಮವನ್ನು ಶೇಖರಿಸಿ ಇಡುವ ಪಾತ್ರೆಗಳಿಗೆ **ಕೋಶ** (ಋ. ಸಂ. ೭–೧೦೧–೪; ೮–೨೦–೮) **ಸಧಸ್ಥ** (ಋ. ಸಂ. ೩–೬೨–೧೫; ೯–೧–೨; ೯–೧೭–೮) **ದ್ರು** (ಋ. ಸಂ. ೯–೧–೨– ; ೯–೬೫–೬ ; ೯-೯೮-೨) **ವನ** (ಋ. ಸಂ. ೨–೧೪–೯; ೯–೬೬–೯) **ದ್ರೋಣ** (ಋ. ಸಂ. ೯–೧೫–೭; ೯–೩೩–೨) ಇತ್ಯಾದಿ ಹೆಸರುಗಳಿವೆ. **ಸ್ರುವ** ಎಂದರೆ ಸೌಟು (ladle ಋ. ಸಂ. ೧–೧೧೬–೨೪) ಸೋಮರಸವನ್ನು ಸೋಸುವ ಬಟ್ಟೆ ಅಥವಾ ಜಾಲರಿಗೆ **ಪವಿತ್ರವೆಂದು** ಹೆಸರು. ಕೆಲವು ಸಂದರ್ಭಗಳಲ್ಲಿ ಬೆರಳಿನ ಸಂದಿಗಳಿಂದಲೂ ಸೋಮವನ್ನು ಸೋಸುತ್ತಿದ್ದರು.

ಸೋಮರಸವನ್ನು ಬೇರೆ ಪದಾರ್ಥಗಳ ಮಿಶ್ರಣವಿಲ್ಲದೆ ಉಪಯೋಗಿಸುವುದಕ್ಕೆ **ಶುಕ್ರ** (ಋ. ಸಂ. ೧–೧೩೭–೧ ; ೩–೩೨–೨ ; ೮–೨–೧೦) **ಶುಚಿ** (ಋ. ಸಂ. ೧–೫–೫ ; ೧–೩೦–೨ ; ೮–೨–೯) ಎಂದು ಹೇಳುವರು. ಈ ರಸದ ವರ್ಣದ **ಬಭ್ರು**, (ಋ.ಸಂ. ೯–೩೩–೨ ; ೯–೬೩–೪ ಮತ್ತು ೬) **ಹರಿತ** (ಋ.ಸಂ. ೯–೩–೯ ; ೯–೭–೬ ; ೯–೬೫–೫) **ಅರುಣ** (ಋ. ಸಂ. ೯–೪೦–೨ ; ೯–೪೫–೩) **ಅರುಷ** (ಋ. ಸಂ. ೯–೬೧–೨೧) **ಶೋಣ** (ಋ. ಸಂ. ೯–೯೭–೧೩) ಎಂಬ ನಾನಾವಿಧ ವರ್ಣವುಳ್ಳದ್ದಾಗಿರುವುದೆಂದೂ ಸುವಾಸನೆಯಿಂದ ಕೂಡಿರುವುದಾಗಿಯೂ (ಋ. ಸಂ. ೯–೯೭–೯, ೯–೧೦೭–೨) ವಿಧವಿಧವಾದ ವರ್ಣನೆಗಳಿರುವುವು.

ಸೋಮರಸಕ್ಕೆ ರುಚಿಯನ್ನುಂಟುಮಾಡುವುದಕ್ಕಾಗಿ ಕೆಲವು ದ್ರವ್ಯಗಳನ್ನು ಮಿಶ್ರಮಾಡುವರು. ಈ ಮಿಶ್ರಣಕ್ಕೆ ಆಶಿರದ್ರವ್ಯಗಳೆಂದು ಹೆಸರು. ಹಾಲನ್ನು ಮಿಶ್ರಣಮಾಡಿದ ಸೋಮರಸಕ್ಕೆ **ಗವಾಶಿರವೆಂದೂ, ಮೊಸರನ್ನು** ಮಿಶ್ರಣಮಾಡಿದ ಸೋಮರಸಕ್ಕೆ **ದಧ್ಯಾಶಿರವೆಂದೂ,** ಹಿಟ್ಟನ್ನು ಮಿಶ್ರಮಾಡಿದ ಸೋಮರಸಕ್ಕೆ **ಯವಾಶಿರವೆಂದೂ** ಹೇಳುವರು. ಸೋಮರಸವು ತೀವ್ರವೆಂದು ಕೆಲವು ವೇಳೆ ಹೇಳಲ್ಪಡುವುದು. ಆಗ ಅದು ತೀಕ್ಷ್ಣವಾದ ವಾಸನೆಯಿಂದ ಅಥವಾ ರುಚಿಯಿಂದ (pungent flavour) ಕೂಡಿರುವುದೆಂದು ತಿಳಿಯಬೇಕು. ಸೋಮರಸವನ್ನು ತೆಗೆದಮೇಲೆ ಉಳಿಯುವ ಸಿಪ್ಪೆಯಂತಿರುವ ಭಾಗಕ್ಕೆ **ಋಜೀಷ** ವೆಂದು ಹೆಸರು.

**ಗ್ರಾವಾ**—ಸೋಮರಸವನ್ನು ಜಜ್ಜುವ ಕಲ್ಲು. ಈ ಕಲ್ಲು **ಪೃಥುಬುಧ್ನಃ** ಎಂಬ ಶಬ್ದವು ವಿವರಿಸುವಂತೆ ಕೆಳಭಾಗದಲ್ಲಿ ಅಗಲವಾಗಿಯೂ, ಮೇಲೆ ಹಿಡಿಯಂತಿರುವುದಾಗಿಯೂ ಇರುವ ಗುಂಡುಕಲ್ಲು ; ಕಲ್ಬತ್ತಿನಲ್ಲಿರುವ ಅರೆಯುವ

ಕಲ್ಲಿನಂತೆ ಆಕಾರವುಳ್ಳ ಕಲ್ಲು. ಸಾಧಾರಣವಾಗಿ ಋಗ್ವೇದದಲ್ಲಿ ಸೋಮಲತೆಯನ್ನು ಜಜ್ಜುವುದಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು **ಗ್ರಾವಾ, ಅದ್ರಿ** ಎಂಬ ಶಬ್ದಗಳಿಂದ ಕರೆಯುವರು.

## ಆಶಿರದ್ರವ್ಯಗಳ ಉದಾಹರಣೆಗಳು

**ದಧ್ಯಾಶಿರಃ**— ಈ ಶಬ್ದಕ್ಕೆ ಭಾಷ್ಯಕಾರರು **ಅವನೀಯಮಾನಂ ದಧ್ಯಾಶೀರ್ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ** ಎಂದರೆ ಸೋಮರಸದಲ್ಲಿರುವ ದೋಷಪರಿಹಾರಾರ್ಥವಾಗಿ ಮೊಸರನ್ನು ಇದಕ್ಕೆ ಮಿಶ್ರಮಾಡುವುದರಿಂದ ಇದಕ್ಕೆ ದಧ್ಯಾಶಿರ ಎಂದು ಹೆಸರು ಎಂದರ್ಥಮಾಡಿರುವರು. ಸೋಮರಸಕ್ಕೆ ದಧಿಯನ್ನು ಮಾತ್ರವಲ್ಲದೆ ಹಾಲು ಹಿಟ್ಟು ಮೊದಲಾದ ಇತರ ದ್ರವ್ಯಗಳನ್ನು (ರುಚಿಗಾಗಿ) ಮಿಶ್ರಮಾಡಿ ಉಪಯೋಗಿಸುವುದು ರೂಢಿಯಲ್ಲಿತ್ತು. ಈ ವಿಚಾರವಾಗಿ ನಾವು ಈ ಋಗ್ವೇದಸಂಹಿತೆಯ ಭಾಗ ೧ ಪೇಜು 676 ರಲ್ಲಿ ವಿಸ್ತಾರವಾಗಿ ಬರೆದಿದ್ದೇವೆ. **ದಧ್ಯಾಶಿರಃ** ಎಂಬ ಶಬ್ದವು ೧-೧೮೭-೯ ಮತ್ತು ಮುಂದೆ ಕೊಟ್ಟಿರುವ ಇತರ ಋಕ್ಕುಗಳಲ್ಲಿಯೂ ಇರುವುದು—

**(೧) ಇಮಾ ಆಯಾತಮಿಂದವಃ ಸೋಮಾಸೋ ದಧ್ಯಾಶಿರಃ ಸುತಾಸೋ ದಧ್ಯಾಶಿರಃ ।**
(ಋ. ಸಂ. ೧-೧೩೭-೨)

**(೨) ಸುತಾ ಇಂದ್ರಾಯ ವಾಯವೇ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೫-೫೧-೭)

**(೩) ಇಮೇ ಇಂದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೭-೩೨-೪)

**(೪) ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೯-೨೨-೩)

**(೫) ಸುತಾ ಇಂದ್ರಾಯ ವಜ್ರಿಣೇ ಸೋಮಾಸೋ ದಧ್ಯಾಶಿರಃ ।**
(ಋ. ಸಂ. ೯-೬೩-೧೫)

**(೬) ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**
(ಋ. ಸಂ. ೯-೧೦೧-೧೨)

ಈ ದಧ್ಯಾಶಿರಶಬ್ದವಲ್ಲದೆ **ಗವಾಶಿರ, ಯವಾಶಿರ** ಮೊದಲಾದ ಇತರ ದ್ರವ್ಯಮಿಶ್ರಿತವಾದ ಸೋಮರಸಗಳು ಈ ಋಕ್ಕುಗಳಲ್ಲಿ ಪಠಿತವಾಗಿವೆ—

**(೧) ತೀವ್ರಾಃ ಸೋಮಾಸ ಆ ಗಹ್ಯಾಶೀರ್ವಂತಃ ಸುತಾ ಇಮೇ ॥**
(೧-೨೩-೧)

ಈ ಋಕ್ಕಿನಲ್ಲಿ **ಆಶೀರ್ವಂತಃ ಸೋಮಾಸಃ** ಎಂದು ಇರುವುದರಿಂದ ಸೋಮರಸಕ್ಕೆ ಹಾಲು ಮೊಸರು ಮೊದಲಾದ ಯಾವ ವಿಧವಾದ ಆಶಿರ ದ್ರವ್ಯಗಳನ್ನಾದರೂ ಬೆರಸಿರುವುದೆಂದು ಸಾಮಾನ್ಯವಾಗಿ ಹೇಳಿದೆ.

**(೨) ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ॥**
(ಋ. ಸಂ. ೧-೩೦-೨)

ಇಲ್ಲಿ ಸಮಾಶಿರಾಂ ಎಂದರೆ ಸೋಮರಸಕ್ಕೆ ಆಶಿರದ್ರವ್ಯಗಳನ್ನು ಚೆನ್ನಾಗಿ ಮಿಶ್ರಮಾಡಿರುವುದೆಂದು ಸಾಮಾನ್ಯವಾಗಿ ಹೇಳಿದೆ. ನಿರ್ದಿಷ್ಟವಾಗಿ ಯಾವ ದ್ರವ್ಯವನ್ನೂ ಹೇಳಿಲ್ಲ.

(೩) **ಸುಷುಮಾ ಯಾತಮದ್ರಿಭಿರ್ಗೋಶ್ರೀತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ ।**
**ಆ ರಾಜಾನಾ ದಿವಿಸ್ಪೃಶಾಸ್ಮತ್ರಾ ಗಂತಮುಪ ನಃ ॥**
**ಇಮೇ ವಾಂ ಮಿತ್ರಾವರುಣಾ ಗವಾಶಿರಃ ಸೋಮಾಃ ಶುಕ್ರಾ ಗವಾಶಿರಃ ॥**
(ಋ. ಸಂ. ೧-೧೩೭-೧)

ಇಲ್ಲಿ ಗೋಶ್ರೀತಾಃ ಎಂದರೆ ಗವಾಂ ಪಯೋಭಿರ್ಮಿಶ್ರಿತಾಃ ಹಸುವಿನ ಹಾಲಿನಿಂದ ಮಿಶ್ರಿತವಾದದ್ದು ಎಂದರ್ಥವು. ಇದೇ ಋಕ್ಕಿನ ಕೊನೆಯ ಪಾದದಲ್ಲಿರುವ ಗವಾಶಿರಃ ಎಂಬ ಶಬ್ದಕ್ಕೂ ಹಸುವಿನ ಹಾಲಿನಿಂದ ಮಿಶ್ರಿತವಾದ ಸೋಮವೆಂದೇ ಅರ್ಥವು.

(೪) **ಶುಚಿರಸಿ ಪುರುನಿಃಷ್ಠಾಃ ಕ್ಷೀರೈರ್ಮಧ್ಯತಃ ಆಶೀರ್ತಃ । ದಧ್ನಾ ಮಂದಿಷ್ಠಃ ಶೂರಸ್ಯ ॥**
(ಋ. ಸಂ. ೮-೨-೯)

ಇಲ್ಲಿ ಹಾಲು ಮತ್ತು ಮೊಸರು ಎರಡನ್ನೂ ಮಿಶ್ರಮಾಡಿದ ಬೇರೆ ಬೇರೆ ಎರಡು ರಸಗಳಿವೆಯೆಂದು ಹೇಳಿದೆ ಎಂದರೆ ಹಾಲನ್ನು ಮಿಶ್ರಮಾಡಿದ ಸೋಮರಸವೂ, ಮೊಸರನ್ನು ಮಿಶ್ರಮಾಡಿದ ಸೋಮರಸವೂ ಎರಡು ವಿಧವೂ ಇರುವುದೆಂದು ತಿಳಿಯಬೇಕು.

(೫) **ಸಂ ಶುಕ್ರಾಸಃ ಶುಚಯಃ ಸಂ ಗವಾಶಿರಃ ಸೋಮಾ ಇಂದ್ರಮಮಂದಿಷುಃ ॥**
(ಋ. ಸಂ. ೮-೫೨-೧೦)

ಇಲ್ಲಿ ಗವಾಶಿರ ಎಂದರೆ ಹಾಲು ಮಿಶ್ರಿತವಾದ ಸೋಮವೆಂದು ಸ್ಪಷ್ಟವಾಗಿ ಹೇಳಿದೆ.

(೬) **ಅಧಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ॥**
(ಋ. ಸಂ. ೮-೧೦೧-೧೦)

ಇಲ್ಲಿಯೂ ಗವಾಶಿರವೆಂಬ ಹಾಲು ಮಿಶ್ರಿತವಾದ ಸೋಮವನ್ನೇ ಹೇಳಿದೆ.

(೭) **ಯತ್ತೇ ಸೋಮ ಗವಾಶಿರೋ ಭಜಾಮಹೇ ॥**
(ಋ. ಸಂ. ೧-೧೮೭-೯)

(೮) **ಇಮಮಿಂದ್ರ ಗವಾಶಿರಂ ಚ ನಃ ಪಿಬ ।**
(ಋ. ಸಂ. ೩-೪೨-೭)

ಇಲ್ಲಿ ಗವಾಶಿರ ಮತ್ತು ಯವಾಶಿರ ಎಂಬ ಎರಡು ವಿಧವಾದ ಸೋಮರಸಗಳನ್ನೂ ಹೇಳಿದೆ.

(೯) **ಇಂದೋರಿಂದ್ರೋ ಯವಾಶಿರಃ ।**
(ಋ. ಸಂ. ೮-೯೨-೪)

(೧೦) ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾವಶತ್ ||

(ಋ. ಸಂ. ೨-೨೨-೧)

ಇಲ್ಲಿ ಯವಾಶಿರ ಎಂದರೆ ಹಿಟ್ಟುಮಿಶ್ರವಾದ ಸೋಮರಸವೆಂದು ಹೇಳಿದೆ.

(೧೧) ಅಶ್ವಮೇಧಸ್ಯ ದಾನಾಃ ಸೋಮಾ ಇವ ತ್ರ್ಯಾಶಿರಃ ||

(ಋ. ಸಂ. ೫-೨೭-೫)

ಇಲ್ಲಿ ಸೋಮರಸಕ್ಕೆ ಹಾಲು, ಮೊಸರು, ಯವ ಎಂಬ ಮೂರುವಿಧದ್ರವ್ಯಗಳನ್ನೂ ಮಿಶ್ರಮಾಡಿರುವುದೆಂದು ಹೇಳಿದೆ.

(೧೨) ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮಸ್ಯ ||

(ಋ. ಸಂ. ३-೪೮-೧)

ಇಲ್ಲಿ ರಸಾಶಿರ ಎಂದು ಹೇಳಿರುವುದರಿಂದ ಹಾಲು ಅಥವಾ ಮೊಸರು ಇವುಗಳಲ್ಲಿ ಯಾವುದನ್ನಾದರೂ ಮಿಶ್ರಮಾಡಿದ ಸೋಮವೆಂದರ್ಥವು.

## ಸೋಮರಸವನ್ನು ಸಂಸ್ಕರಿಸುವ ವಿಧಾನ

(ಐತರೇಯ ಬ್ರಾಹ್ಮಣದಲ್ಲಿರುವಂತೆ)

ಸೋಮರಸವನ್ನು ಹಿಂಡುವಾಗ ಉಪಯೋಗಿಸತಕ್ಕ ಸಾಧನಗಳನ್ನೂ, ಹಿಂಡುವ ಮತ್ತು ಶುದ್ಧಿಮಾಡುವ ಕ್ರಮವನ್ನೂ ಐತರೇಯ ಬ್ರಾಹ್ಮಣದಲ್ಲಿ ಈ ರೀತಿಯಲ್ಲಿ ವರ್ಣಿಸಿದೆ.

ಏತಾನ್ಯಸ್ಯ ಪುರುಸ್ತಾದುಪಕ್ಲೃಪ್ತಾನಿ ಭವಂತ್ಯಥ ಸೋಮಂ ರಾಜಾನಂ ಕ್ರೀಣಂತಿ ತೇ ರಾಜ್ಞ ಏವಾವೃತೌಪವಸಥಾತ್ಪ್ರತಿವೇಶ್ಯೈಶ್ಚರಂತ್ಯಥೌಪವಸಥ್ಯಮಹರೇತಾನ್ಯಧ್ವರ್ಯುಃ ಪುರಸ್ತಾದುಪ ಕಲ್ಪಯೇತಾಧಿಷವಣಂ ಚರ್ಮಾಧಿಷವಣೇ ಫಲಕೇ ದ್ರೋಣಕಲಶಂ ದಶಾಪವಿತ್ರಮದ್ರೀನ್ ಪೂತಭೃತಂ ಚಾಧವನೀಯಂ ಚ ಸ್ಥಾಲೀಮುದಂಚನಂ ಚಮಸಂ ಚ ತದ್ಯದೇತದ್ರಾಜಾನಂ ಪ್ರಾತರಭಿಷುಣ್ವಂತಿ ತದೇನಾನಿ ದ್ವೇಧಾ ವಿಗೃಹ್ಣೀಯಾದೇಭ್ಯನ್ಯಾನಿ ಸುನುಯಾನ್ಮಾಧ್ಯಂ ದಿನಾಯಾನ್ಯಾನಿ ಪರಿಶಿಂಷ್ಯಾತ್ ।

(ಐ. ಬ್ರಾ. ೭-೩೨.)

ಸಾಕ್ಷಾತ್ತಾಗಿ ಕರ್ಮವು ಆರಂಭವಾಗುವ ಮೊದಲನೆಯ ದಿನವೇ **ಅಧ್ವರ್ಯುವು** ರಸವನ್ನು ಹಿಂಡುವುದಕ್ಕೆ ಬೇಕಾದ ಸಾಧನಗಳನ್ನೆಲ್ಲಾ ಸಿದ್ಧವಾಗಿಟ್ಟುಕೊಂಡಿದ್ದು ರಸಪೇಷಣಕ್ಕೆ ಆರಂಭಿಸಬೇಕು. ಅಜಚರ್ಮ, ದ್ರೋಣಕಲಶ, ದಶಾಪವಿತ್ರ, ಪೂತಭೃತ್, ಆಧವನೀಯ, ಸ್ಥಾಲೀ, ಚಮಸ, ಗ್ರಾವಾ, ಅದ್ರಿ, ಇತ್ಯಾದಿಗಳೇ ಅಲ್ಲಿಗೆ ಬೇಕಾದ ಉಪಕರಣಗಳು. ಈ ಉಪಕರಣಗಳಿಂದ ರಸವನ್ನು ಪಡೆಯುವ ಕ್ರಮವು ಈ ರೀತಿಯಿದೆ. (ಅಥವಾ ಕ್ರಮಭೇದಗಳಲ್ಲಿ ಇದೊಂದಿರಬಹುದು.)

ಅಧ್ವರ್ಯುವು ಚರ್ಮವನ್ನು ಹರಡಿ ಅದರಮೇಲೆ **ಅಂಶು** (ವಲ್ಲೀ) ರೂಪವಾದ ಸೋಮಲತೆಯನ್ನು ಇಡುತ್ತಾನೆ. ಮೊದಲು ಅದರ ಮೇಲೆ ಅಧಿಷವಣಫಲಕವನ್ನು (ಹಲಗೆ ಅಥವಾ ಕಲ್ಲು) ಇಟ್ಟು ಗ್ರಾವದಿಂದ ಕುಟ್ಟುತ್ತಾನೆ ಅನಂತರ

ಜಜ್ಜಲ್ಪಟ್ಟ ಆ ಸೋಮಲತೆಗಳನ್ನು ಫಲಕದ ಅಡಿಯಿಂದ ತೆಗೆದು ಒಟ್ಟಿಗೆ ಕುಟ್ಟುತ್ತಾನೆ. ಆಗ ಇನ್ನೊಂದು ಫಲಕವನ್ನೂ ಅದರ ಮೇಲಿಟ್ಟು ಹಿಂದಿನ ದಿನ ಶೇಖರಿತವಾದ ವಸತೀವರೀ ಪಾತ್ರೆಯ ನೀರಿನಿಂದ ಈ ಫಲಕದ ಮೇಲೆ ನೀರನ್ನು ಸುರಿಸಿ ಬಲಗಡೆ ಇರತಕ್ಕ ಹೋತೃವಿನ ಚಮಸಪಾತ್ರೆಯಲ್ಲಿ ಈ ಜಜ್ಜಿದ್ದೂ, ವಸತೀವರಿಯಿಂದ ನೆನೆದದ್ದೂ ಆದ ಸೋಮಲತೆಯನ್ನು ಮೂರುಸಲ ಕಲಕಿಸುತ್ತಾನೆ. ಈ **ನಿಗ್ರಾಭ** ಕ್ರಮವಾದನಂತರ ವಸತೀವರೀಪಾತ್ರೆಯಲ್ಲಿ ಅದ್ದಿ ಅದನ್ನು ನೀರಿನಿಂದ ತೋಯಿಸುತ್ತಾನೆ. ಅನಂತರ ಗ್ರಾವದ ಮೇಲಿಟ್ಟು, ಅವುಗಳ ಮೇಲೆ ಕೊಂಚ ತೃಣವನ್ನೂ ಹರಡಿ ರಸವನ್ನು ಹಿಂಡಲು ಇನ್ನೊಂದು ಗ್ರಾವದಿಂದ ಕುಟ್ಟುತ್ತಾನೆ. ಈ ವಿಧವಾಗಿ ಕುಟ್ಟುವುದಕ್ಕೆ **ಅಭಿಷವಣ**ವೆಂದು ಹೆಸರು ಈ ಅಭಿಷವಣದ ಕ್ರಮದಲ್ಲಿ ಮೂರು ಪರ್ಯಾಯಗಳಿವೆ. ಮೊದಲನೆಯದಾಗಿ ಮೇಲೆ ವಿವರಿಸಿದಂತೆ ಅಧ್ವರ್ಯುವು ಎಂಟುಸಲ ಕುಟ್ಟಿ **ನಿಗ್ರಾಭ** ಕ್ರಮವನ್ನು ನೆರವೇರಿಸಿ, ಎರಡನೆಯ ಪರ್ಯಾಯದಲ್ಲಿ ಹನ್ನೊಂದು ಸಲವೂ ಮೂರನೆಯ ಸಲ ಹನ್ನೆರಡು ಸಲವೂ ಕುಟ್ಟುತ್ತಾನೆ. ಪೂರ್ವಭಾವಿಯಾದ ಈ **ಅಭಿಷವ** ಕ್ರಮವು ನೆರವೇರಿದನಂತರ ಮೇಲೆ ಹೇಳಿದ ಕ್ರಮದಲ್ಲಿಯೇ (ಆಯಾ ಸವನಕ್ಕೆ ಮಾತ್ರ ಬೇಕಾದಂತೆ) **ಮಹಾಭಿಷವ**ವನ್ನೂ ಸಹ ನಿರ್ವಹಿಸಿ ಹಿಂಡಿದ ರಸವನ್ನು **ಆಧವನೀಯ** ಪಾತ್ರೆಯಲ್ಲಿ ಸುರಿಯುತ್ತಾನೆ. ಅನಂತರ **ದಶಾಪವಿತ್ರ**ವೆಂಬ ಬಟ್ಟೆಯಿಂದ ಅದನ್ನು ಶೋಧಿಸಿ ಅದರ ಅಡಿಯಲ್ಲಿರುವ **ಪೂತಭೃತ್ತೆಂ**ಬ ಪಾತ್ರೆಗೆ ಸೇರಿಸುತ್ತಾನೆ. ಈ ಕಾಲದಲ್ಲಿ ಈ **ದಶಾಪವಿತ್ರ**ವೆಂಬ ಬಟ್ಟೆಯನ್ನು **ಉದ್ಗಾತೃವು** ಹಿಡಿದಿರಬೇಕು.

೧-೧೩೭-೫ನೇ ಋಕ್ಕಿನಲ್ಲಿ **ಮರ್ಮೃಜಂತ** ಎಂಬ ಪದಕ್ಕೆ **ಅಧ್ವರ್ಯವೋ ದಶಾಪವಿತ್ರೇಣ ಸಂಮಾರ್ಜಯಂತಿ ।** ಅಧ್ವರ್ಯುಗಳು ದಶಾಪವಿತ್ರದಿಂದ ಶೋಧಿಸುತ್ತಾರೆ ಎಂದು ಮೇಲೆ ವಿವರಿಸಿದ ಅಂಶವನ್ನು ತಿಳಿಸಿದ್ದಾರೆ. ಇಲ್ಲಿ **ಅದ್ರಿಭಿಃ ಸುತಾನಾಂ** ಎಂದು ಹೇಳಿರುವ ಅಂಶವನ್ನು ತೈತ್ತಿರೀಯಸಂಹಿತೆಯಲ್ಲಿ ಈ ರೀತಿಯಾಗಿ ವರ್ಣಿಸಿದೆ.

**ಆ ದದೇ ಗ್ರಾವಾಸ್ಯಧ್ವರಕೃದ್ದೇವೇಭ್ಯೋ ಗಂಭೀರಮಿಮಮಧ್ವರಂ ಕೃಧ್ಯುತ್ತಮೇನ ಪವಿನೇಂದ್ರಾಯ ಸೋಮಗ್‌ಂ ಸುಷುತಂ ಮಧುಮಂತಂ ಪಯಸ್ವಂತಂ ವೃಷ್ಟಿವನಿಂ ।**

(ತೈ. ಸಂ. ೧-೪-೧.)

ದೇವತೆಗಳಿಗೆ ಯಜ್ಞವನ್ನು ನಿರ್ವಹಿಸಲು ಸಾಧನವಾದ ಎಲೈ ಅಭಿಷವಗ್ರಾವವೇ (ಉಪಾಂಶುಗ್ರಹ ಅಥವಾ ಉಪಾಂಶುಸವನ), ನಾನು ಸೋಮರಸವನ್ನು ಹಿಂಡುವುದಕ್ಕಾಗಿ ನಿನ್ನನ್ನು ಹಿಡಿದಿದ್ದೇನೆ. ನಿನ್ನ ಚೂಪಾದ ಮೊನೆಯಿಂದ ಮಾಧುರ್ಯಭರಿತವಾದದೂ, ರಸಭರಿತವಾದುದೂ, ವೃಷ್ಟಿಸಾಧಕವಾದುದೂ ಆದ ಸೋಮವನ್ನು **ಇಂದ್ರ**ನಿಗಾಗಿ ಹಿಂಡಿ ಯಜ್ಞವನ್ನು ಗಭೀರವಾದುದನ್ನಾಗಿ ಮಾಡು. [ಈ ಮಂತ್ರದಿಂದ ಗ್ರಾವವನ್ನು (ಜಜ್ಜುವ ಕಲ್ಲನ್ನು) ಹಿಡಿಯಬೇಕು.]

**ಇಂದ್ರಾಯ ತ್ವಾ ವೃತ್ರಘ್ನ ಇಂದ್ರಾಯ ತ್ವಾ ವೃತ್ರತುರ ಇಂದ್ರಾಯ ತ್ವಾಽಭಿಮಾತಿಘ್ನ ಇಂದ್ರಾಯ ತ್ವಾಽದಿತ್ಯವತ ಇಂದ್ರಾಯ ತ್ವಾ ವಿಶ್ವದೇವ್ಯಾವತೇ ॥**

ವೃತ್ರಘ್ನನಾದ ಎಲೈ ಇಂದ್ರನೇ, ಇದು ನಿನಗೆ ಅರ್ಪಿತವಾಗುತ್ತದೆ; ವೃತ್ರನನ್ನು ಜಯಿಸಿದ ಇಂದ್ರನೇ, ಇದು ನಿನಗೆ; ಶತ್ರುಘ್ನನಾದ ಇಂದ್ರನೇ, ಇದು ನಿನಗೆ; ಆದಿತ್ಯರೊಡಗೂಡಿದ ಇಂದ್ರನೇ, ಇದು ನಿನಗೆ; ವಿಶ್ವದೇವತೆಗಳೊಡಗೂಡಿದ ಇಂದ್ರನೇ, ಇದು ನಿನಗೆ. [ಈ ಮಂತ್ರದಿಂದ ಮೊದಲನೆಯ ಆಹುತಿಗಾಗಿ ಐದು ಪ್ರತ್ಯೇಕವಾದ ಅರ್ಪಣೆಯನ್ನು ಸೂಚಿಸಿ ಅಳತೆಯನ್ನು ಮಾಡಬೇಕು]—

**ಶ್ವಾತ್ರಾಃ ಸ್ಥ ವೃತ್ರತುರೋ ರಾಧೋಗೂರ್ತಾ ಅಮೃತಸ್ಯ ಪತ್ನೀಸ್ತಾ ದೇವೀರ್ದೇವತ್ರೇಮಂ ಯಜ್ಞಂ ಧತ್ತೋಪಹೂತಾಃ ಸೋಮಸ್ಯ ಪಿಬತೋಪಹೂತೋ ಯುಷ್ಮಾಕಂ ಸೋಮಃ ಪಿಬತು ॥**

ರಸಭರಿತರೂ, ವೃತ್ರನನ್ನು ಜಯಿಸಿದವರೂ, ಅಮೃತಪತ್ನಿಯರೂ ಆದ ಎಲೈ ಅಬ್ದೇವಿಯರೇ, ನಿಮ್ಮ ದಾನಾದಿಗಳಿಂದ ಹರ್ಷಕಾರಕಿಯರಾಗಿ, ಈ ನಮ್ಮ ಯಜ್ಞವನ್ನು ದೇವತೆಗಳ ನಡುವೆ ಸ್ಥಾಪಿಸಿರಿ. ನೀವು ನಮ್ಮಿಂದ ಆಹೂತರಾಗಿ ಸೋಮರಸವನ್ನು ಪಾನಮಾಡಿರಿ. ನಿಮ್ಮಿಂದ ಆಹೂತನಾದ **ಸೋಮನೂ** ಪಾನಮಾಡಲಿ. [ಈ ಮಂತ್ರದಿಂದ ಸೋಮಲತೆಯ ಮೇಲೆ ನೀರನ್ನು ಪ್ರೋಕ್ಷಿಸಬೇಕು].

**ಯತ್ತೇ ಸೋಮ ದಿವಿ ಜ್ಯೋತಿರ್ಯತ್ಪೃಥಿವ್ಯಾಂ ಯದುರಾವಂತರಿಕ್ಷೇ ತೇನಾಸ್ಮೈ ಯಜಮಾನಾಯೋರು ರಾಯಾ ಕೃಧ್ಯಧಿ ದಾತ್ರೇ ವೋಚಃ ।**

ಎಲೈ ಸೋಮನೇ, ದ್ಯುಲೋಕದಲ್ಲಿಯೂ, ಪೃಥ್ವಿಯ ಮೇಲೆಯೂ, ವಿಸ್ತೃತವಾದ ಅಂತರಿಕ್ಷದಲ್ಲಿಯೂ ಹರಡಿರತಕ್ಕ ನಿನ್ನ ತೇಜಸ್ಸಿನಿಂದ ಈ ಯಜ್ಞಕರ್ತನಿಗೆ ಪ್ರಭೂತವಾಗಿ ಧನವನ್ನು ಒದಗಿಸು; ಹವಿರ್ದಾತನಿಗೆ ಅನುಗ್ರಹವನ್ನು ತೋರಿಸು. [ಈ ಮಂತ್ರದಿಂದ ಸೋಮದೊಂದಿಗೆ ಉದಕವನ್ನು ಮಿಶ್ರಮಾಡಬೇಕು].

**ಧಿಷಣೇ ವೀಡೂ ಸತೀ ವೀಡಯೇಥಾಮೂರ್ಜಂ ದಧಾಥಾಮೂರ್ಜಂ ಮೇ ಧತ್ತಂ ಮಾ ವಾಗ್ಂ ಹಿಗ್ಂಸಿಷಂ ಮಾ ಮಾ ಹಿಗ್ಂಸಿಷ್ಟಂ ।**

ಬಲಶಾಲಿಗಳಾದ ಧಿಷಣಗಳೇ, ನಿಮ್ಮ ಶಕ್ತಿಯು ವೃದ್ಧಿಯಾಗಲಿ. ಶಕ್ತಿಯನ್ನು ಸಂಗ್ರಹಿಸಿ ನನಗೂ ಶಕ್ತಿಯನ್ನು ಕೊಡಿ. ನಾನು ನಿಮ್ಮನ್ನು ಹಿಂಸಿಸುವುದಿಲ್ಲ. ನೀವು ನನ್ನನ್ನು ಹಿಂಸಿಸಬೇಡಿ. [ಈ ಮಂತ್ರದಿಂದ ಅಭಿಷವಫಲಕಗಳನ್ನು ಮುಟ್ಟಬೇಕು].

**ಪ್ರಾಗಪಾಗುದಗಧರಾಕ್ಸ್ವಾಸ್ತ್ವಾ ದಿಶ ಆ ಧಾವಂತ್ವಂಬ ನಿ ಷ್ವರ ।**

ಪುರೋವರ್ತಿಯೂ, ಪಶ್ಚಾದ್ವರ್ತಿಯೂ, ಊರ್ಧ್ವವರ್ತಿಯೂ, ಅಧೋವರ್ತಿಯೂ ಆಗಿರತಕ್ಕ ದಿಕ್ಕಿನ ಅಂತರಗಳು ನಿಮ್ಮನ್ನು ತ್ವರೆಗೊಳಿಸಲಿ; ಮಾತೆಯೇ, ಶೀಘ್ರವಾಗಿ ಹೊರಕ್ಕೆ ಬಾ. [ಈ ಮಂತ್ರವು ನಿಗ್ರಾಭ ಕ್ರಮಕ್ಕೆ ಸೇರಿದುದು. ಉನ್ನೇತೃವು ಉದಕವನ್ನು ತಂದು ಹೋತೃವಿನ ಪಾತ್ರೆಗೆ ಸುರಿಯುತ್ತಾನೆ, ಅದರೊಂದಿಗೆ ಸೋಮರಸವೂ ಬೀಳುತ್ತದೆ].

**ಯತ್ತೇ ಸೋಮಾದಾಭ್ಯಂ ನಾಮ ಜಾಗೃವಿ ತಸ್ಮೈ ತೇ ಸೋಮ ಸೋಮಾಯ ಸ್ವಾಹಾ ॥**

[ಈ ಮಂತ್ರದಿಂದ ಪ್ರತಿಪ್ರಸ್ಥಾತೃವು ತಾನು ತೆಗೆದಿದ್ದ ಆರು ಸೋಮಲತೆಗಳನ್ನೂ ಕೆಳಗಿಡುತ್ತಾನೆ].

ಈ ರೀತಿಯಾಗಿ ಸೋಮರಸದ ಉತ್ಪತ್ತಿಯೂ, ಶುದ್ಧಿಯೂ ಆದನಂತರ **ಇಂದ್ರವಾಯು**ಗಳನ್ನು ಇದರ ಪಾನಕ್ಕಾಗಿ ಬರಬೇಕೆಂದು ಪ್ರಾರ್ಥಿಸಿದೆ. ಈ ಪ್ರಾರ್ಥನೆಯು ತೈತ್ತಿರೀಯಸಂಹಿತೆಯಲ್ಲಿ ಈರೀತಿ ಇದೆ.

**ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ । ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ । ಉಪಯಾಮಗೃಹೀ-**

**ತೋऽಸಿ ವಾಯವೇ ತ್ವೇಂದ್ರವಾಯೂ ಇಮೇ ಸುತಾಃ । ಉಪ ಪ್ರಯೋಭಿರಾಗತಮಿಂದವೋ ವಾಮುಶಂತಿ ಹಿ । ಉಪಯಾಮಗೃಹೀತೋऽಸೀಂದ್ರವಾಯುಭ್ಯಾಂ ತ್ವೈಷ ತೇ ಯೋನಿಃ ಸಜೋಷಾಭ್ಯಾಂ ತ್ವಾ ॥**

(ತೈ. ಸಂ. ೧-೪-೪)

ಶುದ್ಧವಾದ ರಸವನ್ನು ಪಾನಮಾಡತಕ್ಕ ಎಲೈ ವಾಯುವೇ, ನಿನ್ನ ಸಹಸ್ರಸಂಖ್ಯಾಕವಾದ ಅಶ್ವಗಳೊಂದಿಗೆ ದಯಮಾಡು. ನಿನ್ನ ಪ್ರಥಮ ಪಾನಕ್ಕಾಗಿ ಈ ಮಧುರವಾದ ಸೋಮರಸವು ಹಿಂಡಿ ಸಿದ್ಧವಾಗಿದೆ. ಎಲೈ ಇಂದ್ರಾವಾಯುಗಳೇ, ಈ ಸೋಮರಸಗಳು ನಿಮ್ಮ ಆಗಮನವನ್ನು ಬಯಸುತ್ತಿವೆ. ಪರಸ್ಪರವಾಗಿ ಸಹಚಾರಿಗಳಾದ ನೀವು ಬಂದು ನಿಮಗಾಗಿ ಸಿದ್ಧವಾಗಿಯೂ, ಶುದ್ಧವಾಗಿಯೂ ಇರುವ ಈ ರಸವನ್ನು ಪಾನಮಾಡಿರಿ ಎಂದು ಪ್ರಾರ್ಥಿಸಿದೆ.

ಅಭಿಷುತವಾದನಂತರ ಅಧ್ವರ್ಯುಗಳು ಈ ರಸವನ್ನು ಅರ್ಪಣೆಗಾಗಿ ಸಿದ್ಧಪಡಿಸಿಕೊಳ್ಳಬೇಕಾದ ಕ್ರಮವನ್ನೂ, ಆ ಕಾಲದಲ್ಲಿ ಪಠಿಸಬೇಕಾದ ಮಂತ್ರಗಳನ್ನೂ ತೈತ್ತರೀಯಸಂಹಿತೆಯಲ್ಲಿ ಈ ರೀತಿಯಾಗಿ ತಿಳಿಸಿದೆ. ಇದಕ್ಕೆ **ಉಪಾಂಶುಗ್ರಹಾಭಿಧಾನವೆಂದು** ಹೆಸರು. (ತೈ. ಸಂ. ೧-೪-೨)

**೧. ವಾಚಸ್ಪತಯೇ ಪವಸ್ವ ವಾಜಿನ್ವೃಷಾ ವೃಷ್ಣೋ ಅಗ್‌ಂಶುಭ್ಯಾಂ ಗಭಸ್ತಿಪೂತೋ ದೇವೋ ದೇವಾನಾಂ ಪವಿತ್ರಮಸಿ ಯೇಷಾಂ ಭಾಗೋऽಸಿ ತೇಭ್ಯಸ್ತ್ವಾ (ಗೃಹ್ಣಾಮಿ)**

**ಹೇ ವಾಜಿನ್ನನ್ನಪ್ರದ ಸೋಮ ಪತಯೇ ಪಾಲಕದೇವಾರ್ಥಂ ವಾಚಃ ಸಂಬಂಧಿನಾ ಮಂತ್ರೇಣ ಪವಸ್ವ ಶುದ್ಧೋ ಭವ ।** ಅನ್ನಪ್ರದನಾದ ಎಲೈ ಸೋಮನೇ, ಪಾಲಕನಾದ ದೇವನಿಗಾಗಿ ನೀನು ವಾಕ್ಸಂಬಂಧಿಯಾದ ಮಂತ್ರಗಳಿಂದ ಶುದ್ಧನಾಗು. ಇದಕ್ಕೆ ಪೂರ್ವದಲ್ಲಿಯೇ ನೀನು ಅರಣ್ಯದಲ್ಲಿ ಸೂರ್ಯರಶ್ಮಿಗಳಿಂದ ಶುದ್ಧನಾಗಿ, ಈಗ ಅಂತರ್ಧಾಪಿತವಾದ ಸೋಮಾಂಶುಗಳಿಂದ ಪುನಃ ಪೂತನಾಗು. ನೀನು ದೇವತೆಗಳಲ್ಲೆಲ್ಲಾ ದೇವತೋತ್ತಮನಾಗಿ ನಿನ್ನನ್ನು ಪಾನಮಾಡತಕ್ಕವನ ಶುದ್ಧಿಗೂ ಕಾರಣನಾಗಿದ್ದೀಯೆ. ನೀನು ಯಾವ ದೇವತೆಗಳಿಗಾಗಿ ನಿರ್ದಿಷ್ಟವಾಗಿದ್ದೀಯೋ ಅವರಲ್ಲಿಗೆ ಈಗ ನಿನ್ನನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. [ಉಪಾಂಶುಗ್ರಹವೆಂಬ ಸಂಸ್ಕಾರದ ಈ ಭಾಗದಲ್ಲಿ ಪ್ರತಿಪ್ರಸ್ಥಾತೃವಿನಿಂದ ಹಿಡಿಯಲ್ಪಟ್ಟ ಪಾತ್ರೆಗೆ ಅಧ್ವರ್ಯುವು ರಸವನ್ನು ಸುರಿಯುತ್ತಾನೆ. ಆ ಪಾತ್ರೆಯಲ್ಲಿ ಎರಡು ಅಂಶುಗಳು ಇದ್ದು ಈ ರಸವನ್ನು ಶುದ್ಧವಾದುದನ್ನಾಗಿ ಮಾಡಬೇಕು. ಈ ವಿಧಿಯನ್ನು **ವಾಚಸ್ಪತಯೇ ಪವಸ್ವ** ಎಂಬ ಮಂತ್ರಭಾಗವನ್ನು ಪಠಿಸುತ್ತಾ ನೆರವೇರಿಸಬೇಕು.

**೨. ಸ್ವಾಂ ಕೃತೋऽಸಿ ಮಧುಮತೀರ್ನ ಇಷಸ್ಕೃಧಿ ವಿಶ್ವೇಭ್ಯಸ್ತ್ವೇಂದ್ರಿಯೇಭ್ಯೋ ದಿವ್ಯೇಭ್ಯಃ ಪಾರ್ಥಿವೇಭ್ಯಃ ।**

ಎಲೈ ಉಪಾಂಶುಗ್ರಹವೇ, ನೀನು ನಮ್ಮಿಂದ ಸ್ವೀಕೃತನಾಗಿದ್ದೀಯೆ. ನಮ್ಮ ಅನ್ನವನ್ನು ಮಾಧುರ್ಯಪೂರಿತವನ್ನಾಗಿ ಮಾಡು. ದಿವ್ಯಲೋಕಸ್ಥಿತವಾದುದೂ, ಪಾರ್ಥಿವಲೋಕಸ್ಥವಾದುದೂ ಆದ ಸಕಲ ಶಕ್ತಿಗಳ ವೃದ್ಧಿಗೂ ನಿನ್ನನ್ನು ಸ್ವೀಕರಿಸುತ್ತೇನೆ.

[ಈ ಮಂತ್ರದಿಂದ ಪಾತ್ರೆಯನ್ನು ತೆಗೆದುಕೊಂಡು ಅದನ್ನು ವೀಕ್ಷಿಸಿ ಎಡಗೈಯಿನಲ್ಲಿ ಉಜ್ಜಬೇಕು.]

೩. **ಮನಸ್ತ್ವಾಷ್ಟು**—ಮನಸ್ಸು ನಿನ್ನನ್ನು ವ್ಯಾಪಿಸಲಿ. [ಈ ಮಂತ್ರದಿಂದ ಉಪಸ್ಥಾನವು.]

೪. **ಉರ್ವಂತರಿಕ್ಷಮನ್ವಿಹಿ**—ವಿಸ್ತೃತವಾದ ಅಂತರಿಕ್ಷವನ್ನು ದಾಟಿ ಆಹವನೀಯದ ಪ್ರದೇಶಕ್ಕೆ ದಯಮಾಡು. [ಅಧ್ವರ್ಯುವು ಈ ಮಂತ್ರವನ್ನು ಪಠಿಸಿ ಆಹವನೀಯದ ಪ್ರದೇಶಕ್ಕೆ ಬರುತ್ತಾನೆ.]

೫. **ಸ್ವಾಹಾ ತ್ವಾ ಸುಭವಃ ಸೂರ್ಯಾಯ—(ಸೂರ್ಯಾಯ ಸ್ವಾಹಾ)** [ಈ ಮಂತ್ರದಿಂದ ಅಗ್ನಿಯಲ್ಲಿ ರಸವನ್ನರ್ಪಿಸುವುದು.]

**(ಸ್ವಾಹಾ) ದೇವೇಭ್ಯಸ್ತ್ವಾ ಮರೀಚಿಪೇಭ್ಯಃ**—[ಇದೂ ಸಹ ಮೇಲಿನ ನಿಯಮವು.] ಇದೊಂದು ಕ್ರಮ; ಅಥವಾ **ಸ್ವಾಹಾ ತ್ವಾ ಸುಭವಃ ಸೂರ್ಯಾಯ ದೇವೇಭ್ಯಸ್ತ್ವಾ ಮರೀಚಿಪೇಭ್ಯಃ** ಎಂದು ಒಟ್ಟಿಗೆ ಹೇಳಿ ಅರ್ಪಿಸುವುದು ಇನ್ನೊಂದು ಕ್ರಮ.

೬. **ಏಷ ತೇ ಯೋನಿಃ ಪ್ರಾಣಾಯ ತ್ವಾ**—ಇದೇ ನಿನ್ನ ಉತ್ಪತ್ತಿಸ್ಥಾನವು. [ಎಂದು ಈ ಮಂತ್ರವನ್ನು ಪಠಿಸಿ ಉಳಿದ ಶೇಷವನ್ನು ಆಗ್ರಯಣಸ್ಥಾಲಿಯೊಳಗೆ ಸುರಿದು ಬರಿದಾದ ಪಾತ್ರೆಯಲ್ಲಿ ಒಂದು ಲತೆಯನ್ನು ಹಾಕಬೇಕು.]

ಇದೇ ಕ್ರಮವನ್ನು ಕೊಂಚ ವ್ಯತ್ಯಾಸಮಾಡಿ ಶತಪಥಬ್ರಾಹ್ಮಣದಲ್ಲಿ **ಅಥ ರಾಜಾನಮುಪಾವಹರತಿ । ಇಯಂ ವೈ ಪ್ರತಿಷ್ಠಾ** (ಶ. ಬ್ರಾ. ೩–೯–೩–೨ ರಿಂದ ೩೩) ಇತ್ಯಾದಿ ವಾಕ್ಯಗಳಿಂದ ಅಧ್ವರ್ಯುವಿನ ಕರ್ತವ್ಯಗಳನ್ನೂ ಅವನು ಆಹುತಿಗಾಗಿ ಸೋಮರಸವನ್ನು ಸಿದ್ಧಪಡಿಸಿ ತೆಗೆದುಕೊಂಡು ಹೋಗುವುದನ್ನೂ ತಿಳಿಸಿದೆ.

**ಶುಕ್ರಾಃ—ಶುಭ್ರಾಃ ದೀಪ್ತಾಃ ।** ಶುಭ್ರವಾದುದು; ಪ್ರಕಾಶಮಾನವಾದುದು ಎಂದರ್ಥಮಾಡಿದೆ.

## ಪವಿತ್ರಶಬ್ದದ ಅರ್ಥವಿವರಣೆ

**ಪವಿತ್ರಂ**—ಪವಿತ್ರ ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಕಷ್ಟ. **ಊರ್ಣಾಮಯಂ ಪವಿತ್ರಂ ಸೋಮಾಂತರ್ಧಾಯಕಂ ।** ಎಂದರೆ **ಊರ್ಣಾ** (ತುಪ್ಪಟ) ಮಯವಾದ ಈ ಪವಿತ್ರವನ್ನು ಸೋಮರಸದೊಳಗಿಟ್ಟರೆ ಶುದ್ಧಿಯಾಗುವುದು ಎಂಬುದು ಒಂದು ಕ್ರಮ. ಅಥವಾ ಇದನ್ನು ಒಂದರಿಯಂತೆ ಶೋಧಿಸುವ ಸಾಧನವನ್ನಾಗಿ ಮಾಡಿ, ಅದರಲ್ಲಿ ಸೋಮರಸವನ್ನು ಸುರಿದು ಶುದ್ಧಿಮಾಡುವ ಕ್ರಮವಿನ್ನೊಂದು. ಪ್ರಾಯಶಃ ಒಂದರಿಯಂತಿರುವುದೇ ಇಲ್ಲಿ ಸೂಚಿಸಿರುವಂತಿದೆ.

ನಿರುಕ್ತಕಾರರು ಈ ಪದಕ್ಕೆ ಬೇರೆ ಬೇರೆ ಅರ್ಥಗಳನ್ನು ಹೇಳಿದ್ದಾರೆ. ಆದರೆ ಪ್ರಯೋಜನವು ಒಂದೇ ಎಂದೂ ತೋರಿಸಲು, **ಪವಿತ್ರಂ ಪುನಾತೇಃ** (ನಿ. ೫–೬) ಶುದ್ಧಿಮಾಡುವುದರಿಂದ ಇದಕ್ಕ ಪವಿತ್ರವೆಂದು ಹೆಸರು ವಿವರಿಸಿ.

೧. **ಮಂತ್ರಃ ಪವಿತ್ರಮುಚ್ಯತೇ ।** ಮಂತ್ರಕ್ಕೆ ಪವಿತ್ರವೆಂದು ಹೆಸರು ಎಂದು **ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।** (ಸಾ. ವೇ. ೫–೨–೮–೫; ೨–೬೫೨) ಎಂಬ ವಾಕ್ಯವನ್ನುದಹರಿಸಿ ಅಲ್ಲಿ ಮಂತ್ರವೆಂಬರ್ಥವೆಂದೂ,

೨. **ರಶ್ಮಯಃ ಪವಿತ್ರಮುಚ್ಯತೇ ।** ರಶ್ಮಿಗಳಿಗೂ ಪವಿತ್ರವೆಂದು ಹೆಸರು.

೩. **ಆಪಃ ಪವಿತ್ರಮುಚ್ಯಂತೇ ।** ಉದಕಗಳಿಗೂ ಪವಿತ್ರವೆಂದು ಹೆಸರು, ಎಂದು

**ಶತಪವಿತ್ರಾಃ ಸ್ವಧಯಾ ಮದಂತೀರ್ದೇವೀರ್ದೇವಾನಾಮಪಿ ಯಂತಿ ಪಾಥಃ ।**

(ಋ. ಸಂ. ೭-೪೭-೩)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಉದಕ**ವೆಂದು ತೋರಿಸಿದ್ದಾರೆ. ಆದರೆ, ಪ್ರಕೃತವಾದ ಋಕ್ಕಿನಲ್ಲಿ ಶುದ್ಧಿಮಾಡುವುದು ಎಂದಾಗುತ್ತದೆಯೇ ಹೊರತು, ನಿರುಕ್ತಕಾರರು ಹೇಳಿರುವ ಉದಕ, ರಶ್ಮಿ, ಮಂತ್ರ ಇವುಗಳಾವುದೂ ಆಗುವುದಿಲ್ಲ. ಜಾಲಕರೂಪವಾದ ಸಾಧನವೆಂದೇ ಅರ್ಥ. ಕೆಲವು ವೇಳೆ ದರ್ಭೆಗಳ ಸಮುದಾಯವನ್ನು ಪಾತ್ರೆಯ ಮೇಲಿಟ್ಟು, ಅದರ ಮೇಲೆ ರಸವನ್ನು ಸುರಿದು ಶುದ್ಧಿಮಾಡುವುದೂ ಉಂಟು. ಇಲ್ಲಿ ಊರ್ಣಾಮಯವೆಂದು ವಿವರಿಸಿರುವುದರಿಂದ ತುಪ್ಪಟದಿಂದ ಮಾಡಿದ ಜಾಲರಿಯಾಗಿರಬೇಕು.

**ಉಚ್ಛ್ರಿಷ್ಟಂ ಚಮ್ವೋರ್ಭರ ಸೋಮಂ ಪವಿತ್ರ ಆ ಸೃಜ । ನಿ ಧೇಹಿ ಗೋರಧಿ ತ್ವಚಿ ॥**

(ಋ. ಸಂ. ೧-೨೮-೯)

ಎಂಬ ಋಕ್ಕಿನಲ್ಲಿ ದಶಾಪವಿತ್ರವೆಂದರ್ಥಮಾಡಿದೆ. (ಈ ಪದವನ್ನು ಹಿಂದಿನ ಋಕ್ಕಿನಲ್ಲಿ ವಿವರಿಸಿದೆ.) ದಶಾಪವಿತ್ರವು ಕೇವಲ ಬಟ್ಟೆಯದು. ಇಲ್ಲಿ **ಅವ್ಯಯಾ ರೋಮಾಣಿ ಅತಿ ।** ಎಂದರೆ, ಛಿನ್ನವಾಗದಿರುವ ರೋಮಗಳನ್ನು ದಾಟಿ ಕೆಳಕ್ಕೆ ಸುರಿಯುತ್ತವೆಯೆಂದಿರುವುದರಿಂದ ಇದನ್ನು ಕುರಿಯ ತುಪ್ಪಟವೆಂದೂಹಿಸಲಾಗಿದೆ. **ಅವಿರೋಮಾಣಿ** ಎಂದು ಸಾಯಣರು ವಿವರಿಸಿದ್ದಾರೆ.

**ಅವ್ಯೇ ವಧೂಯುಃ ಪವತೇ ಪರಿ ತ್ವಚಿ ಶ್ರಥ್ನೀತೇ ನಪ್ತೀರದಿತೇರ್ಋತಂ ಯತೇ ।**
**ಹರಿರಕ್ರಾನ್ ಯಜತಃ ಸಂಯತೋ ಮದೋ ನೃಮ್ಣಾ ಶಿಶಾನೋ ಮಹಿಷೋ ನ ಶೋಭತೇ ॥**

(ಋ. ಸಂ. ೯-೬೯-೩)

ಇತ್ಯಾದಿ ಋಕ್ಕುಗಳಲ್ಲಿ **ಅವ್ಯೇ ತ್ವಚಿ** ಎಂಬುದಕ್ಕೆ **ಅವೀಃ ಸ್ವಭೂತೇ ಚರ್ಮಣಿ** ಎಂದರ್ಥಮಾಡಿರುವಂತೆ ಇಲ್ಲಿಯೂ ಸಹ **ಅವ್ಯ** ಶಬ್ದಕ್ಕೆ ಕುರಿಗೆ ಸಂಬಂಧಿಸಿದ್ದು ಎಂದು ವಿವರಿಸಿ, **ಅವ್ಯಯಾಃ ಸೋಮಾಸಃ** ಎಂಬುದಕ್ಕೆ ಈ ತುಪ್ಪಟದ ಮೂಲಕ ಹೋಗಿ ಸುರಿದು ಶಬ್ದವಾಗುತ್ತದೆ ಎಂದು ಅರ್ಥ ಮಾಡಬೇಕು. ಈ ಋಕ್ಕನಲ್ಲಿ **ಅವ್ಯಯಾ ರೋಮಾಣಿ ಅತಿ** ಎಂದು ವರ್ಣಿಸಿರುವ ಇದೇ ಅಂಶವನ್ನು,

**ಪ್ರ ತೇ ಧಾರಾ ಅತ್ಯಣ್ವಾನಿ ಮೇಷ್ಯಃ ಪುನಾನಸ್ಯ ಸಂಯತೋ ಯಂತಿ ರಂಹಯಃ ।**
**ಯದ್ಗೋಭಿರಿಂದೋ ಚಮ್ವೋಃ ಸಮಜ್ಯಸ ಆ ಸುವಾನಃ ಸೋಮ ಕಲಶೇಷು ಸೀದಸಿ ॥**

(ಋ. ಸಂ. ೯-೮೬-೪೭)

ಎಂಬಲ್ಲಿಯೂ ಸಹ ಇದೇ ಕ್ರಮದಲ್ಲಿ ಸೋಮರಸದ ಶುದ್ಧಿಯ ಕ್ರಮವನ್ನು ಹೇಳಿದೆ. **ರಂಹಯಃ ಧಾರಾಃ ಮೇಷ್ಯಃ ಅಣ್ವಾನಿ ಅಣೂನಿ ಲೋಮಾನಿ ಅತಿಯಂತಿ ।** ಧಾರಾರೂಪವಾದ ರಸವು ಸೂಕ್ಷ್ಮವಾಗಿರತಕ್ಕ ತುಪ್ಪಟವನ್ನು ಹಾದು ಹರಿಯುತ್ತವೆಯೆಂದು ಇಲ್ಲಿ ವರ್ಣಿತವಾದಂತೆಯೇ ವಿವರಿಸಿದೆ.

**ಅವ್ಯಯಾಃ** ಎಂಬ ಪದವು ದ್ವಿರುಕ್ತವಾಗಿ, ಎರಡನೆಯಸಲ **ಸೋಮಾಸಃ** ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲಿ ವ್ಯಯರಹಿತವಾದ ಎಂದರೆ ಕ್ಷಯವಿಲ್ಲದಿರತಕ್ಕ ಎಂದರ್ಥ.

# ಸೋಮಪಾನದಲ್ಲಿ ಇಂದ್ರನಿಗಿರುವ ಆದರ

ಸೋಮಪಾನಾರ್ಥವಾಗಿ ಯಜಮಾನರಿಂದ ಆಹೂತನಾದೊಡನೆಯೇ, ಇಂದ್ರನು ರಥದಲ್ಲಿ ಕುಳಿತು ಸಿದ್ಧನಾಗಿ ಬರುತ್ತಾನೆ. ಮತ್ತು ಅಲ್ಲಿ ತನ್ನ ಅಶ್ವಗಳಿಗೂ ಆಹಾರವು ಸಿದ್ಧವಾಗಿರುತ್ತದೆ. ಮತ್ತು ಬಂದೊಡನೆಯೇ ಅವನ ಪಾನಕ್ಕಾಗಿ ಪ್ರಭೂತವಾಗಿ ಸೋಮರೂಪವಾದ ಆಹುತಿಯು ಸಿದ್ಧವಾಗಿ ಅರ್ಪಿತವಾಗುತ್ತದೆ. (೩-೩೫-೭)

ಈ ಸೋಮಪಾನವಾದೊಡನೆಯೇ ಅವನು ಅತ್ಯತಿಶಯವಾದ ಹರ್ಷವನ್ನು ಪಡೆಯುತ್ತಾನೆ. ಮತ್ತು ಇದರಿಂದ ಯುದ್ಧಕ್ಕೆ ಬೇಕಾದ ಉತ್ಸಾಹವನ್ನು ಪಡೆಯುವುದಲ್ಲದೇ, ದ್ಯಾವಾಪೃಥಿವಿಗಳ ಧಾರಣವೇ ಮುಂತಾದ ಇತರ ಅನೇಕ ಅಸಾಧಾರಣವಾದ ಕರ್ಮಗಳಿಗೂ ಉಪಯುಕ್ತವಾದ ಶಕ್ತಿಯನ್ನು ಪಡೆಯುತ್ತಾನೆ. ಎಲ್ಲಾ ವಿಧವಾದ ಶಕ್ತ್ಯುತ್ಸಾಹಗಳೂ ವೃದ್ಧಿಯನ್ನು ಹೊಂದುತ್ತವೆ. (೨-೧೫-೨)

ಇಂದ್ರನ ಪೂಜಾವಿಧಿಯನ್ನು ತಿಳಿಸತಕ್ಕ ಅನೇಕ ವಾಕ್ಯಗಳಲ್ಲಿ ಕೆಲವುದರ ತಾತ್ಪರ್ಯವನ್ನು ಮಾತ್ರ ಇಲ್ಲಿ ತಿಳಿಸಲಾಗುತ್ತದೆ. ಈ ಸೋಮರಸವು ನಾಶರಹಿತವಾದ ಚೈತನ್ಯವನ್ನುಂಟುಮಾಡುತ್ತದೆ. ಸೂರ್ಯನು ತನ್ನ ಕಿರಣಗಳಿಂದ ಅಂತರಿಕ್ಷಾದಿ ಪ್ರದೇಶಗಳನ್ನೆಲ್ಲಾ ವ್ಯಾಪಿಸುವಂತೆ ಈ ಸೋಮರಸವು ಇಂದ್ರನ ದೇಹದಲ್ಲೆಲ್ಲಾ ಶಕ್ತಿಯು ವ್ಯಾಪಿಸುವಂತೆ ಮಾಡಲಿ ಎಂದು ಋಷಿಯು ಪ್ರಾರ್ಥಿಸಿದ್ದಾನೆ.

(೨-೧೫-೧, ೨ ; ೨-೧೯-೧ ; ೩-೩೬-೩ ; ೩-೪೦-೧, ೩-೪೨-೧ ; ೬-೨೩-೧, ೫, ೬ ; ೬-೨೭-೧ ; ೬-೨೯-೪ ; ೭-೨೨-೧ ; ೭-೨೯-೧ ; ೮-೩-೧ ; ೮-೮೧-೫, ೬ ; ೧೦-೧೦೩-೧)

ಇಂದ್ರನಿಗೆ ಅರ್ಪಿತವಾಗತಕ್ಕ ಸೋಮರಸದ ಭಾಗಕ್ಕೆ ದೇವತೆಗಳೆಲ್ಲರೂ ಆತುರದಿಂದ ಓಡಿಬರುತ್ತಾರೆ. (೮-೨-೧೫)

" ಇಂದ್ರನೊಡನೆ ಇತರ ದೇವತೆಗಳೂ ಅಗ್ನಿಯೂ ಪಾನಮಾಡಿದ್ದಾರೆ. ಎಲ್ಲಾ ದೇವತೆಗಳೂ ತೃಪ್ತಿಯನ್ನು ಹೊಂದಿದ್ದಾರೆ. ಆದರೆ ಇಂದ್ರನ ತೃಪ್ತಿಯು ಅತ್ಯಧಿಕವಾದುದಾಗಿದೆ."

(೧-೧೦೪-೯ ; ೧-೧೭೫-೫ ; ೨-೧೪-೧ ; ೭-೩೩-೨ ; ೮-೨-೪)

ಉಳಿದ ಎಲ್ಲಾ ದೇವತೆಯ ನಡುವೆಯೂ ಇಂದ್ರನ ಸೋಮಪಾನವೇ ಅತ್ಯತಿಶಯವಾದುದು. **ಇಂದ್ರ ಇತ್ ಸೋಮಪಾ ಏಕಃ........ಅಂತರ್ದೇವಾನ್ ಮರ್ತ್ಯಾಂಶ್ಚ।** (೮-೨-೪) ದೇವಮಾನವಾದಿಗಳ ನಡುವೆಯೆಲ್ಲಾ ಇಂದ್ರನೊಬ್ಬನೇ ನಿಜವಾದ ಸೋಮಪಾನಾರ್ಹನಾಗಿದ್ದಾನೆ. ಆದುದರಿಂದ ಇವನೇ ನಿಜವಾದ ವೀರ್ಯವಂತನು. (೮-೪-೧೨ ; ೮-೬-೪೦)

ಇಂದ್ರನ ತಾಯಿಯು ಇಂದ್ರನ ಜನನವಾದ ದಿನವೇ ಆನನಿಗೆ ಸೋಮವನ್ನು ಒದಗಿಸಿದುದರಿಂದ ಸೋಮವೇ ಇಂದ್ರನಿಗೆ ಜೀವಾತುವೆಂಬ ಅಂಶವು ಸ್ಪಷ್ಟವಾಗಿದೆ. **(ಸದ್ಯೋ ಯಜ್ಞಾತೋ ಅಪಿಬೋ ಹ ಸೋಮಂ).**

(೩-೩೨-೯, ೧೦ ; ೩-೪೮-೨; ೬-೪೦-೨; ೭-೯೮-೩.)

ಒಂದೇ ಗುಟುಕಿಗೆ ಮೂವತ್ತು ದ್ರೋಣಪಾತ್ರೆಯ ಸೋಮವನ್ನೂ ಪಾನಮಾಡಿದನೆಂಬ ಪ್ರಸಿದ್ಧಿಯಿದೆ.

(೮-೬೬-೪ ; ೬-೧೭-೧೧ ; ೮-೭-೧೦. ಸಿ. ೪-೧೧.)

ಅವನ ಭಕ್ತರು ಈ ಸೋಮಪಾನಕ್ಕಾಗಿ ಅತ್ಯಂತ ವಿನಯದಿಂದಲೂ ಭಕ್ತಿಯಿಂದಲೂ ಕರೆಯುತ್ತಾರೆ ಮತ್ತು ಅವರ ಆಹ್ವಾನವನ್ನು ಮನ್ನಿಸಿ ಬಂದ ಇಂದ್ರನು ದಾಹಯುಕ್ತವಾದ ಜಿಂಕೆಯಂತೆ ಅವಸರದಿಂದ ಪಾನಮಾಡುತ್ತಾನೆ. (೮-೪-೧೦; ೫-೩೬-೧; ೮-೩೩-೨.)

ಈ ಇಂದ್ರನ ಉದರ (ಗಳು) ವು ಎರಡು ಸರೋವರಗಳಂತಿವೆ. ಇದನ್ನು ತುಂಬಲು ಆತುರದಿಂದ ಇಂದ್ರನು ನೀರಿಲ್ಲದ ಬೆಂಗಾಡಿನಲ್ಲಿ ನೀರಿಗಾಗಿ ಅಲೆಯುವ ವೃಷಭದಂತೆ ಗರ್ಜಿಸುತ್ತಾನೆ.

(೫-೩೬-೧ ; ೧-೮-೭ ; ೧-೧೦೪-೯ ; ೨-೧೧-೧೧ ; ೨-೧೪-೧೦ ; ೨-೧೬-೨ ; ೩-೩೫-೬ ; ೩-೩೬-೭, ೮ ; ೩-೪೦-೫ ; ೩-೪೭-೧ ; ೩-೫೧-೧೨; ೮-೧೨-೨೩ ; ೮-೨-೧ ; ೮-೧೭-೫ ರಿಂದ ೮ ; ೮-೬೭-೭ ; ೮-೮೧ ರಿಂದ ೨೨-೨೪ ; ೧೦-೨೮-೨ ; ೧೦-೪೩-೭ ; ೧೦-೧೦೪-೨; ಅ. ವೇ. ೨-೫-೧ ; ೬-೨-೧).

ಕೆಲವು ವೇಳೆಗಳಲ್ಲಿ ಇದೇ ಸೋಮರಸವನ್ನು ಯಜಮಾನರು ಪಾನಮಾಡಿದಾಗಲೂ ಇದೇ ವಿಧವಾದ ವರ್ಣನೆಯಿರುತ್ತದೆ. ಉದಾಹರಣೆಗೆ—

"ಈ ಸೋಮವನ್ನು ನಾನು ಪಾನಮಾಡಿದೊಡನೆಯೇ ಇದು ನನ್ನ ಶಾರೀರವನ್ನು ವೃದ್ಧಿಪಡಿಸುತ್ತದೆ" (೬-೪೭-೩.)

ಎಂದು ಋಷಿಯು ತಿಳಿಸುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಸೋಮಪಾನದ ಪ್ರಭಾವವನ್ನು ತಿಳಿಸುತ್ತಾ—

"ನಾವು ಸೋಮಪಾನವನ್ನು ಮಾಡಿದ್ದೇವೆ, ಆದುದರಿಂದಲೇ ನಾವು ಮರಣರಹಿತರಾಗಿದ್ದೇವೆ. ನಮ್ಮನ್ನು ಈಗ ಯಾವ ಮಾನವನೂ ಹಿಂಸಿಸಲಾರನು. ಅಮರ್ತ್ಯನಾದ ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ನಾವೂ ಸಹ ನಿನ್ನೊಡನೆಯೇ, ಭೀತಿಯಿಲ್ಲದೆ, ಅಂತರಿಕ್ಷಕ್ಕೆ ಹತ್ತುವೆವು." ಎಂದು ಪ್ರಕಟಿಸುತ್ತಾನೆ. (೮-೪೮-೩)

ಪಕ್ಷಿಗಳು ಪರ್ಣಭರಿತವಾದ ವೃಕ್ಷಕ್ಕೆ ಹಾರಿಹೋಗುವಂತೆಯೂ, ಸಾಗರಕ್ಕೆ ಜಲಭರಿತವಾದ ನದಿಗಳು ಹೋಗಿ ಸೇರುವಂತೆಯೂ, ಸೋಮರಸಪ್ರವಾಹವು ಇಂದ್ರನನ್ನು ಹೋಗಿ ಸೇರಿಕೊಳ್ಳುತ್ತದೆ. ವೃಷ್ಟಿಯು ಸುರಿಯುವುದರಿಂದ ಧಾನ್ಯಾದಿಗಳು ಯಾವರೀತಿ ಪುಷ್ಕಲವಾಗಿಯೂ ಪುಷ್ಟವಾಗಿಯೂ ಬೆಳೆಯುವುವೋ ಆದರಂತೆಯೇ ಸೋಮರಸದ ಅರ್ಪಣೆಯಿಂದ ಯಜಮಾನರು ಇಂದ್ರನು ಪುಷ್ಟನಾಗಿ ಬೆಳೆಯುವಂತೆ ಮಾಡುತ್ತಾರೆ. (೧೯-೪೩-೪,೭)

ಸತ್ಪತಿಯು ಪತ್ನಿಯನ್ನು ಪ್ರೀತಿಸುವಂತೆಯೂ ಅವಳ ಸಾಹಚರ್ಯವನ್ನು ಅಪೇಕ್ಷಿಸುವಂತೆಯೂ ಸಹ ಇಂದ್ರನು ಯಜಮಾನರಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಅವರಿಂದ ಅರ್ಪಿತವಾದ ಸ್ತುತಿಗಳನ್ನು ಸ್ವೀಕರಿಸಿ ಅದರಿಂದ ತೃಪ್ತಿಯನ್ನು ಹೊಂದಬೇಕೆಂದು ಪ್ರಾರ್ಥಿತನಾಗಿದ್ದಾನೆ. (೩-೫೨-೩ ; ೪-೩೨-೧೬).

ಸೋಮಪಾನದ ಪ್ರಭಾವವು ಇಂದ್ರನ ಉತ್ಸಾಹವನ್ನು ಯಾವರೀತಿ ವೃದ್ಧಿಪಡಿಸುವುದು ಎಂಬುದನ್ನು ವಿಶದವಾಗಿ ತೋರಿಸಲು ಒಂದು ಸೂಕ್ತದಲ್ಲಿ ಋಷಿಯು ಇಂದ್ರನ ಸ್ವರೂಪವನ್ನು ಈ ರೀತಿ ವರ್ಣಿಸಿದ್ದಾನೆ; ಸೋಮಪಾನ

ದಿಂದ ತೃಪ್ತನಾದ ಇಂದ್ರನು ಯಜಮಾನನಿಗೆ ಯಾವ ಯಾವ ರೀತಿಯಲ್ಲಿ ತನ್ನ ಅನುಗ್ರಹವನ್ನು ತೋರಿಸುವನೆಂದು ಇದರಿಂದ ತಿಳಿಯುತ್ತದೆ.

"ನಾನು ಪೂರ್ಣವಾಗಿ ಸೋಮಪಾನವನ್ನು ಮಾಡಿದ್ದೇನೆ. ಆದುದರಿಂದ ಯಜಮಾನನಿಗೆ ನಾನು ಪಶುಗಳನ್ನೂ ಅಶ್ವಗಳನ್ನೂ ಒದಗಿಸುತ್ತೇನೆ. ನಾನು ಪಾನಮಾಡಿರುವ ಸೋಮಪ್ರವಾಹವು ನನಗೆ ಅತಿಶಯವಾದ ಚೈತನ್ಯವನ್ನುಂಟುಮಾಡಿದೆ. ಪಶುವು ತನ್ನ ಕರುವನ್ನು ವಾತ್ಸಲ್ಯದಿಂದ ಓಡಿಹೋಗಿ ಸೇರುವಂತೆ ಋಷಿನಿರ್ಮಿತವಾದ ಸ್ತುತಿಯು ನನ್ನನ್ನು ಬಂದು ಸೇರಿದೆ. ಕರ್ಮಾರನು ವಂಧುರವನ್ನು ಸುತ್ತುವರಿದು ಪರಿಷ್ಕರಿಸುವಂತೆ ನಾನೂ ಆ ಸ್ತುತಿಯನ್ನು ನನ್ನ ಹೃದಯದಲ್ಲಿ ವ್ಯಾಪಿಸುವಂತೆ ಮಾಡುತ್ತೇನೆ. ಗಂಧರ್ವಾದಿ ಪಂಚಜನರೂ ಸಹ ನನ್ನ ಮುಂದೆ ಅಲ್ಪರಾಗಿರುತ್ತಾರೆ. ಅದು ಸೋಮದ ಪ್ರಭಾವ. ದ್ಯಾವಾಪೃಥಿವಿಗಳೆರಡೂ ಸೇರಿದರೂ ನನಗೆ ಅರ್ಧಪ್ರಮಾಣದಷ್ಟಾಗಲಾರವು. ಈ ದ್ಯಾವಾಪೃಥಿವಿಗಳೆರಡರ ಮಹತ್ತ್ವವನ್ನೂ ಮೀರಿಸುವ ಮಹತ್ತ್ವವುಳ್ಳವನಾಗಿದ್ದೇನೆ. ಈ ಪೃಥಿವಿಯನ್ನು ನನ್ನ ಸಂಕಲ್ಪಕ್ಕನುಗುಣವಾಗಿ ಪ್ರತಿಷ್ಠಾಪಿಸುತ್ತೇನೆ. ಅಂತರಿಕ್ಷವು ನನ್ನ ಅರ್ಧಭಾಗ. ಉಳಿದರ್ಧವನ್ನು ಕೆಳಗಿಳಿಸಿದ್ದೇನೆ. ನಾನು ಅಂತರಿಕ್ಷದಲ್ಲಿ ಪ್ರಭುತ್ವವನ್ನು ಮಾಡುವ ಪ್ರಭಾವವನ್ನು ಹೊಂದಿದ್ದೇನೆ. ಈ ಸೋಮಪಾನದ ಫಲವಾಗಿ ನಾನು ದೇವತೆಗಳಿಗೆಲ್ಲಾ ಹವಿಸ್ಸನ್ನು ತೆಗೆದುಕೊಂಡು ಹೋಗಿ ಹಂಚುವ ಶಕ್ತಿಯನ್ನು ಹೊಂದಿದ್ದೇನೆ."

(ಋ. ಸಂ. ೧೦-೧೧೯-೧ ರಿಂದ ೧೩)

ಇಂದ್ರನಿಗೆ ಅರ್ಪಿಸಿದ ಸೋಮದಂತೆಯೇ, ಯಜಮಾನನಿಂದ ಅರ್ಪಿತವಾದ ಸ್ತುತಿಗಳೂ ಇತರ ವಿಧವಾದ ಪೂಜೆಗಳೂ ಸಹ ಅವನ ವೀರ್ಯವನ್ನೂ ಚೈತನ್ಯವನ್ನೂ ಅತ್ಯಧಿಕವಾಗಿ ವೃದ್ಧಿಪಡಿಸುವುವು. **ಬ್ರಹ್ಮಾಣೀಂದ್ರ ತವ–ಯಾನಿ ವರ್ಧನಾ) (ಉಕ್ಥೈರ್ವರ್ಧಮಾನಾಃ)**

(೧–೫೨–೭; ೧–೫೪–೮ ; ೧–೮೦–೧; ೨–೧೧–೨ : ೨–೧೨–೧೪ : ೩–೩೨–೧೨ ; ೩–೩೪–೧ ; ೫–೩೬–೧೦ ೬–೨೧–೨, ೬–೪೪–೧೩, ೮––೬–೧, ೨೧, ೩೧, ೩೫; ೮–೧೩–೬ : ೮–೧೪–೫, ೧೧ ; ೮–೮೨–೨೭; ೮–೪೭–೮ ; ೧೦–೫೦–೪ ; ೧೨–೧೨೦–೫).

ಆ ಸೋಮಪಾನದಿಂದ ಉತ್ತೇಜಿತವಾದ ವೀರ್ಯಕ್ಕೆ ಅತಿಶಯವಾದ ಪ್ರಭಾವವನ್ನುಂಟುಮಾಡಲು ದೇವತೆಗಳೂ ಮಾನವರೂ ಇಂದ್ರನ ಹಸ್ತದಲ್ಲಿ ವಜ್ರಾಯುಧವನ್ನಿಡುತ್ತಾರೆ

(೧-೬೩-೨; ೨-೨೦-೮; ೩-೩೨-೧೨).

ಅಲ್ಲದೇ, ಇತರ ದೇವತೆಗಳೂ ಸಹ ತಮ್ಮ ಶಕ್ತಿಯನ್ನೆಲ್ಲಾ ಇಂದ್ರನಲ್ಲಿಯೇ ಸ್ಥಾಪಿಸುತ್ತಾರೆ.

(೧-೮೦-೧೫ : ೬-೨೦-೨; ೧೦-೪೮-೩ ; ೧೦-೧೧೩-೮ ; ೧೦-೧೨೦-೩ ; ೧೦-೫೬-೪ ; ೮–೧೫-೮).

ಮತ್ತು ಅವನನ್ನು ರಥದಲ್ಲಿ ಕುಳ್ಳಿರಿಸಿ ಯುದ್ಧಕ್ಕೆ ಸಿದ್ಧಪಡಿಸುತ್ತಾರೆ.

(೧-೫೫-೩ ; ೧-೧೩೧-೧ ; ೬-೧೯-೮).

ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳು ಈ ಇಂದ್ರನಿಗೆ ಉತ್ತೇಜನವನ್ನು ಕೊಟ್ಟು, ಇವನ ಶಕ್ತಿಯು ಸ್ಥಿರವಾಗಿ ನಿಂತು ಜಯಸಾಧಕವಾಗುವಂತೆ ಮಾಡುತ್ತಾರೆಂದು ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಅದು ಸೋಮ

ಪಾನದ ಪ್ರಭಾವವನ್ನು ಇನ್ನೂ ಅಧಿಕಗೊಳಿಸುತ್ತದೆ, **(ಯೋ ಅಭಜೋ ಮರುತ ಇಂದ್ರ ಸೋಮೇ ಯೇ ತ್ವಾಮವರ್ಧನ್ನಭವನ್ ಗಣಸ್ತೇ).**

(೩-೩೫-೯; ೩.೩೨-೪; ೩-೪೭.೩; ೬.೭-೧೧; ೮-೭.೨೪; ೧೦-೭೩-೧, ೨; ೧೦-೧೧೩-೩).

ಈ ಸಂದರ್ಭದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ಇರತಕ್ಕ ಸಹಜ ಸಂಬಂಧವನ್ನೂ ಸಾಹಚರ್ಯವನ್ನೂ ತಿಳಿಸಬೇಕಾದುದು ಅವಶ್ಯವಾಗಿರುತ್ತದೆ. ಈ ಪ್ರಕರಣವು ಇಂದ್ರನಿಗೆ ಸೋಮದಲ್ಲಿರುವ ಆದರವನ್ನು ತೋರಿಸುವುದಾಗಿದೆ. ಆದರೆ, ಆ ಸೋಮಪಾನವು ವೃತ್ರವಧಕ್ಕೆ ಎಷ್ಟು ಉತ್ತೇಜಕ, ಈ ಸಂದರ್ಭದಲ್ಲಿ ಮರುತ್ತುಗಳ ಪಾತ್ರವೇನು ಎಂಬುದನ್ನೂ ನಿರ್ದೇಶಿಸುವುದರಿಂದ ಈ ವಿಷಯವೂ ಸಹ ಆನುಷಂಗಿಕವಾಗಿರುತ್ತದೆ.

೧-೧೬೫ ರಲ್ಲು ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದವು ವರ್ಣಿತವಾಗಿದೆ. ೧-೧೬೫-೮ ರಲ್ಲು ಇಂದ್ರನು ಮರುತ್ತುಗಳ ಸಹಾಯವಿಲ್ಲದೆಯೇ, ತನ್ನ ಸ್ವಶಕ್ತಿಯಿಂದಲೇ ವೃತ್ರನನ್ನು ಸಂಹರಿಸಿದುದಾಗಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ. ೭-೨೧-೬ ರಲ್ಲು ಇದೇ ಪ್ರಶಂಸೆಯು ಇಂದ್ರನ ಭಕ್ತನಿಂದ ಮಾಡಲ್ಪಟ್ಟಿದೆ. **(ಸ್ವೇನಾ ಹಿ ವೃತ್ರಂ ಶವಸಾ ಜಘಂಥ)** ಇದರಂತೆಯೇ, ೧೦-೧೩೮-೬ ರಲ್ಲೂ ಸಹ **" ಏತಾ ತ್ಯಾ ತೇ ಶ್ರುತ್ಯಾನಿ ಕೇವಲಾ ಯದೇಕಃ.......''** ಇತ್ಯಾದಿಯಾಗಿ ಸ್ತುತಿಸಿದೆ. ಈ ಪರಾಕ್ರಮವಿರುವುದರಿಂದಲೇ ಸಕಲ ದೇವತೆಗಳೂ ಇಂದ್ರನಿಗೆ ಬೆದರುವುದಾಗಿ ತಿಳಿಸಿದೆ. (೫-೩೦-೫). ೮-೭-೧ ರಲ್ಲಿ ಮರುತ್ತುಗಳು ತಮ್ಮ ಸ್ನೇಹಿತನಾದ ಇಂದ್ರನಿಗೆ ಕ್ಲಿಷ್ಟ ಕಾಲದಲ್ಲಿ ಸಹಾಯಮಾಡದೇ ಇದ್ದುದು ಅಪರಾಧವೆಂದೂ, ಇಂತಹ ಸಂದರ್ಭದಲ್ಲಿ ಅವರು ನಂಬಿಕೆಗೆ ಹೇಗೆ ಪಾತ್ರರಾಗಬಲ್ಲರೆಂದೂ ಪ್ರಶ್ನಿಸಿದೆ.

೪-೧೮-೧೧ ರಲ್ಲು ಇಂದ್ರಮಾತೆಯಾದ ಅದಿತಿಯು ಉಳಿದ ದೇವತೆಗಳೆಲ್ಲರೂ ತನ್ನ ಮಗನಿಗೆ ಸಹಾಯ ಮಾಡದೇ ಪರಿತ್ಯಜಿಸಿದುದಕ್ಕಾಗಿ ಖೇದಗೊಂಡು, ವಿಷ್ಣುವನ್ನು ಸಮಾಪಿಸಿ. ತನ್ನ ಮಗನಿಗೆ ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತಾಳೆ. ಆದರೆ, ಬೇರೆ ಕಡೆಯಲ್ಲಿ ಇದಕ್ಕೆ ಕೊಂಚ ವ್ಯತ್ಯಸ್ತವಾದ ವಿವರಣೆಯೂ ಇರುತ್ತದೆ. ವೃತ್ರಾಸುರನೊಡನೆ ಯುದ್ಧ ಮಾಡುತ್ತಿದ್ದಾಗ ಉಳಿದ ದೇವತೆಗಳೆಲ್ಲರೂ ಅವನ ಭಯಂಕರವಾದ ರೂಪಕ್ಕೆ ಹೆದರಿ, ಇಂದ್ರನೊಬ್ಬನನ್ನೇ ಬಿಟ್ಟು ಓಡಿಹೋದರೆಂದೂ, ಆಗ ಇಂದ್ರನು ಮರುತ್ತುಗಳೊಂದಿಗೆ ಸಖ್ಯವಿದ್ದುದರಿಂದ ಅವರ ಸಹಾಯದಿಂದ ವೃತ್ರನನ್ನು ನಾಶಪಡಿಸಿದನೆಂದೂ ತಿಳಿಸಿದೆ. (೮-೯೬-೭). ಸಾಯಣರು ಈ ಸನ್ನಿವೇಶದಲ್ಲಿ ಹಿಂದಿನ ವಾಕ್ಯಗಳಿಗೂ ಇದಕ್ಕೂ ವಿರೋಧವಿರದಂತೆ ತಾತ್ಪರ್ಯವನ್ನೂ ಹೇಳಿದ್ದಾರೆ. ಮತ್ತು ಐತರೇಯ ಬ್ರಾಹ್ಮಣದ ವಾಕ್ಯವನ್ನು ದಾಹರಿಸಿ ತಮ್ಮ ಅರ್ಥವನ್ನು ಸಮರ್ಥಿಸಿಕೊಂಡಿದ್ದಾರೆ. ಐತರೇಯ ಬ್ರಾಹ್ಮಣದ ವಾಕ್ಯವು ಈ ರೀತಿ ಇರುತ್ತದೆ.—

**ಇಂದ್ರೋ ವೈ ವೃತ್ರಂ ಹನಿಷ್ಯನ್ಸರ್ವಾ ದೇವತಾ ಅಬ್ರವೀದನು ಮೋಪತಿಷ್ಠಧ್ವಮುಪ ಮಾ ಹ್ವಯಧ್ವಮಿತಿ ತಥೇತಿ ತಂ ಹನಿಷ್ಯಂತ ಆದ್ರವನ್ಸೋऽವೇನ್ಮಾಂ ವೈ ಹನಿಷ್ಯಂತ ಆದ್ರವಂತಿ ಹಂತೇಮಾನ್ಭೀಷಯಾ ಇತಿ ತಾನಭಿಪ್ರಾಶ್ವಸೀತ್ತಸ್ಯ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅದ್ರವನ್ ಮರುತೋ ಹೈನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ । ತದೇತದೃಷಿಃ ಪಶ್ಯನ್ನಭ್ಯನೂವಾಚ ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ । ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವ-**

**ಥೇಮಾ ವಿಶ್ವಾಃ ಪೃತನಾ ಜಯಾಸೀತಿ । ಸೋಽವೇದಿಮೇ [ವೈ ಕಿಲ ಮೇ ಸಚಿವಾ ಇಮೇ ಮಾಕಾಮಾಯಂತೆ ಹಂತೇಮಾನಸ್ಮಿನ್ನುಕ್ಥ ಆಭಜಾ ಇತಿ ॥**

(ಐ. ಬ್ರಾ. ೩-೨೦)

ವೃತ್ರಾಸುರನನ್ನು ಕೊಲ್ಲಲಿಚ್ಛಿಸಿದ ಇಂದ್ರನು ದೇವತೆಗಳನ್ನು ಕುರಿತು "ಎಲೈ ದೇವತೆಗಳೇ, ನನ್ನನ್ನೇ ಎಡ ಬಿಡದೇ ಹಿಂಬಾಲಿಸಿ ಮತ್ತು ನನಗೆ ಸಹಾಯಕರಾಗಿರಿ" ಎಂದನು. ಆಗ ಅವರು ' ಹಾಗೆಯೇ ಮಾಡುವೆವು " ಎಂದು ಭರವಸೆಯನ್ನು ಕೊಟ್ಟು ವೃತ್ರನನ್ನು ಕೊಲ್ಲಲು ಮುನ್ನುಗ್ಗಿದರು. ಆಗ ವೃತ್ರನು, " ಈ ದೇವತೆಗಳು ನನ್ನನ್ನು ಕೊಲ್ಲಲು ಮುನುಗ್ಗಿ ಬರುತ್ತಿರುವರು. ನಾನು ಅವರನ್ನು ಬೆದರಿಸುವೆನು " ಎಂದು ಪ್ರಬಲವಾದ ನಿಟ್ಟುಸುರನ್ನು ಬಿಟ್ಟು ಭಯಂಕರವಾದ ಶಬ್ದವನ್ನು ಮಾಡಿದನು. ಆಗ ಆ ಭಯಂಕರವಾದ ಶಬ್ದವನ್ನು ಕೇಳಿದ ದೇವತೆಗಳೆಲ್ಲರೂ ಭೀತರಾಗಿ ದಿಕ್ಕಾಪಾಲಾಗಿ ಓಡಿದರು. ಆದರೆ ಮರುತ್ತುಗಳು ಮಾತ್ರ ಇಂದ್ರನನ್ನು ಪರಿತ್ಯಜಿಸಲಿಲ್ಲ. ಅವರು ಇಂದ್ರನಪಕ್ಕದಲ್ಲೇ ನಿಂತು " ಎಲೈ ಇಂದ್ರನೇ, ಇವನನ್ನು ಹೊಡೆ. ನಿನ್ನ ಪರಾಕ್ರಮವನ್ನು ತೋರಿಸು " ಎಂದು ಉತ್ತೇಜನವನ್ನು ಕೊಡು ತಿದ್ದರು ಆ ಮರುತ್ತುಗಳ ಸಖ್ಯವನ್ನು ಪ್ರಶಂಸಿಸುತ್ತಾ ಋಷಿಯು **ವೃತ್ರಸ್ಯ ತ್ವಾ** ಎಂಬ ಮಂತ್ರವನ್ನು ಪಠಿಸಿ ಪ್ರಶಂಸಿದನು. (೮-೯೬-೭). ಆಗ ಇಂದ್ರನು "ಈ ಮರುತ್ತುಗಳೇ ನನ್ನ ನಿಜವಾದ ಸಖರು. ಅವರು ನನ್ನನ್ನು ಪ್ರೀತಿ ಸುತ್ತಾರೆ, ಆದುದರಿಂದ ನನಗೆ ಅರ್ಪಿತವಾದ ಉಕ್ಥಮಂತ್ರದಲ್ಲಿ ಅವರಿಗೂ ಭಾಗವನ್ನು ಕೊಡುತ್ತೇನೆ " ಎಂದನು.

ಋಕ್ಸಂಹಿತೆಯಲ್ಲಿ ೧೦-೩೨-೧೪ ನೇ ಮಂತ್ರದಲ್ಲಿ ಇದೇ ಸನ್ನಿವೇಶವನ್ನು ವರ್ಣಿಸುತ್ತಾ, **ಅಹೇರ್ಯಾತಾರಂ** ಎಂದು ಸ್ತುತಿಸಿದೆ. ಇಲ್ಲಿಯೂ ಸಹ ಅರ್ಥವು ಸಂದಿಗ್ಧವಾಗಿರುತ್ತದೆ. ವೃತ್ರಾಸುರನ ಕಾಲದಲ್ಲಿ ಇಂದ್ರನಿಗೇ ಕೊಂಚ ಭೀತಿಯುಂಟಾಯಿತೆಂದು ಇಲ್ಲಿ ತಿಳಿಸಿದೆ. ಆ ಭೀತಿಯಿಂದ ಶ್ಯೇನ ಪಕ್ಷಿಯಂತೆ ಓಡುತ್ತಾ, ದಾರಿಯಲ್ಲಿ ಸಿಕ್ಕಿದ ತೊಂಭತ್ತು-ಒಂಭತ್ತು ನದೀ ಪ್ರವಾಹಗಳನ್ನೂ ದಾಟಿ ತಪ್ಪಿಸಿಕೊಂಡನು. ಇತ್ಯಾದಿಯಾಗಿ ಎರಡು ಮೂರು ವಿಧವಾದ ತಾತ್ಪರ್ಯವನ್ನು ಹೇಳಬಹುದು. ಆದರೆ, ಪ್ರಕೃತ ಈ ವಿಮರ್ಶನೆಯು ಅನವಶ್ಯಕವಾಗಿರುತ್ತದೆ. ಇಂದ್ರನಿಗೆ ಸಹಾಯ ಮಾಡಿದ ಇತರ ದೇವತೆಗಳ ವಿಷಯವೂ ಕೆಲವೆಡೆಗಳಲ್ಲಿ ಸ್ತುತಿಸಲ್ಪಟ್ಟಿದೆ. ಉದಾಹರಣೆಗೆ—

"ಪ್ರಕಾಶಕ್ಕೆ ಪ್ರಭುಗಳಾದ ಎಲೈ ಅಶ್ವಿನೀದೇವತೆಗಳೇ, ಇಂದ್ರನೊಡನೆ ಮಧುರವಾದ ಸೋಮವನ್ನು ಪಾನ ಮಾಡಿದವರಾಗಿ, ಅಸುರ ನಮುಚಿಯನ್ನು ನಾಶಪಡಿಸುವಾಗ ನೀವು ಅವನಿಗೆ ಸಹಾಯವನ್ನು ಮಾಡಿದಿರಿ, ಮತ್ತು ತತ್ಕಾಲದಲ್ಲಿ ನೀವು ಅವನನ್ನು ರಕ್ಷಿಸಿದಿರಿ." (೧೦-೧೩೧-೪)

"ಎಲೈ ಇಂದ್ರನೇ, ಮಾತಾಪಿತೃಗಳು ಮಕ್ಕಳನ್ನು ರಕ್ಷಿಸುವಂತೆ, ಅಶ್ವಿನೀದೇವತೆಗಳಿಬ್ಬರೂ ಇಂದ್ರನನ್ನು ಆಪತ್ಕಾಲದಲ್ಲಿ ರಕ್ಷಿಸಿದರು. ನಿನ್ನ ಪರಾಕ್ರಮದ ಪ್ರಕಾಶನದ ವೇಳೆಯಲ್ಲಿ ಸೋಮಪಾನವನ್ನು ಮಾಡಿದಾಗ ಸರಸ್ವತೀ ದೇವಿಯು ತನ್ನ ಸಕಲ ರಕ್ಷಣಾಸಾಧನಗಳೊಂದಿಗೂ ನಿನ್ನ ಪಕ್ಕದಲ್ಲೇ ಸಹಾಯಕಳಾಗಿದ್ದಳು."

(೧೦-೧೩೧-೫)

ಈ ಪ್ರಕರಣವು ವಾಜಸನೇಯಸಂಹಿತೆಯಲ್ಲಿಯೂ ಉಕ್ತವಾಗಿದೆ. (೧೦-೩೩, ೩೪) ಮತ್ತು ವಾಜಸನೇಯ ಸಂಹಿತಾಭಾಷ್ಯದಲ್ಲಿ ಭಾಷ್ಯಕಾರರು ಶತಪಥಬ್ರಾಹ್ಮಣೋಕ್ತವಾದ ಒಂದು ಕಥೆಯನ್ನು ಉದಾಹರಿಸಿದ್ದಾರೆ. ಅದರ ರೂಪವು ಈ ರೀತಿಯಲ್ಲಿದೆ—

**ಇಂದ್ರಸ್ಯೇಂದ್ರಿಯಮನ್ನಸ್ಯ ರಸಗ್ಂಸೋಮಸ್ಯ ಭಕ್ಷಗ್ಂಸುರಯಾಸುರೋ ನಮುಚಿರಹರತ್ಸೋಽಶ್ವಿನೌ ಚ ಸರಸ್ವತೀಂ ಚೋಪಾಧಾವಚ್ಛೇಪಾನೋಽಸ್ಮಿ ನಮುಚಯೇ ನ ತ್ವಾ ದಿವಾ ನ ನಕ್ತಗ್ಂ ಹನಾನಿ ನ ದಣ್ಡೇನ ನ ಧನ್ವನಾ ನ ಪೃಥೇನ ನ ಮುಷ್ಟಿನಾ ನ ಶುಷ್ಕೇಣ ನಾರ್ದ್ರೇಣಾಥ ಮ ಇದ ಮಹಾರ್ಷೀದಿದಂ ಮ ಆಜಹೀರ್ಷಥೇತಿ ।**

(ಶ. ಬ್ರಾ. ೧೨-೭-೩-೧)

ಅಸುರ ನಮುಚಿಯು ಒಂದುಸಲ ಇಂದ್ರನ ವೀರ್ಯವನ್ನೂ, ಅನ್ನವನ್ನೂ, ಸೋಮವನ್ನೂ, ಸುರೆಯನ್ನೂ ಅಪಹರಿಸಿದನು. ಆಗ ಇಂದ್ರನು ಅಶ್ವಿನೀದೇವತೆಗಳಲ್ಲಿಗೂ ಮತ್ತು ಸರಸ್ವತೀಯಲ್ಲಿಗೂ ಹೋಗಿ, "ನಾನು ನಮುಚಿಯನ್ನು ಹಗಲಿನಲ್ಲಾಗಲಿ ಅಥವಾ ರಾತ್ರಿಯಲ್ಲಾಗಲಿ ಕೊಲ್ಲುವುದಿಲ್ಲವೆಂದು ಭರವಸೆಯನ್ನು ಕೊಟ್ಟಿದ್ದೇನೆ. ಇಷ್ಟೇ ಅಲ್ಲದೇ, ಕಾಷ್ಠದಿಂದಾಗಲಿ ಅಥವಾ ನನ್ನ ಹಸ್ತದಿಂದಾಗಲಿ, ಮುಷ್ಟಿಯಿಂದಾಗಲಿ, ಶುಷ್ಕವಾದ ಸಾಧನದಿಂದಾಗಲಿ, ಹಸಿಯಾಗಿರುವ ಸಾಧನದಿಂದಾಗಲಿ ಅವನನ್ನು ಕೊಲ್ಲುವುದಿಲ್ಲವೆಂದೂ ಭರವಸೆಯನ್ನು ಕೊಟ್ಟಿದ್ದೇನೆ. ಈ ಭರವಸೆಯಿದ್ದುದರಿಂದ ಅವನು ನನ್ನ ಶಕ್ತಿಯನ್ನು ಅಪಹರಿಸಿದ್ದಾನೆ. ಅದನ್ನು ನನಗೆ ತಂದು ಕೊಡಿರಿ" ಎಂದು ಕೇಳಿದನು. ಅದಕ್ಕೆ ಅವರು ಈ ರೀತಿ ಉತ್ತರವನ್ನು ಕೊಟ್ಟರು

**ಅಸ್ತು ನೋಽತ್ರಾಪ್ಯಥಾಹರಾಮೇತಿ ಸಹ ನ ಏತದಥಾಹರತೇತ್ಯಬ್ರವೀದಿತಿ ।**

(೧೨-೭-೩-೨)

ಆ ವೀರ್ಯದಲ್ಲೂ ಇತರ ಸೋಮಾದಿಗಳಲ್ಲೂ ನಮಗೂ ಭಾಗವನ್ನು ಕೊಟ್ಟರೆ ಆಗಬಹುದೆಂದರು. ಇಂದ್ರನು ಅದಕ್ಕೆ ಒಪ್ಪಿದನು.

**ತಾವಶ್ವಿನೀ ಚ ಸರಸ್ವತೀ ಚ ಅಪಾಂ ಫೇನಂ ವಜ್ರಮಸಿಂಚನ್ನ ಶುಷ್ಕೋ ನಾರ್ದ್ರ ಇತಿ ತೇನೇಂದ್ರೋ ನಮುಚೇರಾಸುರಸ್ಯ ವ್ಯುಷ್ಟಾಯಾಗ್ಂ ರಾತ್ರಾವನುದಿತ ಆದಿತ್ಯೇ ನ ದಿವಾ ನ ನಕ್ತಮಿತಿ ಶಿರ ಉದವಾಸಯತ್**

(೧೨-೭-೩-೩)

ಆಗ ಅಶ್ವಿನೀದೇವತೆಗಳೂ ಸರಸ್ವತಿಯೂ ಸಹ ವಜ್ರಾಯುಧವನ್ನು ನೊರೆಯಿಂದ ಬಳಿದರು. ಆಗ ಅದು ಆರ್ದ್ರವೂ ಆಗಲಿಲ್ಲ. ಶುಷ್ಕವೂ ಆಗಲಿಲ್ಲ. ಆಗ ಅದರಿಂದ ಇಂದ್ರನು ನಮುಚಿಯವನ್ನು ಹೊಡೆದನು. ರಾತ್ರಿಯು ಕಳೆದು ಇನ್ನೂ ಸೂರ್ಯೋದಯವಾಗದಿರುವಾಗಲೇ ಉಷಃಕಾಲದಲ್ಲಿ ಹೊಡೆದುದರಿಂದ ಅದು ಹಗಲೂ ಅಲ್ಲ ರಾತ್ರಿಯೂ ಅಲ್ಲದುದಾಯಿತು. ಅದರಿಂದ ನಮುಚಿಯ ಶಿರಸ್ಸನ್ನು ಛೇದಿಸಿದನು.

**ತಸ್ಮಾದೇತದೃಷಿಣಾಭ್ಯನೂಕ್ತಂ ..... ತಸ್ಯ ಶೀರ್ಷಂಛಿನ್ನೇ ಲೋಹಿತಮಿಶ್ರಃ ಸೋಮೋಽತಿಷ್ಠತ್ತಸ್ಮಾದಬೀಭತ್ಸಂತ ತ ಏತದಂಧಸೋಽವಿಪಾನಮಪಶ್ಯನ್ತ್ಸೋಮೋ ರಾಜಾಮೃತಗ್ಂ ಸುತ ಇತಿ ತೇನೈನಗ್ಂ ಸ್ವದಯಿತ್ವಾತ್ಮನ್ನದಧತ ॥** (೧೨-೭-೩-೪)

ನಮುಚಿಯು ಶಿರಸ್ಸು ಛಿನ್ನವಾದೊಡನೆಯೇ ಸೋಮವು ರಕ್ತದೊಂದಿಗೆ ಮಿಶ್ರಿತವಾಯಿತು. ಆಗ ಅದು ಅಸಹ್ಯವಾಯಿತು. ಆಗ ಅವರು "ಸೋಮರಾಜನು ಸಿಕ್ತನಾದೊಡನೆಯೇ ಅಮೃತರೂಪವಾಗುತ್ತದೆ" ಎಂದು ತಿಳಿದು ಈ

ಸೋಮದೊಡನೆ ಅದನ್ನೂ ಸುರಿದು ಪಾನಮಾಡಿದರು ಎಂಬ ವರ್ಣನೆಯಿರುತ್ತದೆ. ಆದರೆ ಇಲ್ಲಿ ಈ ಕೊನೆಯ ಭಾಗದಲ್ಲಿ, **ಈ ಸೋಮ, ಆ ಸೋಮ** ಎಂಬಲ್ಲಿ ಎರಡು ಸೋಮಗಳಾಗುವುವೆಂಬುದು ವಿಮರ್ಶಾರ್ಹವಾಗಿದೆ. ಸದ್ಯಃ ಅದು ಅಪ್ರಕೃತ.

ಇದರಂತೆಯೇ, ಶತಪಥಬ್ರಾಹ್ಮಣದಲ್ಲಿ ಇನ್ನೂ ಬೇರೊಂದು ಸನ್ನಿವೇಶದಲ್ಲಿ ಇಂದ್ರನ ಶಕ್ತಿಯು ಕುಂಠಿತವಾದಾಗ ದೇವವೈದ್ಯರಾದ ಅಶ್ವಿನೀದೇವತೆಗಳೂ ಸರಸ್ವತಿಯೂ ಅವನ ವೀರ್ಯವನ್ನು ಪುನಃ ಸ್ಥಾಪಿತವಾಗುವಂತೆ ಮಾಡಿದರೆಂದೂ ತಿಳಿಸಿರುತ್ತದೆ.

(೧೨-೭-೧-೧೦ ; ೧೨-೮-೩-೧)

ಮರುತ್ತುಗಳ ಸಹಾಯದಿಂದ ಇಂದ್ರನು ಅಸುರರ ಶಕ್ತಿಯನ್ನು ನಾಶಪಡಿಸದಂತೆಯೇ ಬೃಹಸ್ಪತಿಯ ನೆರವಿನಿಂದಲೂ ಸಹ ಇಂದ್ರನು ಅವನನ್ನು ಪ್ರತಿಭಟಿಸಿದ ದೇವಶತ್ರುಗಳನ್ನು ನಾಶಪಡಿಸಿದನು.

(೮-೮೫-೧೫)

ಈ ರೀತಿ ಸೋಮಪಾನದಿಂದ ಹೃಷ್ಟನೂ ಉತ್ತೇಜಿತನೂ ಆಗಿ ಕೆಲವು ವೇಳೆ ಮರುತ್ತುಗಳಿಂದಲೂ ಇನ್ನು ಕೆಲವು ವೇಳೆ ವಿಷ್ಣುವಿನಿಂದಲೂ ಒಡಗೂಡಿ ಇಂದ್ರನು ವೃತ್ರನ ಮೇಲೆ ಹೋರಾಟಕ್ಕೆ ಹೋಗುತ್ತಾನೆ.

(೨-೧೫-೧ ; ೨-೧೯-೨ ; ೬-೪೭-೧, ೨ ; ೧೦-೧೧೨-೧)

## ಇಂದ್ರನಿಗೆ ಋಜೀಷೀ ಎಂಬ ಹೆಸರು ಬರಲು ಕಾರಣ

**ಋಜೀಷೀ**—ಈ ಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

**ಋಜೀಷೀ ಸೋನೋ ಯತ್ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮಃ । ಅಥಾಪ್ಯೈಂದ್ರೋ ನಿಗಮೋ ಭವತಿ ಋಜೀಷೀ ವಜ್ರೀ ಇತಿ ॥**

**(ನಿ. ೫-೧೨)**

ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ರಸರಹಿತವಾದ ಪದಾರ್ಥಕ್ಕೆ ಋಜೀಷವೆಂದು ಹೆಸರು. ಈ ಋಜೀಷವನ್ನು ಬೇಡವೆಂದು ಎಸೆದುಬಿಡುವರು. ಕೆಲವು ಸಂದರ್ಭದಲ್ಲಿ ಅಂತಹ ಋಜೀಷವನ್ನು ನೀರಿನಲ್ಲಿ ನೆನೆಯಿಸಿ ಇನ್ನೂ ಸ್ವಲ್ಪ ರಸವನ್ನು ಹಿಂಡಿ ತೆಗೆಯುವರು. ಅಂತಹ ಸೋಮರಸಕ್ಕೆ **ಋಜೀಷಃ ಸೋಮಃ** ಎಂದು ಹೆಸರು. ತೃತೀಯ ಸವನಕಾಲದಲ್ಲಿ ಇಂತಹ ಋಜೀಷ ಸೋಮಕ್ಕೆ ಹಿಟ್ಟು ಮೊದಲಾದ ಆಶಿರದ್ರವ್ಯಗಳನ್ನು ಮಿಶ್ರಮಾಡಿ ಇಂದ್ರನಿಗೆ ಅರ್ಪಿಸುವರು. ಈ ಋಜೀಷ ಸೋಮವನ್ನು ಇಂದ್ರನು ಪಾನಮಾಡುವುದರಿಂದ ಇಂದ್ರನನ್ನು **ಋಜೀಷೀ** ಎಂಬ ಶಬ್ದದಿಂದಲೇ ಕರೆಯುವುದು ರೂಢಿಯಾಗಿದೆ. ಇದಲ್ಲದೆ ಇಂದ್ರನ ಹರೀ ಎಂಬ ಕುದುರೆಗಳು ಈ ಋಜೀಷವೆಂಬ ಸೋಮಲತೆಗಳ ಸಿಪ್ಪೆಯನ್ನು ತಿನ್ನುವವು ಎಂದು ಪ್ರಸಿದ್ಧಿಯಾಗಿವೆ. ಈ ವಿಷಯದಲ್ಲಿ ಯಾಸ್ಕರು ಉದಾಹರಣೆಗಾಗಿ—**ಬದ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ** ಎಂಬ ಶ್ರುತಿವಾಕ್ಯವನ್ನು ಹೇಳಿದಾರೆ. ಎಲೈ ಇಂದ್ರನೇ, ನಿನ್ನ ಕುದುರೆಗಳು ಧಾನ್ಯವನ್ನು ತಿಂದು ಈ ಋಜೀಷವನ್ನು ಮೂಸಿನೋಡಲಿ ಎಂದು ಮೇಲಿನ ವಾಕ್ಯದ ಅರ್ಥವು.

ಋಜೀಷವೆಂದರೇನು ? ಇದಕ್ಕೆ ಈ ಹೆಸರು ಬರಲು ಕಾರಣವೇನು ? ಯಜ್ಞದಲ್ಲಿ ಇದರ ಉಪಯೋಗವೇನು ? ಇತ್ಯಾದಿ ವಿಷಯಗಳು ಐತರೇಯ ಬ್ರಾಹ್ಮಣ ಮತ್ತು ತೈತ್ತಿರೀಯ ಸಂಹಿತೆಗಳಲ್ಲಿ ಹೇಳಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸುವೆವು—

**ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತನ್ ।**

(ಐ. ಬ್ರಾ. ೧೩-೨೫)

ಪೂರ್ವದಲ್ಲಿ ಸೋಮರಾಜನು (ಸೋಮಲತೆಯು ; ಗೌರವಾರ್ಥವಾಗಿ ಸೋಮಲತೆಯನ್ನು ಸೋಮರಾಜನೆಂದು ಕರೆಯುವ ರೂಢಿ ಇದೆ) ಎಂದರೆ ಸೋಮಲತೆಯು ಸ್ವರ್ಗಲೋಕದಲ್ಲಿದ್ದಿತು. ಈ ಲೋಕದಲ್ಲಿರಲಿಲ್ಲ. ಇದನ್ನು ತಿಳಿದು ದೇವತೆಗಳೂ ಋಷಿಗಳೂ ಈ ಸೋಮವನ್ನು ಇಲ್ಲಿಗೆ ತರುವ ಬಗೆ ಹೇಗೆ ಎಂದು ಆಲೋಚಿಸಿದರು. ಬಳಿಕ ಅವರು ಈ ವಿಚಾರವನ್ನು ವಿಮರ್ಶೆಮಾಡಿ ಸೋಮವನ್ನು ಸ್ವರ್ಗದಿಂದ ಭೂಮಿಗೆ ತರುವ ಶಕ್ತಿಯು ಛಂದಸ್ಸುಗಳಿಗೆ ಇರುವುದೆಂದು ತಿಳಿದು ಛಂದಸ್ಸುಗಳನ್ನು ಕುರಿತು—ಎಲೈ ಛಂದಸ್ಸುಗಳೇ, ನಮಗೋಸ್ಕರ ಎಂದರೆ ನಮ್ಮ ಯಜ್ಞದಲ್ಲಿ ಉಪಯೋಗಿಸುವುದಕ್ಕೋಸ್ಕರ ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನಂಗೀಕರಿಸಿ ಛಂದಸ್ಸುಗಳು ಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಪಕ್ಷಿಗಳ ರೂಪವನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋದುವು. ಮೊದಲು ಜಗತೀ ಛಂದಸ್ಸು ಪಕ್ಷಿರೂಪವನ್ನು ಧರಿಸಿ ಸ್ವರ್ಗಲೋಕದ ಕಡೆಗೆ ಹಾರಿತು. ಆದರೆ ಸ್ವಲ್ಪದೂರ ಹೋಗುವುದರೊಳಗಾಗಿ ಅದಕ್ಕೆ ಆಯಾಸವಾಗಿ ಸ್ವರ್ಗದವರೆಗೂ ಹೋಗಲಾರದೆ ಹಿಂತಿರುಗಿತು. ಬಳಿಕ ತ್ರಿಷ್ಟುಪ್ ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಅರ್ಧದಾರಿಗಿಂತ ಸ್ವಲ್ಪದೂರ ಹೋಗುವುದರೊಳಗಾಗಿ ಆಯಾಸದಿಂದ ಬಳಲಿ ಹಿಂತಿರುಗಿತು. ಈ ರೀತಿ ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸುಗಳು ಸೋಮವನ್ನು ತರಲು ಸಾಮರ್ಥ್ಯವಿಲ್ಲದೆ ಹಿಂತಿರುಗಿ ಬಂದದ್ದನ್ನು ದೇವತೆಗಳು ನೋಡಿ ಗಾಯತ್ರೀ ಛಂದಸ್ಸಿನ ಸಮೀಪಕ್ಕೆ ಹೋಗಿ—ಎಲೈ ಗಾಯತ್ರಿಯೇ, ನಮಗಾಗಿ ನೀನು ಸ್ವರ್ಗದಿಂದ ಸೋಮವನ್ನು ತರಬೇಕೆಂದು ಪ್ರಾರ್ಥಿಸಿದರು. ಗಾಯತ್ರಿಯು ಹಾಗೆಯೇ ಆಗಲೆಂದೊಪ್ಪಿ ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿ ಸೋಮವನ್ನು ಕಾಯುತ್ತಿದ್ದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರನ್ನು ಹೆದರಿಸಿ ಸೋಮವನ್ನು ಅಪಹರಿಸಿಕೊಂಡು ಬಂದು ಭೂಮಿಗೆ ತಂದಿತು. ಸೋಮಲತೆಯನ್ನು ತಂದದ್ದರಿಂದ ಛಂದಸ್ಸುಗಳಲ್ಲೆಲ್ಲಾ ಗಾಯತ್ರಿಗೆ ಶ್ರೇಷ್ಠವಾದ ಸ್ಥಾನವು ಲಭಿಸಿತು.

**ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀ-**

**ಯಾಭ್ಯಾಂ ಸಮಾವಜ್ಜಾಮಿಾಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮಹೀನ ಸಮಗೃಭ್ಣಾತ್ತತ್ತೃತೀಯಸವನಮಭವತ್ ।**

(ಐ. ಬ್ರಾ. ೧೩-೨೬)

ಸೋಮಲತೆಗಳನ್ನು ತರುವಾಗ ಶ್ಯೇನಪಕ್ಷಿಯು ತನ್ನ ಎರಡು ಕಾಲುಗಳಿಂದಲೂ ಕೊಕ್ಕಿನಿಂದಲೂ ಕಚ್ಚಿಕೊಂಡು ತರುತ್ತಿದ್ದಿತು. ಪಕ್ಷಿಯು ತನ್ನ ಬಲಗಾಲಿನಿಂದ ಹಿಡಿದುಕೊಂಡು ತಂದ ಸೋಮವು (ಅಥವಾ ಸೋಮಲತೆಯು) ಪ್ರಾತಃಸವನವಾಯಿತು. ಗಾಯತ್ರಿಯು ಅದನ್ನು ಎಂದರೆ ಪ್ರಾತಃಸವನವನ್ನು ತನ್ನ ಸ್ವಕೀಯ ಸ್ಥಾನವನ್ನಾಗಿ ಮಾಡಿಕೊಂಡಿತು. ಆದ್ದರಿಂದ ಸಮಸ್ತ ಸವನಗಳಲ್ಲಿಯೂ ಪ್ರಾತಃಸವನವೇ ಸರ್ವಶ್ರೇಷ್ಠವೆಂದು ಯಾಜ್ಞಿಕರ ಅಭಿಮತವು. ಆ ಪ್ರಾತಃಸವನ ಕರ್ಮದಲ್ಲಿ ಮಂತ್ರಾದಿಗಳ ಪ್ರಯೋಗವೂ ವಿಶೇಷವಾಗಿರುವುದು. ಆದುದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವ ಪುರುಷನು ತನ್ನ ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನೂ ಮುಖ್ಯನೂ ಆಗುವನೆಂದು ಪರಿಗಣಿಸಲ್ಪಡುವನು. ಗಾಯತ್ರಿಯು ಎಡಗಾಲಿನಿಂದ ಹಿಡಿದುಕೊಂಡು ತಂದ ಸೋಮದ ಭಾಗವು ಮಾಧ್ಯಂದಿನಸವನವೆಂದು ಪ್ರಸಿದ್ಧವಾಯಿತು. ಎಡಗಾಲಿನಿಂದ ಸೋಮಲತೆಯನ್ನು ಹಿಡಿದುಕೊಂಡು ತರುವಾಗ ಬಲಗಾಲಿಗಿರುವಷ್ಟು ಶಕ್ತಿಯು ಎಡಗಾಲಿಗಿಲ್ಲದಿರುವುದರಿಂದ ಆ ಲತೆಗಳು ಕಾಲಿನಿಂದ ಆಗಾಗ ಸ್ವಲ್ಪ ಸ್ವಲ್ಪ ಜಾರುತ್ತಿದ್ದಿತು. ಈ ಕಾರಣದಿಂದ ಈ ಮಾಧ್ಯಂದಿನಸವನವು ಪ್ರಾತಃಸವನದಂತೆ ಶಕ್ತಿಸಾಮರ್ಥ್ಯಗಳಲ್ಲಿ ಸರಿಸಮನಾಗಲಿಲ್ಲ. ಇದನ್ನು ಕಂಡು ದೇವತೆಗಳು ವಿಚಾರವಿಮರ್ಶೆಮಾಡಿ ಮಾಧ್ಯಂದಿನಸವನಕರ್ಮದಲ್ಲಿ ಉಪಯೋಗಿಸುವ ಛಂದಸ್ಸಗಳಿಗಾಗಿ ತ್ರಿಷ್ಟುಪ್ ಛಂದಸ್ಸನ್ನೂ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನನ್ನೂ ಸ್ಥಾಪಿಸಿದರು. ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಮತ್ತು ಅವನಿಗೆ ಪ್ರಿಯವಾದ ತ್ರಿಷ್ಟುಪ್‌ಛಂದಸ್ಸಿನ ಸಾಹಚರ್ಯದಿಂದ ಮಾಧ್ಯಂದಿನಸವನವು ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಪ್ರಾತಃಸವನಕ್ಕೆ ಸರಿಸಮನಾದ ಸ್ಥಾನವನ್ನು ಪಡೆಯಿತು. ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳ ಈ ವಿಧವಾದ ಸರಿಸಮಾನತೆಯನ್ನೂ, ಶಕ್ತಿಸಾಮರ್ಥ್ಯಗಳನ್ನೂ, ಶ್ರೇಷ್ಠತೆಯನ್ನೂ ತಿಳಿದಿರುವ ಪುರುಷನು ಧನಾದಿಗಳಲ್ಲಿ ಸಮೃದ್ಧಿಯನ್ನೂ, ಶ್ರೇಯಸ್ಸನ್ನೂ ಪಡೆದು ಸುಖಿಸುವನು. ಬಳಿಕ ಶ್ಯೇನರೂಪದಿಂದಿದ್ದ ಆ ಗಾಯತ್ರಿಯು ತನ್ನ ಕೊಕ್ಕಿನಿಂದ ಕಚ್ಚಿತಂದ ಸೋಮದ ಭಾಗವು ತೃತೀಯಸವನವೆಂದು ಪ್ರಸಿದ್ಧವಾಯಿತು.

**ತಸ್ಯ ಪತಂತೀ ರಸಮಧಯತ್ತದ್ವೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ಟಪಶ್ಯಂಸ್ತದ್ಯದಾಶಿರಮವನಯಂತ್ಯಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನೈಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ॥**

(ಐ. ಬ್ರಾ. ೧೩-೨೭.)

ಗಾಯತ್ರಿಯು (ಶ್ಯೇನವು) ತನ್ನ ಕೊಕ್ಕಿನಿಂದ ಸೋಮಲತೆಯನ್ನು ಕಚ್ಚಿಕೊಂಡು ಬರುತ್ತಿರುವಾಗ ಆ ಲತೆಯಲ್ಲಿದ್ದ ರಸವನ್ನು ಸ್ವಲ್ಪಸ್ವಲ್ಪವಾಗಿ ಹೀರಿ ಕುಡಿಯುತ್ತಿದ್ದಿತು. ಆದ್ದರಿಂದ ಎಂದರೆ ಕೊಕ್ಕಿನಿಂದ ತಂದ ಸೋಮಲತೆಗಳಲ್ಲಿ ರಸವು ಹೆಚ್ಚಾಗಿಲ್ಲದೆ ಕಮ್ಮಿಯಾಗಿದ್ದುದರಿಂದ ಈ ತೃತೀಯಸವನವು ಶಕ್ತಿಸಾಮರ್ಥ್ಯಾದಿಗಳಲ್ಲಿ ಪ್ರಾತಃಸವನ ಮಾಧ್ಯಂದಿನಸವನಗಳಿಗೆ ಸರಿಸಮನಾಗಲಿಲ್ಲ. ಆದ್ದರಿಂದ ಈ ವಿಷಯವನ್ನು ಕಂಡ ದೇವತೆಗಳು ವಿಚಾರಮಾಡಿ ಇದಕ್ಕೆ ತಕ್ಕ ಸಾಧನೋಪಾಯವು ಪಶುಗಳಲ್ಲಿರುವುದೆಂದು ಕಂಡುಕೊಂಡರು. ಪಶುಗಳಲ್ಲಿ ಹಾಲು, ಮೊಸರು ಆದರಿಂದ

ಲಬ್ಧವಾಗುವ ಆಜ್ಯ (ತುಪ್ಪ) ಮೊದಲಾದ ಹವಿರ್ದ್ರವ್ಯಗಳು ದೊರಕುವವು. ಕ್ಷೀರವನ್ನು ಅಥವಾ ಹಾಲನ್ನು ಲತೆಗಳಲ್ಲಿ ಕಮ್ಮಿಯಾಗಿರುವ ಸೋಮರಸಕ್ಕೆ ಬೆರಸಿದರೆ ಆ ರಸವು ಶಕ್ತಿಯುತವಾಗುವುದು. ಆಜ್ಯದಿಂದಲೂ, ಪಶುಗಳ ಅವಯವಗಳಿಂದಲೂ ಹೋಮಾದಿಗಳನ್ನು ಮಾಡಿದರೆ ಸವನಕರ್ಮವು ಸಾಂಗವಾಗುವುದು. ಆದುದರಿಂದ ಯಜ್ಞಕರ್ಮವನ್ನು ತಿಳಿದವರು ತೃತೀಯಸವನದಲ್ಲಿ ಉಪಯೋಗಿಸುವ ಋಜೀಷಕ್ಕೆ (ಪ್ರಾತಃಸವನ ಮಾಧ್ಯಂದಿನ ಸವನಗಳಲ್ಲಿ ರಸವನ್ನು ತೆಗೆದ ಬಳಿಕ ಉಳಿದಿರುವ ಸೋಮಲತೆಯ ಸಿಪ್ಪೆಗಳಿಗೆ ಋಜೀಷವೆಂದು ಹೇಳುವರು) ಹಾಲು ಮೊದಲಾದ ಆಶಿರದ್ರವ್ಯಗಳನ್ನು ಸೇರಿಸುವುದರಿಂದಲೂ, ಪಶುಗಳಿಂದ ಲಭಿಸತಕ್ಕ ಆಜ್ಯದಿಂದ ಮತ್ತು ಪಶುಗಳ ಹೃದಯಾದ್ಯಂಗಗಳಿಂದ ಹೋಮಗಳನ್ನು ಮಾಡುವುದರಿಂದಲೂ ತೃತೀಯಸವನಕರ್ಮವು ಪ್ರಾತಃಸವನಮಾಧ್ಯಂದಿನಸವನಗಳಿಗೆ ಶಕ್ತಿಸಾಮರ್ಥ್ಯಾದಿಗಳಲ್ಲಿ ಸರಿಸಮನಾಗುವುದು ಎಂದು ತಿಳಿದು ಅದರಂತೆ ಆಚರಿಸುವರು. ಈ ವಿಷಯವು ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರಿಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನಯತಿ ಸಶುಕ್ರತ್ವಾಯ ||** (ತೈ. ಸಂ. ೬-೧-೬-೪)

ಎಂದು ತೈತ್ತಿರೀಯ ಸಂಹಿತೆಯಲ್ಲಿ ಇದೇ ಅಭಿಪ್ರಾಯವು ಉಕ್ತವಾಗಿದೆ. ಈ ವಿಷಯವನ್ನು ಎಂದರೆ ಪ್ರಾತಃಸವನ ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳೂ ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಸರಿಸಮಾನವಾದ ಸ್ಥಾನವನ್ನು ಪಡೆದಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಸರ್ವ ಸಮೃದ್ಧಿ ಯುಕ್ತನಾಗಿ ಸುಖಿಸುವನು.

## ವಾಯುವೇ ದೇವತೆಗಳಲ್ಲೆಲ್ಲಾ ಮೊದಲು ಸೋಮಪಾನ ಮಾಡಲು ಅರ್ಹನೆಂಬ ವಿಚಾರ

**ಅಗ್ರಂ ಪಿಬ ಮಧೂನಾಂ** (ಋ. ಸಂ. ೪-೪೬-೧) ನೇ ಋಕ್ಕಿನಲ್ಲಿ ಇಂದ್ರಾದಿ ದೇವತೆಗಳಿಗಿಂತಲೂ ವಾಯುವೇ ಮೊದಲು ಸೋಮಪಾನಮಾಡಲು ಅರ್ಹನೆಂದು ಹೇಳಿದೆ. ಇದರ ಸಮರ್ಥನೆಗಾಗಿ—

**ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ |**
**ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ ||**

(ಋ. ಸಂ. ೭-೯೨-೧)

ಎಂಬ ಋಕ್ಕನ್ನು ಉದಾಹರಿಸಿ ಅಲ್ಲಿ ವಾಯುವೇ ಮೊದಲು ಸೋಮಪಾನಮಾಡಬೇಕೆಂದು ಋಷಿಯು ಪ್ರಾರ್ಥಿಸಿರುವುದನ್ನು ಸೂಚಿಸಲಾಗಿದೆ. ವಾಯುವಿಗೆ ದೇವತೆಗಳ ಮಧ್ಯೆ ಸೋಮಪಾನವಿಷಯದಲ್ಲಿ ಅಗ್ರಸ್ಥಾನವು ಹೇಗೆ ಲಭಿಸಿತೆಂಬ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿದೆ ಅದನ್ನು ಇಲ್ಲಿ ವಿವರಿಸಿದೇವೆ—

ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯ-ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಸ್ತೇಷಾಮಾಜಿಂ ಯಥಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ।

(ಐ. ಬ್ರಾ. ೯–೨೫)

ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಸೋಮಪಾನ ಮಾಡಬೇಕೆಂದು ಅಪೇಕ್ಷಿಸಿ ತಮ್ಮಲ್ಲಿ ಯಾರು ಮೊದಲು ಸೋಮ ಪಾನವನ್ನು ಮಾಡಬೇಕೆಂದು ವಿವಾದವುಂಟಾಗಲು ಆಗ ಅವರಲ್ಲಿ ನಾ ಮೊದಲು, ತಾನು ಮೊದಲು ಪಾನಮಾಡ ಬೇಕೆಂದು ಚರ್ಚೆಗಾರಂಭವಾಯಿತು. ಈ ವಿಷಯವು ಯಾವ ರೀತಿಯಲ್ಲಿಯೂ ಇತ್ಯರ್ಥವಾಗದ್ದರಿಂದ ಅವರೆಲ್ಲರೂ ಸೇರಿ ಸಮಾಲೋಚನೆಮಾಡಿ ಒಂದು ಒಪ್ಪಂದಕ್ಕೆ ಬಂದರು. ಏನೆಂದರೆ, ನಾವೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸೋಣ ಅದರಲ್ಲಿ ಗೆದ್ದವರು ಮೊದಲು ಸೋಮಪಾನಮಾಡಲು ಅರ್ಹರಾಗುವರು ಎಂದು. ಅದಕ್ಕೆ ಎಲ್ಲರೂ ಒಪ್ಪಲು ಆಗ ಒಂದು ಸ್ಥಳದಿಂದ ದೂರದಲ್ಲಿರುವ ಮತ್ತೊಂದು ಸ್ಥಳಕ್ಕೆ ಓಡಿಹೋಗಿ ಅಲ್ಲಿರುವ ಒಂದು ಕಲ್ಲುಬಂಡೆಯ ನ್ನಾಗಲಿ, ವೃಕ್ಷವನ್ನಾಗಲಿ ಮೊದಲು ಸಮೀಪಿಸಿದವರು ಗೆದ್ದವರೆಂದು ಭಾವಿಸಬೇಕು ಎಂದು ಸ್ಪರ್ಧೆಯು ನಿಶ್ಚಯ ವಾಯಿತು. ಈ ರೀತಿ ಗೆದ್ದವರು ನಮ್ಮಗಳ ಮಧ್ಯದಲ್ಲಿ ಜಯಶಾಲಿಯಾಗಿ ಸೋಮಪಾನವನ್ನು ಮಾಡಬೇಕು ಎಂಬ ಒಪ್ಪಂದಕ್ಕೆ ಎಲ್ಲರೂ ಸಮ್ಮತಿಸಲು ಎಲ್ಲಾ ದೇವತೆಗಳೂ ಏಕಕಾಲದಲ್ಲಿ ಓಡಲು ಪ್ರಾರಂಭಿಸಿದರು. ಓಡುತ್ತಿರುವ ಎಲ್ಲಾ ದೇವತೆಗಳಲ್ಲಿ ವಾಯುವು ಎಲ್ಲರಿಗಿಂತಲೂ ಮುಂದಾಗಿ ನಿರ್ದಿಷ್ಟಸ್ಥಳವನ್ನು ಸೇರಿದನು. ಇಂದ್ರನು ವಾಯುವಿನ ಹಿಂಭಾಗದಲ್ಲಿಯೇ ಬಂದು ಎರಡನೆಯವನಾದನು. ಅನಂತರ ಇಂದ್ರನ ಹಿಂದೆ ಮಿತ್ರಾವರುಣರೂ, ಅವರ ಹಿಂದೆ ಅಶ್ವಿನೀ ದೇವತೆಗಳೂ ಓಡಿಬಂದು ನಿರ್ದಿಷ್ಟಸ್ಥಳವನ್ನು ಸೇರಿದರು. ಆದುದರಿಂದ ಈ ದೇವತೆಗಳಲ್ಲಿ ವಾಯುವೇ ಎಲ್ಲರಿಗಿಂತಲೂ ಮುಂದಾಗಿ ಓಡಿ ಜಯಶಾಲಿಯಾದನು.

ಸೋಽವೇದಿಂದ್ರೋ ವಾಯುಮುದ್ವೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾ-ವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ತ್ರಿಭಾಗ್ವಾಯುಃ ॥

ವಾಯುವೂ ಅವನ ಹಿಂದೆ ಇಂದ್ರನೂ ಓಡುತ್ತಿರುವಾಗ ಅವರಲ್ಲಿ ಈ ರೀತಿ ಪರಸ್ಪರ ಸಂವಾದವುಂಟಾಯಿತು. ವಾಯುವು ವೇಗವಾಗಿ ಓಡುತ್ತಿರುವುದನ್ನು ಅವನ ಹಿಂದಿದ್ದ ಇಂದ್ರನು ಕಂಡು ಈ ವಾಯುವೇ ಎಲ್ಲರಿಗಿಂತಲೂ ಮುಂಚಿತವಾಗಿ ಓಡಿ ಜಯಶಾಲಿಯಾಗುವನು. ಏನಾದರೂ ಮಾಡಿ ನಾನೂ ಇವನ ಜತೆಗೇ ಓಡಿ ಗೆಲ್ಲಬೇಕು ಎಂದು ನಿಶ್ಚಯಿಸಿ, ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ವಾಯುವಿನ ಸಮೀಪದಲ್ಲಿಯೇ ಓಡಿದನು. ಆದರೂ ವಾಯು ವನ್ನು ಹಿಂದಕ್ಕೆ ಹಾಕಿ ತಾನು ಮುಂದುವರಿಯುವ ಸೂಚನೆಯು ಕಾಣದಿರಲು, ಆಗ ಇಂದ್ರನು ವಾಯುವನ್ನು ಕುರಿತು—ಎಲೈ ವಾಯುವೇ, ನಾವಿಬ್ಬರೂ ಎಲ್ಲರಿಗಿಂತಲೂ ಮುಂದಾಗಿರುವೆವು. ಆದ್ದರಿಂದ ನಾವಿಬ್ಬರೂ ಗೆದ್ದಂತೆ ಭಾವಿಸಿ ಪ್ರಥಮ ಸೋಮಪಾನವನ್ನು ಇಬ್ಬರೂ ಹಂಚಿಕೊಳ್ಳೋಣ. ನನಗರ್ಧ ನಿನಗರ್ಧ. ಈ ರೀತಿ ಇಬ್ಬರೂ ಸಹ

ಕರಿಸಿ ಜಯವನ್ನು ಸಂಪಾದಿಸೋಣ ಎಂದನು. ಆ ಮಾತನ್ನು ಕೇಳಿ ವಾಯುವು—ಎಲೈ ಇಂದ್ರನೇ, ನಿನಗಿಂತಲೂ ನಾನು ಸ್ವಲ್ಪಮಟ್ಟಿಗಾದರೂ ಮುಂದಾಗಿಯೇ ಇರುವೆನು. ಆದ್ದರಿಂದ ನಾನೊಬ್ಬನೇ ಜಯಶಾಲಿಯಾಗುವೆನು. ಪ್ರಥಮ ಸೋಮಪಾನದಲ್ಲಿ ಎಲ್ಲವೂ ನನಗೇ ಸೇರಬೇಕು. ನಿನಗೆ ಅರ್ಧವನ್ನು ಕೊಡುವುದಕ್ಕಾಗುವುದಿಲ್ಲ ಎಂದನು. ಆಗ ಇಂದ್ರನು—ಒಳ್ಳೇದು, ಹಾಗಾದರೆ ನನಗೆ ಅರ್ಧಭಾಗ ಬೇಡ. ಮೂರು ಭಾಗಗಳಲ್ಲಿ ಎರಡನ್ನು ನೀನು ತೆಗೆದುಕೊ. ನನಗೆ ಒಂದು ಭಾಗವನ್ನು ಮಾತ್ರ ಕೊಡು ಎನ್ನಲು, ವಾಯುವು ಅದಕ್ಕೂ ಒಪ್ಪದೆ, ಹೇಗಾದರೂ ನಾನೇ ಗೆಲ್ಲುವೆನು. ಎಲ್ಲಾ ಭಾಗವೂ ನನಗೇ ಸೇರುವುದು, ನಿನಗೆ ಮೂರರಲ್ಲಿ ಒಂದುಭಾಗವನ್ನೂ ಕೊಡಲು ನನಗಿಷ್ಟವಿಲ್ಲ ಎಂದನು. ಆಗ ಇಂದ್ರನು ಮತ್ತೆ ವಾಯುವನ್ನು ಪ್ರಾರ್ಥಿಸುತ್ತಾ, ನನಗೆ ಮೂರರಲ್ಲೊಂದುಭಾಗವೂ ಬೇಡ. ಇನ್ನೂ ಕಡಿಮೆಯಾಗಿ ಎಂದರೆ—ನಾಲ್ಕರಲ್ಲೊಂದು ಭಾಗವನ್ನು ಕೊಟ್ಟರೆ ಸಾಕು. ಅದಕ್ಕಾದರೂ ಒಪ್ಪು ಎಂದು ಕೇಳಲು, ವಾಯುವು ಹಾಗೆಯೇ ಆಗಲೆಂದು ಅದಕ್ಕೊಪ್ಪಿದನು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ (ಎಂದರೆ—ಇಂದ್ರ ಮತ್ತು ವಾಯು ಇಬ್ಬರು ಸೇರಿ ಸೋಮಪಾನ ಮಾಡುವಾಗ) ಇಂದ್ರನಿಗೆ ಒಂದುಭಾಗವೂ, ವಾಯುವಿಗೆ ಮೂರುಭಾಗವೂ ಇರಬೇಕೆಂದು ವ್ಯವಸ್ಥೆಯಾಯಿತು.

**ತೌ ಸಹೈವೇಂದ್ರವಾಯೂ ಉದಜಯತಾಂ ಸಹ ಮಿತ್ರಾವರುಣೌ ಸಹಾಶ್ವಿನೌ ತ ಏಷಾಮೇತೇ ಯತೋಽಜ್ಜಿತಂ ಭಕ್ಷಾ ಇಂದ್ರವಾಯ್ವೋಃ ಪ್ರಥಮೋಽಥ ಮಿತ್ರಾವರುಣಯೋರಥಾಶ್ವಿನೋಃ ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ ।**

ಈ ರೀತಿ ಇಂದ್ರ ಮತ್ತು ವಾಯುವು ಸಹಕರಿಸಿ ಸ್ಪರ್ಧೆಯನ್ನು ಗೆದ್ದು ನಿರ್ದಿಷ್ಟಪ್ರದೇಶವನ್ನು ಮೊದಲು ತಲುಪಿದರು. ಅವರ ಹಿಂದೆ ಮಿತ್ರಾವರುಣರು ಬಂದು ಸೇರಿದರು. ಅವರ ಹಿಂದೆ ಅಶ್ವಿನೀ ದೇವತೆಗಳು ಬಂದರು. ಆದ್ದರಿಂದ ಈ ದೇವತೆಗಳ ಮಧ್ಯದಲ್ಲಿ ಅವರು ಸ್ಪರ್ಧೆಯಲ್ಲಿ ಯಾವಯಾವ ಸ್ಥಾನವನ್ನು ಪಡೆದರೋ ಆ ಕ್ರಮದಲ್ಲಿ ಅವರು ಸೋಮಪಾನಕ್ಕೆ ಅರ್ಹರಾದರು. ಎಂದರೆ ಮೊದಲು ಇಂದ್ರವಾಯುಗಳು, ಅನಂತರ ಮಿತ್ರಾವರುಣರು, ಅವರನಂತರ ಅಶ್ವಿನೀದೇವತೆಗಳು ಸೋಮಪಾನ ಮಾಡಲು ವ್ಯವಸ್ಥೆಯುಂಟಾಯಿತು. ಹೀಗೆ ಇಬ್ಬಿಬ್ಬರು ದೇವತೆಗಳು ಸೇರಿ ಸೋಮಪಾನ ಮಾಡುವ ಕ್ರಮವು) ರೂಢಿಗೆ ಬಂದಿತು. ಆದ್ದರಿಂದ ಐಂದ್ರವಾಯುವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗ ಮಾತ್ರ ಸೋಮಪಾನದಲ್ಲಿ ವ್ಯವಸ್ಥೆ ಇರುವುದು.

**ತದೇತದೃಷಿಃ ಪಶ್ಯನ್ನಭ್ಯನೂವಾಚ ನಿಯುತ್ವಾँ ಇಂದ್ರಸಾರಥಿರಿತಿ ।**

ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದುಭಾಗವಿರುವುದನ್ನು ಋಷಿಯು ದಿವ್ಯದೃಷ್ಟಿಯಿಂದ ತಿಳಿದು, ಮುಂದಿನ ಋಕ್ಕಿನಲ್ಲಿ ಎಂದರೆ–**ಶತೇನಾ ನೋ ಅಭಿಷ್ಟಿಭಿರ್ನಿಯುತ್ವಾँ ಇಂದ್ರಸಾರಥಿಃ** । (ಋ. ಸಂ. ೪-೪೬-೨) ಎಂಬ ಋಕ್ಕಿನಲ್ಲಿ ಈ ವಿಷಯವನ್ನು **ನಿಯುತ್ವಾँ ಇಂದ್ರಸಾರಥಿಃ** ಎಂಬ ವಾಕ್ಯದಿಂದ ವ್ಯಕ್ತಪಡಿಸಿರುವನು. ಇಲ್ಲಿ **ನಿಯುತೋ ವಾಯೋಃ** ಎಂಬ ನಿರುಕ್ತ ವಚನದಂತೆ (ನಿ. ೨–೨೮) ನಿಯುತ ಎಂಬ ಅಶ್ವಗಳು ವಾಯುದೇವನ ವಾಹನವೆಂದು ಪ್ರಸಿದ್ಧವು. ಆದ್ದರಿಂದ ನಿಯುತ್ವಚ್ಛಬ್ದವು ವಾಯುಸಂಬಂಧವನ್ನು ಸೂಚಿಸುವುದು. ಮೇಲಿನ ಋಕ್ಕಿನಲ್ಲಿ ನಿಯುತ್ವಾನ್ ಎಂಬ ಪದವು ವಾಯುವಿನಿಂದ ಸಹಿತವಾದ ಇಂದ್ರನನ್ನು ಸೂಚಿಸುವುದು. **ಅಧಾ ವಾಯುಂ ನಿಯುತಃ ಸಶ್ಚತಸ್ವಾಃ** (ತೈ. ಬ್ರಾ. ೨-೮-೧-೧) ಇತ್ಯಾದಿ ಮಂತ್ರಗಳು ಈ ವಿಷಯವನ್ನು ಸಮರ್ಥಿಸುವುವು. ಇಂದ್ರಸಾರಥಿಃ ಎಂಬ ಶಬ್ದಕ್ಕೆ ವಾಯುವಿಗೆ ಸಾರಥಿಯಾದ ಇಂದ್ರನು ಎಂದಭಿಪ್ರಾಯವು. ಇಂದ್ರನು

ವಾಯುವಿಗೆ ಸಾರಥಿಸ್ಥಾನದಲ್ಲಿರುವುದರಿಂದ ಇಂದ್ರನಿಗೆ ಪ್ರಥಮ ಸೋಮಪಾನದಲ್ಲಿ ಚತುರ್ಥಾಂಶಮಾತ್ರವಿರುವುದೆಂದು ಇದರಿಂದ ಸೂಚಿತವಾಗುವುದು.

**ತಸ್ಮಾದ್ಧಾಪ್ಯೇತರ್ಹಿ ಭರತಾಃ ಸತ್ವನಾಂ ವಿತ್ತಿಂ ಪ್ರಯಂತಿ ತುರಿಯೇ ಹೈವ ಸಂಗ್ರಹೀತಾರೋ ವದಂತ್ಯೇಮುನ್ಯೈವಾನೂಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ ॥**
(ಐ. ಬ್ರಾ. ೯-೨೫)

ಮೇಲೆ ಹೇಳಿದ ವಿಷಯವನ್ನು ಲೋಕವ್ಯವಹಾರದೃಷ್ಟಿಯಿಂದ ಉದಾಹರಣೆ ಮೂಲಕವಾಗಿ ವಿಶದಪಡಿಸುವರು. ಯುದ್ಧದಲ್ಲಿ ಯೋಧರಾದವರು ರಥಗಳಲ್ಲಿ ಕುಳಿತು ತಮ್ಮ ಸಾರಥಿಯ ಸಹಾಯದಿಂದ ಯುದ್ಧದಲ್ಲಿ ಜಯಶೀಲರಾಗಿ ಶತ್ರುಗಳ ಧನಾದಿಗಳನ್ನು ಆಕ್ರಮಿಸುವರು. ಆ ರೀತಿ ಆಕ್ರಮಿಸಿದಾಗ ಆ ಧನಾದಿಗಳಲ್ಲಿ ಒಂದು ಭಾಗವನ್ನು ಎಂದರೆ—ನಾಲ್ಕರಲ್ಲಿ ಒಂದುಭಾಗವನ್ನು ತಮಗೆ ಸಹಾಯಕರಾದ ಸಾರಥಿಗಳಿಗೆ ಕೊಡುವರು. ಈ ಪದ್ಧತಿಯು ಲೋಕವ್ಯವಹಾರದಲ್ಲಿ ರೂಢಿಯಲ್ಲಿದೆ. ಅದರಂತೆ ದೇವತೆಗಳು ಏರ್ಪಡಿಸಿದ್ದ ಈ ಸ್ಪರ್ಧೆಯಲ್ಲಿ ಇಂದ್ರನು ವಾಯುವಿಗೆ ಸಾರಥಿಯಾಗಿ ವಾಯುವು ಜಯಶೀಲನಾಗಿದ್ದುದರಿಂದ ಸ್ಪರ್ಧೆಯಲ್ಲಿ ದೊರೆತ ಪ್ರಥಮ ಸೋಮಪಾನದಲ್ಲಿ ಚತುರ್ಥಾಂಶವು ಇಂದ್ರನ ಭಾಗವಾಯಿತು. ಇಂದ್ರನು ತನ್ನ ಚತುರ್ಥಾಂಶವನ್ನು ವಾಯುವಿಗೆ ಸಾರಥಿಯಾಗಿ ಗಳಿಸಿದನು ಎಂದು ಮುಖ್ಯಾಭಿಪ್ರಾಯವು.

## ಋಭುಗಳು ಸೋಮಪಾನಾರ್ಹತೆಯನ್ನು ಪಡೆದ ವಿಚಾರ

ಸಾಯಣರು ೧-೧೬೧-೧ ನೇ ಋಕ್ಕಿನ ಭಾಷ್ಯದ ಪೀಠಿಕೆಯಲ್ಲಿ ಇದಕ್ಕೆ ಸಂಬಂಧಪಟ್ಟ ಪೂರ್ವಕಥೆಯನ್ನು ತಿಳಿಸಿದ್ದಾರೆ. ಸುಧನ್ವಪುತ್ರರಾದ **ಋಭು, ವಿಭ್ವ, ವಾಜ** ಎಂಬ ಮೂವರುಪುತ್ರರೂಸಹ ಮಾನವರಾದಾಗ್ಯೂ ತಮ್ಮ ಸತ್ಕರ್ಮಗಳಿಂದ ದೇವತ್ವವನ್ನು ಪಡೆದವರಾಗಿ ಒಂದುಸಲ ಯಜ್ಞಕಾಲದಲ್ಲಿ ದೇವತೆಗಳೊಂದಿಗೆ ಸೋಮಪಾನಕ್ಕಾಗಿ ಪ್ರವರ್ತಿಸಿದರು. ದೇವತೆಗಳಿಂದ ಪ್ರೇರಿಸಲ್ಪಟ್ಟ ಅಗ್ನಿಯು ಸಮಾನರೂಪರಾದ ಅವರನ್ನು ನೋಡಿ ತಾನೂ ಸಹ ಅದೇ ರೂಪವನ್ನು ಹೊಂದಿಕೊಂಡು ಅವರೊಡನೆ ತಾನೂ ಪಾನಮಾಡಲುಪಕ್ರಮಿಸಿದನು. ತಮ್ಮೊಂದಿಗೆ ತಮ್ಮ ಆಕಾರವನ್ನೇ ಹೊಂದಿಕೊಂಡು ಬಂದ ನಾಲ್ಕನೆಯವನು ಯಾರೆಂದು ತಿಳಿಯದೆ ತಮ್ಮ ತಮ್ಮಲ್ಲಿಯೇ ಸಂದೇಹಪಡುತ್ತಾರೆ. ಈ ಋಕ್ಕಿನ ಪೂರ್ವಾರ್ಧದಲ್ಲಿ ಆ ಜಿಜ್ಞಾಸೆಯೂ, ಕೊಂಚಕಾಲನಂತರ ಅವನು ಯಾರೆಂದು ನಿಷ್ಕರ್ಷಿಸಿ ಅವನೊಂದಿಗೆ ಸಂಭಾಷಣೆಯನ್ನು ಮಾಡುತ್ತಾ ಅವನಿಗೆ **ಚಮಸದ** ಮಾಹಾತ್ಮ್ಯವನ್ನು ಹೇಳುವುದಾಗಿ ತಿಳಿಸಿದುದು ಉತ್ತರಾರ್ಧದಲ್ಲೂ ಉಕ್ತವಾಗಿದೆ.

ಈ ಸಹೋದರರ ಸತ್ಕುಲಪ್ರಸೂತಿಯನ್ನೂ ಇವರ ಸತ್ಕರ್ಮದ ಮಾಹಾತ್ಮ್ಯವನ್ನೂ, ದೇವತೆಗಳ ಜೊತೆಯಲ್ಲಿ ಸೇರಿಕೊಳ್ಳುವಾಗ ದೇವತೆಗಳು ಅಸೂಯೆಯಿಂದ ಇವರಿಗೆ ತೊಂದರೆಯನ್ನು ಕೊಟ್ಟಿದನ್ನೂ ಆಗ ಪ್ರಜಾಪತಿಯೂ ಸವಿತೃವೂ ಇವರಿಗೆ ಸಹಾಯಮಾಡಿದುದನ್ನೂ ಸಹ ಕೆಲವೆಡೆಗಳಲ್ಲಿ ತಿಳಿಸಿದೆ. ಉದಾಹರಣೆಗೆ;—

**ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಸ್ಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯೇ—**

**ಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವೇ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ||**

(ಐ. ಬ್ರಾ. ೩-೩-೩೦)

ಋಭುಗಳು ತಮ್ಮ ತಪಸ್ಸಾಧನೆಯಿಂದಲೂ ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನಾರ್ಹತೆಯನ್ನು ಸಂಪಾದಿಸಿದರು. ಮೊದಲು ಪ್ರಾತಸ್ಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಮಾಧ್ಯಂದಿನಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವತೆಗಳು ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ. ನೀವು ಮಾಡಕೂಡದು ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು ಎಂದನು. ಸವಿತೃವು ಅದಕ್ಕೆ ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಇದ್ದು ಸೋಮರಸವನ್ನು ಪಾನಮಾಡಿದನು ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ಈ ಕಥೆಯನ್ನು ಹೇಳಿದೆ.

## ಸೋಮಯಾಗದ ಸಪ್ತಸಂಸ್ಥೆಗಳು

ಸೋಮಯಾಗದಲ್ಲಿ ಏಳು ಪ್ರಭೇದಗಳಿವೆ. ಇವುಗಳನ್ನು ಸಪ್ತಸೋಮಸಂಸ್ಥೆಗಳೆಂದು ಕರೆಯುವ ರೂಢಿಯಾಗಿದೆ. ಅವುಗಳಿಗೆ **ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೋರ್ಯಾಮ, ವಾಜಪೇಯ** ಎಂದು ಹೆಸರು. ಇವುಗಳಲ್ಲಿ ಅಗ್ನಿಷ್ಟೋಮಯಾಗವು ಪ್ರಕೃತಿಸ್ವರೂಪವಾಗಿರುವುದು. ಎಂದರೆ ಈ ಯಾಗವು ಉಳಿದ ಸೋಮಯಾಗಗಳಿಗೆ ಮೂಲಭೂತವಾಗಿರುವುದು. ಇದು ಕೆಲವು ವ್ಯತ್ಯಾಸಗಳನ್ನು ಹೊಂದಿ **ಉಳಿದ** ಆರು ಸೋಮಯಾಗಗಳಾಗುವವು.

## ಸೋಮಯಾಗದ ಫಲ

೧-೧೪೦-೧೨ ನೇ ಋಕ್ಕಿನಲ್ಲಿ (ಸೋಮ) ಯಾಗವನ್ನು ದೋಣಿಗೂ ಸಂಸಾರವನ್ನು ಸಾಗರಕ್ಕೂ ಋತ್ವಿಕ್ಕುಗಳನ್ನು ಹುಟ್ಟುಗಳಿಗೂ ಹೋಲಿಸಿದೆ. ದಾರಿದ್ರ್ಯ, ಶತ್ರುಭಯ, ಇತರವಿಧವಾದ ದುಃಖಗಳೇ ಸಂಸಾರಸಾಗರದ ಭಯಂಕರ ಸನ್ನಿವೇಶಗಳು. ಈ ಸಾಗರವನ್ನು ದಾಟಬೇಕಾದರೆ ದೋಣಿಯೇ ಮುಖ್ಯವಾದ ಸಾಧನವಾದರೂ ಸಹ ಈ ದೋಣಿಯು ಸುರಕ್ಷಿತವಾಗಿ ಯಜಮಾನನನ್ನು ಈ ಸಾಗರದ ಮೂಲಕ ದಾಟಿಸಬೇಕಾದರೆ, ದೋಣಿಯು ಮತ್ತು ಅದರ ಹುಟ್ಟುಗಳ ಸಹಾಯವಿಲ್ಲದೇ ಸಾಧ್ಯವಿಲ್ಲ. ಆದುದರಿಂದ ಶ್ರೇಷ್ಠವಾದ ಋತ್ವಿಗ್ರೂಪದಲ್ಲಿರುವ ಹುಟ್ಟುಗಳಿಂದ ನಡೆಸಲ್ಪಟ್ಟ ಸೋಮಯಾಗಾತ್ಮಕವಾದ ದೋಣಿಯು ನಮ್ಮನ್ನು ಸಂಸಾರಸಾಗರದಿಂದ ಸುರಕ್ಷಿತವಾಗಿ ದಾಟಿಸಲಿ ಎಂದು ಪ್ರಾರ್ಥಿಸಿದೆ.

ಸಾಧಾರಣವಾಗಿ ಋಕ್ಸಂಹಿತೆಯಲ್ಲಿ ದಾರಿದ್ರ್ಯಾದಿದುಃಖವನ್ನೂ, ತದ್ಧೇತುವಾದ ದುರಿತವನ್ನೂ, ಶತ್ರುವನ್ನೂ ಆಳವಾದ ಜಲಪ್ರವಾಹಕ್ಕೂ, ಮತ್ತು ದೇವತೆಗಳ ಸಹಾಯವನ್ನು ದೋಣಿಗೂ ಹೋಲಿಸಿರುವುದು ಅತ್ಯುಚಿತವಾದ ಉಪಮಾನವಾಗಿದೆ. ಉದಾಹರಣೆಗೆ

**ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ ।**
**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥**
(ಋ. ಸಂ. ೧-೯೯-೧)

**ನೂ ನ ಇಂದ್ರಾವರುಣಾ ಗೃಣಾನಾ ಪೃಂಕ್ತಂ ರಯಿಂ ಸೌಶ್ರವಸಾಯ ದೇವಾ ।**
**ಇತ್ಥಾ ಗೃಣಂತೋ ಮಹಿನಸ್ಯ ಶರ್ಧೋಽಪೋ ನ ನಾವಾ ದುರಿತಂ ತರೇಮ ॥**
(ಋ. ಸಂ. ೬-೬೮-೮)

ಇತ್ಯಾದಿ ಋಕ್ಕುಗಳಲ್ಲಿ ಸಿಂಧುವನ್ನು ದೋಣಿಯಿಂದ ಸುಲಭವಾಗಿ ದಾಟುವಂತೆ ಅಗ್ನ್ಯಾದಿದೇವತೆಗಳ ಸಹಾಯದಿಂದ ದುರಿತವನ್ನು ದಾಟುವಂತಾಗಲಿ ಎಂದು ಪ್ರಾರ್ಥಿಸಿರುವಂತೆ ಇಲ್ಲಿಯೂ ಸಹ **ಯಾಗಾತ್ಮಕ**ವಾದ ದೋಣಿಯನ್ನು ಒದಗಿಸಿಕೊಡು ಎಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

ಇಲ್ಲಿ ಸೋಮಯಾಗಾತ್ಮಕವಾದ ನಾವೆಯ ಉಪಕಾರವು ಮೂರುವಿಧವಾಗಿದೆಯೆಂದು ಹೇಳಿದೆ. ಮೊದಲನೆಯದಾಗಿ ಯಜ್ಞಕರ್ತರನ್ನೂ ಅವರ ಪುತ್ರರನ್ನೂ ಧನವಂತರನ್ನಾಗಿ ಮಾಡುವುದು; ಎರಡನೆಯದಾಗಿ ಯಜಮಾನರನ್ನು ಸಂಸಾರದಿಂದ ದಾಟಿಸುವುದು, ಮೂರನೆಯದಾಗಿ ಅತಿಶುಚಿಯಾದ ಬ್ರಹ್ಮಲೋಕದ ಸುಖವನ್ನು ಕೊಡಿಸುವುದು ಎಂದು **ಅಸ್ಮಾಕಂ ವೀರಾನ್ ಮಘೋನಃ ; ಉತ ನಃ ಜನಾಂಶ್ಚ ಪಾರಯಾತ್ ; ಚ ಯಾ ಶರ್ಮ ನಾವಂ** ಎಂಬ ವಾಕ್ಯಗಳಿಗೆ ಸಾಯಣರು ವಿವರಣೆಯನ್ನು ಹೇಳಿದ್ದಾರೆ. ಋಕ್ಸಂಹಿತೆಯಲ್ಲಿ ಮಾತ್ರವಲ್ಲದೇ ಶತಪಥಾದಿಬ್ರಾಹ್ಮಣದಲ್ಲಿಯೂ ಸಹ ಇದೇ ಉಪಮಾನವು ಪ್ರಸಿದ್ಧವಾಗಿದೆ. ಉದಾಹರಣೆಗೆ

**ನೌರ್ಹ ವಾ ಏಷಾ ಸ್ವರ್ಗ್ಯಾ । ಯದ್ಬಹಿಷ್ಪವಮಾನಂ ತಸ್ಯಾ ಋತ್ವಿಜ ಏವ ಸ್ಫ್ಯಾಶ್ಚಾರಿತ್ರಾಶ್ಚ ಸ್ವರ್ಗಸ್ಯ ಲೋಕಸ್ಯಾ ಸಂಪಾರಣಾಸ್ತಸ್ಯಾ ಏಕ ಏವ ಮಜ್ಜಯಿತಾಯ ಏವ ನಿಂದ್ಯಃ ಸ ಯಥಾ ಪೂರ್ಣಾಮಭ್ಯಾರುಹ್ಯ ಮಜ್ಜಯೇದೇವಂ ಹೈನಾಂ ಸಮಜ್ಜಯತಿ ತದ್ವೈ ಸರ್ವ ಏವ ಯಜ್ಞೋ ನೌಃ ಸ್ವರ್ಗ್ಯಾ ತಸ್ಮಾದು ಸರ್ವಸ್ಮಾದೇವ ಯಜ್ಞಾನ್ನಿಂದ್ಯಂ ಪರಿಬಿಬಾಧಿಷೇತ ।**
(ಶ. ಬ್ರಾ. ೪-೨-೫-೧೦)

ಸೋಮಯಾಗವೂ, ಸೋಮಯಾಗದ ಪ್ರಾರಂಭದ ದಿನ ಪಠಿಸಬೇಕಾದ **ಬಹಿಷ್ಪವಮಾನಸ್ತೋತ್ರವೂ** ಸಹ **ಸ್ವರ್ಗ**ವನ್ನು ಸೇರಿಸತಕ್ಕ ನಾವೆಗಳಾಗಿವೆ. ಋತ್ವಿಕ್ಕುಗಳೇ ಇವುಗಳ ಹರಿಗೋಲುಗಳಾಗಿದ್ದಾರೆ. ಈ ಋತ್ವಿಕ್ಕುಗಳಲ್ಲಿ ಯಾವನೊಬ್ಬನಾದರೂ ದೂಷ್ಯವಾದ ವೃತ್ತಿಯುಳ್ಳವನಾಗಿದ್ದರೂ ಸಹ ಅವನು ಈ ನಾವಗಳನ್ನು ಮುಳುಗುವಂತೆ ಮಾಡಿಬಿಡುತ್ತಾನೆ. ಆದುದರಿಂದ ಅಂತಹವನನ್ನು ಯಾಗಕ್ರಿಯೆಯಿಂದ ದೂರವಾಗಿಡಬೇಕು ಎಂದು ಶತಪಥ ಬ್ರಾಹ್ಮಣದಲ್ಲಿಯೂ ಹೀಗೆಯೇ,

**ಯಜ್ಞೋ ವೈ ಸುಶರ್ಮಾ ನೌಃ ।**
(ಐ ಬ್ರಾ. ೧-೧೩)

ನಾವಮಿಹಾರುಹೇಮೇತಿ ಸಮೇವೈನಮೇತದಧಿರೋಹತಿ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ
ಸಂಪತ್ತ್ಯೈ ಸಂಗತ್ಯೈ॥

(ಐ. ಬ್ರಾ. ೪-೨೦)

ಎಂದು ಐತರೇಯ ಬ್ರಾಹ್ಮಣದಲ್ಲಿಯೂ ಸಹ ಈ ವಿಧವಾದ ಉಪಮಾನವು ಪ್ರಸಿದ್ಧವಾಗಿದೆ. ಮತ್ತು ಈ ಯಾಗದ ಫಲವು ಅತ್ಯುತ್ತಮವಾದುದರಿಂದ ದೇವತೆಗಳೂ ಸಹ ಇದನ್ನು ಅಪೇಕ್ಷಿಸಿ ಯಜ್ಞದಲ್ಲಿ ಆಸಕ್ತರಾಗಿರುತ್ತಾರೆ. ಆದುದರಿಂದ ಅವರನ್ನು ಅನುಸರಿಸಿ ಮಾನವರೂ ಯಜ್ಞಕಾರ್ಯದಲ್ಲಿ ಆಸಕ್ತರಾಗಿರಬೇಕು, ಎಂದು ಉಪದೇಶಿಸುತ್ತಾ,

ತೇ ಆಸತೆ। ಶ್ರಿಯಂ ಗಚ್ಛೇಮ। ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ ತೆಥೋ ಏವೇಮೇ ಸತ್ರ-ಮಾಸತೇ ಶ್ರಿಯಂ ಗಚ್ಛೇಮ ಯಶಃ ಸಾಮಾನ್ನದಾಃ ಸ್ಯಾಮೇತಿ। ತೇ ಹೋಚುಃ ಯೋ ನಃ ಶ್ರಮೇಣ ತಪಸಾ ಶ್ರದ್ಧಯಾ ಯಜ್ಞೇನಾಹುತಿಭಿರ್ಯಜ್ಞಸ್ಯೋದೃಚಂ ಪೂರ್ವೋಽವ-ಗಚ್ಛಾತ್ಸ ನಃ ಶ್ರೇಷ್ಠೋಽಸತ್ತದು ನಃ ಸರ್ವೇಷಾಂ ಸಹೇತಿ ತಥೇತಿ। ತದ್ವಿಷ್ಣುಃ ಪ್ರಥಮಃ ಪ್ರಾಪ। ಸ ದೇವಾನಾಂ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಂ ಶ್ರೇಷ್ಠ ಇತಿ।

(ಶ. ಬ್ರಾ. ೧೪-೧-೧-೨, ೩)

ಯಜ್ಞಾಚರಣೆಯಿಂದ ಘನತೆಯೂ ಮಾಹಾತ್ಮ್ಯವೂ ಮತ್ತು ಅನ್ನಸಂಪತ್ತೂ ಲಭಿಸುವುದರಿಂದ ದೇವತೆಗಳು ಅವನ್ನು ಇಚ್ಛಿಸಿ ಯಜ್ಞಾಸಕ್ತರಾದರು. ಅವರಲ್ಲಿ ವಿಷ್ಣುವು ಪ್ರಥಮಸ್ಥಾನವನ್ನು ಪಡೆದುದರಿಂದ ವಿಷ್ಣುವು ದೇವತೆಗಳಲ್ಲೆಲ್ಲಾ ಶ್ರೇಷ್ಠನಾದನು ಎಂದು ಯಜ್ಞಫಲವನ್ನು ಸ್ತುತಿಸಿದೆ.

## ಸೋಮಮಂತ್ರಗಳನ್ನು ಅಧ್ಯಯನಮಾಡಿದವರಿಗೆ ನಾನಾವಿಧ ಪಾಪಪರಿಹಾರ

ನಿರುಕ್ತದಲ್ಲಿಯೂ, ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ಮುಖ್ಯವಾದ ಪಾಪಕೃತ್ಯಗಳು ಏಳು ಎಂದು ಹೇಳಿದ್ದರೂ, ಪಾಪಗಳಲ್ಲಿ ಅನೇಕವಿಧವಿರುವುದನ್ನೂ ಪಾಪಮಾಡಿದವನು ಪವಮಾನಸೋಮದೇವತೆಯನ್ನು ಸ್ತುತಿಸುವ ೬೧೦ ಋಕ್ಕುಗಳನ್ನು ಎಂದರೆ ಋಗ್ವೇದಸಂಹಿತೆಯ ೯ ನೆಯ ಮಂಡಲದ ಪ್ರಾರಂಭದಲ್ಲಿರುವ ಗಾಯತ್ರೀ ಛಂದಸ್ಸಿನ ೬೧೦ ಋಕ್ಕುಗಳನ್ನೊಳಗೊಂಡಿರುವ ೧-೬೭ ಸೂಕ್ತಗಳನ್ನು ಗುರುಮುಖದಿಂದ ನಿಯಮವಾಗಿ ಅಧ್ಯಯನ ಮಾಡಿದಲ್ಲಿ ಅಂತಹ ಪುರುಷನ ನಾನಾವಿಧ ಪಾಪಗಳನ್ನು ಪರಿಹಾರಮಾಡಿ ಪರಿಶುದ್ಧನನ್ನಾಗಿ ಮಾಡುತ್ತೇನೆಂದು ವೇದಪುರುಷನೇ ಪರಿಶಿಷ್ಟಮಂತ್ರಗಳಲ್ಲಿ ಹೇಳಿದ್ದಾನೆ. ಅವುಗಳನ್ನು ಇಲ್ಲಿ ವಿವರಿಸಲಾಗಿದೆ.

ಋಷಯಸ್ತು ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ।
ತಪಂತಸ್ತಪಸೋಗ್ರೇಣ ಪಾವಮಾನೀರ್ಋಚೋಽಬ್ರುವನ್

(ಪರಿಶಿಷ್ಟ. ೧೮-೬)

ಪೂರ್ವದಲ್ಲಿ ಸ್ವರ್ಗವನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಮಸ್ತ ಋಷಿಗಳೂ ಉಗ್ರವಾದ ತಪಸ್ಸನ್ನು ಮಾಡಿ ಈ ಪಾವಮಾನೀ ಋಕ್ಕುಗಳನ್ನು ಅಧ್ಯಯನಮಾಡಿ ಅವುಗಳ ಪಾಪಪರಿಹಾರಕವಾದ ಪ್ರಶಂಸೆಯನ್ನು ಈ ರೀತಿ ಮಾಡಿರುವರು.

ಯನ್ಮೇ ಗರ್ಭೇ ವಸತಃ ಪಾಪಮುಗ್ರಂ ಯಜ್ಜಾಯಮಾನಸ್ಯ ಚ ಕಿಂಚಿದನ್ಯತ್ ।
ಜಾತಸ್ಯ ಚ ಯಚ್ಚಾಪಿ ಚ ವರ್ಧತೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ. ೧೮-೭)

ಸರ್ವೇಶ್ವರನಾದ ಆ ವೇದಪುರುಷನು ಈ ರೀತಿ ಹೇಳಿರುವನು—ಯಾವ ಪುರುಷನು ಗರ್ಭವಾಸದಲ್ಲಿರುವಾಗಲೂ, ಅನಂತರ ಹುಟ್ಟುವಾಗಲೂ, ಹುಟ್ಟಿದಮೇಲೆಯೂ ಬೆಳೆಯುತ್ತಿರುವಾಗಲೂ ಅತ್ಯುಗ್ರವಾದ ಪಾಪವನ್ನು ಮಾಡಿದ್ದರೂ ಅವನು ಪಾವಮಾನೀ ಮಂತ್ರಗಳನ್ನು ಅಧ್ಯಯನ ಮಾಡಿದಲ್ಲಿ ಅಂತಹ ಪಾಪಗಳನ್ನೆಲ್ಲಾ ನಾಶಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

ಮಾತಾಪಿತ್ರೋರ್ಯನ್ನ ಕೃತಂ ವಚೋ ಮೇ ಯತ್ಸ್ಥಾವರಂ ಜಂಗಮಮಾಬಭೂವ ।
ವಿಶ್ವಸ್ಯ ತತ್ಪ್ರಹೃಹಿತಂ ವಚೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ. ೧೫-೮)

ತಂದೆತಾಯಿಗಳ ಮಾತನ್ನು ಮೀರಿದ ಪಾಪವನ್ನೂ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಯಾವ ಪ್ರಾಣಿಗೇ ಆಗಲಿ ಅಹಿತವನ್ನು ಬಯಸಿ ಆಡುವ ಮಾತಿನಿಂದ ಯಾವ ಪಾಪವು ಉಂಟಾಗುವುದೋ ಅಂತಹ ಪಾಪವನ್ನೂ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

ಗೋಘ್ನಾತ್ ತಸ್ಕರತ್ವಾತ್ ಸ್ತ್ರೀವಧಾದ್ಯಚ್ಚ ಕಿಲ್ಬಿಷಂ ।
ಪಾಪಕಂ ಚ ಚರಣೇಭ್ಯಸ್ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ. ೧೮-೯)

ಗೋಹತ್ಯ, ಕಳ್ಳತನ, ಸ್ತ್ರೀಹತ್ಯ, ಕಾಲುಗಳಿಂದ ಪ್ರಾಣಿಗಳನ್ನು ತುಳಿದು ಹಿಂಸಿಸುವ ಕೃತ್ಯ ಇವುಗಳಿಂದ ಉಂಟಾಗ ಬಹುದಾದ ಪಾಪವನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಬ್ರಹ್ಮವಧಾತ್ಸುರಾಪಾನಾತ್ಸ್ವರ್ಣಸ್ತೇಯಾದ್ವೃಷಲಿಗಮನನ್ಮೈಥುನಸಂಗಮಾತ್ ।
ಗುರೋರ್ದಾರಾಧಿಗಮನಾಚ್ಚ ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ ೧೮-೧೦)

ಬ್ರಹ್ಮಹತ್ಯ, ಮದ್ಯಪಾನ, ಚಿನ್ನವನ್ನು ಕದಿಯುವುದು, ತಂಗಿಗೆ ಮದುವೆಯಾಗಿದ್ದರೂ ತನಗೆ ಮದುವೆಯಾಗದಿರುವ ವೃಷಲಿ ಎಂಬ ಸ್ತ್ರೀಯನ್ನು ಸಂಗಮಾಡಿದ ಪಾಪ, ಗುರುವಿನ ಪತ್ನಿಯಲ್ಲಿ ಸಂಭೋಗಮಾಡಿದ ಪಾಪ ಇವುಗಳನ್ನೆಲಾ ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಬಾಲಘ್ನಾನ್ಮಾತೃಪಿತೃವಧಾದ್ಭೂಮಿತಸ್ಕರಾತ್ಸರ್ವವರ್ಣಗಮನನ್ಮೈಥುನಸಂಗಮಾತ್ ।
ಪಾಪೇಭ್ಯಶ್ಚ ಪ್ರತಿಗ್ರಹಾತ್ಸದ್ಯಃ ಪ್ರಹರತಿ ಸರ್ವದುಷ್ಕೃತಂ ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ. ೧೮-೧೧)

ಮಕ್ಕಳನ್ನು ಕೊಲ್ಲುವುದು, ತಂದೆತಾಯಿಗಳನ್ನು ಕೊಲ್ಲುವುದು, ಹೊಲಗದ್ದೆ ಮೊದಲಾದ ಭೂಮಿಯನ್ನು ಮೋಸದಿಂದ ಅಪಹರಿಸುವುದು, ಎಲ್ಲಾ ನೀಚಜಾತಿಯ ಸ್ತ್ರೀಯರೊಂದಿಗೆ ಸಂಗಮಾಡುವುದು, ದುರ್ದಾನವನ್ನು ಸ್ವೀಕರಿಸುವುದು,

ಇತರ ಕೆಟ್ಟಕೆಲಸಗಳನ್ನು ಮಾಡುವುದು ಇವುಗಳಿಂದ ಯಾವ ಯಾವ ಪಾಪಗಳು ಸಂಭವಿಸುವವೋ ಆ ಪಾಪಗಳನ್ನೆಲ್ಲಾ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಕ್ರಯವಿಕ್ರಯಾದ್ಯೋನಿದೋಷಾದ್ಭಕ್ಷಾದ್ಭೋಜ್ಯಾತ್ಪ್ರತಿಗ್ರಹಾತ್ ।**
**ಅಸಂಭೋಜನಾಚ್ಚಾಪಿ ನೃಶಂಸಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೨)

ಅನ್ಯಾಯರೀತಿಯಿಂದ ಎಂದರೆ ಮೋಸದಿಂದ ಕೊಳ್ಳುವುದು, ಮಾರುವುದು, ಸಿಕ್ಕಿದ ಸ್ತ್ರೀಯರ ಸಂಗಮಾಡುವುದು, ತಿನ್ನಬಾರದ ಪದಾರ್ಥಗಳನ್ನು ತಿನ್ನುವುದು, ಸ್ವೀಕಾರಾರ್ಹವಲ್ಲದ ವಸ್ತುಗಳನ್ನು ಸ್ವೀಕರಿಸುವುದು, ಮನೆಗೆ ಬಂದ ಅತಿಥಿಯನ್ನು ಬಿಟ್ಟು ಭೋಜನಮಾಡುವುದು ಇವುಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸುತ್ತೇನೆ.

**ದುರ್ಯಷ್ಟಂ ದುರಧೀತಂ ಪಾಪಂ ಯಚ್ಚಾಜ್ಞಾನತೋ ಕೃತಂ ।**
**ಅಯಾಜಿತಾಶ್ಚಾಸಂಯಾಜ್ಯಾಸ್ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೩)

ವಿಧ್ಯುಕ್ತರೀತಿಯನ್ನು ಬಿಟ್ಟು ಬೇರೆ ವಿಧವಾಗಿ ಯಜ್ಞಮಾಡುವುದು, ನಿಯಮರಹಿತವಾಗಿ ವೇದಾಧ್ಯಯನಮಾಡುವುದು ಅಜ್ಞಾನದಿಂದ ಮಾಡಿದ ಪಾಪ, ಯಜ್ಞವನ್ನು ಮಾಡಲು ಅರ್ಹರಲ್ಲದವರಿಗೆ ಯಜ್ಞಮಾಡಿಸುವುದು, ಯಜ್ಞಾರ್ಹರಿಗೆ ಮಾಡಿಸದಿರುವುದು ಈ ವಿಧವಾದ ದುಷ್ಕೃತ್ಯಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

**ಅಮಂತ್ರಮನ್ನಂ ಯತ್ಕಿಂಚಿದ್ಧೂಯತೇ ಚ ಹುತಾಶನೇ ।**
**ಸಂವತ್ಸರಕೃತಂ ಪಾಪಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೪)

ವಿಧ್ಯುಕ್ತಮಂತ್ರಪಠನವಿಲ್ಲದೆ ಅಥವಾ ತಪ್ಪುತಪ್ಪಾಗಿ ಮಂತ್ರವನ್ನು ಪಠಿಸುತ್ತಾ ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡುವುದರಿಂದ ಸಂಭವಿಸುವ ಪಾಪವನ್ನೂ, ಸಂವತ್ಸರದಲ್ಲಿ ಯಾವಯಾವ ಪಾಪಗಳನ್ನು ಮಾಡಿದ್ದರೂ ಅವೆಲ್ಲವನ್ನೂ ಪರಿಹಾರಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಋತಸ್ಯ ಯೋನಯೋಽಮೃತಸ್ಯ ಧಾಮ ವಿಶ್ವಾ ದೇವೇಭ್ಯಃ ಪುಣ್ಯಗಂಧಾಃ ।**
**ತಾ ನ ಆಪಃ ಪ್ರ ವಹಂತು ಪಾಪಂ ಶುದ್ಧಾ ಗಚ್ಛಾಮಿ ಸುಕೃತಾಮು ಲೋಕಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೧೫)

ಸತ್ಯ ಅಥವಾ ಯಜ್ಞಕ್ಕೆ ಮುಖ್ಯ ಆಧಾರಭೂತವೂ, ಶಾಶ್ವತವಾದ ಸ್ವರ್ಗದಲ್ಲಿ ನೆಲೆಸಿರುವವೂ, ದೇವತೆಗಳಿಗೆ ಪ್ರಿಯವನ್ನುಂಟುಮಾಡುವವೂ ಆದ ಸ್ವರ್ಗೀಯೋದಕಗಳು ಮೇಲೆ ಹೇಳಿದ ಪಾಪಗಳನ್ನು ಕೊಚ್ಚಿಕೊಂಡು ಹೋಗಲಿ. ಆ ಪುರುಷನನ್ನು ಶುದ್ಧನನ್ನಾಗಿ ಮಾಡಿ ಉತ್ತಮ ಲೋಕವನ್ನು ಪಡೆಯುವಂತೆ ಮಾಡುವೆನು.



# ಒಂಭತ್ತನೆಯ ಮಂಡಲದ ಋಷಿಗಳು

ಈ ಮಂಡಲದಲ್ಲಿ ಇತರ ಮಂಡಲದ ಋಷಿಗಳೇ ಇರುವರು. ದೇವತೆಯು ಮಾತ್ರ ಪವಮಾನ ಸೋಮವು. ಈ ಋಷಿಗಳ ಹೆಸರನ್ನೂ ಅವರಿಂದ ಈ ಮಂಡಲದಲ್ಲಿ ದೃಷ್ಟವಾದ ಮಂತ್ರಸಂಖ್ಯೆಯನ್ನೂ ಕೆಳಗೆ ಕೊಟ್ಟಿದೆ—

ಮಧುಚ್ಛಂದಾ ವೈಶ್ವಾಮಿತ್ರಃ (೧೦) ಮೇಧಾತಿಥಿಃ ಕಾಣ್ವಃ (೧೦) ಶುನಃಶೇಫ ಆಜೀಗರ್ತಿಃ (೧೦) ಹಿರಣ್ಯಸ್ತೂಪ ಆಂಗಿರಸಃ (೧೦) ಕಾಶ್ಯಪೋಽಸಿತೋ ದೇವಲೋ ವಾ (೧೬೪) ದೃಳ್ಹಚ್ಯುತ ಆಗಸ್ತ್ಯಃ (೬) ಇಧ್ಮವಾಹೋ ದಾರ್ಢಚ್ಯುತಃ (೬) ನೃಮೇಧಃ (೧೨) ಪ್ರಿಯಮೇಧಃ (೬) ಬಿಂದುಃ (೬) ಗೋತಮಃ (೬) ಶ್ಯಾವಾಶ್ವಃ (೬) ತ್ರಿತಃ (೨೦) ಪ್ರಭೂವಸುಃ (೧೨) ರಹೂಗಣಃ (೧೨) ಬೃಹನ್ಮತಿಃ (೧೨) ಮೇಧ್ಯಾತಿಥಿಃ (೧೮) ಅಯಾಸ್ಯಃ (೧೮) ಕವಿರ್ಭಾರ್ಗವಃ (೧೫) ಉಚಥ್ಯಃ (೧೫) ಅವತ್ಸಾರಃ (೩೨) ಅಮಹೀಯುಃ (೩೦) ಜಮದಗ್ನಿಃ (೩೦) ನಿಧ್ರುವಿಃ ಕಾಶ್ಯಪಃ (೩೦) ಕಶ್ಯಪಃ (೫೭) ಭೃಗುರ್ವಾರುಣಿರ್ಜಮದಗ್ನಿರ್ವಾ (೩೦) ಶತಂ ವೈಖಾನಸಃ (೩೦) ಸಪ್ತರ್ಷಯಃ (೩೨)

ವತ್ಸಪ್ರಿರ್ಭಾಲಂದನಃ (೧೦) ಹಿರಣ್ಯಸ್ತೂಪಃ (೧೦) ರೇಣುರ್ವೈಶ್ವಾಮಿತ್ರಃ (೧೦) ಋಷಭೋ ವೈಶ್ವಾಮಿತ್ರಃ (೯) ಹರಿಮಂತಃ (೯) ಪವಿತ್ರಃ (೧೪) ಕಕ್ಷೀವಾನ್ (೯) ಕವಿಃ (೨೦) ವಸುರ್ಭಾರದ್ವಾಜಃ (೧೫) ಪ್ರಜಾಪತಿರ್ವಾಚ್ಯಃ (೫) ವೇನೋ ಭಾರ್ಗವಃ (೧೨) ಆಕೃಷ್ಟಾ ಮಾಷಾಃ (೧೦) ಸಿಕತಾನಿವಾವರೀ (೧೦) ಪೃಶ್ನಯೋಽಜಾಃ (೧೦) ತ್ರಯ ಋಷಿಗಣಾಃ (೧೦) ಅತ್ರಿಃ (೫) ಗೃತ್ಸಮದಃ (೩) ಉಶನಾಃ (೨೪) ವಸಿಷ್ಠಃ (೯) ನೋಧಾಃ (೫) ಕಣ್ವಃ (೫) ಪ್ರಸ್ಕಣ್ವಃ (೫) ಪ್ರತರ್ದನೋ ದೈವೋದಾಸಿಃ (೨೪)

ಇಂದ್ರಪ್ರಮತಿರ್ವಾಸಿಷ್ಠಃ (೩) ವೃಷಗಣೋ ವಾಸಿಷ್ಠಃ (೩) ಮನ್ಯುರ್ವಾಸಿಷ್ಠಃ (೩) ಉಪಮನ್ಯುರ್ವಾಸಿಷ್ಠಃ (೩) ವ್ಯಾಘ್ರಪಾದ್ವಾಸಿಷ್ಠಃ (೩) ಶಕ್ತಿರ್ವಾಸಿಷ್ಠಃ (೩) ಕರ್ಣಶ್ರುದ್ವಾಸಿಷ್ಠಃ (೩) ಮೃಳೀಕೋ ವಾಸಿಷ್ಠಃ (೩) ವಸುಕ್ರೋ ವಾಸಿಷ್ಠಃ (೩) ಪರಾಶರಃ (೧೪) ಕುತ್ಸಃ (೧೪) ಅಂಬರೀಷ ಋಜಿಶ್ವಾ ಚ (೧೨) ರೇಭಸೂನೂ ಕಾಶ್ಯಪೌ (೧೭) ಅಂಧೀಗುಃ ಶ್ಯಾವಾಶ್ವಿಃ (೩) ಯಯಾತಿರ್ನಾಹುಷಃ (೩) ನಹುಷೋ ಮಾನವಃ (೩) ಮನುಃ ಸಾಂವರಣಃ (೩) ಪ್ರಜಾಪತಿಃ (೩) ದ್ವಿತಃ (೬) ಪರ್ವತನಾರದೌ (೧೨) ಅಗ್ನಿಶ್ಚಾಕ್ಷುಷಃ (೧೨) ಚಕ್ಷುರ್ಮಾನವಃ (೩) ಮನುರಾಪ್ಸವಃ (೩) ಅಗ್ನಿಃ (೫) ಸಪ್ತರ್ಷಯಃ (೨೬) ಗೌರಿವೀತಿಃ (೨) ಶಕ್ತಿಃ (೪) ಊರುಃ (೨) ಋಜಿಶ್ವಾ (೨) ಊರ್ಧ್ವಸದ್ಮಾ (೨) ಕೃತಯಶಾಃ (೨) ಋಣಂಚಯಃ (೨) ಅಗ್ನಯೋ ಧಿಷ್ಣ್ಯಾ ಐಶ್ವರಾಃ (೨೨) ತ್ರ್ಯರುಣತ್ರಸದಸ್ಯೂ (೧೨) ಅನಾನತಃ ಪಾರುಚ್ಛೇಪಿಃ (೩) ಶಿಶುಃ (೪)

ಈ ಮಂಡಲದಲ್ಲಿ ೧೧೪ ಸೂಕ್ತಗಳೂ, ೭ ಅನುವಾಕಗಳೂ, ೧೧೦೮ ಋಕ್ಕುಗಳು ಇರುವವು.

# ನಲವತ್ತನಾಲ್ಕನೆಯ ಸೂಕ್ತವು

ಕ್ರೀಯೋಂ ಧ್ಯಾಯ:

॥ ಸಾಯಣಭಾಷ್ಯಂ ॥

**ಅಥ ಸಪ್ತಮಾಷ್ಟಕಸ್ಯ ಪ್ರಥಮಾಧ್ಯಾಯ ಆರಭ್ಯತೇ ॥ ಪ್ರ ಣ ಇತಿ ಷಡೃಚಂ ವಿಂಶಂ ಸೂಕ್ತ-ಮಾಂಗಿರಸಸ್ಯಾಯಾಸ್ಯಸ್ಯಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಪ್ರ ಣೋಽಯಾಸ್ಯ ಇತಿ ॥ ಗತೋ ವಿನಿಯೋಗಃ ॥**

ಅನುವಾದವು— ಈಗ ಋಗ್ವೇದ ಸಂಹಿತೆಯ ಏಳನೆಯ ಅಷ್ಟಕದಲ್ಲಿ ಪ್ರಥಮಾಧ್ಯಾಯವು ಪ್ರಾರಂಭಿಸಲ್ಪಡುವುದು. ಹಿಂದಿನ ಅಧ್ಯಾಯದಲ್ಲಿ ಒಂಭತ್ತನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಹತ್ತೊಂಭತ್ತು ಸೂಕ್ತಗಳು ಸಮಾಪ್ತವಾಗಿರುವುದರಿಂದ ಈಗ ಇಲ್ಲಿ ಪ್ರಾರಂಭವಾಗುವ **ಪ್ರ ಣ ಇಂದೋ** ಎಂಬ ಈ ಸೂಕ್ತವು, ಎರಡನೆಯ ಅನುವಾಕದಲ್ಲಿ ಇಪ್ಪತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಯಾಸ್ಯ ಆಂಗಿರಸಃ ಎಂಬುವನು ಋಷಿಯು ; ಪವಮಾನಸೋಮನು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಪ್ರಣೋಽಯಾಸ್ಯಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೪

ಮಂಡಲ—೯ ॥ ಅನುವಾಕ—೨ ॥ ಸೂಕ್ತ—೪೪ ॥

ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

ಋಷಿಃ—ಅಯಾಸ್ಯಃ ॥

ದೇವತಾ—ಪವಮಾನಃ ಸೋಮಃ ॥

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಪ್ರ ಣ ಇಂದೋ ಮಹೇ ತನ ಊರ್ಮಿಂ ನ ಬಿಭ್ರದರ್ಷಸಿ ।**

**ಅಭಿ ದೇವಾಁ ಅಯಾಸ್ಯಃ ॥ ೧ ॥**

॥ ಪದಪಾಠಃ ॥

**ಪ್ರ । ನಃ । ಇಂದೋ ಇತಿ । ಮಹೇ । ತನೇ । ಊರ್ಮಿಂ । ನ । ಬಿಭ್ರತ್ । ಅರ್ಷಸಿ ।**

**ಅಭಿ । ದೇವಾನ್ । ಅಯಾಸ್ಯಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಇಂದೋ ಸೋಮ ತ್ವಂ ನೋऽಸ್ಮಾಕಂ ಮಹೇ ಮಹತೇ ತನೇ ಧನಾಯ ಪ್ರಾರ್ಷಸಿ । ಪ್ರಗಚ್ಛಸಿ । ನ ಸಂಪ್ರತಿ । ಅಯಾಸ್ಯಶ್ಚಾಯಮೃಷಿಸ್ತವೋರ್ಮಿಂ ತರಂಗಂ ಬಿಭ್ರದ್ಧಾರಯನ್ದೇವಾನಭಿ ಗಚ್ಛತಿ ಯಷ್ಟುಂ ॥**

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮನೇ । (ತ್ವಂ—ನೀನು) । **ನಃ**—ನಮಗೆ । **ಮಹೇ**—ಮಹತ್ತಾದ **ತನೇ**—ಧನಸಂಪಾದನೆಗಾಗಿ ।**ಪ್ರ ಅರ್ಷಸಿ**—ಮುಂದುವರಿಯುತ್ತೀಯೆ । **ಅಯಾಸ್ಯಃ**—ಆಯಾಸ್ಯ ಸಂಜ್ಞಕನಾದ ಋಷಿಯು । **ಊರ್ಮಿಂ ನ**—ಅಲೆಗಳಂತಿರುವ ನಿನ್ನ ರಸಗಳನ್ನು । **ಬಿಭ್ರತ್**—ಧರಿಸಿಕೊಂಡು । **ದೇವಾನ್**—ದೇವತೆಗಳಲ್ಲಿಗೆ । **ಅಭಿ (ಗಚ್ಛತಿ)**—ಪೂಜೆಗಾಗಿ ಹೋಗುತ್ತಾನೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ನಮಗೆ ಮಹತ್ತಾದ ಧನಸಂಪಾದನೆಗಾಗಿ ಮುಂದುವರಿಯುತ್ತೀಯೆ. ಆಯಾಸ್ಯಸಂಜ್ಞಕನಾದ ಋಷಿಯು (ನಾನು) ಅಲೆಗಳಂತಿರುವ ನಿನ್ನ ರಸಗಳನ್ನು ಧರಿಸಿಕೊಂಡು ಯಜ್ಞಾರ್ಥವಾಗಿ ದೇವತೆಗಳಲ್ಲಿಗೆ ಹೋಗುತ್ತಾನೆ.

## English Translation.

Indu, you advance to give us abundant wealth; Ayasya bearing your waves (goes) towards the gods (to sacrifice).

॥ ಸಂಹಿತಾಪಾಠಃ ॥

**ಮತೀ ಜುಷ್ಟೋ ಧಿಯಾ ಹಿತಃ ಸೋಮೋ ಹಿನ್ವೇ ಪರಾವತಿ ।**
**ವಿಪ್ರಸ್ಯ ಧಾರಯಾ ಕವಿಃ ॥ ೨ ॥**

॥ ಪದಪಾಠಃ ॥

**ಮತೀ । ಜುಷ್ಟಃ । ಧಿಯಾ । ಹಿತಃ । ಸೋಮಃ । ಹಿನ್ವೇ । ಪರಾऽವತಿ ।**
**ವಿಪ್ರಸ್ಯ । ಧಾರಯಾ । ಕವಿಃ ॥ ೨ ॥**

॥ ಸಾಯಣಭಾಷ್ಯಂ ॥

**ಕವಿಃ ಕ್ರಾಂತಕರ್ಮಾ ಸೋಮೋ ವಿಪ್ರಸ್ಯ ಮೇಧಾವಿನಃ ಸ್ತೋತುರ್ಮತೀ ಮತ್ಯಾ ಸ್ತುತ್ಯಾ ಷ್ಟಃ ಸೇವಿತೋ ಧಿಯಾ ಕರ್ಮಣಾ ಹಿತೋ ಯಜ್ಞೇ ನಿಹಿತಃ ಪರಾವತಿ ಪವಿತ್ರಾದ್ದೂರದೇಶೇ ರಯಾ ಹಿನ್ವೇ । ಪ್ರೇರ್ಯತೇ ॥**

॥ ಪ್ರತಿಪದಾರ್ಥ ॥

ಕವಿಃ—ಕ್ರಾಂತಕರ್ಮವುಳ್ಳ । ಸೋಮಃ—ಸೋಮದೇವನು । ವಿಪ್ರಸ್ಯ—ಮೇಧಾವಿಯಾದ ಸ್ತುತಿಕರ್ತನ । ಮತೀ—ಸ್ತುತಿಯಿಂದ । ಜುಷ್ಟಃ—ಸೇವಿಸಲ್ಪಟ್ಟವನಾಗಿಯೂ । ಧಿಯಾ—ಉತ್ತಮವಾದ ಕರ್ಮದಿಂದ । ಹಿತಃ—ಯಜ್ಞದಲ್ಲಿ ಸ್ಥಾಪಿಸಲ್ಪಟ್ಟವನಾಗಿಯೂ । ಪರಾವತಿ—ಅತ್ಯಂತದೂರದೇಶಕ್ಕೆ । ಧಾರಯಾ—ಪ್ರವಾಹರೂಪದಲ್ಲಿ । ಹಿನ್ವೇ—ಕಳುಹಲ್ಪಡುತ್ತಾನೆ.

॥ ಭಾವಾರ್ಥ ॥

ಕ್ರಾಂತಕರ್ಮವುಳ್ಳ ಸೋಮದೇವನು ಮೇಧಾವಿಯಾದ ಸ್ತುತಿಕರ್ತನ ಸ್ತುತಿಯಿಂದ ಸೇವಿಸಲ್ಪಟ್ಟವನಾಗಿಯೂ ಉತ್ತಮವಾದ ಕರ್ಮದಿಂದ ಯಜ್ಞದಲ್ಲಿ ಸ್ಥಾಪಿಸಲ್ಪಟ್ಟವನಾಗಿಯೂ ಅತ್ಯಂತದೂರದೇಶಕ್ಕೆ (ಯಜ್ಞವೇದಿಗೆ) ಪ್ರವಾಹರೂಪದಲ್ಲಿ ಕಳುಹಲ್ಪಡುತ್ತಾನೆ.

English Translation.

The sage Soma gratified by the praise of the pious (worshipper) prepared for the sacrifice is sent in a stream at a distance (from the filter).

॥ ಸಂಹಿತಾಪಾಠಃ ॥

ಅಯಂ ದೇವೇಷು ಜಾಗೃವಿಃ ಸುತ ಏತಿ ಪವಿತ್ರ ಆ ।
ಸೋಮೋ ಯಾತಿ ವಿಚರ್ಷಣಿಃ ॥ ೩ ॥

॥ ಪದಪಾಠಃ ॥

ಅಯಂ । ದೇವೇಷು । ಜಾಗೃವಿಃ । ಸುತಃ । ಏತಿ । ಪವಿತ್ರೇ । ಆ ।
ಸೋಮಃ । ಯಾತಿ । ವಿऽಚರ್ಷಣಿಃ ॥ ೩ ॥

॥ ಸಾಯಣಭಾಷ್ಯಂ ॥

ಜಾಗೃವಿರ್ಜಾಗರಣಶೀಲೋಽಯಂ ಸೋಮೋ ದೇವೇಷು ದೇವಾರ್ಥಂ ಸುತೋಽಭಿಷುತ ಏತಿ । ಸಮಂತಾದ್ಗಚ್ಛತಿ । ಅಪಿ ಚ ವಿಚರ್ಷಣಿರ್ವಿದ್ರಷ್ಟಾ ಸೋಮಃ ಪವಿತ್ರೇ ಯಾತಿ । ಪಾವನಾಯ ಗಚ್ಛತಿ ॥

॥ ಪ್ರತಿಪದಾರ್ಥ ॥

ಜಾಗೃವಿಃ—ಯಾವಾಗಲೂ ಎಚ್ಚರವಾಗಿರತಕ್ಕ । ಅಯಂ ಸೋಮಃ— ಈ ಸೋಮದೇವನು । ದೇವೇಷು—ದೇವತೆಗಳ ಪೂಜಾರ್ಥವಾಗಿ । ಸುತಃ—ಹಿಂಡಲ್ಪಟ್ಟು । ಆ ಏತಿ—ಸುತ್ತಲೂ ಸಂಚರಿಸುತ್ತಾನೆ ।

**ವಿಚರ್ಷಣಿಃ**—ಸರ್ವತ್ರ ಪರಿಶೀಲಿಸುವ ದೃಷ್ಟಿಯುಳ್ಳ ಸೋಮನು | **ಪವಿತ್ರೇ**—ದಶಾಪವಿತ್ರದಕಡೆಗೆ | **ಯಾತಿ**—ಶುದ್ಧಿಗಾಗಿ ಹೋಗುತ್ತಾನೆ.

॥ ಭಾವಾರ್ಥ ॥

ಯಾವಾಗಲೂ ಎಚ್ಚರವಾಗಿರತಕ್ಕ ಈ ಸೋಮದೇವನು ದೇವತೆಗಳ ಪೂಜಾರ್ಥವಾಗಿ ಹಿಂಡಲ್ಪಟ್ಟು ಸುತ್ತಲೂ ಹರಿಯುತ್ತಾನೆ. ಸರ್ವತ್ರ ಪರಿಶೀಲಿಸುವ ದೃಷ್ಟಿಯುಳ್ಳ ಸೋಮನು ದಶಾಪವಿತ್ರದ ಕಡೆಗೆ ಶುದ್ಧಿಗಾಗಿ ಹೋಗುತ್ತಾನೆ.

## English Translation.

This vigilant soma effused for the gods approaches, all-beholding he goes to the filter.

॥ ಸಂಹಿತಾಪಾಠಃ ॥

ಸ ನಃ ಪವಸ್ವ ವಾಜಯುಶ್ಚಕ್ರಾಣಶ್ಚಾರುಮಧ್ವರಂ ।
ಬರ್ಹಿಷ್ಮಾँ ಆ ವಿವಾಸತಿ ॥ ೪ ॥

॥ ಪದಪಾಠಃ ॥

ಸಃ । ನಃ । ಪವಸ್ವ । ವಾಜ್ಽಯುಃ । ಚಕ್ರಾಣಃ । ಚಾರುಂ । ಅಧ್ವರಂ ॥
ಬರ್ಹಿಷ್ಮಾನ್ । ಆ । ವಿವಾಸತಿ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಸೋಮ ಯಂ ತ್ವಾಂ ಬರ್ಹಿಷ್ಮಾನೃತ್ವಿಗಾ ವಿವಾಸತಿ ಪರಿಚರತಿ ಸ ತ್ವಂ ನೋಽಸ್ಮದರ್ಥಂ ವಾಜಯುರನ್ನಮಿಚ್ಛನ್ನಧ್ವರಂ ಹಿಂಸಾರಹಿತಂ ಯಾಗಂ ಚಾರುಂ ಕಲ್ಯಾಣಂ ಚಕ್ರಾಣಃ ಕುರ್ವನ್ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಬರ್ಹಿಷ್ಮಾನ್—ದರ್ಭಾಸನವನ್ನು ಸಂಸ್ಕರಿಸಿ ಸಿದ್ಧನಾಗಿರುವ ಋತ್ವಿಜನು | **ಆ ವಿವಾಸತಿ**—ಯಾವ ನಿನ್ನನ್ನು ಉಪಚರಿಸುವನೋ | **ಸಃ**—ಅಂತಹ ನೀನು | **ನಃ**—ನಮಗೆ | **ವಾಜಯುಃ**—ಅನ್ನವನ್ನು ಇಚ್ಛಿಸುತ್ತಾ | **ಅಧ್ವರಂ**—ಹಿಂಸಾರಹಿತವಾದ ಯಾಗವನ್ನು | **ಚಾರುಂ**—ಕಲ್ಯಾಣಾತ್ಮಕವನ್ನಾಗಿ | **ಚಕ್ರಾಣಃ**—ಮಾಡುತ್ತಾ | **ಪವಸ್ವ**—ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ದರ್ಭಾಸನವನ್ನು ಸಂಸ್ಕರಿಸಿ ಸಿದ್ಧನಾಗಿರುವ ಋತ್ವಿಜನು ಯಾವ ನಿನ್ನನ್ನು ಉಪಚರಿಸುವನೋ, ಅಂತಹ ನೀನು ನಮಗೆ ಅನ್ನವನ್ನು ಇಚ್ಛಿಸುತ್ತಲೂ ನಮ್ಮ ಹಿಂಸಾರಹಿತವಾದ ಯಾಗವನ್ನು ಕಲ್ಯಾಣಾತ್ಮಕವನ್ನಾಗಿ ಮಾಡುತ್ತಲೂ ಸ್ರವಿಸು.

## English Translation.

Flow for us food-desiring, making (our) sacrifice auspicious; (O Soma, whom) the priest with the sacred grass adores.

॥ ಸಂಹಿತಾಪಾಠಃ ॥

**ಸ ನೋ᳚ ಭಗಾ᳚ಯ ವಾ॒ಯವೇ॒ ವಿಪ್ರ॑ವೀರಃ ಸ॒ದಾವೃ॑ಧಃ ।**

**ಸೋಮೋ᳚ ದೇ॒ವೇಷ್ವಾ ಯ॑ಮತ್ ॥ ೫ ॥**

॥ ಪದಪಾಠಃ ॥

ಸಃ । ನಃ॒ । ಭಗಾ᳚ಯ । ವಾ॒ಯವೇ᳚ । ವಿಪ್ರ॑ಽವೀರಃ । ಸ॒ದಾಽವೃ॑ಧಃ ।

ಸೋಮಃ᳚ । ದೇ॒ವೇಷು॑ । ಆ । ಯ॒ಮ॒ತ್ ॥ ೫ ॥

॥ ಸಾಯಣಭಾಷ್ಯಂ ॥

ಸ ಪವಮಾನಃ ಸೋಮೋ ವಾಯವೇ ವಾಯುದೇವಾರ್ಥಂ ಭಗಾಯ ಭಗದೇವಾರ್ಥಂ ಚ ವಿಪ್ರವೀರೋ ವಿಪ್ರೈರ್ಮೇಧಾವಿಭಿಃ ಸ್ತೋತೃಭಿಃ ಪ್ರೇರಿತಃ ಸದಾವೃಧೋ ನಿತ್ಯವೃದ್ಧೋ ಭವನ್ನೋಽಸ್ಮಭ್ಯಂ ದೇವೇಷು ಸ್ಥಿತಂ ಧನಮಾ ಯಮತ್ । ಆ ಪ್ರಯಚ್ಛತು ॥

॥ ಪ್ರತಿಪದಾರ್ಥ ॥

ವಾಯವೇ—ವಾಯು ದೇವನಿಗಾಗಿಯೂ । ಭಗಾಯ—ಭಗದೇವನಿಗಾಗಿಯೂ । ವಿಪ್ರವೀರಃ—ಮೇಧಾವಿಗಳಾದ ಸ್ತುತಿಕರ್ತರಿಂದ ಪ್ರೇರಿತನಾದವನೂ । ಸಃ ಸೋಮಃ—ಪರಿಶುದ್ಧನೂ ಆದ ಸೋಮದೇವನು । ಸದಾವೃಧಃ—ಸರ್ವದಾ ವೃದ್ಧಿಯನ್ನು ಹೊಂದುತ್ತಾ । ನಃ—ನಮಗೆ । ದೇವೇಷು—ದೇವತೆಗಳಲ್ಲಿ ಸ್ಥಾಪಿತವಾಗಿರುವ ಧನವನ್ನು । ಆ ಯಮತ್—ತಂದೊದಗಿಸಲಿ.

॥ ಭಾವಾರ್ಥ ॥

ವಾಯುದೇವನಿಗಾಗಿಯೂ, ಭಗದೇವನಿಗಾಗಿಯೂ. ಮೇಧಾವಿಗಳಾದ ಸ್ತುತಿಕರ್ತರಿಂದ ಪ್ರೇರಿತನೂ, ಪರಿಶುದ್ಧನೂ ಆದ ಸೋಮದೇವನು ಸರ್ವದಾ ವೃದ್ಧಿಯನ್ನು ಹೊಂದುತ್ತಾ ನಮಗೆ ದೇವತೆಗಳಲ್ಲಿ ಸ್ಥಾಪಿತವಾಗಿರುವ ಧನವನ್ನು ತಂದೊದಗಿಸಲಿ.

## English Translation.

May soma who is pressed forth by the seers for Bhaga and Vayu, ever prospering, grant us (wealth placed) amongst the gods.

॥ ಸಂಹಿತಾಪಾಠಃ ॥

ಸ ನೋ ಅದ್ಯ ವಸುತ್ತಯೇ ಕ್ರತುವಿದ್ಗಾತುವಿತ್ತಮಃ ।

ವಾಜಂ ಜೇಷಿ ಶ್ರವೋ ಬೃಹತ್ ॥ ೬ ॥

॥ ಪದಪಾಠಃ ॥

ಸಃ । ನಃ । ಅದ್ಯ । ವಸುತ್ತಯೇ । ಕ್ರತುऽವಿತ್ । ಗಾತುವಿತ್ऽತಮಃ ।

ವಾಜಂ । ಜೇಷಿ । ಶ್ರವಃ । ಬೃಹತ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಕ್ರತುವಿತ್ ಕ್ರತೂನಾಂ ಕರ್ಮಣಾಂ ಲಂಭಕೋ ಗಾತುವಿತ್ತಮಃ ಪುಣ್ಯಲೋಕಾನಾಮತಿಶಯೇನ ಮಾರ್ಗಸ್ಯ ಜ್ಞಾತಾ ತ್ವಮದ್ಯಾಸ್ಮಿನ್ನಹನಿ ನೋऽಸ್ಮಾಕಂ ವಸುತ್ತಯೇ ಧನಲಾಭಾಯ ಬೃಹನ್ಮಹಚ್ಛ್ರವೋऽನ್ನಂ ವಾಜಂ ಬಲಂ ಚ ಜೇಷಿ । ಜಯ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಕ್ರತುವಿತ್—ಯಜ್ಞಕರ್ಮಗಳನ್ನು ಸ್ವೀಕರಿಸುವವನೂ । ಗಾತುವಿತ್ತಮಃ—ಅತ್ಯತಿಶಯವಾಗಿ ಸನ್ಮಾರ್ಗಗಳನ್ನು ಅರಿತವನೂ ಆದ । ಸಃ—ನೀನು । ಅದ್ಯ—ಈ ಯಾಗ ದಿನದಲ್ಲಿ । ನಃ—ನಮಗೆ । ವಸುತ್ತಯೇ—ಅತ್ಯಧಿಕವಾದ ಧನಲಾಭಾರ್ಥವಾಗಿ । ಬೃಹತ್—ಪ್ರಭೂತವಾದ । ಶ್ರವಃ—ಅನ್ನವನ್ನೂ । ವಾಜಂ—ಶಕ್ತಿಯನ್ನೂ । ಜೇಷಿ—ಸಂಪಾದಿಸಿಕೊಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಜ್ಞಕರ್ಮಗಳನ್ನು ಸ್ವೀಕರಿಸುವವನೂ ಅತ್ಯತಿಶಯವಾದ ಪುಣ್ಯಲೋಕಗಳ ಸನ್ಮಾರ್ಗಗಳನ್ನು ಅರಿತವನೂ ಆದ ನೀನು ಈ ಯಾಗದಿನದಲ್ಲಿ ನಮಗೆ ಅತ್ಯಧಿಕವಾದ ಧನಲಾಭಾರ್ಥವಾಗಿ ಪ್ರಭೂತವಾದ ಅನ್ನವನ್ನೂ ಶಕ್ತಿಯನ್ನೂ ಸಂಪಾದಿಸಿಕೊಡು.

English Translation.

Receiver of sacrifices, knower of (pious) paths, grant us this day abundant food and strength for the acquisition of wealth.

## ನಲವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಸ ಪವಸ್ವೇತಿ ಷಡೃಚಮೇಕವಿಂಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಸ ಪವಸ್ವೇತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥

ಅನುವಾದವು—ಸ ಪವಸ್ವ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೊಂದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ, ಅನುಕ್ರಮಣಿಕೆಯಲ್ಲಿ **ಸ ಪವಸ್ವ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೫

|| ಮಂಡಲ—೯ || ಅನುವಾಕ— ೨ || ಸೂಕ್ತ—೪೫ ||

|| ಅಷ್ಟಕ—೭ ||ಅಧ್ಯಾಯ—೧ || ವರ್ಗ—೨ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||

|| ಋಷಿಃ—ಅಯಾಸ್ಯಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

**ಸ ಪವಸ್ವ ಮದಾಯ ಕಂ ನೃಚಕ್ಷಾ ದೇವವೀತಯೇ ।**

**ಇಂದವಿಂದ್ರಾಯ ಪೀತಯೇ || ೧ ||**

|| ಪದಪಾಠಃ ||

**ಸಃ । ಪವಸ್ವ । ಮದಾಯ । ಕಂ । ನೃಽಚಕ್ಷಾಃ । ದೇವಽವೀತಯೇ ।**

**ಇಂದೋ ಇತಿ । ಇಂದ್ರಾಯ । ಪೀತಯೇ || ೧ ||**

|| ಸಾಯಣಭಾಷ್ಯಂ ||

**ಹೇ ಇಂದೋ ಸೋಮ ನೃಚಕ್ಷಾ ನೃಣಾಂ ನೇತೄಣಾಂ ದ್ರಷ್ಟಾ ಸ ತ್ವಂ ದೇವವೀತಯೇ ಯಜ್ಞಾಯೇಂದ್ರಾಯೇಂದ್ರಸ್ಯ ಪೀತಯೇ ಪಾನಾಯ ಚ ಮದಾಯ ಮದಾರ್ಥಂ ಚ ಕಂ ಸುಖಂ ಯಥಾ ಭವತಿ ತಥಾ ಪವಸ್ವ । ಕ್ಷರ ||**

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ । **ನೃಚಕ್ಷಾಃ**—ಮಾನವರ ಕರ್ಮಗಳನ್ನು ವೀಕ್ಷಿಸುವ ದೃಷ್ಟಿಯುಳ್ಳ । **ಸಃ**—ನೀನು । **ದೇವವೀತಯೇ**—ದೇವತೆಗಳ ಪೂಜಾಸಾಧನವಾದ ಯಜ್ಞಕ್ಕಾಗಿಯೂ । **ಇಂದ್ರಾಯ**—ಇಂದ್ರನ । **ಪೀತಯೇ**—ಪಾನಕ್ಕಾಗಿಯೂ । **ಮದಾಯ**—ಅವನ ಹರ್ಷಕ್ಕಾಗಿಯೂ । **ಕಂ**—ಅವನಿಗೆ ಸುಖವು ಲಭಿಸುವಂತೆ । **ಪವಸ್ವ**—ಸ್ರವಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಮಾನವರ ಕರ್ಮಗಳನ್ನು ವೀಕ್ಷಿಸುವ ದೃಷ್ಟಿಯುಳ್ಳ ನೀನು ದೇವತೆಗಳ ಪೂಜಾ ಸಾಧನವಾದ ಯಜ್ಞಕ್ಕಾಗಿಯೂ, ಇಂದ್ರನ ಪಾನಕ್ಕಾಗಿಯೂ ಮತ್ತು ಅವನ ಹರ್ಷಕ್ಕಾಗಿಯೂ ಅವನಿಗೆ ಸುಖವು ಲಭಿಸುವಂತೆ ಸ್ರವಿಸು.

English Translation.

Indu, the beholder of men, flow pleasantly for the banquet of the gods, for Indra's drinking and exhilaration.

|| ಸಂಹಿತಾಪಾಠಃ ||

ಸ ನೋ ಅರ್ಷಾಭಿ ದೂತ್ಯಂ೧ ತ್ವಮಿಂದ್ರಾಯ ತೋಶಸೇ ।
ದೇವಾನ್ತ್ಸಖಿಭ್ಯ ಆ ವರಂ ॥ ೨ ॥

|| ಪದಪಾಠಃ ||

ಸಃ । ನಃ । ಅರ್ಷ । ಅಭಿ । ದೂತ್ಯಂ । ತ್ವಂ । ಇಂದ್ರಾಯ । ತೋಶಸೇ ।
ದೇವಾನ್ । ಸಖಿಽಭ್ಯಃ । ಆ । ವರಂ ॥ ೨ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ನೋಽಸ್ಮಾಕಂ ದೂತ್ಯಂ ದೂತಸ್ಯ ಕರ್ಮಾರ್ಷ । ಅಭಿಗಚ್ಛ । ಅಪಿ ಚ ಯಸ್ತ್ವಮಿಂದ್ರಾಯೇಂದ್ರಾರ್ಥಂ ತೋಶಸೇ ಹಿಂಯಸೇ ಸ ತ್ವಂ ಸಖಿಭ್ಯಃ ಪ್ರಿಯೇಭ್ಯೋಽಸ್ಮಭ್ಯಂ ವರಂ ಶ್ರೇಷ್ಠಂ ಧನಂ ದೇವಾನಾ ಪವಸ್ವೇತ್ಯರ್ಥಃ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) । ತ್ವಂ—ನೀನು । ನಃ—ನಮಗಾಗಿ । ದೂತ್ಯಂ—ದೂತಕರ್ಮವನ್ನು । ಅಭಿ ಅರ್ಷ—ಹೋಗಿ ವಹಿಸಿಕೊ । ಇಂದ್ರಾಯ—ಇಂದ್ರನ ತೃಪ್ತಿಗಾಗಿ । ತೋಶಸೇ—ಯಾವ ನೀನ ಪಾನಮಾಡಲ್ಪಡುವೆಯೋ । ಸಃ—ಅಂತಹ ನೀನು । ಸಖಿಭ್ಯಃ—ನಿನ್ನ ಮಿತ್ರರಾದ ನಮಗಾಗಿ । ವರಂ—ಅತ್ಯುತ್ತಮವಾದ ಧನವನ್ನು । ದೇವಾನ್—ದೇವತೆಗಳಿಂದ । ಆ (ಯಾಚಸ್ವ)—ಯಾಚಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ನಮಗಾಗಿ ನೀನು ದೇವತೆಗಳಲ್ಲಿ ಹೋಗಿಬರುವ ದೂತಕರ್ಮವನ್ನು ವಹಿಸಿಕೊ. ಇಂದ್ರನ ತೃಪ್ತಿಗಾಗಿ ಪಾನಮಾಡಲ್ಪಡುವ ನೀನು ನಿನ್ನ ಮಿತ್ರರಾದ ನಮಗಾಗಿ ದೇವತೆಗಳಿಂದ ಅತ್ಯುತ್ತಮವಾದ ಧನವನ್ನು ಯಾಚಿಸು.

## English Translation.

Approach the office of messenger for us: you (who) are drunk for Indra, (pour) on the gods wealth for (us their) friends.

॥ ಸಂಹಿತಾಪಾಠಃ ॥

**ಉತ ತ್ವಾಮರುಣಂ ವಯಂ ಗೋಭಿರಂಜ್ಮೋ ಮದಾಯ ಕಂ ।**

**ವಿ ನೋ ರಾಯೇ ದುರೋ ವೃಧಿ ॥ ೩ ॥**

॥ ಪದಪಾಠಃ ॥

**ಉತ । ತ್ವಾಂ । ಅರುಣಂ । ವಯಂ । ಗೋಭಿಃ । ಅಂಜ್ಮಃ । ಮದಾಯ । ಕಂ ।**

**ವಿ । ನಃ । ರಾಯೇ । ದುರಃ । ವೃಧಿ ॥ ೩ ॥**

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ಸೋಮ ಯಮರುಣಮರುಣವರ್ಣಂ ತ್ವಾಂ ಮದಾಯ ಮದಾರ್ಥಂ ವಯಮಾಂಗಿರಸಾಯಾಸ್ಯಾ ಗೋಭಿರ್ಗೋವಿಕಾರೈಃ ಪಯೋಭಿರಂಜ್ಮಃ ವಾಸಯಾಮಃ ಸಂಸ್ಕುರ್ಮಃ । ಕಮಿತಿ ಪೂರಣಂ । ಸ ತ್ವಂ ನೋಽಸ್ಮಾಕಂ ರಾಯೇ ಧನಾಯ ದುರೋ ದ್ವಾರಾಣಿ ವಿ ವೃಧಿ । ವಿವೃತಾನಿ ಕುರು ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) । **ಉತ**—ಮತ್ತು । **ವಯಂ**—ನಾವು । **ಅರುಣಂ**—ಹೊಂಬಣ್ಣವುಳ್ಳ । **ತ್ವಾಂ**—ಯಾವ ನಿನ್ನನ್ನು । **ಮದಾಯ**-ಇಂದ್ರಾದಿಗಳಹರ್ಷಕ್ಕಾಗಿ । **ಗೋಭಿಃ**—ಕ್ಷೀರಾದ್ಯಾಶ್ರಯಣದ್ರವ್ಯಗಳೊಡನೆ ಸೇರಿಸಿ। **ಅಂಜ್ಮಃ**—ಸಂಸ್ಕರಿಸುವೆವೋ ಅಂತಹ ನೀನು । **ನಃ**—ನಮಗೆ । **ರಾಯೇ**—ಧನಕ್ಕೆ ಪ್ರಾಪಕವಾದ । **ದುರಃ**—ಬಾಗಿಲುಗಳನ್ನು । **ವಿ ವೃಧಿ**—ಪೂರ್ಣವಾಗಿ ತೆರೆ. ।

॥ ಭಾವಾರ್ಥ ॥

ಎಲೈ ಸೋಮದೇವನೆ, ಆಕರ್ಷಕವಾದ ಹೊಂಬಣ್ಣವುಳ್ಳ ನಿನ್ನನ್ನು ಇಂದ್ರಾದಿಗಳ ಹರ್ಷಕ್ಕಾಗಿ ಕ್ಷೀರಾದ್ಯಾಶ್ರಯಣ ದ್ರವ್ಯಗಳೊಡನೆ ಸೇರಿಸಿ ಸಂಸ್ಕರಿಸುತ್ತೇವೆ. ಅಂತಹ ನೀನು ನಮಗೆ ಧನವನ್ನು ಒದಗಿಸಿಕೊಡುವ ಮಾರ್ಗವನ್ನೂ ಧನಪ್ರಾಪಕವಾದ ದ್ವಾರಗಳನ್ನೂ ಪೂರ್ಣವಾಗಿ ತೆರೆ.

## English Translation.

And we adorn you, the purple-tinted, with milk and curds for the purpose of exhilaration, open the doors for our riches.

॥ ಸಂಹಿತಾಪಾಠಃ ॥

ಅತ್ಯೂ ಪವಿತ್ರಮಕ್ರಮೀದ್ವಾಜೀ ಧುರಂ ನ ಯಾಮನಿ ।

ಇಂದುರ್ದೇವೇಷು ಪತ್ಯತೇ ॥ ೪ ॥

॥ ಪದಪಾಠಃ ॥

ಅತಿ । ಊಂ ಇತಿ । ಪವಿತ್ರಂ । ಅಕ್ರಮೀತ್ । ವಾಜೀ । ಧುರಂ । ನ । ಯಾಮನಿ ।

ಇಂದುಃ । ದೇವೇಷು । ಪತ್ಯತೇ ॥ ೪ ॥

॥ ಸಾಯಣಭಾಷ್ಯಂ ॥

ಇಂದುಃ ಸೋಮೋ ವಾಜ್ಯಶ್ವೋ ಯಾಮನಿ ಗಮನೇ ಧುರಂ ನ ರಥಸ್ಯ ಧುರಂ ಯಥಾ ತಥಾ ಪವಿತ್ರಮತ್ಯಕ್ರಮೀತ್ । ಅತಿಗಚ್ಛತಿ । ದೇವೇಷು ದೇವಾನಾಂ ಮಧ್ಯೇ ಪತ್ಯತೇ । ಗಚ್ಛತಿ ಚ ॥

॥ ಪ್ರತಿಪದಾರ್ಥ ॥

ಯಾಮನಿ—ಸಂಚಾರಕಾಲದಲ್ಲಿ । ವಾಜೀ—ಅಶ್ವವು । ಧುರಂ ನ—ರಥದ ನೊಗದ ಮಧ್ಯೆ ಪ್ರವೇಶಿಸುವಂತೆ । ಇಂದುಃ—ಸೋಮದೇವನು । ಪವಿತ್ರಂ—ಶೋಧಕವಾದ ದಶಾಪವಿತ್ರವನ್ನು । ಅತ್ಯಕ್ರಮೀತ್—ಶುದ್ಧಿಗಾಗಿ ಪ್ರವೇಶಿಸುತ್ತಾನೆ । ದೇವೇಷು—ದೇವತೆಗಳ ನಡುವೆ । ಪತ್ಯತೇ—ಹೋಗಿ ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಸಂಚಾರಕಾಲದಲ್ಲಿ ಅಶ್ವವು ರಥದ ನೊಗದ ಮಧ್ಯೆ ಪ್ರವೇಶಿಸುವಂತೆ ಸೋಮದೇವನು ಶೋಧಕವಾದ ದಶಾಪವಿತ್ರವನ್ನು ಶುದ್ಧಿಗಾಗಿ ಪ್ರವೇಶಿಸುತ್ತಾನೆ. ದೇವತೆಗಳ ನಡುವೆಯೂ ಹೋಗಿ ಪ್ರವೇಶಿಸುತ್ತಾನೆ.

English Translation.

Indu passes the filter as a horse in going passes the shaft (of the chariot); he proceeds to the midst of the gods.

॥ ಸಂಹಿತಾಪಾಠಃ ॥

ಸಮೀ ಸಖಾಯೋ ಅಸ್ವರನ್ವನೇ ಕ್ರೀಳಂತಮತ್ಯವಿಂ ।

ಇಂದುಂ ನಾವಾ ಅನೂಷತ ॥ ೫ ॥

॥ ಪದಪಾಠಃ ॥

ಸಂ । ಈಮಿತಿ । ಸಖಾಯಃ । ಅಸ್ವರನ್ । ವನೇ । ಕ್ರೀಳಂತಂ । ಅತಿऽಅವಿಂ ।

ಇಂದುಂ । ನಾವಾಃ । ಅನೂಷತ ॥ ೫ ॥

॥ ಸಾಯಣಭಾಷ್ಯಂ ॥

ಅತ್ಯವಿಮತಿಕ್ರಾಂತಂ ದಶಾಪವಿತ್ರಂ ವನ ಉದಕೇ ಕ್ರೀಡಂತಂ ಸಂಕ್ರೀಡಮಾನಮೀಮೇನಮಿಂದು ಸೋಮಂ ಸಖಾಯಃ ಪ್ರಿಯಸ್ತೋತಾರಃ ಸಮಸ್ವರನ್ । ಸಂಸ್ತುವಂತಿ । ನಾವಾ ವಾಚೋಽಪ್ಯೇನೂಷತ । ಅಸ್ತುವನ್ । ನೌರಕ್ಷರಮಿತಿ ವಾಙ್ನಾಮಸು ಪಾಠಾತ್ ॥

॥ಪ್ರತಿಪದಾರ್ಥ॥

**ಅತ್ಯವಿಂ**—ದಶಾಪವಿತ್ರವನ್ನು ದಾಟಿ ಶುದ್ಧಿಯನ್ನು ಹೊಂದಿದನಂತರ । **ವನೇ**—ಉದಕದಲ್ಲಿ ಸೇರಿ । **ಕ್ರೀಡಂತಂ**—ಆಡುತ್ತಿರುವ । **ಈಂ ಇಂದುಂ**—ಈ ಸೋಮದೇವನನ್ನು । **ಸಖಾಯಃ**—ಅವನ ಮಿತ್ರರಾದ ಸ್ತುತಿಕರ್ತರು । **ಸಮಸ್ವರನ್**—ಒಟ್ಟಿಗೆ ಸೇರಿಕೊಂಡು ಸ್ತುತಿಸುತ್ತಾರೆ । **ನಾವಾಃ**—ಅವರ ಸ್ತುತಿವಾಕ್ಕುಗಳೂ ಸಹ । **ಅನೂಷತ**— ಅವನನ್ನು ಸ್ತುತಿಸುತ್ತವೆ.

॥ ಭಾವಾರ್ಥ ॥

ದಶಾಪವಿತ್ರವನ್ನು ದಾಟಿ ಶುದ್ಧಿಯನ್ನು ಹೊಂದಿದನಂತರ ಉದಕದಲ್ಲಿ ಸೇರಿ ಆಡುತ್ತಿರುವ ಈ ಸೋಮದೇವನನ್ನು ಅವನ ಮಿತ್ರರಾದ ಸ್ತುತಿಕರ್ತರು ಒಟ್ಟಿಗೆ ಸೇರಿಕೊಂಡು ಸ್ತುತಿಸುತ್ತಾರೆ. ಅವರ ಸ್ತುತಿವಾಕ್ಕುಗಳೂ ಸಹ ಅವನನ್ನು ಪ್ರಶಂಸಿಸುತ್ತವೆ.

## English Translation.

His friends praise Indu sporting in the water and passing through the fleece; their hymns glorify him.

॥ ಸಂಹಿತಾಪಾಠಃ ॥

ತಯಾ ಪವಸ್ವ ಧಾರಯಾ ಯಯಾ ಪೀತೋ ವಿಚಕ್ಷಸೇ ।

ಇಂದೋ ಸ್ತೋತ್ರೇ ಸುವೀರ್ಯಂ ॥ ೬ ॥

॥ ಪದಪಾಠಃ ॥

ತಯಾ । ಪವಸ್ವ । ಧಾರಯಾ । ಯಯಾ । ಪೀತಃ । ವಿऽಚಕ್ಷಸೇ ।

ಇಂದೋ ಇತಿ । ಸ್ತೋತ್ರೇ । ಸುऽವೀರ್ಯಂ ॥ ೬ ॥

|| ಸಾಯಣಭಾಷ್ಯಂ ||

**ಹೇ ಇಂದೋ ತ್ವಂ ಯಯಾ ಧಾರಯಾ ಪೀತಃ ಸನ್ವಿಚಕ್ಷಸೇ ವಿಚಕ್ಷಣಾಯ ಸ್ತೋತ್ರೇ ಸ್ತೋತ್ರಾಣಾಂ ಕರ್ತ್ರೇ ಪುರುಷಾಯ ಸುವೀರ್ಯಂ ಶೋಭನವೀರ್ಯಂ ಪ್ರಯಚ್ಛಸೀತಿ ಶೇಷಃ | ತಯಾ ಧಾರಯಾ ಪವಸ್ವ | ಕ್ಷರ ||**

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ | **ಯಯಾ**—ಯಾವ | **ಧಾರಯಾ**—ಧಾರಾರೂಪದಿಂದ | **ಪೀತಃ**—ಪಾನಮಾಡಲ್ಪಟ್ಟು | **ವಿಚಕ್ಷಸೇ**—ಸೂಕ್ಷ್ಮದೃಷ್ಟಿಯುಳ್ಳ | **ಸ್ತೋತ್ರೇ**—ಸ್ತುತಿಕರ್ತನಿಗೆ | **ಸುವೀರ್ಯಂ**—ಉತ್ತಮವಾದ ವೀರ್ಯಪ್ರದನಾಗುವೆಯೋ | **ತಯಾ**—ಅಂತಹ ಧಾರಾರೂಪದಿಂದ | **ಪವಸ್ವ**—ಸ್ರವಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವ ಧಾರಾರೂಪದಿಂದ ನೀನು ಪಾನಮಾಡಲ್ಪಟ್ಟು ಸೂಕ್ಷ್ಮದೃಷ್ಟಿಯುಳ್ಳ ಸ್ತುತಿಕರ್ತನಿಗೆ ಉತ್ತಮವಾದ ವೀರ್ಯಪ್ರದನಾಗುವೆಯೋ ಅಂತಹ ಧಾರಾರೂಪದಿಂದ ಸ್ರವಿಸು.

**nglish Translation.**

: stream wherewith when drunk you bestow
g worshipper.

# ನಲವತ್ತಾರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಸೃಗ್ರನ್ನಿತಿ ಷಡೃಚಂ ದ್ವಾವಿಂಶಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಅಸೃಗ್ರನ್ನಿತ್ಯನುಕ್ರಾಂತಂ || ಗತೋ ವಿನಿಯೋಗಃ ||**

ಅನುವಾದವು—**ಅಸೃಗ್ರನ್** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಅಸೃಗ್ರನ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೪

ಮಂಡಲ—೯ || ಅನುವಾಕ—೨ || ಸೂಕ್ತ—೪೪ ||
ಅಷ್ಟಕ—೭ || ಅಧ್ಯಾಯ—೧ || ವರ್ಗ—೩ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ||
|| ಋಷಿಃ—ಅಯಾಸ್ಯಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ—ಗಾಯತ್ರೀ ||

॥ ಸಂಹಿತಾಪಾಠಃ ॥

ಅಸೃಗ್ರನ್ದೇವವೀತಯೇಽತ್ಯಾಸಃ ಕೃತ್ವ್ಯಾ ಇವ ।

ಕ್ಷರಂತಃ ಪರ್ವತಾವೃಧಃ ॥ ೧ ॥

॥ ಪದಪಾಠಃ ॥

ಅಸೃಗ್ರನ್ । ದೇವಽವೀತಯೇ । ಅತ್ಯಾಸಃ । ಕೃತ್ವ್ಯಾಃಽಇವ ।

ಕ್ಷರಂತಃ । ಪರ್ವತಽವೃಧಃ ॥ ೧ ॥

॥ ಸಾಯಣಭಾಷ್ಯಂ ॥

ಪರ್ವತಾವೃಧಃ ಪರ್ವತೈರಭಿಷವಗ್ರಾವಭಿರ್ವೃದ್ಧಾಃ ಪರ್ವತೇಷು ವಾ ಜಾತಾಃ ಕ್ಷರಂತಃ ಸೋಮಾ ದೇವವೀತಯೇ ಯಜ್ಞಾಯಾತ್ಯಾಸೋಽಶ್ವಾಃ ಕೃತ್ವ್ಯಾ ಇವ ಯಥಾ ಕರ್ಮಣ್ಯಾ ಅಶ್ವಾಃ ತದ್ವದಸೃಗ್ರನ್ । ಸೃಜ್ಯಂತೇ ॥

॥ ಪ್ರತಿ ಪದಾರ್ಥ ॥

**ಕೃತ್ವ್ಯಾಃ**—ಕರ್ಮಕುಶಲಗಳಾದ । **ಅತ್ಯಾಸ ಇವ**—ಅಶ್ವಗಳಂತೆ । **ಪರ್ವತಾವೃಧಃ**— ಪರ್ವತಪ್ರದೇಶಗಳಲ್ಲಿ ಬೆಳೆದವೂ ಅಥವಾ ಹಿಂಡುವ ಕಲ್ಲುಗಳಿಂದ ವೃದ್ಧಿಮಾಡಲ್ಪಟ್ಟವೂ । **ಕ್ಷರಂತಃ**—ಸ್ರವಿಸುವುವೂ ಆದ ಸೋಮರಸಗಳು । **ದೇವವೀತಯೇ**—ದೇವತೆಗಳ ಪಾನಾರ್ಥವಾಗಿ । **ಅಸೃಗ್ರನ್**—ಸೃಷ್ಟವಾಗುತ್ತವೆ.

॥ ಭಾವಾರ್ಥ ॥

ಕರ್ಮಕುಶಲಗಳಾದ ಅಶ್ವಗಳಂತೆ ಪರ್ವತ ಪ್ರದೇಶಗಳಲ್ಲಿ ಬೆಳೆದವೂ ಅಥವಾ ಹಿಂಡುವ ಕಲ್ಲುಗಳಿಂದ ವೃದ್ಧಿ ಮಾಡಲ್ಪಟ್ಟವೂ, ಸ್ರವಿಸುವುವೂ ಆದ ಸೋಮರಸಗಳು ಯಜ್ಞಾರ್ಥವಾಗಿ ಸೃಷ್ಟವಾಗುತ್ತವೆ.

## English Translation.

Begotten by the stones the flowing (Soma-juices) are effused for the banquet of the gods like active horses.

॥ ಸಂಹಿತಾಪಾಠಃ ॥

ಪರಿಷ್ಕೃತಾಸ ಇಂದವೋ ಯೋಷೇವ ಪಿ

ತ್ರ್ಯಾವತೀ । ವಾಯುಂ ಸೋಮಾ ಅಸೃಕ್ಷತ ॥ ೨

॥ ಪದಪಾಠಃ ॥

ಪರಿ೨ಕೃತಾಸಃ । ಇಂದವಃ । ಯೋಷಾ೨ಇವ । ಪಿತ್ರ್ಯ೨ವತೀ ।

ವಾಯುಂ । ಸೋಮಾಃ । ಅಸೃಕ್ಷತ ॥ ೨ ॥

॥ ಸಾಯಣಭಾಷ್ಯಂ ॥

ಇಂದವೋ ಯಾಗೇಷು ಕ್ಲಿದ್ಯಮಾನಾಃ ಸೋಮಾಃ ಪರಿಷ್ಕೃತಾಸಃ ಪರಿಷ್ಕೃತಾ ಅಲಂಕೃತಾಃ ಸಂತಃ ಪಿತ್ರ್ಯಾವತೀ ಪಿತೃಮತೀ ಯೋಷೇವಾಲಂಕೃತಾ ಕನ್ಯಕಾ ಯಥಾ ವರಂ ಪ್ರತಿ ಗಚ್ಛತಿ ತದ್ವದ್ವಾಯುಂ ಪ್ರತ್ಯಸೃಕ್ಷತ । ಗಚ್ಛಂತಿ ॥

॥ ಪ್ರತಿ ಪದಾರ್ಥ ॥

**ಪಿತ್ರ್ಯಾವತೀ**—ಪ್ರೀತಿಯುತನಾದ ತಂದೆಯನ್ನು ಹೊಂದಿರುವ । **ಯೋಷಾ ಇವ**—ಕನ್ಯೆಯು ಉತ್ತಮವಾಗಿ ಅಲಂಕರಿಸಿ ಕೊಳ್ಳುವಂತೆ । **ಇಂದವಃ**—ಯಾಗಾರ್ಥವಾಗಿ ಹಿಂಡಲ್ಪಟ್ಟ । **ಸೋಮಾಃ**—ಸೋಮರಸಗಳು । **ಪರಿಷ್ಕೃತಾಸಃ**—ಉತ್ತಮವಾಗಿ ಅಲಂಕರಿಸಲ್ಪಟ್ಟು । **ವಾಯುಂ**—ವಾಯುವನ್ನುದ್ದೇಶಿಸಿ । **ಅಸೃಕ್ಷತ**—ಪ್ರವಿಸುತ್ತದೆ.

॥ ಭಾವಾರ್ಥ ॥

ಪ್ರೀತಿಯುತವಾದ ತಂದೆಯನ್ನು ಹೊಂದಿರುವ ಕನ್ಯೆಯು ಅತ್ಯುತ್ತಮವಾಗಿ ಅಲಂಕರಿಸಿ ಕೊಳ್ಳುವಂತೆ, ಯಾಗಾರ್ಥವಾಗಿ ಹಿಂಡಲ್ಪಟ್ಟ ಸೋಮರಸಗಳು ಉತ್ತಮವಾಗಿ ಅಲಂಕರಿಸಲ್ಪಟ್ಟು ವಾಯುವನ್ನುದ್ದೇಶಿಸಿ ಪ್ರವಿಸುತ್ತದೆ.

## English Translation.

The Soma-juices pressed (at the sacrifice) adorned like a bride who has a father flow to Vayu.

॥ ಸಂಹಿತಾಪಾಠಃ ॥

ಏತೇ ಸೋಮಾಸ ಇಂದವಃ ಪ್ರಯಸ್ವಂತಶ್ಚಮೂ ಸುತಾಃ ।

ಇಂದ್ರಂ ವರ್ಧಂತಿ ಕರ್ಮಭಿಃ ॥ ೩ ॥

॥ ಪದಪಾಠಃ ॥

ಏತೇ । ಸೋಮಾಸಃ । ಇಂದವಃ । ಪ್ರಯಸ್ವಂತಃ । ಚಮೂ ಇತಿ । ಸುತಾಃ ।

ಇಂದ್ರಂ । ವರ್ಧಂತಿ । ಕರ್ಮ೨ಭಿಃ ॥ ೪ ॥

|| ಸಾಯಣಭಾಷ್ಯಂ ||

ಇಂದವೋ ದೀಪ್ತಾಃ ಪ್ರಯಸ್ವಂತೋಽನ್ನವಂತೆ ಏತೇಽಸ್ಮಿನ್ಕರ್ಮಣಿ ವರ್ತಮಾನಾ ಅಮೀ ಸೋಮಾಸಃ ಸೋಮಾಶ್ಚಮೂ ಚಮ್ವೋರಧಿಷವಣಫಲಕಯೋಃ ಸುತಾ ಅಭಿಷುತಾಃ ಸಂತಃ ಕರ್ಮಭಿರ್ಯೋಗ್ಯೈರಿಂದ್ರಂ ವರ್ಧಂತಿ । ಪ್ರವರ್ಧಯಂತಿ । ಪ್ರೀಣಯಂತೀತ್ಯರ್ಥಃ ||

|| ಪ್ರತಿಪದಾರ್ಥ ||

ಇಂದವಃ— ಪ್ರಭಾಯುತವಾದವೂ । ಪ್ರಯಸ್ವಂತಃ—ಅನ್ನಯುಕ್ತವಾದವೂ । ಏತೇ—ಈ ಕರ್ಮದಲ್ಲಿ ನಿಯುಕ್ತವಾದವೂ ಆದ । ಸೋಮಾಸಃ—ಸೋಮರಸಗಳು । ಚಮೂ—ಹಿಂಡುವ ಹಲಗೆಗಳಿಂದ । ಸುತಾಃ—ಹಿಂಡಲ್ಪಟ್ಟು । ಕರ್ಮಭಿಃ—ಯಾಗಕರ್ಮಗಳಿಂದ । ಇಂದ್ರಂ—ಇಂದ್ರನನ್ನು । ವರ್ಧಂತಿ—ತೃಪ್ತಿಗೊಳಿಸುತ್ತವೆ.

|| ಭಾವಾರ್ಥ ||

ಪ್ರಭಾಯುತವಾದವೂ, ಅನ್ನಯುಕ್ತವಾದವೂ, ಪ್ರಸಕ್ತವಾದ ಕರ್ಮದಲ್ಲಿ ನಿಯುಕ್ತವಾದವೂ ಆದ ಸೋಮರಸಗಳು ಹಿಂಡುವ ಹಲಗೆಗಳಿಂದ ಹಿಂಡಲ್ಪಟ್ಟು ಯಾಗಕರ್ಮಗಳಿಂದ ಇಂದ್ರನನ್ನು ತೃಪ್ತಿಗೊಳಿಸುತ್ತವೆ.

## English Translation.

These brilliant Soma-Juices, bestowing pleasant food, expressed into the vessel, gratify Indra with the ceremonies.

|| ಸಂಹಿತಾಪಾಠಃ ||

ಆ ಧಾವತಾ ಸುಹಸ್ತ್ಯಃ ಶುಕ್ರಾ ಗೃಭ್ಣೀತ ಮಂಥಿನಾ ।

ಗೋಭಿಃ ಶ್ರೀಣೀತ ಮತ್ಸರಂ || ೪ ||

|| ಪದಪಾಠಃ ||

ಆ । ಧಾವತ । ಸುಽಹಸ್ತ್ಯಃ । ಶುಕ್ರಾ । ಗೃಭ್ಣೀತ । ಮಂಥಿನಾ ।

ಗೋಭಿಃ । ಶ್ರೀಣೀತ । ಮತ್ಸರಂ || ೪ ||

|| ಸಾಯಣಭಾಷ್ಯಂ ||

ಹೇ ಸುಹಸ್ತ್ಯಃ ಶೋಭನಹಸ್ತಾ ಋತ್ವಿಜಃ ಆ ಧಾವತ । ಮಾಂ ಸಂಪ್ರತ್ಯಾಗಚ್ಛತ । ಮಂಥಿನಾ ಸಹ ಶುಕ್ರಾ ಶುಕ್ರಂ ಚ ಗೃಭ್ಣೀತ । ಗೃಹ್ಣೀತ ಸೋಮಂ । ಮತ್ಸರಂ ಸೋಮಂ ಗೋಭಿರ್ಗೋವಿಕಾರೈಃ ಪಯೋಭಿಃ ಶ್ರೀಣೀತ । ಸಂಸ್ಕುರುತ ಚ ||

॥ ಪ್ರತಿಪದಾರ್ಥ ॥

**ಸುಹಸ್ತ್ಯಃ**—ಉತ್ತಮವಾದ ಹಸ್ತವುಳ್ಳ ಎಲೈ ಋತ್ವಿಕ್ಕುಗಳೇ, । **ಆ ಧಾವತ**—ಓಡಿಬನ್ನಿರಿ **ಮಂಥಿನಾ**—ಸ್ರುಕ್ಪಾತ್ರೆಯಿಂದ । **ಶುಕ್ರಾ**—ಪ್ರಕಾಶಮಾನವಾದ ಸೋಮವನ್ನು । **ಗೃಭ್ಣೀತ**—ಸ್ವೀಕರಿಸಿರಿ । **ಮತ್ಸರಂ**—ಹರ್ಷಕಾರಕವಾದ ಸೋಮವನ್ನು । **ಗೋಭಿಃ**—ಕ್ಷೀರಾದಿ ಆಶ್ರಯಣ ದ್ರವ್ಯಗಳೊಡನೆ । **ಶ್ರೀಣೀತ**—ಮಿಶ್ರಮಾಡಿ ಸಂಸ್ಕರಿಸಿರಿ.

॥ ಭಾವಾರ್ಥ ॥

ಉತ್ತಮವಾದ ಹಸ್ತವುಳ್ಳ ಎಲೈ ಋತ್ವಿಕ್ಕುಗಳೇ, ಓಡಿಬನ್ನಿರಿ. ಸ್ರುಕ್ಪಾತ್ರೆಯಿಂದ ಪ್ರಕಾಶಮಾನವಾದ ಸೋಮವನ್ನು ಸ್ವೀಕರಿಸಿರಿ. ಹರ್ಷಕಾರಕವಾದ ಸೋಮವನ್ನು ಕ್ಷೀರಾದಿ ಆಶ್ರಯಣ ದ್ರವ್ಯಗಳೊಡನೆ ಮಿಶ್ರಮಾಡಿ, ಸಂಸ್ಕರಿಸಿರಿ.

## English Translation.

Dexterous (priests) hasten (to me), take with the ladle the pure (Soma) mix the exhilarating (Soma) with milk and curds.

॥ ಸಂಹಿತಾಪಾಠಃ ॥

ಸ ಪವಸ್ವ ಧನಂಜಯ ಪ್ರಯಂತಾ ರಾಧಸೋ ಮಹಃ ।
ಅಸ್ಮಭ್ಯಂ ಸೋಮ ಗಾತುವಿತ್ ॥ ೫ ॥

॥ ಪದಪಾಠಃ ॥

ಸಃ । ಪವಸ್ವ । ಧನಂऽಜಯ । ಪ್ರऽಯಂತಾ । ರಾಧಸಃ । ಮಹಃ ।
ಅಸ್ಮಭ್ಯಂ । ಸೋಮ । ಗಾತುऽವಿತ್ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಧನಂಜಯ ಶತ್ರುಸಂಬಂಧಿನಾಂ ಧನಾನಾಂ ಜೇತಃ ಸೋಮ ಗಾತುವಿದಭೀಷ್ಟಮಾರ್ಗಸ್ಯ ಲಂಭಕೋऽಸ್ಮಭ್ಯಂ ಮಹೋ ಮಹತೋ ರಾಧಸೋ ಧನಸ್ಯ ಪ್ರಯಂತಾ ಪ್ರದಾತಾ ಚ ಯಃ ಸ ತ್ವಂ ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

**ಧನಂಜಯ**—ಶತ್ರುಗಳ ಧನವನ್ನು ಜಯಿಸಬಲ್ಲ । **ಸೋಮ**—ಎಲೈ ಸೋಮದೇವನೇ । **ಗಾತುವಿತ್**—ಸನ್ಮಾರ್ಗಗಳನ್ನು ತಿಳಿದಿರುವವನೂ । **ಅಸ್ಮಭ್ಯಂ**—ನಮಗೆ । **ಮಹಃ**—ಮಹತ್ತಾದ । **ರಾಧಸಃ**—ಧನಕ್ಕೆ । **ಪ್ರಯಂತಾ**—ಉತ್ತಮವಾದ ದಾತೃವೂ । **ಸಃ**—ಪ್ರಸಿದ್ಧನೂ ಆದ ನೀನು । **ಪವಸ್ವ**—ಶುದ್ಧಿಕಾರಕನಾಗಿ ಸ್ರವಿಸು.

|| ಭಾವಾರ್ಥ ||

ಶತ್ರುಗಳ ಧನವನ್ನು ಜಯಿಸಬಲ್ಲ ಎಲೈ ಸೋಮದೇವನೇ, ಸನ್ಮಾರ್ಗಗಳನ್ನು ತಿಳಿದಿರುವವನೂ ನಮಗೆ ಮಹತ್ತಾದ ಧನಕ್ಕೆ ಉತ್ತಮವಾದ ದಾತೃವೂ ಪ್ರಸಿದ್ಧನೂ ಆದ ನೀನು ಶುದ್ಧಕಾರಕನಾಗಿ ಸ್ರವಿಸು.

**English Translation.**

Soma, conqueror of wealth, who know the way (to fulfil my desires), flow forth the bestower of vast wealth upon us.

|| ಸಂಹಿತಾಪಾಠಃ ||

ಏತಂ ಮೃಜಂತಿ ಮರ್ಜ್ಯಂ ಪವಮಾನಂ ದಶ ಕ್ಷಿಪಃ ।
ಇಂದ್ರಾಯ ಮತ್ಸರಂ ಮದಂ || ೬ ||

|| ಪದಪಾಠಃ ||

ಏತಂ । ಮೃಜಂತಿ । ಮರ್ಜ್ಯಂ । ಪವಮಾನಂ । ದಶ । ಕ್ಷಿಪಃ ।
ಇಂದ್ರಾಯ । ಮತ್ಸರಂ । ಮದಂ || ೬ ||

|| ಸಾಯಣಭಾಷ್ಯಂ ||

**ಮರ್ಜ್ಯಂ ಮರ್ಜನೀಯಂ ಶೋಧ್ಯಂ ಪವಮಾನಂ ಕ್ಷರಂತಂ ಮತ್ಸರಂ ಮದಕರಮೇತಮಿಮಂ ಮದಂ ಸೋಮಂ ದಶಸಂಖ್ಯಾಕಾಃ ಕ್ಷಿಪೋಽಙ್ಗುಲಯಃ । ಕ್ಷಿಶಃ ಕ್ಷಿಪ ಇತ್ಯಂಗುಲಿನಾಮಸು ಪಾಠಾತ್ । ಇಂದ್ರಾರ್ಥಂ ಮೃಜಂತಿ । ಪವಿತ್ರೇ ಶೋಧಯಂತಿ ||**

|| ಪ್ರತಿಪದಾರ್ಥ ||

**ಮರ್ಜ್ಯಂ**—ಶುದ್ಧ್ಯರ್ಹನೂ । **ಪವಮಾನಂ**—ಸ್ರವಿಸುವವನೂ । **ಮತ್ಸರಂ**—ಮದಕಾರನೂ ಆದ । **ಏತಂ ಮದಂ**—ಈ ಸೋಮನನ್ನು । **ದಶ ಕ್ಷಿಪಃ**—ಹತ್ತು ಬೆರಳುಗಳೂ । **ಇಂದ್ರಾಯ**—ಇಂದ್ರನ ಪಾನಕ್ಕಾಗಿ । **ಮೃಜಂತಿ**—ದಶಾಪವಿತ್ರದಲ್ಲಿ ಹಿಂಡುತ್ತವೆ.

|| ಭಾವಾರ್ಥ ||

ಶುದ್ಧ್ಯರ್ಹನೂ, ಸ್ರವಿಸುವವನೂ, ಮದಕಾರಕನೂ ಆದ ಈ ಸೋಮನನ್ನು ಹತ್ತು ಬೆರಳುಗಳೂ ಇಂದ್ರನ ಪಾನಕ್ಕಾಗಿ ದಶಾಪವಿತ್ರದಲ್ಲಿ ಹಿಂಡುತ್ತವೆ.

## English Translation.

The ten fingers purtfy this purifiable pure flowing exhilarating juice for Indra.

# ನಲವತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಯಾ ಸೋಮ ಇತಿ ಪಂಚರ್ಚಂ ತ್ರಯೋವಿಂಶಂ ಸೂಕ್ತಂ ಭೃಗುಪುತ್ರಸ್ಯ ಕವೇರಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಅಯಾ ಸೋಮಃ ಪಂಚ ಕವಿರ್ಭಾರ್ಗವ ಇತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು— ಅಯಾ ಸೋಮಃ ಎಂಬ ಈ ಸೂಕ್ತವು. ಎರಡನೆಯ ಅನುವಾಕದಲ್ಲಿ ಇಪ್ಪತ್ತಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಭೃಗುಪುತ್ರನಾದ ಕವಿಯೆಂಬುವನು ಋಷಿಯು; ಪವಮಾನಸೋಮನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಯಾ ಸೋಮಃ ಪಂಚ ಕವಿರ್ಭಾರ್ಗವಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

**ಸೂಕ್ತ—೪೭**

ಮಂಡಲ—೯ ॥ ಅನುವಾಕ—೨ ॥ ಸೂಕ್ತ—೪೭ ॥
ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಕವಿರ್ಭಾರ್ಗವಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಅಯಾ ಸೋಮಃ ಸುಕೃತ್ಯಯಾ ಮಹಶ್ಚಿದಭ್ಯವರ್ಧತ ।**
**ಮಂದಾನ ಉದ್ವೃಷಾಯತೇ ॥ ೧ ॥**

॥ ಪದಪಾಠಃ ॥

**ಅಯಾ । ಸೋಮಃ । ಸುऽಕೃತ್ಯಯಾ । ಮಹಃ । ಚಿತ್ । ಅಭಿ । ಅವರ್ಧತ ।**
**ಮಂದಾನಃ । ಉತ್ । ವೃಷಽಯತೇ ॥ ೧ ॥**

॥ ಸಾಯಣಭಾಷ್ಯಂ ॥

**ಸೋಮೋಽಯಾನಯಾ ಸುಕೃತ್ಯಯಾ ಶೋಭನಯಾಭಿಷವಾದಿಲಕ್ಷಣಯಾ ಕ್ರಿಯಯಾ ಮಹಶ್ಚಿನ್ಮಹತೋ ದೇವಾನ್ ಪ್ರತ್ಯಭ್ಯವರ್ಧತೇ । ಪ್ರವೃದ್ಧೋಽಭೂತ್ । ಮಂದಾನೋ ಮೋದಮಾನ ಉದ್ವೃಷಾಯತೇ । ವೃಷವದಾಚರತಿ । ಯಥಾ ಮೋದಮಾನೋ ವೃಷಭಃ ಶಬ್ದಂ ಕರೋತಿ ತಥಾಭಿಷವವೇಲಾಯಾಮುಪರವೇಷು ಶಬ್ದಂ ಕರೋತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಸೋಮಃ**— ಸೋಮದೇವನು । **ಅಯಾ ಸುಕೃತ್ಯಯಾ**— ಉತ್ತಮವಾದ ಈ ಅಭಿಷವಾದಿ (ಹಿಂಡುವ) ಕರ್ಮಗಳಿಂದ । **ಮಹಶ್ಚಿತ್**— ಅತ್ಯಧಿಕವಾದ ಪ್ರಭಾವವುಳ್ಳ ದೇವತೆಗಳ ಸಮ್ಮುಖದಲ್ಲೂ । **ಅಭ್ಯವರ್ಧತೇ**— ವೃದ್ಧಿಯನ್ನು ಪಡೆದಿದ್ದಾನೆ । **ಮಂದಾನಃ**— ಹರ್ಷವನ್ನು ಪ್ರಕಟಿಸುತ್ತಾ । **ಉದ್ವೃಷಾಯತೇ**— ತೃಪ್ತವಾದ ವೃಷಭವು ಗುಟುರು ಹಾಕುವಂತೆ ಶಬ್ದವನ್ನು ಮಾಡುತ್ತಾನೆ.

॥ ಭಾವಾರ್ಥ ॥

ಸೋಮದೇವನು ಉತ್ತಮವಾದ ಅಭಿಷವಾದಿ ಕರ್ಮಗಳಿಂದ ಅತ್ಯಧಿಕವಾದ ಪ್ರಭಾವವುಳ್ಳ ದೇವತೆಗಳ ಸಮ್ಮುಖದಲ್ಲೂ ಸಹ ವೃದ್ಧಿಯನ್ನು ಪಡೆದಿದ್ದಾನೆ. ಹರ್ಷವನ್ನು ಪ್ರಕಟಿಸುತ್ತಾ, ತೃಪ್ತಿಯನ್ನು ಹೊಂದಿದ ವೃಷಭವು ಗುಟುರು ಹಾಕುವಂತೆ ಶಬ್ದವನ್ನು ಮಾಡುತ್ತಾನೆ.

## English Translation.

By this sacred solemnity the Soma is magnified before the mighty (gods): exulting he moves like a bull.

॥ ಸಂಹಿತಾಪಾಠಃ ॥

ಕೃತಾನೀದಸ್ಯ ಕರ್ತ್ವಾ ಚೇತಂತೇ ದಸ್ಯುತರ್ಹಣಾ ।
ಋಣಾ ಚ ಧೃಷ್ಣುಶ್ಚಯತೇ ॥ ೨ ॥

॥ ಪದಪಾಠಃ ॥

ಕೃತಾನಿ । ಇತ್ । ಅಸ್ಯ । ಕರ್ತ್ವಾ । ಚೇತಂತೇ । ದಸ್ಯುಽತರ್ಹಣಾ ।
ಋಣಾ । ಚ । ಧೃಷ್ಣುಃ । ಚಯತೇ ॥ ೨ ॥

॥ ಸಾಯಣಭಾಷ್ಯಂ ॥

**ಕೃತಾನ್ಯಸ್ಯ ಯಸ್ಯೈತಸ್ಯ ಸೋಮಸ್ಯ ದಸ್ಯುತರ್ಹಣಾ ದಸ್ಯೂನಾಮಸುರಾಣಾಂ ಕರ್ತ್ವಾ ಕರ್ಮಾಣಿ ಸ ಇದಸ್ಮಾಭಿರೇವ ಸೋಽಯಂ ಧೃಷ್ಣುರ್ಧೃಷ್ಟಃ ಸೋಮೋ ಯಜಮಾನಾನಾಮೃಣಾ ಚರ್ಣಾನ್ಯಪಿ ಚಯತೇ । ಕಾಮಪ್ರದಾನೇನ ಚಾತಯತಿ ॥**

॥ಪ್ರತಿಪದಾರ್ಥ ॥

**ಅಸ್ಯ**— ಈ ಸೋಮದೇವನ | **ದಸ್ಯುತರ್ಹಣಾ**—ಅಸುರ ನಾಶಕವಾದ | **ಕತ್ವಾನಿ**— ಕರ್ಮಗಳನ್ನೊಳಗೊಂಡ | **ಕೃತಾನಿ ಇತ್**—ವೀರ್ಯಕರ್ಮಗಳನ್ನೇ | **ಚೇತಂತೇ**—ಪ್ರಕಟಿಸುತ್ತಾರೆ | **ಧೃಷ್ಣುಃ**—ಶತ್ರುಧರ್ಷಕನಾದ ಸೋಮನು | **ಋಣಾ ಚ**—ಯಜಮಾನರ ಋಣಗಳನ್ನೂ | **ಚಯತೇ**— ಇಷ್ಟಾರ್ಥ ಪ್ರದಾನಗಳಿಂದ ತೀರಿಸುತ್ತಾನೆ.

॥ ಭಾವಾರ್ಥ ॥

ಈ ಸೋಮದೇವನ ಅಸುರನಾಶಕವಾದ ಕರ್ಮಗಳನ್ನೊಳಗೊಂಡ ವೀರ್ಯಕರ್ಮಗಳನ್ನೇ ಸ್ತುತಿಕರ್ತರು ಪ್ರಕಟಿಸುತ್ತಾರೆ. ಶತ್ರುಧರ್ಷಕನಾದ ಸೋಮನು ಯಜಮಾನರ ಋಣಗಳನ್ನೂ ಸಹ ಇಷ್ಟಾರ್ಥಪ್ರದಾನೆಗಳಿಂದ ತೀರಿಸುತ್ತಾನೆ.

## English Translation.

They publish his exploits, his acts of Dasya-crushing: resolute he acquits the debts (of the worshipper).

॥ ಸಂಹಿತಾಪಾಠಃ ॥

**ಆತ್ಸೋಮ ಇಂದ್ರಿಯೋ ರಸೋ ವಜ್ರಃ ಸಹಸ್ರಸಾ ಭುವತ್ ।**

**ಉಕ್ಥಂ ಯದಸ್ಯ ಜಾಯತೇ ॥ ೩ ॥**

॥ ಪದಪಾಠಃ ॥

**ಆತ್ । ಸೋಮಃ । ಇಂದ್ರಿಯಃ । ರಸಃ । ವಜ್ರಃ । ಸಹಸ್ರಽಸಾಃ । ಭುವತ್ ।**

**ಉಕ್ಥಂ । ಯತ್ । ಅಸ್ಯ । ಜಾಯತೇ ॥ ೩ ॥**

॥ ಸಾಯಣಭಾಷ್ಯಂ ॥

**ಯದ್ಯದಾಸ್ಯೇಂದ್ರಸ್ಯೋಕ್ಥಂ ಶಸ್ತ್ರಂ ಜಾಯತೇ ಪ್ರಾದುರ್ಭವತಿ ತದಾದನಂತರಮೇವೇಂದ್ರಿಯ ಇಂದ್ರಸ್ಯ ಪ್ರಿಯಕರೋ ರಸೋ ಬಲವಾನ್ವಜ್ರೋ ವಜ್ರಸದೃಶಃ ಕೇನಾಪ್ಯಹಿಂಸ್ಯಃ ಸೋಮಃ ಸಹಸ್ರಸಾ ಅಸ್ಮಭ್ಯಮಪರಿಮಿತಸ್ಯ ಧನಸ್ಯ ದಾತಾ ಭವತಿ ॥**

॥ ಪ್ರತಿಪದಾರ್ಥ ॥

**ಯತ್**—ಯಾವಾಗ | **ಅಸ್ಯ**—ಇಂದ್ರನನ್ನುದ್ದೇಶಿಸಿದ | **ಉಕ್ಥಂ**—ಶಸ್ತ್ರಮಂತ್ರವು | **ಜಾಯತೇ**— **ಉತ್ಪ**ನ್ನವಾಗುವುದೋ | **ಆತ್**—ಆ ಒಡನೆಯೇ | **ಇಂದ್ರಿಯಃ**—ಇಂದ್ರನಿಗೆ ಪ್ರಿಯಕರವಾದುದೂ | **ವಜ್ರಃ**—ವಜ್ರಾ

ಯುಧಕ್ಕೆ ಸಮಾನವಾದುದೂ | ರಸಃ—ಶಕ್ತಿಯುಳ್ಳದ್ದೂ ಆದ | ಸೋಮಃ—ಸೋಮವು | :ಸಹಸ್ರಸಾಃ—ನಮಗೆ ಸಹಸ್ರಸಂಖ್ಯೆಯಲ್ಲಿ | ಭವತ್—ಧನಪ್ರದವಾಗುತ್ತದೆ.

|| ಭಾವಾರ್ಥ ||

ಇಂದ್ರನನ್ನುದ್ದೇಶಿಸಿದ ಶಸ್ತ್ರಮಂತ್ರವು ಯಾವಾಗ ಉತ್ಪನ್ನವಾಗುವುದೋ (ಪಠಿಸಲ್ಪಡುವುದೋ) ಆ ಒಡನೆಯೇ ಇಂದ್ರನಿಗೆ ಪ್ರಿಯಕರವಾದುದೂ ವಜ್ರಾಯುಧಕ್ಕೆ ಸಮಾನವಾದುದೂ, ಶಕ್ತಿಯುಳ್ಳದ್ದೂ ಆದ ಸೋಮವು ನಮಗೆ ಸಹಸ್ರಸಂಖ್ಯೆಯಲ್ಲಿ ಧನಪ್ರದವಾಗುತ್ತದೆ.

## English Translation.

When the praise of Indra is recited, then the juice dear to him, vigorous as a thunderbolt, gives us unlimited wealth.

|| ಸಂಹಿತಾಪಾಠಃ ||

ಸ್ವಯಂ ಕವಿರ್ವಿಧರ್ತರಿ ವಿಪ್ರಾಯ ರತ್ನಮಿಚ್ಛತಿ |
ಯದೀ ಮರ್ಮೃಜ್ಯತೇ ಧಿಯಃ || ೪ ||

|| ಪದಪಾಠಃ ||

ಸ್ವಯಂ | ಕವಿಃ | ವಿಽಧರ್ತರಿ | ವಿಪ್ರಾಯ | ರತ್ನಂ | ಇಚ್ಛತಿ |
ಯದಿ | ಮರ್ಮೃಜ್ಯತೇ | ಧಿಯಃ || ೪ ||

|| ಸಾಯಣಭಾಷ್ಯಂ ||

ಯದಿ ಕವಿಃ ಕ್ರಾಂತಕರ್ಮಾಯಂ ಸೋಮೋ ಧಿಯೋ ಧೀಭಿಃ || ವಿಭಕ್ತಿವ್ಯತ್ಯಯಃ || ಧೀತಿಭಿಃ | ಅಂಗುಲೀಭಿರಿತ್ಯರ್ಥಃ | ಮರ್ಮೃಜ್ಯತೇ ಶೋಧ್ಯತೇ ತರ್ಹಿ ಸ್ವಯಂ ಸ್ವಯಮೇವ ವಿಪ್ರಾಯ ಮೇಧಾವಿನೇ ವಿಧರ್ತರಿ ಕಾಮಾನಾಂ ವಿಧಾತರೀಂದ್ರೇ ರತ್ನಂ ರಮಣೀಯಂ ಧನಮಿಚ್ಛತಿ | ಇಂದ್ರೇಣ ಧನಂ ದಾಪಯಿತುಮಿಚ್ಛತೀತ್ಯರ್ಥಃ ||

|| ಪ್ರತಿಪದಾರ್ಥ ||

ಯದಿ—ಯಾವಾಗ | ಕವಿಃ—ಕ್ರಾಂತಕರ್ಮವುಳ್ಳ ಸೋಮದೇವನು | ಧಿಯಃ—ಅಂಗುಲಿಗಳಿಂದ | ಮರ್ಮೃಜ್ಯತೇ—ಶುದ್ಧಿಗಾಗಿ ಹಿಂಡಲ್ಪಡುವನೋ ಆಗ | ಸ್ವಯಂ—ಸ್ವಪ್ರೇರಣೆಯಿಂದಲೇ | ವಿಪ್ರಾಯ—ಮೇಧಾವಿಯೂ | ವಿಧರ್ತರಿ—ಕಾಮವರ್ಷಕನೂ ಆದ ಇಂದ್ರನಿಂದ | ರತ್ನಂ—ರಮಣೀಯವಾದ ಧನವನ್ನು | ಇಚ್ಛತಿ—ಕೊಡಿಸಲಿಚ್ಛಿಸುತ್ತಾನೆ.

|| ಭಾವಾರ್ಥ ||

ಕ್ರಾಂತಕರ್ಮವುಳ್ಳ ಸೋಮದೇವನು ಯಾವಾಗ ಅಂಗುಲಿಗಳಿಂದ ಶುದ್ಧಿಗಾಗಿ ಹಿಂಡಲ್ಪಡುವನೋ ಆಗ ಸ್ವಪ್ರೇರಣೆಯಿಂದಲೇ, ಮೇಧಾವಿಯೂ ಕಾಮವರ್ಷಕನೂ ಆದ ಇಂದ್ರನಿಂದ ರಮಣೀಯವಾದ ಧನವನ್ನು ಕೊಡಿಸಲಿಚ್ಛಿಸುತ್ತಾನೆ.

## English Translation.

When the sage Soma is cleansed by the fingers he of his own accord desires wealth for the pious worshpper in (Indra), the granter of wishes.

|| ಸಂಹಿತಾಪಾಠಃ ||

ಸಿಷಾಸತೂ ರಯೀಣಾಂ ವಾಜೇಷ್ವರ್ವತಾಮಿವ ।
ಭರೇಷು ಜಿಗ್ಯುಷಾಮಸಿ || ೫ ||

|| ಪದಪಾಠಃ ||

ಸಿಸಾಸತುಃ । ರಯೀಣಾಂ । ವಾಜೇಷು । ಅರ್ವತಾಂಽಇವ ।
ಭರೇಷು । ಜಿಗ್ಯುಷಾಂ । ಅಸಿ || ೫ ||

|| ಸಾಯಣಭಾಷ್ಯಂ ||

**ಹೇ ಸೋಮ ತ್ವಂ ಭರೇಷು ಸಂಗ್ರಾಮೇಷು ಜಿಗ್ಯುಷಾಂ ಶತ್ರೂಂ ಜಯತಾಂ ರಯೀಣಾಂ ಧನಾನಾಂ ಸಿಷಾಸತುಃ ಸಂಭಕ್ತುಮಿಚ್ಛುರಸಿ । ಭವಸಿ । ಶತ್ರೂಞ್ಜಯದ್ಭ್ಯೋ ಧನಾನಿ ಪ್ರಯಚ್ಛಸೀತ್ಯರ್ಥಃ। ತತ್ರ ದೃಷ್ಟಾಂತಃ । ವಾಜೇಷು ಸಂಗ್ರಾಮೇಷ್ವರ್ವತಾಮಿವಾಶ್ವಾನಾಮಿವ । ಯಥಾ ಸಂಗ್ರಾಮಂ ಪ್ರವಿಶದ್ಭ್ಯೋಽಶ್ವೇಭ್ಯೋ ಘಾಸಂ ಪ್ರಯಚ್ಛಂತಿ ತದ್ವದಿತ್ಯರ್ಥಃ ।**

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) । **ವಾಜೇಷು**—ಯುದ್ಧಗಳಲ್ಲಿ ಪ್ರವೇಶಿಸುವ । **ಅರ್ವತಾಂ ಇವ**—ಅಶ್ವಗಳಿಗೆ ಪ್ರಭೂತವಾಗಿ ಆಹಾರವನ್ನು ಹಾಕುವಂತೆ । **ಭರೇಷು**—ಯುದ್ಧಗಳಲ್ಲಿ । **ಜಿಗ್ಯುಷಾಂ**—ಜಯಶೀಲರಾದ ವೀರರಿಗೆ । **ರಯೀಣಾಂ**—ಪ್ರಭೂತವಾದ ಧನಗಳನ್ನು । **ಸಿಷಾಸತುಃ ಅಸಿ**—ಕೊಡಲಿಚ್ಛಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಯುದ್ಧಗಳಲ್ಲಿ ಪ್ರವೇಶಿಸುವ ಅಶ್ವಗಳಿಗೆ ಪ್ರಭೂತವಾಗಿ ಆಹಾರವನ್ನು ಹಾಕುವಂತೆ ಯುದ್ಧಗಳಲ್ಲಿ ಜಯಶೀಲರಾದ ವೀರರಿಗೆ ನೀನು ಪ್ರಭೂತವಾಗಿ ಧನಗಳನ್ನು ಕೊಡಲಿಚ್ಛಿಸುತ್ತೀಯೆ.

## English Translation.

You desire to give wealth to those who conquer in combat as (men offer fodder) to horses in battle.

# ನಲವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತ್ವಂ ತ್ವೇತಿ ಪಂಚರ್ಚಂ ಚತುರ್ವಿಂಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ತಂ ತ್ವೇತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥**

ಅನುವಾದವು—**ತಂ** ತ್ವಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತನಾಲ್ಕನೆಯಸೂಕ್ತ **ವು.** ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತದ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. **ಅನು**ಕ್ರಮಣಿಕೆಯಲ್ಲಿ—**ತಂ** ತ್ವಾ ಎಂದುಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

**ಸೂಕ್ತ—೪೮**

ಮಂಡಲ—೯ ॥ ಅನುವಾಕ—೨ ॥ ಸೂಕ್ತ—೪೮ ॥

ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಕವಿರ್ಭಾರ್ಗವಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ತಂ ತ್ವಾ ನೃಮ್ಣಾನಿ ಬಿಭ್ರತಂ ಸಧಸ್ಥೇಷು ಮಹೋ ದಿವಃ ।**

**ಚಾರುಂ ಸುಕೃತ್ಯಯೇಮಹೇ ॥ ೧ ॥**

॥ ಪದಪಾಠಃ ॥

**ತಂ । ತ್ವಾ । ನೃಮ್ಣಾನಿ । ಬಿಭ್ರತಂ । ಸಧಽಸ್ಥೇಷು । ಮಹಃ । ದಿವಃ ।**

**ಚಾರುಂ । ಸುಽಕೃತ್ಯಯಾ । ಈಮಹೇ ॥ ೧ ॥**

|| ಸಾಯಣಭಾಷ್ಯಂ ||

ಮಹೋ ದಿವೋ ಮಹತೋ ದ್ಯುಲೋಕಸ್ಯ ಸಧಸ್ಥೇಷು ಸಹಸ್ಥಾನೇಷು ಸ್ಥಿತಂ ನೃಮ್ಣಾನಿ ಧನಾನಿ ಬಿಭ್ರತಮಸ್ಮದರ್ಥಂ ಧಾರಯಂತಂ ಚಾರುಂ ಕಲ್ಯಾಣಂ ತಂ ಪವಮಾನಂ ತ್ವಾ ತ್ವಾಂ ಸುಕೃತ್ಯಯಾ ಶೋಭನಯಾ ಕ್ರಿಯಯೇಮಹೇ | ಧನಾನಿ ಯಾಚಾಮಹೇ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) | **ಮಹಃ**—ವಿಸ್ತೃತವಾದ | **ದಿವಃ**—ದ್ಯುಲೋಕದ | **ಸಧಸ್ಥೇಷು**—ಆಶ್ರಯಸ್ಥಾನಗಳಲ್ಲಿರುವ | **ನೃಮ್ಣಾನಿ**—ಧನಗಳನ್ನು | **ಭಿಭ್ರತಂ**—ಧರಿಸಿರುವವನೂ | **ಚಾರುಂ**—ಮನೋಹರನೂ | **ತಂ**—ಪರಿಶುದ್ಧನೂ ಆದ | **ತ್ವಾ**—ನಿನ್ನನ್ನು | **ಸುಕೃತ್ಯಯಾ**—ಉತ್ತಮವಾದ ಕರ್ಮಗಳಿಂದ | **ಈಮಹೇ**—ಆ ಧನಗಳಿಗಾಗಿ ಯಾಚಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇವನೇ, ವಿಸ್ತೃತವಾದ ದ್ಯುಲೋಕದ ಆಶ್ರಯಸ್ಥಾನಗಳಲ್ಲಿರುವ ಧನಗಳನ್ನು ಹೊಂದಿರುವವನೂ ಮನೋಹರನೂ ಆದ ನಿನ್ನನ್ನು ಉತ್ತಮವಾದ ಕರ್ಮಗಳಿಂದ ಆ ಧನಗಳಿಗಾಗಿ ಯಾಚಿಸುತ್ತೇವೆ.

## English Translation.

By sacred rites we solicit (wealth) of you, auspicious bearing wealth abiding in the regions of the vast heaven.

|| ಸಂಹಿತಾಪಾಠಃ ||

ಸಂವೃಕ್ತಧೃಷ್ಣುಮುಕ್ಥ್ಯಂ ಮಹಾಮಹಿವ್ರತಂ ಮದಂ |
ಶತಂ ಪುರೋ ರುರುಕ್ಷಣಿಂ || ೨ ||

|| ಪದಪಾಠಃ ||

ಸಂವೃಕ್ತಽಧೃಷ್ಣುಂ | ಉಕ್ಥ್ಯಂ | ಮಹಾಽಮಹಿವ್ರತಂ | ಮದಂ |
ಶತಂ | ಪುರಃ | ರುರುಕ್ಷಣಿಂ || ೨ ||

|| ಸಾಯಣಭಾಷ್ಯಂ ||

ಹೇ ಸೋಮ ಸಂವೃಕ್ತಧೃಷ್ಣುಂ | ಸಂವೃಕ್ತಾಃ ಸಂಛಿನ್ನಾ ಧೃಷ್ಣವೋ ಧರ್ಷಣಶೀಲಾಃ ಶತ್ರವೋ ಯಾಸೌ ಸಂವೃಕ್ತಧೃಷ್ಣುಃ | ತಮುಕ್ಥ್ಯಮುಕ್ಥಾರ್ಹಂ ಪ್ರಶಸ್ಯಂ ಮಹಾಮಹಿವ್ರತಂ ಮಹನೀಯ-

**ಬಹುಕರ್ಮಾಣಂ ಮದಂ ಮದಕರಂ ಶತಂ ಬಹೂನಿ ಪುರಃ ಶತ್ರೂಣಾಂ ಪುರಾಣಿ ರುರುಕ್ಷಣಿಂ ವಿನಾಶಯಂತಂ ತ್ವಾಂ ಧನಾನೀಮಹ ಇತಿ ಸಂಬಂಧಃ ||**

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) | **ಸಂವೃಕ್ತಧೃಷ್ಣುಂ**—ಪ್ರತಿಭಟಿಸುವ ಶಕ್ತರಾದ ಶತ್ರುಗಳನ್ನು ಸೀಳಿಹಾಕುವವನೂ | **ಉಕ್ಥ್ಯಂ**—ಪ್ರಶಸ್ಯನೂ | **ಮಹಾಮಹಿವ್ರತಂ**—ಪೂಜ್ಯವಾದ ಅನೇಕ ಕರ್ಮಗಳುಳ್ಳವನೂ | **ಮದಂ**—ಹರ್ಷಕಾರಕನೂ | **ಶತಂ**—ಅನೇಕವಾದ | **ಪುರಃ**—ಶತ್ರುಪಟ್ಟಣಗಳನ್ನು | **ರುರುಕ್ಷಣಿಂ**—ನಾಶಪಡಿಸುವವನೂ ಆದ ನಿನ್ನನ್ನು ಯಾಚಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇನೇ, ಪ್ರತಿಭಟಿಸುವವರೂ ಶಕ್ತರೂ ಆದ ಶತ್ರುಗಳನ್ನು ಸೀಳಿಹಾಕುವವನೂ, ಪ್ರಶಸ್ಯನೂ, ಪೂಜ್ಯವಾದ ಅನೇಕ ಕರ್ಮಗಳುಳ್ಳವನೂ, ಹರ್ಷಕಾರಕನೂ, ಅನೇಕವಾದ ಶತ್ರುಪಟ್ಟಣಗಳನ್ನು ನಾಶಪಡಿಸವವನೂ ಆದ ನಿನ್ನನ್ನು ಯಾಚಿಸುತ್ತೇವೆ.

## English Translation.

The overthrower of the resolute (foe). the praiseworthy, to whom many solemn observances are addressed, the exhilarator, the destroyer of a hundred cities (of the Asuras).

|| ಸಂಹಿತಾಪಾಠಃ ||

**ಅತಸ್ತ್ವಾ ರಯಿಮಭಿ ರಾಜಾನಂ ಸುಕ್ರತೋ ದಿವಃ |**

**ಸುಪರ್ಣೋ ಅವ್ಯಥಿರ್ಭರತ್ || ೩ ||**

|| ಪದಪಾಠಃ ||

**ಅತಃ | ತ್ವಾ | ರಯಿಂ | ಅಭಿ | ರಾಜಾನಂ | ಸುಽಕ್ರತೋ ಇತಿ | ಸುಽಕ್ರತೋ | ದಿವಃ | ಸುಽಪರ್ಣಃ | ಅವ್ಯಥಿಃ | ಭರತ್ || ೩ ||**

|| ಸಾಯಣಭಾಷ್ಯಂ ||

**ಹೇ ಪವಮಾನ ಸೋಮ ರಯಿಮಭಿ ಧನಂ ಪ್ರತಿ ರಾಜಾನಂ ತ್ವಾ ತಾಮತೋ ದಿವೋಽವದ್ಯುಲೋಕಾತ್ಸುಕ್ರತುಃ ಸುಪ್ರಜ್ಞೋಽವ್ಯಥಿರ್ವ್ಯಥಾರಹಿತಃ ಸುಪರ್ಣಃ ಶ್ಯೇನೋ ಭರತ್ | ಆಃ ತಥಾ ಚ ನಿಗಮಾಂತರಂ | ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾ | ಋ. ೪-೨೬-೭ |**

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ರಯೆಮಭಿ**—ಧನಾರ್ಥವಾಗಿ | **ರಾಜಾನಂ**—ಪ್ರಭುವಾದ | **ತ್ವಾ**—ನಿನ್ನನ್ನು | **ಅತಃ ದಿವಃ**—ದ್ಯುಲೋಕದಿಂದ | **ಸುಕ್ರತುಃ**—ಉತ್ತಮವಾದ ಕರ್ಮವುಳ್ಳದ್ದೂ | **ಅವ್ಯಥಿಃ**—ದುಃಖರಹಿತವೂ ಆದ | **ಸುಪರ್ಣಃ**—ಶ್ಯೇನಪಕ್ಷಿಯು | **ಭರತ್**—ನಿನ್ನನ್ನು ವಹಿಸಿಕೊಂಡು ಬಂದಿತು.

|| ಭಾವಾರ್ಥ ||

ಎಲೈ ಸೋಮದೇವನೇ, ಪ್ರಭುವಾದ ನಿನ್ನನ್ನು ಧನಾರ್ಥವಾಗಿ ದ್ಯುಲೋಕದಿಂದ ಉತ್ತಮವಾದ ಕರ್ಮವುಳ್ಳದ್ದೂ, ದುಃಖರಹಿತವಾದುದೂ ಆದ ಶ್ಯೇನಪಕ್ಷಿಯು ನಿನ್ನನ್ನು ವಹಿಸಿಕೊಂಡು ಬಂದಿತು.

English Translation.

O (Soma), doer of good deeds, the unwearied hawk brought you, king over riches, from this heaven.

|| ಸಂಹಿತಾಪಾಠಃ ||

**ವಿಶ್ವಸ್ಮಾ ಇತ್ಸ್ವರ್ದೃಶೇ ಸಾಧಾರಣಂ ರಜಸ್ತುರಂ |**
**ಗೋಪಾಮೃತಸ್ಯ ವಿರ್ಭರತ್ || ೪ ||**

|| ಪದಪಾಠಃ ||

**ವಿಶ್ವಸ್ಮೈ | ಇತ್ | ಸ್ವಃ | ದೃಶೇ | ಸಾಧಾರಣಂ | ರಜಃऽತುರಂ |**
**ಗೋಪಾಂ | ಋತಸ್ಯ | ವಿಃ | ಭರತ್ || ೪ ||**

|| ಸಾಯಣಭಾಷ್ಯಂ ||

**ರಜಸ್ತುರಮುದಕಸ್ಯ ಪ್ರೇರಕಮೃತಸ್ಯ ಯಜ್ಞಸ್ಯ ಗೋಪಾಂ ಗೋಪಾಯಿತಾರಂ ವಿಶ್ವಸ್ಮೈ ಸರ್ವಸ್ಮೈ ಸ್ವರ್ದೃಶೇ ಸರ್ವದೃಶೇ ದೇವಾಯ ಸಾಧಾರಣಮಿತ್ಸಮಾನಮೇವ ಸಂತಂ ಸೋಮಂ ವಿಃ ಪಕ್ಷೀ ಶ್ಯೇನೋ ಭರತ್ | ಸ್ವರ್ಗಾದಾಹರತ್ ||**

|| ಪ್ರತಿಪದಾರ್ಥ ||

**ರಜಸ್ತುರಂ**—ವೃಷ್ಟಿರೂಪವಾದ ಉದಕಕ್ಕೆ ಪ್ರೇರಕನೂ | **ಋತಸ್ಯ**—ಯಜ್ಞಕ್ಕೆ | **ಗೋಪಾಂ**—ಸಂರಕ್ಷಕನೂ | **ವಿಶ್ವಸ್ಮೈ**—ಸಮಸ್ತವಾದ | **ಸ್ವರ್ದೃಶೇ**—ದೇವಲೋಕದ ದೇವತೆಗಳಿಗೂ | **ಸಾಧಾರಣಂ ಇತ್**—ಸಮಾನವಾದ ಪೂಜ್ಯನೂ ಆದ ಸೋಮದೇವನನ್ನು | **ವಿಃ**—ಶ್ಯೇನಪಕ್ಷಿಯು | **ಭರತ್**—ವಹಿಸಿಕೊಂಡು ಬಂದಿತು.

|| ಭಾವಾರ್ಥ ||

ವೃಷ್ಟಿರೂಪವಾದ ಉದಕಕ್ಕೆ ಪ್ರೇರಕನೂ, ಯಜ್ಞಕ್ಕೆ ಸಂರಕ್ಷಕನೂ, ಸಮಸ್ತ ದೇವತೆಗಳಿಗೂ ಸಮಾನ ಪೂಜ್ಯನೂ ಆದ ಸೋಮದೇವನನ್ನು ಶ್ಯೇನಪಕ್ಷಿಯು ವಹಿಸಿಕೊಂಡು ಬಂದಿತು.

## English Translation.

The bird brought you, the shower of water, the protector of the sacrifice, the common property of every god.

|| ಸಂಹಿತಾಪಾಠಃ ||

ಅಧಾ ಹಿನ್ವಾನ ಇಂದ್ರಿಯಂ ಜ್ಯಾಯೋ ಮಹಿತ್ವಮಾನಶೇ |

ಅಭಿಷ್ಟಿಕೃದ್ವಿಚರ್ಷಣಿಃ || ೫ ||

|| ಪದಪಾಠಃ ||

ಅಧ | ಹಿನ್ವಾನಃ | ಇಂದ್ರಿಯಂ | ಜ್ಯಾಯಃ | ಮಹಿಽತ್ವಂ | ಆನಶೇ |

ಅಭಿಷ್ಟಿಽಕೃತ್ | ವಿಽಚರ್ಷಣಿಃ || ೫ ||

|| ಸಾಯಣಭಾಷ್ಯಂ ||

**ಅಧಾಥ ವಿಚರ್ಷಣಿಃ ಕರ್ಮಣಾಂ ವಿದ್ರಷ್ಟಾಭಿಷ್ಟಿಕೃದ್ಯಜಮಾನಾನಾಮಭೀಷ್ಟಸ್ಯ ಫಲಸ್ಯ ಕರ್ತಾ ಸೋಮ ಇಂದ್ರಿಯಂ ಸ್ವಕೀಯಂ ಬಲಂ ಹಿನ್ವಾನಃ ಪ್ರೇರಞ್ಜ್ಯಾಯಃ ಪ್ರಶಸ್ಯತರಂ ಮಹಿತ್ವಂ ಮಹತ್ತ್ವ-ಮಾನಶೇ | ಪ್ರಾಪ್ನೋತಿ ||**

|| ಪ್ರತಿಪದಾರ್ಥ ||

**ಅಧ**—ಅನಂತರವೇ | **ವಿಚರ್ಷಣಿಃ**—ಸಕಲ ವ್ಯವಹಾರಗಳನ್ನೂ ವಿಶೇಷರೀತಿಯಿಂದ ನೋಡಬಲ್ಲವನೂ | **ಅಭಿಷ್ಟಿಕೃತ್**—ಯಜಮಾನನ ಇಷ್ಟಾರ್ಥಸಾಧಕನೂ | **ಇಂದ್ರಿಯಂ**—ತನ್ನ ಸ್ವಶಕ್ತಿಯನ್ನು | **ಹಿನ್ವಾನಃ**—ಪ್ರಕಟಿಸುವವನೂ ಆದ ಸೋಮದೇವನು | **ಜ್ಯಾಯಃ**—ಅತ್ಯುತ್ಕೃಷ್ಟವಾದ | **ಮಹಿತ್ವಂ**—ಮಾಹಾತ್ಮ್ಯವನ್ನು | **ಆನಶೇ**—ಪಡೆಯುತ್ತಾನೆ.

|| ಭಾವಾರ್ಥ ||

ದ್ಯುಲೋಕದಿಂದ ಕರೆತರಲ್ಪಟ್ಟನಂತರವೇ, ಸಕಲ ವ್ಯವಹಾರಗಳನ್ನೂ ವಿಶೇಷರೀತಿಯಿಂದ ನೋಡಬಲ್ಲವನೂ, ಯಜಮಾನನ ಇಷ್ಟಾರ್ಥಸಾಧಕನೂ, ತನ್ನ ಸ್ವಶಕ್ತಿಯನ್ನು ಪ್ರಕಟಿಸುವವನೂ ಆದ ಸೋಮದೇವನು ಅತ್ಯುತ್ಕೃಷ್ಟವಾದ ತನ್ನ ಮಾಹಾತ್ಮ್ಯವನ್ನು ಪಡೆಯುತ್ತಾನೆ.

## English Translation.

The contemplator of all, the granter of desires, puttiug forth his energy obtains superior greatness.

# ನಲವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪವಸ್ವೇತಿ ಪಂಚರ್ಚಂ ಪಂಚವಿಂಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಪವಸ್ವೇತ್ಯನು-ಕ್ರಾಂತಂ ॥ ಗತೋ ವಿನಿಯೋಗಃ ॥**

ಅನುವಾದವು— **ಪವಸ್ವ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೈದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಪವಸ್ವ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೪೯

ಮಂಡಲ–೯ ॥ ಅನುವಾಕ–೨ ॥ ಸೂಕ್ತ–೪೯ ॥
ಅಷ್ಟಕ–೭ ॥ ಅಧ್ಯಾಯ–೧ ॥ ವರ್ಗ–೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಕವಿರ್ಭಾರ್ಗವಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಪವ॑ಸ್ವ ವೃ॒ಷ್ಟಿಮಾ ಸು ನೋ॒ಽಪಾಮೂ॒ರ್ಮಿಂ ದಿ॒ವಸ್ಪರಿ॑ ।**
**ಅ॒ಯ॒ಕ್ಷ್ಮಾ ಬೃ॑ಹ॒ತೀರಿಷಃ॑ ॥ ೧ ॥**

॥ ಪದಪಾಠಃ ॥

ಪವ॑ಸ್ವ । ವೃ॒ಷ್ಟಿಂ । ಆ । ಸು । ನಃ॒ । ಅ॒ಪಾಂ । ಊ॒ರ್ಮಿಂ । ದಿ॒ವಃ । ಪರಿ॑ ।
ಅ॒ಯ॒ಕ್ಷ್ಮಾಃ । ಬೃ॒ಹ॒ತೀಃ । ಇಷಃ॑ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ದಿವೋ ದ್ಯುಲೋಕಾದ್ವೃಷ್ಟಿಂ ನೋಽಸ್ಮಾಕಮಾ ಪವಸ್ವ । ಸಮಂತಾತ್ಕ್ಷರ । ಏತದೇವ ದರ್ಶಯತಿ ಅಪಾಮುದಕಾನಾಮೂರ್ಮಿಂ ತರಂಗಂ ದಿವಃ ಪರ್ಯೋ ಪವಸ್ವ । ಅಪಿ ಚಾಯಕ್ಷ್ಮಾ ಯಕ್ಷ್ಮರಹಿತಾನ್ಯನಾಮಯಾನಿ ಬೃಹತೀರ್ಮಹಾಂತೀಲಷೋಽನ್ನಾನ್ಯಾ ಪವಸ್ವ ॥

॥ ಪ್ರತಿ ಪದಾರ್ಥ ॥

(ಎಲೈ ಸೋಮದೇವನೇ) । ದಿವಃ— ದ್ಯುಲೋಕದಿಂದ । ವೃಷ್ಟಿಂ— ಮಳೆಯನ್ನು । ನಃ— ನಮಗಾಗಿ । ಆ ಪವಸ್ವ— ಸುತ್ತಲೂ ಸುರಿಸು । ಸು— ಉತ್ತಮವಾದರೀತಿಯಲ್ಲಿ । ಅಪಾಂ— ಉದಕಗಳ । ಊರ್ಮಿಂ— ಅಲೆಗಳನ್ನು । ಪರಿ— ನಮ್ಮ ಸುತ್ತಲೂ ಪ್ರವಹಿಸುವಂತೆ ಮಾಡು । ಅಯಕ್ಷ್ಮಾಃ— ರೋಗರಹಿತವಾದವೂ । ಬೃಹತೀಃ— ಮಹಚ್ಛಕ್ತಿಯುಳ್ಳವೂ ಆದ । ಇಷಃ— ಅನ್ನಗಳನ್ನೂ ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮಗಾಗಿ ದ್ಯುಲೋಕದಿಂದ ಮಳೆಯನ್ನು ಸರ್ವತ್ರ ಸುರಿಸು. ಉತ್ತಮವಾದ ರೀತಿಯಲ್ಲಿ ಅಲೆಗಳ ರೂಪದ ಉದಕಪ್ರವಾಹವನ್ನು ಹರಿಸು. ರೋಗರಹಿತವಾದವೂ, ಮಹಚ್ಛಕ್ತಿಯುಳ್ಳವೂ ಆದ ಅನ್ನಗಳನ್ನೂ ಒದಗಿಸು.

### English Translation.

Pour down upon us a shower from heaven, a stream of waters, wholesome and abundant food.

॥ ಸಂಹಿತಾಪಾಠಃ ॥

ತಯಾ ಪವಸ್ವ ಧಾರಯಾ ಯಯಾ ಗಾವ ಇಹಾಗಮನ್ ।

ಜನ್ಯಾಸ ಉಪ ನೋ ಗೃಹಂ ॥ ೨ ॥

॥ ಪದಪಾಠಃ ॥

ತಯಾ । ಪವಸ್ವ । ಧಾರಯಾ । ಯಯಾ । ಗಾವಃ । ಇಹ । ಆಽಗಮನ್ ।

ಜನ್ಯಾಸಃ । ಉಪ । ನಃ । ಗೃಹಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ತಯಾ ತಾದೃಶ್ಯಾ ಧಾರಯಾ ಪವಸ್ವ । ಕ್ಷರ । ಕೀದೃಶ್ಯೇತ್ಯತ್ರಾಹ । ಯಯಾ ಯಾದೃಶ್ಯಾ ತ್ವದೀಯಯಾ ಧಾರಯಾ ಜನ್ಯಾಸೋ ಜನ್ಯಾಃ ಶತ್ರುಜನಪದಭವಾ ಗಾವ ಇಹಾಸ್ಮಿಲ್ಲೋಕೇ ನೋಽಸ್ಮಾಕಂ ಸಂಬಂಧಿ ಗೃಹಮುಪಾಗನ್ ಉಪಾಗಚ್ಛಂತಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಯಯಾ**—ಯಾವ ನಿನ್ನ ಪ್ರವಾಹಶಕ್ತಿಯಿಂದ | **ಜನ್ಯಾಸಃ**—ಶತ್ರುಜನಗಳಲ್ಲಿರುವ | **ಗಾವಃ**—ಗೋವುಗಳು | ಇಹ—ನಮ್ಮ ಪ್ರದೇಶದಲ್ಲಿರುವ | **ನಃ**—ನಮ್ಮ | **ಗೃಹಂ**—ಗೃಹಗಳಿಗೆ | **ಉಪ ಆಗಮನ್**—ಬಂದು ಸೇರಿಕೊಳ್ಳುವುವೋ | **ತಯಾ**—ಅಂತಹ | **ಧಾರಯಾ**—ಪ್ರವಾಹದಿಂದ **ಪವಸ್ವ**—ಸ್ರವಿಸಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವ ನಿನ್ನ ಪ್ರವಾಹಶಕ್ತಿಯಿಂದ ಶತ್ರುಜನಗಳಲ್ಲಿರುವ ಗೋವುಗಳು ನಮ್ಮ ಪ್ರದೇಶಗಳಲ್ಲಿಸುವ ನಮ್ಮ ಗೃಹಗಳಿಗೆ ಬಂದು ಸೇರಿಕೊಳ್ಳುವುವೋ ಅಂತಹ ಪ್ರವಾಹದಿಂದ ಸುರಿಸು.

## English Translation.

Flow in such a stream that the cattle belonging to the (enemy's) nation may come here to our dwelling.

॥ ಸಂಹಿತಾಪಾಠಃ ॥

**ಘೃತಂ ಪವಸ್ವ ಧಾರಯಾ ಯಜ್ಞೇಷು ದೇವವೀತಮಃ ।**

**ಅಸ್ಮಭ್ಯಂ ವೃಷ್ಟಿಮಾ ಪವ ॥ ೩ ॥**

॥ ಪದಪಾಠಃ ॥

**ಘೃತಂ । ಪವಸ್ವ । ಧಾರಯಾ । ಯಜ್ಞೇಷು । ದೇವಽವೀತಮಃ ।**

**ಅಸ್ಮಭ್ಯಂ । ವೃಷ್ಟಿಂ । ಆ । ಪವ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಸೋಮ ಯಜ್ಞೇಷು ದೇವವೀತಮೋಽತ್ಯಂತಂ ದೇವಕಾಮಸ್ತ್ವಮಸ್ಮಭ್ಯಂ ಭಾರ್ಗವೇಭ್ಯಃ ಕವಿಭ್ಯೋ ಘೃತಮುದಕಂ । ವನಂ ಘೃತಮಿತ್ಯುದಕನಾಮಸು ಪಾಠಾತ್ । ಧಾರಯಾ ಸಂಪಾತೇನ ಪವಸ್ವ । ಕ್ಷರ । ವೃಷ್ಟಿಂ ವರ್ಷಂ ಚಾ ಪವ । ಪವಸ್ವ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಯಜ್ಞೇಷು**—ಯಜ್ಞಗಳಲ್ಲಿ | **ದೇವವೀತಮಃ**—ದೇವತೆಗಳ ಸಾಹಚರ್ಯವನ್ನು ಅತಿಶಯವಾಗಿ ಪಡೆಯಲಿಚ್ಛೆಯುಳ್ಳ ನೀನು | **ಅಸ್ಮಭ್ಯಂ**—ನಮಗಾಗಿ | **ಘೃತಂ**—ಉದಕವನ್ನು | **ಧಾರಯಾ**—ಪ್ರವಾಹರೂಪದಲ್ಲಿ | **ಪವಸ್ವ**—ಹರಿಸು | **ವೃಷ್ಟಿಂ**—ಮಳೆಯನ್ನು | **ಆ ಪವ**—ಸುತ್ತಲೂ ಸುರಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಯಜ್ಞಗಳಲ್ಲಿ ದೇವತೆಗಳಿಗೆ ತೃಪ್ತಿಯನ್ನುಂಟುಮಾಡಲಿಚ್ಛಿಯುಳ್ಳ ನೀನು ನಮಗಾಗಿ ಪ್ರವಾಹರೂಪದಲ್ಲಿ ಉದಕವನ್ನು ಸುರಿಸು. ಸುತ್ತಲೂ ಮಳೆಯನ್ನು ಸುರಿಸು.

## English Translation.

You are most dear to the gods at sacrifice, shower down water in a stream; let the gods hear your sound.

|| ಸಂಹಿತಾಪಾಠಃ ||

ಸ ನ ಊರ್ಜೇ ವ್ಯ೧ವ್ಯಯಂ ಪವಿತ್ರಂ ಧಾವ ಧಾರಯಾ |
ದೇವಾಸಃ ಶೃಣವನ್ಹಿ ಕಂ || ೪ ||

|| ಪದಪಾಠಃ ||

ಸಃ | ನಃ | ಊರ್ಜೇ | ವಿ | ಅವ್ಯಯಂ | ಪವಿತ್ರಂ | ಧಾವ | ಧಾರಯಾ |
ದೇವಾಸಃ | ಶೃಣವನ್ | ಹಿ | ಕಂ || ೪ ||

|| ಸಾಯಣಭಾಷ್ಯಂ ||

ಹೇ ಸೋಮ ಸುತೋಽಭಿಷುತಸ್ತ್ವಂ ನೋಽಸ್ಮಾಕಮೂರ್ಜೇಽನ್ನಾಯಾವ್ಯಯಮವಿಮಯಂ ಪವಿತ್ರಂ ಧಾರಯಾ ಸಂಪಾತೇನ ವಿ ಧಾವ | ಪ್ರಾಪ್ನುಹಿ | ದೇವಾಸೋ ದೇವಾ ಅಪಿ ಹಿ ಕಂ ಶೃಣವನ್ | ಗಮನವೇಲಾಯಾಮುತ್ಪನ್ನಂ ತವ ಶಬ್ದಂ ಶೃಣ್ವಂತು ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಸಃ**—ಹಿಂಡಲ್ಪಟ್ಟ ನೀನು | **ನಃ**—ನಮಗೆ | **ಊರ್ಜೇ**—ಅನ್ನಲಾಭಾರ್ಥವಾಗಿ | **ಅವ್ಯಯಂ**—ಉಣ್ಣೆಯಿಂದ ನಿರ್ಮಿತವಾದ | **ಪವಿತ್ರಂ**—ದಶಾಪವಿತ್ರವನ್ನು | **ಧಾರಯಾ**—ಪ್ರವಾಹರೂಪದಿಂದ | **ವಿ ಧಾವ**—ಹೋಗಿ ಸೇರು | **ದೇವಾಸಃ ಹಿ**—ದೇವತೆಗಳಾದರೋ | **ಕಂ**—ನೀನು ಶುದ್ಧಪಾತ್ರೆಗೆ ಹೋಗಿ ಸೇರುವ ಶಬ್ದವನ್ನು | **ಶೃಣವನ್**—ಕೇಳಲಿ.

|| ಭಾವಾರ್ಥ ||

ಎಲೈ ಸೋಮದೇವನೆ, ಹಿಂಡಲ್ಪಟ್ಟ ನೀನು ನಮಗೆ ಅನ್ನಲಾಭಾರ್ಥವಾಗಿ ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರವನ್ನು ಪ್ರವಾಹ ರೂಪದಿಂದ ಹೋಗಿ ಸೇರು. ದೇವತೆಗಳಾದರೋ, ನೀನು ಶುದ್ಧಿ ಪಾತ್ರೆಗೆ ಹೋಗಿ ಸೇರುವ ಶಬ್ದವನ್ನು ಕೇಳಲಿ.

## English Translation.

Do you for our sustenance hasten to the woollen filter with your stream; let the gods hear your sound.

|| ಸಂಹಿತಾಪಾಠಃ ||

ಪವಮಾನೋ ಅಸಿಷ್ಯದದ್ರಕ್ಷಾಂಸ್ಯಪಜಂಘನತ್ ।

ಪ್ರತ್ನವದ್ರೋಚಯನ್ರುಚಃ || ೫ ||

|| ಪದಪಾಠಃ ||

ಪವಮಾನಃ । ಅಸಿಸ್ಯದತ್ । ರಕ್ಷಾಂಸಿ । ಅಪಽಜಂಘನತ್ ।

ಪ್ರತ್ನಽವತ್ । ರೋಚಯನ್ । ರುಚಃ || ೫ ||

|| ಸಾಯಣಭಾಷ್ಯಂ ||

ರಕ್ಷಾಂಸಿ ರಾಕ್ಷಸಾನಪಜಂಘನದಪಘ್ನನ್ರುಚ ಆತ್ಮೀಯಾ ದೀಪ್ತೀಃ ಪ್ರತ್ನವತ್ಪುರಾಣವದ್ರೋಚಯನ್ದೀಪಯನ್ಪವಮಾನಃ ಸೋಮೋಽಸಿಷ್ಯದತ್ । ಸ್ಯಂದತೇ ||

|| ಪ್ರತಿಪದಾರ್ಥ ||

**ಪವಮಾನಃ**—ಶುದ್ಧಿಕಾರಕನಾದ ಸೋಮದೇವನು । **ರಕ್ಷಾಂಸಿ**—ಅಸುರರನ್ನು । **ಅಪಜಂಘನತ್**—ಹಿಂಸಿಸಿ ನಾಶಪಡಿಸುತ್ತಲೂ । **ರುಚಃ**—ತನ್ನ ಪ್ರಭೆಗಳನ್ನು । **ಪ್ರತ್ನವತ್**—ಹಿಂದಿನಂತೆಯೇ । **ರೋಚಯನ್**—ಪ್ರಕಾಶಪಡಿಸುತ್ತಲೂ । **ಅಸಿಷ್ಯದತ್**—ಪ್ರವಹಿಸುತ್ತಾನೆ.

|| ಭಾವಾರ್ಥ ||

ಶುದ್ಧಿಕಾರಕನಾದ ಸೋಮದೇವನು ಅಸುರರನ್ನು ಹಿಂಸಿಸಿ ನಾಶಪಡಿಸುತ್ತಲೂ ತನ್ನ ಪ್ರಭೆಗಳನ್ನು ಹಿಂದಿನಂತೆಯೇ ಪ್ರಕಾಶಪಡಿಸುತ್ತಲೂ ಪ್ರವಹಿಸುತ್ತಾನೆ.

## English Translation.

The purifier (the Soma) flows forth destroying the Rakshasas. flashing out brilliance as of old.

# ಐವತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

**ಉತ್ತೆ ಇತಿ ಪಂಚರ್ಚಂ ಷಡ್ವಿಂಶಂ ಸೂಕ್ತಮಾಂಗಿರಸಸ್ಯೋಚಥ್ಯಸ್ಯಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಉತ್ತೇ ಶುಷ್ಮಾಸ ಉಚಥ್ಯ ಇತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು— **ಉತ್ತೇ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತಾರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಉಚಥ್ಯ ಆಂಗಿರಸಃ ಎಂಬುವನು ಋಷಿಯು; ಪವಮಾನ ಸೋಮನು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಉತ್ತೇ ಶುಷ್ಮಾಸಃ ಉಚಥ್ಯಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೦

ಮಂಡಲ-೯ ॥ ಅನುವಾಕ-೨ ॥ ಸೂಕ್ತ-೫೦ ॥
ಅಷ್ಟಕ-೭ ॥ ಅಧ್ಯಾಯ-೧ ॥ ವರ್ಗ-೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಉಚಥ್ಯಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಉತ್ತೇ ಶುಷ್ಮಾಸ ಈರತೇ ಸಿಂಧೋರೂರ್ಮೇರಿವ ಸ್ವನಃ ।**
**ವಾಣಸ್ಯ ಚೋದಯಾ ಪವಿಂ ॥ ೧ ॥**

॥ ಪದಪಾಠಃ ॥

**ಉತ್ । ತೇ । ಶುಷ್ಮಾಸಃ । ಈರತೇ । ಸಿಂಧೋಃ । ಊರ್ಮೇಃऽಇವ । ಸ್ವನಃ ॥**
**ವಾಣಸ್ಯ । ಚೋದಯ । ಪವಿಂ ॥ ೧ ॥**

|| ಸಾಯಣಭಾಷ್ಯಂ ||

**ಹೇ ಸೋಮ ತೇ ತವ ಶುಷ್ಮಾಸಃ ಶುಷ್ಮಾ ವೇಗಾ ಉದೀರತೇ । ಉದ್ಗಚ್ಛಂತಿ । ತತ್ರ ದೃಷ್ಟಾಂತಃ । ಸಿಂಧೋಃ ಸಮುದ್ರಸ್ಯೋರ್ಮೇರಿವ ಯಥಾ ತರಂಗಾತ್ಸ್ವನೋ ಧ್ವನಿರುದ್ಗಚ್ಛತಿ ತದ್ವದಿ-**

ತ್ಯರ್ಥಃ । ಸ ತ್ವಂ ವಾಣಸ್ಯ ವಿಸೃಷ್ಟಸ್ಯ ವಾಣಸ್ಯ ನಾಲಸ್ಯ ವಾ ವಾದಿತ್ರವಿಶೇಷಸ್ಯ ಪವಿಂ ಶಬ್ದಂ । ಪವಿಃ ಭಾರತೀತಿ ವಾಙ್ನಾಮಸು ಪಾಠಾತ್ । ಚೋದಯ । ಪ್ರೇರಯ । ವೇಗೇನ ಸ್ಯಂದಮಾನಸ್ತ್ವಂ ವಿಸೃಷ್ಟ-ವಾಣಶಬ್ದಸದೃಶಂ ಶಬ್ದಂ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಸಿಂಧೋಃ— ಸಮುದ್ರದ । ಊರ್ಮೇಃ— ಅಲೆಗಳ ಹೊಡೆತದಿಂದ ಉಂಟಾಗುವ ಸ್ವನಃ ಇವ— ಶಬ್ದದಂತೆ । ತೇ— ನಿನ್ನ । ಶುಷ್ಮಾಸಃ— ಪ್ರವಾಹವೇಗದ ಶಬ್ದವು । ಉದೀರತೇ— ಉತ್ಪನ್ನವಾಗಿ ಹರಡುತ್ತದೆ । ವಾಣಸ್ಯ— ಬಾಣದ ವೇಗದಿಂದ ಉಂಟಾಗುವ ಶಬ್ದದಂತೆ । ಪವಿಂ— ನಿನ್ನ ಪ್ರವಾಹ ಶಬ್ದವನ್ನು । ಚೋದಯ— ಪ್ರೇರಿಸು ।

॥ ಭಾವಾರ್ಥ ॥

ಎಲೈ ಸೋಮದೇವನೇ, ಸಮುದ್ರದ ಅಲೆಗಳ ಹೊಡೆತದಿಂದ ಉಂಟಾಗುವ ಶಬ್ದದಂತೆ ನಿನ್ನ ಪ್ರವಾಹದ ವೇಗದ ಶಬ್ದವು ಉತ್ಪನ್ನವಾಗಿ ಹರಡುತ್ತದೆ. ಬಾಣದ ವೇಗದಿಂದ ಅಥವಾ ವಾದ್ಯವಿಶೇಷದಿಂದ ಉಂಟಾಗುವ ಶಬ್ದದಂತೆ ನಿನ್ನ ಪ್ರವಾಹಶಬ್ದವನ್ನು ಪ್ರೇರಿಸು.

English Translation.

Forth flow your mighty (streams), like the roar (issuing) from the ocean wave: emit your sound like that of a (rushing) arrow.

॥ ಸಂಹಿತಾಪಾಠಃ ॥

ಪ್ರಸವೇ ತ ಉದೀರತೇ ತಿಸ್ರೋ ವಾಚೋ ಮಖಸ್ಯುವಃ ।
ಯದವ್ಯ ಏಷಿ ಸಾನವಿ ॥ ೨ ॥

॥ ಪದಪಾಠಃ ॥

ಪ್ರಽಸವೇ । ತೇ । ಉತ್ । ಈರತೇ । ತಿಸ್ರಃ । ವಾಚಃ । ಮಖಸ್ಯುವಃ ।
ಯತ್ । ಅವ್ಯೇ । ಏಷಿ । ಸಾನವಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತವ ಪ್ರಸವೇ ಸತಿ ಮಖಸ್ಯುವೋ ಯಜ್ಞಮಿಚ್ಛವೋ ಯಜಮಾನಸ್ಯ ತಿಸ್ರೋ ವಾಚಃ ಋಗ್ಯಜುಃಸಾಮಾತ್ಮಕಾನಿ ತ್ರೀಣಿ ವಾಕ್ಯಾನ್ಯುದೀರತೇ । ಉದ್ಗಚ್ಛಂತಿ । ಕದೇತ್ಯತ ಆಹ । ಯದ್ಯದಾ ಸಾನವಿ ಸಮುಚ್ಛ್ರಿತೇಽವ್ಯೇಽವಿಮಯೇ ಪವಿತ್ರ ಏಷಿ ತ್ವಂ ಗಚ್ಛಸಿ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ತೇ**—ನಿನ್ನ | **ಪ್ರಸವೇ**—ಉತ್ಪತ್ತಿಕಾಲದಲ್ಲಿ | **ಯತ್**—ಯಾವಾಗ | **ಸಾನವಿ**—ಉನ್ನತಪ್ರದೇಶದಲ್ಲಿರುವುದೂ | **ಅವ್ಯೇ**—ಉಣ್ಣೆಯಿಂದ ನಿರ್ಮಿತವಾದುದೂ ಆದ ದಶಾಪವಿತ್ರಕ್ಕೆ | **ಏಷಿ**—ಹೋಗಿ ಸೇರುವೆಯೋ ಆಗ | **ಮಖಸ್ಯುವಃ**—ಯಜ್ಞಕ್ಕಾಗಿ ಸಂಕಲ್ಪಿಸಿರುವ ಯಜಮಾನನ | **ತಿಸ್ರಃ ವಾಚಃ**—ಋಗ್ಯಜುಃಸಾಮರೂಪಗಳೆಂಬ ಮೂರು ಪ್ರಭೇದವುಳ್ಳ ವಾಕ್ಕುಗಳೂ | **ಉದೀರತೇ**—ಪಠಿತವಾಗಿ ಪ್ರಕಾಶಿತವಾಗುತ್ತವೆ.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ಉತ್ಪತ್ತಿಕಾಲದಲ್ಲಿ ಯಾವಾಗ ನೀನು ಉನ್ನತ ಪ್ರದೇಶದಲ್ಲಿರುವುದೂ, ಉಣ್ಣೆಯಿಂದ ನಿರ್ಮಿತವಾದುದೂ ಆದ ದಶಾಪವಿತ್ರಕ್ಕೆ ಹೋಗಿ ಸೇರುವೆಯೋ ಆಗ ಯಜ್ಞಕ್ಕಾಗಿ ಸಂಕಲ್ಪಿಸಿರುವ ಯಜಮಾನನ ಋಗ್ಯಜುಃ ಸಾಮರೂಪಗಳಾದ ಮೂರು ಪ್ರಭೇದಗಳುಳ್ಳ ವಾಕ್ಕುಗಳೂ ಪಠಿತವಾಗುತ್ತವೆ.

## English Translation.

At your birth the three voices of the worshipper are uttered when you go to the summit of the fleece.

|| ಸಂಹಿತಾಪಾಠಃ ||

ಅವ್ಯೋ ವಾರೇ ಪರಿ ಪ್ರಿಯಂ ಹರಿಂ ಹಿನ್ವಂತ್ಯದ್ರಿಭಿಃ |
ಪವಮಾನಂ ಮಧುಶ್ಚುತಂ || ೩ ||

|| ಪದಪಾಠಃ ||

ಅವ್ಯಃ | ವಾರೇ | ಪರಿ | ಪ್ರಿಯಂ | ಹರಿಂ | ಹಿನ್ವಂತಿ | ಅದ್ರಿऽಭಿಃ |
ಪವಮಾನಂ | ಮಧುऽಶ್ಚುತಂ || ೩ ||

|| ಸಾಯಣಭಾಷ್ಯಂ ||

ಪ್ರಿಯಂ ದೇವಾನಾಂ ಪ್ರೀತಿಕರಂ ಹರಿಂ ಹರಿತವರ್ಣಮದ್ರಿಭಿರ್ಗ್ರಾವಭಿರಭಿಷುತಂ ಮಧುಶ್ಚುತಂ ಮಧುನೋ ರಸಸ್ಯ ಚ್ಯಾವಯಿತಾರಂ ಪವಮಾನಂ ಸೋಮಮವ್ಯೋऽವೇರ್ವಾರೇ ವಾಲೇ ಪರಿ ಹಿನ್ವಂತಿ | ಋತ್ವಿಜಃ ಪರಿಪ್ರೇರಯಂತಿ ||

|| ಪ್ರತಿಪದಾರ್ಥ ||

**ಪ್ರಿಯಂ**—ದೇವತೆಗಳಿಗೆ ಪ್ರೀತಿಕಾರಕವಾದುದೂ | **ಹರಿಂ**—ಪಚ್ಚೆವರ್ಣವುಳ್ಳದ್ದೂ | **ಅದ್ರಿಭಿಃ**—ಕಲ್ಲುಗಳಿಂದ ಹಿಂಡಲ್ಪಟ್ಟುದೂ | **ಮಧುಶ್ಚುತಂ**—ಮಧುರವಾದ ರಸವನ್ನು ಸುರಿಸುವುದೂ | **ಪವಮಾನಂ**—

ಶುದ್ಧಿಕಾರಕವಾದುದೂ ಆದ ಸೋಮರಸವನ್ನು | **ಅವ್ಯಃ**—ಉಣ್ಣೆಯ | **ವಾರೇ**—ನಾರುಗಳಲ್ಲಿ (ದಶಾಪವಿತ್ರದಲ್ಲಿ) **ಪರಿ ಹಿನ್ವಂತಿ**—ಶುದ್ಧಿಗಾಗಿ ಋತ್ವಿಕ್ಕುಗಳು ಸುರಿಯುತ್ತಾರೆ.

|| ಭಾವಾರ್ಥ ||

ದೇವತೆಗಳಿಗೆ ಪ್ರೀತಿಕಾರಕವಾದುದೂ, ಪಚ್ಚೆವರ್ಣವುಳ್ಳದ್ದೂ, ಕಲ್ಲುಗಳಿಂದ ಹಿಂಡಲ್ಪಟ್ಟದ್ದೂ, ಮಧುರವಾದ ರಸವನ್ನು ಸುರಿಸುವುದೂ, ಶುದ್ಧಿಕಾರಕವಾದುದೂ ಆದ ಸೋಮರಸವನ್ನು ದಶಾಪವಿತ್ರದ ಉಣ್ಣೆಯ ನಾರುಗಳ ಮೇಲೆ ಋತ್ವಿಕ್ಕುಗಳು ಶುದ್ಧಿಗಾಗಿ ಸುರಿಯುತ್ತಾರೆ.

## English Translation.

(The priests)effuse with the stones into the fleece the beloved green-tinted purifying honey-dropping (Soma).

|| ಸಂಹಿತಾಪಾಠಃ ||

ಆ ಪವಸ್ವ ಮದಿಂತಮ ಪವಿತ್ರಂ ಧಾರಯಾ ಕವೇ |
ಅರ್ಕಸ್ಯ ಯೋನಿಮಾಸದಂ || ೪ ||

|| ಪದಪಾಠಃ ||

ಆ | ಪವಸ್ವ | ಮದಿನ್ऽತಮ | ಪವಿತ್ರಂ | ಧಾರಯಾ | ಕವೇ |
ಅರ್ಕಸ್ಯ | ಯೋನಿಂ | ಆऽಸದಂ || ೪ ||

|| ಸಾಯಣಭಾಷ್ಯಂ ||

ಹೇ ಮದಿಂತಮ ಮಾದಯಿತೃತಮ ಕವೇ ಕ್ರಾಂತಕರ್ಮನ್ಸೋಮ ಅರ್ಕಸ್ಯಾರ್ಚನೀಯಸ್ಯೇಂದ್ರಸ್ಯ ಯೋನಿಮುದರಂ ಸ್ಥಾನಮಾಸದಂ ಪ್ರಾಪ್ತುಂ ಪವಿತ್ರಮತೀತ್ಯ ಧಾರಯಾ ಸಂಪಾತೇನಾ ಪವಸ್ವ| ಅಭಿಮುಖ್ಯೇನ ಕ್ಷರ | ಯದ್ಯಪ್ಯೇಷಾ ಪೂರ್ವಸ್ಮಿನ್ನಧ್ಯಾಯೇ ವ್ಯಾಕೃತಾ ತಥಾಪಿ ಮಂದಮತೀನಾಂ ವಿಸ್ಮರಣಶಂಕಯಾ ಪುನರ್ವ್ಯಾಖ್ಯಾತಾ ||

|| ಪ್ರತಿಪದಾರ್ಥ ||

**ಮದಿಂತಮ**—ಅತ್ಯತಿಶಯವಾದ ಹರ್ಷಕಾರಕನೂ | **ಕವೇ**—ಮೇಧಾಯುತವಾದ ಕರ್ಮವುಳ್ಳವನೂ ಆದ ಎಲೈ ಸೋಮದೇವನೇ | **ಅರ್ಕಸ್ಯ**—ಪೂಜ್ಯನಾದ ಇಂದ್ರನ | **ಯೋನಿಂ**—ಸ್ಥಾನವನ್ನು | **ಆಸದಂ**—ಹೋಗುವುದಕ್ಕೆ | **ಪವಿತ್ರಂ**—ದಶಾಪವಿತ್ರವನ್ನು ದಾಟಿ | **ಧಾರಯಾ**—ಪ್ರವಾಹ ರೂಪದಿಂದ | **ಆ ಪವಸ್ವ**—ಸ್ರವಿಸು |

|| ಭಾವಾರ್ಥ ||

ಅತ್ಯತಿಶಯವಾದ ಹರ್ಷಕಾರಕನೂ, ಮೇಧಾಯುತವಾದ ಕರ್ಮವುಳ್ಳವನೂ ಆದ ಎಲೈ ಸೋಮದೇವನೇ, ಪೂಜ್ಯನಾದ ಇಂದ್ರನ ಸ್ಥಾನವನ್ನು (ಉದರವನ್ನು) ಹೊಂದುವುದಕ್ಕಾಗಿ ನೀನು ದಶಾಪವಿತ್ರವನ್ನು ದಾಟಿ ಪ್ರವಾಹ ರೂಪದಿಂದ ಪ್ರವಿಸು.

English Translation.

Most exilarating sage (Soma), flow in a stream to the filter to sit on Indra's lap.

|| ಸಂಹಿತಾಪಾಠಃ ||

ಸ ಪವಸ್ವ ಮದಿಂತಮ ಗೋಭಿರಂಜಾನೋ ಅಕ್ತುಭಿಃ |
ಇಂದವಿಂದ್ರಾಯ ಪೀತಯೇ || ೫ ||

|| ಪದಪಾಠಃ ||

ಸಃ | ಪವಸ್ವ | ಮದಿನ್ऽತಮ | ಗೋಭಿಃ | ಅಂಜಾನಃ | ಅಕ್ತುऽಭಿಃ |
ಇಂದೋ ಇತಿ | ಇಂದ್ರಾಯ | ಪೀತಯೇ || ೫ ||

|| ಸಾಯಣಭಾಷ್ಯಂ ||

ಹೇ ಮದಿಂತಮ ಮಾದಯಿತೃತಮೇಂದೋ ಸೋಮ ಅಕ್ತುಭಿರಂಜನಸಾಧನಭೂತೈರ್ಗೋಭಿರ್ಗೋವಿಕಾರೈಃ ಪಯೋಭಿರಂಜಾನೋऽಜ್ಯಮಾನಃ ಸಂಸ್ಕ್ರಿಯಮಾಣಃ ಸ ತ್ವಮಿಂದ್ರಾಯೇಂದ್ರಸ್ಯ ಪೀತಯೇ ಪಾನಾಯ ಪವಸ್ವ | ಕ್ಷರ ||

|| ಪ್ರತಿಪದಾರ್ಥ ||

**ಮದಿಂತಮ**— ಉತ್ಕೃಷ್ಟವಾದ ಹರ್ಷಕಾರಕನಾದ | **ಇಂದೋ**— ಎಲೈ ಸೋಮದೇವನೇ | **ಅಕ್ತುಭಿಃ**— ಅಂಜನಗಳಂತಿರುವ | **ಗೋಭಿಃ**— ಕ್ಷೀರಾದ್ಯಾಶಿರದ್ರವ್ಯಗಳೊಡನೆ | **ಅಂಜಾನಃ**— ಸೇರಿ ಸುಸಂಸ್ಕೃತನಾದ | **ಸಃ**— ನೀನು | **ಇಂದ್ರಾಯ**— ಇಂದ್ರನ | **ಪೀತಯೇ**— ಪಾನಾರ್ಥವಾಗಿ | **ಪವಸ್ವ**— ಪ್ರವಿಸು.

|| ಭಾವಾರ್ಥ ||

ಉತ್ಕೃಷ್ಟವಾದ ಹರ್ಷಕಾರಕನಾದ ಎಲೈ ಸೋಮದೇವನೇ, ಅಂಜನಗಳಂತಿರುವ ಕ್ಷೀರಾದ್ಯಾಶ್ರಯಣ ದ್ರವ್ಯಗಳೊಡನೆ ಸೇರಿ ಸುಸಂಸ್ಕೃತನಾದ ನೀನು ಇಂದ್ರನ ಪಾನಾರ್ಥವಾಗಿ ಪ್ರವಿಸು.

English Translation.

Most exhilarating Indu. being anointed with the unguents of milk and curds, flow forth for Indra's drinking.

# ಐವತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಧ್ವರ್ಯೋ ಇತಿ ಪಂಚರ್ಚಂ ಸಪ್ತವಿಂಶಂ ಸೂಕ್ತಮಾಂಗಿರಸಸ್ಯೋಚಥ್ಯಸ್ಯಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಮ್ಯತೇ। ಅಧ್ವರ್ಯೋ ಇತಿ ॥ ಗತಃ ಸೂಕ್ತವಿನಿಯೋಗಃ॥**

ಅನುವಾದವು— **ಅಧ್ವರ್ಯೋ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೇಳನೆಯ ಸೂಕ್ತವು, ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಪುತ್ರನಾದ ಉಚಥ್ಯನೆಂಬುವನು ಋಷಿಯು; ಪವಮಾನ ಸೋಮನು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಧ್ವರ್ಯೋ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೧

ಮಂಡಲ–೯ ॥ ಅನುವಾಕ–೨ ॥ ಸೂಕ್ತ–೫೧ ॥
ಅಷ್ಟಕ–೭ ॥ ಅಧ್ಯಾಯ–೧ ॥ ವರ್ಗ–೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ಉಚಥ್ಯಃ ॥
ದೇವತಾ—ಪವಮಾನಃ ಸೋಮಃ ॥
ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಅಧ್ವರ್ಯೋ ಅದ್ರಿಭಿಃ ಸುತಂ ಸೋಮಂ ಪವಿತ್ರ ಆ ಸೃಜ ।**
**ಪುನೀಹೀಂದ್ರಾಯ ಪಾತವೇ ॥ ೧ ॥**

॥ ಪದಪಾಠಃ ॥

**ಅಧ್ವರ್ಯೋ ಇತಿ । ಅದ್ರಿಽಭಿಃ । ಸುತಂ । ಸೋಮಂ । ಪವಿತ್ರೇ । ಆ । ಸೃಜ ।**
**ಪುನೀಹಿ । ಇಂದ್ರಾಯ । ಪಾತವೇ ॥ ೧ ॥**

|| ಸಾಯಣಭಾಷ್ಯಂ ||

**ಹೇ ಅಧ್ವರ್ಯೋ ಅದ್ರಿಭಿರ್ಗ್ರಾವಭಿಃ ಸುತಮಭಿಷುತಂ ಸೋಮಂ ಪವಿತ್ರ ಆ ಸೃಜ । ಏತದೇವ ದರ್ಶಯತಿ । ಇಂದ್ರಾಯೇಂದ್ರಸ್ಯ ಪಾತವೇ ಪಾನಾಯ ಪುನೀಹಿ । ಪಾವಯ ॥**

|| ಪ್ರತಿಪದಾರ್ಥ ||

**ಅಧ್ವರ್ಯೋ**—ಎಲೈ ಅಧ್ವರ್ಯುವೇ | **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ | **ಸುತಂ**—ಹಿಂಡಲ್ಪಟ್ಟ | **ಸೋಮಂ**—ಸೋಮವನ್ನು | **ಪವಿತ್ರೇ**—ದಶಾಪವಿತ್ರದಲ್ಲಿ | **ಆ ಸೃಜ**—ಶುದ್ಧಿಗಾಗಿ ಸುರಿ | **ಇಂದ್ರಾಯ**—ಇಂದ್ರನ | **ಪಾತವೇ**—ಪಾನಕ್ಕೋಸ್ಕರ | **ಪುನೀಹಿ**—ಶುದ್ಧಿಗೊಳಿಸು |

|| ಭಾವಾರ್ಥ ||

ಎಲೈ ಅಧ್ವರ್ಯುವೇ, ಕಲ್ಲುಗಳಿಂದ ಹಿಂಡಲ್ಪಟ್ಟ ಸೋಮವನ್ನು ದಶಾಪವಿತ್ರದಲ್ಲಿ ಸುರಿ. ಇಂದ್ರನ ಪಾನಾರ್ಥವಾಗಿ ಅದನ್ನು ಶುದ್ಧಿಗೊಳಿಸು.

English Translation.

Adhwaryu pour upon the filter the Soma that has been expressed with the stones, purify it for Indra's drinking.

|| ಸಂಹಿತಾಪಾಠಃ ||

**ದಿವಃ ಪೀಯೂಷಮುತ್ತಮಂ ಸೋಮಮಿಂದ್ರಾಯ ವಜ್ರಿಣೇ |**
**ಸುನೋತಾ ಮಧುಮತ್ತಮಂ || ೨ ||**

|| ಪದಪಾಠಃ ||

**ದಿವಃ | ಪೀಯೂಷಂ | ಉತ್ಽತಮಂ | ಸೋಮಂ | ಇಂದ್ರಾಯ | ವಜ್ರಿಣೇ |**
**ಸುನೋತ | ಮಧುಮತ್ಽತಮಂ || ೨ ||**

|| ಸಾಯಣಭಾಷ್ಯಂ ||

**ಹೇ ಅಧ್ವರ್ಯವಃ ಯೂಯಂ ಮಧುಮತ್ತಮಮತಿಶಯೇನ ಮಧುಮಂತಂ ದಿವೋ ದ್ಯುಲೋಕಸ್ಯ ಪೀಯೂಷಮಮೃತಮುತ್ತಮಂ ಶ್ರೇಷ್ಠಂ ಸೋಮಂ ವಜ್ರಿಣೇ ವಜ್ರವತ ಇಂದ್ರಾಯ ಸುನೋತ ಅಭಿಷುಣುತ ||**

|| ಪ್ರತಿಪದಾರ್ಥ ||

(ಎಲೈ ಅಧ್ವರ್ಯುಗಳೇ) **ಮಧುಮತ್ತಮಂ**—ಅತಿಯಾಗಿ ರುಚಿಯಾಗಿರುವುದೂ | **ದಿವಃ**—ದ್ಯುಲೋಕದಲ್ಲಿ | **ಪೀಯೂಷಂ**—ಅಮೃತರೂಪವಾದುದೂ | **ಉತ್ತಮಂ**—ಶ್ರೇಷ್ಠವಾದುದೂ ಆದ | **ಸೋಮಂ**—ಸೋಮರಸವನ್ನು | **ವಜ್ರಿಣೇ**—ವಜ್ರಾಯುಧಧಾರಿಯಾದ | **ಇಂದ್ರಾಯ**—ಇಂದ್ರನಿಗಾಗಿ | **ಸುನೋತ**—ಹಿಂಡಿರಿ.

|| ಭಾವಾರ್ಥ ||

ಎಲೈ ಅಧ್ವರ್ಯುಗಳೇ, ಅತ್ಯಂತ ರುಚಿಯಾಗಿರುವುದೂ, ದ್ಯುಲೋಕದಲ್ಲಿ ಅಮೃತರೂಪವಾದುದೂ, ಆದ ಸೋಮರಸವನ್ನು ವಜ್ರಾಯುಧಧಾರಿಯಾದ ಇಂದ್ರನಿಗಾಗಿ ಹಿಂಡಿರಿ.

## English Translation.

(Adhwaryus), effuse the most sweet-flavoured Soma, the best ambrosia of heaven for Indra, the wielder of the thunderbolt.

|| ಸಂಹಿತಾಪಾಠಃ ||

ತವ ತ್ಯ ಇಂದೋ ಅಂಧಸೋ ದೇವಾ ಮಧೋರ್ವ್ಯಶ್ನತೇ |

ಪವಮಾನಸ್ಯ ಮರುತಃ || ೩ ||

|| ಪದಪಾಠಃ ||

ತವ | ತ್ಯೇ | ಇಂದೋ ಇತಿ | ಅಂಧಸಃ | ದೇವಾಃ | ಮಧೋಃ | ವಿ | ಅಶ್ನತೇ |

ಪವಮಾನಸ್ಯ | ಮರುತಃ || ೩ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ತವ ಸಂಬಂಧಿನಂ ಮಧೋರ್ಮದಕರಸ್ಯ ಪವಮಾನಸ್ಯ ಪೂಯಮಾನಮಂಧಸೋಽನ್ನಂ || ಕರ್ಮಣಿ ಷಷ್ಠೀ || ತ್ಯೇ ತ ಇಮೇ ದೇವಾ ಇಂದ್ರಾದಯೋ ಮರುತಶ್ಚ ವ್ಯಶ್ನತೇ | ವ್ಯಾಪ್ನುವತೇ | ವ್ಯಾಪ್ನುವಂತೀತ್ಯರ್ಥಃ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ತವ—ನಿನ್ನ | ಮಧೋಃ—ಹರ್ಷಕಾರಕವಾದುದೂ | ಪವಮಾನಸ್ಯ—ಶುದ್ಧಿಕಾರಕವಾದುದೂ ಆದ | ಅಂಧಸಃ—ರಸರೂಪವಾದ ಅನ್ನವನ್ನು | ತ್ಯೇ—ಪ್ರಸಿದ್ಧರಾದ | ದೇವಾಃ—ಇಂದ್ರಾದಿದೇವತೆಗಳೂ | ಮರುತಃ—ಮರುತ್ತುಗಳೂ | ವ್ಯಶ್ನತೇ—ಪಡೆಯುತ್ತಾರೆ.

|| ಭಾವಾರ್ಥ ||

ಎಲೈ ಸೋಮದೇವನೇ, ಹರ್ಷಜನಕವಾದುದೂ ಶುದ್ಧಿಕಾರಕವಾದುದೂ ಆದ ರಸರೂಪದ ಅನ್ನವನ್ನು ಪ್ರಸಿದ್ಧರಾದ ಇಂದ್ರಾದಿದೇವತೆಗಳೂ ಮರುತ್ತುಗಳೂ ಪಡೆಯುತ್ತಾರೆ. (ಪಾನಮಾಡುತ್ತಾರೆ)

## English Translation.

Indu, tne gods and the Maruts partake of your sweet purifying beverage.

॥ ಸಂಹಿತಾಪಾಠಃ ॥

ತ್ವಂ ಹಿ ಸೋಮ ವರ್ಧಯನ್ತ್ಸುತೋ ಮದಾಯ ಭೂರ್ಣಯೇ ।

ವೃಷನ್ತ್ಸ್ತೋತಾರಮೂತಯೇ ॥ ೪ ॥

॥ ಪದಪಾಠಃ ॥

ತ್ವಂ । ಹಿ । ಸೋಮ । ವರ್ಧಯನ್ । ಸುತಃ । ಮದಾಯ । ಭೂರ್ಣಯೇ ।

ವೃಷನ್ । ಸ್ತೋತಾರಂ । ಊತಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸುತೋಽಭಿಷುತಸ್ತ್ವಂ ವರ್ಧಯನ್ದೇವಾನ್ಪ್ರವೃದ್ಧಾನ್ಕುರ್ವನ್ವೃಷನ್ಕಾಮಾನ್ವರ್ಷನ್ ಭೂರ್ಣಯೇ ಕ್ಷಿಪ್ರಾಯ ಮದಾಯೋತಯೇ ರಕ್ಷಣಾಯ ಚ ಸ್ತೋತಾರಮಭಿಗಚ್ಛಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೆ । **ಸುತಃ**—ಯಜ್ಞಾರ್ಥವಾಗಿ ಹಿಂಡಲ್ಪಟ್ಟ । **ತ್ವಂ**—ನೀನು । **ವರ್ಧಯನ್**—ದೇವತೆಗಳನ್ನು ಪುಷ್ಟಿಗೊಳಿಸುತ್ತಲೂ । **ವೃಷನ್**—ಕಾಮವರ್ಷಕನಾಗಿಯೂ । **ಭೂರ್ಣಯೇ**—ಕ್ಷಿಪ್ರವಾಗಿ ಉಂಟಾಗುವ । **ಮದಾಯ**— ಹರ್ಷಕ್ಕಾಗಿಯೂ । **ಊತಯೇ**— ರಕ್ಷಣಾರ್ಥವಾಗಿಯೂ । **ಸ್ತೋತಾರಂ**—ಸ್ತುತಿಕರ್ತನಲ್ಲಿಗೆ ಹೋಗಿ ಸೇರುತ್ತೀಯೆ ।

॥ ಭಾವಾರ್ಥ ॥

ಎಲೈ ಸೋಮದೇವನೇ, ಯಜ್ಞಾರ್ಥವಾಗಿ ಹಿಂಡಲ್ಪಟ್ಟ ನೀನು ದೇವತೆಗಳನ್ನು ಪುಷ್ಟಿಗೊಳಿಸುತ್ತಲೂ, ಕಾಮವರ್ಷಕನಾಗಿಯೂ ಇದ್ದು ನಿನ್ನನ್ನು ಪಾನಮಾಡಿದೊಡನೆಯೇ ಉಂಟಾಗುವ ಹರ್ಷಕ್ಕಾಗಿಯೂ ರಕ್ಷಣಾರ್ಥವಾಗಿಯೂ ಸ್ತುತಿಕರ್ತನಲ್ಲಿಗೆ ಹೋಗಿ ಸೇರುತ್ತೀಯೆ.

## English Translation.

For you, Soma, being effused, approach the worshipper for speedy exhilaration ane protection.

॥ ಸಂಹಿತಾಪಾಠಃ ॥

ಅಭ್ಯರ್ಷ ವಿಚಕ್ಷಣ ಪವಿತ್ರಂ ಧಾರಯಾ ಸುತಃ ।

ಅಭಿ ವಾಜಮುತ ಶ್ರವಃ ॥ ೫ ॥

॥ ಪದಪಾಠಃ ॥

ಅಭಿ । ಅರ್ಷ । ವಿऽಚಕ್ಷಣ । ಪವಿತ್ರಂ । ಧಾರಯಾ । ಸುತಃ ।

ಅಭಿ । ವಾಜಂ । ಉತ । ಶ್ರವಃ ॥ ೫ ॥

॥ ಸಾಯಣಭಾಷ್ಯಂ ॥

**ಹೇ ವಿಚಕ್ಷಣ ಸೋಮ ಸುತೋऽಭಿಷುತಸ್ತ್ವಂ ಪವಿತ್ರಮಭಿ ಪ್ರತಿ ಧಾರಯೋರ್ಷ । ಗಚ್ಛ । ಉತಾಪಿ ಚಾಸ್ಮಾಕಂ ವಾಜಮನ್ನಂ ಶ್ರವಃ ಕೀರ್ತಿಂ ಚಾಭಿ ಕ್ಷರೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವಿಚಕ್ಷಣ**—ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮದೇವನೇ । **ಸುತಃ**—ಯಜ್ಞಾರ್ಥವಾಗಿ ಹಿಂಡಲ್ಪಟ್ಟ ನೀನು । **ಪವಿತ್ರಂ ಅಭಿ**—ದಶಾಪವಿತ್ರದ ಕಡೆಗೆ । **ಧಾರಯಾ**—ಪ್ರವಾಹರೂಪದಲ್ಲಿ । **ಅರ್ಷ**—ಪ್ರವಿಸು । **ಉತ**—ಮತ್ತು । **ವಾಜಂ**—ಅನ್ನವನ್ನೂ । **ಶ್ರವಃ**—ಕೀರ್ತಿಯನ್ನೂ । **ಅಭಿ**—ನಮ್ಮ ಕಡೆಗೆ ಹರಿದು ಬರುವಂತೆ ಮಾಡು ।

॥ ಭಾವಾರ್ಥ ॥

ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮದೇವನೇ, ಯಜ್ಞಾರ್ಥವಾಗಿ ಹಿಂಡಲ್ಪಟ್ಟ ನೀನು ದಶಾಪವಿತ್ರದ ಕಡೆಗೆ ಪ್ರವಾಹ ರೂಪದಲ್ಲಿ ಪ್ರವಿಸು. ನಮ್ಮ ಕಡೆಗೆ ಅನ್ನವೂ ಕೀರ್ತಿಯೂ ಹರಿದು ಬರುವಂತೆ ಮಾಡು.

### English Translation.

Hasten, sagacious (Soma), when you are effused, to the filter in a stream; bestow upon us food and fame.

## ಐವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪರಿ ದ್ಯುಕ್ಷ ಇತಿ ಪಂಚರ್ಚಮಷ್ಟಾವಿಂಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಪರಿ ದ್ಯುಕ್ಷ ಇತ್ಯನುಕ್ರಾಂತಂ ॥ ಉಕ್ತೋ ವಿನಿಯೋಗಃ ॥**

ಅನುವಾದವು—**ಪರಿ ದ್ಯುಕ್ಷಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೆಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಪರಿ ದ್ಯುಕ್ಷಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೫೨

ಮಂಡಲ—೯ ॥ ಅನುವಾಕ—೨ ॥ ಸೂಕ್ತ—೫೨ ॥

ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಉಚಥ್ಯಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಪರಿ ದ್ಯುಕ್ಷಃ ಸನದ್ರ‌ಯಿರ್ಭರದ್ವಾಜಂ ನೋ ಅಂಧಸಾ ।**

**ಸುವಾನೋ ಅರ್ಷ ಪವಿತ್ರ ಆ ॥ ೧ ॥**

॥ ಪದಪಾಠಃ ॥

**ಪರಿ । ದ್ಯುಕ್ಷಃ । ಸನತ್ऽರಯಿಃ । ಭರತ್ । ವಾಜಂ । ನಃ । ಅಂಧಸಾ ।**

**ಸುವಾನಃ । ಅರ್ಷ । ಪವಿತ್ರೇ । ಆ ॥ ೧ ॥**

॥ ಸಾಯಣಭಾಷ್ಯಂ ॥

**ದ್ಯುಕ್ಷೋ ದೀಪ್ತಃ ಸನದ್ರಯಿರ್ದೀಯಮಾನಧನಃ ಸೋಮೋ ನೋಽಸ್ಮಾಕಂ ವಾಜಂ ಬಲಮಂಧಸಾನ್ನೇನ ಸಹ ಪರಿ ಭರತ್ । ಪರಿಭರತ್ । ಪ್ರಯಚ್ಛತು । ಅಥ ಪ್ರತ್ಯಕ್ಷಸ್ತುತಿಃ । ಹೇ ಸೋಮ ಸುವಾನೋಽಭಿಷೂಯಮಾಣಸ್ತ್ವಂ ಪವಿತ್ರ ಅರ್ಷ । ಕ್ಷರ ॥**

॥ ಪ್ರತಿಪದಾರ್ಥ ॥

**ದ್ಯುಕ್ಷಃ**—ಪ್ರಕಾಶಮಾನನೂ । **ಸನದ್ರಯಿಃ**—ಧನದಾತೃವೂ ಆದ ಸೋಮದೇವನು । **ನಃ**—ನಮಗೆ **ಅಂಧಸಾ**—ಅನ್ನದೊಡಗೂಡಿದ । **ವಾಜಂ**—ಶಕ್ತಿಯನ್ನು । **ಪರಿಭರತ್**—ಪೂರ್ಣವಾಗಿ ಕೊಡಲಿ (ಎಲೈ ಸೋಮದೇವನೇ) । **ಸುವಾನಃ**—ಹಿಂಡಲ್ಪಡುವ ನೀನು । **ಪವಿತ್ರೇ**—ದಶಾಪವಿತ್ರದ ಕಡೆಗೆ । **ಅರ್ಷ**—ಪ್ರವಿಸು ।

॥ ಭಾವಾರ್ಥ ॥

ಪ್ರಕಾಶಮಾನನೂ, ಧನದಾತೃವೂ ಆದ ಸೋಮದೇವನು ನಮಗೆ ಅನ್ನಯುಕ್ತವಾದ ಶಕ್ತಿಯನ್ನು ಕೊಡಲಿ. ಎಲೈ ಸೋಮದೇವನೇ, ಯಜ್ಞಾರ್ಥವಾಗಿ ಹಿಂಡಲ್ಪಡುವ ನೀನು ಶುದ್ಧಿಗಾಗಿ ದಶಾಪವಿತ್ರದ ಕಡೆಗೆ ಪ್ರವಿಸು.

## English Translation.

May glittering (Soma), the acquirer of wealth, bestow upon us strength together with food; hasten, when effused to the filter.

॥ ಸಂಹಿತಾಪಾಠಃ ॥

**ತವ ಪ್ರತ್ನೇಭಿರಧ್ವಭಿರವ್ಯೋ ವಾರೇ ಪರಿ ಪ್ರಿಯಃ ।**

**ಸಹಸ್ರಧಾರೋ ಯಾತ್ತನಾ ॥ ೨ ॥**

|| ಪದಪಾಠಃ ||

ತವ । ಪ್ರತ್ನೇಭಿಃ । ಅಧ್ವಽಭಿಃ । ಅವ್ಯಃ । ವಾರೇ । ಪರಿ । ಪ್ರಿಯಃ ।

ಸಹಸ್ರಽಧಾರಃ । ಯಾತ್ । ತನಾ ॥ ೨ ॥

|| ಸಾಯಣಭಾಷ್ಯಂ ||

**ಹೇ ಸೋಮ ತವ ಸಂಬಂಧೀ ಪ್ರಿಯೋ ದೇವಾನಾಂ ಪ್ರೀತಿಕರಃ ಸಹಸ್ರಧಾರೋ ಬಹುಧಾರಸ್ತನಾ ವಿಸ್ತೃತಸಾರೋ ರಸಃ ಪ್ರತ್ನೇಭಿಃ ಪುರಾಣೈರಧ್ವಭಿರ್ಮಾರ್ಗೈರವ್ಯೋಽವೇರ್ವಾರೇ ವಾಲೇ ದಶಾಪವಿತ್ರೇ ಪರಿ ಯಾತ್ । ಪರಿಗಚ್ಛತಿ ॥**

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಪ್ರಿಯಃ**—ದೇವತೆಗಳಿಗೆ ಪ್ರೀತಿಕಾರಕವಾದುದೂ । **ಸಹಸ್ರಧಾರಃ**—ಸಾವಿರ ಧಾರೆಯುಳ್ಳದ್ದೂ । **ತನಾ**—ವಿಸ್ತೃತವಾಗಿ ವ್ಯಾಪಿಸುವುದೂ ಆದ । **ತವ**—ನಿನ್ನ ರಸವು । **ಪ್ರತ್ನೇಭಿಃ**—ಪುರಾತನಗಳಾದ । **ಅಧ್ವಭಿಃ**—ಮಾರ್ಗಗಳಿಂದ । **ಅವ್ಯಃ**—ಉಣ್ಣೆಯಿಂದ ನಿರ್ಮಿತವಾದ । **ವಾರೇ**—ದಶಾಪವಿತ್ರದ ಜಾಲಗಳಲ್ಲಿ । **ಪರಿ ಯಾತ್**—ಶುದ್ಧಿಗಾಗಿ ಹೋಗಿ ಸೇರುತ್ತದೆ.

|| ಭಾವಾರ್ಥ ||

ಎಲೈ ಸೋಮದೇವನೇ, ದೇವತೆಗಳಿಗೆ ಪ್ರೀತಿಕಾರಕವಾದುದೂ, ಸಾವಿರಧಾರೆಯುಳ್ಳದ್ದೂ, ವಿಸ್ತೃತವಾಗಿ ವ್ಯಾಪಿಸುವುದೂ ಆದ ನಿನ್ನ ರಸವು ಪುರಾತನಗಳಾದ ಮಾರ್ಗಗಳಿಂದ ದಶಾಪವಿತ್ರದ ಉಣ್ಣೆಯ ಜಾಲಗಳಲ್ಲಿ ಶುದ್ಧಿಗಾಗಿ ಹೋಗಿ ಸೇರುತ್ತದೆ.

## English Translation.

Your juice dear (to the gods), flowing in a thousand streams, proceeds by ancient paths to the fleecy filter.

|| ಸಂಹಿತಾಪಾಠಃ ||

ಚರುರ್ನ ಯಸ್ತಮೀಂಖಯೇಂದೋ ನ ದಾನಮೀಂಖಯ ।

ವಧೈರ್ವಧಸ್ನವೀಂಖಯ ॥ ೩ ॥

|| ಪದಪಾಠಃ ||

ಚರುಃ । ನ । ಯಃ । ತಂ । ಈಂಖಯ । ಇಂದೋ ಇತಿ । ನ । ದಾನಂ । ಈಂಖಯ ।

ವಧೈಃ । ವಧಸ್ನೋ ಇತಿ ವಧಽಸ್ನೋ । ಈಂಖಯ ॥ ೩ ॥

|| ಸಾಯಣಭಾಷ್ಯಂ ||

**ಹೇ ಸೋಮ ಚರುರ್ನ ಚರುರಿವ ಯಃ ಪೂರ್ಣೌದನೋ ಭವತಿ ತಮಿಂಖಯ । ಅಸ್ಮಾನ್ಪ್ರಾಪಯ । ಅಪಿ ಚ ಹೇ ಇಂದೋ ನೇದಾನೀಂ ದಾನಂ ದೇಯಮಿಂಖಯ । ಹೇ ವಧಸ್ನೋ ಪ್ರಹಾರೇಣ ಪ್ರಸ್ರವಣಶೀಲ ಸೋಮ ವಧೈರ್ಗ್ರಾವ್ಣಾಂ ಪ್ರಹಾರೈರೀಂಖಯ ||**

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಚರುಃ ನ**—ಯಜ್ಞದಲ್ಲಿ ಅರ್ಪಿತವಾಗುವ ಚರುವಿನಂತೆ | **ಯಃ**—ಯಾವುದು ಅನ್ನದಿಂದ ತುಂಬಿರುವುದೋ | **ತಂ**—ಆ ಅನ್ನಪಾತ್ರೆಯನ್ನು | **ಈಂಖಯ**—ನಮ್ಮಲ್ಲಿಗೆ ಕಳುಹಿಸು | **ಇಂದೋ**—ಎಲೈ ಸೋಮದೇವನೇ | **ನ**—ಈಗ | **ದಾನಂ**—ನಮಗೆ ದಾನಮಾಡಲರ್ಹವಾದುದನ್ನು | **ಈಂಖಯ**—ಕಳುಹಿಸಿ ಕೊಡು | **ವಧಸ್ನೋ**—ಅದ್ರಿಗಳ ಪ್ರಹಾರದಿಂದ ಸ್ರವಿಸುವ ಸ್ವಭಾವವುಳ್ಳ ಎಲೈ ಸೋಮದೇವನೇ | **ವಧೈಃ**—ಅದೇ ಗ್ರಾವಗಳ ಪ್ರಹಾರಗಳಿಂದ ಜನಿತವಾದುದನ್ನು | **ಈಂಖಯ**—ನಮ್ಮಲ್ಲಿಗೆ ಕಳುಹಿಸಿಕೊಡು.

|| ಭಾವಾರ್ಥ ||

ಎಲೈ ಸೋಮದೇವನೇ, ಯಜ್ಞದಲ್ಲಿ ಅರ್ಪಿತವಾಗುವ ಚರುವಿನಂತೆ, ಯಾವುದು ಅನ್ನದಿಂದ ತುಂಬಿರುವುದೋ ಆ ಪಾತ್ರೆಯನ್ನು ನಮ್ಮಲ್ಲಿಗೆ ಕಳುಹಿಸು. ಎಲೈ ಸೋಮದೇವನೇ, ನಮಗೆ ದಾನಮಾಡಲರ್ಹವಾದುದನ್ನು ಈಗಲೇ ಕಳುಹಿಸಿ ಕೊಡು. ಅದ್ರಿಗಳ ಪ್ರಹಾರದ ಫಲವಾಗಿ ಸ್ರವಿಸುವ ಸ್ವಭಾವವುಳ್ಳ ಎಲೈ ಸೋಮದೇವನೇ, ಅದೇ ಗ್ರಾವಗಳ ಪ್ರಹಾರದಿಂದ ಜನಿತವಾದುದನ್ನು ನಮ್ಮಲ್ಲಿಗೆ ಕಳುಹಿಸಿ ಕೊಡು.

## English Translation.

(Soma), send (us) him who is like a pot; Indu, send us now wealth; swift-flowing (Soma), send it with blows (of the stones).

|| ಸಂಹಿತಾಪಾಠಃ ||

ನಿ ಶುಷ್ಮಮಿಂದವೇಷಾಂ ಪುರುಹೂತ ಜನಾನಾಂ ।
ಯೋ ಅಸ್ಮಾಁ ಆದಿದೇಶತಿ || ೪ ||

|| ಪದಪಾಠಃ ||

ನಿ । ಶುಷ್ಮಂ । ಇಂದೋ ಇತಿ । ಏಷಾಂ । ಪುರುऽಹೂತ । ಜನಾನಾಂ ।
ಯಃ । ಅಸ್ಮಾನ್ । ಆऽದಿದೇಶತಿ ॥ ೪ ||

|| ಸಾಯಣಭಾಷ್ಯಂ ||

**ಹೇ ಪುರುಹೂತ** ಬಹುಭಿರಾಹೂತೇಂದೋ **ಸೋಮ ತ್ವಂ ಯಃ ಶುಷ್ಮೋ ಯೇಷಾಂ ಶತ್ರು-ಜನಾನಾಂ** ಬಲಮಸ್ಮಾನಾದಿದೇಶತಿ ಬಾಧಾರ್ಥಮಾಹ್ವಯತಿ ಏಷಾಂ ಶತ್ರುಜನಾನಾಂ **ತಂ ಶುಷ್ಮಂ** ಬಲಂ **ನಿ ನ್ಯಕ್ ಕುರ್ವಿತಿ ಶೇಷಃ** ||

|| ಪ್ರತಿಪದಾರ್ಥ ||

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ | **ಇಂದೋ**—ಎಲೈ ಸೋಮದೇವನೇ | **ಯಃ**—ಯಾವ ಶತ್ರುವಿನ ಬಲವು | **ಅಸ್ಮಾನ್**—ನಮ್ಮನ್ನು | **ಆದಿದೇಶತಿ**—ಹಿಂಸಿಸುವುದೋ | **ಏಷಾಂ ಜನಾನಾಂ**—ಆ ಶತ್ರುಜನಗಳ | **ಶುಷ್ಮಂ**—ಬಲವನ್ನು | **ನಿ**—ಪೂಣವಾಗಿ ನಾಶನಮಾಡು.

|| ಭಾವಾರ್ಥ ||

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಸೋಮದೇವನೇ, ಯಾವ ಶತ್ರುವಿನ ಬಲವು ನಮ್ಮನ್ನು ಹಿಂಸಿಸುವುದೋ, ಆ ಶತ್ರುಜನಗಳ ಬಲವನ್ನು ಪೂರ್ಣವಾಗಿ ನಾಶಮಾಡು.

## English Translation.

Indu, the invoked of many, overthrow the strength of those people who challenge us.

|| ಸಂಹಿತಾಪಾಠಃ ||

**ಶತಂ ನ ಇಂದ ಊತಿಭಿಃ ಸಹಸ್ರಂ ವಾ ಶುಚೀನಾಂ |**
**ಪವಸ್ವ ಮಂಹಯದ್ರಯಿಃ || ೫ ||**

|| ಪದಪಾಠಃ ||

ಶತಂ | ನಃ | ಇಂದೋ ಇತಿ | ಊತಿऽಭಿಃ | ಸಹಸ್ರಂ | ವಾ | ಶುಚೀನಾಂ |
ಪವಸ್ವ | ಮಂಹಯತ್ऽರಯಿಃ || ೫ ||

|| ಸಾಯಣಭಾಷ್ಯಂ ||

**ಹೇ ಇಂದೋ ಸೋಮ ಮಂಹಯದ್ರಯಿಃ** ಪ್ರದೀಯಮಾನಧನಸ್ತ್ವಂ **ನೋ**ऽಸ್ಮಾಕಮೂತಿಭಿ-ರೂತಿಭ್ಯಃ || ವಿಭಕ್ತಿವ್ಯತ್ಯಯಃ || ರಕ್ಷಾರ್ಥಂ **ಶುಚೀನಾಂ** ಶುದ್ಧಾನಾಂ ತವಾಂಶಭೂತಾನಾಂ ಸೋಮಾನಾಂ **ಶತಂ ಸಹಸ್ರಂ ವಾ ಪವಸ್ವ** | ಕ್ಷರ ||

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಮಂಹಯದ್ರಯಿಃ**—ಧನಪ್ರದನಾದ ನೀನು । **ನಃ**—ನಮ್ಮ । **ಊತಿಭಿಃ**—ರಕ್ಷಣಾರ್ಥವಾಗಿ । **ಶುಚೀನಾಂ**—ಪರಿ ಶುದ್ಧವಾದ ರಸಗಳ । **ಶತಂ ಸಹಸ್ರಂ ವಾ**—ಅನೇಕ ಸಂಖ್ಯೆಯುಳ್ಳ ಧಾರೆಗಳೊಂದಿಗೆ । **ಪವಸ್ವ**—ಸ್ರವಿಸು ।

॥ ಭಾವಾರ್ಥ ॥

ಎಲೈ ಸೋಮದೇವನೇ, ಧನಪ್ರದನಾದ ನೀನು ನಮ್ಮ ರಕ್ಷಣಾರ್ಥವಾಗಿ ನಿನ್ನ ಪರಿಶುದ್ಧವಾದುವೂ ಅನೇಕ ಧಾರೆಯುಳ್ಳವೂ ಆದ ರಸಗಳನ್ನು ಪ್ರವಹಿಸುವಂತೆ ಮಾಡು.

## English Translation.

Indu, do you who are the distributor of riches, pour forth for our protection a hundread or a thousand of your pure (streams.)

# ಐವತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಉತ್ತೇ ಇತಿ ಚತುರ್ಋಚಮೇಕೋನತ್ರಿಂಶಂ ಸೂಕ್ತಂ ಕಾಶ್ಯಪಸ್ಯಾವತ್ಸಾರಸ್ಯಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಉತ್ತೇ ಚತುಷ್ಕಮವತ್ಸಾರ ಇತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು—**ಉತ್ತೇ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಇಪ್ಪತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಶ್ಯಪಋಷಿಯ ಪುತ್ರನಾದ ಅವತ್ಸಾರಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉತ್ತೇ ಚತುಷ್ಕಮವತ್ಸಾರಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೩

ಮಂಡಲ—೯ ॥ ಅನುವಾಕ—೨ ॥ ಸೂಕ್ತ—೫೩ ॥

ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥

॥ ಋಷಿಃ—ಅವತ್ಸಾರಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಗಾಯತ್ರೀ ॥

|| ಸಂಹಿತಾಪಾಠಃ ||

ಉತ್ತೇ ಶುಷ್ಮಾಸೋ ಅಸ್ಥೂ ರಕ್ಷೋ ಭಿಂದಂತೋ ಅದ್ರಿವಃ ।
ನುದಸ್ವ ಯಾಃ ಪರಿಸ್ಪೃಧಃ ॥ ೧ ॥

|| ಪದಪಾಠಃ ||

ಉತ್ । ತೇ । ಶುಷ್ಮಾಸಃ । ಅಸ್ಥುಃ । ರಕ್ಷಃ । ಭಿಂದಂತಃ । ಅದ್ರಿಽವಃ ।
ನುದಸ್ವ । ಯಾಃ । ಪರಿಽಸ್ಪೃಧಃ ॥ ೧ ॥

|| ಸಾಯಣಭಾಷ್ಯಂ ||

ಹೇ ಅದ್ರಿವೋ ಗ್ರಾವವನ್ಸೋಮ ತೇ ತವ ಶುಷ್ಮಾಸಃ ಶುಷ್ಮಾ ವೇಗಾ ರಕ್ಷೋ ರಾಕ್ಷಸಾನ್ಭಿಂದಂತೋ ವಿದಾರಯಂತ ಉದಸ್ಥುಃ । ಉತ್ತಿಷ್ಠಂತಿ । ಯಾಃ ಸ್ಪೃಧಃ ಸ್ಪರ್ಧಮಾನಾಃ ಶತ್ರುಸೇನಾ ಅಸ್ಮಾನ್ಪ್ರತಿಬಾಧಂತೇ ತಾಸ್ತ್ವಂ ನುದಸ್ವ । ಪ್ರೇರಯ । ಬಾಧಸ್ವೇತ್ಯರ್ಥಃ ॥

|| ಪ್ರತಿಪದಾರ್ಥ ||

ಅದ್ರಿವಃ—ಗ್ರಾವಯುಕ್ತನಾದ ಎಲೈ ಸೋಮದೇವನೇ । ತೇ—ನಿನ್ನ । ಶುಷ್ಮಾಸಃ—ಪ್ರಬಲವಾದ ಶಕ್ತಿಗಳು । ರಕ್ಷಃ—ರಾಕ್ಷಸರನ್ನು । ಭಿಂದಂತಃ—ನಾಶಪಡಿಸುತ್ತಾ । ಉದಸ್ಥುಃ—ಪ್ರಕಟವಾಗುತ್ತವೆ । ಪರಿಸ್ಪೃಧಃ—ನಮ್ಮ ಮೇಲೆ ಬೀಳುವ । ಯಾಃ—ಯಾವ ಶತ್ರುಸೇನೆಗಳಿವೆಯೋ ಅವನ್ನೆಲ್ಲಾ । ನುದಸ್ವ—ದೂರಕ್ಕೆ ಓಡಿಸು.

|| ಭಾವಾರ್ಥ ||

ಗ್ರಾವ(ಕಲ್ಲು)ಯುಕ್ತನಾದ ಎಲೈ ಸೋಮದೇವನೇ, ನಿನ್ನ ಪ್ರಬಲವಾದ ಶಕ್ತಿಗಳು ರಾಕ್ಷಸರನ್ನು ನಾಶಮಾಡುತ್ತಾ ಪ್ರಕಟಿತವಾಗುತ್ತವೆ. ನಮ್ಮ ಮೇಲೆ ಬೀಳುವ ಸಕಲ ಶತ್ರುಸೇನೆಗಳನ್ನೂ ದೂರಕ್ಕೆ ಓಡಿಸು.

### English Translation.

(Soma) armed with the stones, your powerful (streams) rise up scattering the Rakshasas; drive away those who are our adversaries.

|| ಸಂಹಿತಾಪಾಠಃ ||

ಅಯಾ ನಿಜಘ್ನಿರೋಜಸಾ ರಥಸಂಗೇ ಧನೇ ಹಿತೇ ।
ಸ್ತವಾ ಅಬಿಭ್ಯುಷಾ ಹೃದಾ ॥ ೨ ॥

|| ಪದಪಾಠಃ ||

ಅಯಾ । ನಿಽಜಘ್ನಿಃ । ಓಜಸಾ । ರಥಽಸಂಗೇ । ಧನೇ । ಹಿತೇ ।

ಸ್ತವೈ । ಅಬಿಭ್ಯುಷಾ । ಹೃದಾ ॥ ೨ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಮಯಾನೇನ ಕೃತೇನೌಜಸಾ ಬಲೇನ ನಿಜಘ್ನಿಃ ಶತ್ರೂನ್ಹಂತುಂ ಶೀಲವಾನ್ । ತಂ ತ್ವಾಮಬಿಭ್ಯುಷಾಭೀತೇನ ಹೃದಾ ಮನಸಾ ಯುಕ್ತೋಽಹಂ ರಥಸಂಗೇಽಸ್ಮಾಕಂ ರಥಾನಾಂ ಸಂಗೇ ಹಿತೇ ಶತ್ರುಷು ನಿಹಿತೇ ಧನೇ ಚ ನಿಮಿತ್ತೇ ಸ್ತವೈ । ಸ್ತೌಮಿ ॥

|| ಪ್ರತಿಪದಾರ್ಥ ||

( ಎಲೈ ಸೋಮದೇವನೇ) ಅಯಾ— ಈರೀತಿ ಪ್ರಕಟಿತವಾದ | ಓಜಸಾ—ಶಕ್ತಿಯಿಂದ | ನಿಜಘ್ನಿಃ— ನೀನು ಶತ್ರುಗಳನ್ನು ನಾಶಪಡಿಸುವವನಾಗಿದ್ದೀಯೆ | ಅಭಿಭ್ಯುಷಾ—ಭೀತಿರಹಿತವಾದ | ಹೃದಾ—ಮನಸ್ಸಿನಿಂದ (ಭಕ್ತಿಯಿಂದ) ಕೂಡಿದ ನಾನು | ರಥಸಂಗೇ—ನಮ್ಮ ರಥದ ಸಾಲುಗಳ ರಕ್ಷಣಾರ್ಥವಾಗಿಯೂ | ಹಿತೇ—ಶತ್ರುಗಳಲ್ಲಿ ನಿಕ್ಷಿಪ್ತವಾದ | ಧನೇ—ಧನನಿಮಿತ್ತವಾಗಿಯೂ | ಸ್ತವೈ—ನಿನ್ನನ್ನು ಸ್ತುತಿಸುತ್ತೇನೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮೇಲೆ ವರ್ಣಿತವಾದಂತೆ ಪ್ರಕಟಿತವಾದ ಶಕ್ತಿಯಿಂದ ನೀನು ಶತ್ರುಗಳನ್ನು ನಾಶಪಡಿಸುವವನಾಗಿದ್ದೀಯೆ. ಭೀತಿರಹಿತವಾದ ಭಕ್ತಿಯಿಂದ ಕೂಡಿದ ನಾನು ನಮ್ಮ ರಥಗಳ ರಕ್ಷಣಾರ್ಥವಾಗಿಯೂ ಶತ್ರುಗಳಲ್ಲಿ ನಿಕ್ಷಿಪ್ತವಾದ ಧನಲಾಭಕ್ಕಾಗಿಯೂ ನಿನ್ನನ್ನು ಸ್ತುತಿಸುತ್ತೇನೆ.

## English Translation.

(You are), by this strength the discomfiter (of foes) : I praise you with a fearless heart for the sake of (our) line of chariots ranged ( against the foe ) and for the sake of wealth.

|| ಸಂಹಿತಾಪಾಠಃ ||

ಅಸ್ಯ ವ್ರತಾನಿ ನಾಧೃಷೇ ಪವಮಾನಸ್ಯ ದೂಢ್ಯಾ ।

ರುಜ ಯಸ್ತ್ವಾ ಪೃತನ್ಯತಿ ॥ ೩ ॥

|| ಪದಪಾಠಃ ||

ಅಸ್ಯ । ವ್ರತಾನಿ । ನ । ಆಽಧೃಷೇ । ಪವಮಾನಸ್ಯ । ದುಃಽಧ್ಯಾ ।

ರುಜ । ಯಃ । ತ್ವಾ । ಪೃತನ್ಯತಿ ॥ ೩ ॥

|| ಸಾಯಣಭಾಷ್ಯಂ ||

ಹೇ ಸೋಮ ಪವಮಾನಸ್ಯ ಕ್ಷರತೋ ಯಸ್ಯಾಸ್ಯ ತವ ವ್ರತಾನಿ ಕರ್ಮಾಣಿ ದೂಢ್ಯಾ ದುರ್ಬುದ್ಧಿನಾ ರಾಕ್ಷಸೇನ ನಾಧೃಷ ಆಧರ್ಷಯಿತುಮಶಕ್ಯಾನಿ ಸ ತ್ವಂ ತ್ವಾಂ ಯೋ ದುರ್ಬುದ್ಧಿಃ ಶತ್ರುಃ ಪೃತನ್ಯತಿ ಯೋದ್ಧುಮಿಚ್ಛತಿ ತಂ ರುಜ | ಬಾಧಸ್ವ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ, ) **ಪವಮಾನಸ್ಯ**—ಪರಿಶುದ್ಧವಾದ ಪ್ರವಾಹರೂಪನಾದ | **ಅಸ್ಯ**—ನಿನ್ನ | **ವ್ರತಾನಿ**—ಕರ್ಮಗಳು | **ದೂಢ್ಯಾ**—ದುಷ್ಟಬುದ್ಧಿಯುಳ್ಳ ಅಸುರನಿಂದ | **ನಾಧೃಷೇ**—ಸಹಿಸಲಶಕ್ಯವಾಗಿವೆ | **ಯಃ**—ದುರ್ಬುದ್ಧಿಯುಳ್ಳ ಯಾವ ಶತ್ರುವು | **ತ್ವಾ**—ನಿನ್ನೊಡನೆ | **ಪೃತನ್ಯತಿ**—ಯುದ್ಧಮಾಡಲಿಚ್ಛಿಸುವನೋ ಅವನನ್ನು | **ರುಜ**—ಹಿಂಸಿಸಿ ನಾಶಪಡಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಪರಿಶುದ್ಧವಾದ ಪ್ರವಾಹಯುಕ್ತನಾದ ನಿನ್ನ ಕರ್ಮಗಳನ್ನು ದುಷ್ಟಬುದ್ಧಿಯುಳ್ಳ ಅಸುರನು ಪ್ರತಿಭಟಿಸಲಾರನು. ದುರ್ಬುದ್ಧಿಯುಳ್ಳ ಯಾವ ಶತ್ರುವು ನಿನ್ನೊಡನೆ ಯುದ್ಧಮಾಡಲಿಚ್ಛಿಸುವನೋ ಅವನನ್ನು ಹಿಂಸಿಸಿ ನಾಶಪಡಿಸು.

## English Translation.

The prowess of you (Soma) as you are poured forth is irresistible against the malignant (Rakshasa) : destroy him who defies you to battle.

|| ಸಂಹಿತಾಪಾಠಃ ||

ತಂ ಹಿನ್ವಂತಿ ಮದಚ್ಯುತಂ ಹರಿಂ ನದೀಷು ವಾಜಿನಂ |

ಇಂದುಮಿಂದ್ರಾಯ ಮತ್ಸರಂ || ೪ ||

|| ಪದಪಾಠಃ ||

ತಂ | ಹಿನ್ವಂತಿ | ಮದ್ಽಚ್ಯುತಂ | ಹರಿಂ | ನದೀಷು | ವಾಜಿನಂ |

ಇಂದುಂ | ಇಂದ್ರಾಯ | ಮತ್ಸರಂ || ೪ ||

|| ಸಾಯಣಭಾಷ್ಯಂ ||

ಮದಚ್ಯುತಂ ಮದಸ್ಯ ಚ್ಯಾವಯಿತಾರಂ ಹರಿಂ ಹರಿತವರ್ಣಂ ವಾಜಿನಂ ಬಲಿನಂ ಮತ್ಸರಂ ಮದಕರಂ ತಮಿಂದುಂ ಸೋಮಂ ನದೀಷು ವಸತೀವರೀಷ್ವಿಂದ್ರಾಯೇಂದ್ರಾರ್ಥಂ ಹಿನ್ವಂತಿ | ಋತ್ವಿಜಃ ಪ್ರೇರಯಂತಿ ||

|| ಪ್ರತಿಪದಾರ್ಥ ||

**ಮದಚ್ಯುತಂ**—ಶತ್ರುಗಳ ಗರ್ವವನ್ನು ನಾಶಪಡಿಸುವುದೂ | **ಹರಿಂ**—ಪಚ್ಚೆವರ್ಣವುಳ್ಳದ್ದೂ | **ವಾಜಿನಂ**—ಶಕ್ತಿಯುತವಾದುದೂ | **ಮತ್ಸರಂ**—ಹರ್ಷಜನಕವಾದುದೂ ಆದ | **ತಂ ಇಂದುಂ**—ಅದೇ ಸೋಮರಸವನ್ನು | **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ | **ನದೀಷು**—ವಸತೀವರೀಸಂಜ್ಞಕವಾದ ಉದಕಗಳಲ್ಲಿ | **ಹಿನ್ವಂತಿ**—ಪ್ರವೇಶಿಸುವಂತೆ ಮಾಡುತ್ತಾರೆ.

|| ಭಾವಾರ್ಥ ||

ಶತ್ರುಗಳ ಗರ್ವವನ್ನು ನಾಶಪಡಿಸತಕ್ಕದ್ದೂ, ಪಚ್ಚೆವರ್ಣವುಳ್ಳದ್ದೂ, ಶಕ್ತಿಯುತವಾದುದೂ, ಹರ್ಷಜನಕವಾದುದೂ ಆದ ಅದೇ ಸೋಮರಸವನ್ನು ಇಂದ್ರನ ಪಾನಾರ್ಥವಾಗಿ ವಸತೀವರೀಸಂಜ್ಞಕವಾದ ಉದಕಗಳೊಡನೆ ವಿಶ್ರಮಾಡುತ್ತಾರೆ.

## English Translation

( The priests ) plunge Indu, honey-dropiug, green-tinted, vigorous, exhilarating, into the waters for Indra.

# ಐವತ್ತನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಸ್ಯ ಪ್ರತ್ನಾಮಿತಿ ಚತುರ್ಋಚಂ ತ್ರಿಂಶಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಅಸ್ಯ ಪ್ರತ್ನಾಮಿತ್ಯನುಕ್ರಾಂತಂ | ಉಕ್ತೋ ವಿನಿಯೋಗಃ ||**

ಅನುವಾದವು—**ಅಸ್ಯ ಪ್ರತ್ನಾಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತದ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಅಸ್ಯ ಪ್ರತ್ನಾಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೪

ಮಂಡಲ—೯ || ಅನುವಾಕ—೨ || ಸೂಕ್ತ—೫೪ ||

ಅಷ್ಟಕ—೭ || ಅಧ್ಯಾಯ—೧ || ವರ್ಗ—೧೧ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||

|| ಋಷಿಃ—ಅವತ್ಸಾರಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

ಅಸ್ಯ ಪ್ರತ್ನಾಮನು ದ್ಯುತಂ ಶುಕ್ರಂ ದುದುಹ್ರೇ ಅಹ್ರಯಃ |

ಪಯಃ ಸಹಸ್ರಸಾಮೃಷಿಂ || ೧ ||

|| ಪದಪಾಠಃ ||

ಅಸ್ಯ | ಪ್ರತ್ನಾಂ | ಅನು | ದ್ಯುತಂ | ಶುಕ್ರಂ | ದುದುಹ್ರೇ | ಅಹ್ರಯಃ |

ಪಯಃ | ಸಹಸ್ರಸಾಂ | ಋಷಿಂ || ೧ ||

|| ಸಾಯಣಭಾಷ್ಯಂ ||

ಅಸ್ಯ ಸೋಮಸ್ಯ ಪ್ರತ್ನಾಂ ಪುರಾಣಾಂ ದ್ಯುತಂ ದ್ಯೋತಮಾನಾಂ ತನುಮನು ಶುಕ್ರಂ ದೀಪ್ತಂ ಸಹಸ್ರಸಾಮಭಿಲಷಿತಸ್ಯಾಪರಿಮಿತಸ್ಯ ಕರ್ಮಫಲಸ್ಯ ದಾತಾರಂ ಪಯಃ ಪಾತವ್ಯಂ ರಸಮೃಹ್ರಯಃ ಕವಯೋ ದುದುಹ್ರೇ | ದುಹಂತಿ ||

|| ಪ್ರತಿಪದಾರ್ಥ ||

ಅಸ್ಯ—ಈ ಸೋಮದೇವನ | ಪ್ರತ್ನಾಂ—ಪುರಾತನವಾದುದೂ | ದ್ಯುತಂ—ಪ್ರಕಾಶಮಾನವಾದುದೂ ಆದ ದೇಹದಿಂದ | ಅನುಶುಕ್ರಂ—ಪ್ರಭಾಯುತವಾದುದೂ | ಸಹಸ್ರಸಾಂ—ಅಪರಿಮಿತವಾದ ಇಷ್ಟಾರ್ಥಪ್ರದವಾದುದೂ | ಋಷಿಂ—ಅತೀಂದ್ರಿಯವಸ್ತುವಿನ ಗೋಚರವುಳ್ಳದ್ದೂ | ಪಯಃ—ಪಾನಾರ್ಹವಾದುದೂ ಆದ ರಸವನ್ನು | ಅಹ್ರಯಃ—ಕವಿಗಳು | ದುದುಹ್ರೇ—ಕರೆಯುತ್ತಾರೆ

|| ಭಾವಾರ್ಥ ||

ಈ ಸೋಮದೇವನ ಪುರಾತನವಾದುದೂ, ಪ್ರಕಾಶಮಾನವಾದುದೂ ಆದ ದೇಹದಿಂದ ಪ್ರಭಾಯುತವಾದುದೂ ಅಪರಿಮಿತವಾದ ಇಷ್ಟಾರ್ಥಗಳನ್ನು ಕೊಡತಕ್ಕದ್ದೂ, ಅತೀಂದ್ರಿಯ ವಸ್ತುವಿನ ಗೋಚರವುಳ್ಳದ್ದೂ, ಪಾನಾರ್ಹವಾದುದೂ ಆದ ರಸವನ್ನು ಕವಿಗಳು ಕರೆಯುತ್ತಾರೆ.

### English Translation.

Towards Soma's ancient body the seers milk the flashing fluid, the sage who grants a thousand boons,

|| ಸಂಹಿತಾಪಾಠಃ ||

ಅಯಂ ಸೂರ್ಯಇವೋಪದೃಗಯಂ ಸರಾಂಸಿ ಧಾವತಿ |

ಸಪ್ತ ಪ್ರವತ ಆ ದಿವಂ || ೨ ||

॥ ಪದಪಾಠಃ ॥

ಅಯಂ । ಸೂರ್ಯಃऽಇವ । ಉಪऽದೃಕ್ । ಅಯಂ । ಸರಾಂಸಿ । ಧಾವತಿ ।

ಸಪ್ತ । ಪ್ರऽವತಃ । ಆ । ದಿವಂ ॥ ೨ ॥

॥ ಸಾಯಣಭಾಷ್ಯಂ ॥

ಅಯಂ ಸೋಮಃ ಸೂರ್ಯ ಇವ ಯಥಾ ಸೂರ್ಯಃ ಸರ್ವಸ್ಯ ಲೋಕಸ್ಯೋಪದ್ರಷ್ಟಾ ತದ್ವತ್ಕರ್ಮಣಾಮುಪದೃಗುಪದ್ರಷ್ಟಾ । ಅಪಿ ಚಾಯಂ ಸೋಮಃ ಸರಾಂಸಿ । ತ್ರಿಂಶದುಕ್ಥಪಾತ್ರಾಣೀತಿ ಕೇಚಿದ್ವರ್ಣಯಂತಿ । ಅಪರೇ ಕು ತ್ರಿಂಶದಹೋರಾತ್ರಾಣಿ ಸರಾಂಸೀತಿ । ತಾನಿ ಧಾವತಿ । ಗಚ್ಛತಿ । ತಥಾ ಚ ಯಾಸ್ಕಃ । ತತ್ರೈತದ್ಯಾಜ್ಞಿಕಾ ವೇದಯಂತೇ ತ್ರಿಂಶದುಕ್ಥಪಾತ್ರಾಣಿ ಮಾಧ್ಯಂದಿನೇ ಸವನ ಏಕದೇವತಾನಿ ತಾನ್ಯೇತಸ್ಮಿನ್ಕಾಲ ಏಕೇನ ಪ್ರತಿಧಾನೇನ ಪಿಬಂತಿ ತಾನ್ಯತ್ರ ಸರಾಂಸ್ಯುಚ್ಯಂತೇ । ತ್ರಿಂಶದಪರಪಕ್ಷಸ್ಯಾಹೋರಾತ್ರಾಸ್ತ್ರಿಂಶತ್ಪೂರ್ವಪಕ್ಷಸ್ಯೇತಿ ನೈರುಕ್ತಾಃ । ನಿ. ೫-೧೧ । ಇತಿ ॥ ಅಪಿ ಚಾಯಂ ಸೋಮೋ ದಿವಮಧಿಕೃತ್ಯ ಸಪ್ತ ಪ್ರವತಃ ಸಪ್ತ ನದೀರಾ ತಿಷ್ಠತಿ ॥

॥ ಪ್ರತಿಪದಾರ್ಥ ॥

**ಅಯಂ**— ಈ ಸೋಮದೇವನು । **ಸೂರ್ಯ ಇವ**— ಜಗಚ್ಚಕ್ಷುವಾದ ಸೂರ್ಯನಂತೆ । **ಉಪದೃಕ್**— ಸಕಲವನ್ನೂ ನೋಡುವ ಸಾಮರ್ಥ್ಯವುಳ್ಳವನಾಗಿದ್ದಾನೆ । **ಅಯಂ**— ಈ ಸೋಮದೇವನು । **ಸರಾಂಸಿ**— ಉಕ್ಥಪಾತ್ರೆಗಳ ರೂಪದ ಸರಸ್ಸುಗಳನ್ನು । **ಧಾವತಿ**— ಶೀಘ್ರವಾಗಿ ಪ್ರವೇಶಿಸುತ್ತಾನೆ । **ದಿವಂ**— ಅಂತರಿಕ್ಷಾಭಿಮುಖವಾಗಿ । **ಪ್ರವತಃ**— ಹರಿಯುವ । **ಸಪ್ತ**— ಸಪ್ತನದಿಗಳನ್ನೂ । **ಆ (ತಿಷ್ಠತಿ)**— ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಜಗಚ್ಚಕ್ಷುವಾದ ಸೂರ್ಯನಂತೆ, ಈ ಸೋಮದೇವನು ಸಕಲವನ್ನೂ ನೋಡುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಈ ಸೋಮದೇವನು ಸರಸ್ಸಿನಂತಿರುವ ಉಕ್ಥಪಾತ್ರೆಗಳನ್ನು ಹೋಗಿ ಸೇರುತ್ತಾನೆ. ಅಂತರಿಕ್ಷಾಭಿಮುಖವಾಗಿ ಹರಿಯುವ ಸಪ್ತನದಿಗಳನ್ನೂ ಹೋಗಿ ಸೇರುತ್ತಾನೆ.

## English Translation.

He like the sun is the supervisor (of all acts): he hastens to the lakes, he unites with the seven down-descending rivers from heaven.

॥ ಸಂಹಿತಾಪಾಠಃ ॥

ಅಯಂ ವಿಶ್ವಾನಿ ತಿಷ್ಠತಿ ಪುನಾನೋ ಭುವನೋಪರಿ ।

ಸೋಮೋ ದೇವೋ ನ ಸೂರ್ಯಃ ॥ ೩ ॥

॥ ಪದಪಾಠಃ ॥

ಅಯಂ । ವಿಶ್ವಾನಿ । ತಿಷ್ಠತಿ । ಪುನಾನಃ । ಭುವನಾ । ಉಪರಿ ।

ಸೋಮಃ । ದೇವಃ । ನ । ಸೂರ್ಯಃ ॥ ೩ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನೋಽಯಂ ಸೋಮೋ ವಿಶ್ವಾನಿ ಸರ್ವಾಣಿ ಭುವನಾ ಭುವನಾನಿ ಸರ್ವೇಷಾಂ ಭುವನಾನಾಮುಪರಿ ತಿಷ್ಠತಿ । ತತ್ರ ದೃಷ್ಟಾಂತಮಾಹ । ದೇವೋ ನ ಸೂರ್ಯಃ । ಯಥಾ ಸೂರ್ಯೋ ದೇವಃ ಸರ್ವೇಷಾಂ ಭುವನಾನಾಮುಪರಿ ತಿಷ್ಠತಿ ತದದ್ವಯಂ ಸೋಮೋಽಪೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಪುನಾನ—ಶುದ್ಧಿಕಾರಕನಾದ । ಅಯಂ ಸೋಮಃ—ಈ ಸೋಮದೇವನು । ವಿಶ್ವಾನಿ—ಸಮಸ್ತವಾದ । ಭುವನಾ—ಲೋಕಗಳನ್ನು ಅತಿಕ್ರಮಿಸಿ । ದೇವಃ—ಪ್ರಭಾಯುತನಾದ । ಸೂರ್ಯಃ ನ—ಸೂರ್ಯದೇವನಂತೆ ಉಪರಿ—ಅತ್ಯುನ್ನತವಾದ ಪ್ರದೇಶದಲ್ಲಿ । ತಿಷ್ಠತಿ—ನಿಂತಿದ್ದಾನೆ.

॥ ಭಾವಾರ್ಥ ॥

ಶುದ್ಧಿಕಾರಕನಾದ ಈ ಸೋಮದೇವನು ಸಮಸ್ತವಾದ ಲೋಕಗಳನ್ನು ಅತಿಕ್ರಮಿಸಿ ಪ್ರಭಾಯುತನಾದ ರ್ಯದೇವನಂತೆ ಅತ್ಯುನ್ನತವಾದ ಪ್ರದೇಶದಲ್ಲಿ ನಿಂತಿದ್ದಾನೆ.

English Translation.

The purified Soma, like the divine sun, abides above all regions.

॥ ಸಂಹಿತಾಪಾಠಃ ॥

ಪರಿ ಣೋ ದೇವವೀತಯೇ ವಾಜಾँ ಅರ್ಷಸಿ ಗೋಮತಃ ।

ಪುನಾನ ಇಂದ್ರವಿಂದ್ರಯುಃ ॥ ೪ ॥

॥ ಪದಪಾಠಃ ॥

ಪರಿ । ನಃ । ದೇವಽವೀತಯೇ । ವಾಜಾನ್ । ಅರ್ಷಸಿ । ಗೋಽಮತಃ ।

ಪುನಾನಃ । ಇಂದೋ ಇತಿ । ಇಂದ್ರಽಯುಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಇಂದ್ರಯುರಿಂದ್ರಕಾಮಃ ಪುನಾನಃ ಪೂಯಮಾನಸ್ತ್ವಂ ನೋಽಸ್ಮಾಕಂ ದೇವವೀತಯೇ ಯಜ್ಞಾಯ ಗೋಮತೋ ಗೋಯುಕ್ತಾನಿ ವಾಜಾನನ್ನಾನಿ ಪರ್ಯರ್ಷಸಿ । ಪರಿತಃ ಕ್ಷರೇತ್ಯರ್ಥಃ ॥

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ | **ಇಂದ್ರಯುಃ**—ಇಂದ್ರಕಾಮನೂ | **ಪುನಾನಃ**—ಶುದ್ಧಿಕಾರಕನೂ ಆದ ನೀನು | **ನಃ**—ನಮ್ಮ | **ದೇವವೀತಯೇ**—ಯಜ್ಞಾರ್ಥವಾಗಿ | **ಗೋಮತೀಃ**—ಗೋಯುಕ್ತವಾದ | **ವಾಜಾನ್**—ಅನ್ನಗಳನ್ನು | **ಪರಿ ಅರ್ಷಸಿ**—ಸುತ್ತಲೂ ಒದಗಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಇಂದ್ರನನ್ನಪೇಕ್ಷಿಸುವವನೂ, ಶುದ್ಧಿಕಾರಕನೂ ಆದ ನೀನು ನಮ್ಮ ಯಜ್ಞಾರ್ಥವಾಗಿ ಗೋಯುಕ್ತವಾದ ಅನ್ನಗಳನ್ನು ಸುತ್ತಲೂ (ವಿಶೇಷವಾಗಿ) ಒದಗಿಸು.

**English Translation.**

Purified Indu, who are devoted to Indra, pour down for our sacrifice food with milk and curds.

# ಐವತ್ತೈದನೆಯ ಸೂಕ್ತವು

---

|| ಸಾಯಣಭಾಷ್ಯಂ ||

**ಯವಂಯವಂ ನ ಇತಿ ಚತುರ್ಋಚಮೇಕತ್ರಿಂಶಂ ಸೂಕ್ತಂ ಕಾಶ್ಯಪಸ್ಯಾವತ್ಸಾರಸ್ಯಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ | ಯವಂಯವಮಿತ್ಯನುಕ್ರಾಂತಂ | ಗತೋ ವಿನಿಯೋಗಃ ||**

ಅನುವಾದವು—**ಯವಂಯವಂ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತೊಂದನೆಯ ಸೂಕ್ತವು. ಇದರಲ್ಲಿ ನಾಲ್ಕುಋಕ್ಕುಗಳಿರುವವು. ಈ ಸೂಕ್ತಕ್ಕೆ ಕಾಶ್ಯಪಃ ಅವತ್ಸಾರಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯವಂಯವಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೫

ಮಂಡಲ—೯ || ಅನುವಾಕ—೨ || ಸೂಕ್ತ—೫೫ ||
ಅಷ್ಟಕ—೭ || ಅಧ್ಯಾಯ—೧ || ವರ್ಗ—೧೨ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||
|| ಋಷಿಃ—ಅವತ್ಸಾರಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ—ಗಾಯತ್ರೀ ||

॥ ಸಂಹಿತಾಪಾಠಃ ॥

ಯವಂಯವಂ ನೋ ಅಂಧಸಾ ಪುಷ್ಟಂಪುಷ್ಟಂ ಪರಿ ಸ್ರವ ।

ಸೋಮ ವಿಶ್ವಾ ಚ ಸೌಭಗಾ ॥ ೧ ॥

॥ ಪದಪಾಠಃ ॥

ಯವಂऽಯವಂ । ನಃ । ಅಂಧಸಾ । ಪುಷ್ಟಂऽಪುಷ್ಟಂ । ಪರಿ । ಸ್ರವ ।

ಸೋಮ । ವಿಶ್ವಾ । ಚ । ಸೌಭಗಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ನೋಽಸ್ಮಾಕಂ ಪುಷ್ಟಂಪುಷ್ಟಂ ಬಹುಲಂ ಯವಂಯವಂ ಪುನಃಪುನರ್ಯುತಂ ರಸಮಂಧಸಾನ್ನಾತ್ಮನಾ ಪರಿ ಸ್ರವ । ಧಾರಯಾ ಕ್ಷರ ॥ ಅತ್ರ ಸ್ವಾರ್ಥಯಿತುಸ್ತೃಷ್ಣಯಾತ್ಯಂತಂ ಪೀಡಿತತ್ವಾದಾಬಾಧೇ ಚ । ಪಾ. ೮-೧-೧೦ । ಇತಿ ದ್ವಿರ್ಭಾವಃ । ಪೀಡಾ ಪ್ರಯೋಕ್ತೃಧರ್ಮೋ ನಾಭಿಧೇಯಧರ್ಮ ಇತ್ಯುಕ್ತಂ ॥ ಅಪಿ ಚ ವಿಶ್ವಾ ವಿಶ್ವಾನಿ ಸೌಭಗಾನಿ ಧನಾನಿ ಪರಿಸ್ರವ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ, । ನಃ—ನಮಗೆ । ಪುಷ್ಟಂಪುಷ್ಟಂ—ಅತ್ಯಧಿಕವಾದುದೂ । ಯವಂಯವಂ—ಅನೇಕಸಲ ಶೇಖರಿಸಲ್ಪಟ್ಟಿದೂ ಆದ ರಸವನ್ನು । ಅಂಧಸಾ—ಅನ್ನರೂಪದಿಂದ । ಪರಿಸ್ರವ—ಸ್ರವಿಸುವಂತೆ ಮಾಡು । ವಿಶ್ವಾ ಚ—ಸಮಸ್ತವಾದ । ಸೌಭಗಾ—ಕಲ್ಯಾಣಗಳನ್ನೂ ಒದಗಿಸಿಕೊಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮಗೆ ಅತ್ಯಧಿಕವಾದುದೂ, ಅನೇಕ ಸಲ ಶೇಖರಿಸಲ್ಪಟ್ಟಿದೂ ಆದ ರಸವನ್ನು ಅನ್ನರೂಪದಿಂದ ಸ್ರವಿಸುವಂತೆ ಮಾಡು. ಸಮಸ್ತವಾದ ಕಲ್ಯಾಣಗಳನ್ನೂ ಒದಗಿಸಿಕೊಡು.

### English Translation.

Soma, pour forth (in a stream of) food, abundant oft-collected (juice), and all good things

॥ ಸಂಹಿತಾಪಾಠಃ ॥

ಇಂದೋ ಯಥಾ ತವ ಸ್ತವೋ ಯಥಾ ತೇ ಜಾತಮಂಧಸಃ ।

ನಿ ಬರ್ಹಿಷಿ ಪ್ರಿಯೇ ಸದಃ ॥ ೨ ॥

|| ಪದಪಾಠಃ ||

ಇಂದೋ ಇತಿ | ಯಥಾ | ತವ | ಸ್ತವಃ | ಯಥಾ | ತೇ | ಜಾತಂ | ಅಂಧಸಃ |

ನಿ | ಬರ್ಹಿಷಿ | ಪ್ರಿಯೇ | ಸದಃ || ೨ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಅಂಧಸೋಽನ್ನರೂಪಸ್ಯ ತವ ಸಂಬಂಧೀ ಸ್ತವಃ ಸ್ತವನಂ ಸ್ತೋತ್ರಂ ತಥಾ ತೇ ತವ ಜಾತಂ ಜನ್ಮ ಯಥಾ ಪ್ರಾದುರ್ಭೂತಮಸ್ತಿ ತಥಾ ತ್ವಂ ಪ್ರಿಯೇ ಪ್ರೀಣಯಿತರಿ ಬರ್ಹಿಷ್ಯಸ್ಮದ್ಯಾಗೇ ನಿ ಷದಃ | ನಿ ಷಣ್ಣೋ ಭವ ||

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ, | **ಅಂಧಸಃ**—ಅನ್ನರೂಪದಲ್ಲಿರುವ | **ತವ**—ನಿನ್ನನ್ನುದ್ದೇಶಿಸಿದ | **ಸ್ತವಃ**—ಸ್ತೋತ್ರವೂ | **ತೇ**—ನಿನ್ನ | **ಜಾತಂ**—ಆವಿರ್ಭವವೂ | **ಯಥಾ**—ಯಾವ ರೀತಿ ಒಂದೇ ಕಾಲದಲ್ಲಿ ನೆರವೇರುವುವೋ ಹಾಗೆ | **ಪ್ರಿಯೇ**—ನಿನಗೆ ಪ್ರಿಯವನ್ನುಂಟುಮಾಡುವ | **ಬರ್ಹಿಷಿ**—ದರ್ಭಾಸನದ ಮೇಲೆ | **ನಿ ಷದಃ**—ಕುಳಿತುಕೊ.

|| ಭಾವಾರ್ಥ ||

ಎಲೈ ಸೋಮದೇವನೇ, ಅನ್ನರೂಪದಲ್ಲಿರುವ ನಿನ್ನನ್ನುದ್ದೇಶಿಸಿದ ಸ್ತೋತ್ರವೂ ನಿನ್ನ ಆವಿರ್ಭಾವವೂ ಯಾವ ರೀತಿ ಒಂದೇ ಕಾಲದಲ್ಲಿ ನೆರವೇರುವುವೋ ಆ ರೀತಿ ನಿನಗೆ ಪ್ರಿಯವನ್ನುಂಟುಮಾಡುವ ದರ್ಭಾಸನದ ಮೇಲೆ ಕುಳಿತುಕೊ.

## English Translation.

Indu, since the praise of you as food, since your birth (has appeared), sit down upon the grass that pleases (you).

|| ಸಂಹಿತಾಪಾಠಃ ||

ಉತ ನೋ ಗೋವಿದಶ್ವವಿತ್ಪವಸ್ವ ಸೋಮಾಂಧಸಾ |
ಮಕ್ಷೂತಮೇಭಿರಹಭಿಃ || ೩ ||

|| ಪದಪಾಠಃ ||

ಉತ | ನಃ | ಗೋಽವಿತ್ | ಅಶ್ವಽವಿತ್ | ಪವಸ್ವ | ಸೋಮ | ಅಂಧಸಾ |

ಮಕ್ಷುಽತಮೇಭಿಃ | ಅಹಽಭಿಃ || ೩ ||

|| ಸಾಯಣಭಾಷ್ಯಂ ||

ಉತಾಪಿ ಚ ಹೇ ಸೋಮ ನೋಽಸ್ಮಾಕಂ ಗೋವಿದ್ಗೋಪ್ರದೋಽಶ್ವವಿದಶ್ವಪ್ರದಶ್ಚ ತ್ವಂ ಮಕ್ಷೂತಮೇಭಿರ್ಮಕ್ಷುತಮೈರತಿಶಯೇನ ಶೀಘ್ರೈರಹಭಿರಹೋಭಿರ್ಹೇತುಭಿರಂಧಸಾನ್ನೇನ ಪವಸ್ವ | ಧಾರಯಾ ಕ್ಷರ ||

|| ಪ್ರತಿಪದಾರ್ಥ ||

**ಉತ**—ಮತ್ತು | **ಸೋಮ**—ಎಲೈ ಸೋಮದೇವನೇ, | **ನಃ**—ನಮಗೆ | **ಗೋವಿತ್**—ಗೋವುಗಳನ್ನು ದಾನಮಾಡುವವನೂ | **ಅಶ್ವವಿತ್**—ಅಶ್ವಗಳನ್ನು ದಾನಮಾಡುವವನೂ ಆದ ನೀನು | **ಮಕ್ಷೂತಮೇಭಿಃ**—ಶೀಘ್ರಗಾಮಿಗಳಾದ | **ಅಹಭಿಃ**—ಅಹಸ್ಸುಗಳ ನಿಮಿತ್ತವಾಗಿ | **ಅಂಧಸಾ**—ಅನ್ನರೂಪದಲ್ಲಿ | **ಪವಸ್ವ**—ಧಾರಾರೂಪದಲ್ಲಿ ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ನಮಗೆ ಗೋವುಗಳನ್ನು ದಾನಮಾಡುವವನೂ, ಅಶ್ವಗಳನ್ನು ದಾನಮಾಡುವವನೂ ಆದ ನೀನು ಶೀಘ್ರಗಾಮಿಗಳಾದ ಆ ಹವಿಸ್ಸುಗಳ ನಿಮಿತ್ತವಾಗಿ ಧಾರಾರೂಪದಲ್ಲಿ ಪ್ರವಹಿಸು

## English Translation.

And Soma, do you who are the giver of cattle, the giver of horses, flow to us in (a stream of) food as the days quickly pass.

|| ಸಂಹಿತಾಪಾಠಃ ||

ಯೋ ಜಿನಾತಿ ನ ಜೀಯತೇ ಹಂತಿ ಶತ್ರುಮಭೀತ್ಯ |
ಸ ಪವಸ್ವ ಸಹಸ್ರಜಿತ್ || ೪ ||

|| ಪದಪಾಠಃ ||

ಯಃ | ಜಿನಾತಿ | ನ | ಜೀಯತೇ | ಹಂತಿ | ಶತ್ರುಂ | ಅಭಿಽಇತ್ಯ |
ಸಃ | ಪವಸ್ವ | ಸಹಸ್ರಽಜಿತ್ || ೪ ||

|| ಸಾಯಣಭಾಷ್ಯಂ ||

ಹೇ ಸಹಸ್ರಜಿದಸಂಖ್ಯಾನಾಂ ಶತ್ರೂಣಾಂ ಜೇತಃ ಸೋಮ ಯೋ ಭವಾಞ್ಜಿನಾತಿ ಶತ್ರೂನ್ಹಂತಿ ನ ಜೀಯತೇ ಸ್ವಯಂ ಶತ್ರುಭಿರ್ನ ಜೀಯತೇ | ನ ಹನ್ಯತ ಇತ್ಯರ್ಥಃ | ಶತ್ರುಮಭೀತ್ಯ ಶತ್ರುಂ ಸ್ವಯಮಭ್ಯೇತ್ಯ ಹಂತಿ ನ ಚ ಸ್ವಯಂ ಶತ್ರುಭಿರಭಿಭೂಯತೇ ಸ ತ್ವಂ ಪವಸ್ವ ಕ್ಷರ ||

|| ಪ್ರತಿಪದಾರ್ಥ ||

**ಸಹಸ್ರಜಿತ್**— ಅಸಂಖ್ಯಾಕರಾದ ಶತ್ರುಗಳನ್ನು ಜಯಿಸುವ ಎಲೈ ಸೋಮನೇ, | **ಯಃ**— ಯಾವ ನೀನು | **ಜಿನಾತಿ**—ಶತ್ರುಗಳನ್ನು ಜಯಿಸುವೆಯೋ | **ನ ಜೀಯತೇ**— ಆದರೆ ಯಾವ ಶತ್ರುಗಳಿಂದಲೂ ಜಯಿಸಲ್ಪಡುವುದಿಲ್ಲವೋ (ಮತ್ತು) | **ಶತ್ರುಮಭೀತ್ಯ**—ಶತ್ರುಗಳ ಮೇಲೆ ಬಿದ್ದು | **ಹಂತಿ**—ಕೊಲ್ಲುವೆಯೋ | **ಸಃ**—ಅಂತಹ ನೀನು | **ಪವಸ್ವ**— ಧಾರಾರೂಪದಲ್ಲಿ ಪ್ರವಹಿಸು.

|| ಭಾವಾರ್ಥ ||

ಅಸಂಖ್ಯಾಕವಾದ ಶತ್ರುಗಳನ್ನು ಜಯಿಸುವ ಎಲೈ ಸೋಮದೇವನೇ, ಯಾವ ನೀನು ಶತ್ರುಗಳನ್ನು ಜಯಿಸುವೆಯೋ, ಆದರೆ ಯಾವ ಶತ್ರುಗಳಿಂದಲೂ ಜಯಿಸಲ್ಪಡುವುದಿಲ್ಲವೋ ಮತ್ತು ಶತ್ರುಗಳ ಮೇಲೆ ಬಿದ್ದು ಕೊಲ್ಲುವೆಯೋ ಅಂತಹ ನೀನು ಧಾರಾ ರೂಪದಲ್ಲಿ ಪ್ರವಹಿಸು.

### English Translation.

Flow forth, O conqueror of thousands, who conquers but is not conquered, and attacking slays his foe.

## ಐವತ್ತಾರನೆಯ ಸೂಕ್ತವು

---

|| ಸಾಯಣಭಾಷ್ಯಂ ||

**ಪರಿ ಸೋಮ ಇತಿ ಚತುರ್ಋಚಂ ದ್ವಾತ್ರಿಂಶಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಪರಿ ಸೋಮ ಇತ್ಯನುಕ್ರಾಂತಂ | ಉಕ್ತೋ ವಿನಿಯೋಗಃ ||**

ಅನುವಾದವು—**ಪರಿ ಸೋಮಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತೆರಡನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಪರಿ ಸೋಮಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೫೬

|| ಮಂಡಲ—೯ || ಅನುವಾಕ—೨ || ಸೂಕ್ತ—೫೬ ||
|| ಅಷ್ಟಕ—೭ ||ಅಧ್ಯಾಯ—೧ || ವರ್ಗ—೧೩ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||
|| ಋಷಿಃ—ಅವತ್ಸಾರಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

ಪರಿ ಸೋಮ ಋತಂ ಬೃಹದಾಶುಃ ಪವಿತ್ರೇ ಅರ್ಷತಿ ।
ವಿಘ್ನನ್ರಕ್ಷಾಂಸಿ ದೇವಯುಃ ॥ ೧ ॥

|| ಪದಪಾಠಃ ||

ಪರಿ । ಸೋಮಃ । ಋತಂ । ಬೃಹತ್ । ಆಶುಃ । ಪವಿತ್ರೇ । ಅರ್ಷತಿ ।
ವಿಽಘ್ನನ್ । ರಕ್ಷಾಂಸಿ । ದೇವಽಯುಃ ॥ ೧ ॥

|| ಸಾಯಣಭಾಷ್ಯಂ ||

ಆಶುಃ ಕ್ಷಿಪ್ರಕಾರೀ ದೇವಯುರ್ದೇವಕಾಮಃ ಸೋಮಃ ಪವಿತ್ರೇ ಸ್ಥಿತ್ವಾ ರಕ್ಷಾಂಸಿ ರಾಕ್ಷಸಾನ್ವಿಘ್ನನ್ನಿಘ್ನನ್ಬೃಹನ್ಮಹದೃತಮನ್ನಂ ಪರ್ಯರ್ಷತಿ । ಪರಿಗಮಯತಿ । ಅಸ್ಮಭ್ಯಂ ಪ್ರಯಚ್ಛತೀತ್ಯರ್ಥಃ ॥

|| ಪ್ರತಿ ಪದಾರ್ಥ ||

ಆಶುಃ—ಶೀಘ್ರಗಾಮಿಯೂ । ದೇವಯುಃ— ದೇವತೆಗಳನ್ನು ತೃಪ್ತಿಪಡಿಸಲಿಚ್ಛಿಸುವವನೂ ಆದ । ಸೋಮಃ—ಸೋಮದೇವನು । ಪವಿತ್ರೇ—ದಶಾಪವಿತ್ರದಲ್ಲಿರುವಾಗ । ರಕ್ಷಾಂಸಿ— ರಾಕ್ಷಸರನ್ನು । ವಿಘ್ನನ್— ನಾಶಪಡಿಸುತ್ತಾ । ಬೃಹತ್—ಪ್ರಭೂತವಾದ । ಋತಂ—ಅನ್ನವನ್ನು । ಪರ್ಯರ್ಷತಿ—ನಮ್ಮ ಸುತ್ತಲೂ ಒದಗಿಸುತ್ತಾನೆ.

|| ಭಾವಾರ್ಥ ||

ಶೀಘ್ರಗಾಮಿಯೂ, ದೇವತೆಗಳನ್ನು ತೃಪ್ತಿಪಡಿಸಲಿಚ್ಛಿಸುವವನೂ ಆದ ಸೋಮದೇವನು ದಶಾಪವಿತ್ರದಲ್ಲಿ ಇರುವಾಗ ರಾಕ್ಷಸರನ್ನು ನಾಶಪಡಿಸುತ್ತಾ ಪ್ರಭೂತವಾದ ಅನ್ನವನ್ನು ನಮ್ಮ ಸುತ್ತಲೂ ಒದಗಿಸುತ್ತಾನೆ.

## English Translation.

The switt Soma devoted to the gods destroying the Rakshasas in the filter bestows abundant food (on us).

|| ಸಂಹಿತಾಪಾಠಃ ||

ಯತ್ಸೋಮೋ ವಾಜಮರ್ಷತಿ ಶತಂ ಧಾರಾ ಅಪಸ್ಯುವಃ ।
ಇಂದ್ರಸ್ಯ ಸಖ್ಯಮಾವಿಶನ್ ॥ ೨ ॥

|| ಪದಪಾಠಃ ||

ಯತ್ | ಸೋಮಃ | ವಾಜಂ | ಅರ್ಷತಿ | ಶತಂ | ಧಾರಾಃ | ಅಪಸ್ಯುವಃ |

ಇಂದ್ರಸ್ಯ | ಸಖ್ಯಂ | ಆವಿಶನ್ || ೨ ||

|| ಸಾಯಣಭಾಷ್ಯಂ ||

**ಯದ್ಯದಾಪಸ್ಯುವಃ ಕರ್ಮಕಾಮಾಃ ಶತಂ ಶತಸಂಖ್ಯಾಕಾ ಧಾರಾಃ ಸೋಮಸ್ಯ ಧಾರಾ ಇಂದ್ರಸ್ಯ ಸಖ್ಯಂ ಸಖಿತ್ವಮಾವಿಶನ್ ಪ್ರಾಪ್ನುವಂತಿ ತದಾ ಸೋಮೋ ವಾಜಮನ್ನಮರ್ಷತಿ | ಗಮಯತಿ | ಅಸ್ಮಭ್ಯಂ ಪ್ರಯಚ್ಛತೀತ್ಯರ್ಥಃ ||**

|| ಪ್ರತಿಪದಾರ್ಥ ||

**ಯತ್**—ಯಾವಾಗ | **ಅಪಸ್ಯುವಃ**—ಯಜ್ಞಕರ್ಮವನ್ನಿಚ್ಛಿಸುವುವೂ | **ಶತಂ**—ಶತಸಂಖ್ಯೆಯಲ್ಲಿರುವುವೂ ಆದ | **ಧಾರಾಃ**—ಸೋಮರಸದ ಧಾರೆಗಳು | **ಇಂದ್ರಸ್ಯ**—ಇಂದ್ರನ | **ಸಖ್ಯಂ**—ಮಿತ್ರತ್ವವನ್ನು | **ಆವಿಶನ್**—ಹೊಂದುವುವೋ ಆಗ | **ಸೋಮಃ**—ಸೋಮದೇವನು | **ವಾಜಂ**—ಅನ್ನವನ್ನು | **ಅರ್ಷತಿ**—ನಮಗೆ ಒದಗಿಸುತ್ತಾನೆ.

|| ಭಾವಾರ್ಥ ||

ಯಜ್ಞಕರ್ಮವನ್ನಿಚ್ಛಿಸುವುವೂ, ಶತಸಂಖ್ಯಾಕವಾದವೂ ಆದ ಸೋಮರಸದ ಧಾರೆಗಳು ಇಂದ್ರನ ಮಿತ್ರತ್ವವನ್ನು ಯಾವಾಗ ಹೊಂದುವುವೋ ಆಗ ಸೋಮದೇವನು ನಮಗೆಲ್ಲಾ ಅನ್ನವನ್ನು ಒದಗಿಸುತ್ತಾನೆ.

## English Translation.

When the hundred rite-loving streams (of the Soma) obtain the the friendship of Indra, then the Soma brings us food.

|| ಸಂಹಿತಾಪಾಠಃ ||

ಅಭಿ ತ್ವಾ ಯೋಷಣೋ ದಶ ಜಾರಂ ನ ಕನ್ಯಾನೂಷತ |

ಮೃಜ್ಯಸೇ ಸೋಮ ಸಾತಯೇ || ೩ ||

|| ಪದಪಾಠಃ ||

ಅಭಿ | ತ್ವಾ | ಯೋಷಣಃ | ದಶ | ಜಾರಂ | ನ | ಕನ್ಯಾ | ಅನೂಷತ |

ಮೃಜ್ಯಸೇ | ಸೋಮ | ಸಾತಯೇ || ೩ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಾ ತ್ವಾಂ ಯಾ ದಶಸಂಖ್ಯಾಕಾ ಯೋಷಣೋಽಂಗುಲಯಃ ಕನ್ಯಾ ಪಿತೃಮತೀ ಕನ್ಯಕಾ ಜಾರಂ ನ ಯಥಾ ಪ್ರಿಯಮಭಿಶಬ್ದಾಯತೇ ತದ್ವದಭ್ಯನೂಷತ ಅಭಿಶಬ್ದಾಯಂತೇ ತಾಭಿಃ ಸಾತಯೇಽಸ್ಮಾಕಂ ಧನಸ್ಯ ಲಾಭಾಯ ಮೃಜ್ಯಸೇ । ಇಂದ್ರಾರ್ಥಂ ಶೋಧ್ಯಸೇ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ, । **ಕನ್ಯಾ**—ಎಳೆವಯಸ್ಸಿನ ತರುಣಿಯು । **ಜಾರಂ ನ**—ತನ್ನ ಪ್ರಿಯನನ್ನು ಪ್ರೀತಿಯಿಂದ ಶಬ್ದಮಾಡಿ ಕರೆಯುವಂತೆ । **ತ್ವಾ**—ನಿನ್ನನ್ನು । **ದಶ ಯೋಷಣಃ**—ಯಾವ ಹತ್ತು ಬೆರಳುಗಳೂ । **ಅಭ್ಯನೂಷತ**—ಶಬ್ದಮಾಡುತ್ತ ಆದರಿಸುವುವೋ ಅವುಗಳೊಂದಿಗೆ ಕೂಡಿ । **ಸಾತಯೇ**—ನಮ್ಮ ಧನಲಾಭಾರ್ಥವಾಗಿ । **ಮೃಜ್ಯಸೇ**—ನೀನು ಶುದ್ಧಿಯನ್ನು ಹೊಂದುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಎಳೆವಯಸ್ಸಿನ ತರುಣಿಯು ತನ್ನ ಪ್ರಿಯನನ್ನು ಪ್ರೀತಿಯಿಂದ ಶಬ್ದ ಮಾಡಿ ಕರೆಯುವಂತೆ ನಿನ್ನನ್ನು ಯಾವ ಹತ್ತು ಅಂಗುಲಿಗಳೂ ಶಬ್ದಮಾಡುತ್ತ ಆದರಿಸುವುವೋ (ಹಿಂಡುವವೋ) ಅವುಗಳೊಂದಿಗೆ ಕೂಡಿ ನಮ್ಮ ಧನಲಾಭಾರ್ಥವಾಗಿ ನೀನು ಶುದ್ಧಿಯನ್ನು ಹೊಂದುತ್ತೀಯೆ.

## English Translation.

The ten fingers commend you, Soma, as a maiden her lover, you are cleansed in order to bestow (wealth on us).

|| ಸಂಹಿತಾಪಾಠಃ ||

ತ್ವಮಿಂದ್ರಾಯ ವಿಷ್ಣವೇ ಸ್ವಾದುರಿಂದೋ ಪರಿ ಸ್ರವ ।
ನೄನ್‌ಸ್ತೋತೄನ್ಪಾಹ್ಯಂಹಸಃ ॥ ೪ ॥

|| ಪದಪಾಠಃ ||

ತ್ವಂ । ಇಂದ್ರಾಯ । ವಿಷ್ಣವೇ । ಸ್ವಾದುಃ । ಇಂದೋ ಇತಿ । ಪರಿ । ಸ್ರವ ।
ನೄನ್ । ಸ್ತೋತೄನ್ । ಪಾಹಿ । ಅಂಹಸಃ ॥ ೪ ॥

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಸ್ವಾದುಃ ಪ್ರಿಯರಸಸ್ತ್ವಮಿಂದ್ರಾರ್ಥಂ ವಿಷ್ಣವೇ ವಿಷ್ಣ್ವರ್ಥಂ ಚ ಪರಿ ಸ್ರವ । ಪರಿಕ್ಷರ । ನೄನ್ಕರ್ಮಣಾಂ ನೇತೄನ್ಸ್ತೋತೄಂಸ್ತ್ವದ್ವಿಷಯಾಣಾಂ ಸ್ತುತೀನಾಂ ಕರ್ತೄನಂಹಸೋ ದುರಿತಾತ್ಪಾಹಿ । ರಕ್ಷ ಚ ॥

|| ಪ್ರತಿಪದಾರ್ಥ ||

**ಇಂದೋ**— ಎಲೈ ಸೋಮದೇವನೇ, | **ಸ್ವಾದುಃ**— ರುಚಿಕರವಾದ ರಸವುಳ್ಳ | **ತ್ವಂ**— ನೀನು | **ಇಂದ್ರಾಯ**— ಇಂದ್ರಾರ್ಥವಾಗಿಯೂ | **ವಿಷ್ಣವೇ**— ವಿಷ್ಣುವಿಗಾಗಿಯೂ | **ಪರಿ ಸ್ರವ**— ಪ್ರವಾಹರೂಪದಲ್ಲಿ ಸ್ರವಿಸು| **ನೄನ್**— ಕರ್ಮನೇತೃಗಳಾದ ಯಜಮಾನರನ್ನೂ | **ಸ್ತೋತೄನ್**— ಸ್ತುತಿಕರ್ತರನ್ನೂ | **ಅಂಹಸಃ**— ಪಾಪದಿಂದ **ಪಾಹಿ**— ರಕ್ಷಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ರುಚಿಕರವಾದ ರಸವುಳ್ಳ ನೀನು ಇಂದ್ರಾರ್ಥವಾಗಿಯೂ, ವಿಷ್ಣುವಿಗಾಗಿಯೂ ಪ್ರವಾಹರೂಪದಲ್ಲಿ ಸ್ರವಿಸು. ಕರ್ಮನೇತೃಗಳಾದ ಯಜಮಾನರನ್ನೂ, ಸ್ತುತಿಕರ್ತರನ್ನೂ ಪಾಪದಿಂದ ರಕ್ಷಿಸು.

## English Translation.

Do you, Indu, who are sweet-flavoured flow for Indra and Vishnu, preserve the worshippers, your praisers from sin.

# ಐವತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

**ಪ್ರ ತೇ ಧಾರಾ ಇತಿ ಚತುರ್ಋಚಂ ತ್ರಯಸ್ತ್ರಿಂಶಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಪ್ರ ತೇ ಧಾರಾ ಇತ್ಯನುಕ್ರಾಂತಂ | ಉಕ್ತೋ ವಿನಿಯೋಗಃ ||**

ಅನುವಾದವು— **ಪ್ರ ತೇ ಧಾರಾಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತಮೂರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ **ಪ್ರ ತೇ ಧಾರಾಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೫೭

ಮಂಡಲ—೯ || ಅನುವಾಕ—೨ || ಸೂಕ್ತ—೫೭ ||
ಅಷ್ಟಕ—೭ || ಅಧ್ಯಾಯ—೧ || ವರ್ಗ—೧೪ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||
|| ಋಷಿಃ—ಅವತ್ಸಾರಃ ||
|| ದೇವತಾ—ಪವಮಾನಃ ಸೋಮಃ ||

|| ಸಂಹಿತಾಪಾಠಃ ||

ಪ್ರ ತೇ ಧಾರಾ ಅಸಶ್ಚತೋ ದಿವೋ ನ ಯಂತಿ ವೃಷ್ಟಯಃ |
ಅಚ್ಛಾ ವಾಜಂ ಸಹಸ್ರಿಣಂ || ೧ ||

॥ ಪದಪಾಠಃ ॥

ಪ್ರ । ತೇ । ಧಾರಾಃ । ಅಸಶ್ಚತಃ । ದಿವಃ । ನ । ಯಂತಿ । ವೃಷ್ಟಯಃ ॥

ಅಚ್ಛ । ವಾಜಂ । ಸಹಸ್ರಿಣಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತವಾಸಶ್ಚತಃ ಸಂಗರಹಿತಾ ಧಾರಾಃ ಸಹಸ್ರಿಣಮಪರಿಮಿತಸಂಖ್ಯಾಕಂ ವಾಜಮನ್ನಮಚ್ಛ ನೋಽಸ್ಮದರ್ಥಂ ಪ್ರಯಂತಿ । ಪ್ರಗಚ್ಛಂತಿ । ತತ್ರ ದೃಷ್ಟಾಂತಃ । ದಿವೋ ನ ವೃಷ್ಟಯಃ । ಯಥಾ ದ್ಯುಲೋಕಾದ್ವರ್ಷಧಾರಾ ನಿಃಸಂಗಾಃ ಪ್ರಜಾನಾಮಪರಿಮಿತಮನ್ನಂ ಪ್ರಯಚ್ಛಂತಿ ತದ್ವದಿತ್ಯರ್ಥಃ ॥

॥ ಪ್ರತಿ ಪದಾರ್ಥ ॥

( ಎಲೈ ಸೋಮದೇವನೇ ), ದಿವಃ—ಅಂತರಿಕ್ಷದಿಂದ ಸುರಿಯುವ । ವೃಷ್ಟಯಃ ನ—ವೃಷ್ಟಿಧಾರೆಗಳು ಪ್ರಭೂತವಾದ ಅನ್ನಗಳನ್ನು ಒದಗಿಸುವಂತೆ । ತೇ—ನಿನ್ನ । ಅಸಶ್ಚತಃ—ಬೇರೆಬೇರೆಯಾಗಿರುವ । ಧಾರಾಃ—ಪ್ರವಾಹಗಳು । ಸಹಸ್ರಿಣಂ—ಅಸಂಖ್ಯಾಕವಾದ (ಪ್ರಭೂತವಾದ) । ವಾಜಂ—ಅನ್ನವನ್ನು । ಅಚ್ಛ—ನಮಗಭಿಮುಖವಾಗಿ । ಪ್ರ ಯಂತಿ – ಒದಗಿಸಿಕೊಡುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಅಂತರಿಕ್ಷದಿಂದ ಸುರಿಯುವ ವೃಷ್ಟಿಧಾರೆಗಳು ಪ್ರಭೂತವಾದ ಅನ್ನಗಳನ್ನು ಒದಗಿಸುವಂತೆ ಬೇರೆಬೇರೆಯಾಗಿ ಹರಿಯುವ ನಿನ್ನ ಧಾರೆಗಳು ನಮಗೆ ಅತ್ಯತಿಶಯವೂ ಪ್ರಭೂತವೂ ಆದ ಅನ್ನಗಳನ್ನು ಒದಗಿಸುತ್ತವೆ.

## English Translation.

Your unconnected streams advance towards infinite food ( for us ) like the showers from heaven,

॥ ಸಂಹಿತಾಪಾಠಃ ॥

ಅಭಿ ಪ್ರಿಯಾಣಿ ಕಾವ್ಯಾ ವಿಶ್ವಾ ಚಕ್ಷಾಣೋ ಅರ್ಷತಿ ।

ಹರಿಸ್ತುಂಜಾನ ಆಯುಧಾ ॥ ೨ ॥

॥ ಪದಪಾಠಃ ॥

ಅಭಿ । ಪ್ರಿಯಾಣಿ । ಕಾವ್ಯಾ । ವಿಶ್ವಾ । ಚಕ್ಷಾಣಃ । ಅರ್ಷತಿ ।

ಹರಿಃ । ತುಂಜಾನಃ । ಆಯುಧಾ ॥ ೨ ॥

|| ಸಾಯಣಭಾಷ್ಯಂ ||

ಹರಿರ್ಹರಿತವರ್ಣಃ ಸೋಮೋ ವಿಶ್ವಾ ವಿಶ್ವಾನಿ ಪ್ರಿಯಾಣಿ ದೇವಾನಾಂ ಪ್ರೀತಿಕರಾಣಿ ಕಾವ್ಯಾ ಕಾವ್ಯಾನಿ ಕರ್ಮಾಣಿ ಚಕ್ಷಾಣಃ ಪಶ್ಯನ್ನಾಯುಧಾ ಸ್ವಕೀಯಾನ್ಯಾಯುಧಾನಿ ತುಂಜಾನೋ ರಾಕ್ಷಸಾನ್ಪ್ರತಿ ಪ್ರೇರಯಂಶ್ಚಾಭ್ಯರ್ಷತಿ । ಯಾಗಂ ಪ್ರತಿ ಗಚ್ಛತಿ ||

|| ಪ್ರತಿಪದಾರ್ಥ ||

ಹರಿಃ— ಹಚ್ಚೆ ವರ್ಣವುಳ್ಳವನಾದ ಸೋಮನು | ಪ್ರಿಯಾಣಿ— ದೇವತೆಗಳಿಗೆ ಪ್ರೀತಿಕಾರಕವಾದ | ವಿಶ್ವಾ ಕಾವ್ಯಾ— ಸಮಸ್ತ ಯಜ್ಞಕರ್ಮಗಳನ್ನೂ | ಚಕ್ಷಾಣಃ— ವೀಕ್ಷಿಸುತ್ತಾ | ಆಯುಧಾ— ತನ್ನ ಆಯುಧಗಳನ್ನು | ತುಂಜಾನಃ-- ರಾಕ್ಷಸರಿಗೆ ಅಭಿಮುಖವಾಗಿ ಪ್ರಯೋಗಿಸುತ್ತಾ | ಅಭ್ಯರ್ಷತಿ— ಯಾಗಾಭಿಮುಖವಾಗಿ ಬರುತ್ತಾನೆ.

|| ಭಾವಾರ್ಥ ||

ಹಚ್ಚೆವರ್ಣವುಳ್ಳವನಾದ ಸೋಮದೇವನು ದೇವತೆಗಳಿಗೆ ಪ್ರೀತಿಕಾರಕವಾದ ಸಕಲಯಜ್ಞಕರ್ಮಗಳನ್ನು ವೀಕ್ಷಿಸುತ್ತ ತನ್ನ ಆಯುಧಗಳನ್ನು ರಾಕ್ಷಸರಿಗೆ ಅಭಿಮುಖವಾಗಿ ಪ್ರಯೋಗಿಸುತ್ತ ಯಾಗಾಭಿಮುಖವಾಗಿ ಬರುತ್ತಾನೆ.

## English Translation.

The greeu-tinted Soma contemplating all the holy acts that are pleasing to the gods rushes (to the sacrifice) brandishing his weapons (against the Rakshasas).

|| ಸಂಹಿತಾಪಾಠಃ ||

ಸ ಮರ್ಮೃಜಾನ ಆಯುಭಿರಿಭೋ ರಾಜೇವ ಸುವ್ರತಃ ।
ಶ್ಯೇನೋ ನ ವಂಸು ಷೀದತಿ || ೩ ||

|| ಪದಪಾಠಃ ||

ಸಃ । ಮರ್ಮೃಜಾನಃ । ಆಯುಽಭಿಃ । ಇಭಃ । ರಾಜಾಽಇವ । ಸುಽವ್ರತಃ ।
ಶ್ಯೇನಃ । ನ । ವಂಸು । ಸೀದತಿ || ೩ |

|| ಸಾಯಣಭಾಷ್ಯಂ ||

ಸುವ್ರತಃ ಸುಕರ್ಮಾ ಸ ಸೋಮ ಆಯುಭಿರ್ಮನುಷ್ಯೈರೃತ್ವಿಗ್ಭಿರ್ಮರ್ಮೃಜಾನಃ ಶೋಧ್ಯಮಾನ ಇಭೋ ಗತಭಯೋ ರಾಜೇವ ಯಥಾ ರಾಜಾ ಶ್ಯೇನೋ ನ ಯಥಾ ಚ ಶ್ಯೇನಸ್ತಥಾ ವಂಸೂದಕೇಷು ವಸತೀವರೀಷು ಸೀದತಿ ||

|| ಪ್ರತಿಪದಾರ್ಥ ||

**ಸುವ್ರತಃ**—ಉತ್ತಮವಾದ ಕರ್ಮವುಳ್ಳ | **ಸಃ**—ಆ ಸೋಮದೇವನು | **ಆಯುಭಿಃ**—ಋತ್ವಿಕ್ಕುಗಳಿಂದ | **ಮರ್ಮೃಜಾನಃ**—ಶೋಧಿಸಲ್ಪಟ್ಟವನಾಗಿ | **ರಾಜೇವ**—ಪ್ರಭುವಿನಂತೆ | **ಇಭಃ**—ಭಯರಹಿತನಾಗಿ | **ಶ್ಯೇನೋ ನ**—ಶ್ಯೇನ ಪಕ್ಷಿಯು ಉದಕಗಳಲ್ಲಿ ಕುಳಿತಿರುವಂತೆ | **ವಂಸು**—ವಸತೀವರೀ ಸಂಜ್ಞಕವಾದ **ಉದಕಗಳಲ್ಲಿ** | **ಸೀದತಿ**—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಉತ್ತಮವಾದ ಕರ್ಮವುಳ್ಳ ಆ ಸೋಮದೇವನು ಋತ್ವಿಕ್ಕುಗಳಿಂದ ಶೋಧಿಸಲ್ಪಟ್ಟವನಾಗಿಯೂ ಪ್ರಭುವಿನಂತೆ ಭಯರಹಿತನಾಗಿಯೂ ಸಹ ಶ್ಯೇನ ಪಕ್ಷಿಯು ಉದಕಗಳಲ್ಲಿ ಕುಳಿತಿರುವಂತೆ ವಸತೀವರಿಸಂಜ್ಞಕವಾದ ಉದಕಗಳಲ್ಲಿ ಕುಳಿತುಕೊಳ್ಳುತ್ತಾನೆ.

## English Translation.

He, the object of pious observances, cleansed by the priests, fearless as a king, sits on the waters like a hawk.

|| ಸಂಹಿತಾಪಾಠಃ ||

ಸ ನೋ ವಿಶ್ವಾ ದಿವೋ ವಸೂತೋ ಪೃಥಿವ್ಯಾ ಅಧಿ |
ಪುನಾನ ಇಂದವಾ ಭರ || ೪ ||

|| ಪದಪಾಠಃ ||

ಸಃ | ನಃ | ವಿಶ್ವಾ | ದಿವಃ | ವಸು | ಉತೋ ಇತಿ | ಪೃಥಿವ್ಯಾಃ | ಅಧಿ |
ಪುನಾನಃ | ಇಂದೋ ಇತಿ | ಆ | ಭರ || ೪ ||

|| ಸಾಯಣಭಾಷ್ಯಂ ||

**ಹೇ ಇಂದೋ ಸೋಮ ಪುನಾನಃ ಪವಮಾನಸ್ತ್ವಂ ದಿವೋಽಧಿ ದಿವಿ ಸ್ಥಿತಾನ್ಯುತೋ ಅಪಿ ಚ ಪೃಥಿವ್ಯಾ ಅಧಿ ಪೃಥಿವ್ಯಾಂ ಸ್ಥಿತಾನಿ | ಅಧೀತಿ ಸಪ್ತಮ್ಯರ್ಥಾನುವಾದಃ | ವಿಶ್ವಾ ವಿಶ್ವಾನಿ ವಸು ವಸೂನಿ ನೋಽಸ್ಮಭ್ಯಮಾ ಭರ | ಆಹರ ||**

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೆ | **ಸಃ**—ಹಿಂಡಲ್ಪಟ್ಟ ನೀನು | **ಪುನಾನಃ**—ಶುದ್ಧಿಕಾರಕನಾಗಿ | **ದಿವಃ ಅಧಿ**—ದ್ಯುಲೋಕಸ್ಥವಾಗಿರುವುದೂ | **ಉತೋ**—ಮತ್ತು | **ಪೃಥಿವ್ಯಾಃ**—ಪೃಥ್ವಿಯ ಮೇಲಿರುವುದೂ ಆದ | **ವಿಶ್ವಾ**—ಸಕಲವಾದ | **ವಸು**—ಧನಗಳನ್ನೂ | **ನಃ**—ನಮಗೆ | **ಆ ಭರ**—ಒದಗಿಸಿ ಕೊಡು.

|| ಭಾವಾರ್ಥ ||

ಎಲೈ ಸೋಮದೇವನೇ, ಹಿಂಡಲ್ಪಟ್ಟ ನೀನು ಶುದ್ಧಿಕಾರಕನಾಗಿ ದ್ಯುಲೋಕಸ್ಥವಾಗಿರುವುದೂ, ಪೃಥ್ವಿಯ ಮೇಲಿರುವುದೂ ಆದ ಸಕಲ ಧನಗಳನ್ನೂ ನಮಗೆ ಒದಗಿಸಿಕೊಡು.

**English Translation.**

Indu, when you are purified, bring us all the treasures that are in heaven and upon earth.

# ಐವತ್ತೆಂಟನೆಯ ಸೂಕ್ತವು



|| ಸಾಯಣಭಾಷ್ಯಂ ||

**ತರತ್ಸ ಇತಿ ಚತುರ್ಋಚಂ ಚತುಸ್ತ್ರಿಂಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ತರತ್ಸ ಇತ್ಯನುಕ್ರಾಂತಂ । ಉಕ್ತೋ ವಿನಿಯೋಗಃ ||**

ಅನುವಾದವು— ತರತ್ಸಃ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತನಾಲ್ಕನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—ತರತ್ಸಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೮

ಮಂಡಲ-೯ || ಅನುವಾಕ-೨ || ಸೂಕ್ತ-೫೮ ||

ಅಷ್ಟಕ-೭ || ಅಧ್ಯಾಯ-೧ || ವರ್ಗ-೧೫ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||

|| ಋಷಿಃ—ಅವತ್ಸಾರಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

**ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ ।**

**ತರತ್ಸ ಮಂದೀ ಧಾವತಿ || ೧ ||**

॥ ಪದಪಾಠಃ ॥

ತರತ್ । ಸಃ । ಮಂದೀ । ಧಾವತಿ । ಧಾರಾ । ಸುತಸ್ಯ । ಅಂಧಸಃ ।

ತರತ್ । ಸಃ । ಮಂದೀ । ಧಾವತಿ ॥ ೧ ॥

॥ ಸಾಯಣಭಾಷ್ಯಂ ॥

ಮಂದೀ ದೇವಾನಾಂ ಹರ್ಷಕರಃ ಸ ಸೋಮಸ್ತರತ್ಸ್ತೋತೄನ್ಪಾಪ್ಮನಃ ಸಕಾಶಾತ್ತಾರಯನ್ಧಾವತಿ । ಪವತೇ । ತದೇವ ದರ್ಶಯತಿ । ಸುತಸ್ಯಾಭಿಷುತಸ್ಯಾಂಧಸೋ ದೇವಾನಾಮನ್ನಾತ್ಮಕಸ್ಯ ಸೋಮಸ್ಯ ಧಾರಾ ಧಾವತೀತಿ । ಪುನರಪಿ ತದೇವಾಹಾತ್ಯಂತಾದರಾರ್ಥಂ ತರತ್ಸ ಮಂದೀ ಧಾವತೀತಿ । ಯದ್ವಾ । ಅಸ್ಯಾ ಋಚೋ ಯಾಸ್ಕೇನೋಕ್ತೋಽರ್ಥೋ ದ್ರಷ್ಟವ್ಯಃ । ತದ್ಯಥಾ । ತರತಿ ಸ ಪಾಪಂ ಸರ್ವಂ ಮಂದೀ ಯಃ ಸ್ತೌತಿ ಧಾವತಿ ಗಚ್ಛತ್ಯೂರ್ಧ್ವಾಂ ಗತಿಂ । ಧಾರಾ ಸುತಸ್ಯಾಂಧಸೋ ಧಾರಯಾಭಿಷುತಸ್ಯ ಸೋಮಸ್ಯ ಮಂತ್ರಪೂತಸ್ಯ ವಾಚಾ ಸ್ತುತಸ್ಯ । ನಿ. ೧೩-೬ । ಇತಿ ॥

॥ ಪ್ರತಿಪದಾರ್ಥ ॥

**ಮಂದೀ**—ದೇವತೆಗಳಿಗೆ ಹರ್ಷಕಾರಕನಾದ । **ಸಃ**—ಸೋಮದೇವನು । **ತರತ್**—ಸ್ತೋತೃಗಳನ್ನು ಪಾಪದಿಂದ ದಾಟಿಸುತ್ತಾ । **ಧಾವತಿ**—ವೇಗವಾಗಿ ಪ್ರವಹಿಸುತ್ತಾನೆ । **ಸುತಸ್ಯ**—ಹಿಂಡಲ್ಪಟ್ಟ । **ಅಂಧಸಃ**—ಸೋಮದ । **ಧಾರಾ**—ಪ್ರವಾಹವು ವೇಗವಾಗಿ ಹರಿಯುತ್ತದೆ । **ತರತ್**—ಯಜಮಾನರನ್ನು ಕಷ್ಟದಿಂದ ದಾಟಿಸುತ್ತಾ **ಸಃ**—ಸೋಮದೇವನು । **ಮಂದೀ**—ಹರ್ಷವನ್ನುಂಟುಮಾಡುತ್ತಾ । **ಧಾವತಿ**—ಶೀಘ್ರವಾಗಿ ಸಂಚರಿಸುತ್ತಾನೆ.

॥ ಭಾವಾರ್ಥ ॥

ದೇವತೆಗಳಿಗೆ ಹರ್ಷಕಾರಕನಾದ ಸೋಮದೇವನು ಸ್ತೋತೃಗಳನ್ನು ಪಾಪದಿಂದ ದಾಟಿಸುತ್ತ ವೇಗವಾಗಿ ಪ್ರವಹಿಸುತ್ತಾನೆ. ಹಿಂಡಲ್ಪಟ್ಟ ಸೋಮದ ಪ್ರವಾಹವು ವೇಗವಾಗಿ ಹರಿಯುತ್ತದೆ.

## English Translation.

He the delighter (of the gods) flows rescuing (his worshippers from sin); the stream of the effused beverage (flows); he the delighter (of the gods) flows rescuing (his worshippers from sin).

॥ ಸಂಹಿತಾಪಾಠಃ ॥

ಉಸ್ರಾ ವೇದ ವಸೂನಾಂ ಮರ್ತಸ್ಯ ದೇವ್ಯವಸಃ ।

ತರತ್ಸ ಮಂದೀ ಧಾವತಿ ॥ ೨ ॥

|| ಪದಪಾಠಃ ||

ಉಸ್ರಾ । ವೇದ । ವಸೂನಾಂ । ಮರ್ತಸ್ಯ । ದೇವೀ । ಅವಸಃ ।

ತರತ್ । ಸಃ । ಮಂದೀ । ಧಾವತಿ || ೨ ||

|| ಸಾಯಣಭಾಷ್ಯಂ ||

ವಸೂನಾಂ ಧನಾನಾಮುಸ್ರೋತ್ಸ್ರೆರಣಶೀಲಾ ಪ್ರದಾತ್ರೀ ದೇವೀ ದ್ಯೋತಮಾನಾ ಸ್ತೂಯಮಾನಾ ವಾ ಯಸ್ಯ ಸೋಮಸ್ಯ ಧಾರಾ ಮರ್ತಸ್ಯ ಮನುಷ್ಯಂ ಯಜಮಾನಮವಸೋ ರಕ್ಷಿತುಂ ವೇದ ಜಾನಾತಿ । ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

**ವಸೂನಾಂ**— ಧನಗಳನ್ನು । **ಉಸ್ರಾ**— ಪ್ರಭೂತವಾಗಿ ಕೊಡತಕ್ಕದ್ದೂ । **ದೇವೀ**— ಪ್ರಭಾಯುತವಾದುದೂ ಆದ ಸೋಮಧಾರೆಯು । **ಮರ್ತಸ್ಯ**— ಮಾನವನಾದ ಯಜಮಾನನನ್ನು । **ಅವಸಃ**— ರಕ್ಷಿಸಲು । **ವೇದ**— ತಿಳಿದಿರುತ್ತದೆ । **ಮಂದೀ**— ದೇವತೆಗಳಿಗೆ ಹರ್ಷಕಾರಕನಾದ । **ಸಃ**— ಸೋಮದೇವನು । **ತರತ್**— ಯಜಮಾನರನ್ನು ಪಾಪದಿಂದ ದಾಟಿಸುತ್ತಾ । **ಧಾವತಿ**— ವೇಗವಾಗಿ ಸಂಚರಿಸುತ್ತಾನೆ.

|| ಭಾವಾರ್ಥ ||

ಧನಗಳನ್ನು ಪ್ರಭೂತವಾಗಿ ಕೊಡತಕ್ಕದ್ದೂ, ಪ್ರಭಾಯುತವಾದುದೂ ಆದ ಸೋಮಧಾರೆಯು ಮಾನವನಾದ ಯಜಮಾನನನ್ನು ರಕ್ಷಿಸಬೇಕೆಂದು ತಿಳಿದಿರುತ್ತದೆ. ದೇವತೆಗಳಿಗೆ ಹರ್ಷಕಾರಕನಾದ ಸೋಮದೇವನು ಯಜಮಾನನನ್ನು ಪಾಪದಿಂದ ದಾಟಿಸುತ್ತ ವೇಗವಾಗಿ ಸಂಚರಿಸುತ್ತಾನೆ.

## English Translation.

The brilliant (stream), the bestower of riches, knows how to protect the worshipper: he the delighter (of the gods) flows rescuing (his worshippers from sin).

|| ಸಂಹಿತಾಪಾಠಃ ||

ಧ್ವಸ್ರಯೋಃ ಪುರುಷಂತ್ಯೋರಾ ಸಹಸ್ರಾಣಿ ದದ್ಮಹೇ ।

ತರತ್ಸ ಮಂದೀ ಧಾವತಿ || ೩ ||

|| ಪದಪಾಠಃ ||

ಧ್ವಸ್ರಯೋಃ । ಪುರುऽಸಂತ್ಯೋಃ । ಆ । ಸಹಸ್ರಾಣಿ । ದದ್ಮಹೇ ।

ತರತ್ । ಸಃ । ಮಂದೀ । ಧಾವತಿ || ೩ ||

॥ ಸಾಯಣಭಾಷ್ಯಂ ॥

ಧ್ವಸ್ರಯೋಃ ಪುರುಷಂತ್ಯೋಃ । ಧ್ವಸ್ರಃ ಕಶ್ಚಿದ್ರಾಜಾ ಪುರುಷಂತಿಃ ಕಶ್ಚಿತ್। ತಯೋರುಭಯೋಃ॥ ಅತ್ರೇತರೇತರಯೋಗವಿವಕ್ಷಯಾ ದ್ವಿವಚನಂ ದ್ರಷ್ಟವ್ಯಂ ॥ ಸಹಸ್ರಾಣಿ ಧನಾನಾಂ ಸಹಸ್ರಾಣ್ಯಾ ದದ್ಮಹೇ-ವಯಂ ಪ್ರತಿಗೃಹ್ಣೀಮಃ । ತದಸ್ಮಾಭಿಃ ಪ್ರತಿಗೃಹೀತಂ ಧನಮುತ್ತಮಮಸ್ತ್ವಿತ್ಯೃಷಿಃ ಸೋಮಂ ಪ್ರಾರ್ಥಯತ ಇತಿ ಸೋಮಸ್ಯ ಸ್ತುತಿಃ । ಸಿದ್ಧಮನ್ಯತ್ । ಯಥಾವತ್ಸಾರ ಏತಯೋರ್ಧನಾನಿ ಪ್ರರಿಜಗ್ರಾಹ ಏವಂ ತರಂತಪುರುಮೀಳ್ಹೌ ಪ್ರತಿಜಗೃಹತುಃ । ತಥಾ ಚ ಶಾಟ್ಯಾಯನಕಂ । ಅಥ ಹ ವೈ ತರಂತಪುರುಮೀಳ್ಹೌ ವೈದದಶ್ವೀ ಧ್ವಸ್ರಯೋಃ ಪುರುಷಂತ್ಯೋರ್ಬಹು ಪ್ರತಿಗೃಹ್ಯ ಗರಗಿರಾವಿವ ಮೇನಾತೇ ತೌ ಹ ಸ್ಮಾಂಗುಲ್ಯಾ ಸಾತಂ ಪ್ರತಿ ಮನ್ಮೃಶಾತೇ ತಾವಕಾಮಯೇತಾಮಸಾತಂ ನಾವಿದಂ ಸಾತಂ ಸ್ಯಾದಾತ್ತಮಿನ್ವೈವ ನ ಪ್ರತಿಗೃಹೀತಮಿತಿ ತಾವೇತಚ್ಚತುರ್ಋಚಮಪಶ್ಯತಾಂ ತೇನ ಪ್ರತ್ಯೈತಾಂ ತತೋ ವೈ ತಯೋ-ರಸಾತಂ ಸಾತಮಭವದಾತ್ತಮಿನ್ವೈವ ನ ಪ್ರತಿಗೃಹೀತಂ ಸ ಯಃ ಪ್ರತಿಗೃಹ್ಯ ಕಾಮಯೇತೇತ್ಯಾದಿ ॥

॥ ಪ್ರತಿಪದಾರ್ಥ ॥

ಧ್ವಸ್ರಯೋಃ—ಧ್ವಸ್ರನೆಂಬ ರಾಜನಿಂದಲೂ । ಪುರುಷಂತ್ಯೋಃ—ಪುರುಷಂತಿಯೆಂಬ ರಾಜನಿಂದಲೂ । ಸಹಸ್ರಾಣಿ—ಅಪರಿಮಿತವಾದ ಧನಗಳನ್ನು । ಆ ದದ್ಮಹೇ—ನಾವು ಸ್ವೀಕರಿಸಿದ್ದೇವೆ । ಮಂದೀ—ಹರ್ಷಕಾರಕನಾದ । ಸಃ— ಸೋಮದೇವನು । ತರತ್— ಯಜಮಾನರನ್ನು ಪಾಪದಿಂದ ದಾಟಿಸುತ್ತಾ । ಧಾವತಿ—ವೇಗವಾಗಿ ಸಂಚರಿಸುತ್ತಾನೆ.

॥ ಭಾವಾರ್ಥ ॥

ಧ್ವಸ್ರನೆಂಬ ರಾಜನಿಂದಲೂ, ಪುರುಷಂತಿಯೆಂಬ ರಾಜನಿಂದಲೂ ಅಪರಿಮಿತವಾದ ಧನಗಳನ್ನು ನಾವು ಸ್ವೀಕರಿಸಿದ್ದೇವೆ. ಹರ್ಷಕಾರಕನಾದ ಸೋಮದೇವನು ಯಜಮಾನರನ್ನು ಪಾಪದಿಂದ ದಾಟಿಸುತ್ತ ವೇಗವಾಗಿ ಸಂಚರಿಸುತ್ತಾನೆ.

## English Translation.

We have received thousands from Dhwasra and Purushanti: he the delighter (of the gods) flows rescuing (his worshippers from sin).

॥ ಸಂಹಿತಾಪಾಠಃ ॥

ಆ ಯಯೋಸ್ತ್ರಿಂಶತಂ ತನಾ ಸಹಸ್ರಾಣಿ ಚ ದದ್ಮಹೇ ।
ತರತ್ಸ ಮಂದೀ ಧಾವತಿ ॥ ೪ ॥

|| ಪದಪಾಠಃ ||

ಆ | ಯಯೋಃ | ತ್ರಿಂಶತಂ | ತನಾ | ಸಹಸ್ರಾಣಿ | ಚ | ದದ್ಮಹೇ |

ತರತ್ | ಸಃ | ಮಂದೀ | ಧಾವತಿ || ೪ ||

|| ಸಾಯಣಭಾಷ್ಯಂ ||

ಯಯೋರ್ಧ್ವಸ್ರಪುರುಷಂತ್ಯೋಸ್ತ್ರಿಂಶತಂ ತ್ರೀಣಿಶತಾನಿ ಸಹಸ್ರಾಣಿ ತನಾ ವಸ್ತ್ರಾಣ್ಯಾ ದದ್ಮಹೇ ವಯಂ ಪ್ರತಿಗೃಹ್ಣೀಮಃ ತಯೋರಸ್ಮಾಭಿಃ ಪ್ರತಿಗೃಹೀತಂ ತತ್ಸರ್ವಮಪ್ರತಿಗೃಹೀತಮಸ್ತ್ವಿತಿ ಸೋಮನ್ಯೃಷಿಃ ಪ್ರಾರ್ಥಯತೆ ಇತಿ ಸೋಮಸ್ಯೈವ ಸ್ತುತಿಃ | ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

ಯಯೋಃ—ಧ್ವಸ್ರ ಮತ್ತು ಪುರುಷಂತಿಗಳೆಂಬ ಆ ಇಬ್ಬರು ರಾಜರುಗಳಿಂದಲೂ | ತ್ರಿಂಶತಿಂ—ಮುನ್ನೂರರಿಂದ ಗುಣಿತವಾದ | ಸಹಸ್ರಾಣಿ—ಸಹಸ್ರಸಂಖ್ಯೆಯುಳ್ಳ | ತನಾ ಚ—ವಸ್ತ್ರಗಳನ್ನೂ | ಆ ದದ್ಮಹೇ—ನಾವು ಸ್ವೀಕರಿಸಿದ್ದೇವೆ | ಮಂದೀ—ಹರ್ಷಕಾರಕನಾದ | ಸಃ—ಸೋಮದೇವನು | ತರತ್—ಯಜಮಾನರನ್ನು ಪಾಪದಿಂದ ದಾಟಿಸುತ್ತ | ಧಾವತಿ—ವೇಗವಾಗಿ ಸಂಚರಿಸುತ್ತಾನೆ.

|| ಭಾವಾರ್ಥ ||

ಧ್ವಸ್ರ ಮತ್ತು ಪುರುಷಂತಿಗಳೆಂಬ ಇಬ್ಬರು ರಾಜರುಗಳಿಂದಲೂ ಸಹ ಮುನ್ನೂರರಿಂದ ಗುಣಿತವಾಗುವ ಸಹಸ್ರ ಸಂಖ್ಯೆಯುಳ್ಳ (೧೦೦೦×೩೦೦) ವಸ್ತ್ರಗಳನ್ನೂ ಸ್ವೀಕರಿಸಿದ್ದೇವೆ. ಹರ್ಷಕಾರಕನಾದ ಸೋಮದೇವನು ಯಜಮಾನರನ್ನು ಪಾಪದಿಂದ ದಾಟಿಸುತ್ತ ವೇಗವಾಗಿ ಸಂಚರಿಸುತ್ತಾನೆ.

### English Translation.

We have received from those two three hundred thousand garments; he the delighter ( of the gods ) flows rescuing ( his worshippers from sin ).

## ಐವತ್ತೊಂಭತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

ಪವಸ್ವೇತಿ ಚತುರ್ಋಚಂ ಪಂಚತ್ರಿಂಶಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಪವಸ್ವೇತ್ಯನುಕ್ರಾಂತಂ | ಗತೋ ವಿನಿಯೋಗಃ ||

ಅನುವಾದವು—ಪವಸ್ವ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತೈದನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—ಪವಸ್ವ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೯

ಮಂಡಲ–೯ ॥ ಅನುವಾಕ–೩ ॥ ಸೂಕ್ತ–೫೯ ॥

ಅಷ್ಟಕ–೭ ॥ ಅಧ್ಯಾಯ–೧ ॥ ವರ್ಗ–೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥

ಋಷಿಃ—ಅವತ್ಸಾರಃ ॥

ದೇವತಾ—ಪವಮಾನಃ ಸೋಮಃ ॥

ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪವಸ್ವ ಗೋಜಿದಶ್ವಜಿದ್ವಿಶ್ವಜಿತ್ಸೋಮ ರಣ್ಯಜಿತ್ ।

ಪ್ರಜಾವದ್ರತ್ನಮಾ ಭರ ॥ ೧ ॥

॥ ಪದಪಾಠಃ ॥

ಪವಸ್ವ । ಗೋಽಜಿತ್ । ಅಶ್ವಽಜಿತ್ । ವಿಶ್ವಽಜಿತ್ । ಸೋಮ । ರಣ್ಯಽಜಿತ್ ।

ಪ್ರಜಾಽವತ್ । ರತ್ನಂ । ಆ । ಭರ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ಗೋಜಿಚ್ಛತ್ರೂಣಾಂ ಗವಾಂ ಜೇತಾಶ್ವಜಿದಶ್ವಾನಾಮಪಿ ಜೇತಾ ವಿಶ್ವಜಿದ್ವಿಶ್ವಸ್ಯ ಜಗತೋ ಜೇತಾ ರಣ್ಯಜಿದ್ರಮಣೀಯಸ್ಯ ಧನಸ್ಯಾಪಿ ಜೇತಾ ತ್ವಂ ಪವಸ್ವ । ಧಾರಯಾ ಕ್ಷರ । ಅಪಿ ಚಾಸ್ಮಭ್ಯಂ ಪ್ರಜಾವತ್ಪುತ್ರಾದ್ಯುಪೇತಂ ರತ್ನಂ ರಮಣೀಯಂ ಧನಮಾ ಭರ । ಆಹರ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ, । **ಗೋಜಿತ್**—ಗೋವುಗಳನ್ನು ಜಯಿಸುವವನೂ । **ಅಶ್ವಜಿತ್**—ಅಶ್ವಗಳನ್ನು ಜಯಿಸುವವನೂ । **ವಿಶ್ವಜಿತ್**—ಜಗತ್ತನ್ನೆಲ್ಲಾ ಜಯಿಸುವವನೂ । **ರಣ್ಯಜಿತ್**—ರಮಣೀಯವಾದ ಧನಗಳನ್ನು ಜಯಿಸುವವನೂ ಆದ ನೀನು । **ಪವಸ್ವ**—ಧಾರಾರೂಪದಲ್ಲಿ ಪ್ರವಹಿಸು । **ಪ್ರಜಾವತ್**—ಪುತ್ರಾದಿಗಳಿಂದ ಕೂಡಿದುದೂ । **ರತ್ನಂ**—ರಮಣೀಯವಾದುದೂ ಆದ ಧನವನ್ನು । **ಆ ಭರ**—ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಗೋವುಗಳನ್ನು ಜಯಿಸುವವನೂ, ಅಶ್ವಗಳನ್ನು ಜಯಿಸುವವನೂ, ಜಗತ್ತನ್ನೆಲ್ಲಾ ಜಯಿಸುವವನೂ, ರಮಣೀಯವಾದ ಧನಗಳನ್ನು ಜಯಿಸುವವನೂ ಆದ ನೀನು ಧಾರಾರೂಪದಲ್ಲಿ ಪ್ರವಹಿಸು. ಪುತ್ರಾದಿಗಳಿಂದ ಕೂಡಿದುದೂ ರಮಣೀಯವಾದುದೂ ಆದ ಧನವನ್ನು ಒದಗಿಸು.

### English Translation.

Flow, Soma, eonqueror of cattle, of horses, of all things, of desirable wealth; bring us riches with male offspring.

॥ ಸಂಹಿತಾಪಾಠಃ ॥

ಪವಸ್ವಾದ್ಭ್ಯೋ ಅದಾಭ್ಯಃ ಪವಸ್ವೌಷಧೀಭ್ಯಃ ।
ಪವಸ್ವ ಧಿಷಣಾಭ್ಯಃ ॥ ೨ ॥

॥ ಪದಪಾಠಃ ॥

ಪವಸ್ವ । ಅತ್ಽಭ್ಯಃ । ಅದಾಭ್ಯಃ । ಪವಸ್ವ । ಓಷಧೀಭ್ಯಃ ।
ಪವಸ್ವ । ಧಿಷಣಾಭ್ಯಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಸೋಮ ತ್ವಮದ್ಭ್ಯೋ ವಸತೀವರೀಭ್ಯೋಽದಾಭ್ಯೋಽಂಶುಭ್ಯಶ್ಚ ಪವಸ್ವ । ಕ್ಷರ । ಅಪಿ ಚೌಷಧೀಭ್ಯಃ ಪವಸ್ವ । ಕ್ಷರ । ಕಿಂ ಚ ಧಿಷಣಾಭ್ಯೋ ಗ್ರಾವಭ್ಯಃ ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ), ಅದ್ಭ್ಯಃ—ವಸತೀವರೀಸಂಜ್ಞಕವಾದ ಉದಕಗಳೊಡನೆಯೂ । **ಅದಾಭ್ಯಃ**—ನಿನ್ನ ಲತಾತಂತುಗಳೊಡನೆಯೂ । **ಪವಸ್ವ**—ಸ್ರವಿಸು । **ಓಷಧೀಭ್ಯಃ**—ಓಷಧಿಗಳೊಡನೆಯೂ । **ಪವಸ್ವ**—ಧಾರಾರೂಪದಲ್ಲಿ ಸ್ರವಿಸು । **ಧಿಷಣಾಭ್ಯಃ**—ಹಿಂಡುವ ಕಲ್ಲುಗಳಿಂದ । **ಪವಸ್ವ**—ಪ್ರವಹಿಸು ।

॥ ಭಾವಾರ್ಥ ॥

ಎಲೈ ಸೋಮದೇವನೇ, ವಸತೀವರೀಸಂಜ್ಞಕವಾದ ಉದಕಗಳೊಡನೆಯೂ, ನಿನ್ನ ಲತಾತಂತುಗಳೊಡನೆಯೂ ಸ್ರವಿಸು. ಓಷಧಿಗಳಿಂದಲೂ ಹಿಂಡುವ ಕಲ್ಲುಗಳಿಂದಲೂ ಪ್ರವಹಿಸು.

### English Translation.

Flow with waters and with filaments, flow with herbs, flow with the stones.

॥ ಸಂಹಿತಾಪಾಠಃ ॥

ತ್ವಂ ಸೋಮ ಪವಮಾನೋ ವಿಶ್ವಾನಿ ದುರಿತಾ ತರ ।
ಕವಿಃ ಸೀದ ನಿ ಬರ್ಹಿಷಿ ॥ ೩ ॥

॥ ಪದಪಾಠಃ ॥

ತ್ವಂ । ಸೋಮ । ಪವಮಾನಃ । ವಿಶ್ವಾನಿ । ದುಃಽಇತಾ । ತರ ।

ಕವಿಃ । ಸೀದ । ನಿ । ಬರ್ಹಿಷಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪವಮಾನಃ ಪೂಯಮಾನಃ ಕವಿಃ ಕ್ರಾಂತಕರ್ಮಾ ತ್ವಂ ವಿಶ್ವಾನಿ ಸರ್ವಾಣಿ ದುರಿತಾನಿ ರಾಕ್ಷಸೈಃ ಕೃತಾನ್ಯುಪದ್ರವಾಣಿ ತರ । ನಿರಾಕುರು । ಅಸ್ಮಿನ್ಬರ್ಹಿಷಿ ನಿ ಷೀದ ಚ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ, । ಪವಮಾನಃ—ಶುದ್ಧಿಕಾರಕನೂ । ಕವಿಃ—ಮೇಧಾವಿಯೂ ಆದ । ತ್ವಂ—ನೀನು । ವಿಶ್ವಾನಿ—ಸಕಲ । ದುರಿತಾ—ಆಪತ್ತುಗಳನ್ನೂ । ತರ—ದೂರಕ್ಕೆ ತಳ್ಳು । ಬರ್ಹಿಷಿ—ದರ್ಭಾಸನಗಳ ಮೇಲೆ । ನಿ ಷೀದ—ಕುಳಿತುಕೊ.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಕಾರಕನೂ, ಮೇಧಾವಿಯೂ ಆದ ನೀನು ಸಕಲ ಆಪತ್ತುಗಳನ್ನು ದೂರಕ್ಕೆ ತಳ್ಳು. ದರ್ಭಾಸನಗಳ ಮೇಲೆ ಕುಳಿತುಕೊ.

## English Translation.

Soma, do you who are the purifier, the sage, over-come all hindrances; sit down ou the sacred gass.

॥ ಸಂಹಿತಾಪಾಠಃ ॥

ಪವಮಾನ ಸ್ವರ್ವಿದೋ ಜಾಯಮಾನೋಽಭವೋ ಮಹಾನ್ ।

ಇಂದೋ ವಿಶ್ವಾಁ ಅಭೀದಸಿ ॥ ೪ ॥

॥ ಪದಪಾಠಃ ॥

ಪವಮಾನ । ಸ್ವಃ । ವಿದಃ । ಜಾಯಮಾನಃ । ಅಭವಃ । ಮಹಾನ್ ।

ಇಂದೋ ಇತಿ । ವಿಶ್ವಾನ್ । ಅಭಿ । ಇತ್ । ಅಸಿ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಪವಮಾನ ಸೋಮ ತ್ವಂ ಸ್ವಃ ಸರ್ವಂ ವಿದಃ । ಯಜಮಾನಾಯ ಪ್ರಯಚ್ಛ । ಅಪಿ ಚ ಜಾಯಮಾನಃ ಪ್ರಾದುರ್ಭವನ್ನೇವ ಮಹಾನ್ ಪೂಜನೀಯೋಽಭವಃ । ಅಸಿ । ಕಿಂ ಚ ಹೇ ಇಂದೋ ಸೋಮ ತ್ವಂ ವಿಶ್ವಾನೇವ ಸರ್ವಾನೇವ ಶತ್ರೂನಭ್ಯಸಿ । ತೇಜಸಾಭಿಭವಸಿ ॥**

॥ಪ್ರತಿಪದಾರ್ಥ॥

**ಪವಮಾನ**—ಶುದ್ಧಿಕಾರಕನಾದ ಎಲೈ ಸೋಮದೇವನೇ, । **ಸ್ವಃ**—ಅಪೇಕ್ಷಿತವಾದ ಸಕಲವನ್ನೂ । **ವಿದಃ**—ಯಜಮಾನನಿಗೆ ಕೊಡು । **ಜಾಯಮಾನಃ**—ಉತ್ಪತ್ತಿ ಕಾಲದಲ್ಲಿಯೇ । **ಮಹಾನ್**—ಮಹದ್ಗುಣಗಳುಳ್ಳವನಾಗಿ । **ಅಭವಃ**—ಆಗಿದ್ದೀಯೆ । **ಇಂದೋ**—ಎಲೈ ಸೋಮದೇವನೇ, । **ವಿಶ್ವಾನಿತ್**—ಸಕಲ ಶತ್ರುಗಳನ್ನೂ । **ಅಭ್ಯಸಿ**—ಸೋಲಿಸಿ ನಾಶಪಡಿಸು.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ಅಪೇಕ್ಷಿತವಾದ ಸಕಲವನ್ನೂ ಯಜಮಾನನಿಗೆ ಕೊಡು. ನೀನು ಉತ್ಪತ್ತಿಕಾಲದಲ್ಲಿಯೇ ಮಹದ್ಗುಣಗಳುಳ್ಳವನಾಗಿ ಆಗಿದ್ದೀಯೆ, ಎಲೈ ಸೋಮದೇವನೇ, ಸಕಲ ಶತ್ರುಗಳನ್ನೂ ನಾಶಪಡಿಸು.

## English Translation.

O purifying Soma, grant all boons; as soon as you are born you ar great; Indu, you overcome all (foes).

# ಅರವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರ ಗಾಯತ್ರೇಣೇತಿ ಚತುರ್ಋಚಂ ಷಟ್ತ್ರಿಂಶಂ ಸೂಕ್ತಂ ಕಾಶ್ಯಪಸ್ಯಾವತ್ಸಾರಸ್ಯಾರ್ಷಂ । ತೃತೀಯಾ ಪುರಉಷ್ಣಿಗಾದ್ಯದ್ವಾದಶಕಾ ದ್ವ್ಯಷ್ಟಕಾ । ಶಿಷ್ಟಾ ಗಾಯತ್ರ್ಯಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಾಂತಂ । ಪ್ರ ಗಾಯತ್ರೇಣೋಪಾಂತ್ಯಾ ಪುರಉಷ್ಣಿಗಿತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು—**ಪ್ರ ಗಾಯತ್ರೇಣ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂವತ್ತಾರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಾಶ್ಯಪಃ ಅವತ್ಸಾರಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ಈ ಸೂಕ್ತದ ಮೂರನೆಯ ಋಕ್ಕು ಪುರಉಷ್ಣಿಕ್ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಮೂರುಪಾದಗಳಿದ್ದು ಮೊದಲನೆಯ ಪಾದದಲ್ಲಿ ಹನ್ನೆರಡಕ್ಷರಗಳೂ ಉಳಿದ ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದಲ್ಲಿ ಅದು ಪುರಉಷ್ಣಿಕ್‌ಛಂದಸ್ಸೆನಿಸುವುದು. ಉಳಿದ ಋಕ್ಕುಗಳು ಗಾಯತ್ರೀಛಂದಸ್ಸವು. ಅನುಕ್ರಮಣಿಕೆಯಲ್ಲಿ—**ಪ್ರ ಗಾಯತ್ರೇಣೋಪಾಂತ್ಯಾ ಪುರ ಉಷ್ಣಿಕ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೦

ಮಂಡಲ-೯ ॥ ಅನುವಾದ-೨ ॥ ಸೂಕ್ತ-೬೦ ॥
ಅಷ್ಟಕ-೭ ॥ ಅಧ್ಯಾಯ-೧ ॥ ವರ್ಗ-೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಅವತ್ಸಾರಃ ॥
॥ ದೇವತಾ—ಪವಮಾನ ಸೋಮಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಪ್ರ ಗಾಯತ್ರೇಣ ಗಾಯತ ಪವಮಾನಂ ವಿಚರ್ಷಣಿಂ ।**

**ಇಂದುಂ ಸಹಸ್ರಚಕ್ಷಸಂ ॥ ೧ ॥**

॥ ಪದಪಾಠಃ ॥

**ಪ್ರ । ಗಾಯತ್ರೇಣ । ಗಾಯತ । ಪವಮಾನಂ । ವಿಽಚರ್ಷಣಿಂ ।**

**ಇಂದುಂ । ಸಹಸ್ರಽಚಕ್ಷಸಂ ॥ ೧ ॥**

॥ ಸಾಯಣಭಾಷ್ಯಂ ॥

**ವಿಚರ್ಷಣಿಂ ವಿದ್ರಷ್ಟಾರಂ ಸಹಸ್ರಚಕ್ಷಸಂ ಬಹುದರ್ಶನಂ ಪವಮಾನಂ ಪೂಯಮಾನಮಿಂದುಂ ಸೋಮಂ ಗಾಯತ್ರೇಣ ಗಾಯತ್ರನಾಮಧೇಯೇನ ಸಾಮ್ನಾ ಪ್ರ ಗಾಯತ । ಹೇ ಸ್ತೋತಾರಃ ಗಾನಂ ಕುರುತ । ಸ್ತುತೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವಿಚರ್ಷಣಿಂ**—ಸಕಲವನ್ನೂ ಸೂಕ್ಷ್ಮ ದೃಷ್ಟಿಯಿಂದ ನೋಡಬಲ್ಲವನೂ । **ಸಹಸ್ರಚಕ್ಷಸಂ**—ಅನೇಕ ವಿಧವಾದ ನೋಟವುಳ್ಳವನೂ । **ಪವಮಾನಂ**--ಶುದ್ಧಿಕಾರಕನೂ ಆದ । **ಇಂದುಂ**— ಸೋಮದೇವನನ್ನು । **ಗಾಯತ್ರೇಣ**— ಗಾಯತ್ರಸಂಜ್ಞಕವಾದ ಸಾಮಮಂತ್ರದಿಂದ । **ಪ್ರ ಗಾಯತ**— ಗಾನರೂಪದಲ್ಲಿ ಅತಿಶಯವಾಗಿ ಪ್ರಶಂಸಿಸಿರಿ.

॥ ಭಾವಾರ್ಥ ॥

ಸಕಲವನ್ನೂ ಸೂಕ್ಷ್ಮದೃಷ್ಟಿಯಿಂದ ನೋಡಬಲ್ಲವನೂ, ಅನೇಕವಿಧವಾದ ನೋಟವುಳ್ಳವನೂ, ಶುದ್ಧಿಕಾರಕನೂ ಆದ ಸೋಮದೇವನನ್ನು ಗಾಯತ್ರಸಂಜ್ಞಕವಾದ ಸಾಮದಿಂದ ಗಾನರೂಪದಲ್ಲಿ ಅತಿಶಯವಾಗಿ ಪ್ರಶಂಸಿಸಿರಿ.

### English Translation.

Hymn with a Gayatri hymn Indu the purifier, the all-beholding, the thousand-eyed.

॥ ಸಂಹಿತಾಪಾಠಃ ॥

ತಂ ತ್ವಾ ಸಹಸ್ರಚಕ್ಷಸಮಥೋ ಸಹಸ್ರಭರ್ಣಸಂ ।

ಅತಿ ವಾರಮಪಾವಿಷುಃ ॥ ೨ ॥

॥ ಪದಪಾಠಃ ॥

ತಂ । ತ್ವಾ । ಸಹಸ್ರಽಚಕ್ಷಸಂ । ಅಥೋ ಇತಿ । ಸಹಸ್ರಽಭರ್ಣಸಂ ।

ಅತಿ । ವಾರಂ । ಅಪಾವಿಷುಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸಹಸ್ರಚಕ್ಷಸಂ ಬಹುದರ್ಶನಂ ಅಥೋ ಅಪಿ ಚ ಸಹಸ್ರಭರ್ಣಸಂ ಬಹುಭರ್ಣಂ ತಮಭಿಷುತಂ ತ್ವಾ ತ್ವಾಂ ವಾರಂ ವಾಲಂ ದಶಾಪವಿತ್ರಮತ್ಯಪಾವಿಷುಃ । ಋತ್ವಿಜಃ ಪಾವಯಂತಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ,) **ಸಹಸ್ರಚಕ್ಷಸಂ**—ಸಹಸ್ರಮುಖವಾದ ನೋಟವುಳ್ಳವನೂ । **ಅಥೋ**— ಮತ್ತು **ಸಹಸ್ರಭರ್ಣಸಂ**— ಸಾವಿರಾರು ಯಜಮಾನರನ್ನು ಪೋಷಿಸುವವನೂ । **ತಂ**— ಪ್ರಸಿದ್ಧನೂ ಆದ । **ತ್ವಾ**— ನಿನ್ನನ್ನು । **ವಾರಂ** —ದಶಾಪವಿತ್ರದ ನಾರುಗಳಿಂದ । **ಅತ್ಯಪಾವಿಷುಃ**—ಋತ್ವಿಕ್ಕುಗಳು ಶುದ್ಧಿಗೊಳಿಸುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಸಹಸ್ರಮುಖವಾದ ನೋಟವುಳ್ಳವನೂ, ಸಾವಿರಾರು ಯಜಮಾನರನ್ನು ಪೋಷಿಸುವವನೂ ಪ್ರಸಿದ್ಧನೂ ಆದ ನಿನ್ನನ್ನು ದಶಾಪವಿತ್ರದ ನಾರುಗಳಿಂದ ಋತ್ವಿಕ್ಕುಗಳು ಶುದ್ಧಿಗೊಳಿಸುತ್ತಾರೆ.

## English Translation.

You, the thousaud-eyed, and the supporter of thousands, they make to flow through the filter.

॥ ಸಂಹಿತಾಪಾಠಃ ॥

ಅತಿ ವಾರಾನ್ಪವಮಾನೋ ಅಸಿಷ್ಯದತ್ಕಲಶಾಁ ಅಭಿ ಧಾವತಿ ।

ಇಂದ್ರಸ್ಯ ಹಾರ್ದ್ಯಾವಿಶನ್ ॥ ೩ ॥

॥ ಪದಪಾಠಃ ॥

ಅತಿ । ವಾರಾನ್ । ಪವಮಾನಃ । ಅಸಿಸ್ಯದತ್ । ಕಲಶಾನ್ । ಅಭಿ । ಧಾವತಿ ।

ಇಂದ್ರಸ್ಯ । ಹಾರ್ದಿ । ಆऽವಿಶನ್ ॥ ೩ ॥

॥ ಸಾಯಣಭಾಷ್ಯಂ ॥

ಪವಮಾನಃ ಪೂಯಮಾನಃ ಸೋಮೋ ವಾರಾನವೇರ್ವಾಲಾನತ್ಯೈತಿಕ್ರಮ್ಯಾಸಿಷ್ಯದತ್ । ಸ್ಯಂದತೇ । ಅಪಿ ಚೇಂದ್ರಸ್ಯ ಹಾರ್ದಿ ಹೃದಯಮಾವಿಶನ್ ಕಲಶಾನ್ ದ್ರೋಣಾನ್ಯಭಿ ಧಾವತಿ । ಅಭಿಗಚ್ಛತಿ ॥

॥ ಪ್ರತಿಪದಾರ್ಥ ॥

**ಪವಮಾನಃ**—ಶುದ್ಧಿಕಾರಕನಾದ ಸೋಮದೇವನು । **ವಾರಾನ್**—ದಶಾಪವಿತ್ರದ ಉಣ್ಣೆನಾರುಗಳನ್ನು । **ಅತಿ**—ದಾಟಿಕೊಂಡು । **ಅಸಿಷ್ಯದತ್**—ಪ್ರವಹಿಸುತ್ತಾನೆ । **ಇಂದ್ರಸ್ಯ**—ಇಂದ್ರನ । **ಹಾರ್ದಿ**—ಹೃದಯವನ್ನು । **ಅವಿಶನ್**—ಪ್ರವೇಶಿಸುತ್ತಾ । **ಕಲಶಾನ್**—ದ್ರೋಣಕಲಶಗಳಲ್ಲಿಗೆ । **ಅಭಿ ಧಾವತಿ**-ಶೀಘ್ರವಾಗಿ ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಶುದ್ಧಿಕಾರಕನಾದ ಸೋಮದೇವನು ದಶಾಪವಿತ್ರದ ಉಣ್ಣೆನಾರುಗಳನ್ನು ದಾಟಿಕೊಂಡು ಪ್ರವಹಿಸುತ್ತಾನೆ. ಇಂದ್ರನ ಹೃದಯವನ್ನು ಪ್ರವೇಶಿಸುತ್ತ ದ್ರೋಣಕಲಶಗಳಲ್ಲಿಗೆ ಶೀಘ್ರವಾಗಿ ಹೋಗಿ ಸೇರುತ್ತಾನೆ.

### English Translation.

The purifier trickles through the hairs of the filter ; he hastens to the pitchers, entering Indra's heart.

॥ ಸಂಹಿತಾಪಾಠಃ ॥

ಇಂದ್ರಸ್ಯ ಸೋಮ ರಾಧಸೇ ಶಂ ಪವಸ್ವ ವಿಚರ್ಷಣೇ ।

ಪ್ರಜಾವದ್ರೇತ ಆ ಭರ ॥ ೪ ॥

॥ ಪದಪಾಠಃ ॥

ಇಂದ್ರಸ್ಯ । ಸೋಮ । ರಾಧಸೇ । ಶಂ । ಪವಸ್ವ । ವಿऽಚರ್ಷಣೇ ।

ಪ್ರಜಾऽವತ್ । ರೇತಃ । ಆ । ಭರ ॥ ೪ ॥

|| ಸಾಯಣಭಾಷ್ಯಂ ||

**ಹೇ ವಿಚರ್ಷಣೇ ವಿದ್ರಷ್ಟಃ ತ್ವಮಿಂದ್ರಸ್ಯ ರಾಧಸೇ ರಾಧನಾಯ ಸಂಸಿದ್ಧ್ಯೈ ಶಂ ಸುಖಕರಂ ರಸಂ ಪವಸ್ವ । ಕ್ಷರ । ಅಪಿ ಚಾಸ್ಮಭ್ಯಂ ಪ್ರಜಾವತ್ಪುತ್ರಾದ್ಯುಪೇತಂ ರೇತ ಉದಕಮನ್ನಂ ವಾ ಭರ । ಆಹರ । ಪ್ರಯಚ್ಛೇತ್ಯರ್ಥಃ ॥**

|| ಪ್ರತಿಪದಾರ್ಥ ||

**ವಿಚರ್ಷಣೇ**—ಸಕಲವನ್ನೂ ನೋಡಬಲ್ಲ । **ಸೋಮ**—ಎಲೈ ಸೋಮದೇವನೇ, । **ಇಂದ್ರಸ್ಯ**—ಇಂದ್ರನ । **ರಾಧಸೇ**—ಸಂತೃಪ್ತಿಗಾಗಿ । **ಶಂ**—ಸುಖಕರವಾದ ರಸವನ್ನು । **ಪವಸ್ವ**—ಹರಿಯುವಂತೆ ಮಾಡು । **ಪ್ರಜಾವತ್**—ಪುತ್ರಾದಿಗಳಿಂದ ಕೂಡಿದ । **ರೇತಃ**—ರಸವತ್ತಾದ ಅನ್ನವನ್ನು । **ಆ ಭರ**—ತಂದೊದಗಿಸು.

|| ಭಾವಾರ್ಥ ||

ಸರ್ವಸಾಕ್ಷಿಯಾದ ಎಲೈ ಸೋಮದೇವನೇ, ಇಂದ್ರನ ಸಂತೃಪ್ತಿಗಾಗಿ ಸುಖಕರವಾದ ರಸವನ್ನು ಹರಿಯುವಂತೆಮಾಡು. ಪುತ್ರಾದಿಗಳಿಂದ ಕೂಡಿದ ರಸವತ್ತಾದ ಅನ್ನವನ್ನು ತಂದೊದಗಿಸು.

**English Translation.**

All-beholding Soma, flow pleasantly for Indra's gratification; bring (us) food with male offspring.

# ಅರವತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

**ತೃತೀಯೇಽನುವಾಕೇ ಸಪ್ತ ಸೂಕ್ತಾನಿ । ತತ್ರಾಯಾ ವೀತೀತಿ ತ್ರಿಂಶದೃಚಂ ಪ್ರಥಮಂ ಸೂಕ್ತಂ । ಅಮಹೀಯುರ್ನಾಮಾಂಗಿರಸ ಋಷಿಃ । ಗಾಯತ್ರೀ ಛಂದಃ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಾಂತಂ । ಅಯಾ ವೀತೀ ತ್ರಿಂಶದಮಹೀಯುರಿತಿ ॥ ಉಕ್ತೋ ವಿನಿಯೋಗಃ ॥**

ಅನುವಾದವು—ಋಗ್ವೇದ ಸಂಹಿತೆಯ ಒಂಭತ್ತನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಏಳು ಸೂಕ್ತಗಳಿರುವುವು. ಅವುಗಳಲ್ಲಿ **ಅಯಾವೀತೀ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಮೂವತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಗಿರಾ ಋಷಿಯ ಪುತ್ರನಾದ ಅಮಹೀಯುಃ ಎಂಬುವನು ಋಷಿಯು. ಪವಮಾನಃ ಸೋಮ ಎಂಬುದು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಯಾ ವೀತೀ ತ್ರಿಂಶದಮಹೀಯುಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೬೧

ಮಂಡಲ—೯ ‖ ಅನುವಾದ—೩ ‖ ಸೂಕ್ತ—೬೧ ‖

ಅಷ್ಟಕ—೭ ‖ ಅಧ್ಯಾಯ—೧ ‖ ವರ್ಗ—೧೮, ೧೯, ೨೦, ೨೧, ೨೨, ೨೩ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ‖

‖ ಋಷಿಃ—ಅಮಹೀಯುಃ ‖

‖ ದೇವತಾ—ಪವಮಾನಃ ಸೋಮಃ ‖

‖ ಛಂದಃ—ಗಾಯತ್ರೀ ‖

‖ ಸಂಹಿತಾಪಾಠಃ ‖

ಅಯಾ ವೀತೀ ಪರಿ ಸ್ರವ ಯಸ್ತ ಇಂದೋ ಮದೇಷ್ವಾ ।

ಅವಾಹನ್ನವತೀರ್ನವ ‖ ೧ ‖

‖ ಪದಪಾಠಃ ‖

ಅಯಾ । ವೀತೀ । ಪರಿ । ಸ್ರವ । ಯಃ । ತೇ । ಇಂದೋ ಇತಿ । ಮದೇಷು । ಆ ।

ಅವಃಅಹನ್ । ನವತೀಃ । ನವ ‖ ೧ ‖

‖ ಸಾಯಣಭಾಷ್ಯಂ ‖

ಹೇ ಇಂದೋ ಸೋಮ ಅಯಾನೇನ ರಸೇನ ವೀತೀ ವೀತ್ಯಾ ಇಂದ್ರಸ್ಯ ಭಕ್ಷಣಾಯ ಪರಿ ಸ್ರವ । ಪರಿಕ್ಷರ । ಕೀದೃಶೇನೇತ್ಯತ ಆಹ । ತೇ ತವ ಯೋ ರಸೋ ಮದೇಷು ಸಂಗ್ರಾಮೇಷು ನವತೀರ್ನವೇತಿ ನವನವತಿಸಂಖ್ಯಾಕಾಶ್ಚ ಶತ್ರುಪುರೀರವಾಹನ್ । ಜಘಾನ । ಅಮುಂ ಸೋಮರಸಂ ಪೀತ್ವಾ ಮತ್ತಃ ಸನ್ನಿಂದ್ರ ಉಕ್ತಲಕ್ಷಣಾಃ ಶತ್ರುಪುರೀರ್ಜಘಾನೇತಿ ಕೃತ್ವಾ ರಸೋ ಜಘಾನೇತ್ಯುಪಚಾರಃ ‖

‖ ಪ್ರತಿಪದಾರ್ಥ ‖

ಇಂದೋ—ಎಲೈ ಸೋಮದೇವನೇ, । ತೇ—ನಿನ್ನ । ಯಃ—ಯಾವ ರಸವು । ಮದೇಷು—ಸಂಗ್ರಾಮಗಳಲ್ಲಿ । ನವತೀರ್ನವ—ತೊಂಭತ್ತೊಂಭತ್ತು ಶತ್ರುಪಟ್ಟಣಗಳನ್ನು । ಅವಾಹನ್—ನಾಶಮಾಡಿತೋ । ಅಯಾ—ಅಂತಹ ಪ್ರಭಾವವುಳ್ಳ ರಸರೂಪದಿಂದ । ವೀತೀ—ಇಂದ್ರನ ಪಾನಾರ್ಥವಾಗಿ । ಪರಿ ಸ್ರವ—ಪ್ರವಾಹರೂಪದಲ್ಲಿ ಸ್ರವಿಸು.

‖ ಭಾವಾರ್ಥ ‖

ಎಲೈ ಸೋಮದೇವನೇ, ಯಾವ ನಿನ್ನ ರಸವು ಸಂಗ್ರಾಮಗಳಲ್ಲಿ ತೊಂಭತ್ತೊಂಭತ್ತು ಶತ್ರುಪಟ್ಟಣಗಳನ್ನು ನಾಶಮಾಡಿತೋ ಅಂತಹ ಪ್ರಭಾವವುಳ್ಳ ರಸರೂಪದಿಂದ ಇಂದ್ರನ ಪಾನಾರ್ಥವಾಗಿ ಪ್ರವಾಹರೂಪದಲ್ಲಿ ಸ್ರವಿಸು.

English Translation

Flow, Indu, for (Indra's) food with that (juice) of yours which in battles overthrew ninety and nine (cities of the foe).

|| ಸಂಹಿತಾಪಾಠಃ ||

ಪುರಃ ಸದ್ಯ ಇತ್ಥಾಧಿಯೇ ದಿವೋದಾಸಾಯ ಶಂಬರಂ ।
ಅಧ ತ್ಯಂ ತುರ್ವಶಂ ಯದುಂ ॥ ೨ ॥

|| ಪದಪಾಠಃ ||

ಪುರಃ । ಸದ್ಯಃ । ಇತ್ಥಾಽಧಿಯೇ । ದಿವಃಽದಾಸಾಯ । ಶಂಬರಂ ।
ಅಧ । ತ್ಯಂ । ತುರ್ವಶಂ । ಯದುಂ ॥ ೨ ॥

|| ಸಾಯಣಭಾಷ್ಯಂ ||

ಸದ್ಯ ಏಕಸ್ಮಿನ್ನೇವಾಹ್ನಿ ಪುರಃ ಶತ್ರೂಣಾಂ ಪುರಾಣಿ ಸೋಮರಸೋಽವಾಹನ್ । ಇತ್ಥಾಧಿಯೇ ಸತ್ಯಕರ್ಮಣೇ ದಿವೋದಾಸಾಯ ರಾಜ್ಞೇ ಶಂಬರಂ ಶತ್ರುಪುರಾಣಾಂ ಸ್ವಾಮಿನಮಧಾಥ ತ್ಯಂ ತಂ ತುರ್ವಶನಾಮಕಂ ರಾಜಾನಂ ದಿವೋದಾಸಶತ್ರುಂ ಯದುಂ ಯದುನಾಮಕಂ ರಾಜಾನಂ ಚ ವಶಮಾನಯಚ್ಛ । ಅತ್ರಾಪಿ ಸೋಮರಸಂ ಪೀತ್ವಾ ಮತ್ತಃ ಸನ್ನಿಂದ್ರಃ ಸರ್ವಮೇತದಕಾರ್ಷೀದಿತಿ ಸೋಮರಸೇ ಕರ್ತೃತ್ವಮುಪಚರ್ಯತೇ ॥

|| ಪ್ರತಿಪದಾರ್ಥ ||

**ಸದ್ಯಃ**—ಒಂದೇ ಕಾಲದಲ್ಲಿ । **ಪುರಃ**—ಸೋಮರಸವು ಶತ್ರುಪಟ್ಟಣಗಳನ್ನೆಲ್ಲಾ ನಾಶಮಾಡಿತು । **ಇತ್ಥಾಧಿಯೇ**—ಸತ್ಯಾತ್ಮಕವಾದ ಕರ್ಮವುಳ್ಳ । **ದಿವೋದಾಸಾಯ**—ದಿವೋದಾಸನೆಂಬ ರಾಜನಿಗೆ ಉಪಕಾರ ಮಾಡಲು । **ಶಂಬರಂ**—ಶಂಬರಾಸುರನನ್ನೂ । **ಅಧ**—ಅನಂತರ । **ತ್ಯಂ**—ಪ್ರಸಿದ್ಧನಾದ । **ತುರ್ವಶಂ**—ತುರ್ವಶನೆಂಬ ರಾಜನನ್ನೂ । **ಯದುಂ**—ಯದುವೆಂಬ ರಾಜನನ್ನೂ ಸೋಲಿಸಿತು.

|| ಭಾವಾರ್ಥ ||

ಇಂದ್ರನಿಗೆ ಹರ್ಷಕಾರಕವಾದ ಸೋಮರಸವು ಒಂದೇಕಾಲದಲ್ಲಿ ಶತ್ರುಪಟ್ಟಣಗಳನ್ನೆಲ್ಲಾ ಇಂದ್ರನು ನಾಶಮಾಡಲು ಸಹಾಯಮಾಡಿತು. ದಿವೋದಾಸನೆಂಬ ರಾಜನಿಗೆ ಸಹಾಯ ಮಾಡಲು ಶಂಬರಾಸುರನನ್ನೂ ಅನಂತರ ಪ್ರಸಿದ್ಧನಾದ ತುರ್ವಶನನ್ನೂ ಹಾಗೆಯೇ ಯದುವನ್ನೂ ಸೋಲಿಸಲು ಸಹಾಯಮಾಡಿತು.

English Translation

(Which overturned) the cities in a moment, and for the sake of the devout Dīvodasa (subdued) Shambara and then that Turvasha and Yadu.

|| ಸಂಹಿತಾಪಾಠಃ ||

ಪರಿ ಣೋ ಅಶ್ವಮಶ್ವವಿದ್ಗೋಮದಿಂದೋ ಹಿರಣ್ಯವತ್ ।

ಕ್ಷರಾ ಸಹಸ್ರಿಣೀರಿಷಃ ॥ ೩ ॥

|| ಪದಪಾಠಃ ||

ಪರಿ । ನಃ । ಅಶ್ವಂ । ಅಶ್ವऽವಿತ್ । ಗೋऽಮತ್ । ಇಂದೋ ಇತಿ । ಹಿರಣ್ಯऽವತ್ ।

ಕ್ಷರ । ಸಹಸ್ರಿಣೀಃ । ಇಷಃ ॥ ೩ ॥

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಅಶ್ವವಿದಶ್ವಸ್ಯ ಲಂಭಕಸ್ತ್ವಂ ನೋऽಸ್ಮಾಕಮಶ್ವಂ ಗೋಮದ್ಗೋಯುಕ್ತಂ ಹಿರಣ್ಯವದ್ಧಿರಣ್ಯೋಪೇತಂ ಧನಂ ಚ ಪರಿ ಕ್ಷರ । ಅಪಿ ಚ ಸಹಸ್ರಿಣೀರ್ಬಹೂನೀಷೋऽನ್ನಾನಿ ಕ್ಷರ ॥

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ, | ಅಶ್ವವಿತ್—ಅಶ್ವೋಪೇತನಾದ ನೀನು | ನಃ—ನಮಗೆ ಅಶ್ವಂ—ಅಶ್ವಗಳನ್ನೂ | ಗೋಮತ್—ಗೋಯುಕ್ತವಾದುದೂ | ಹಿರಣ್ಯವತ್—ಸುವರ್ಣಮಯವಾದುದೂ ಆದ ಧನವನ್ನೂ | ಸಹಸ್ರಿಣೀಃ—ಅತಿ ಪ್ರಭೂತವಾದ | ಇಷಃ—ಅನ್ನಗಳನ್ನೂ | ಪರಿ ಸ್ರವ—ಸುತ್ತಲೂ ಒದಗಿಸಿಕೊಡು.

|| ಭಾವಾರ್ಥ ||

ಎಲೈ ಸೋಮದೇವನೇ, ಅಶ್ವೋಪೇತನಾದ ನೀನು ನಮಗೆ ಅಶ್ವಗಳನ್ನೂ ಗೋಯುಕ್ತವಾದುದೂ ಸುವರ್ಣಮಯವಾದುದೂ ಆದ ಧನವನ್ನೂ ಅತಿಪ್ರಭೂತವಾದ ಅನ್ನಗಳನ್ನೂ ಸುತ್ತಲೂ ಒದಗಿಸಿಕೊಡು.

English Translation

Indu, conqueror of horses, shower forth horses with cattle gold and unbounded food.

|| ಸಂಹಿತಾಪಾಠಃ ||

ಪವಮಾನಸ್ಯ ತೇ ವಯಂ ಪವಿತ್ರಮಭ್ಯುಂದತಃ ।

ಸಖಿತ್ವಮಾ ವೃಣೀಮಹೇ ॥ ೪ ॥

|| ಪದಪಾಠಃ ||

ಪವಮಾನಸ್ಯ । ತೇ । ವಯಂ । ಪವಿತ್ರಂ । ಅಭಿಽಉಂದತಃ ।
ಸಖಿಽತ್ವಂ । ಆ । ವೃಣೀಮಹೇ ॥ ೪ ॥

|| ಸಾಯಣಭಾಷ್ಯಂ ||

ಹೇ ಸೋಮ ಪವಿತ್ರಮಭ್ಯುಂದತಃ ಪವಿತ್ರಮಭಿಕ್ಲೇದಯತಃ ಪವಮಾನಸ್ಯ ಕ್ಷರತಶ್ಚ ತೇ ತವ ಸಖಿತ್ವಂ ಸಖ್ಯಂ ವಯಮುಮಹೀಯವ ಅಂಗಿರಸಾ ಆ ವೃಣೀಮಹೇ । ಪ್ರಾರ್ಥಯಾಮಹೇ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ,) ಪವಿತ್ರಮಭ್ಯುಂದತಃ—ದಶಾಪವಿತ್ರದಿಂದ ಶುದ್ಧನಾಗಿ ಪ್ರವಹಿಸುವವನೂ । ಪವಮಾನಸ್ಯ—ಶುದ್ಧಿಕಾರಕನೂ ಆದ । ತೇ—ನಿನ್ನ । ಸಖಿತ್ವಂ—ಮಿತ್ರತ್ವವನ್ನು । ವಯಂ—ನಾವು । ಆ ವೃಣೀಮಹೇ - ಪ್ರಾರ್ಥಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇವನೇ, ದಶಾಪವಿತ್ರದಿಂದ ಪರಿಶುದ್ಧನಾಗಿ ಪ್ರವಹಿಸುವವನೂ, ಶುದ್ಧಿಕಾರಕನೂ ಆದ ನಿನ್ನ ಮಿತ್ರತ್ವವನ್ನು ನಾವು ಪ್ರಾರ್ಥಿಸುತ್ತೇವೆ.

English Translation

We solicit your friendship as you drop flowing over the filter.

|| ಸಂಹಿತಾಪಾಠಃ ||

ಯೇ ತೇ ಪವಿತ್ರಮೂರ್ಮಯೋಽಭಿಕ್ಷರಂತಿ ಧಾರಯಾ ।
ತೇಭಿರ್ನಃ ಸೋಮ ಮೃಳಯ ॥ ೫ ॥

|| ಪದಪಾಠಃ ||

ಯೇ । ತೇ । ಪವಿತ್ರಂ । ಊರ್ಮಯಃ । ಅಭಿಽಕ್ಷರಂತಿ । ಧಾರಯಾ ।
ತೇಭಿಃ । ನಃ । ಸೋಮ । ಮೃಳಯ ॥ ೫ ॥

|| ಸಾಯಣಭಾಷ್ಯಂ ||

ಹೇ ಸೋಮ ತೇ ತವ ಯೆ ಊರ್ಮಯಸ್ತರಂಗಾಃ ಪವಿತ್ರಂ ಧಾರಯಾ ಕ್ಷರಂತಿ ತೇಭಿಸ್ತೈರೂರ್ಮಿಭಿರ್ನೋಽಸ್ಮಾನ್ ಮೃಳಯ । ಸುಖಯ ॥

|| ಪ್ರತಿಪದಾರ್ಥ ||

**ಸೋಮ** —ಎಲೈ ಸೋಮದೇವನೇ, | **ತೇ**— ನಿನ್ನ | **ಯೇ**—ಯಾವ | **ಊರ್ಮಯಃ**— ಅಲೆಗಳಂತಿರುವ ರಸಗಳು | **ಪವಿತ್ರಂ**—ದಶಾಪವಿತ್ರದಲ್ಲಿ | **ಧಾರಯಾ**— ಧಾರಾರೂಪದಲ್ಲಿ | **ಕ್ಷರಂತಿ**— ಪ್ರವಹಿಸುವುವೋ | **ತೇಭಿಃ** — ಅಂತಹ ರಸಗಳೊಂದಿಗೆ | **ನಃ**— ನಮ್ಮನ್ನು | **ಮೃಳಯ**—ಸುಖಪಡಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಅಲೆಗಳಂತಿರುವ ಯಾವ ನಿನ್ನ ರಸಗಳು ದಶಾಪವಿತ್ರದಲ್ಲಿ ಧಾರಾರೂಪದಿಂದ ಪ್ರವಹಿಸುವುವೋ ಅಂತಹ ರಸಗಳೊಂದಿಗೆ ನಮ್ಮನ್ನು ಸುಖಪಡಿಸು.

Euglish Translation

Delight us, Soma, with those your undulations which flow over the filter in a stream.

|| ಸಂಹಿತಾಪಾಠಃ ||

**ಸ ನಃ ಪುನಾನ ಆ ಭರ ರಯಿಂ ವೀರವತೀಮಿಷಂ |**
**ಈಶಾನಃ ಸೋಮ ವಿಶ್ವತಃ || ೬ ||**

|| ಪದಪಾಠಃ ||

ಸಃ | ನಃ | ಪುನಾನಃ | ಆ | ಭರ | ರಯಿಂ | ವೀರವತೀಂ | ಇಷಂ |
ಈಶಾನಃ | ಸೋಮ | ವಿಶ್ವತಃ || ೬ ||

|| ಸಾಯಣಭಾಷ್ಯಂ ||

**ಹೇ ಸೋಮ ವಿಶ್ವತಃ ಸರ್ವಸ್ಯ ಜಗತಃ ಈಶಾನ ಈಶ್ವರಃ ಸೋऽಭಿಷುತಃ ಪುನಾನಃ ಪೂಯಮಾನಸ್ತ್ವಂ ನೋऽಸ್ಮಭ್ಯಂ ರಯಿಂ ಧನಂ ವೀರವತೀಂ ಪುತ್ರಾದ್ಯುಪೇತಮಿಷಮನ್ನಂ ಚಾ ಭರ | ಆಹರ ||**

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ವಿಶ್ವತಃ**—ಸಮಸ್ತವಾದ ಜಗತ್ತಿಗೂ | **ಈಶಾನಃ**—ಪ್ರಭುವಾದ | **ಸಃ**— ನೀನು | **ಪುನಾನಃ**—ಎಲ್ಲರಿಗೂ ಶುದ್ಧಿಕಾರಕನಾಗಿ | **ನಃ**—ನಮಗೆ | **ರಯಿಂ**—ಧನವನ್ನೂ | **ವೀರವತೀಂ**—ಶಕ್ತಿಯುತರಾದ ಪುತ್ರರಿಂದ ಕೂಡಿದ | **ಇಷಂ**—ಅನ್ನವನ್ನೂ | **ಆ ಭರ**—ತಂದೊದಗಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಸಮಸ್ತ ಜಗತ್ತಿಗೂ ಪ್ರಭುವಾದ ನೀನು, ಎಲ್ಲರಿಗೂ ಶುದ್ಧಿಕಾರಕನಾಗಿ ನಮಗೆ ಧನವನ್ನೂ ಶಕ್ತಿಯುತರಾದ ಪುತ್ರರಿಂದ ಕೂಡಿದ ಅನ್ನವನ್ನೂ ತಂದೊದಗಿಸು.

English Translation

Soma, you are lord over all the purifier, bring us riches and food with male offspring.

|| ಸಂಹಿತಾಪಾಠಃ ||

ಏತಮು ತ್ಯಂ ದಶ ಕ್ಷಿಪೋ ಮೃಜಂತಿ ಸಿಂಧುಮಾತರಂ ।
ಸಮಾದಿತ್ಯೇಭಿರಖ್ಯತ ॥ ೭ ॥

|| ಪದಪಾಠಃ ||

ಏತಂ । ಊಂ ಇತಿ । ತ್ಯಂ । ದಶ । ಕ್ಷಿಪಃ । ಮೃಜಂತಿ । ಸಿಂಧುಽಮಾತರಂ ।
ಸಂ । ಆದಿತ್ಯೇಭಿಃ । ಅಖ್ಯತ ॥ ೭ ॥

|| ಸಾಯಣಭಾಷ್ಯಂ ||

ಸಿಂಧುಮಾತರಂ ಯಸ್ಯ ಸೋಮಸ್ಯ ಸಿಂಧವೋ ನದ್ಯೋ ಮಾತರೋ ಭವಂತಿ ತ್ಯಂ ತಮೇತಮಿಮಂ ಸೋಮಂ ದಶ ಕ್ಷಿಪೋ ದಶಸಂಖ್ಯಾಕಾ ಅಂಗುಲಯೋ ಮೃಜಂತಿ । ಶೋಧಯಂತಿ । ಅಪಿ ಚ ಸೋಽಯಂ ಸೋಮ ಆದಿತ್ಯೇಭಿರಾದಿತ್ಯೈಃ ಸಮಖ್ಯತ । ಸಂಗಚ್ಛತೇ ॥

||ಪ್ರತಿಪದಾರ್ಥ ||

ಸಿಂಧುಮಾತರಂ—ಮಾತೃಗಳಾದ ನದಿಗಳಿಂದ ಉತ್ಪನ್ನನೂ । ತ್ಯಂ—ಪ್ರಸಿದ್ಧನೂ ಆದ । ಏತಂ—ಈ ಸೋಮದೇವನನ್ನು । ದಶ ಕ್ಷಿಪಃ—ಹತ್ತು ಬೆರಳುಗಳೂ । ಮೃಜಂತಿ—ಶುದ್ಧಿಗೊಳಿಸುತ್ತವೆ । ಆದಿತ್ಯೇಭಿಃ—ಆದಿತ್ಯರೊಡನೆ । ಸಮಖ್ಯತ—ಈ ಸೋಮದೇವನು ಸೇರಿಕೊಳ್ಳುತ್ತಾನೆ.

|| ಭಾವಾರ್ಥ ||

ನದಿಗಳನ್ನೇ ಮಾತೃಗಳನ್ನಾಗಿ ಉಳ್ಳವನೂ,ಪ್ರಸಿದ್ಧನೂ ಆದ ಸೋಮದೇವ: ಶುದ್ಧಿಗೊಳಿಸುತ್ತವೆ. ಈ ಸೋಮದೇವನು ಆದಿತ್ಯರೊಡನೆ ಸೇರಿಕೊಳ್ಳುತ್ತಾನೆ.

English Translation

The ten fingers cleanse this Soma, whose parents are the rivers, he is associated with thh Adityas.

|| ಸಂಹಿತಾಪಾಠಃ ||

ಸಮಿಂದ್ರೇಣೋತ ವಾಯುನಾ ಸುತ ಏತಿ ಪವಿತ್ರ ಆ ।
ಸಂ ಸೂರ್ಯಸ್ಯ ರಶ್ಮಿಭಿಃ ॥ ೮ ॥

|| ಪದಪಾಠಃ ||

ಸಂ । ಇಂದ್ರೇಣ । ಉತ । ವಾಯುನಾ । ಸುತಃ । ಏತಿ । ಪವಿತ್ರೇ । ಆ ।

ಸಂ । ಸೂರ್ಯಸ್ಯ । ರಶ್ಮಿಽಭಿಃ ॥ ೮ ॥

|| ಸಾಯಣಭಾಷ್ಯಂ ||

ಸುತೋಽಭಿಷುತಃ ಸೋಮಃ ಪವಿತ್ರ ಇಂದ್ರೇಣ ಸಮೇತಿ । ಸಂಗಚ್ಛತಿ। ಉತಾಪಿ ಚ ವಾಯುನಾ ಸಮೇತಿ । ಸೂರ್ಯಸ್ಯ ರಶ್ಮಿಭಿರ್ಮಯೂಖೈರಪಿ ಸಮೇತಿ ।

|| ಪ್ರತಿಪದಾರ್ಥ ||

ಸುತಃ— ಹಿಂಡಲ್ಪಟ್ಟ ಸೋಮದೇವನು । ಪವಿತ್ರೇ—ದಶಾಪವಿತ್ರದಲ್ಲಿ । ಇಂದ್ರೇಣ— ಇಂದ್ರನೊಡನೆ । ಸಮೇತಿ—ಸೇರಿಕೊಳ್ಳುತ್ತಾನೆ। ಉತ—ಮತ್ತು। ವಾಯುನಾ— ವಾಯುವಿನೊಂದಿಗೂ । ಸಂ—ಸೇರಿಕೊಳ್ಳುತ್ತಾನೆ। ಸೂರ್ಯಸ್ಯ— ಸೂರ್ಯನ । ರಶ್ಮಿಭಿಃ—ಕಿರಣಗಳೊಡನೆ । ಸಂ —ಸೇರಿಕೊಳ್ಳುತ್ತಾನೆ.

|| ಭಾವಾರ್ಥ ||

ಯಜ್ಞಾರ್ಥವಾಗಿ ಹಿಂಡಲ್ಪಟ್ಟ ಸೋಮದೇವನು ದಶಾಪವಿತ್ರದಲ್ಲಿ ಇಂದ್ರನೊಡನೆ ಸೇರಿಕೊಳ್ಳುತ್ತಾನೆ. ವಾಯುವಿನೊಂದಿಗೂ ಸೇರಿಕೊಳ್ಳುತ್ತಾನೆ. ಸೂರ್ಯನ ಕಿರಣಗಳೊಡನೆ ಸೇರಿಕೊಳ್ಳುತ್ತಾನೆ.

## English Translation.

When effused he proceeds to the filter, with Indra and Vayu, and with the sun's rays.

|| ಸಂಹಿತಾಪಾಠಃ ||

ಸ ನೋ ಭಗಾಯ ವಾಯವೇ ಪೂಷ್ಣೇ ಪವಸ್ವ ಮಧುಮಾನ್ ।

ಚಾರುರ್ಮಿತ್ರೇ ವರುಣೇ ಚ ॥ ೯ ॥

|| ಪದಪಾಠಃ ||

ಸಃ । ನಃ । ಭಗಾಯ । ವಾಯವೇ । ಪೂಷ್ಣೇ । ಪವಸ್ವ । ಮಧುಽಮಾನ್ ।

ಚಾರುಃ । ಮಿತ್ರೇ । ವರುಣೇ । ಚ ॥ ೯ ॥

|| ಸಾಯಣಭಾಷ್ಯಂ ||

ಹೇ ಸೋಮ ಮಧುಮಾನ್ ಮಧುರರಸಶ್ಚಾರುಃ ಕಲ್ಯಾಣಸ್ವರೂಪಶ್ಚ ಸೋಽಭಿಷುತಸ್ತ್ವಂ ನೋಽಸ್ಮಾಕಂ ಯಜ್ಞೇ ಭಗಾಯ ಭಗಾಖ್ಯಾಯ ದೇವಾಯ ವಾಯವೇ ಚ ಪೂಷ್ಣೇ ಚ ಮಿತ್ರೇ ಮಿತ್ರಾಯ ದೇವಾಯ ವರುಣೇ ವರುಣಾಯ ಚ ಪವಸ್ವ । ಕ್ಷರ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ), **ಮಧುಮಾನ್**—ಮಧುರವಾದ ರಸಯುಕ್ತನೂ | **ಚಾರುಃ**—ಆಕರ್ಷಕವಾದ ರೂಪವುಳ್ಳವನೂ ಆದ | **ಸಃ**—ನೀನು | **ನಃ**—ನಮ್ಮ ಯಜ್ಞದಲ್ಲಿ | **ಮಿತ್ರೇ**—ಮಿತ್ರನಿಗಾಗಿಯೂ | **ಭಗಾಯ**—ಭಗದೇವನಿಗಾಗಿಯೂ | **ವಾಯವೇ**— ವಾಯುವನ್ನುದ್ದೇಶಿಸಿಯೂ | **ಪೂಷ್ಣೇ**— ಪೂಷದೇವನಿಗಾಗಿಯೂ | **ವರುಣೇ ಚ**—ವರುಣನ ತೃಪ್ತಿಗಾಗಿಯೂ | **ಪವಸ್ವ**— ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಧುರವಾದ ರಸಯುಕ್ತನೂ ಆಕರ್ಷಕವಾದ ರೂಪವುಳ್ಳವನೂ ಆದ ನೀನು ನಮ್ಮ ಯಜ್ಞದಲ್ಲಿ ಮಿತ್ರನಿಗಾಗಿಯೂ, ಭಗನ ತೃಪ್ತ್ಯರ್ಥವಾಗಿಯೂ, ವಾಯುವನ್ನುದ್ದೇಶಿಸಿಯೂ, ಪೂಷನಿಗಾಗಿಯೂ ವರುಣನ ತೃಪ್ತ್ಯರ್ಥವಾಗಿಯೂ ಪ್ರವಹಿಸು.

## English Translation.

Do you who are sweet-flavoured and beatiful flow (at) our (sacrifice) for Bhaga, Vayu, Pushan, Mitra, and Varuna.

॥ ಸಂಹಿತಾಪಾಠಃ ॥

**ಉಚ್ಚಾ ತೇ ಜಾತಮಂಧಸೋ ದಿವಿ ಷದ್ಭೂಮ್ಯಾ ದದೇ |**
**ಉಗ್ರಂ ಶರ್ಮ ಮಹಿ ಶ್ರವಃ ॥ ೧೦ ॥**

॥ ಪದಪಾಠಃ ॥

**ಉಚ್ಚಾ | ತೇ | ಜಾತಂ | ಅಂಧಸಃ | ದಿವಿ | ಸತ್ | ಭೂಮಿಃ | ಆ | ದದೇ |**
**ಉಗ್ರಂ | ಶರ್ಮ | ಮಹಿ | ಶ್ರವಃ ॥ ೧೦ ॥**

॥ ಸಾಯಣಭಾಷ್ಯಂ ॥

**ಹೇ ಸೋಮ ತೇ ತವ ಸಂಬಂಧಿನೋಽಂಧಸೋ ರಸಸ್ಯೋಚ್ಚೋಪರಿ ಜಾತಂ ಜನ್ಮ | ಅಪಿ ಚ ದಿವಿ ದ್ಯುಲೋಕೇ ಸದ್ವಿದ್ಯಮಾನಂ ಸ್ವತಸ್ತವ ಸಂಬಂಧ್ಯುಗ್ರಮುದ್ಗೂರ್ಣಂ ಶರ್ಮ ಸುಖಂ ಮಹಿ ಮಹಚ್ಛ್ರವೋಽನ್ನಂ ಚ ಭೂಮಿರಾ ದದೇ ॥ ಭೂಮ್ಯಾ ದದ ಇತಿ ಪದತ್ರಯಮಾಮನಂತಿ | ವಿಸರ್ಜನೀಯ-ಲೋಪಃ ಸಾಂಹಿತಿಕಃ ॥ ಭೂಮಿರ್ಭೌಮಾ ಜನಾ ಮಾದೃಶಾಃ | ಭೂಮಿಸ್ಥೈರಾದೀಯತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ), **ತೇ**—ನಿನ್ನ | **ಅಂಧಸಃ**—ರಸಕ್ಕೆ | **ಉಚ್ಚಾ**—ಉನ್ನತವಾದ ಪ್ರದೇಶವು **ಜಾತಂ**—ಉತ್ಪತ್ತಿಸ್ಥಾನವಾಗಿದೆ | **ದಿವಿ ಸತ್**—ನೀನು ದ್ಯುಲೋಕಸ್ಥನಾಗಿದ್ದರೂ ಸಹ | **ಉಗ್ರಂ**—ಅತ್ಯಧಿಕವಾದ |

**ಶರ್ಮ**—ಸುಖವನ್ನೂ | **ಮಹಿ**—ಮಹತ್ತಾದ | **ಶ್ರವಃ**—ಅನ್ನವನ್ನೂ | **ಭೂಮಿಃ**— ಪೃಥ್ವೀಸ್ಥರಾದ ಪ್ರಜೆಗಳು | **ಆ ದದೇ**—ನಿನ್ನಿಂದ ಸ್ವೀಕರಿಸುತ್ತಾರೆ.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ರಸಕ್ಕೆ ಉನ್ನತವಾದ ಪ್ರದೇಶವು ಉತ್ಪತ್ತಿಸ್ಥಾನವಾಗಿದೆ. ನೀನು ದ್ಯುಲೋಕಸ್ಥನಾಗಿದ್ದರೂ ಸಹ ಅತ್ಯಧಿಕವಾದ ಸುಖವನ್ನೂ ಮಹತ್ತಾದ ಅನ್ನವನ್ನೂ ಪೃಥ್ವೀಸ್ಥರಾದ ಪ್ರಜೆಗಳು ನಿನ್ನಿಂದ ಸ್ವೀಕರಿಸುತ್ತಾರೆ.

Engllsh Translation

The birth of your juice is on high: the earth has received (your) intense happiness and abundant food, though (these) exist (naturally) in heaven.

|| ಸಂಹಿತಾಪಾಠಃ ||

**ಏನಾ ವಿಶ್ವಾನ್ಯರ್ಯ ಆ ದ್ಯುಮ್ನಾನಿ ಮಾನುಷಾಣಾಂ |**

**ಸಿಷಾಸಂತೋ ವನಾಮಹೇ || ೧೧ ||**

|| ಪದಪಾಠಃ ||

**ಏನಾ | ವಿಶ್ವಾನಿ | ಅರ್ಯಃ | ಆ | ದ್ಯುಮ್ನಾನಿ | ಮಾನುಷಾಣಾಂ |**

**ಸಿಸಾಸಂತಃ | ವನಾಮಹೇ || ೧೧ ||**

|| ಸಾಯಣಭಾಷ್ಯಂ ||

**ಏನ್ಯೆನೇನಾನೇನ ಸೋಮೇನ ಮಾನುಷಾಣಾಂ ಮನುಷಾಣಾಂ ವಿಶ್ವಾ ವಿಶ್ವಾನಿ ದ್ಯುಮ್ನಾನ್ಯನ್ನಾನ್ಯಾರ್ಯೋಽಭಿಗಚ್ಛಂತಃ ಸಿಷಾಸಂತಃ ಸಂಭಕ್ತುಮಿಚ್ಛಂತಶ್ಚ ವಯಂ ವನಾಮಹೇ | ಸಂಭಜಾಮಹೇ ||**

|| ಪ್ರತಿಪದಾರ್ಥ ||

**ಏನಾ**— ಈ ಸೋಮದೇವನ ಅನುಗ್ರಹದಿಂದ | **ಮಾನುಷಾಣಾಂ**—ಮಾನವರಿಗೆ ತೃಪ್ತಿಕರವಾದುದೂ | **ದ್ಯುಮ್ನಾನಿ**—ಪ್ರಕಾಶಮಾನವಾದುದೂ ಆದ | **ವಿಶ್ವಾನಿ**—ಸಮಸ್ತ **ಅನ್ನ**ಗಳನ್ನೂ | **ಆ ಅರ್ಯಃ**—ಪೂರ್ಣವಾಗಿ ಹೊಂದುತ್ತಲೂ | **ಸಿಷಾಸಂತಃ**—ಅವುಗಳನ್ನು ಅನುಭವಿಸುತ್ತಲೂ | **ವನಾಮಹೇ**—ನಾವು ತೃಪ್ತಿಯನ್ನು ಹೊಂದುತ್ತೇವೆ.

|| ಭಾವಾರ್ಥ ||

ಈ ಸೋಮದೇವನ ಅನುಗ್ರಹದಿಂದ ನಾವು ಮಾನವರಿಗೆ ತೃಪ್ತಿದಾಯಕವಾದುದೂ ಪ್ರಕಾಶಮಾನವಾದುದೂ ಆದ ಸಮಸ್ತವಾದ ಅನ್ನಗಳನ್ನು ಪೂರ್ಣವಾಗಿ ಹೊಂದುತ್ತಲೂ ಮತ್ತು ಅವುಗಳನ್ನು ಅನುಭವಿಸುತ್ತಲೂ ತೃಪ್ತಿಯನ್ನು ಹೊಂದುತ್ತೇವೆ.

English Transiation

By this (Soma) obtaining and desiring to enjoy all the good things that belong to men we enjoy them.

|| ಸಂಹಿತಾಪಾಠಃ ||

ಸ ನ ಇಂದ್ರಾಯ ಯಜ್ಯವೇ ವರುಣಾಯ ಮರುದ್ಭ್ಯಃ |

ವರಿವೋವಿತ್ಪರಿ ಸ್ರವ || ೧೨ ||

|| ಪದಪಾಠಃ ||

ಸಃ | ನಃ | ಇಂದ್ರಾಯ | ಯಜ್ಯವೇ | ವರುಣಾಯ | ಮರುತ್ಽಭ್ಯಃ |

ವರಿವಃಽವಿತ್ | ಪರಿ | ಸ್ರವ || ೧೨ ||

|| ಸಾಯಣಭಾಷ್ಯಂ ||

ಹೇ ಸೋಮ ವರಿವೋವಿದನ್ನಸ್ಯ ಲಂಭಕಃ ಪವಮಾನಸ್ತ್ವಂ ನೋಽಸ್ಮಾಕಂ ಯಜ್ಯವೇ ಯಷ್ಟವ್ಯಾಯೇಂದ್ರಾಯ ವರುಣಾಯ ಚ ಮರುದ್ಭ್ಯಶ್ಚ ಪರಿ ಸ್ರವ | ಧಾರಯಾ ಕ್ಷರ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಸಃ ವರಿವೋವಿತ್**—ಧನಸಂಪತ್ಪೂರ್ಣನಾದ ನೀನು | **ನಃ**—ನಮ್ಮ | **ಯಜ್ಯವೇ**—ಯಜ್ಞನಿರ್ವಹಣಕ್ಕಾಗಿ | **ಇಂದ್ರಾಯ**—ಇಂದ್ರಾರ್ಥವಾಗಿಯೂ | **ವರುಣಾಯ**—ವರುಣನನ್ನುದ್ದೇಶಿಸಿಯೂ | **ಮರುದ್ಭ್ಯಃ**—ಮರುತ್ತುಗಳ ತೃಪ್ತ್ಯರ್ಥವಾಗಿಯೂ | **ಪರಿ ಸ್ರವ**—ಧಾರಾರೂಪದಲ್ಲಿ ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಧನಸಂಪತ್ಪೂರ್ಣನಾದ ನೀನು ನಮ್ಮ ಯಜ್ಞನಿರ್ವಹಣಕ್ಕಾಗಿ ಇಂದ್ರ, ವರುಣ ಮತ್ತು ಮರುತ್ತುಗಳು ಇವರ ತೃಪ್ತ್ಯರ್ಥವಾಗಿ ಧಾರಾರೂಪದಲ್ಲಿ ಪ್ರವಹಿಸು.

English Translaticn

O you who are the possessor of wealth flow for us, for the adorable Indra, for Varuna. and the Maruts.

|| ಸಂಹಿತಾಪಾಠಃ ||

ಉಪೋ ಷು ಜಾತಮಪ್ತುರಂ ಗೋಭಿರ್ಭಂಗಂ ಪರಿಷ್ಕೃತಂ |

ಇಂದುಂ ದೇವಾ ಅಯಾಸಿಷುಃ || ೧೩ ||

|| ಪದಪಾಠಃ ||

ಉಪ್ರೋ ಇತಿ | ಸು | ಜಾತಂ | ಅಪ್ऽತುರಂ | ಗೋಭಿಃ | ಭಂಗಂ | ಪರಿऽಕೃತಂ |

ಇಂದುಂ | ದೇವಾಃ | ಅಯಾಸಿಷುಃ || ೧೩ ||

|| ಸಾಯಣಭಾಷ್ಯಂ ||

ಸು ಜಾತಂ ಸಮ್ಯಕ್ಪ್ರಾದುರ್ಭೂತಮಪ್ತುರಂ ವಸತೀವರೀಭಿಃ ಪ್ರೇರಿತಂ ಭಂಗಂ ಶತ್ರೂಣಾಂ ಭಂಜಕಂ ಗೋಭಿರ್ಗೋವಿಕಾರೈಃ ಪಯೋಭಿಃ ಪರಿಷ್ಕೃತಮಲಂಕೃತಂ ಸಂಸ್ಕೃತಮಿಂದುಂ ಸೋಮಂ ದೇವಾ ಇಂದ್ರಾದಯ ಉಪಾಯಾಸಿಷುಃ | ಉಪಾಗಚ್ಛಂತಿ ||

|| ಪ್ರತಿಪದಾರ್ಥ ||

ಸು ಜಾತಂ—ಉತ್ತಮವಾದ ಉತ್ಪತ್ತಿಯುಳ್ಳವನೂ | ಅಪ್ತುರಂ—ವಸತೀವರಿಯೊಂದಿಗೆ ಸೇರಿದವನೂ | ಭಂಗಂ—ಶತ್ರುನಾಶಕನೂ | ಗೋಭಿಃ—ಕ್ಷೀರಾದಿಗಳೊಡನೆ ಸೇರಿ | ಪರಿಷ್ಕೃತಂ—ಸಂಸ್ಕೃತನಾದವನೂ ಆದ | ಇಂದುಂ—ಸೋಮದೇವನನ್ನು | ದೇವಾಃ—ಇಂದ್ರಾದಿದೇವತೆಗಳು | ಉಪ್ರೋ ಅಯಾಸಿಷುಃ—ಸಮೀಪಿಸುತ್ತಾರೆ.

|| ಭಾವಾರ್ಥ ||

ಉತ್ತಮವಾದ ಉತ್ಪತ್ತಿಯುಳ್ಳವನೂ, ವಸತೀವರಿಯೊಂದಿಗೆ ಸೇರಿದವನೂ, ಸತ್ರುನಾಶಕನೂ, ಕ್ಷೀರಾದಿಗಳೊಡನೆ ಸೇರಿ ಸುಸಂಸ್ಕೃತನಾದವನೂ ಆದ ಸೋಮದೇವನನ್ನು ಇಂದ್ರಾದಿದೇವತೆಗಳು ಸಮಿಾಪಿಸುತ್ತಾರೆ.

English Translatioa

The gods approach Indu, ( who is ) completely generated, sent forth by the waters, the demolisher (of foes), adorned with milk and curds.

|| ಸಂಹಿತಾಪಾಠಃ ||

ತಮಿದ್ವರ್ಧಂತು ನೋ ಗಿರೋ ವತ್ಸಂ ಸಂಶಿಶ್ವರೀರಿವ |

ಯ ಇಂದ್ರಸ್ಯ ಹೃದಂಸನಿಃ || ೧೪ ||

|| ಪದಪಾಠಃ ||

ತಂ | ಇತ್ | ವರ್ಧಂತು | ನಃ | ಗಿರಃ | ವತ್ಸಂ | ಸಂಶಿಶ್ವರೀಃऽಇವ |

ಯಃ | ಇಂದ್ರಸ್ಯ | ಹೃದಂऽಸನಿಃ || ೧೪ ||

|| ಸಾಯಣಭಾಷ್ಯಂ ||

ಯಃ ಸೋಮ ಇಂದ್ರಸ್ಯ ಹೃದಂಸನಿರ್ಹೃದಯಸ್ಯ ಸಂಭಕ್ತಾ ಭವತಿ ತಮಿತ್ತಮೇವ ಸೋಮಂ ನೋಽಸ್ಮಾಕಂ ಗಿರಃ ಸ್ತುತಿರೂಪಾ ವಾಚಃ ಸಂ ವರ್ಧಂತು । ಸಮ್ಯಗ್ವರ್ಧಯಂತು । ತತ್ರ ದೃಷ್ಟಾಂತಃ । ವತ್ಸಂ ಬಾಲಂ ಶಿಶ್ವರೀರಿವ । ಯಥಾ ಶಿಶ್ವಯೋರ್ ಬಢ್ವಪಯಸ್ಕಾ ಮಾತರೋ ವತ್ಸಂ ವರ್ಧಯಂತಿ ತದ್ವದಿತ್ಯರ್ಥಃ ||

|| ಪ್ರತಿಪದಾರ್ಥ ||

ಶಿಶ್ವರೀಃ—ಕ್ಷೀರಸಂಪತ್ತುಳ್ಳ ಗೋವುಗಳು । ವತ್ಸಂ ಇವ—ತಮ್ಮ ಕುರುಗಳನ್ನು ಆದರದಿಂದ ನೆಕ್ಕಿ ಪುಷ್ಟಿಗೊಳಿಸುವಂತೆ । ಯಃ—ಯಾವ ಸೋಮವು । ಇಂದ್ರಸ್ಯ—ಇಂದ್ರನ । ಹೃದಂಸನಿಃ—ಹೃದಯಕ್ಕೆ ತೃಪ್ತಿಯನ್ನುಂಟುಮಾಡುವುದೋ । ತಮಿತ್—ಆ ಸೋಮವನ್ನೇ । ನಃ—ನಮ್ಮ । ಗಿರಃ—ಸ್ತುತಿವಾಕ್ಕುಗಳು । (ಸಂ) ವರ್ಧಂತು—ವೃದ್ಧಿಗೊಳಿಸಲಿ.

|| ಭಾವಾರ್ಥ ||

ಕ್ಷೀರಸಂಪತ್ತುಳ್ಳ ಗೋವುಗಳು ತಮ್ಮ ಕರುಗಳನ್ನು ಆದರದಿಂದ ನೆಕ್ಕಿ ಪುಷ್ಟಿಗೊಳಿಸುವಂತೆ ಯಾವ ಸೋಮವು ಇಂದ್ರನ ಹೃದಯಕ್ಕೆ ತೃಪ್ತಿಯನ್ನುಂಟುಮಾಡುವುದೋ ಆ ಸೋಮವನ್ನೇ ನಮ್ಮ ಸ್ತುತಿವಾಕ್ಕುಗಳು ವೃದ್ಧಿಗೊಳಿಸಲಿ.

English Translation

May our praises foster him who wins the heart of Indra, as cows who have young ones (foster) their calf.

|| ಸಂಹಿತಾಪಾಠಃ ||

ಅರ್ಷಾ ಣಃ ಸೋಮ ಶಂ ಗವೇ ಧುಕ್ಷಸ್ವ ಪಿಪ್ಯುಷೀಮಿಷಂ ।
ವರ್ಧಾ ಸಮುದ್ರಮುಕ್ಥ್ಯಂ || ೧೫ ||

|| ಪದಪಾಠಃ ||

ಅರ್ಷ । ನಃ । ಸೋಮ । ಶಂ । ಗವೇ । ಧುಕ್ಷಸ್ವ । ಪಿಪ್ಯುಷೀಂ । ಇಷಂ ।
ವರ್ಧ । ಸಮುದ್ರಂ । ಉಕ್ಥ್ಯಂ || ೧೫ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ನೋಽಸ್ಮಾಕಂ ಗವೇ ಶಂ ಸುಖಮರ್ಷ । ಕ್ಷರ । ಅಪಿ ಚ ಪಿಪ್ಯುಷೀಂ ಪ್ರವೃದ್ಧಮಿಷಮನ್ನಂ ಧುಕ್ಷಸ್ವ । ಪೂರಯ । ಕಿಂಚೋಕ್ಥ್ಯಂ ಪ್ರಶಸ್ಯಂ ಸಮುದ್ರಮುದಕಂ ವರ್ಧ । ವರ್ಧಯ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ನಃ**— ನಮ್ಮ | **ಗವೇ**—ಗೋವುಗಳಿಗೆ | **ಶಂ**—ಸುಖವನ್ನು | **ಅರ್ಷ**—ಒದಗಿಸು | **ಪಿಪ್ಯುಷೀಂ**—ಪುಷ್ಟಿಕರವಾದ | **ಇಷಂ**—ಅನ್ನವನ್ನು | **ಧುಕ್ಷಸ್ವ**—ತುಂಬಿಕೊಡು | **ಉಕ್ಥ್ಯಂ**—ಪ್ರಶಸ್ಯವಾದ | **ಸಮುದ್ರಂ**—ಉದಕವನ್ನು | **ವರ್ಧ**—ಹೆಚ್ಚುಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ನಮ್ಮ ಗೋವುಗಳಿಗೆ ಸುಖವನ್ನು ಒದಗಿಸು. ನಮಗೆ ಪುಷ್ಟಿಕರವಾದ ಅನ್ನವನ್ನು ತುಂಬಿಕೊಡು, ಪ್ರಶಸ್ಯವಾದ ಉದಕವನ್ನು ಹೆಚ್ಚುಮಾಡು.

English Translation

Soma, pour prosperity upon our cattle, milk forth (for us) nutritious food; augment the laudable water.

|| ಸಂಹಿತಾಪಾಠಃ ||

ಪವಮಾನೋ ಅಜೀಜನದ್ದಿವಶ್ಚಿತ್ರಂ ನ ತನ್ಯತುಂ |

ಜ್ಯೋತಿರ್ವೈಶ್ವಾನರಂ ಬೃಹತ್ || ೧೬ ||

|| ಪದಪಾಠಃ ||

ಪವಮಾನಃ | ಅಜೀಜನತ್ | ದಿವಃ | ಚಿತ್ರಂ | ನ | ತನ್ಯತುಂ |

ಜ್ಯೋತಿಃ | ವೈಶ್ವಾನರಂ | ಬೃಹತ್ || ೧೬ ||

|| ಸಾಯಣಭಾಷ್ಯಂ ||

**ಪವಮಾನಃ ಸೋಮೋ ಬೃಹನ್ಮಹದ್ವೈಶ್ವಾನರಂ ವೈಶ್ವಾನರಾಖ್ಯಂ ಜ್ಯೋತಿಸ್ತೇಜೋ ದಿವೋ ದ್ಯುಲೋಕಸ್ಯ ಚಿತ್ರಂ ತನ್ಯತುಂ ನಾಶನಿಮಿವಾಜೀಜನತ್ | ಅಜನಯತ್ ||**

|| ಪ್ರತಿಪದಾರ್ಥ ||

**ಚಿತ್ರಂ**—ಆಕರ್ಷಕವಾದ | **ತನ್ಯತುಂ ನ**—ವಿದ್ಯುಜ್ಜ್ಯೋತಿಯನ್ನು ಉತ್ಪನ್ನಮಾಡುವಂತೆ | **ಬೃಹತ್**—ಮಹತ್ತಾದುದೂ | **ವೈಶ್ವಾನರಂ**—ವೈಶ್ವಾನರಸಂಜ್ಞಕವಾದುದೂ ಆದ | **ಜ್ಯೋತಿಃ**—ತೇಜಸ್ಸನ್ನು | **ದಿವಃ**—ಅಂತರಿಕ್ಷದಲ್ಲಿ | **ಪವಮಾನಃ**—ಸೋಮದೇವನು | **ಅಜೀಜನತ್**—ಉತ್ಪನ್ನ ಮಾಡಿದ್ದಾನೆ.

|| ಭಾವಾರ್ಥ ||

ಆಕರ್ಷಕವಾದ ವಿದ್ಯುಜ್ಜ್ಯೋತಿಯನ್ನು ಉತ್ಪನ್ನಮಾಡುವಂತೆ ಮಹತ್ತಾದುದೂ, ವೈಶ್ವಾನರಸಂಜ್ಞಕ ವಾದುದೂ ಆದ ತೇಜಸ್ಸನ್ನು ಅಂತರಿಕ್ಷದಲ್ಲಿ ಸೋಮದೇವನು ಉತ್ಪನ್ನ ಮಾಡಿದ್ದಾನೆ.

English Translation

The pure (Soma) has generated in heaven the great Vaishwanara light like the wonderful thunder.

|| ಸಂಹಿತಾಪಾಠಃ ||

ಪವಮಾನಸ್ಯ ತೇ ರಸೋ ಮದೋ ರಾಜನ್ನದುಚ್ಛುನಃ ।

ವಿ ವಾರಮವ್ಯಮರ್ಷತಿ || ೧೭ ||

|| ಪದಪಾಠಃ ||

ಪವಮಾನಸ್ಯ । ತೇ । ರಸಃ । ಮದಃ । ರಾಜನ್ । ಅದುಚ್ಛುನಃ ।

ವಿ । ವಾರಂ । ಅವ್ಯಂ । ಅರ್ಷತಿ || ೧೭ ||

|| ಸಾಯಣಭಾಷ್ಯಂ ||

ಹೇ ರಾಜನ್ದೀಪ್ಯಮಾನ ಸೋಮ ಪವಮಾನಸ್ಯ ಕ್ಷರತಸ್ತೇ ತವಾದುಚ್ಛುನೋ ರಕ್ಷೋವರ್ಜಿತೋ ಮದೋ ಮದಕರೋ ರಸೋಽವ್ಯಮವಿಮಯಂ ವಾರಂ ವಾಲಂ ದಶಾಪವಿತ್ರಮರ್ಷತಿ । ಅಭಿಗಚ್ಛತಿ ||

|| ಪ್ರತಿಪದಾರ್ಥ ||

ರಾಜನ್—ಪ್ರಕಾಶಮಾನನಾದ ಎಲೈ ಸೋಮದೇವನೇ । ಪವಮಾನಸ್ಯ—ಪ್ರವಾಹರೂಪದಲ್ಲಿರುವ । ತೇ—ನಿನ್ನ । ಅದುಚ್ಛುನಃ—ದೋಷರಹಿತವಾದುದೂ । ಮದಃ—ಹರ್ಷಕಾರಕವಾದುದೂ ಆದ । ರಸಃ—ರಸವು ಅವ್ಯಂ—ಉಣ್ಣೆಯಿಂದ ನಿರ್ಮಿತವಾದ । ವಾರಂ—ದಶಾಪವಿತ್ರದ ಬಾಲಗಳನ್ನು । ವಿ ಅರ್ಷತಿ—ಶುದ್ಧಿಗಾಗಿ ಹೋಗಿ ಸೇರುತ್ತದೆ.

|| ಭಾವಾರ್ಥ ||

ಪ್ರಕಾಶಮಾನನಾದ ಎಲೈ ಸೋಮದೇವನೇ, ಪ್ರವಾಹ ರೂಪದಲ್ಲಿರುವ ನಿನ್ನ ದೋಷರಹಿತವಾದುದೂ ಹರ್ಷಕಾರಕವಾದುದೂ ಆದ ರಸವು ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನಾರುಗಳನ್ನು ಶುದ್ಧಿಗಾಗಿ ಹೋಗಿ ಸೇರುತ್ತದೆ.

## English Trauslation

Bright shining Soma, the juice of you when you flow enters the woollen filter, exhilarating, free from evil.

|| ಸಂಹಿತಾಪಾಠಃ ||

ಪವಮಾನ ರಸಸ್ತವ ದಕ್ಷೋ ವಿ ರಾಜತಿ ದ್ಯುಮಾನ್ ।

ಜ್ಯೋತಿರ್ವಿಶ್ವಂ ಸ್ವರ್ದೃಶೇ ॥ ೧೮ ॥

|| ಪದಪಾಠಃ ||

ಪವಮಾನ । ರಸಃ । ತವ । ದಕ್ಷಃ । ವಿ । ರಾಜತಿ । ದ್ಯುಽಮಾನ್ ।

ಜ್ಯೋತಿಃ । ವಿಶ್ವಂ । ಸ್ವಃ । ದೃಶೇ ॥ ೧೮ ॥

|| ಸಾಯಣಭಾಷ್ಯಂ ||

ಹೇ ಪವಮಾನ ಸೋಮ ತವ ತ್ವದೀಯೋ ದಕ್ಷೋ ವೃದ್ಧೋ ದ್ಯುಮಾನ್ದೀಪ್ತಿಮಾನ್ರಸೋ ವಿರಾಜತಿ । ಪ್ರಕಾಶತೇ । ನ ಕೇವಲಂ ಸ್ವಯಮೇವ ಪ್ರಕಾಶತೇ ಕಿಂತು ವಿಶ್ವಂ ವ್ಯಾಪ್ತಂ ಸ್ವಃ ಸರ್ವಂ ಜ್ಯೋತಿಸ್ತೇಜಶ್ಚ ದೃಶೇ ದ್ರಷ್ಟುಂ ಕರೋತೀತಿ ಶೇಷಃ ॥

|| ಪ್ರತಿಪದಾರ್ಥ ||

**ಪವಮಾನ**—ಎಲೈಸೋಮದೇವನೇ । **ತವ**—ನಿನ್ನ । **ದಕ್ಷಃ**—ಪ್ರಭಾವಯುತವಾದುದೂ । **ದ್ಯುಮಾನ್**—ಪ್ರಭಾಯುತವಾದುದೂ ಆದ । **ರಸಃ**—ರಸವು । **ವಿ ರಾಜತಿ**—ಕಂಗೊಳಿಸುತ್ತದೆ । **ವಿಶ್ವಂ**—ಸರ್ವವ್ಯಾಪಕವೂ । **ಸ್ವಃ**—ಸಮಸ್ತವೂ ಆದ । **ಜ್ಯೋತಿಃ**—ತೇಜಸ್ಸನ್ನು । **ದೃಶೇ**—ಎಲ್ಲರಿಗೂ ಗೋಚರವಾಗುವಂತೆ ನಿರ್ಮಿಸುತ್ತದೆ.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ಶಕ್ತಿಯುತವಾದುದೂ, ಕಾಂತಿಯುತವಾದುದೂ ಆದ ರಸವು ಕಂಗೊಳಿಸುತ್ತದೆ. ಸರ್ವವ್ಯಾಪಕವೂ, ಸಮಸ್ತವೂ ಆದ ತೇಜಸ್ಸನ್ನು ಸಹ ಎಲ್ಲರಿಗೂ ಗೋಚರವಾಗುವಂತೆ ನಿರ್ಮಿಸುತ್ತದೆ.

## English Translation

Purified Soma, your juice as it increases shines bright; it (makes) a pervading universal light to be seen.

॥ ಸಂಹಿತಾಪಾಠಃ ॥

ಯಸ್ತೇ ಮದೋ ವರೇಣ್ಯಸ್ತೇನಾ ಪವಸ್ವಾಂಧಸಾ ।
ದೇವಾವೀರಘಶಂಸಹಾ ॥ ೧೯ ॥

॥ ಪದಪಾಠಃ ॥

ಯಃ । ತೇ । ಮದಃ । ವರೇಣ್ಯಃ । ತೇನ । ಪವಸ್ವ । ಅಂಧಸಾ ।
ದೇವಽಅವೀಃ । ಅಘಶಂಸಽಹಾ ॥ ೧೯ ॥

॥ ಸಾಯಣಭಾಷ್ಯಂ ॥

ಹೇ[ಸೋಮ ತೇ ತವ ದೇವಾವೀರ್ದೇವಕಾಮೋಽಘಶಂಸಹಾ ರಾಕ್ಷಸಾನಾಂ ಹಂತಾ ವರೇಣ್ಯಃ ಸರ್ವೈರ್ವರಣೀಯೋ ಮದೋ ಮದಕರೋ ಯೋ ರಸೋ ವಿದ್ಯತೇ ತೇನ ರಸೇನಾಂಧಸಾದನೀಯೇನ ಪವಸ್ವ । ಕ್ಷರ ।

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ತೇ—ನಿನ್ನ । ದೇವಾವೀಃ—ದೇವತೆಗಳ ಸಂಗವನ್ನಪೇಕ್ಷಿಸುವುದೂ । ಅಘಶಂಸಹಾ—ಪಾಪಿಷ್ಠರನ್ನು ನಾಶಮಾಡುವುದೂ । ವರೇಣ್ಯಃ—ಅತ್ಯುತ್ಕೃಷ್ಟವಾದುದೂ । ಮದಃ—ಹರ್ಷಕಾರಕವಾದುದೂ ಆದ । ಯಃ—ಯಾವ ರಸವಿರುವುದೋ । ತೇನ—ಅಂತಹ । ಅಂಧಸಾ—ರಸದೊಡನೆ । ಪವಸ್ವ—ಧಾರಾರೂಪದಲ್ಲಿ ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ದೇವತೆಗಳ ಸಂಗವನ್ನಪೇಕ್ಷಿಸುವುದೂ, ಪಾಪಿಷ್ಠರನ್ನು ನಾಶಮಾಡುವುದೂ, ಅತ್ಯುತ್ಕೃಷ್ಟವಾದುದೂ, ಹರ್ಷಕಾರಕವಾದುದೂ ಆದ ಯಾವ ರಸವಿರುವುದೋ ಅಂತಹ ರಸದೊಡನೆ ಧಾರಾರೂಪದಲ್ಲಿ ಪ್ರವಹಿಸು

English Translation.

Flow forth with that juice of yours which is exhilarating, the best gratifying the gods, the slayer of Rakshasas.

॥ ಸಂಹಿತಾಪಾಠಃ ॥

ಜಘ್ನಿರ್ವೃತ್ರಮಮಿತ್ರಿಯಂ ಸಸ್ನಿರ್ವಾಜಂ ದಿವೇದಿವೇ ।
ಗೋಷಾ ಉ ಅಶ್ವಸಾ ಅಸಿ ॥ ೨೦ ॥

॥ ಪದಪಾಠಃ ॥

ಜಘ್ನಿಃ । ವೃತ್ರಂ । ಅಮಿತ್ರಿಯಂ । ಸಸ್ನಿಃ । ವಾಜಂ । ದಿವೇಽದಿವೇ ।

ಗೋಽಸಾಃ । ಊಂ ಇತಿ । ಅಶ್ವಽಸಾಃ । ಅಸಿ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಮಮಿತ್ರಿಯಮಮಿತ್ರಭವಂ ವೃತ್ರಂ ಶತ್ರುಂ ಜಘ್ನಿರ್ಹಂತಾಸಿ । ಭವಸಿ । ಕಿಂಚ ದಿವೇದಿವೇ ಪ್ರತಿದಿನಂ ವಾಜಂ ಸಂಗ್ರಾಮಂ ಸಸ್ನಿಃ ಸಂಭಕ್ತಾಸಿ । ಕಿಂಚ ಗೋಷಾ ಗವಾಂ ದಾತಾಸಿ । ಅಶ್ವಸಾ ಅಶ್ವಾನಾಂ ದಾತಾ ಚಾಸಿ ॥

॥ ಪ್ರತಿಪದಾರ್ಥ ॥

( ಎಲೈ ಸೋಮದೇವನೇ ) ಅಮಿತ್ರಿಯಂ— ಶತ್ರುತ್ವವನ್ನು ಬೆಳೆಸುವ । ವೃತ್ರಂ—ಅಸುರನನ್ನು । ಜಘ್ನಿಃ—ಕೊಲ್ಲುವವನಾಗಿ । ಅಸಿ—ಆಗಿದ್ದೀಯೆ । ದಿವೇದಿವೇ—ಪ್ರತಿದಿನವೂ । ವಾಜಂ—ಸಂಗ್ರಾಮವನ್ನು । ಸಸ್ನಿಃ—ಅಪೇಕ್ಷಿಸುತ್ತೀಯೆ । ಗೋಷಾಃ— ಗೋವುಗಳನ್ನು ಕೊಡುವವನೂ । ಅಶ್ವಸಾಃ— ಅಶ್ವಪ್ರದಾತನೂ ಆಗಿದ್ದೀಯೆ.

॥ಭಾವಾರ್ಥ ॥

ಎಲೈ ಸೋಮದೇವನೇ, ಶತ್ರುತ್ವವನ್ನು ಬೆಳೆಸುವ ಅಸುರನನ್ನು ನೀನು ನಾಶಮಾಡುತ್ತೀಯೆ. ನೀನೆ ಅವನೊಡನೆ ನಿತ್ಯವೂ ಸಂಗ್ರಾಮವನ್ನು ಇಚ್ಛಿಸುತ್ತೀಯೆ. ನೀನು ಗೋದಾಯಕನೂ ಅಶ್ವಪ್ರದಾತೃವೂ ಆಗಿದ್ದೀಯೆ

## English Translation.

You are the slayer of the hostile Vritra, the enjoyer of battle day by day, the giver of cows and the giver of horses.

॥ ಸಂಹಿತಾಪಾಠಃ ॥

ಸಂಮಿಶ್ಲೋ ಅರುಷೋ ಭವ ಸೂಪಸ್ಥಾಭಿರ್ನ ಧೇನುಭಿಃ ।

ಸೀದಞ್ಛ್ಯೇನೋ ನ ಯೋನಿಮಾ ॥ ೨೧ ॥

॥ ಪದಪಾಠಃ ॥

ಸಂಽಮಿಶ್ಲಃ । ಅರುಷಃ । ಭವ । ಸುಽಉಪಸ್ಥಾಭಿಃ । ನ । ಧೇನುಽಭಿಃ ।

ಸೀದನ್ । ಶ್ಯೇನಃ । ನ । ಯೋನಿಂ । ಆ ॥ ೨೧ ॥

॥ ಸಾಯಣಭಾಷ್ಯಂ ॥

**ಹೇ ಸೋಮ ತ್ವಂ ಸೂಪಸ್ಥಾಭಿಃ ಶೋಭನೋಪಸ್ಥಾನಾಭಿರ್ಧೇನುಭಿರ್ಗೋಭಿಃ । ಗೋವಿಕಾರೈಃ ಪಯೋಭಿರಿತ್ಯರ್ಥಃ । ಸಂಮಿಶ್ಲಃ ಸಂಮಿಶ್ರಿತಃ ಶ್ಯೇನೋ ನ ಯಥಾ ಶ್ಯೇನಃ ಶೀಘ್ರಮಾಗತ್ಯ ಸ್ಥಾನಮಾಸೀದತಿ ತದ್ವದ್ಯೋನಿಂ ಸ್ವಕೀಯಂ ಸ್ಥಾನಮಾಸೀದನ್ । ನ ಸಂಪ್ರತ್ಯರ್ಥೇ । ಇದಾನೀಮರುಷ ಆರೋಚಮಾನೋ ಭವ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಸೂಪಸ್ಥಾಭಿಃ**—ಉತ್ತಮವಾದ ಆಶ್ರಯಸ್ಥಾನವುಳ್ಳ । **ಧೇನುಭಿಃ**—ಕ್ಷೀರಗಳೊಡನೆ । **ಸಂಮಿಶ್ಲಃ**—ಸೇರಿಕೊಂಡು । **ಶ್ಯೇನೋ ನ**—ಶ್ಯೇನಪಕ್ಷಿಯಂತೆ ವೇಗವಾಗಿ ಬಂದು । **ಯೋನಿಂ**—ನಿನ್ನ ಯಜ್ಞಸ್ಥಾನದಲ್ಲಿ । **ಆ ಸೀದನ್**—ಕುಳಿತುಕೊಂಡು । **ನ**—ಈಗ । **ಅರುಷಃ**—ಪ್ರಕಾಶಮಾನನಾಗಿ । **ಭವ**—ಆಗಿರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಉತ್ತಮವಾದ ಆಶ್ರಯಸ್ಥಾನವುಳ್ಳ ಕ್ಷೀರಗಳೊಡನೆ ಸೇರಿಕೊಂಡು ಶ್ಯೇನಪಕ್ಷಿಯಂತೆ ವೇಗವಾಗಿ ಬಂದು ನಿನ್ನ ಯಜ್ಞಸ್ಥಾನದಲ್ಲಿ ಕುಳಿತುಕೊಂಡು ಈಗ ಪ್ರಕಾಶಮಾನನಾಗಿರು,

## English Translation.

Be now resplendent, mixed with the supporting (products of the) milch cows, alighting like a falcon on your place.

॥ ಸಂಹಿತಾಪಾಠಃ ॥

ಸ ಪವಸ್ವ ಯ ಆವಿಥೇಂದ್ರಂ ವೃತ್ರಾಯ ಹಂತವೇ ।
ವವ್ರಿವಾಂಸಂ ಮಹೀರಪಃ ॥ ೨೨ ॥

॥ ಪದಪಾಠಃ ॥

ಸಃ । ಪವಸ್ವ । ಯಃ । ಆವಿಥ । ಇಂದ್ರಂ । ವೃತ್ರಾಯ । ಹಂತವೇ ।
ವವ್ರಿऽವಾಂಸಂ । ಮಹೀಃ । ಅಪಃ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ಯಸ್ತ್ವಂ ಮಹೀರ್ಮಹತೀರಪೋ ಮಹಾಂತ್ಯುದಕಾನಿ ವವ್ರಿವಾಂಸಂ ನಿರುಂಧಾನಂ ವೃತ್ರಾಯ ವೃತ್ರಂ ಹಂತವೇ ಹಂತುಮಿಂದ್ರಮಾವಿಥ ಅರಕ್ಷಃ ಸ ತ್ವಂ ಪವಸ್ವ । ಧಾರಯಾ ಕ್ಷರ । ಸೋಮಂ ಪೀತ್ವಾ ಮತ್ತಃ ಸನ್ನಿಂದ್ರೋ ಮಹಾಂತ್ಯುದಕಾನಿ ನಿರುಂಧಾನಂ ವೃತ್ರಂ ಜಘಾನೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ), ಮಹೀಃ— ಮಹತ್ತಾದ | ಅಪಃ— ಉದಕಗಳನ್ನು | ವವ್ರಿವಾಂಸಂ— ತಡೆದಿದ್ದ | ವೃತ್ರಾಯ— ವೃತ್ರಾಸುರನನ್ನು | ಹಂತವೇ— ನಾಶಮಾಡಲು | ಇಂದ್ರಂ— ಇಂದ್ರನಿಗೆ | ಯಃ— ಯಾವ ನೀನು ಆವಿಥ— ಸಹಾಯಮಾಡಿದೆಯೋ | ಸಃ— ಅಂತಹ ನೀನು | ಪವಸ್ವ— ಧಾರಾರೂಪದಲ್ಲಿ ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಹತ್ತಾದ ಉದಕಗಳನ್ನು ತಡೆದಿದ್ದ ವೃತ್ರಾಸುರನನ್ನು ನಾಶಮಾಡಲು ಇಂದ್ರನಿಗೆ ಯಾವ ನೀನು ಸಹಾಯಮಾಡಿದೆಯೋ ಅಂತಹ ನೀನು ಧಾರಾರೂಪದಲ್ಲಿ ಪ್ರವಹಿಸು.

English Translation.

Flow you who helped Indra to slay Vritra, who obstructed the grea waters.

॥ ಸಂಹಿತಾಪಾಠಃ ॥

ಸುವೀರಾಸೋ ವಯಂ ಧನಾ ಜಯೇಮ ಸೋಮ ಮೀಢ್ವಃ ।
ಪುನಾನೋ ವರ್ಧ ನೋ ಗಿರಃ ॥ ೨೩ ॥

॥ ಪದಪಾಠಃ ॥

ಸುऽವೀರಾಸಃ । ವಯಂ । ಧನಾ । ಜಯೇಮ । ಸೋಮ । ಮೀಢ್ವಃ ।
ಪುನಾನಃ । ವರ್ಧ । ನಃ । ಗಿರಃ ॥ ೨೩ ॥

॥ ಸಾಯಣಭಾಷ್ಯಂ ॥

ಸುವೀರಾಸಃ ಸುವೀರಾಃ ಕಲ್ಯಾಣಪುತ್ರಾ ವಯಮಮುಹೀಯವ ಆಂಗಿರಸಾ ಧನಾ ಶತ್ರೂಣಾಂ ಧನಾನಿ ಜಯೇಮ । ಶತ್ರೂಞ್ಜಿತ್ವಾ ತದೀಯಾನಿ ಧನಾನಿ ಸ್ವೀಕುರ್ಯಾಮೇತ್ಯರ್ಥಃ । ಹೇ ಮೀಢ್ವಃ ಸೇಕ್ತಃ ಸೋಮ ಪುನಾನಃ ಪೂಯಮಾನಸ್ತ್ವಂ ನೋऽಸ್ಮಾಕಂ ಗಿರಃ ಸ್ತುತಿರೂಪಾ ವಾಚಃ ವರ್ಧ । ವರ್ಧಯ ॥

॥ ಪ್ರತಿಪದಾರ್ಥ ॥

ಮೀಢ್ವಃ— ಕಾಮವರ್ಷಕನಾದ | ಸೋಮ— ಎಲೈ ಸೋಮದೇವನೇ | ವಯಂ— ನಾವು | ಸುವೀರಾಸಃ— ಉತ್ತಮನಾದ ವೀರಪುತ್ರರಿಂದೊಡಗೂಡಿ | ಧನಾ— ಶತ್ರುಧನಗಳನ್ನು | ಜಯೇಮ— ಜಯಿಸುವಂತಾಗಲಿ ಪುನಾನಃ— ಶುದ್ಧಿಕಾರಕನಾದ ನೀನು | ನಃ— ನಮ್ಮ | ಗಿರಃ— ಸ್ತುತಿವಾಕ್ಯಗಳನ್ನು | ವರ್ಧ— ಪುಷ್ಟಿಗೊಳಿಸು.

|| ಭಾವಾರ್ಥ ||

ಕಾಮವರ್ಷಕನಾದ ಎಲೈ ಸೋಮದೇವನೇ, ನಾವು ಉತ್ತಮವಾದ ವೀರಪುತ್ರರಿಂದೊಡಗೂಡಿ ಶತ್ರುಧನಗಳನ್ನು ಜಯಿಸುವಂತಾಗಲಿ. ಶುದ್ಧಿಕಾರಕನಾದ ನೀನು ನಮ್ಮ ಸ್ತುತಿವಾಕ್ಯಗಳನ್ನು ಪುಷ್ಟಿಗೊಳಿಸು.

English Translation.

May we, possessed of excellent male offspring, conquer the wealth (of our enemies), O Soma, the sprinkler; being purified, accept our praises.

|| ಸಂಹಿತಾಪಾಠಃ ||

ತ್ವೋತಾಸಸ್ತವಾವಸಾ ಸ್ಯಾಮ ವನ್ವಂತ ಆಮುರಃ |
ಸೋಮ ವ್ರತೇಷು ಜಾಗೃಹಿ || ೨೪ ||

|| ಪದಪಾಠಃ ||

ತ್ವಾऽಊತಾಸಃ | ತವ | ಅವಸಾ | ಸ್ಯಾಮ | ವನ್ವಂತಃ | ಆऽಮುರಃ |
ಸೋಮ | ವ್ರತೇಷು | ಜಾಗೃಹಿ || ೨೪ ||

|| ಸಾಯಣಭಾಷ್ಯಂ ||

ಹೇ ಸೋಮ ತವ ತ್ವದೀಯೇನಾವಸಾ ರಕ್ಷಣೇನ ತ್ವೋತಾಸಸ್ತ್ವಯಾ ರಕ್ಷಿತಾಃ ಸಂತೋ ವನ್ವಂತಃ ಶತ್ರೂನ್ಭಜಮಾನಾ ಆಮುರಸ್ತೇಷಾಮಭಿಮಾರಕಾಃ ಭವೇಮ | ವ್ರತೇಷ್ವಸ್ಮಾಕಂ ಕರ್ಮಸು ಜಾಗೃಹಿ | ಪ್ರವೃದ್ಧೋ ಭವ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ತವ**—ನಿನ್ನ | **ಅವಸಾ**—ರಕ್ಷಣೆಯಿಂದ | **ತ್ವೋತಾಸಃ**—ಸಂರಕ್ಷಿಸಲ್ಪಟ್ಟವರಾದ ನಾವು | **ವನ್ವಂತಃ**—ಶತ್ರುಧನಗಳನ್ನನುಭವಿಸುತ್ತಲೂ | **ಆಮುರಃ**—ಅವರ ನಾಶಕರಾಗಿಯೂ | **ಸ್ಯಾಮ**—ಆಗುವಂತಾಗಲಿ| **ವ್ರತೇಷು**— ನಮ್ಮ ಯಜ್ಞಕರ್ಮಗಳಲ್ಲಿ| **ಜಾಗೃಹಿ**—ಎಚ್ಚರವುಳ್ಳವನಾಗಿರು.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ರಕ್ಷಣೆಯಿಂದ ಸಂರಕ್ಷಿಸಲ್ಪಟ್ಟವರಾದ ನಾವು ಶತ್ರುಧನಗಳನ್ನನುಭವಿಸುತ್ತಲೂ, ಅವರ ನಾಶಕರಾಗಿಯೂ ಆಗುವಂತಾಗಲಿ. ನಮ್ಮ ಯಜ್ಞಕರ್ಮಗಳಲ್ಲಿ ಎಚ್ಚರವುಳ್ಳವನಾಗಿರು.

English Translation.

Protected by you, through your protection may we be victorious, slaying (our enemies); be vigilant, Soma, at our sacrifiees.

|| ಸಂಹಿತಾಪಾಠಃ ||

ಅಪಘ್ನನ್ಪವತೇ ಮೃಧೋಽಪ ಸೋಮೋ ಅರಾವ್ಣಃ ।
ಗಚ್ಛನ್ನಿಂದ್ರಸ್ಯ ನಿಷ್ಕೃತಂ || ೨೫ ||

|| ಪದಪಾಠಃ ||

ಅಪಽಘ್ನನ್ । ಪವತೇ । ಮೃಧಃ । ಅಪ । ಸೋಮಃ । ಅರಾವ್ಣಃ ।
ಗಚ್ಛನ್ । ಇಂದ್ರಸ್ಯ । ನಿಃಽಕೃತಂ || ೨೫ ||

|| ಸಾಯಣಭಾಷ್ಯಂ ||

ಸೋಮೋ ಮೃಧೋ ಹಿಂಸಕಾಞ್ಛತ್ರೂನಪಘ್ನನ್ಮಾರಯನ್ನರಾವ್ಣಃ ಶಕ್ತೌ ಸತ್ಯಾಂ ಧನಾನಾಮದಾತ್ರೂಂಶ್ಚಾಪಘ್ನನ್ನಿಂದ್ರಸ್ಯ ನಿಷ್ಕೃತಂ ಸ್ಥಾನಂ ಗಚ್ಛನ್ ಪ್ರಾಪ್ನುವನ್ ಪವತೇ । ಧಾರಯಾ ಕ್ಷರತಿ ||

|| ಪ್ರತಿಪದಾರ್ಥ ||

ಸೋಮಃ—ಸೋಮದೇವನು । ಮೃಧಃ—ಹಿಂಸಕರಾದ ಶತ್ರುಗಳನ್ನು । ಅಪಘ್ನನ್—ನಾಶಪಡಿಸುತ್ತಲೂ । ಅರಾವ್ಣಃ—ಧನವಂತರಾದರೂ ಅದಾತೃಗಳಾದ ಲೋಭಿಗಳನ್ನೂ । ಅಪ—ನಾಶಪಡಿಸುತ್ತಲೂ । ಇಂದ್ರಸ್ಯ—ಇಂದ್ರನ । ನಿಷ್ಕೃತಂ— ಸ್ಥಾನವನ್ನು । ಗಚ್ಛನ್—ಹೋಗಿ ಸೇರುವುದಕ್ಕಾಗಿ । ಪವತೇ— ಧಾರಾರೂಪದಲ್ಲಿ ಪ್ರವಹಿಸುತ್ತಾನೆ.

|| ಭಾವಾರ್ಥ ||

ಸೋಮದೇವನು ಹಿಂಸಕರಾದ ಶತ್ರುಗಳನ್ನು ನಾಶಪಡಿಸುತ್ತಲೂ, ಧನವಂತರಾದರೂ ಅದಾತೃಗಳಾದ ಲೋಭಿಗಳನ್ನು ನಾಶಪಡಿಸುತ್ತಲೂ ಇಂದ್ರನ ಸ್ಥಾನವನ್ನು ಹೋಗಿ ಸೇರುವುದಕ್ಕಾಗಿ ಧಾರಾರೂಪದಲ್ಲಿ ಪ್ರವಹಿಸುತ್ತಾನೆ.

English Translation.

The Soma flows, slaying the maligant, slaying the withholders (of wealth), proceeding to Indra's consecrated (station).

|| ಸಂಹಿತಾಪಾಠಃ ||

ಮಹೋ ನೋ ರಾಯ ಆ ಭರ ಪವಮಾನ ಜಹೀ ಮೃಧಃ ।
ರಾಸ್ವೇಂದೋ ವೀರವದ್ಯಶಃ || ೨೬ ||

|| ಪದಪಾಠಃ ||

ಮಹಃ | ನಃ | ರಾಯಃ | ಆ | ಭರ | ಪವಮಾನ | ಜಹಿ | ಮೃಧಃ |

ರಾಸ್ವ | ಇಂದೋ ಇತಿ | ವೀರಽವತ್ | ಯಶಃ || ೨೬ ||

|| ಸಾಯಣಭಾಷ್ಯಂ ||

ಹೇ ಪವಮಾನೇಂದೋ ಸೋಮ ನೋಽಸ್ಮಾಕಂ ಮಹೋ ಮಹಾಂತಿ ರಾಯೋ ಧನಾನ್ಯಾಭರ | ಆಹರ | ಮೃಧೋ ಹಿಂಸಕಾಞ್ಛತ್ರೂಂಶ್ಚ ಜಹಿ | ಮಾರಯ | ವೀರವತ್ಪುತ್ರಾದ್ಯುಪೇತಾಂ ಯಶಃ ಕೀರ್ತಿಂ ಚ ರಾಸ್ವ | ಅಸ್ಮಭ್ಯಂ ದೇಹಿ ||

|| ಪ್ರತಿಪದಾರ್ಥ ||

ಪವಮಾನ—ಶುದ್ಧಿಕಾರಕನಾದ | ಇಂದೋ—ಎಲೈ ಸೋಮದೇವನೇ | ನಃ—ನಮಗೆ | ಮಹಃ—ಮಹತ್ತಾದ | ರಾಯಃ—ಧನಗಳನ್ನು | ಆ ಭರ—ತಂದೊದಗಿಸು | ಮೃಧಃ—ಹಿಂಸಕರಾದ ಶತ್ರುಗಳನ್ನು | ಜಹಿ—ನಾಶಪಡಿಸು | ವೀರವತ್—ವೀರಪುತ್ರಾದಿಗಳಿಂದ ಕೂಡಿದ | ಯಶಃ—ಕೀರ್ತಿಯನ್ನೂ | ರಾಸ್ವ—ಕೊಡು.

|| ಭಾವಾರ್ಥ ||

ಶುದ್ಧಿಕಾರಕನಾದ ಎಲೈ ಸೋಮದೇವನೇ, ನಮಗೆ ಮಹತ್ತಾದ ಧನಗಳನ್ನು ತಂದೊದಗಿಸು. ಹಿಂಸಕರಾದ, ಶತ್ರುಗಳನ್ನು ನಾಶಪಡಿಸು. ವೀರಪುತ್ರಾದಿಗಳಿಂದ ಕೂಡಿದ ಕೀರ್ತಿಯನ್ನು ಕೊಡು.

### English Translation.

Bring us, purifier, much wealth: conquer our foes; grant us, Indu fame and male offspring.

|| ಸಂಹಿತಾಪಾಠಃ ||

ನ ತ್ವಾ ಶತಂ ಚನ ಹ್ರುತೋ ರಾಧೋ ದಿತ್ಸಂತಮಾ ಮಿನನ್ |

ಯತ್ಪುನಾನೋ ಮಖಸ್ಯಸೇ || ೨೭ ||

|| ಪದಪಾಠಃ ||

ನ | ತ್ವಾ | ಶತಂ | ಚನ | ಹ್ರುತಃ | ರಾಧಃ | ದಿತ್ಸಂತಂ | ಆ | ಮಿನನ್ |

ಯತ್ | ಪುನಾನಃ | ಮಖಸ್ಯಸೇ || ೨೭ ||

|| ಸಾಯಣಭಾಷ್ಯಂ ||

ಹೇ ಸೋಮ ರಾಧೋ ಧನಮಾ ದಿತ್ಸಂತಮಾದಾತುಮಿಚ್ಛಂತಂ ತ್ವಾ ತ್ವಾಂ ಶತಂ ಚನ ಬಹವೋಽಪಿ ಹ್ರುತೋ ಹಿಂಸಕಾಃ ಶತ್ರವೋ ನ ಮಿನತ್ । ನ ಹಿಂಸಂತಿ । ಕದೇತ್ಯತ್ರಾಹ । ಯದ್ಯದಾ ಪುನಾನಃ ಪೂಯಮಾನಸ್ತ್ವಂ ಮಖಸ್ಯಸೇ ಅಸ್ಮಭ್ಯಂ ಧನಂ ದಾತುಮಿಚ್ಛಸಿ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ಯತ್—ಯಾವಾಗ | ಪುನಾನಃ—ಶುದ್ಧಿಕಾರಕನಾದ ನೀನು | ಮಖಸ್ಯಸೇ—ನಮಗೆ ಧನವನ್ನು ಕೊಡಲು ಇಚ್ಛಿಸುವೆಯೋ ಆಗ | ರಾಧಃ—ಧನವನ್ನು | ಆ ದಿತ್ಸಂತಂ—ಕೊಡಲಿಚ್ಛೆಯುಳ್ಳ | ತ್ವಾ—ನಿನ್ನನ್ನು | ಶತಂಚನ ಹ್ರುತಃ—ಅನೇಕ ಸಂಖ್ಯಾಕರಾದ ಶತ್ರುಗಳೂ ಸಹ | ನ ಮಿನನ್—ಹಿಂಸಿಸಲಾರರು.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವಾಗ ಶುದ್ಧಿಕಾರಕನಾದ ನೀನು ನಮಗೆ ಧನವನ್ನು ಕೊಡಲಿಚ್ಛಿಸುವೆಯೋ ಆಗ ಧನವನ್ನು ಕೊಡಲಿಚ್ಛೆಯುಳ್ಳ ನಿನ್ನನ್ನು ಅನೇಕಸಂಖ್ಯಾಕರಾದ ಶತ್ರುಗಳೂ ಸಹ ಹಿಂಸಿಸಲಾರರು.

## English Translation.

A hundred fces harm you not; purposing to give wealth when being purified you are benevolently iuclined.

|| ಸಂಹಿತಾಪಾಠಃ ||

ಪವಸ್ವೇಂದೋ ವೃಷಾ ಸುತಃ ಕೃಧೀ ನೋ ಯಶಸೋ ಜನೇ ।

ವಿಶ್ವಾ ಅಪ ದ್ವಿಷೋ ಜಹಿ || ೨೮ ||

|| ಪದಪಾಠಃ ||

ಪವಸ್ವ । ಇಂದೋ ಇತಿ । ವೃಷಾ । ಸುತಃ । ಕೃಧಿ । ನಃ । ಯಶಸಃ । ಜನೇ ।

ವಿಶ್ವಾಃ । ಅಪ । ದ್ವಿಷಃ । ಜಹಿ || ೨೮ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಸುತೋಽಭಿಷುತೋ ವೃಷಾ ಸೇಕ್ತಾ ತ್ವಂ ಪವಸ್ವ । ಧಾರಯಾ ಕ್ಷರ । ಜನೇ ಜನಪದೇಷು ನೋಽಸ್ಮಾನ್ಯಶಸೋ ಯಶಸ್ವಿನಃ ಕೃಧಿ । ಕುರು । ವಿಶ್ವಾಃ ಸರ್ವಾನ್ ದ್ವಿಷೋ ದ್ವೇಷ್ಟ್ರ್ಞ್ಛತ್ರೂನಪ ಜಹಿ । ಮಾರಯ ಚ ।

| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | **ಸುತಃ**—ಹಿಂಡಲ್ಪಟ್ಟವನೂ | **ವೃಷಾ**—ಕಾಮವರ್ಷಕನೂ ಆದ ನೀನು | **ಪವಸ್ವ**—ಧಾರಾರೂಪದಲ್ಲಿ ಪ್ರವಹಿಸು | **ಜನೇ**—ನಮ್ಮ ಗುಂಪಿನ ಜನರಲ್ಲಿ | **ನಃ**—ನಮ್ಮನ್ನು | **ಯಶಸಃ**—ಯಶಸ್ವಿಗಳನ್ನಾಗಿ | **ಕೃಧಿ**—ಮಾಡು | **ವಿಶ್ವಾಃ**—ಸಮಸ್ತರಾದ | **ದ್ವಿಷಃ**—ನಮ್ಮ ಶತ್ರುಗಳನ್ನೂ | **ಅಪ ಜಹಿ**—ಜಯಿಸಿ ನಾಶಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ಹಿಂಡಲ್ಪಟ್ಟವನೂ, ಇಷ್ಟಾರ್ಥಪ್ರದನೂ ಆದ ನೀನು ಧಾರಾರೂಪದಲ್ಲಿ ಪ್ರವಹಿಸು. ನಮ್ಮ ಗುಂಪಿನ ಜನರಲ್ಲೆಲ್ಲಾ ನಮ್ಮನ್ನು ಯಶಸ್ವಿಗಳನ್ನಾಗಿ ಮಾಡು. ನಮ್ಮ ಸಮಸ್ತ ಶತ್ರುಗಳನ್ನೂ ಜಯಿಸಿ ನಾಶಪಡಿಸು.

## English Translation.

You, Indu. when effused, the showerer (of benefits). make us celebrated amongst men : slay all our enemies.

|| ಸಂಹಿತಾಪಾಠಃ ||

**ಅಸ್ಯ ತೇ ಸಖ್ಯೇ ವಯಂ ತವೇಂದೋ ದ್ಯುಮ್ನ ಉತ್ತಮೇ |**

**ಸಾಸಹ್ಯಾಮ ಪೃತನ್ಯತಃ || ೨೯ ||**

|| ಪದಪಾಠಃ ||

ಅಸ್ಯ | ತೇ | ಸಖ್ಯೇ | ವಯಂ | ತವ | ಇಂದೋ ಇತಿ | ದ್ಯುಮ್ನೇ | ಉತ್ऽತಮೇ |

ಸಸಹ್ಯಾಮ | ಪೃತನ್ಯತಃ || ೨೯ ||

|| ಸಾಯಣಭಾಷ್ಯಂ ||

**ಹೇ** ಇಂದೋ ಸೋಮ ಅಸ್ಯಾಸ್ಮಿನ್ಯಾಗೇ ವರ್ತಮಾನಸ್ಯ **ತೇ** ತವ **ಸಖ್ಯೇ** ಸಖಿತ್ವೇ **ಸತಿ** ವಯಮಮುಹೀಯುವ ಆಂಗಿರಸಾಸ್ತವ ತ್ವದೀಯ ಉತ್ತಮೇ ಶ್ರೇಷ್ಠೇ ದ್ಯುಮ್ನೇಽನ್ನೇ ತೃಪ್ತಿಂ ಪ್ರಾಪ್ತಾಃ | ತಥಾ ಚ ಯಾಸ್ಕಃ | ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ | ನಿ. ೫-೫. | ಇತಿ | **ಪೃತನ್ಯತೋ** ಯುದ್ಧಮಿಚ್ಛತಃ ಶತ್ರೂನ್ ಸಸಹ್ಯಾಮ | ಅಭಿಭವೇಮ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | **ಅಸ್ಯ**—ಈ ಯಾಗದಲ್ಲಿ ಸ್ಥಿತನಾಗಿರುವ | **ತೇ**—ನಿನ್ನ | **ಸಖ್ಯೇ**—ಮಿತ್ರತ್ವವನ್ನು ಹೊಂದಿರುವ | **ವಯಂ**—ನಾವು | **ತವ**—ನಿನ್ನಿಂದ ಅನುಗೃಹೀತವಾದುದೂ | **ಉತ್ತಮೇ**—

ಅತ್ಯಂತ ಶ್ರೇಷ್ಠವಾದುದೂ | ; ದ್ಯುಮ್ನೇ—ಪ್ರಕಾಶಮಾನವಾದುದೂ ಆದ ಅನ್ನದಿಂದ ತೃಪ್ತಿಯನ್ನು ಹೊಂದಿ | ಪೃತನ್ಯತಃ—ನಮ್ಮ ಶತ್ರುಸೇನೆಗಳನ್ನು | ಸಸಹ್ಯಾಮ—ಜಯಿಸುವಂತಾಗಲಿ.

|| ಭಾವಾರ್ಥ ||

ಎಲೈ ಸೋಮದೇವನೇ, ಈ ಯಾಗದಲ್ಲಿ ಸ್ಥಿತನಾಗಿರುವ ನಿನ್ನ ಮಿತ್ರತ್ವವನ್ನು ಹೊಂದಿರುವ ನಾವು ನಿನ್ನಿಂದ ಅನುಗೃಹೀತವಾದುದೂ, ಅತ್ಯಂತಶ್ರೇಷ್ಠವಾದುದೂ, ಪ್ರಕಾಶಮಾನವಾದುದೂ ಆದ ಅನ್ನದಿಂದ ತೃಪ್ತಿಯನ್ನು ಹೊಂದಿ ನಾವು ನಮ್ಮ ಶತ್ರುಸೇನೆಗಳನ್ನು ಜಯಿಸುವಂತಾಗಲಿ.

## English Translation.

(Emjoying) the friendship of you here and your excellent food, Indu may we overcome our assailants.

|| ಸಂಹಿತಾಪಾಠಃ ||

ಯಾ ತೇ ಭೀಮಾನ್ಯಾಯುಧಾ ತಿಗ್ಮಾನಿ ಸಂತಿ ಧೂರ್ವಣೇ |

ರಕ್ಷಾ ಸಮಸ್ಯ ನೋ ನಿದಃ || ೩೦ ||

|| ಪದಪಾಠಃ ||

ಯಾ | ತೇ | ಭೀಮಾನಿ | ಆಯುಧಾ | ತಿಗ್ಮಾನಿ | ಸಂತಿ | ಧೂರ್ವಣೇ |

ರಕ್ಷ | ಸಮಸ್ಯ | ನಃ | ನಿದಃ || ೩೦ ||

|| ಸಾಯಣಭಾಷ್ಯಂ ||

ಹೇ ಸೋಮ ತೇ ತವ ಯಾ ಯಾನಿ ಭೀಮಾನಿ ಶತ್ರೂಣಾಂ ಭಯಂಕರಾಣಿ ತಿಗ್ಮಾನಿ ತೀಕ್ಷ್ಣಾನ್ಯಾಯುಧಾಯುಧಾನಿ ಧೂರ್ವಣೇ ಶತ್ರುವಧಾರ್ಥಂ ಸಂತಿ ತೈರಾಯುಧೈಃ ಸಮಸ್ಯ ಸರ್ವಸ್ಯ ಶತ್ರೋರ್ನಿದೋ ನಿಂದಾಯಾ ನೋಽಸ್ಮಾನ್ರಕ್ಷ | ಪಾಲಯ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೆ) ತೇ—ನಿನ್ನ | ಯಾ—ಯಾವ | ಭೀಮಾನಿ—ಭಯಂಕರವಾದವೂ | ತಿಗ್ಮಾನಿ—ಹರಿತವಾದವೂ ಆದ | ಆಯುಧಾ—ಆಯುಧಗಳು | ಧೂರ್ವಣೇ—ಶತ್ರುನಾಶಕ್ಕಾಗಿ | ಸಂತಿ—ಇರುವುವೋ ಅವುಗಳಿಂದ | ಸಮಸ್ಯ—ಸಮಸ್ತ ಶತ್ರುವಿನ | ನಿದಃ—ನಿಂದಾವಾಕ್ಯಗಳಿಂದಲೂ | ನಃ—ನಮ್ಮನ್ನು | ರಕ್ಷ—ರಕ್ಷಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ಯಾವ ಆಯುಧಗಳು ಭಯಂಕರವಾಗಿರುವುವೋ ಆ ಆಯುಧಗಳಿಂದ ಶತ್ರುಗಳನ್ನು ನಾಶಮಾಡಿ ಅವರ ಸಮಸ್ತ ನಿಂದಾವಾಕ್ಯಗಳಿಂದಲೂ ನಮ್ಮನ್ನು ರಕ್ಷಿಸು.

**English Translation.**

With your weapons which are formidable and sharp-for slaying (the foe), defend us from rhe scorn (of our enemies)

# ಅರವತ್ತೆರಡನೆಯ ಸೂಕ್ತವು

|| ಸಾಯಣಭಾಷ್ಯಂ ||

**ಏತೇ ಅಸೃಗ್ರಮಿತಿ ತ್ರಿಂಶದೃಚಂ ದ್ವಿತೀಯಂ ಸೂಕ್ತಂ ಭಾರ್ಗವಸ್ಯ ಜಮದಗ್ನೇರಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಏತೇ ಅಸೃಗ್ರಂ ಜಮದಗ್ನಿರಿತಿ ॥ ಗತೋ ವಿನಿಯೋಗಃ ॥**

ಅನುವಾದವು— **ಏತೇ ಅಸೃಗ್ರಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ **ಸೂಕ್ತವು.** ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಗುಪುತ್ರನಾದ ಜಮದಗ್ನಿಯು ಋಷಿಯು ; ಪವಮಾನ ಸೋಮನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಏತೇ ಅಸೃಗ್ರಂ ಜಮದಗ್ನಿಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ— ೬೨

ಮಂಡಲ—೯ ॥ ಅನುವಾಕ—೩ ॥ ಸೂಕ್ತ—೬೨ ॥

ಅಷ್ಟಕ—೭ ॥ ಅಧ್ಯಾಯ—೧ ॥ ವರ್ಗ—೨೪, ೨೫, ೨೬, ೨೭, ೨೮, ೨೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ॥

॥ ಋಷಿಃ—ಜಮದಗ್ನಿಃ ॥

॥ ದೇವತಾ— ಪವಮಾನಃ ಸೋಮಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಏತೇ ಅಸೃಗ್ರಮಿಂದವಸ್ತಿರಃ ಪವಿತ್ರಮಾಶವಃ ।

ವಿಶ್ವಾನ್ಯಭಿ ಸೌಭಗಾ ॥ ೧ ॥

॥ ಪದಪಾಠಃ ॥

ಏತೇ । ಅಸೃಗ್ರಂ । ಇಂದವಃ । ತಿರಃ । ಪವಿತ್ರಂ । ಆಶವಃ ।

ವಿಶ್ವಾನಿ । ಅಭಿ । ಸೌಭಗಾ ॥ ೧ ॥

॥ ಸಾಯಣಭಾಷ್ಯಂ ॥

ಆಶವಃ ಶೀಘ್ರಾ ಏತೇ ಪವಮಾನಾ ಇಂದವಃ ಸೋಮಾ ವಿಶ್ವಾನಿ ಸರ್ವಾಣಿ ಸೌಭಗಾ ಸೌಭಗಾನಿ ಧನಾನ್ಯಭಿಲಕ್ಷ್ಯ ಪವಿತ್ರಂ ತಿರೋಽಸೃಗ್ರಂ । ಋತ್ವಿಗ್ಭಿಃ ಸೃಜ್ಯಂತೇ ॥

॥ ಪ್ರತಿಪದಾರ್ಥ ॥

ಆಶವಃ—ಶೀಘ್ರಗಾಮಿಗಳಾದ । ಏತೇ ಇಂದವಃ—ಈ ಸೋಮರಸಗಳು । ವಿಶ್ವಾನಿ—ಸಮಸ್ತವಾದ । ಸೌಭಗಾ ಅಭಿ—ಕಲ್ಯಾಣಗಳನ್ನು ಸಂಪಾದಿಸಿಕೊಡಲು । ಪವಿತ್ರಂ ತಿರಃ—ದಶಾಪವಿತ್ರದ ಅಭಿಮುಖವಾಗಿ । ಅಸೃಗ್ರಂ—ತಿರುಗಿಸಲ್ಪಟ್ಟಿವೆ.

॥ ಭಾವಾರ್ಥ ॥

ಶೀಘ್ರಗಾಮಿಗಳಾದ ಈ ಸೋಮರಸಗಳು ಸಕಲವಾದ ಅಭ್ಯುದಯವನ್ನು ಸಂಪಾದಿಸಿಕೊಡಲು ದಶಾಪವಿತ್ರಕ್ಕೆ ಅಭಿಮುಖವಾಗಿ ಋತ್ವಿಕ್ಕುಗಳಿಂದ ಹರಿಸಲ್ಪಟ್ಟಿವೆ.

## English Translation.

These rapid Soma juices have been directed through the filter (to obtain) all good things—

॥ ಸಂಹಿತಾಪಾಠಃ ॥

ವಿಘ್ನಂತೋ ದುರಿತಾ ಪುರು ಸುಗಾ ತೋಕಾಯ ವಾಜಿನಃ ।
ತನಾ ಕೃಣ್ವಂತೋ ಅರ್ವತೇ ॥ ೨ ॥

॥ ಪದಪಾಠಃ ॥

ವಿऽಘ್ನಂತಃ । ದುಃऽಇತಾ । ಪುರು । ಸುऽಗಾ । ತೋಕಾಯ । ವಾಜಿನಃ ।
ತನಾ । ಕೃಣ್ವಂತಃ । ಅರ್ವತೇ ॥ ೨ ॥

॥ ಸಾಯಣಭಾಷ್ಯಂ ॥

ವಾಜಿನೋ ಬಲವಂತಃ ಸೋಮಾಃ ಪುರು ಬಹೂನಿ ದುರಿತಾ ದುರಿತಾನಿ ವಿಘ್ನಂತೋ ವಿಶೇಷೇಣ ನಾಶಯಂತಸ್ತೋಕಾಯಾಸ್ಮಾಕಂ ಪುತ್ರಾಯಾರ್ವತೇಽಶ್ವಾಯ ಚ ಸುಗಾ ಸುಖಾನಿ ತನಾ ಧನಾನಿ ಚ ಕೃಣ್ವಂತಃ ಕುರ್ವಂತಃ ತಿರಃ ಪವಿತ್ರಂ ಸೃಜ್ಯಂತೆ ಇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ವಾಜಿನಃ—ಶಕ್ತಿಯುತವಾದ ಸೋಮರಸಗಳು । ಪುರು—ಬಹುವಾದ । ದುರಿತಾ—ಪಾಪಗಳನ್ನೂ । ವಿಘ್ನಂತಃ—ನಾಶಪಡಿಸುತ್ತಾ । ತೋಕಾಯ—ನಮ್ಮ ಪುತ್ರಾದಿಗಳಿಗೂ । ಅರ್ವತೇ—ಅಶ್ವಗಳಿಗೂ । ಸುಗಾ—ಸುಖಗಳನ್ನೂ । ತನಾ—ಧನಗಳನ್ನೂ । ಕೃಣ್ವಂತಃ—ಉತ್ಪನ್ನ ಮಾಡುತ್ತಾ । (ದಶಾಪವಿತ್ರದಕಡೆಗೆ ಹೋಗಿಸೇರುತ್ತವೆ).

॥ ಭಾವಾರ್ಥ ॥

ಶಕ್ತಿಯುಕ್ತವಾದ ಸೋಮರಸಗಳು ಅನೇಕವಿಧವಾದ ಪಾಪಗಳನ್ನು ನಾಶಪಡಿಸುತ್ತ ನಮ್ಮ ಪುತ್ರಾದಿಗಳಿಗೂ ಅಶ್ವಗಳಿಗೂ ಸುಖಗಳನ್ನೂ ಧನಗಳನ್ನೂ ಉತ್ಪನ್ನಮಾಡುತ್ತಾ ದಶಾಪವಿತ್ರದ ಕಡೆಗೆ ಹೋಗಿ ಸೇರುತ್ತವೆ.

### English Translation.

Powerful, repelling many evils, bestowing happiness and riches upon our sons and horses.

॥ ಸಂಹಿತಾಪಾಠಃ ॥

**ಕೃಣ್ವಂತೋ ವರಿವೋ ಗವೇಽಭ್ಯರ್ಷಂತಿ ಸುಷ್ಟುತಿಂ ।**

**ಇಳಾಮಸ್ಮಭ್ಯಂ ಸಂಯುತಂ ॥ ೩ ॥**

॥ ಪದಪಾಠಃ ॥

ಕೃಣ್ವಂತಃ । ವರಿವಃ । ಗವೇ । ಅಭಿ । ಅರ್ಷಂತಿ । ಸುಽಸ್ತುತಿಂ ।

ಇಳಾಂ । ಅಸ್ಮಭ್ಯಂ । ಸಂಽಯುತಂ ॥ ೩ ॥

॥ ಸಾಯಣಭಾಷ್ಯಂ ॥

**ಅಸ್ಮಾಕಂ ಗವೇಽಸ್ಮಭ್ಯಂ ಚ ಸಂಯುತಂ ಯದಸ್ಮಾನ್ ಸಂಯಚ್ಛತಿ ತದ್ವರಿವೋ ಧನಮಿಳಾಮನ್ನಂ ಚ ಕೃಣ್ವಂತಃ ಕುರ್ವಂತಃ ಸೋಮಾಃ ಸುಷ್ಟುತಿಮಸ್ಮದೀಯಾಂ ಶೋಭನಾಂ ಸ್ತುತಿಮಭ್ಯರ್ಷಂತಿ । ಅಭಿಮುಖ್ಯೇನ ಗಚ್ಛಂತಿ ॥**

॥ ಪ್ರತಿಪದಾರ್ಥ ॥

**ಗವೇ**—ನಮ್ಮ ಗೋವುಗಳಿಗೂ । **ಅಸ್ಮಭ್ಯಂ**—ನಮಗೂ । **ಸಂಯುತಂ**—ನಮ್ಮೊಂದಿಗೆ ಸೇರಿಕೊಳ್ಳುವ । **ವರಿವಃ**—ಧನವನ್ನೂ । ಇಳಾಂ—ಅನ್ನವನ್ನೂ । **ಕೃಣ್ವಂತಃ**—ಉತ್ಪನ್ನಮಾಡತಕ್ಕ ಸೋಮರಸಗಳು । **ಸುಷ್ಟುತಿಂ**—ನಮ್ಮ ಅತ್ಯುತ್ತಮವಾದ ಸ್ತುತಿಯನ್ನು । **ಅಭ್ಯರ್ಷಂತಿ**—ಎದುರುಗೊಂಡುಬರುತ್ತವೆ.

॥ ಭಾವಾರ್ಥ ॥

ನಮ್ಮ ಗೋವುಗಳಿಗೂ ಮತ್ತು ನಮಗೂ ಸಹ ನಮ್ಮೊಡನೆ ಸೇರಿಕೊಳ್ಳುವ ಅರ್ಹತೆಯುಳ್ಳ ಧನವನ್ನು ಅನ್ನವನ್ನೂ ಉತ್ಪನ್ನಮಾಡತಕ್ಕ ಸೋಮರಸಗಳು ನಮ್ಮ ಅತ್ಯುತ್ತಮವಾದ ಸ್ತುತಿಯನ್ನು ಎದುರುಗೊಂಡು ಬರುತ್ತವೆ.

### English Translation.

They advance towards our fair praise, granting to (us and) our cattle sustainiug wealth and food.

॥ ಸಂಹಿತಾಪಾಠಃ ॥

ಅಸಾವ್ಯಂಶುರ್ಮದಾಯಾಪ್ಸು ದಕ್ಷೋ ಗಿರಿಷ್ಠಾಃ ।
ಶ್ಯೇನೋ ನ ಯೋನಿಮಾಸದತ್ ॥ ೪ ॥

॥ ಪದಪಾಠಃ ॥

ಅಸಾವಿ । ಅಂಶುಃ । ಮದಾಯ । ಅಪ್ಽಸು । ದಕ್ಷಃ । ಗಿರಿಽಸ್ಥಾಃ ।
ಶ್ಯೇನಃ । ನ । ಯೋನಿಂ । ಆ । ಅಸದತ್ ॥ ೪ ॥

॥ ಸಾಯಣಭಾಷ್ಯಂ ॥

ಗಿರಿಷ್ಠಾಃ ಪರ್ವತೇ ಜಾತೋಽಂಶುಃ ಸೋಮೋ ಮದಾಯ ಮದಾರ್ಥಮಸಾವಿ । ಅಭಿಷುತಃ । ಅಪ್ಸು ವಸತೀವರೀಷು ದಕ್ಷಃ ಪ್ರವೃದ್ಧಶ್ಚ ಭವತಿ । ಕಿಂಚ ಶ್ಯೇನೋ ನ ಯಥಾ ಶ್ಯೇನೋ ವೇಗೇನಾಗತ್ಯ ಸ್ಥಾನಮಾಸೀದತಿ ತದ್ವದಯಂ ಸೋಮೋ ಯೋನಿಂ ಸ್ವಕೀಯಂ ಸ್ಥಾನಮಾಸದತ್ । ಆಸೀದತಿ ॥

॥ ಪ್ರತಿ ಪದಾರ್ಥ ॥

ಗಿರಿಷ್ಠಾಃ— ಪರ್ವತಪ್ರದೇಶದಲ್ಲಿ ಉತ್ಪನ್ನವಾಗುವ । ಅಂಶುಃ—ಸೋಮವು । ಮದಾಯ—ಹರ್ಷಾರ್ಥವಾಗಿ । ಅಸಾವಿ—ಹಿಂಡಲ್ಪಟ್ಟಿದೆ । ಅಪ್ಸು—ವಸತೀವರ್ಯಾದ್ಯುದಕಗಳೊಂದಿಗೆ ಸೇರಿ । ದಕ್ಷಃ—ಶಕ್ತಿಯುತವಾಗುತ್ತದೆ । ಶ್ಯೇನೋ ನ—ಶ್ಯೇನಪಕ್ಷಿಯಂತೆ ವೇಗವಾಗಿ ಬಂದು । ಯೋನಿಂ—ತನ್ನ ಯಜ್ಞಸ್ಥಾನದಲ್ಲಿ । ಆಸದತ್—ಕುಳಿತುಕೊಳ್ಳುತ್ತದೆ.

॥ ಭಾವಾರ್ಥ ॥

ಪರ್ವತಪ್ರದೇಶದಲ್ಲಿ ಉತ್ಪನ್ನವಾಗುವ ಸೋಮಲತೆಯಿಂದ ಸೋಮರಸವು ಹರ್ಷಾರ್ಥವಾಗಿ ಹಿಂಡಲ್ಪಡುತ್ತದೆ. ವಸತೀವರ್ಯಾದ್ಯುದಕಗಳೊಂದಿಗೆ ಸೇರಿ ಶಕ್ತಿಯುತವಾಗುತ್ತದೆ. ಶ್ಯೇನಪಕ್ಷಿಯಂತೆ ವೇಗವಾಗಿ ಬಂದು ತನ್ನ ಯಜ್ಞಸ್ಥಾನದಲ್ಲಿ ಕುಳಿತುಕೊಳ್ಳುತ್ತದೆ.

English Translation.

The mountain-born Soma flows for exhilaration, mighty in the (Vasativari) waters: he alights like a falcon on his own place

॥ ಸಂಹಿತಾಪಾಠಃ ॥

ಶುಭ್ರಮಂಧೋ ದೇವವಾತಮಪ್ಸು ಧೂತೋ ನೃಭಿಃ ಸುತಃ ।
ಸ್ವದಂತಿ ಗಾವಃ ಪಯೋಭಿಃ ॥ ೫ ॥

॥ ಪದಪಾಠಃ ॥

ಶುಭ್ರಂ । ಅಂಧಃ । ದೇವಽವಾತಂ । ಅಪ್ಽಸು । ಧೂತಃ । ನೃಽಭಿಃ । ಸುತಃ ।
ಸ್ವದಂತಿ । ಗಾವಃ । ಪಯಃಽಭಿಃ ॥ ೫ ॥

॥ ಸಾಯಣಭಾಷ್ಯಂ ॥

ಯದ್ದೇವವಾತಂ ದೇವೈಃ ಪ್ರಾರ್ಥಿತಂ ಶುಭ್ರಂ ಶೋಭನಮಂಧೋಽನ್ನಂ ಗಾವಃ ಪಶವಃ ಪಯೋಭಿರಾಶಿರೈಃ ಸ್ವದಂತಿ ಸ್ವಾದಯಂತಿ ಸೋಽಯಂ ಸೋಽನೋ ನೃಭಿರ್ನೇತೃಭಿರ್ಋತ್ವಿಗ್ಭಿಃ ಸುತೋಽಭಿಷುತಃ ಸನ್ನಪ್ಸು ವಸತೀವರೀಷು ಧೂತಃ ಶೋಧಿತೋ ಭವತಿ ॥

॥ ಪ್ರತಿಪದಾರ್ಥ ॥

**ದೇವವಾತಂ**— ದೇವತೆಗಳಿಂದ ಪ್ರಾರ್ಥಿತವಾದುದೂ । **ಶುಭ್ರಂ**— ಪ್ರಕಾಶಮಾನವಾದುದೂ ಆದ **ಅಂಧಃ**— ಸೋಮವನ್ನು । **ಗಾವಃ**—ಗೋವುಗಳು । **ಪಯೋಭಿಃ**— ತಮ್ಮ ಕ್ಷೀರಗಳೊಡನೆ ಸೇರಿಸಿ । **ಸ್ವದಂತಿ**— ರುಚಿಕರವಾಗುವಂತೆ ಮಾಡುತ್ತವೆ । **ನೃಭಿಃ**—ಋತ್ವಿಕ್ಕುಗಳಿಂದ । **ಸುತಃ**— ಹಿಂಡಲ್ಪಟ್ಟ ಸೋಮರಸವು । **ಅಪ್ಸು**— ವಸತೀವರ್ಯಾದ್ಯುದಕಗಳಲ್ಲಿ । **ಧೂತಃ**—ಶೋಧಿಸಲ್ಪಡುತ್ತದೆ.

॥ ಭಾವಾರ್ಥ ॥

ದೇವತೆಗಳಿಂದ ಪ್ರಾರ್ಥಿತವಾದುದೂ, ಪ್ರಕಾಶಮಾನವಾದುದೂ ಆದ ಸೋಮವನ್ನು ಗೋವುಗಳು ತಮ್ಮ ಕ್ಷೀರಗಳೊಡನೆ ಸೇರಿಸಿ ರುಚಿಕರವಾಗುವಂತೆ ಮಾಡುತ್ತವೆ. ಋತ್ವಿಕ್ಕುಗಳಿಂದ ಹಿಂಡಲ್ಪಟ್ಟ ಸೋಮವು ವಸತೀವರ್ಯಾದ್ಯುದಕಗಳಲ್ಲಿ ಶೋಧಿಸಲ್ಪಡುತ್ತದೆ.

## English Translation.

The cattle sweeten with their milk the beautiful food that is asked for by the gods; the Soma when effused by the priests is cleansed in the water.

॥ ಸಂಹಿತಾಪಾಠಃ ॥

ಆದೀಮಶ್ವಂ ನ ಹೇತಾರೋಽಶೂಶುಭನ್ನಮೃತಾಯ ।
ಮಧ್ವೋ ರಸಂ ಸಧಮಾದೇ ॥ ೬ ॥

॥ ಪದಪಾಠಃ ॥

ಆತ್ । ಈಂ । ಅಶ್ವಂ । ನ । ಹೇತಾರಃ । ಅಶೂಶುಭನ್ । ಅಮೃತಾಯ ।
ಮಧ್ವಃ । ರಸಂ । ಸಧಽಮಾದೇ ॥ ೬ ॥

|| ಸಾಯಣಭಾಷ್ಯಂ ||

ಆದನಂತರಂ ಹೋತಾರಃ ಪ್ರೇರಕಾ ಋತ್ವಿಜಃ ಸಧಮಾದೇ ಯಜ್ಞ ಈನೋಽನಂ ಮಧ್ವೋ ಮದಕರಸ್ಯ ಸೋಮಸ್ಯ ರಸಮಮೃತಾಯೊಮರಣಾಯಾಶ್ವಂ ನಾಶ್ವಮಿವಾಶೂಶುಭನ್ | ಶೋಭಯಂತಿ ||

|| ಪ್ರತಿಪದಾರ್ಥ ||

ಆತ್—ಒಡನೆಯೇ | ಹೋತಾರಃ—ಹೋತೃಗಳು | ಸಧಮಾದೇ—ಯಜ್ಞದಲ್ಲಿ | ಮಧ್ವಃ—ಮಧುರವಾದ ಸೋಮದ | ಈಂ ರಸಂ—ಈ ರಸವನ್ನು | ಅಮೃತಾಯ—ಅಮೃತತ್ವವನ್ನು ಸಂಪಾದಿಸಲು | ಅಶ್ವಂ ನ—ಅಶ್ವವನ್ನು ಅಲಂಕರಿಸುವಂತೆ | ಅಶೂಶುಭನ್—ಅಲಂಕರಿಸುತ್ತಾರೆ.

|| ಭಾವಾರ್ಥ ||

ಸೋಮರಸವು ಹಿಂಡಲ್ಪಟ್ಟು ಶುದ್ಧವಾದೊಡನೆಯೇ ಹೋತೃಗಳು ಮಧುರವಾದ ಈ ರಸವನ್ನು ಯಜ್ಞಸ್ಥಾನದಲ್ಲಿ ಅಶ್ವವನ್ನು ಅಲಂಕರಿಸುವಂತೆ ಅಮೃತತ್ತ್ವವನ್ನು ಸಂಪಾದಿಸಲು ಅಲಂಕರಿಸುತ್ತಾರೆ.

English Translation.

Then the ministering priests in the assembly beautify the juice of the exhilarating (Soma) like a horse, for the sake of immortality

|| ಸಂಹಿತಾಪಾಠಃ ||

ಯಾಸ್ತೇ ಧಾರಾ ಮಧುಶ್ಚುತೋಽಸೃಗ್ರಮಿಂದ ಊತಯೇ |
ತಾಭಿಃ ಪವಿತ್ರಮಾಸದಃ || ೭ ||

|| ಪದಪಾಠಃ ||

ಯಾಃ | ತೇ | ಧಾರಾಃ | ಮಧುಽಶ್ಚುತಃ | ಅಸೃಗ್ರಂ | ಇಂದೋ ಇತಿ | ಊತಯೇ ||
ತಾಭಿಃ | ಪವಿತ್ರಂ | ಆ | ಅಸದಃ || ೭ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ತೇ ತವ ಮಧುಶ್ಚುತೋ ಮಧುರರಸಸ್ಯ ಶ್ಚೋತಯಿತ್ರ್ಯೋ ಯಾ ಧಾರಾ ಊತಯೇ ರಕ್ಷಣಾಯಾಸೃಗ್ರಂ ಅಸೃಜ್ಯಂತೆ ತಾಭಿರ್ಧಾರಾಭಿಸ್ತ್ವಂ ಪವಿತ್ರಮಾಸದಃ | ಆಸೀದ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ತೇ—ನಿನ್ನ | ಮಧುಶ್ಚುತಃ—ಮಧುರವಾದ ರಸವನ್ನು ಸುರಿಸತಕ್ಕ | ಯಾಃ ಧಾರಾಃ—ಯಾವ ಸೋಮಧಾರೆಗಳು | ಊತಯೇ—ರಕ್ಷಣಾರ್ಥವಾಗಿ | ಅಸೃಗ್ರಂ—ಉತ್ಪನ್ನವಾಗುತ್ತವೆಯೋ | ತಾಭಿಃ—ಆ ಧಾರೆಗಳೊಡನೆ | ಪವಿತ್ರಂ—ದಶಾಪವಿತ್ರದಲ್ಲಿ | ಆಸದಃ—ಬಂದುಕುಳಿತುಕೊ.

|| ಭಾವಾರ್ಥ ||

ಎಲೈ ಸೋಮದೇವನೇ, ನಿನ್ನ ಮಧುರವಾದ ರಸವನ್ನು ಸುರಿಸತಕ್ಕ ಯಾವ | ಸೋಮಧಾರೆಗಳು ರಕ್ಷಣಾರ್ಥವಾಗಿ ಉತ್ಪನ್ನವಾಗುತ್ತವೆಯೋ, ಆ ಧಾರೆಗಳೊಡನೆ ದಶಾಪವಿತ್ರದಲ್ಲಿ ಬಂದು ಕುಳಿತುಕೊ.

## English Translation.

Sit down, Indu, on the filter with those streams the shedders of (juice) which are let fall for our protection.

|| ಸಂಹಿತಾಪಾಠಃ ||

**ಸೋ ಅರ್ಷೇಂದ್ರಾಯ ಪೀತಯೇ ತಿರೋ ರೋಮಾಣ್ಯವ್ಯಯಾ |**
**ಸೀದನ್ಯೋನಾ ವನೇಷ್ವಾ || ೮ ||**

|| ಪದಪಾಠಃ ||

**ಸಃ | ಅರ್ಷ | ಇಂದ್ರಾಯ | ಪೀತಯೇ | ತಿರಃ | ರೋಮಾಣಿ | ಅವ್ಯಯಾ |**
**ಸೀದನ್ | ಯೋನಾ | ವನೇಷು | ಆ || ೮ ||**

|| ಸಾಯಣಭಾಷ್ಯಂ ||

ಹೇ ಸೋಮ ಸೋಽಭಿಷುತಸ್ತ್ವಮವ್ಯಯಾವ್ಯಯಾನ್ಯವಿಮಯಾನಿ ರೋಮಾಣಿ ವಾಲಾನಿ ತಿರಸ್ತಿರಸ್ಕುರ್ವನ್ ವನೇಷು ಪಾತ್ರೇಷು ಯೋನಾ ಯೋನೌ ಸ್ಥಾನ ಆ ಸೀದನ್ನಿಂದ್ರಾಯೇಂದ್ರಸ್ಯ ಪೀತಯೇ ಪಾನಾಯಾರ್ಷ | ಕ್ಷರ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಸಃ**—ಹಿಂಡಲ್ಪಟ್ಟ ನೀನು | **ಅವ್ಯಯಾ**—ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ | **ರೋಮಾಣಿ**—ನಾರುಗಳನ್ನು | **ತಿರಃ**—ದಾಟಿಕೊಂಡು | **ವನೇಷು**—ಪಾತ್ರೆಗಳಲ್ಲಿ | **ಯೋನಾ**—ಉತ್ತಮವಾದ ಸ್ಥಾನದಲ್ಲಿ | **ಆಸೀದನ್**—ಕುಳಿತುಕೊಂಡು | **ಇಂದ್ರಾಯ**—ಇಂದ್ರನಿಗೆ | **ಪೀತಯೇ**—ಪಾನಾರ್ಥವಾಗಿ | **ಅರ್ಷ**—ಸ್ರವಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಹಿಂಡಲ್ಪಟ್ಟ ನೀನು ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನಾರುಗಳನ್ನು ದಾಟಿಕೊಂಡು ಪಾತ್ರೆಗಳ ಉತ್ತಮವಾದ ಸ್ಥಾನದಲ್ಲಿ ಕುಳಿತು ಇಂದ್ರನ ಪಾನಾರ್ಥವಾಗಿ ಸ್ರವಿಸು.

## English Translation.

Passing obliquely through the sheeps' hairs, hasten for Indra's drinking, sitting in your place in the wooden vessels.

॥ ಸಂಹಿತಾಪಾಠಃ ॥

ತ್ವಮಿಂದೋ ಪರಿ ಸ್ರವ ಸ್ವಾದಿಷ್ಠೋ ಅಂಗಿರೋಭ್ಯಃ ।

ವರಿವೋವಿದ್ಘೃತಂ ಪಯಃ ॥ ೯ ॥

॥ ಪದಪಾಠಃ ॥

ತ್ವಂ । ಇಂದೋ ಇತಿ । ಪರಿ । ಸ್ರವ । ಸ್ವಾದಿಷ್ಠಃ । ಅಂಗಿರಃऽಭ್ಯಃ ॥

ವರಿವಃऽವಿತ್ । ಘೃತಂ । ಪಯಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಸ್ವಾದಿಷ್ಠಃ ಸ್ವಾದುತಮೋ ವರಿವೋವಿದಸ್ಮದಭಿಲಷಿತಸ್ಯ ಧನಸ್ಯ ಲಂಭಕಶ್ಚ ತ್ವಮಂಗಿರೋಭ್ಯೋऽಂಗಿರಸಾಮರ್ಥಾಯ ಘೃತಮಾಜ್ಯಂ ಪಯಶ್ಚ ಪರಿ ಸ್ರವ । ಪರಿಕ್ಷರ ॥

॥ ಪ್ರತಿಪದಾರ್ಥ ॥

ಇಂದೋ—ಎಲೈ ಸೋಮದೇವನೇ । ಸ್ವಾದಿಷ್ಠಃ—ಅತ್ಯಂತ ರುಚಿಕರನಾದವನೂ । ವರಿವೋವಿತ್—ಧನಪ್ರಾಪಕನೂ ಆದ । ತ್ವಂ—ನೀನು । ಅಂಗಿರೋಭ್ಯಃ—ಅಂಗಿರಾಸಂಜ್ಞಕರಾದ ನಮಗೆ । ಘೃತಂ—ಆಜ್ಯವನ್ನೂ, ಪಯಃ—ಕ್ಷೀರವನ್ನೂ । ಪರಿ ಸ್ರವ—ಸ್ರವಿಸುವಂತೆಮಾಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ಅತ್ಯಂತ ರುಚಿಕರನಾದವನೂ, ಧನಪ್ರಾಪಕನೂ ಆದ ನೀನು ಅಂಗಿರಾಸಂಜ್ಞಕರಾದ ನಮಗೆ ಆಜ್ಯವನ್ನೂ ಕ್ಷೀರವನ್ನೂ ಸ್ರವಿಸುವಂತೆ ಮಾಡು.

## English Translation.

Indu, who are most sweet-flavoured, the bestower of riches, drop for the Angirasas butter and milk.

॥ ಸಂಹಿತಾಪಾಠಃ ॥

ಅಯಂ ವಿಚರ್ಷಣಿರ್ಹಿತಃ ಪವಮಾನಃ ಸ ಚೇತತಿ ।

ಹಿನ್ವಾನ ಆಪ್ಯಂ ಬೃಹತ್ ॥ ೧೦ ॥

|| ಪದಪಾಠಃ ||

ಅಯಂ | ವಿಽಚರ್ಷಣಿಃ | ಹಿತಃ | ಪವಮಾನಃ | ಸಃ | ಚೇತತಿ |

ಹಿನ್ವಾನಃ | ಆಪ್ಯಂ | ಬೃಹತ್ || ೧೦ ||

|| ಸಾಯಣಭಾಷ್ಯಂ ||

ವಿಚರ್ಷಣಿರ್ವಿದ್ರಷ್ಟಾ ಹಿತಃ ಪಾತ್ರೇಷು ನಿಹಿತಃ ಪವಮಾನೋಽಯಂ ಸೋಮ ಆಪ್ಯಮಪ್ಸು ಭವಂ ಬೃಹನ್ಮಹದನ್ನಂ ಹಿನ್ವಾನಃ ಪ್ರೇರಯನ್ ಸ ಚೇತತಿ | ಸರ್ವೈಃ ಸ ಜ್ಞಾಯತೇ ||

|| ಪ್ರತಿಪದಾರ್ಥ ||

ವಿಚರ್ಷಣಿಃ— ಸಕಲವನ್ನೂ ಸೂಕ್ಷ್ಮವಾಗಿ ನೋಡಬಲ್ಲವನೂ | ಹಿತಃ— ಪಾತ್ರೆಗಳಲ್ಲಿ ಸ್ಥಾಪಿತನಾದವನೂ | ಪವಮಾನಃ— ಶುದ್ಧಿಕಾರಕನೂ ಆದ | ಅಯಂ ಸಃ— ಈ ಸೋಮದೇವನು | ಆಪ್ಯಂ— ಉದಕಸ್ಥವಾದ | ಬೃಹತ್— ಮಹತ್ತಾದ ಅನ್ನವನ್ನು | ಹಿನ್ವಾನಃ— ಪ್ರೇರಿಸುತ್ತ | ಚೇತತಿ— ಎಲ್ಲರಿಗೂ ಗೋಚರನಾಗುತ್ತಾನೆ.

|| ಭಾವಾರ್ಥ ||

ಸಕಲವನ್ನೂ ಸೂಕ್ಷ್ಮವಾಗಿ ನೋಡಬಲ್ಲವನೂ, ಪಾತ್ರೆಗಳಲ್ಲಿ ಸ್ಥಾಪಿತನಾದವನೂ, ಶುದ್ಧಿಕಾರಕನೂ ಆದ ಈ ಸೋಮದೇವನು ಉದಕಸ್ಥವಾದ ಮಹತ್ತಾದ ಅನ್ನವನ್ನು ಪ್ರೇರಿಸುತ್ತ ಎಲ್ಲರಿಗೂ ಗೋಚರನಾಗುತ್ತಾನೆ.

## English Translation.

This all-seeing Pavamana Soma deposited (in the vessels), sending forth abundant (food), the product of the waters, is known (by all).

|| ಸಂಹಿತಾಪಾಠಃ ||

ಏಷ ವೃಷಾ ವೃಷವ್ರತಃ ಪವಮಾನೋ ಅಶಸ್ತಿಹಾ |

ಕರದ್ವಸೂನಿ ದಾಶುಷೇ || ೧೧ ||

|| ಪದಪಾಠಃ ||

ಏಷಃ | ವೃಷಾ | ವೃಷಽವ್ರತಃ | ಪವಮಾನಃ | ಅಶಸ್ತಿಽಹಾ |

ಕರತ್ | ವಸೂನಿ | ದಾಶುಷೇ || ೧೧ ||

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ಸೇಕ್ತಾ ವೃಷವ್ರತೋ ವೃಷಕರ್ಮಾಽಶಸ್ತಿಹಾ । ರಾಕ್ಷಸಾನಾಂ ಹಂತಾ ಪವಮಾನ ಏಷ ಸೋಮೋ ದಾಶುಷೇ ಹವಿಷಾಂ ದಾತ್ರೇ ಯಜಮಾನಾಯ ವಸೂನಿ ಧನಾನಿ **ಕರತ್** । ಕರೋತಿ । ಪ್ರಯಚ್ಛತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃಷಾ—ಕಾಮವರ್ಷಕನೂ । **ವೃಷವ್ರತಃ**—ವೃಷ್ಟಿಯನ್ನು ಸುರಿಸುವ ಕರ್ಮವುಳ್ಳವನೂ । **ಅಶಸ್ತಿಹಾ**—ದುಷ್ಟರಾದ ರಾಕ್ಷಸರನ್ನು ನಾಶಮಾಡುವವನೂ ಆದ । ಏಷಃ ಪವಮಾನಃ— ಈ ಸೋಮದೇವನು । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ವಸೂನಿ**—ಧನಗಳನ್ನು । **ಕರತ್**—ಒದಗಿಸುತ್ತಾನೆ.

॥ ಭಾವಾರ್ಥ ॥

ಕಾಮವರ್ಷಕನೂ, ವೃಷ್ಟಿಯನ್ನು ಸುರಿಸುವ ಕರ್ಮವುಳ್ಳವನೂ ದುಷ್ಟರಾದ ರಾಕ್ಷಸರನ್ನು ನಾಶಮಾಡುವವನೂ ಆದ ಈ ಸೋಮದೇವನು ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಧನಗಳನ್ನು ಒದಗಿಸುತ್ತಾನೆ.

## English Translation.

This Pavamana Soma, the sprinkler (of benefits), engaged in sprinkling, the destroyer of the Rakshasas, bestows riches upon the donor (of the oblation).

॥ ಸಂಹಿತಾಪಾಠಃ ॥

ಆ ಪವಸ್ವ ಸಹಸ್ರಿಣಂ ರಯಿಂ ಗೋಮಂತಮಶ್ವಿನಂ ।
ಪುರುಶ್ಚಂದ್ರಂ ಪುರುಸ್ಪೃಹಂ ॥ ೧೨ ॥

॥ ಪದಪಾಠಃ ॥

ಆ । ಪವಸ್ವ । ಸಹಸ್ರಿಣಂ । ರಯಿಂ । ಗೋಽಮಂತಂ । ಅಶ್ವಿನಂ ।
ಪುರುಽಚಂದ್ರಂ । ಪುರುಽಸ್ಪೃಹಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಸಹಸ್ರಿಣಂ ಬಹುಸಂಖ್ಯಾಕಂ ಗೋಮಂತಂ ಗೋಭಿರುಪೇತಮಶ್ವಿನಮಶ್ವವಂತಂ ಪುರುಶ್ಚಂದ್ರಂ ಬಹೂನಾಂ ಹರ್ಷಕಂ ಪುರುಸ್ಪೃಹಂ ಬಹುಸ್ಪೃಹಣೀಯಂ ರಯಿಂ ಧನಮಾ ಪವಸ್ವ । ಪರಿ ಕ್ಷರ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ಸಹಸ್ರಿಣಂ—ಸಹಸ್ರ ಸಂಖ್ಯಾಕವಾದುದೂ | ಗೋಮಂತಂ—ಗೋವುಗಳಿಂದ ಕೂಡಿದುದೂ | ಅಶ್ವಿನಂ—ಅಶ್ವಯುಕ್ತವಾದುದೂ | ಪುರುಶ್ಚಂದ್ರಂ—ಅನೇಕರಿಗೆ ಹರ್ಷದಾಯಕವಾದುದೂ | ಪುರುಸ್ಪೃಹಂ— ಅನೇಕರಿಂದ ಅಪೇಕ್ಷಿತವಾದುದೂ ಆದ | ರಯಿಂ— ಧನವನ್ನು | ಆ ಪವಸ್ವ— ನಮಗೆ| ಸುರಿಸಿಕೊಡು.

|| ಭಾವಾರ್ಥ ||

ಎಲೈ ಸೋಮದೇವನೇ, ಸಹಸ್ರಸಂಖ್ಯಾಕವಾದುದೂ, ಗೋವುಗಳಿಂದ ಕೂಡಿದುದೂ, ಅಶ್ವಯುಕ್ತವಾದುದೂ| ಅನೇಕರಿಗೆ ಹರ್ಷದಾಯಕವಾದುದೂ, ಅನೇಕರಿಂದ ಅಪೇಕ್ಷಿತವಾದುದೂ ಆದ ಧನವನ್ನು ನಮಗೆ ಸುರಿಸಿಕೊಡು.

English Traslation

Pour forth thousand-fold wealth, together with cattle and horses, delighting many, desired by many.

|| ಸಂಹಿತಾಪಾಠಃ ||

ಏಷ ಸ್ಯ ಪರಿ ಷಿಚ್ಯತೇ ಮರ್ಮೃಜ್ಯಮಾನ ಆಯುಭಿಃ |
ಉರುಗಾಯಃ ಕವಿಕ್ರತುಃ || ೧೩ ||

|| ಪದಪಾಠಃ ||

ಏಷಃ | ಸ್ಯಃ | ಪರಿ | ಸಿಚ್ಯತೇ | ಮರ್ಮೃಜ್ಯಮಾನಃ | ಆಯುऽಭಿಃ |
ಉರುऽಗಾಯಃ | ಕವಿऽಕ್ರತುಃ || ೧೩ ||

|| ಸಾಯಣಭಾಷ್ಯಂ ||

ಉರುಗಾಯೋ ಬಹುಸ್ತುತಿಃ ಕವಿಕ್ರತುಃ ಕ್ರಾಂತಪ್ರಜ್ಞಃ ಕ್ರಾಂತಕರ್ಮಾ ವಾ ಸ್ಯ ಸ ಏಷೋऽಯಂ ಸೋಮ ಆಯುಭಿರ್ಮನುಷ್ಯೈರ್ಮರ್ಮೃಜ್ಯಮಾನಃ ಶೋಧ್ಯಮಾನಃ ಪರಿ ಷಿಚ್ಯತೇ ||

|| ಪ್ರತಿಪದಾರ್ಥ ||

ಉರುಗಾಯಃ— ಅನೇಕರಿಂದ ಸ್ತುತಿಸಲ್ಪಡುವುದೂ | ಕವಿಕ್ರತುಃ— ಮೇಧಾಯುತವಾದ ಕರ್ಮವುಳ್ಳದ್ದೂ | ಸ್ಯಃ—ಪ್ರಸಿದ್ಧವಾದುದೂ ಆದ | ಏಷಃ—ಈ ಸೋಮವು | ಆಯುಭಿಃ—ಋತ್ವಿಗಾದಿಗಳಿಂದ | ಮರ್ಮೃಜ್ಯಮಾನಃ— ಶೋಧಿಸಲ್ಪಟ್ಟದ್ದಾಗಿ | ಪರಿಷಿಚ್ಯತೇ—ಸುರಿಯಲ್ಪಡುತ್ತದೆ.

|| ಭಾವಾರ್ಥ ||

ಅನೇಕರಿಂದ ಸ್ತುತಿಸಲ್ಪಡತಕ್ಕದ್ದೂ, ಮೇಧಾಯುತವಾದ ಕರ್ಮವುಳ್ಳದ್ದೂ, ಪ್ರಸಿದ್ಧವಾದುದೂ ಆದ ಈ ಸೋಮವು ಋತ್ವಿಗಾದಿಗಳಿಂದ ಶೋಧಿಸಲ್ಪಟ್ಟದ್ದಾಗಿ ಸುರಿಯಲ್ಪಡುತ್ತದೆ.

**English Translation.**

This (Soma) the many-hymned, having wise designs, being cleansed by the priests, is sprinkled forth.

|| ಸಂಹಿತಾಪಾಠಃ ||

ಸಹಸ್ರೋ॑ತಿಃ ಶ॒ತಾಮ॑ಘೋ ವಿ॒ಮಾನೋ॒ ರಜ॑ಸಃ ಕ॒ವಿಃ ।
ಇಂದ್ರಾ॑ಯ ಪವತೇ॒ ಮದಃ॑ || ೧೪ ||

|| ಪದಪಾಠಃ ||

ಸ॒ಹಸ್ರ॑ಽಊತಿಃ । ಶ॒ತಽಮ॑ಘಃ । ವಿ॒ಽಮಾನಃ॑ । ರಜ॑ಸಃ । ಕ॒ವಿಃ ।
ಇಂದ್ರಾ॑ಯ । ಪ॒ವ॒ತೇ॒ । ಮದಃ॑ || ೧೪ ||

|| ಸಾಯಣಭಾಷ್ಯಂ ||

ಸಹಸ್ರೋತಿರಪರಿಮಿತರಕ್ಷಣಃ ಶತಮಘೋ ಬಹುಧನೋ ರಜಸೋ ಲೋಕಸ್ಯ ವಿಮಾನೋ ನಿರ್ಮಾತಾ ಕವಿಃ ಕ್ರಾಂತಕರ್ಮಾ ಮದೋ ಮದಕರಃ ಸೋಮ ಇಂದ್ರಾಯೇಂದ್ರಾರ್ಥಂ ಪವತೇ । ಧಾರಯಾ ಕ್ಷರತಿ ||

|| ಪ್ರತಿಪದಾರ್ಥ ||

**ಸಹಸ್ರೋತಿಃ**—ಅನೇಕವಿಧವಾದ ರಕ್ಷಣೆಯುಳ್ಳವನೂ | **ಶತಮಘಃ**—ನಾನಾವಿಧವಾದ ಧನವುಳ್ಳವನೂ | **ರಜಸಃ**—ಲೋಕಗಳಿಗೆ | **ವಿಮಾನಃ**—ನಿರ್ಮಾತೃವೂ | **ಕವಿಃ**—ಮೇಧಾಯುತವಾದ ಕರ್ಮವುಳ್ಳವನೂ | **ಮದಃ**—ಹರ್ಷಕಾರಕನೂ ಆದ ಸೋಮದೇವನು | **ಇಂದ್ರಾಯ**—ಇಂದ್ರನ ತೃಪ್ತ್ಯರ್ಥವಾಗಿ | **ಪವತೇ**—ಧಾರಾರೂಪದಲ್ಲಿ ಹರಿಯುತ್ತಾನೆ.

|| ಭಾವಾರ್ಥ ||

ಅನೇಕವಿಧವಾದ ರಕ್ಷಣೆಯುಳ್ಳವನೂ, ನಾನಾವಿಧವಾದ ಧನವುಳ್ಳವನೂ, ಲೋಕಗಳಿಗೆ ನಿರ್ಮಾತೃವೂ, ಮೇಧಾಯುತವಾದ ಕರ್ಮವುಳ್ಳವನೂ, ಹರ್ಷಕಾರಕನೂ ಆದ ಸೋಮದೇವನು ಇಂದ್ರನ ತೃಪ್ತ್ಯರ್ಥವಾಗಿ ಧಾರಾರೂಪದಲ್ಲಿ ಹರಿಯುತ್ತಾನೆ.

## English Translation.

Offering thonsand-fold protection, having hundred-fold wealth, the measurer of the world, the sage, the exilarating (Soma) flows for Indra.

|| ಸಂಹಿತಾಪಾಠಃ ||

ಗಿರಾ ಜಾತ ಇಹ ಸ್ತುತ ಇಂದುರಿಂದ್ರಾಯ ಧೀಯತೇ ।

ವಿರ್ಯೋನಾ ವಸತಾವಿವ || ೧೫ ||

|| ಪದಪಾಠಃ ||

ಗಿರಾ । ಜಾತಃ । ಇಹ । ಸ್ತುತಃ । ಇಂದುಃ । ಇಂದ್ರಾಯ । ಧೀಯತೇ ।

ವಿಃ । ಯೋನಾ । ವಸತೌऽಇವ || ೧೫ ||

|| ಸಾಯಣಭಾಷ್ಯಂ ||

ಜಾತಃ ಪ್ರಾದುರ್ಭೂತೋ ಗಿರಾ ಸ್ತುತ್ಯಾ ಸ್ತುತಶ್ಚೇಂದುಃ ಸೋಮ ಇಹಾಸ್ಮಿನ್ಯಜ್ಞೇ ಯೋನಾ ಯೋನೌ ಸ್ವಸ್ಥಾನ ಇಂದ್ರಾಯೇಂದ್ರಾರ್ಥಂ ವಸತಾವಿವ ವಿರ್ಯಥಾ ಸ್ವನಾಸೇ ಪಕ್ಷೀ ತಥಾ ಧೀಯತೇ । ನಿಧೀಯತೇ ||

|| ಪ್ರತಿಪದಾರ್ಥ ||

ಜಾತಃ—ಉತ್ಪನ್ನನಾದವನೂ । ಗಿರಾ—ಸ್ತುತಿಗಳಿಂದ । ಸ್ತುತಃ— ಪ್ರಶಂಸಿಸಲ್ಪಟ್ಟವನೂ ಆದ । ಇಂದುಃ—ಸೋಮದೇವನು । ಇಹ—ಈ ಯಜ್ಞದಲ್ಲಿ । ಯೋನಾ—ತನ್ನ ಉತ್ತಮವಾದ ಸ್ಥಾನದಲ್ಲಿ । ಇಂದ್ರಾಯ—ಇಂದ್ರಾರ್ಥವಾಗಿ । ವಿಃ—ಪಕ್ಷಿಯು । ವಸತಾವಿವ—ತನ್ನ ಗೂಡಿನಲ್ಲಿ ರಕ್ಷಿತವಾಗಿರುವಂತೆ । ಧೀಯತೇ—ಸ್ಥಾಪಿತನಾಗಿರುತ್ತಾನೆ.

|| ಭಾವಾರ್ಥ ||

ಉತ್ಪನ್ನನಾದವನೂ, ಸ್ತುತಿಗಳಿಂದ ಪ್ರಶಂಸಿಸಲ್ಪಟ್ಟವನೂ ಆದ ಸೋಮದೇವನು ಈ ಯಜ್ಞದಲ್ಲಿ ತನ್ನ ಉತ್ತಮವಾದ ಸ್ಥಾನದಲ್ಲಿ ಇಂದ್ರಾರ್ಥವಾಗಿ, ಪಕ್ಷಿಯು ತನ್ನ ಗೂಡಿನಲ್ಲಿರುವಂತೆ ಸ್ಥಾಪಿತನಾಗಿರುತ್ತಾನೆ.

## English Translation.

Generated and praised by song Indu at this sacrifice is deposited in his place for Indra, like a bird on its nest.

|| ಸಂಹಿತಾಪಾಠಃ ||

ಪವಮಾನಃ ಸುತೋ ನೃಭಿಃ ಸೋಮೋ ವಾಜಮಿವಾಸರತ್ |

ಚಮೂಷು ಶಕ್ಮನಾಸದಂ || ೧೬ ||

|| ಪದಪಾಠಃ ||

ಪವಮಾನಃ | ಸುತಃ | ನೃಽಭಿಃ | ಸೋಮಃ | ವಾಜಂಽಇವ | ಅಸರತ್ |

ಚಮೂಷು | ಶಕ್ಮನಾ | ಆಽಸದಂ || ೧೬ ||

|| ಸಾಯಣಭಾಷ್ಯಂ ||

ನೃಭಿರ್ನೇತೃಭಿರ್ಋತ್ವಿಗ್ಭಿಃ ಸುತೋಽಭಿಷುತಃ ಸೋಮಶ್ಚ ಚಮೂಷು ಚಮಸೇಷು ಶಕ್ಮನಾ ಬಲೇನಾಸದಮುಪವೇಷ್ಟುಂ ವಾಜಮಿವ ಯುದ್ಧಮಿವ ಸ್ಥಾನಮಸರತ್ | ಸರತಿ ||

||ಪ್ರತಿಪದಾರ್ಥ ||

ನೃಭಿಃ—ಋತ್ವಿಗಾದಿಗಳಿಂದ | **ಸುತಃ**—ಹಿಂಡಲ್ಪಟ್ಟ | **ಸೋಮಃ**—ಸೋಮದೇವನು | **ಚಮೂಷು**—ಚಮಸಪಾತ್ರೆಗಳಲ್ಲಿ | **ಆಸದಂ**—ಕುಳಿತುಕೊಳ್ಳುವುದಕ್ಕೆ | **ವಾಜಮಿವ**—ಯುದ್ಧಕ್ಕೆ ಅವಸರವಾಗಿ ಓಡುವಂತೆ | **ಶಕ್ಮನಾ**—ಬಲದಿಂದ ಕೂಡಿ | **ಅಸರತ್**—ವೇಗವಾಗಿ ಪ್ರಸರಿಸುತ್ತಾನೆ.

|| ಭಾವಾರ್ಥ ||

ಋತ್ವಿಕ್ಕುಗಳಿಂದ ಹಿಂಡಲ್ಪಟ್ಟ ಸೋಮದೇವನು ಚಮೂ ಪಾತ್ರೆಗಳಲ್ಲಿ ಕುಳಿತುಕೊಳ್ಳುವುದಕ್ಕಾಗಿ, ಯುದ್ಧಕ್ಕೆ ಅವಸರವಾಗಿ ಓಡುವಂತೆ ಬಲದಿಂದ ಕೂಡಿ ವೇಗವಾಗಿ ಪ್ರವಹಿಸುತ್ತಾನೆ.

**English Translation.**

The pure Soma effused by the priests rushes forth as if to battle, to alight vigorously upon the ladles.

|| ಸಂಹಿತಾಪಾಠಃ ||

ತಂ ತ್ರಿಪೃಷ್ಠೇ ತ್ರಿವಂಧುರೇ ರಥೇ ಯುಂಜಂತಿ ಯಾತವೇ |

ಋಷೀಣಾಂ ಸಪ್ತ ಧೀತಿಭಿಃ || ೧೭ ||

|| ಪದಪಾಠಃ ||

ತಂ | ತ್ರಿಽಪೃಷ್ಠೇ | ತ್ರಿಽವಂಧುರೇ | ರಥೇ | ಯುಂಜಂತಿ | ಯಾತವೇ |

ಋಷೀಣಾಂ | ಸಪ್ತ | ಧೀತಿಽಭಿಃ || ೧೭ ||

|| ಸಾಯಣಭಾಷ್ಯಂ ||

**ತ್ರಿಪೃಷ್ಠೇ ತ್ರಿಷವಣಪೃಷ್ಠೇ ತ್ರಿವಂಧುರೇ ತ್ರಿವೇದವಂಧುರ ಋಷೀಣಾಂ ರಥೇ: ಯಜ್ಞರಥೇ ತಂ ಸೋಮಂ ಸಪ್ತ ಸಪ್ತಭಿರ್ಧೀತಿಭಿಶ್ಛಂದೋಭಿರ್ಯಾತವೇ ದೇವಾನ್ಪ್ರತಿ ಗಂತುಂ ಯುಂಜಂತಿ । ಋತ್ವಿಜೋ ಯೋಜಯಂತಿ ||**

|| ಪ್ರತಿಪದಾರ್ಥ ||

**ತ್ರಿಪೃಷ್ಠೇ**—ಮೂರು ವಿಧವಾದ ಆಶ್ರಯಸ್ಥಾನವುಳ್ಳದ್ದೂ | **ತ್ರಿವಂಧುರೇ**—ಮೂರು ರೂಪದ ಆಧಾರಸ್ಥಾನವುಳ್ಳದ್ದೂ ಆದ | **ಋಷೀಣಾಂ**—ಋಷಿಗಳ | **ರಥೇ**—ಯಜ್ಞಾತ್ಮಕವಾದ ರಥದಲ್ಲಿ | **ತಂ**—ಆ ಸೋಮದೇವನನ್ನು | **ಸಪ್ತ**—ಸಪ್ತಸಂಖ್ಯಾಕವಾದ | **ಧೀತಿಭಿಃ**—ಛಂದಸ್ಸುಗಳಿಂದ ಸಂಸ್ಕರಿಸಿ | **ಯಾತವೇ**—ದೇವತೆಗಳಲ್ಲಿಗೆ ಹೋಗಲು | **ಯುಂಜಂತಿ**—ಋತ್ವಿಕ್ಕುಗಳು ಯೋಜಿಸುತ್ತಾರೆ.

|| ಭಾವಾರ್ಥ ||

ಮೂರುವಿಧವಾದ ಆಶ್ರಯಸ್ಥಾನವುಳ್ಳದ್ದೂ, ಮೂರು ರೂಪದ ಆಧಾರಸ್ಥಾನವುಳ್ಳದ್ದೂ ಆದ ಋಷಿಗಳ ಯಜ್ಞಾತ್ಮಕವಾದ ರಥದಲ್ಲಿ ಆ ಸೋಮದೇವನನ್ನು ಋತ್ವಿಕ್ಕುಗಳು ಸಪ್ತಚ್ಛಂದಸ್ಸುಗಳಿಂದಲೂ ಸಂಸ್ಕರಿಸಿ ದೇವತೆಗಳಲ್ಲಿಗೆ ಹೋಗಲು ಯೋಜಿಸುತ್ತಾರೆ.

## English Translation.

The attach him by seven ceremonies to the three-backed three-benched chariot of the Rishis to go to the gods.

|| ಸಂಹಿತಾಪಾಠಃ ||

ತಂ ಸೋತಾರೋ ಧನಸ್ಪೃತಮಾಶುಂ ವಾಜಾಯ ಯಾತವೇ ।
ಹರಿಂ ಹಿನೋತ ವಾಜಿನಂ || ೧೮ ||

|| ಪದಪಾಠಃ ||

ತಂ । ಸೋತಾರಃ । ಧನಽಸ್ಪೃತಂ । ಆಶುಂ । ವಾಜಾಯ । ಯಾತವೇ ।
ಹರಿಂ । ಹಿನೋತ । ವಾಜಿನಂ || ೧೮ ||

|| ಸಾಯಣಭಾಷ್ಯಂ ||

**ಹೇ ಸೋತಾರೋಽಭಿಷವಕರ್ತಾರ ಋತ್ವಿಜಃ ಧನಸ್ಪೃತಂ ಧನಾನಾಂ ಸ್ಪ್ರಷ್ಟಾರಂ ವಾಜಿನಂ ಬಲಿನಮಾಶುಂ ವೇಗವಂತಂ ತಂ ಸೋಮಾತ್ಮಕಂ ಹರಿಮಶ್ವಂ ವಾಜಾಯ ಯಜ್ಞಾಖ್ಯಂ ಸಂಗ್ರಾಮಂ ಯಾತವೇ ಗಂತುಂ ಹಿನೋತ । ಪ್ರೇರಯತ । ಯಥಾ ಯೋದ್ಧಾರೋ ಯುದ್ಧಂ ಗಂತುಂ ಬಲಿನಂ ವೇಗವಂತಮಶ್ವಂ ಪ್ರೇರಯಂತಿ ತದ್ವದ್ಯಜ್ಞಮಭಿಗಂತುಂ ಬಲವಂತಂ ಸೋಮಂ ಪ್ರೇರಯತೇತಿ ಭಾವಃ ||**

|| ಪ್ರತಿಪದಾರ್ಥ ||

**ಸ್ತೋತಾರಃ**—ಎಲೈ ಸ್ತುತಿಕರ್ತರೇ | **ಧನಸ್ಪೃತಂ**—ಧನಪ್ರದವಾದುದೂ | **ವಾಜಿನಂ**—ಶಕ್ತಿಯುತವಾದುದೂ | **ಆಶುಂ**—ವೇಗಗಾಮಿಯಾದುದೂ | **ತಂ**—ಸೋಮರೂಪಿಯಾದುದೂ ಆದ | **ಹರಿಂ**—ಅಶ್ವವನ್ನು | **ವಾಜಾಯ**—ಯಜ್ಞರೂಪವಾದ ಸಂಗ್ರಾಮಕ್ಕಾಗಿ | **ಯಾತವೇ**—ಹೋಗಲು | **ಹಿನೋತ**—ಪ್ರೇರಿಸಿ ಕಳುಹಿರಿ.

|| ಭಾವಾರ್ಥ ||

ಎಲೈ ಸ್ತುತಿಕರ್ತರೇ, ಧನಪ್ರದವಾದುದೂ, ಶಕ್ತಿಯುತವಾದುದೂ, ವೇಗಗಾಮಿಯಾದುದೂ, ಸೋಮರೂಪಿಯಾದುದೂ ಆದ ಅಶ್ವವನ್ನು ಯಜ್ಞರೂಪವಾದ ಸಂಗ್ರಾಮಕ್ಕೆ ಹೋಗಲು ಪ್ರೇರಿಸಿ ಕಳುಹಿಸಿಕೊಡಿರಿ.

## English Translation.

Effusers of the Soma, urge forward that wealth-bestowing rapid vigorous steed to go to the battle.

|| ಸಂಹಿತಾಪಾಠಃ ||

**ಆವಿಶನ್ಕಲಶಂ ಸುತೋ ವಿಶ್ವಾ ಅರ್ಷನ್ನಭಿ ಶ್ರಿಯಃ |**

**ಶೂರೋ ನ ಗೋಷು ತಿಷ್ಠತಿ || ೧೯ ||**

|| ಪದಪಾಠಃ ||

**ಆऽವಿಶನ್ | ಕಲಶಂ | ಸುತಃ | ವಿಶ್ವಾಃ | ಅರ್ಷನ್ | ಅಭಿ | ಶ್ರಿಯಃ |**

**ಶೂರಃ | ನ | ಗೋಷು | ತಿಷ್ಠತಿ || ೧೯ ||**

|| ಸಾಯಣಭಾಷ್ಯಂ ||

**ಸುತೋऽಭಿಷುತಃ ಸೋಮಃ ಕಲಶಂ ದ್ರೋಣಮಾವಿಶನ್ ವಿಶ್ವಾಃ ಸರ್ವಾಃ ಶ್ರಿಯಃ ಸಂಪದೋऽಭ್ಯರ್ಷನ್ನಸ್ಮಾನಭಿಗಮಯನ್ ಗೋಷು ಶತ್ರೂಣಾಂ ಪಶುಷು ಶೂರೋ ನ ಯಥಾ ಶೂರೋ ನಿಃಶಂಕಸ್ತಿಷ್ಠತಿ ತದ್ವದ್ಯಜ್ಞೇಷು ನಿಃಶಂಕಸ್ತಿಷ್ಠತಿ ||**

|| ಪ್ರತಿಪದಾರ್ಥ ||

**ಸುತಃ**—ಹಿಂಡಲ್ಪಟ್ಟ ಸೋಮದೇವನು | **ಕಲಶಂ**—ದ್ರೋಣಕಲಶವನ್ನು | **ಆವಿಶನ್**—ಪ್ರವೇಶಿಸುತ್ತಲೂ | **ವಿಶ್ವಾಃ**—ಸಮಸ್ತವಾದ | **ಶ್ರಿಯಃ**—ಸಂಪತ್ತುಗಳನ್ನೂ | **ಅಭ್ಯರ್ಷನ್**—ನಮ್ಮ ಕಡೆಗೆ ಕಳುಹಿಸಿಕೊಡುತ್ತಲೂ | **ಗೋಷು**—ಶತ್ರುಗೋವುಗಳ ನಡುವೆ | **ಶೂರೋ ನ**—ವೀರನಂತೆ | **ತಿಷ್ಠತಿ**—ನಿಂತಿದ್ದಾನೆ.

|| ಭಾವಾರ್ಥ ||

ಹಿಂಡಲ್ಪಟ್ಟ ಸೋಮದೇವನು ದ್ರೋಣಕಲಶವನ್ನು ಪ್ರವೇಶಿಸುತ್ತಲೂ, ಸಮಸ್ತಸಂಪತ್ತುಗಳನ್ನೂ ನಮ್ಮ ಕಡೆಗೆ ಕಳುಹಿಸಿಕೊಡುತ್ತಲೂ, ಶತ್ರುಗೋವುಗಳ ನಡುವೆ ವೀರನಂತೆ ನಿಂತಿದ್ದಾನೆ.

English Translation

Entering wheu effused into the pitcher, bringing us all sncccss like a hero, he stands amongst the cattle.

|| ಸಂಹಿತಾಪಾಠಃ ||

ಆ ತ ಇಂದೋ ಮದಾಯ ಕಂ ಪಯೋ ದುಹಂತ್ಯಾಯವಃ |

ದೇವಾ ದೇವೇಭ್ಯೋ ಮಧು || ೨೦ ||

|| ಪದಪಾಠಃ ||

ಆ | ತೇ | ಇಂದೋ ಇತಿ | ಮದಾಯ | ಕಂ | ಪಯಃ | ದುಹಂತಿ | ಆಯವಃ |

ದೇವಾಃ | ದೇವೇಭ್ಯಃ | ಮಧು || ೨೦ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ತೇ ತವ ಮಧು ಮಧುಭೂತಂ ಪಯಃ ಪೇಯಂ ರಸಂ ದೇವಾಃ ಸ್ತೋತಾರ ಆಯವೋ ಮನುಷ್ಯಾ ಮದಾಯ ಕಂ ಮದಾರ್ಥಂ ದೇವೇಭ್ಯ ಇಂದ್ರಾದಿಭ್ಯ ಆ ದುಹಂತಿ ||

|| ಪ್ರತಿಪದಾರ್ಥ ||

ಇಂದೋ-- ಎಲೈ ಸೋಮದೇವನೇ | **ತೇ**— ನಿನ್ನ | **ಮಧು**— ಮಧುವಿನಂತೆ ರುಚಿಕರವಾದ | **ಪಯಃ**— ರಸವನ್ನು | **ದೇವಾಃ**— ಸ್ತುತಿಕರ್ತರಾದ | **ಆಯವಃ**— ಮಾನವರು | **ಮದಾಯ ಕಂ**— ಹರ್ಷಾರ್ಥವಾಗಿ | **ದೇವೇಭ್ಯಃ**— ದೇವತೆಗಳನ್ನುದ್ದೇಶಿಸಿ | **ಆ ದುಹಂತಿ**— ಕರೆಯುತ್ತಾರೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮಧುವಿನಂತೆ ರುಚಿಕರವಾದ ನಿನ್ನ ರಸವನ್ನು ಸ್ತುತಿಕರ್ತರಾದ ಮಾನವರು ದೇವತೆಗಳಿಗೆ ಹರ್ಷಾರ್ಥವಾಗಿ ಕರೆಯುತ್ತಾರೆ.

**English Translation.**

The devout priests milk forth your sweet juice, Indu, for the gods for the purpose of exhilaration.

॥ ಸಂಹಿತಾಪಾಠಃ ॥

ಆ ನಃ ಸೋಮಂ ಪವಿತ್ರ ಆ ಸೃಜತಾ ಮಧುಮತ್ತಮಂ ।

ದೇವೇಭ್ಯೋ ದೇವಶ್ರುತ್ತಮಂ ॥ ೨೧ ॥

॥ ಪದಪಾಠಃ ॥

ಆ । ನಃ । ಸೋಮಂ । ಪವಿತ್ರೇ । ಆ । ಸೃಜತ । ಮಧುಮತ್ऽತಮಂ ।

ದೇವೇಭ್ಯಃ । ದೇವಶ್ರುತ್ऽತಮಂ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ನೋಽಸ್ಮಾಕಂ ದೇವಶ್ರುತ್ತಮಮತ್ಯಂತಂ ದೇವೈಃ ಶ್ರೂಯಮಾಣಂ ಮಧುಮತ್ತಮಮತಿಶಯೇನ ಮಧುಮಂತಂ ಸೋಮಂ ದೇವೇಭ್ಯ ಇಂದ್ರಾದ್ಯರ್ಥಂ ಪವಿತ್ರೇ ದಶಾಪವಿತ್ರೆ ಆ ಸೃಜತ । ಸಾಧಯತ ॥

॥ ಪ್ರತಿ ಪದಾರ್ಥ ॥

(ಎಲೈ ಋತ್ವಿಕ್ಕುಗಳೇ) ನಃ—ನಮಗಾಗಿ । ದೇವಶ್ರುತ್ತಮಂ—ದೇವತೆಗಳಿಂದ ಆದರಪೂರ್ವಕವಾಗಿ ಕೇಳಲ್ಪಡತಕ್ಕದ್ದೂ । ಮಧುಮತ್ತಮಂ—ಅತ್ಯಂತ ರುಚಿಕರವಾದುದೂ ಆದ । ಸೋಮಂ—ಸೋಮವನ್ನು । ದೇವೇಭ್ಯಃ—ಇಂದ್ರಾದಿ ದೇವತೆಗಳನ್ನುದ್ದೇಶಿಸಿ । ಪವಿತ್ರೇ—ದಶಾಪವಿತ್ರದಲ್ಲಿ । ಆ ಸೃಜತ—ಸುರಿಯಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ದೇವತೆಗಳಿಂದ ಆದರಪೂರ್ವಕವಾಗಿ ಕೇಳಲ್ಪಡುವುದೂ, ಅತ್ಯಂತ ರುಚಿಕರವಾದುದೂ ಆದ ಸೋಮವನ್ನು ಇಂದ್ರಾದಿದೇವತೆಗಳಿಗಾಗಿ ದಶಾಪವಿತ್ರದಲ್ಲಿ ನಮ್ಮ ಪರವಾಗಿ ಸುರಿಯಿರಿ.

English Translation.

Pour upon the filter for us for the sake of the gods the most sweet-flavoured Soma, most audible to the gods.

॥ ಸಂಹಿತಾಪಾಠಃ ॥

ಏತೇ ಸೋಮಾ ಅಸೃಕ್ಷತ ಗೃಣಾನಾಃ ಶ್ರವಸೇ ಮಹೇ ।

ಮದಿಂತಮಸ್ಯ ಧಾರಯಾ ॥ ೨೨ ॥

॥ ಪದಪಾಠಃ ॥

ಏತೇ । ಸೋಮಾಃ । ಅಸೃಕ್ಷತ । ಗೃಣಾನಾಃ । ಶ್ರವಸೇ । ಮಹೇ ।

ಮದಿನ್ऽತಮಸ್ಯ । ಧಾರಯಾ ॥ ೨೨ ॥

॥ ಸಾಯಣಭಾಷ್ಯಂ ॥

ಗೃಣಾನಾಃ ಸ್ತೂಯಮಾನಾ ಏತ ಇಮೇ ಸೋಮಾ ಮಹೇ ಮಹತೇ ಶ್ರವಸೇಽನ್ನಾಯ ಮದಿಂತಮಸ್ಯ ಮಾದಯಿತೃತಮಸ್ಯ ರಸಸ್ಯ ಧಾರಯಾಸೃಕ್ಷತ । ಋತ್ವಿಗ್ಭಿಃ ಸೃಜ್ಯಂತೇ ॥

॥ ಪ್ರತಿಪದಾರ್ಥ ॥

**ಗೃಣಾನಾಃ**—ಸ್ತುತಿಪಾತ್ರವಾದ । **ಏತೇ ಸೋಮಾಃ**—ಈ ಸೋಮರಸಗಳು । **ಮಹೇ**—ಮಹತ್ತಾದ । **ಶ್ರವಸೇ**—ಅನ್ನಾರ್ಥವಾಗಿ । **ಮದಿಂತಮಸ್ಯ**—ಅತ್ಯಂತ ರುಚಿಕರವಾದ ರಸದ । **ಧಾರಯಾ**—ಧಾರಾರೂಪದಲ್ಲಿ । **ಅಸೃಕ್ಷತ**—ಋತ್ವಿಕ್ಕುಗಳಿಂದ ಪ್ರವಹಿಸಲ್ಪಡುತ್ತವೆ.

॥ ಭಾವಾರ್ಥ ॥

ಎಲ್ಲರ ಸ್ತುತಿಗೂ ಪಾತ್ರವಾದ ಈ ಸೋಮಗಳು ಮಹತ್ತಾದ ಅನ್ನಾರ್ಥವಾಗಿ ಅತ್ಯಂತ ರುಚಿಕರವಾದ ರಸದ ಧಾರಾರೂಪದಲ್ಲಿ ಋತ್ವಿಕ್ಕುಗಳಿಂದ ಪ್ರವಹಿಸಲ್ಪಡುತ್ತವೆ.

### English Translation.

These lauded Soma juices are let flow for the sake of abundant food in a stream of the most exhilarating (juice).

॥ ಸಂಹಿತಾಪಾಠಃ ॥

ಅಭಿ ಗವ್ಯಾನಿ ವೀತಯೇ ನೃಮ್ಣಾ ಪುನಾನೋ ಅರ್ಷಸಿ ।

ಸನದ್ವಾಜಃ ಪರಿ ಸ್ರವ ॥ ೨೩ ॥

॥ ಪದಪಾಠಃ ॥

ಅಭಿ । ಗವ್ಯಾನಿ । ವೀತಯೇ । ನೃಮ್ಣಾ । ಪುನಾನಃ । ಅರ್ಷಸಿ ।

ಸನತ್ऽವಾಜಃ । ಪರಿ । ಸ್ರವ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪುನಾನಃ ಪೂಯಮಾನೋ ಯಸ್ತ್ವಂ ವೀತಯೇ ಭಕ್ಷಣಾಯ ಗವ್ಯಾನಿ ಗೋಸಂಬಂಧೀನಿ ನೃಮ್ಣಾ ನೃಮ್ಣಾನಿ ಧನಾನಿ ಕ್ಷೀರಾದೀನ್ಯಭ್ಯರ್ಷಸಿ ಅಭಿಗಚ್ಛಸಿ ಸ ತ್ವಂ ಸನದ್ವಾಜೋ ದೀಯಮಾನಾನ್ನಃ ಸನ್ ಪರಿ ಸ್ರವ । ಪರಿಕ್ಷರ ॥

॥ಪ್ರತಿಪದಾರ್ಥ॥

(ಎಲೈ ಸೋಮದೇವನೇ) ಪುನಾನಃ—ಶೋಧಿಸಲ್ಪಟ್ಟ ನೀನು। ವೀತಯೇ—ಸೇವನೆಗೆ ಯೋಗ್ಯನಾಗಲು। ಗವ್ಯಾನಿ—ಗೋಸಂಬಂಧಿಯಾದ । ನೃಮ್ಣಾ—ಕ್ಷೀರಾದಿಗಳೊಡನೆ । ಅಭ್ಯರ್ಷಸಿ—ಹೋಗಿ ಸೇರಿಕೊಳ್ಳುತ್ತೀಯೆ । ಸನದ್ವಾಜಃ—ಅನ್ನಪ್ರದನಾಗಿರುವ ನೀನು । ಪರಿ ಸ್ರವ—ಸುತ್ತಲೂ ಸ್ರವಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಶೋಧಿಸಲ್ಪಟ್ಟ ನೀನು ಸೇವನೆಗೆ ಯೋಗ್ಯನಾಗಲು, ಗೋಸಂಬಂಧಿಯಾದ ಕ್ಷೀರಾದಿಗಳನ್ನು ಹೋಗಿ ಸೇರಿಕೊಳ್ಳುತ್ತೀಯೆ. ಅನ್ನಪ್ರದಾತೃವಾಗಿರುವ ನೀನು ಸುತ್ತಲೂ ಸ್ರವಿಸು.

## English Translation.

Being purified you hasten to the treasures of the cows to enjoy (them) ; flow forth you who grant food.

॥ ಸಂಹಿತಾಪಾಠಃ ॥

ಉತ ನೋ ಗೋಮತೀರಿಷೋ ವಿಶ್ವಾ ಅರ್ಷ ಪರಿಷ್ಟುಭಃ ।

ಗೃಣಾನೋ ಜಮದಗ್ನಿನಾ ॥ ೨೪ ॥

॥ ಪದಪಾಠಃ ॥

ಉತ । ನಃ । ಗೋऽಮತೀಃ । ಇಷಃ । ವಿಶ್ವಾಃ । ಅರ್ಷ । ಪರಿऽಸ್ತುಭಃ ।

ಗೃಣಾನಃ । ಜಮತ್ऽಅಗ್ನಿನಾ ॥ ೨೪ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಸೋಮ ಜಮದಗ್ನಿನಾಮ್ನರ್ಷಿಣಾ ಮಯಾ ಗೃಣಾನಃ ಸ್ತೂಯಮಾನಸ್ತ್ವಂ ನೋऽಸ್ಮಾಕಂ ಗೋಮತೀಭಿರ್ಗೋಭಿರ್ಯುಕ್ತಾನಿ ಪರಿಷ್ಟುಭಃ ಪರಿತಃ ಸ್ತೋತವ್ಯಾನಿ ವಿಶ್ವಾಃ ಸರ್ವಾಣೀಷೋऽನ್ನಾನ್ಯರ್ಷ । ಗಚ್ಛ । ಅಸ್ಮಭ್ಯಮೇವಂವಿಧಾನ್ಯನ್ನಾನಿ ದೇಹೀತ್ಯರ್ಥಃ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಉತ**—ಅಲ್ಲದೇ | **ಜಮದಗ್ನಿನಾ**—ಜಮದಗ್ನಿಸಂಜ್ಞಕನಾದ ನನ್ನಿಂದ | **ಗೃಣಾನಃ**—ಸ್ತುತಿಸಲ್ಪಟ್ಟವನಾಗಿ | **ನಃ**—ನಮಗೆ ಕೊಡಲು | **ಗೋಮತೀಃ**—ಗೋಯುಕ್ತವಾದುದೂ | **ಪರಿಷ್ಟುಭಃ**—ಸ್ತುತಿಪಾತ್ರವಾದುದೂ | **ವಿಶ್ವಾಃ**—ಸಮಸ್ತವಾದುದೂ ಆದ | **ಇಷಃ**—ಅನ್ನಸಂಪತ್ತನ್ನು | **ಅರ್ಷ**—ಹೋಗಿಸೇರು.

|| ಭಾವಾರ್ಥ ||

ಎಲೈ ಸೋಮದೇವನೇ, ಜಮದಗ್ನಿಸಂಜ್ಞಕನಾದ ನನ್ನಿಂದ ಸ್ತುತಿಸಲ್ಪಟ್ಟವನಾಗಿ, ನಮಗೆ ಕೊಡಲು ಗೋಯುಕ್ತವಾದುದೂ, ಸರ್ವತ್ರ ಸ್ತುತಿಪಾತ್ರವಾದುದೂ ಆದ ಸಮಸ್ತ ಅನ್ನಸಂಪತ್ತನ್ನು ಹೋಗಿ ಸೇರು.

## English Translation.

And hasten for us towards all widely renowned food with cattle, being hymued by Jamadagni.

|| ಸಂಹಿತಾಪಾಠಃ ||

**ಪವಸ್ವ ವಾಚೋ ಅಗ್ರಿಯಃ ಸೋಮ ಚಿತ್ರಾಭಿರೂತಿಭಿಃ |**

**ಅಭಿ ವಿಶ್ವಾನಿ ಕಾವ್ಯಾ || ೨೫ ||**

|| ಪದಪಾಠಃ ||

**ಪವಸ್ವ | ವಾಚಃ | ಅಗ್ರಿಯಃ | ಸೋಮ | ಚಿತ್ರಾಭಿಃ | ಊತಿಽಭಿಃ |**

**ಅಭಿ | ವಿಶ್ವಾನಿ | ಕಾವ್ಯಾ || ೨೫ ||**

|| ಸಾಯಣಭಾಷ್ಯಂ ||

ಹೇ ಸೋಮ ಅಗ್ರಿಯೋ ಮುಖ್ಯಸ್ತ್ವಂ ಚಿತ್ರಾಭಿಃ ಪೂಜನೀಯೈರೂತಿಭೀ ರಕ್ಷಣೈಃ ಸಹ ವಾಚೋಽಸ್ಮದೀಯಾಃ ಸ್ತುತೀರಭಿ ಪವಸ್ವ | ಏತದೇವ ದರ್ಶಯತಿ | ವಿಶ್ವಾನಿ ಸರ್ವಾಣಿ ಕಾವ್ಯಾ ಕಾವ್ಯಾನಿ ಸ್ತುತ್ಯಾತ್ಮಕಾನಿ ವಾಕ್ಯಾನ್ಯಭಿ ಪವಸ್ವೇತಿ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಅಗ್ರಿಯಃ**—ಪ್ರಮುಖನಾದ ನೀನು | **ಚಿತ್ರಾಭಿಃ**—ಪೂಜ್ಯವಾದ | **ಊತಿಭಿಃ**—ರಕ್ಷಣೆಗಳೊಡನೆ | **ವಾಚಃ**—ನಮ್ಮ ಸ್ತುತಿಗಳಿಗಭಿಮುಖವಾಗಿ | **ಅಭಿ ಪವಸ್ವ**—ಸ್ರವಿಸಿ ಬಾ | **ವಿಶ್ವಾನಿ**—ಸಮಸ್ತವಾದ | **ಕಾವ್ಯಾ**—ನಮ್ಮ ಸ್ತುತಿಕರ್ಮಗಳಿಗೆಮರಾಗಿ ಬಾ.

|| ಭಾವಾರ್ಥ ||

ಎಲೈ ಸೋಮದೇವನೇ, ಪ್ರಮುಖನಾದ ನೀನು ನಿನ್ನ ಪೂಜ್ಯವಾದ ರಕ್ಷಣೆಗಳೊಡನೆ ಕೂಡಿ ನಮ್ಮ ಸ್ತುತಿ ಕರ್ಮಗಳಿಗಭಿಮುಖನಾಗಿ ಪ್ರವಿಸಿ ಬಾ.

English Translation

Soma, who are most excellent, flow with your marvellous protection towards our praises, towards all hymns (of praise).

|| ಸಂಹಿತಾಪಾಠಃ ||

ತ್ವಂ ಸಮುದ್ರಿಯಾ ಅಪೋಽಗ್ರಿಯೋ ವಾಚ ಈರಯನ್ ।
ಪವಸ್ವ ವಿಶ್ವಮೇಜಯ ॥ ೨೬ ॥

|| ಪದಪಾಠಃ ||

ತ್ವಂ । ಸಮುದ್ರಿಯಾಃ । ಅಪಃ । ಅಗ್ರಿಯಃ । ವಾಚಃ । ಈರಯನ್ ।
ಪವಸ್ವ । ವಿಶ್ವಂಽಏಜಯ ॥ ೨೬ ॥

|| ಸಾಯಣಭಾಷ್ಯಂ ||

ಹೇ ವಿಶ್ವಮೇಜಯ ವಿಶ್ವಕಂಪಕ ಸೋಮ ಅಗ್ರಿಯೋ ಮುಖ್ಯಸ್ತ್ವಂ ವಾಚ ಈರಯನ್ ಪ್ರೇರಯನ್ ಸಮುದ್ರಿಯಾ ಅಂತರಿಕ್ಷಾಣ್ಯಪ ಉದಕಾನಿ ಪವಸ್ವ । ಧಾರಯಾ ಕ್ಷರ ॥

|| ಪ್ರತಿಪದಾರ್ಥ ||

ವಿಶ್ವಮೇಜಯ—ಎಲ್ಲವನ್ನೂ ಕಂಪಿಸುವಂತೆ ಮಾಡುವ ಎಲೈ ಸೋಮದೇವನೇ । ಅಗ್ರಿಯಃ—ಪ್ರಮುಖನಾದ । ತ್ವಂ—ನೀನು । ವಾಚಃ—ಸ್ತುತಿವಾಕ್ಯಗಳನ್ನು । ಈರಯನ್—ಪ್ರೇರಿಸುತ್ತ । ಸಮುದ್ರಿಯಾಃ—ಅಂತರಿಕ್ಷಸ್ಥವಾದ । ಅಪಃ—ಉದಕಗಳನ್ನು । ಪವಸ್ವ—ಹರಿಯುವಂತೆ ಮಾಡು.

|| ಭಾವಾರ್ಥ ||

ಎಲ್ಲವನ್ನೂ ಕಂಪಿಸುವಂತೆ ಮಾಡತಕ್ಕ ಎಲೈ ಸೋಮದೇವನೇ, ಪ್ರಮುಖನಾದ ನೀನು ಸ್ತುತಿವಾಕ್ಯಗಳನ್ನು ಪ್ರೇರಿಸುತ್ತ, ಅಂತರಿಕ್ಷಸ್ಥವಾದ ಉದಕಗಳನ್ನು (ವೃಷ್ಟಿಮೂಲಕ) ಹರಿಯುವಂತೆ ಮಾಡು.

English Translation

Agitator of all, do you who are the most excellent, raising your voice, pour forth the waters of the firmament.

|| ಸಂಹಿತಾಪಾಠಃ ||

ತುಭ್ಯೇಮಾ ಭುವನಾ ಕವೇ ಮಹಿಮ್ನೇ ಸೋಮ ತಸ್ಥಿರೇ ।

ತುಭ್ಯಮರ್ಷಂತಿ ಸಿಂಧವಃ || ೨೭ ||

|| ಪದಪಾಠಃ ||

ತುಭ್ಯ । ಇಮಾ । ಭುವನಾ । ಕವೇ । ಮಹಿಮ್ನೇ । ಸೋಮ । ತಸ್ಥಿರೇ ।

ತುಭ್ಯಂ । ಅರ್ಷಂತಿ । ಸಿಂಧವಃ || ೨೭ ||

|| ಸಾಯಣಭಾಷ್ಯಂ ||

ಹೇ ಕವೇ ಕ್ರಾಂತಕರ್ಮನ್ ಸೋಮ ತುಭ್ಯಂ ತವ ಮಹಿಮ್ನ ಇಮೇಮಾನಿ ಭುವನಾ ಭುವನಾನಿ ತಸ್ಥಿರೇ । ತಿಷ್ಠಂತಿ । ತ್ವಾಮೇವ ಪುರಸ್ಕುರ್ವಂತೀತ್ಯರ್ಥಃ । ಅಪಿ ಚ ಸಿಂಧವೋ ನದ್ಯಸ್ತುಭ್ಯಮೇವಾ-ರ್ಷಂತಿ । ಗಚ್ಛಂತಿ । ತ್ವದಾಜ್ಞಾಮೇವಾನುಪಾಲಯಂತೀತ್ಯರ್ಥಃ ||

|| ಪ್ರತಿಪದಾರ್ಥ ||

**ಕವೇ**—ಮೇಧಾಯುತವಾದ ಕರ್ಮವುಳ್ಳ । **ಸೋಮ**—ಎಲೈ ಸೋಮದೇವನೇ । **ತುಭ್ಯಂ**—ನಿನ್ನ । **ಮಹಿಮ್ನೇ**—ಮಹತ್ವದ ಫಲವಾಗಿಯೇ । **ಇಮಾ ಭುವನಾ**—ಈ ಸಕಲಲೋಕಗಳೂ । **ತಸ್ಥಿರೇ**—ನಿಂತಿವೆ । **ಸಿಂಧವಃ**—ನದಿಗಳೂ । **ತುಭ್ಯಂ**—ನಿನ್ನ ಮಹತ್ವದಿಂದಲೇ । **ಅರ್ಷಂತಿ**—ಪ್ರವಹಿಸುತ್ತವೆ.

|| ಭಾವಾರ್ಥ ||

ಮೇಧಾಯುತವಾದ ಕರ್ಮವುಳ್ಳ ಎಲೈ ಸೋಮದೇವನೇ, ನಿನ್ನ ಮಹತ್ವವನ್ನು ಪ್ರಕಾಶಿಸಲು ಈ ಸಕಲ ಲೋಕಗಳೂ ತಮ್ಮ ತಮ್ಮ ನೆಲೆಗಳನ್ನು ಹೊಂದಿ ನಿಂತಿವೆ. ನದಿಗಳೂ ನಿನ್ನ ಆ ಮಹತ್ವದಿಂದಲೇ ಪ್ರವಹಿಸುತ್ತವೆ.

English Translation

O sage (Soma) in your might do these worlds stand; to you the rivers hasten.

|| ಸಂಹಿತಾಪಾಠಃ ||

ಪ್ರ ತೇ ದಿವೋ ನ ವೃಷ್ಟಯೋ ಧಾರಾ ಯಂತ್ಯಸಶ್ಚತಃ ।

ಅಭಿ ಶುಕ್ರಾಮುಪಸ್ತಿರಂ || ೨೮ ||

|| ಪದಪಾಠಃ ||

ಪ್ರ । ತೇ । ದಿವಃ । ನ । ವೃಷ್ಟಯಃ । ಧಾರಾಃ । ಯಂತಿ । ಅಸಶ್ಚತಃ ।

ಅಭಿ । ಶುಕ್ರಾಂ । ಉಪಽಸ್ತಿರಂ ॥ ೨೮ ॥

|| ಸಾಯಣಭಾಷ್ಯಂ ||

ಹೇ ಸೋಮ ತೇ ತವಾಸಶ್ಚತೋಽಸಂಗಾ ಧಾರಾ ದಿವೋಽಂತರಿಕ್ಷಾದ್ವೃಷ್ಟಯೋ ನ ವರ್ಷಾಣೀವ ಶುಕ್ರಾಂ ಶುಕ್ಲವರ್ಣಾಂ ಶುಕ್ಲವರ್ಣೈರವಿಲೋಮಭಿರ್ನಿರ್ಮಿತಾಮುಪಸ್ತಿರಮುಪಸ್ತೀರ್ಯಮಾಣಂ ಪವಿತ್ರಮಭಿ ಪ್ರತಿ ಪ್ರಯಂತಿ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ತೇ—ನಿನ್ನ | ಅಸಶ್ಚತಃ—ಪ್ರತ್ಯೇಕ ರೂಪವುಳ್ಳ | ಧಾರಾಃ—ಪ್ರವಾಹಗಳು | ದಿವಃ—ಅಂತರಿಕ್ಷದಿಂದ | ವೃಷ್ಟಯಃ ನ—ಮಳೆಯ ಧಾರೆಗಳು ಬೀಳುವಂತೆ | ಶುಕ್ರಾಂ—ಶುಭ್ರವರ್ಣದ ಉಣ್ಣೆಯಿಂದ ನಿರ್ಮಿತವಾದ | ಉಪಸ್ತಿರಂ—ದಶಾಪವಿತ್ರಕ್ಕೆ | ಅಭಿ ಪ್ರ ಯಂತಿ—ಬಂದು ಸೇರುತ್ತವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಪ್ರತ್ಯೇಕರೂಪವುಳ್ಳ ನಿನ್ನ ಪ್ರವಾಹಧಾರೆಗಳು ಅಂತರಿಕ್ಷದಿಂದ ವೃಷ್ಟಿಪ್ರವಾಹಗಳು ಬೀಳುವಂತೆ ಬಿದ್ದು ಶುಭ್ರವಾದ ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರಕ್ಕೆ ಬಂದು ಸೇರುತ್ತವೆ.

English Translatioa

Your unconnected streams descend like the rain from heaven upon the white outspread (fleece).

|| ಸಂಹಿತಾಪಾಠಃ ||

ಇಂದ್ರಾಯೇಂದುಂ ಪುನೀತನೋಗ್ರಂ ದಕ್ಷಾಯ ಸಾಧನಂ ।

ಈಶಾನಂ ವೀತಿರಾಧಸಂ ॥ ೨೯ ॥

|| ಪದಪಾಠಃ ||

ಇಂದ್ರಾಯ । ಇಂದುಂ । ಪುನೀತನ । ಉಗ್ರಂ । ದಕ್ಷಾಯ । ಸಾಧನಂ ।

ಈಶಾನಂ । ವೀತಿಽರಾಧಸಂ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಉಗ್ರಮುದ್ಗೂರ್ಣಂ ದಕ್ಷಾಯ ಬಲಸ್ಯ ಸಾಧನಂ ಕರಣಮೀಶಾನಂ ಧನಾನಾಮೀಶ್ವರಂ ವೀತಿರಾಧಸಂ ದತ್ತಧನಮಿಂದುಂ ಸೋಮಮಿಂದ್ರಾಯೇಂದ್ರಾರ್ಥಂ ಪುನೀತನ । ಪುನೀತ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಉಗ್ರಂ**—ಪ್ರಬಲವಾದುದೂ । **ದಕ್ಷಾಯ**—ಶಕ್ತಿಗೆ । **ಸಾಧನಂ**—ಕಾರಣವಾದುದೂ । **ಈಶಾನಂ**—ಪ್ರಭುತ್ವಯುತವಾದುದೂ । **ವೀತಿರಾಧಸಂ**—ಧನಪ್ರದವಾದುದೂ ಆದ । **ಇಂದುಂ**—ಸೋಮವನ್ನು । **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ । **ಪುನೀತನ**—ಶುದ್ಧಿಗೊಳಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಪ್ರಬಲವಾದುದೂ, ಶಕ್ತಿಗೆ ಕಾರಣವಾದುದೂ, ಪ್ರಭುತ್ವಯುತವಾದುದೂ, ಧನಪ್ರದವಾದುದೂ ಆದ ಸೋಮವನ್ನು ಇಂದ್ರಾರ್ಥವಾಗಿ ಶುದ್ಧಿಗೊಳಿಸಿರಿ.

English Translation

Purify for Indra the fierce Indu, the means of strength, the lord (of wealth), the giver of riches.

॥ ಸಂಹಿತಾಪಾಠಃ ॥

ಪವಮಾನ ಋತಃ ಕವಿಃ ಸೋಮಃ ಪವಿತ್ರಮಾಸದತ್ ।
ದಧತ್ಸ್ತೋತ್ರೇ ಸುವೀರ್ಯಂ ॥ ೩೦ ॥

॥ ಪದಪಾಠಃ ॥

ಪವಮಾನಃ । ಋತಃ । ಕವಿಃ । ಸೋಮಃ । ಪವಿತ್ರಂ । ಆ । ಅಸದತ್ ।
ದಧತ್ । ಸ್ತೋತ್ರೇ । ಸುऽವೀರ್ಯಂ ॥ ೩೦ ॥

॥ ಸಾಯಣಭಾಷ್ಯಂ ॥

ಋತಃ ಸತ್ಯಭೂತಃ ಕವಿಃ ಕ್ರಾಂತಕರ್ಮಾ ಪವಮಾನಃ ಸೋಮೋಽಸ್ಮದೀಯೇ ಸ್ತೋತ್ರೇ ಸುವೀರ್ಯಂ ಶೋಭನವೀರ್ಯಂ ದಧತ್ ಪ್ರಯಚ್ಛನ್ ಪವಿತ್ರಮಾಸದತ್ । ಆಸೀದತಿ ॥

॥ ಪ್ರತಿಪದಾರ್ಥ ॥

**ಋತಃ**—ಸತ್ಯಾತ್ಮಕನೂ । **ಕವಿಃ**—ಮೇಧಾಯುತವಾದ ಕರ್ಮವುಳ್ಳವನೂ । **ಪವಮಾನಃ**—ಶುದ್ಧಿಕಾರಕನೂ ಆದ । **ಸೋಮಃ**—ಸೋಮದೇವನು । **ಸ್ತೋತ್ರೇ**—ಸ್ತುತಿಕರ್ತನಿಗೆ । **ಸುವೀರ್ಯಂ**—ಉತ್ತಮವಾದ ವೀರ್ಯವನ್ನು । **ದಧತ್**—ಕೊಡುತ್ತ । **ಪವಿತ್ರಂ**—ದಶಾಪವಿತ್ರದಲ್ಲಿ । **ಅಸದತ್**—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಸತ್ಯಾತ್ಮಕನೂ, ಮೇಧಾಯುತವಾದ ಕರ್ಮವುಳ್ಳವನೂ, ಶುದ್ಧಿಕಾರಕನೂ ಆದ ಸೋಮದೇವನು ಸ್ತುತಿಕರ್ತನಿಗೆ ಉತ್ತಮವಾದ ವೀರ್ಯವನ್ನು ಕೊಡುತ್ತ ದಶಾಪವಿತ್ರದಲ್ಲಿ ಕುಳಿತುಕೊಳ್ಳುತ್ತಾನೆ.

English Translation

The truthful seer, Pavamana Soma, sits down npon the filter, giving great energy ro the worshipper.

## ಅರವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಆ ಪವಸ್ವೇತಿ ತ್ರಿಂಶದೃಚಂ ತೃತೀಯಂ ಸೂಕ್ತಂ ಕಾಶ್ಯಪಸ್ಯ ನಿಧ್ರುವೇರಾರ್ಷಂ ಗಾಯತ್ರಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಆ ಪವಸ್ವ ನಿಧ್ರುವಿಃ ಕಾಶ್ಯಪ ಇತಿ । ಗತೋ ವಿನಿಯೋಗಃ ||**

ಅನುವಾದವು—ಆ ಪವಸ್ವ—ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ನಿಧ್ರುವಿಃ ಕಾಶ್ಯಪಃ ಎಂಬುವನು ಋಷಿಯು ; ಪವಮಾನ ಸೋಮನು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— ಆ ಪವಸ್ವ ನಿಧ್ರುವಿಃ ಕಾಶ್ಯಪಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೬೩

ಮಂಡಲ-೯ || ಅನುವಾಕ-೩ || ಸೂಕ್ತ-೬೩ ||

ಅಷ್ಟಕ-೭ || ಅಧ್ಯಾಯ-೧ || ವರ್ಗ-೩೦, ೩೧, ೩೨, ೩೩, ೩೪, ೩೫ ||

ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ||

ಋಷಿಃ—ನಿಧ್ರುವಿಃ ಕಾಶ್ಯಪಃ ||

ದೇವತಾ—ಪವಮಾನಃ ಸೋಮಃ ||

ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

ಆ ಪವಸ್ವ ಸಹಸ್ರಿಣಂ ರಯಿಂ ಸೋಮ ಸುವೀರ್ಯಂ ।

ಅಸ್ಮೇ ಶ್ರವಾಂಸಿ ಧಾರಯ || ೧ ||

|| ಪದಪಾಠಃ ||

ಆ | ಪವಸ್ವ | ಸಹಸ್ರಿಣಂ | ರಯಿಂ | ಸೋಮ | ಸುಽವೀರ್ಯಂ |

ಅಸ್ಮೇ ಇತಿ | ಶ್ರವಾಂಸಿ | ಧಾರಯ || ೧ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ಸಹಸ್ರಿಣಂ ಬಹುಸಂಖ್ಯಾಕಂ ಸುವೀರ್ಯಂ ಶೋಭನವೀರ್ಯಂ ರಯಿಂ ಧನಮಾ ಪವಸ್ವ | ಆಭಿಮುಖ್ಯೇನ ಕ್ಷರ | ಅಪಿ ಚಾಸ್ಮೇ ಅಸ್ಮಾಸು ಶ್ರವಾಂಸ್ಯನ್ನಾನಿ ಧಾರಯ | ಸ್ಥಾಪಯ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಸಹಸ್ರಿಣಂ**—ಸಹಸ್ರಸಂಖ್ಯಾಕವಾದುದೂ | **ಸುವೀರ್ಯಂ**—ಉತ್ತಮವಾದ ಶಕ್ತಿಯುಳ್ಳದ್ದೂ ಆದ | **ರಯಿಂ**—ಧನವನ್ನು | **ಆ ಪವಸ್ವ**—ಸುತ್ತಲೂ ಒದಗಿಸು | **ಅಸ್ಮೇ**—ನಮ್ಮಲ್ಲಿ | **ಶ್ರವಾಂಸಿ**—ಅನ್ನಗಳನ್ನು | **ಧಾರಯ**—ಸ್ಥಾಪಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಸಹಸ್ರಸಂಖ್ಯಾಕವಾದುದೂ, ಉತ್ತಮವಾದ ಶಕ್ತಿಯುಳ್ಳದ್ದೂ ಆದ ಧನವನ್ನು ನಮಗೆ ಪೂರ್ಣವಾಗಿ ಒದಗಿಸು. ನಮ್ಮಲ್ಲಿ ಅನ್ನಗಳನ್ನು ತುಂಬಿಡು.

Euglish Translation

Pour (upon us), Soma, thousand-fold wealth, with excellent male progeny, secure to us ample food.

|| ಸಂಹಿತಾಪಾಠಃ ||

ಇಷಮೂರ್ಜಂ ಚ ಪಿನ್ವಸ ಇಂದ್ರಾಯ ಮತ್ಸರಿಂತಮಃ |

ಚಮೂಷ್ವಾ ನಿ ಷೀದಸಿ || ೨ ||

|| ಪದಪಾಠಃ ||

ಇಷಂ | ಊರ್ಜಂ | ಚ | ಪಿನ್ವಸೇ | ಇಂದ್ರಾಯ | ಮತ್ಸರಿನ್ಽತಮಃ |

ಚಮೂಷು | ಆ | ನಿ | ಸೀದಸಿ || ೨ ||

॥ ಸಾಯಣಭಾಷ್ಯಂ ॥

ಹೇ ಸೋಮ ಮತ್ಸರಿಂತಮೋಽತಿಶಯೇನ ಮದಯಿತೃತಮಸ್ತ್ವಮಿಂದ್ರಾಯೇಂದ್ರಾರ್ಥಮಿಷಮನ್ನಮೂರ್ಜಂ ರಸಂ ಚ ಪಿನ್ವಸೇ । ಕ್ಷರಸಿ । ಅಪಿ ಚ ಚಮೂಷು ಚಮಸೇಷ್ವಾ ನಿ ಷೀದಸಿ । ತಿಷ್ಠಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಮತ್ಸರಿಂತಮಃ**—ಅತ್ಯತಿಶಯವಾದ ಹರ್ಷಕಾರಕನಾದ ನೀನು | **ಇಂದ್ರಾಯ**—ಇಂದ್ರಾರ್ಥವಾಗಿ| ಇಷಂ—ಅನ್ನವನ್ನೂ | ಊರ್ಜಂ ಚ—ರಸವನ್ನೂ | ಪಿನ್ವಸೇ—ಹರಿಸುತ್ತೀಯೆ| **ಚಮೂಷು**—ಚಮೂ ಪಾತ್ರೆಗಳಲ್ಲಿಯೂ | ಆ ನಿ ಷೀದಸಿ—ಕುಳಿತುಕೊಳ್ಳುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಅತ್ಯತಿಶಯವಾದ ಹರ್ಷಕಾರಕನಾದ ನೀನು ಇಂದ್ರಾರ್ಥವಾಗಿ ಅನ್ನವನ್ನೂ ರಸವನ್ನೂ ಹರಿಸುವಂತೆ ಮಾಡುತ್ತೀಯೆ. ಚಮೂಪಾತ್ರೆಗಳಲ್ಲಿಯೂ ಕುಳಿತುಕೊಳ್ಳುತ್ತೀಯೆ.

English Translation

You who are most exhilarating effuse food and drink for Indra; you sit on the ladles.

॥ ಸಂಹಿತಾಪಾಠಃ ॥

ಸುತ ಇಂದ್ರಾಯ ವಿಷ್ಣವೇ ಸೋಮಃ ಕಲಶೇ ಅಕ್ಷರತ್ ।
ಮಧುಮಾँ ಅಸ್ತು ವಾಯವೇ ॥ ೩ ॥

॥ ಪದಪಾಠಃ ॥

ಸುತಃ । ಇಂದ್ರಾಯ । ವಿಷ್ಣವೇ । ಸೋಮಃ । ಕಲಶೇ । ಅಕ್ಷರತ್ ।
ಮಧುಽಮಾನ್ । ಅಸ್ತು । ವಾಯವೇ ॥ ೩ ॥

॥ ಸಾಯಣಭಾಷ್ಯಂ ॥

ಇಂದ್ರಾಯೇಂದ್ರಾರ್ಥಂ ವಿಷ್ಣವೇ ವಿಷ್ಣ್ವರ್ಥಂ ಚ ವಾಯವೇ ವಾಯ್ವರ್ಥಂ ಚ **ಸುತೋಽಭಿಷುತೋ** ಯಃ ಸೋಮಃ ಕಲಶೇ ದ್ರೋಣಕಲಶೇಽಕ್ಷರತ್ ಕ್ಷರತಿ ಸೋಽಯಂ ಸೋಮೋ **ಮಧುಮಾನ್** ಮಧುರರಸವಾನಸ್ತು । ಭವತು ॥

॥ ಪ್ರತಿಪದಾರ್ಥ ॥

ಇಂದ್ರಾಯ—ಇಂದ್ರಾರ್ಥವಾಗಿಯೂ | **ವಿಷ್ಣವೇ**—ವಿಷ್ಣುವಿಗಾಗಿಯೂ | **ವಾಯವೇ**—ವಾಯುವಿಗಾಗಿಯೂ| **ಸುತಃ**—ಹಿಂಡಲ್ಪಟ್ಟ| **ಸೋಮಃ**—ಯಾವ ಸೋಮವು | **ಕಲಶೇ**—ದ್ರೋಣಕಲಶದಲ್ಲಿ | **ಅಕ್ಷರತ್**—ಪ್ರವಿಸುವುದೋ ಆ ಸೋಮವು | **ಮಧುಮಾನ್**—ಅತ್ಯಂತ ರುಚಿಕರವಾಗಿ | **ಅಸ್ತು**—ಆಗಿರಲಿ.

|| ಭಾವಾರ್ಥ ||

ಇಂದ್ರಾರ್ಥವಾಗಿಯೂ, ವಿಷ್ಣುವಿಗಾಗಿಯೂ, ವಾಯುವಿಗಾಗಿಯೂ ಹಿಂಡಲ್ಪಟ್ಟ ಯಾವ ಸೋಮವು ದ್ರೋಣಕಲಶದಲ್ಲಿ ಪ್ರವಿಸುವುದೋ ಆ ಸೋಮವು ಅತ್ಯಂತ ರುಚಿಕರವಾಗಿರಲಿ.

English Translation

Soma effused for Indra and Vishnu and Vayu drops into the pitcher ; may he be sweet-flavonred.

|| ಸಂಹಿತಾಪಾಠಃ ||

ಏತೇ ಅಸೃಗ್ರಮಾಶವೋಽತಿ ಹ್ವರಾಂಸಿ ಬಭ್ರವಃ ।

ಸೋಮಾ ಋತಸ್ಯ ಧಾರಯಾ || ೪ ||

|| ಪದಪಾಠಃ ||

ಏತೇ । ಅಸೃಗ್ರಂ । ಆಶವಃ । ಅತಿ । ಹ್ವರಾಂಸಿ । ಬಭ್ರವಃ ।

ಸೋಮಾಃ । ಋತಸ್ಯ । ಧಾರಯಾ || ೪ ||

|| ಸಾಯಣಭಾಷ್ಯಂ ||

ಬಭ್ರವೋ ಬಭ್ರುವರ್ಣಾ ಆಶವಃ ಶೀಘ್ರಾ ಏತೆ ಇಮೇ ಸೋಮಾ ಋತಸ್ಯೋದಕಸ್ಯ ಧಾರಯಾಽಸೃಗ್ರಂ । ಸೃಜ್ಯಂತೇ । ಹ್ವರಾಂಸಿ ರಕ್ಷಾಂಸ್ಯಭಿಗಚ್ಛಂತಿ ಚ ||

|| ಪ್ರತಿಪದಾರ್ಥ ||

ಬಭ್ರವಃ—ಹೊಂಬಣ್ಣವುಳ್ಳವೂ । ಆಶವಃ—ಶೀಘ್ರಗಾಮಿಗಳೂ ಆದ । ಏತೇ ಸೋಮಾಃ— ಈ ಸೋಮರಸಗಳು। ಋತಸ್ಯ—ಉದಕದೊಡನೆ । ಧಾರಯಾ— ಪ್ರವಾಹರೂಪದಿಂದ ಕೂಡಿ । ಹ್ವರಾಂಸಿ—ರಾಕ್ಷಸರಿಗೆ ಅಭಿಮುಖವಾಗಿ । ಅಸೃಗ್ರಂ—ಬಿಡಲ್ಪಟ್ಟಿದೆ.

|| ಭಾವಾರ್ಥ ||

ಹೊಂಬಣ್ಣವುಳ್ಳವೂ, ಶೀಘ್ರಗಾಮಿಗಳೂ ಆದ ಈ ಸೋಮರಸಗಳು ಉದಕದೊಡನೆ ಪ್ರವಾಹರೂಪದಿಂದ ಕೂಡಿ ರಾಕ್ಷಸರಿಗೆ ಅಭಿಮುಖವಾಗಿ ಮುನ್ನುಗ್ಗಲು ಬಿಡಲ್ಪಟ್ಟಿದೆ.

English Translation

These swift-flowing tawny-coloured Soma-juices, with a stream of water are let loose upon the Rakshasas.

|| ಸಂಹಿತಾಪಾಠಃ ||

ಇಂದ್ರಂ ವರ್ಧಂತೋ ಅಪ್ತುರಃ ಕೃಣ್ವಂತೋ ವಿಶ್ವಮಾರ್ಯಂ |
ಅಪಘ್ನಂತೋ ಅರಾವ್ಣಃ || ೫ ||

|| ಪದಪಾಠಃ ||

ಇಂದ್ರಂ | ವರ್ಧಂತಃ | ಅಪ್ऽತುರಃ | ಕೃಣ್ವಂತಃ | ವಿಶ್ವಂ | ಆರ್ಯಂ |
ಅಪऽಘ್ನಂತಃ | ಅರಾವ್ಣಃ || ೫ ||

|| ಸಾಯಣಭಾಷ್ಯಂ ||

ಇಂದ್ರಂ ವರ್ಧಂತೋ ವರ್ಧಯಂತೋऽಪ್ತುರ ಉದಕಸ್ಯ ಪ್ರೇರಕಾ ವಿಶ್ವಂ ಸೋಮಮಸ್ಮದೀಯಕರ್ಮಾರ್ಥಮಾರ್ಯಂ ಭದ್ರಂ ಕೃಣ್ವಂತಃ ಕುರ್ವಂತೋऽರಾವ್ಣೋऽದಾತ್ಯಾನಪಘ್ನಂತೋ ವಿನಾಶಯಂತಃ | ಅಭ್ಯರ್ಷಂತೀತ್ಯುತ್ತರಯಾ ಸಂಬಂಧಃ ||

|| ಪ್ರತಿಪದಾರ್ಥ ||

ಇಂದ್ರಂ—ಇಂದ್ರನನ್ನು | ವರ್ಧಂತಃ—ಬೆಳಸುತ್ತಲೂ | ಅಪ್ತುರಃ—ಉದಕಕ್ಕೆ ಪ್ರೇರಕಗಳಾಗಿಯೂ | ವಿಶ್ವಂ—ಸಕಲವಾದ | ಆರ್ಯಂ—ಮಂಗಳವನ್ನು | ಕೃಣ್ವಂತಃ—ಉಂಟುಮಾಡುತ್ತಲೂ | ಅರಾವ್ಣಃ—ದಾನರಹಿತರಾದ ಲೋಭಿಗಳನ್ನು | ಅಪಘ್ನಂತಃ— ನಾಶಮಾಡುತ್ತಲೂ (ಸೋಮರಸಗಳು ತಮ್ಮ ಸ್ವಸ್ಥಾನಕ್ಕೆ ಹೋಗಿ ಸೇರುತ್ತವೆ).

|| ಭಾವಾರ್ಥ ||

ಇಂದ್ರನನ್ನು ಪುಷ್ಟಿಗೊಳಿಸುತ್ತಲೂ ಉದಕಕ್ಕೆ ಪ್ರೇರಕಗಳಾಗಿಯೂ, ಸಕಲವಾದ ಮಂಗಳವನ್ನು ಉಂಟುಮಾಡುತ್ತಲೂ, ದಾನರಹಿತವಾದ ಲೋಭಿಗಳನ್ನು ನಾಶಮಾಡುತ್ತಲೂ ಸೋಮರಸಗಳು ತಮ್ಮ ಸ್ವಸ್ಥಾನಕ್ಕೆ ಹೋಗಿ ಸೇರುತ್ತವೆ.

English Translation

Augmenting Indra, urging the waters, making all our acts prosperous, destroying the withholders (of oblations).

|| ಸಂಹಿತಾಪಾಠಃ ||

ಸುತಾ ಅನು ಸ್ವಮಾ ರಜೋऽಭ್ಯರ್ಷಂತಿ ಬಭ್ರವಃ |
ಇಂದ್ರಂ ಗಚ್ಛಂತ ಇಂದವಃ || ೬ ||

|| ಪದಪಾಠಃ ||

ಸುತಾಃ । ಅನು । ಸ್ವಂ । ಆ । ರಜಃ । ಅಭಿ । ಅರ್ಷಂತಿ । ಬಭ್ರವಃ ।

ಇಂದ್ರಂ । ಗಚ್ಛಂತಃ । ಇಂದವಃ　|| ೬ ||

|| ಸಾಯಣಭಾಷ್ಯಂ ||

ಬಭ್ರವೋ ಬಭ್ರುವರ್ಣಾಃ ಸುತಾ ಅಭಿಷುತಾ ಇಂದವಃ ಸೋಮಾ ಇಂದ್ರಮಾ ಗಚ್ಛಂತ ಆಭಿಮುಖ್ಯೇನ ಪ್ರಾಪ್ನುವಂತಃ ಸ್ವಂ ಸ್ವಕೀಯಂ ರಜಃ ಸ್ಥಾನಮನು ಪ್ರತ್ಯಭ್ಯರ್ಷಂತಿ । ಅಭಿಗಚ್ಛಂತಿ ||

|| ಪ್ರತಿಪದಾರ್ಥ ||

ಬಭ್ರವಃ—ಹೊಂಬಣ್ಣವುಳ್ಳವೂ । ಸುತಾಃ—ಹಿಂಡಲ್ಪಟ್ಟವೂ ಆದ । ಇಂದವಃ—ಸೋಮರಸಗಳು । ಇಂದ್ರಂ—ಇಂದ್ರನಿಗಭಿಮುಖವಾಗಿ । ಆ ಗಚ್ಛಂತಃ—ಶೀಘ್ರವಾಗಿ ಬರುತ್ತಾ । ಸ್ವಂ—ತಮ್ಮ । ರಜಃ ಅನು—ಸ್ವಸ್ಥಾನವನ್ನು ಕುರಿತು । ಅಭ್ಯರ್ಷಂತಿ—ಓಡಿಬರುತ್ತವೆ.

|| ಭಾವಾರ್ಥ ||

ಹೊಂಬಣ್ಣವುಳ್ಳವೂ, ಹಿಂಡಲ್ಪಟ್ಟವೂ ಆದ ಸೋಮರಸಗಳು ಇಂದ್ರನಿಗಭಿಮುಖವಾಗಿ ಶೀಘ್ರವಾಗಿ ಬರುತ್ತ ತಮ್ಮ ಸ್ವಸ್ಥಾನವನ್ನು ಕುರಿತು ಓಡಿಬರುತ್ತವೆ.

English Translation

Thc effused tawny-coloured Soma-juices going to Indra hasten to their own place.

|| ಸಂಹಿತಾಪಾಠಃ ||

ಅಯಾ ಪವಸ್ವ ಧಾರಯಾ ಯಯಾ ಸೂರ್ಯಮರೋಚಯಃ ।

ಹಿನ್ವಾನೋ ಮಾನುಷೀರಪಃ　|| ೭ ||

|| ಪದಪಾಠಃ ||

ಅಯಾ । ಪವಸ್ವ । ಧಾರಯಾ । ಯಯಾ । ಸೂರ್ಯಂ । ಅರೋಚಯಃ ।

ಹಿನ್ವಾನಃ । ಮಾನುಷೀಃ । ಅಪಃ　|| ೭ ||

|| ಸಾಯಣಭಾಷ್ಯಂ ||

ಹೇ ಸೋಮ ಮಾನುಷೀರ್ಮನುಷ್ಯಾಣಾಂ ಹಿತಾನ್ಯಪ ಉದಕಾನಿ ಹಿನ್ವಾನಃ ಪ್ರೇರಯಂಸ್ತ್ವಂ ಯಯಾ ಧಾರಯಾ ಸೂರ್ಯಮರೋಚಯಃ ಪ್ರಾಕಾಶಯಃ ತಯಾನಯಾ ಧಾರಯಾ ಪವಸ್ವ ಕ್ಷರ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಮಾನುಷೀಃ**— ಮಾನವರಿಗೆ ಹಿತಕಾರಿಗಳಾದ | **ಅಪಃ**— ಉದಕಗಳನ್ನು | **ಹಿನ್ವಾನಃ**—ಪ್ರೇರಿಸುತ್ತಾ | **ಯಯಾ**—ಯಾವ ನಿನ್ನ ಪ್ರವಾಹದಿಂದ | **ಸೂರ್ಯಂ**—ಸೂರ್ಯನನ್ನು | **ಅರೋಚಯಃ**—ಪ್ರಕಾಶಗೊಳಿದೆಯೋ | **ಅಯಾ ಧಾರಯಾ**—ಅದೇ ಧಾರೆಯಿಂದ | **ಪವಸ್ವ**—(ಧಾರಾರೂಪದಲ್ಲಿ) ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಮಾನವರಿಗೆ ಹಿತಕಾರಿಗಳಾದ ಉದಕಗಳನ್ನು ಪ್ರೇರಿಸುತ್ತ ಯಾವ ನಿನ್ನ ಧಾರೆಗಳಿಂದ ಸೂರ್ಯನನ್ನು ಪ್ರಕಾಶಗೊಳಿಸಿದೆಯೋ ಅದೇ ಧಾರೆಯಿಂದ ಪ್ರವಹಿಸು.

English Translation

Flow with that stream with which you, Soma, light up the sun, urging on the waters beneficial to man.

|| ಸಂಹಿತಾಪಾಠಃ ||

**ಅಯುಕ್ತ ಸೂರ ಏತಶಂ ಪವಮಾನೋ ಮನಾವಧಿ |**

**ಅಂತರಿಕ್ಷೇಣ ಯಾತವೇ || ೮ ||**

|| ಪದಪಾಠಃ ||

**ಅಯುಕ್ತ | ಸೂರಃ | ಏತಶಂ | ಪವಮಾನಃ | ಮನೌ | ಅಧಿ |**

**ಅಂತರಿಕ್ಷೇಣ | ಯಾತವೇ || ೮ ||**

|| ಸಾಯಣಭಾಷ್ಯಂ ||

ಪವಮಾನಃ ಪೂಯಮಾನಃ ಸೋಮೋ ಮನಾವಧಿ | ಮನುರ್ಮನುಷ್ಯಃ | ತಸ್ಮಿನ್ಮನುಷ್ಯೇ ಇತ್ಯರ್ಥಃ | ಅಂತರಿಕ್ಷೇಣ ಯಾತವೇ ಗಂತುಂ ಸೂರಃ ಪ್ರೇರಕಸ್ಯ ಸೂರ್ಯಸ್ಯೈತಶಮಶ್ವಂ | ಏತಗ್ವಾ ಏತಶ ಇತ್ಯಶ್ವನಾಮಸು ಪಾಠಾತ್ | ಅಯುಕ್ತ | ಯುಂಕ್ತೇ ||

|| ಪ್ರತಿಪದಾರ್ಥ ||

ಪವಮಾನಃ—ಶುದ್ಧಿಯನ್ನು ಹೊಂದಿರುವ ಸೋಮದೇವನು | **ಅಂತರಿಕ್ಷೇಣ**—ಅಂತರಿಕ್ಷದಿಂದ | **ಮನಾವಧಿ**—ಮನುಷ್ಯನಲ್ಲಿಗೆ | **ಯಾತವೇ**—ಹೋಗಲು | **ಸೂರಃ**—ಸೂರ್ಯನ | **ಏತಶಂ**—ಅಶ್ವವನ್ನು | **ಅಯುಂಕ್ತ**—ಯೋಜಿಸುತ್ತಾನೆ.

॥ ಭಾವಾರ್ಥ ॥

ಶುದ್ಧನಾದ ಸೋಮದೇವನು ಅಂತರಿಕ್ಷದಿಂದ ಮಾನವನಲ್ಲಿಗೆ ಹೋಗಲು ಸೂರ್ಯನ ಅಶ್ವವನ್ನು ಯೋಜಿಸುತ್ತಾನೆ.

**English Translation.**

The purified (Soma) harnesses the horse of the sun to travel through the firmameut to man.

॥ ಸಂಹಿತಾಪಾಠಃ ॥

**ಉತ ತ್ಯಾ ಹರಿತೋ ದಶ ಸೂರೋ ಅಯುಕ್ತ ಯಾತವೇ ।**

**ಇಂದುರಿಂದ್ರ ಇತಿ ಬ್ರುವನ್ ॥ ೯ ॥**

॥ ಪದಪಾಠಃ ॥

**ಉತ । ತ್ಯಾಃ । ಹರಿತಃ । ದಶ । ಸೂರಃ । ಅಯುಕ್ತ । ಯಾತವೇ ।**

**ಇಂದುಃ । ಇಂದ್ರಃ । ಇತಿ । ಬ್ರುವನ್ ॥ ೯ ॥**

॥ ಸಾಯಣಭಾಷ್ಯಂ ॥

**ಉತಾಪಿ ಚೇಂದುಃ ಸೋಮಃ ಇಂದ್ರ ಇತಿ ಬ್ರುವಂಸ್ತ್ಯಾ ದಶ ದಶಸಂಖ್ಯಾಕಾ ಹರಿತೋ ದಿಶಃ ಪ್ರತಿ ಯಾತವೇ ಗಂತುಂ ಸೂರಃ ಸೂರ್ಯಸ್ಯೈತಶಮಯುಕ್ತ । ಯುನಕ್ತಿ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ಇಂದುಃ**—ಸೋಮದೇವನು । **ಇಂದ್ರ ಇತಿ**—ಇಂದ್ರ ಎಂಬುದಾಗಿ । **ಬ್ರುವನ್**—ನಾಮವನ್ನು ಉಚ್ಚರಿಸುತ್ತ । **ತ್ಯಾಃ**—ಪ್ರಸಿದ್ಧವಾದ । **ದಶ ಹರಿತಃ**—ಹತ್ತು ದಿಕ್ಕುಗಳಲ್ಲೂ । **ಯಾತವೇ**—ಸಂಚರಿಸಲು । **ಸೂರಃ**—ಸೂರ್ಯನ ಅಶ್ವವನ್ನು । **ಅಯುಂಕ್ತ**—ಯೋಜಿಸುತ್ತಾನೆ.

॥ ಭಾವಾರ್ಥ ॥

ಸೋಮದೇವನು 'ಇಂದ್ರ' ನಾಮವನ್ನು ಉಚ್ಚರಿಸುತ್ತ ಪ್ರಸಿದ್ಧವಾದ ಹತ್ತು ದಿಕ್ಕುಗಳಲ್ಲೂ ಸಂಚರಿಸಲು ಸೂರ್ಯನ ಅಶ್ವವನ್ನು ಯೋಜಿಸುತ್ತಾನೆ.

**English Translation.**

And Indu exclaiming "Indra!" harnesses the (horse of the) sun to go towards these ten regions.

|| ಸಂಹಿತಾಪಾಠಃ ||

ಪರೀತೋ ವಾಯವೇ ಸುತಂ ಗಿರ ಇಂದ್ರಾಯ ಮತ್ಸರಂ |

ಅವ್ಯೋ ವಾರೇಷು ಸಿಂಚತ || ೧೦ ||

|| ಪದಪಾಠಃ ||

ಪರಿ | ಇತಃ | ವಾಯವೇ | ಸುತಂ | ಗಿರಃ | ಇಂದ್ರಾಯ | ಮತ್ಸರಂ |

ಅವ್ಯಃ | ವಾರೇಷು | ಸಿಂಚತ || ೧೦ ||

|| ಸಾಯಣಭಾಷ್ಯಂ ||

ಹೇ ಗಿರಃ ಸ್ತೋತಾರಃ ಯೂಯಂ ವಾಯವೇ ವಾಯ್ವರ್ಥಮಿಂದ್ರಾಯೇಂದ್ರಾರ್ಥಂ ಚ ಸುತಮಭಿಷುತಂ ಮತ್ಸರಂ ಮದಕರಂ ಸೋಮಮಿತೋಽಭಿಷವದೇಶಾದುದ್ಧೃತ್ಯಾವ್ಯೋಽವೇರ್ವಾರೇಷು ವಾಲೇಷು ಪರಿ ಷಿಂಚತ ||

|| ಪ್ರತಿಪದಾರ್ಥ ||

ಗಿರಃ— ಎಲೈ ಸ್ತುತಿಕರ್ತರೇ | ವಾಯವೇ—ವಾಯ್ವರ್ಥವಾಗಿಯೂ | ಇಂದ್ರಾಯ—ಇಂದ್ರಾರ್ಥವಾಗಿಯೂ | ಸುತಂ—ಹಿಂಡಲ್ಪಟ್ಟುದೂ | ಮತ್ಸರಂ—ಹರ್ಷಕಾರಕವಾದುದೂ ಆದ ಸೋಮವನ್ನು | ಇತಃ—ಈ ಅಭಿಷವಪ್ರದೇಶದಿಂದ | ಅವ್ಯಃ—ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ | ವಾರೇಷು—ಜಾಲಗಳಲ್ಲಿ | ಪರಿ ಷಿಂಚತ—ಸುರಿಯಿರಿ.

|| ಭಾವಾರ್ಥ ||

ಎಲೈ ಸ್ತುತಿಕರ್ತರೇ, ವಾಯುವನ್ನೂ ಮತ್ತು ಇಂದ್ರನನ್ನೂ ಉದ್ದೇಶಿಸಿ ಹಿಂಡಲ್ಪಟ್ಟುದೂ, ಹರ್ಷಕಾರಕವಾದುದೂ ಆದ ಸೋಮವನ್ನು ಈ ಅಭಿಷವ ಪ್ರದೇಶದಿಂದ ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ಜಾಲಗಳಲ್ಲಿ ಸುರಿಯಿರಿ.

Engiish Translation

Sprinkle, worshippers, upon the woollen fleece the exhilarating (Soma) that has been effused in all directions for Vayu and for Indra.

|| ಸಂಹಿತಾಪಾಠಃ ||

ಪವಮಾನ ವಿದಾ ರಯಿಮಸ್ಮಭ್ಯಂ ಸೋಮ ದುಷ್ಟರಂ |

ಯೋ ದೂಣಾಶೋ ವನುಷ್ಯತಾ || ೧೧ ||

॥ ಪದಪಾಠಃ ॥

ಪವಮಾನ । ವಿದಾಃ । ರಯಿಂ । ಅಸ್ಮಭ್ಯಂ । ಸೋಮ । ದುಸ್ತರಂ ।

ಯಃ । ದುಃऽನಶಃ । ವನುಷ್ಯತಾ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಸೋಮ ಯೋ ರಯಿರ್ವನುಷ್ಯತಾ ಹಿಂಸಕೇನ ಶತ್ರುಣಾ ದೂಣಾಶೋ ನಾಶಯಿತುಮಶಕ್ಯಃ ತಂ ಶತ್ರುಭಿರ್ದುಷ್ಟರಂ ರಯಿಂ ಧನಮಸ್ಮಭ್ಯಂ ವಿದಾಃ । ದೇಹಿ ॥

॥ ಪ್ರತಿಪದಾರ್ಥ ॥

ಪವಮಾನ — ಶುದ್ಧಿಕಾರಕನಾದ । ಸೋಮ — ಎಲೈ ಸೋಮದೇವನೇ । ಯಃ — ಯಾವ ಧನವು । ವನುಷ್ಯತಾ — ಹಿಂಸಕನಾದ ಶತ್ರುವಿನಿಂದ । ದೂಣಾಶಃ — ನಾಶಮಾಡಲ್ಪಡುವುದಿಲ್ಲವೋ ಅಂತಹ । ದುಷ್ಟರಂ — ಅಪ್ರತಿಹತವಾದ । ರಯಿಂ — ಧನಸಂಪತ್ತನ್ನು । ಅಸ್ಮಭ್ಯಂ — ನಮಗೆ । ವಿದಾಃ — ಕೊಡು.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ಯಾವ ಧನವು ಹಿಂಸಕನಾದ ಶತ್ರುವಿನಿಂದ ನಾಶಮಾಡಲ್ಪಡುವುದಿಲ್ಲವೋ ಅಂತಹ ಅಪ್ರತಿಹತವಾದ ಧನಸಂಪತ್ತನ್ನು ನಮಗೆ ಕೊಡು.

## English Translation.

Purified Soma, grant us wealth unassailable (by our foes), and which cannot be destroyed by the enemy.

॥ ಸಂಹಿತಾಪಾಠಃ ॥

ಅಭ್ಯರ್ಷ ಸಹಸ್ರಿಣಂ ರಯಿಂ ಗೋಮಂತಮಶ್ವಿನಂ ।

ಅಭಿ ವಾಜಮುತ ಶ್ರವಃ ॥ ೧೨ ॥

॥ ಪದಪಾಠಃ ॥

ಅಭಿ । ಅರ್ಷ । ಸಹಸ್ರಿಣಂ । ರಯಿಂ । ಗೋऽಮಂತಂ । ಅಶ್ವಿನಂ ।

ಅಭಿ । ವಾಜಂ । ಉತ । ಶ್ರವಃ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ಸೋಮ ತ್ವಂ ಸಹಸ್ರಿಣಂ ಬಹುಸಂಖ್ಯಾಕಂ ಗೋಮಂತಂ ಗೋಭಿರ್ಯುಕ್ತಮಶ್ವಿನಮಶ್ವವಂತಂ ರಯಿಂ ಧನಮಭ್ಯರ್ಷ । ಅಸ್ಮಾನಭಿಗಮಯ । ಉತಾಪಿ ಚ ವಾಜಂ ಬಲಂ ಶ್ರವೋಽನ್ನಂ ಚಾಸ್ಮಾನಭಿ ಗಮಯ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಸಹಸ್ರಿಣಂ**—ಸಹಸ್ರಸಂಖ್ಯಾಕವಾದುದೂ । **ಗೋಮಂತಂ**....ಗೋವುಗಳಿಂದ ಕೂಡಿದುದೂ । **ಅಶ್ವಿನಂ**—ಅಶ್ವಯುಕ್ತವಾದುದೂ ಆದ । **ರಯಿಂ**—ಧನವನ್ನು । **ಅಭ್ಯರ್ಷ**—ನಮಗೆ ಒದಗಿಸು । **ಉತ**—ಮತ್ತು । **ವಾಜಂ**—ಶಕ್ತಿಯನ್ನೂ । **ಶ್ರವಃ**—ಅನ್ನವನ್ನೂ । **ಅಭಿ**—ನಮಗೆ ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಸಹಸ್ರ ಸಂಖ್ಯಾಕವಾದುದೂ, ಗೋವುಗಳಿಂದ ಕೂಡಿದುದೂ, ಅಶ್ವಯುಕ್ತವಾದುದೂ ಆದ ಧನವನ್ನು ನಮಗೆ ಒದಗಿಸು ಮತ್ತು ನಮಗೆ ಶಕ್ತಿಯನ್ನೂ ಅನ್ನವನ್ನೂ ಒದಗಿಸು.

## English Translation.

Bring to us thousand-fold wealth with cattle and horses; bring vigour and food.

॥ ಸಂಹಿತಾಪಾಠಃ ॥

**ಸೋಮೋ ದೇವೋ ನ ಸೂರ್ಯೋಽದ್ರಿಭಿಃ ಪವತೇ ಸುತಃ ।**
**ದಧಾನಃ ಕಲಶೇ ರಸಂ ॥ ೧೩ ॥**

॥ ಪದಪಾಠಃ ॥

**ಸೋಮಃ । ದೇವಃ । ನ । ಸೂರ್ಯಃ । ಅದ್ರಿಽಭಿಃ । ಪವತೇ । ಸುತಃ ।**
**ದಧಾನಃ । ಕಲಶೇ । ರಸಂ ॥ ೧೩ ॥**

॥ ಸಾಯಣಭಾಷ್ಯಂ ॥

**ದೇವೋ ನ ದೇವ ಇವ ಸೂರ್ಯೋ ರೋಚಮಾನಃ ಸೋಮೋಽದ್ರಿಭಿರ್ಗ್ರಾವಭಿಃ ಸುತೋಽಭಿಷುತಃ ಸನ್ ಕಲಶೇ ದ್ರೋಣಕಲಶೇ ರಸಂ ದಧಾನೋ ಧಾರಯನ್ ಪವತೇ । ಧಾರಯಾ ಕ್ಷರತಿ ॥**

॥ ಪ್ರತಿಪದಾರ್ಥ ॥

**ದೇವಃ**—ದೇವತಾತ್ಮನಾದ । **ಸೂರ್ಯಃ ನ**—ಸೂರ್ಯನಂತೆ ಪ್ರಕಾಶಮಾನನಾದ । **ಸೋಮಃ**—ಸೋಮದೇವನು । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಸುತಃ**—ಹಿಂಡಲ್ಪಟ್ಟವನಾಗಿ । **ಕಲಶೇ**—ದ್ರೋಣಕಲಶದಲ್ಲಿ **ರಸಂ**—ರಸವನ್ನು । **ದಧಾನಃ**—ಹೊಂದಿ । **ಪವತೇ**—ಧಾರಾರೂಪದಲ್ಲಿ ಹರಿಯುತ್ತಾನೆ.

|| ಭಾವಾರ್ಥ ||

ದೇವತಾತ್ಮನಾದ ಸೂರ್ಯನಂತೆ ಪ್ರಕಾಶಮಾನನಾದ ಸೋಮದೇವನು ಹಿಂದುವ ಕಲ್ಲುಗಳಿಂದ ಹಿಂಡಲ್ಪಟ್ಟವನಾಗಿ ದ್ರೋಣಕಲಶದಲ್ಲಿ ರಸರೂಪವನ್ನು ಹೊಂದಿಪ್ರವಹಿಸುತ್ತಾನೆ.

## English Translation.

Soma, like the radiant sun, when effused flows forth, depositing its juice in the pitcher.

|| ಸಂಹಿತಾಪಾಠಃ ||

ಏತೇ ಧಾಮಾನ್ಯಾರ್ಯಾ ಶುಕ್ರಾ ಋತಸ್ಯ ಧಾರಯಾ ।

ವಾಜಂ ಗೋಮಂತಮಕ್ಷರನ್ || ೧೩ ||

|| ಪದಪಾಠಃ ||

ಏತೇ । ಧಾಮಾನಿ । ಆರ್ಯಾ । ಶುಕ್ರಾಃ । ಋತಸ್ಯ । ಧಾರಯಾ ।

ವಾಜಂ । ಗೋಽಮಂತಂ । ಅಕ್ಷರನ್ || ೧೪ ||

|| ಸಾಯಣಭಾಷ್ಯಂ ||

ಏತೇಽಭಿಷುತಾ ಇಮೇ ಶುಕ್ರಾ ದೀಪ್ತಾಃ ಸೋಮಾ ಆರ್ಯಾರ್ಯಾಣಾಂ ಶ್ರೇಷ್ಠಾನಾಂ ಯಜಮಾನಾನಾಂ ಧಾಮಾನಿ ಗೃಹಾನ್ಪ್ರತಿ ಗೋಮಂತಂ ಗೋಭಿರ್ಯುಕ್ತಂ ವಾಜಮನ್ನಮೃತಸ್ಯೋದಕಸ್ಯ ಧಾರಯಾಕ್ಷರನ್ । ಕ್ಷರಂತಿ ||

|| ಪ್ರತಿ ಪದಾರ್ಥ ||

ಏತೇ—ಹಿಂಡಲ್ಪಟ್ಟವೂ । ಶುಕ್ರಾಃ— ಪ್ರಕಾಶಮಾನವಾದವೂ ಆದ ಸೋಮರಸಗಳು । ಆರ್ಯಾ— ಉತ್ತಮವಾದ ಯಜಮಾನರ । ಧಾಮಾನಿ—ಗೃಹಗಳಲ್ಲಿ । ಗೋಮಂತಂ —ಗೋಯುಕ್ತವಾದ । ವಾಜಂ— ಅನ್ನವನ್ನು । ಋತಸ್ಯ—ಉದಕದ । ಧಾರಯಾ—ಪ್ರವಾಹರೂಪದಿಂದ । ಅಕ್ಷರನ್—ಸುರಿಸುತ್ತವೆ.

|| ಭಾವಾರ್ಥ ||

ಹಿಂಡಲ್ಪಟ್ಟವೂ, ಪ್ರಕಾಶಮಾನವೂ ಆದ ಸೋಮರಸಗಳು ಉತ್ತಮವಾದ ಯಜಮಾನರ ಗೃಹಗಳಲ್ಲಿ ಗೋಯುಕ್ತವಾದ ಅನ್ನವನ್ನು ಉದಕದ ಪ್ರವಾಹರೂಪದಿಂದ ಸುರಿಸುತ್ತವೆ.

### English Translation.

These brilliant Soma-juices (flowing) towards thc dwellings of respectable (worshippers), effuse food and cattle in a stream of water.

|| ಸಂಹಿತಾಪಾಠಃ ||

ಸುತಾ ಇಂದ್ರಾಯ ವಜ್ರಿಣೇ ಸೋಮಾಸೋ ದಧ್ಯಾಶಿರಃ |
ಪವಿತ್ರಮತ್ಯಕ್ಷರನ್ || ೧೫ ||

|| ಪದಪಾಠಃ ||

ಸುತಾಃ | ಇಂದ್ರಾಯ | ವಜ್ರಿಣೇ | ಸೋಮಾಸಃ | ದಧಿಽಆಶಿರಃ |
ಪವಿತ್ರಂ | ಅತಿ | ಅಕ್ಷರನ್ || ೧೫ ||

|| ಸಾಯಣಭಾಷ್ಯಂ ||

ವಜ್ರಿಣೇ ವಜ್ರವತೆ ಇಂದ್ರಾಯೇಂದ್ರಾರ್ಥಂ ಸುತಾ ಅಭಿಷುತಾ ದಧ್ಯಾಶಿರೋ ದಧಿಸಂಸ್ಕೃತಾಃ ಸೋಮಾಸಃ ಸೋಮಾಃ ಪವಿತ್ರಮತ್ಯತಿಕ್ರಮ್ಯಾಕ್ಷರನ್ | ಧಾರಯಾ ಕ್ಷರಂತಿ ||

|| ಪ್ರತಿಪದಾರ್ಥ ||

**ವಜ್ರಿಣೇ**—ವಜ್ರಾಯುಧಧಾರಿಯಾದ | **ಇಂದ್ರಾಯ**—ಇಂದ್ರಾರ್ಥವಾಗಿ | **ಸುತಾಃ**—ಹಿಂಡಲ್ಪಟ್ಟವೂ | **ದಧ್ಯಾಶಿರಃ**—ಮೊಸರಿನಿಂದ ಮಿಶ್ರಿತವಾಗಿ ಸಂಸ್ಕೃತವಾದವೂ ಆದ | **ಸೋಮಾಸಃ**— ಸೋಮರಸಗಳು | **ಪವಿತ್ರಮತಿ**—ದಶಾಪವಿತ್ರವನ್ನು ದಾಟಿ | **ಅಕ್ಷರನ್**—ಪ್ರವಹಿಸುತ್ತವೆ.

|| ಭಾವಾರ್ಥ ||

ವಜ್ರಾಯುಧಧಾರಿಯಾದ ಇಂದ್ರಾರ್ಥವಾಗಿ ಹಿಂಡಲ್ಪಟ್ಟವೂ, ದಧ್ಯಾದ್ಯಾಶ್ರಯಣ ದ್ರವ್ಯಗಳೊಡನೆ ಮಿಶ್ರಿತವಾಗಿ ಸಂಸ್ಕೃತವಾದವೂ ಆದ ಸೋಮರಸಗಳು ದಶಾಪವಿತ್ರವನ್ನು ದಾಟಿ ಪ್ರವಹಿಸುತ್ತವೆ.

### English Translation.

The Soma-juices mixed with curds effused for Indra, the wielder of the thunderbolt, flow through the filter.

|| ಸಂಹಿತಾಪಾಠಃ ||

ಪ್ರ ಸೋಮ ಮಧುಮತ್ತಮೋ ರಾಯೇ ಅರ್ಷ ಪವಿತ್ರ ಆ ।

ಮದೋ ಯೋ ದೇವವೀತಮಃ || ೧೬ ||

|| ಪದಪಾಠಃ ||

ಪ್ರ । ಸೋಮ । ಮಧುಮತ್ಽತಮಃ । ರಾಯೇ । ಅರ್ಷ । ಪವಿತ್ರೇ । ಆ ।

ಮದಃ । ಯಃ । ದೇವಽವೀತಮಃ || ೧೬ ||

|| ಸಾಯಣಭಾಷ್ಯಂ ||

ಹೇ ಸೋಮ ತೇ ತವ ಯೋ ಮದೋ ರಸೋ ಮಧುಮತ್ತಮೋಽತ್ಯಂತಂ ಮಧುಮಾನ್ ದೇವವೀತಮೋಽತಿಶಯೇನ ದೇವಕಾಮಃ ತಂ ರಸಂ ರಾಯೇಽಸ್ಮಾಕಂ ಧನಾರ್ಥಂ ಪವಿತ್ರೇ ಪ್ರಾರ್ಷ । ಧಾರಯಾ ಕ್ಷರ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಯಃ**—ಯಾವ । **ಮದಃ**—ನಿನ್ನ ರಸವು । **ಮಧುಮತ್ತಮಃ**—ಅತ್ಯಂತ ರುಚಿಕರವಾಗಿಯೂ । **ದೇವವೀತಮಃ**—ದೇವತೆಗಳಿಗೆ ಅಪೇಕ್ಷಿತವಾಗಿಯೂ ಇರುವುದೋ ಅಂತಹ ರಸವನ್ನು । **ರಾಯೇ**—ನಮ್ಮ ಧನಪ್ರಾಪ್ತಿಗಾಗಿ । **ಪವಿತ್ರೇ**—ದಶಾಪವಿತ್ರದಲ್ಲಿ । **ಪ್ರಾರ್ಷ**—ಧಾರಾರೂಪದಲ್ಲಿ ಸುರಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವ ನಿನ್ನ ರಸವು ಅತ್ಯಂತ ರುಚಿಕರವಾಗಿಯೂ, ದೇವತೆಗಳಿಗೆ ಅಪೇಕ್ಷಿತವಾಗಿಯೂ, ಇರುವುದೋ ಅಂತಹ ರಸವನ್ನು ನಮ್ಮ ಧನಪ್ರಾಪ್ತಿಗಾಗಿ ದಶಾಪವಿತ್ರದಲ್ಲಿ ಧಾರಾರೂಪದಲ್ಲಿ ಸುರಿಸು.

English Translation

Soma, pour into the filter to bring us wealth (your joice), which is most sweet-flavoured, exhilarating, and most desired by the gods.

|| ಸಂಹಿತಾಪಾಠಃ ||

ತಮೀ ಮೃಜಂತ್ಯಾಯವೋ ಹರಿಂ ನದೀಷು ವಾಜಿನಂ ।

ಇಂದುಮಿಂದ್ರಾಯ ಮತ್ಸರಂ || ೧೭ ||

॥ ಪದಪಾಠಃ ॥

ತಂ । ಈಮಿತಿ । ಮೃಜಂತಿ । ಆಯವಃ । ಹರಿಂ । ನದೀಷು । ವಾಜಿನಂ ।

ಇಂದುಂ । ಇಂದ್ರಾಯ । ಮತ್ಸರಂ ॥ ೧೭ ॥

॥ ಸಾಯಣಭಾಷ್ಯಂ ॥

**ಹರಿಂ ಹರಿತವರ್ಣಂ ವಾಜಿನಂ ಬಲಿನಂ ಮತ್ಸರಂ ಮದಕರಂ ತಂ ಪವಮಾನಮೀಮೇನಮಿಂದುಂ ಸೋಮಮಾಯವೋ ಮನುಷ್ಯಾ ಋತ್ವಿಜೋ ನದೀಷು ವಸತೀವರೀಷು ಮೃಜಂತಿ । ಮಾರ್ಜಯಂತಿ ॥**

॥ ಪ್ರತಿಪದಾರ್ಥ ॥

ಹರಿಂ—ಪಚ್ಚೆವರ್ಣವುಳ್ಳದ್ದೂ। ವಾಜಿನಂ—ಶಕ್ತಿಯುತವಾದುದೂ । **ಮತ್ಸರಂ—ಮದಕಾರಕವಾದುದೂ। ತಂ—**ಪ್ರಸಿದ್ಧವಾದುದೂ ಆದ । **ಈಂ** ಇಂದುಂ—ಈ ಸೋಮವನ್ನು । ಆಯವಃ—ಋತ್ವಿಕ್ಕುಗಳು । **ನದೀಷು—**ವಸತೀವರೀ ಸಂಜ್ಞಕವಾದ ಉದಕಗಳಲ್ಲಿ । ಇಂದ್ರಾಯ—ಇಂದ್ರಾರ್ಥವಾಗಿ । **ಮೃಜಂತಿ—ಶೋಧಿಸುತ್ತಾರೆ.**

॥ ಭಾವಾರ್ಥ ॥

ಪಚ್ಚೆವರ್ಣವುಳ್ಳದ್ದೂ, ಶಕ್ತಿಯುತವಾದುದೂ, ಮದಕಾರಕವಾದುದೂ ಪ್ರಸಿದ್ಧವಾದುದೂ ಆದ ಈ ಸೋಮವನ್ನು ಋತ್ವಿಕ್ಕುಗಳು ವಸತೀವರೀ ಸಂಜ್ಞಕವಾದ ಉದಕಗಳಲ್ಲಿ ಇಂದ್ರಾರ್ಥವಾಗಿ ಶೋಧಿಸುತ್ತಾರೆ.

## English Translation.

The priests cleanse in the (Vasativari) waters the green-tinted powerful exhilarating Indu for Indra.

॥ ಸಂಹಿತಾಪಾಠಃ ॥

ಆ ಪವಸ್ವ ಹಿರಣ್ಯವದಶ್ವಾವತ್ಸೋಮ ವೀರವತ್ ।

ವಾಜಂ ಗೋಮಂತಮಾ ಭರ ॥ ೧೮ ॥

॥ ಪದಪಾಠಃ ॥

ಆ । ಪವಸ್ವ । ಹಿರಣ್ಯಽವತ್ । ಅಶ್ವಽವತ್ । ಸೋಮ । ವೀರಽವತ್ ।

ವಾಜಂ । ಗೋಽಮಂತಂ । ಆ । ಭರ ॥ ೧೮ ॥

| ಸಾಯಣಭಾಷ್ಯಂ |

ಹೇ ಸೋಮ ತ್ವಂ ಹಿರಣ್ಯವತ್ಸುವರ್ಣೋಪೇತಮಶ್ವವದಶ್ವಯುಕ್ತಂ ಚ ವೀರವತ್ಪುತ್ರಾ-ದ್ಯುಪೇತಂ ಚ ಧನಮಾ ಪವಸ್ವ। ಅಸ್ಮಾನ್ಪ್ರತಿ ಕ್ಷರ। ಅಪಿ ಚ ಗೋಮಂತಂ ಪಶುಭಿರುಪೇತಂ ವಾಜಮನ್ನಮಾ ಭರ। ಅಸ್ಮಭ್ಯಮಾಹರ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಹಿರಣ್ಯವತ್**—ಸುವರ್ಣೋಪೇತವಾದುದೂ । **ಅಶ್ವವತ್**—ಅಶ್ವಯುಕ್ತವಾದುದೂ । **ವೀರವತ್**—ವೀರಪುತ್ರರಿಂದ ಕೂಡಿದುದೂ ಆದ ಧನವನ್ನು । **ಆ ಪವಸ್ವ**—ನಮ್ಮಲ್ಲಿಗೆ ಹರಿಸು। **ಗೋಮಂತಂ**—ಗೋಯುಕ್ತವಾದ । **ವಾಜಂ**—ಅನ್ನವನ್ನು । **ಆ ಭರ**—ನಮಗೆ ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಸುವರ್ಣೋಪೇತವಾದುದೂ, ಅಶ್ವಯುಕ್ತವಾದುದೂ, ವೀರಪುತ್ರರಿಂದ ಕೂಡಿದುದೂ ಆದ ಧನವನ್ನು ನಮ್ಮಲ್ಲಿಗೆ ಹರಿಯುವಂತೆ ಮಾಡು. ಗೋಯುಕ್ತವಾದ ಅನ್ನವನ್ನು ನಮಗೆ ಒದಗಿಸು.

English Translation

Soma, pour forth wealth of gold, horses. and male offspring; bring us food and cattle.

॥ ಸಂಹಿತಾಪಾಠಃ ॥

**ಪರಿ ವಾಜೇ ನ ವಾಜಯುಮವ್ಯೋ ವಾರೇಷು ಸಿಂಚತ ।**

**ಇಂದ್ರಾಯ ಮಧುಮತ್ತಮಂ ॥ ೧೯ ॥**

॥ ಪದಪಾಠಃ ॥

**ಪರಿ । ವಾಜೇ । ನ । ವಾಜಯುಂ । ಅವ್ಯಃ । ವಾರೇಷು । ಸಿಂಚತ ।**

**ಇಂದ್ರಾಯ । ಮಧುಮತ್ಽತಮಂ ॥ ೧೯ ॥**

॥ ಸಾಯಣಭಾಷ್ಯಂ ॥

ವಾಜಯುಂ ಯುದ್ಧಕಾಮಂ ಮಧುಮತ್ತಮಮತಿಶಯೇನ ಮಧುಮಂತಂ ಸೋಮಮಿಂದ್ರಾ-ಯೇಂದ್ರಾರ್ಥಮವ್ಯೋಽವೇರ್ವಾರೇಷು ವಾಲೇಷು ದಶಾಪವಿತ್ರೇ ವಾಜೇ ನ ಯುದ್ಧ ಇವ ಹೇ ಋತ್ವಿಜಃ ಪರಿ ಷಿಂಚತ ॥

|| ಪ್ರತಿಪದಾರ್ಥ ||

**ವಾಜಯುಂ**—ಯುದ್ಧಾಪೇಕ್ಷಿಯೂ | **ಮಧುಮತ್ತಮಂ**—ಅತಿಶಯವಾದ ರುಚಿಕಾರಕವೂ ಆದ ಸೋಮವನ್ನು | **ಇಂದ್ರಾಯ**—ಇಂದ್ರಾರ್ಥವಾಗಿ | **ಅವ್ಯಃ**—ಉಣ್ಣೆಯಿಂದ ಮಾಡಿದ ದಶಾಪವಿತ್ರದ | **ವಾರೇಷು**—ಜಾಲಗಳಲ್ಲಿ | **ವಾಜೇನ**—ಯುದ್ಧದಲ್ಲಿ ಸುರಿಯುವಂತೆ | **ಪರಿ ಷಿಂಚತ**—ಸುರಿಯಿರಿ.

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ಅತಿಶಯವಾದ ರುಚಿಕಾರಕವೂ ಯುದ್ಧಾಪೇಕ್ಷಿಯೂ ಆದ ಸೋಮವನ್ನು ಇಂದ್ರಾರ್ಥವಾಗಿ ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ಜಾಲಗಳಲ್ಲಿ ಯುದ್ಧದಲ್ಲಿ ಸುರಿಯುವಂತೆ ಸುರಿಯಿರಿ.

English Translation

Sprinkle upon the woollen fleece for Indra the most sweet (Soma), desiring battle as if in battle.

|| ಸಂಹಿತಾಪಾಠಃ ||

**ಕವಿಂ ಮೃಜಂತಿ ಮರ್ಜ್ಯಂ ಧೀಭಿರ್ವಿಪ್ರಾ ಅವಸ್ಯವಃ ।**
**ವೃಷಾ ಕನಿಕ್ರದರ್ಷತಿ || ೨೦ ||**

|| ಪದಪಾಠಃ ||

ಕವಿಂ । ಮೃಜಂತಿ । ಮರ್ಜ್ಯಂ । ಧೀಭಿಃ । ವಿಪ್ರಾಃ । ಅವಸ್ಯವಃ ।
ವೃಷಾ । ಕನಿಕ್ರತ್ । ಅರ್ಷತಿ || ೨೦ ||

|| ಸಾಯಣಭಾಷ್ಯಂ ||

**ಅವಸ್ಯವೋ ರಕ್ಷಣಕಾಮಾ ವಿಪ್ರಾ ಮೇಧಾವಿನ ಋತ್ವಿಜೋ ಧೀಭಿರಂಗುಲೀಭಿರ್ಮರ್ಜ್ಯಂ ಮರ್ಜನೀಯಂ ಕವಿಂ ಕ್ರಾಂತಕರ್ಮಾಣಂ ಯಂ ಸೋಮಂ ಮೃಜಂತಿ ಮರ್ಜಯಂತಿ ಸೋಽಯಂ ವೃಷಾ ಸೇಚಕಃ ಸೋಮಃ ಕನಿಕ್ರಚ್ಛಬ್ದಂ ಕುರ್ವನ್ನರ್ಷತಿ । ಧಾರಯಾ ಕ್ಷರತಿ ||**

||ಪ್ರತಿಪದಾರ್ಥ ||

**ಅವಸ್ಯವಃ**—ರಕ್ಷಣೆಯನ್ನು ಅಪೇಕ್ಷಿಸುವವರೂ | **ವಿಪ್ರಾಃ**—ಮೇಧಾವಿಗಳೂ ಆದ ಋತ್ವಿಕ್ಕುಗಳು | **ಧೀಭಿಃ**—ತಮ್ಮ ಬೆರಳುಗಳಿಂದ | **ಮರ್ಜ್ಯಂ**—ಶುದ್ಧಿಗೆ ಯೋಗ್ಯನೂ | **ಕವಿಂ**—ಪ್ರಜ್ಞಾಯುತವಾದ ಕರ್ಮವುಳ್ಳವನೂ ಆದ ಸೋಮದೇವನನ್ನು | **ಮೃಜಂತಿ**—ಶುದ್ಧಿಗೊಳಿಸುತ್ತಾರೆ | **ವೃಷಾ**—ಕಾಮವರ್ಷಕನಾದ ಸೋಮನು | **ಕನಿಕ್ರತ್**—ಶಬ್ದಮಾಡುತ್ತಾ | **ಅರ್ಷತಿ**—ಧಾರಾರೂಪದಲ್ಲಿ ಪ್ರವಹಿಸುತ್ತಾನೆ.

|| ಭಾವಾರ್ಥ ||

ರಕ್ಷಣೆಯನ್ನು ಅಪೇಕ್ಷಿಸುವವರೂ, ಮೇಧಾವಿಗಳೂ ಆದ ಋತ್ವಿಕ್ಕುಗಳು ತಮ್ಮ ಬೆರಳುಗಳಿಂದ ಶುದ್ಧಿಗೆ ಯೋಗ್ಯನೂ, ಪ್ರಜ್ಞಾಯುತವಾದ ಕರ್ಮವುಳ್ಳವನೂ ಆದ ಸೋಮದೇವನನ್ನು ಶುದ್ಧಿಗೊಳಿಸುತ್ತಾರೆ. ಕಾಮವರ್ಷಕನಾದ ಸೋಮದೇವನು ಶಬ್ದಮಾಡುತ್ತಾ ಧಾರಾರೂಪದಲ್ಲಿ ಪ್ರವಹಿಸುತ್ತಾನೆ.

## English Translation.

The (worshippers) deriring protection, cleanse with their fingers the purifiable (Soma) the sage; with a noise the sprinkler (of benefits) flows forth.

|| ಸಂಹಿತಾಪಾಠಃ ||

ವೃಷಣಂ ಧೀಭಿರಪ್ತುರಂ ಸೋಮಮೃತಸ್ಯ ಧಾರಯಾ ।
ಮತೀ ವಿಪ್ರಾಃ ಸಮಸ್ವರನ್ || ೨೧ ||

|| ಪದಪಾಠಃ ||

ವೃಷಣಂ । ಧೀಭಿಃ । ಅಪ್ಽತುರಂ । ಸೋಮಂ । ಋತಸ್ಯ । ಧಾರಯಾ ।
ಮತೀ । ವಿಪ್ರಾಃ । ಸಂ । ಅಸ್ವರನ್ || ೨೧ ||

|| ಸಾಯಣಭಾಷ್ಯಂ ||

ವಿಪ್ರಾ ಮೇಧಾವಿನ ಋತ್ವಿಜೋ ವೃಷಣಂ ಕಾಮಾನಾಂ ವರ್ಷಕಮಪ್ತುರಮಪಾಂ ಪ್ರೇರಕಂ ಸೋಮಂ ಧೀಭಿರಂಗುಲೀಭಿರ್ಮತೀ ಮತ್ಯಾ ಸ್ತುತ್ಯಾ ಚರ್ತಸ್ಯೋದಕಸ್ಯ ಧಾರಯಾ ಸಮಸ್ವರನ್ । ಪ್ರೇರಯಂತಿ ||

|| ಪ್ರತಿಪದಾರ್ಥ ||

ವಿಪ್ರಾಃ—ಮೇಧಾವಿಗಳಾದ ಋತ್ವಿಕ್ಕುಗಳು । ವೃಷಣಂ—ಕಾಮವರ್ಷಕನೂ । ಅಪ್ತುರಂ—ಉದಕವನ್ನು ಸುರಿಸತಕ್ಕವನೂ ಆದ । ಸೋಮಂ—ಸೋಮನನ್ನು । ಧೀಭಿಃ—ಬೆರಳುಗಳಿಂದಲೂ । ಮತೀ—ಸ್ತುತಿಪೂರ್ವಕವಾಗಿಯೂ । ಋತಸ್ಯ—ಉದಕದ । ಧಾರಯಾ—ಪ್ರವಾಹದೊಡನೆ । ಸಮಸ್ವರನ್—ಸೇರುವಂತೆ ಮಾಡುತ್ತಾರೆ.

|| ಭಾವಾರ್ಥ ||

ಮೇಧಾವಿಗಳಾದ ಋತ್ವಿಕ್ಕುಗಳು ಕಾಮವರ್ಷಕನೂ, ಉದಕವನ್ನು ಸುರಿಸತಕ್ಕವನೂ ಆದ ಸೋಮನನ್ನು ಬೆರಳುಗಳಿಂದಲೂ ಸ್ತುತಿಪೂರ್ವಕವಾಗಿಯೂ ಸಹ ಉದಕದ ಪ್ರವಾಹದೊಡನೆ ಸೇರುವಂತೆ ಮಾಡುತ್ತಾರೆ.

## English Translaticn

The wise (priests) in a stream of water send forth with their fingers **and** with praise the sprinkler (of benefits), the shedder of water.

॥ ಸಂಹಿತಾಪಾಠಃ ॥

ಪವಸ್ವ ದೇವಾಯುಷಗಿಂದ್ರಂ ಗಚ್ಛತು ತೇ ಮದಃ ।
ವಾಯುಮಾ ರೋಹ ಧರ್ಮಣಾ ॥ ೨೨ ॥

॥ ಪದಪಾಠಃ ॥

ಪವಸ್ವ । ದೇವ । ಆಯುಷಕ್ । ಇಂದ್ರಂ । ಗಚ್ಛತು । ತೇ । ಮದಃ ।
ವಾಯುಂ । ಆ । ರೋಹ । ಧರ್ಮಣಾ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನ ಸೋಮ ಪವಸ್ವ । ಧಾರಯಾ ಕ್ಷರ । ಅಪಿ ಚ ತೇ ತವ **ಮದೋ** ಮದಕರೋ ರಸ ಆಯುಷಗನುಷಕ್ತಮಿಂದ್ರಂ ಪ್ರತಿ ಗಚ್ಛತು । ಅಪಿ ಚ ತ್ವಂ ವಾಯುಂ **ಧರ್ಮಣಾ** ಧಾರಕೇಣ ರಸೇನಾ ರೋಹ । ಪ್ರಾಪ್ನುಹಿ ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ ಎಲೈ ಸೋಮದೇವನೇ । **ಪವಸ್ವ**—ಧಾರಾರೂಪದಲ್ಲಿ ಪ್ರವಹಿಸು । **ತೇ**—ನಿನ್ನ । **ಮದಃ**—ಹರ್ಷಕಾರಕವಾದ ರಸವು । **ಆನುಷಕ್**—ಸರ್ವದಾ । **ಇಂದ್ರಂ**—ಇಂದ್ರನನ್ನುದ್ದೇಶಿಸಿ । **ಗಚ್ಛತು**—ಪ್ರವಹಿಸಲಿ । **ಧರ್ಮಣಾ**—ಜಗದ್ಧಾರಕವಾದ ರಸದಿಂದ । **ವಾಯುಂ**—ವಾಯುದೇವನ್ನು । **ಆ ರೋಹ**—ಸಮೀಪಿಸಿ ಸೇರು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಸೋಮದೇವನೇ, ಧಾರಾರೂಪದಲ್ಲಿ ಪ್ರವಹಿಸು. ನಿನ್ನ ಹರ್ಷಕಾರಕವಾದ ರಸವು ಸರ್ವದಾ ಇಂದ್ರನನ್ನುದ್ದೇಶಿಸಿ ಪ್ರವಹಿಸಲಿ. ಜಗದ್ಧಾರಕವಾದ ನಿನ್ನ ರಸದಿಂದ ವಾಯುದೇವನನ್ನು ಸಮೀಪಿಸಿ ಅವನನ್ನು ಸೇರು.

## English Translation.

Flow, brilliant (Soma), let your exhilarating juice proceed in continuous order to Indra, rise with your supporting (juice) to Vayu.

॥ ಸಂಹಿತಾಪಾಠಃ ॥

ಪವಮಾನ ನಿ ತೋಶಸೇ ರಯಿಂ ಸೋಮ ಶ್ರವಾಯ್ಯಂ ।
ಪ್ರಿಯಃ ಸಮುದ್ರಮಾ ವಿಶ ॥ ೨೩ ॥

॥ ಪದಪಾಠಃ ॥

ಪವಮಾನ । ನಿ । ತೋಶಸೇ । ರಯಿಂ । ಸೋಮ । ಶ್ರವಾಯ್ಯಂ ।
ಪ್ರಿಯಃ । ಸಮುದ್ರಂ । ಆ । ವಿಶ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಸೋಮ ಯಸ್ತ್ವಂ ಶ್ರವಾಯ್ಯಂ ಶ್ರವಣೀಯಂ ರಯಿಂ ಶತ್ರೂಣಾಂ ಧನಂ ನಿ ತೋಶಸೇ ನಿತರಾಂ ಹಿಂಸಯಸಿ ಸ ತ್ವಂ ಪ್ರಿಯಃ ಸನ್ ಸಮುದ್ರಂ ದ್ರೋಣಕಲಶಮಾ ವಿಶ । ಪ್ರವಿಶ ॥

॥ ಪ್ರತಿಪದಾರ್ಥ ॥

**ಪವಮಾನ**— ಶುದ್ಧಿಕಾರಕನಾದ । **ಸೋಮ**—ಎಲೈ ಸೋಮದೇವನೇ । **ಶ್ರವಾಯ್ಯಂ**—ಪ್ರಸಿದ್ಧವಾದ । **ರಯಿಂ**—ಶತ್ರುಧನವನ್ನು । **ನಿ ತೋಶಸೇ**—ನೀನು ಅಪಹರಿಸುತ್ತೀಯೆ । **ಪ್ರಿಯಃ**—ನಮಗೆಲ್ಲಾ ಪ್ರಿಯವನ್ನುಂಟುಮಾಡುವವನಾಗಿ । **ಸಮುದ್ರಂ**—ದ್ರೋಣಕಲಶವನ್ನು । **ಆ ವಿಶ**— ಪ್ರವೇಶಿಸು.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ನೀನು ಪ್ರಸಿದ್ಧವಾದ ಶತ್ರುಧನವನ್ನೆಲ್ಲಾ ಅಪಹರಿಸುತ್ತೀಯೆ. ನಮಗೆಲ್ಲಾ ಪ್ರಿಯವನ್ನುಂಟುಮಾಡುವವನಾಗಿ ದ್ರೋಣಕಲಶವನ್ನು ಪ್ರವೇಶಿಸು.

## English Translation.

Purified Soma, you squeeze forth the celebrated riches (of the enemy); do you who are beloved enter the ocean.

॥ ಸಂಹಿತಾಪಾಠಃ ॥

ಅಪಘ್ನನ್ಪವಸೇ ಮೃಧಃ ಕ್ರತುವಿತ್ಸೋಮ ಮತ್ಸರಃ ।
ನುದಸ್ವಾದೇವಯುಂ ಜನಂ ॥ ೨೪ ॥

|| ಪದಪಾಠಃ ||

ಅಪ಼ಽಘ್ನನ್ । ಪವಸೇ । ಮೃಧಃ । ಕ್ರತುಽವಿತ್ । ಸೋಮ । ಮತ್ಸರಃ ।

ನುದಸ್ವ । ಅದೇವಽಯುಂ । ಜನಂ || ೨೪ ||

|| ಸಾಯಣಭಾಷ್ಯಂ ||

ಹೇ ಸೋಮ ಮತ್ಸರೋ ಮದಕರೋ ಯಸ್ತ್ವಂ ಮೃಧೋ ಹಿಂಸಕಾಞ್ಶತ್ರೂನಪಘ್ನ-ನ್ಮಾರಯನ್ ಕ್ರತುವಿದಸ್ಮಭ್ಯಂ ಪ್ರಜ್ಞಾಂ ಪ್ರಯಚ್ಛನ್ ಪವಸೇ ಕ್ಷರಸಿ ಸ ತ್ವಮದೇವಯುಮದೇವಕಾಮಂ ಜನಂ ರಾಕ್ಷಸವರ್ಗಂ ನುದಸ್ವ । ಪ್ರೇರಯ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮನೇವನೇ । **ಮತ್ಸರಃ**—ಹರ್ಷಕಾರಕನಾದ ನೀನು । **ಮೃಧಃ—ಹಿಂಸಕರಾದ** ಶತ್ರುಗಳನ್ನು । **ಅಪಘ್ನನ್**—ನಾಶಮಾಡುತ್ತಲೂ । **ಕ್ರತುವಿತ್**—ನಮಗೆ ಪ್ರಜ್ಞೆಯನ್ನುಂ**ಟುಮಾಡಲು** ಇಚ್ಛಿಸುತ್ತಲೂ । **ಪವಸೇ**—ಹರಿಯುತ್ತೀಯೆ । **ಅದೇವಯುಂ**—ದೇವಪೂಜಕನಲ್ಲದ । **ಜನಂ—ನಾಸ್ತಿಕ**ನನ್ನು । **ನುದಸ್ವ**—ಹಿಂಸಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಹರ್ಷಕಾರಕನಾದ ನೀನು ಹಿಂಸಕರಾದ ಶತ್ರುಗಳನ್ನು **ನಾಶಮಾಡುತ್ತಲೂ,** ನಮಗೆ ಪ್ರಜ್ಞೆಯನ್ನುಂಟುಮಾಡಲು ಇಚ್ಛಿಸುತ್ತಲೂ ಹರಿಯುತ್ತೀಯೆ. ದೇವಪೂಜಕನಲ್ಲದ ನಾಸ್ತಿಕನನ್ನು **ಹಿಂಸಿಸು.**

English Translatioa

Soma, you who are exhilarating, flow defeating the **enemies,** bestowing knowledge (on us); drive off the people who love not the gods.

|| ಸಂಹಿತಾಪಾಠಃ ||

**ಪವಮಾನಾ ಅಸೃಕ್ಷತ ಸೋಮಾಃ ಶುಕ್ರಾಸ ಇಂದವಃ ।**

**ಅಭಿ ವಿಶ್ವಾನಿ ಕಾವ್ಯಾ || ೨೫ ||**

|| ಪದಪಾಠಃ ||

ಪವಮಾನಾಃ । ಅಸೃಕ್ಷತ । ಸೋಮಾಃ । ಶುಕ್ರಾಸಃ । ಇಂದವಃ ।

ಅಭಿ । ವಿಶ್ವಾನಿ । ಕಾವ್ಯಾ || ೨೫ ||

|| ಸಾಯಣಭಾಷ್ಯಂ ||

ಶುಕ್ರಾಸ ಉಜ್ಜ್ವಲಾ ಇಂದವೋ ದೀಪ್ತಾಃ ಪವಮಾನಾಃ ಕ್ಷರಂತಃ ಸೋಮಾ ವಿಶ್ವಾನಿ ಕಾವ್ಯಾ ಕಾವ್ಯಾನಿ ಸ್ತೋತ್ರಾಣ್ಯಭ್ಯಸೃಕ್ಷತ । ಸೃಜ್ಯಂತ ಋತ್ವಿಗ್ಭಿಃ ||

|| ಪ್ರತಿ ಪದಾರ್ಥ ||

ಶುಕ್ರಾಸಃ—ಪ್ರಭಾಯುತವಾದವೂ । ಇಂದವಃ—ಸ್ರವಿಸತಕ್ಕವೂ । ಪವಮಾನಾಃ—ಶುದ್ಧಿಕಾರಕವೂ ಆದ । ಸೋಮಾಃ—ಸೋಮರಸಗಳು । ವಿಶ್ವಾನಿ—ಸಮಸ್ತವಾದ । ಕಾವ್ಯಾ—ಸ್ತೋತ್ರಗಳನ್ನೂ । ಅಭ್ಯಸೃಕ್ಷತ—ಋತ್ವಿಕ್ಕುಗಳಿಂದ ನಿರ್ಮಿತವಾಗುವಂತೆ ಮಾಡುತ್ತವೆ.

|| ಭಾವಾರ್ಥ ||

ಪ್ರಭಾಯುತವಾದವೂ, ಸ್ರವಿಸತಕ್ಕವೂ, ಶುದ್ಧಿಕಾರಕವೂ ಆದ ಸೋಮರಸಗಳು ಸಮಸ್ತವಾದ ಸ್ತೋತ್ರಗಳನ್ನು ಋತ್ವಿಕ್ಕುಗಳಿಂದ ನಿರ್ಮಿತವಾಗುವಂತೆ ಮಾಡುತ್ತವೆ.

## English Translation.

The brilliant purified Soma-juices are let fall amidst all praises.

|| ಸಂಹಿತಾಪಾಠಃ ||

ಪವಮಾನಾಸ ಆಶವಃ ಶುಭ್ರಾ ಅಸೃಗ್ರಮಿಂದವಃ ।
ಘ್ನಂತೋ ವಿಶ್ವಾ ಅಪ ದ್ವಿಷಃ || ೨೬ ||

|| ಪದಪಾಠಃ ||

ಪವಮಾನಾಸಃ । ಆಶವಃ । ಶುಭ್ರಾಃ । ಅಸೃಗ್ರಂ । ಇಂದವಃ ।
ಘ್ನಂತಃ । ವಿಶ್ವಾಃ । ಅಪ । ದ್ವಿಷಃ || ೨೬ ||

|| ಸಾಯಣಭಾಷ್ಯಂ ||

ಆಶವಃ ಶೀಘ್ರಾಃ ಶುಭ್ರಾಃ ಶೋಭಮಾನಾಃ ಪವಮಾನಾಸಃ ಕ್ಷರಂತ ಇಂದವೋ ದೀಪ್ತಾಃ ಸೋಮಾ ವಿಶ್ವಾಃ ಸರ್ವಾನ್ದ್ವಿಷೋ ದ್ವೇಷ್ಟೄನ್ಶತ್ರೂನಪ ಘ್ನಂತೋ ಮಾರಯಂತೋಽಸೃಗ್ರಂ । ಸೃಜ್ಯಂತೇ ||

|| ಪ್ರತಿಪದಾರ್ಥ ||

ಆಶವಃ—ಶೀಘ್ರಗಾಮಿಗಳೂ । ಶುಭ್ರಾಃ—ಪ್ರಕಾಶಮಾನವಾದವೂ । ಪವಮಾನಾಸಃ—ಪ್ರವಹಿಸುವವೂ ಆದ । ಇಂದವಃ—ಸೋಮರಸಗಳು । ವಿಶ್ವಾಃ—ಸಮಸ್ತವಾದ । ದ್ವಿಷಃ—ಶತ್ರುಗಳನ್ನೂ । ಅಪ ಘ್ನಂತಃ—ನಾಶಮಾಡುತ್ತ । ಅಸೃಗ್ರಂ—ಉತ್ಪನ್ನವಾಗುತ್ತವೆ.

॥ ಭಾವಾರ್ಥ ॥

ಶೀಘ್ರವಾಗಿ ಪ್ರವಹಿಸುವುವೂ, ಪ್ರಕಾಶಮಾನವಾದುವೂ, ಶುದ್ಧಿಕಾರಕವೂ ಆದ ಸೋಮರಸಗಳು ಸಮಸ್ತವಾದ ಶತ್ರುಗಳನ್ನೂ ನಾಶಮಾಡುತ್ತ ಉತ್ಪನ್ನವಾಗುತ್ತವೆ.

English Translation.

The purified Soma-juices flow swift and bright, destroying enemies.

॥ ಸಂಹಿತಾಪಾಠಃ ॥

ಪವಮಾನಾ ದಿವಸ್ಪರ್ಯಂತರಿಕ್ಷಾದಸೃಕ್ಷತ ।

ಪೃಥಿವ್ಯಾ ಅಧಿ ಸಾನವಿ ॥ ೨೭ ॥

॥ ಪದಪಾಠಃ ॥

ಪವಮಾನಾಃ । ದಿವಃ । ಪರಿ । ಅಂತರಿಕ್ಷಾತ್ । ಅಸೃಕ್ಷತ ।

ಪೃಥಿವ್ಯಾಃ । ಅಧಿ । ಸಾನವಿ ॥ ೨೭ ॥

॥ ಸಾಯಣಭಾಷ್ಯಂ ॥

**ಪವಮಾನಾಃ** ಸೋಮಾ ದಿವೋ ದ್ಯುಲೋಕಾದಂತರಿಕ್ಷಾಚ್ಚ ಪೃಥಿವ್ಯಾ ಭೂಮ್ಯಾ ಅಧಿ ಸಾನವಿ ಸಮುಚ್ಛ್ರಿತೇ ದೇಶೇ ದೇವಯಜನೇ ಪರ್ಯಸೃಕ್ಷತ । ಸೃಜ್ಯಂತೇ ॥

॥ ಪ್ರತಿಪದಾರ್ಥ ॥

**ಪವಮಾನಾಃ**—ಶುದ್ಧಿಕಾರಕಗಳಾದ ಸೋಮರಸಗಳು । **ದಿವಃ**—ದ್ಯುಲೋಕದಿಂದಲೂ । **ಅಂತರಿಕ್ಷಾತ್**—ಅಂತರಿಕ್ಷದಿಂದಲೂ । **ಪೃಥಿವ್ಯಾಃ ಅಧಿ**—ಪೃಥ್ವಿಯ ಮೇಲೆ । **ಸಾನವಿ**—ಅತ್ಯುನ್ನತವಾದ ಯಜ್ಞಪ್ರದೇಶದಲ್ಲಿ । **ಪರ್ಯಸೃಕ್ಷತ**—ನಿರ್ಮಿತವಾಗಿ ಸುರಿಯಲ್ಪಡುತ್ತವೆ.

॥ ಭಾವಾರ್ಥ ॥

ಶುದ್ಧಿಕಾರಕಗಳಾದ ಸೋಮರಸಗಳು ದ್ಯುಲೋಕದಿಂದಲೂ, ಅಂತರಿಕ್ಷದಿಂದಲೂ ಸಹ ಪೃಥ್ವಿಯ ಮೇಲೆ ಅತ್ಯುನ್ನತವಾದ ಯಜ್ಞಪ್ರದೇಶದಲ್ಲಿ ನಿರ್ಮಿತವಾಗಿ ಸುರಿಯಲ್ಪಡುತ್ತವೆ.

English Translation

The purified (juices) are poured forth from heaven aad from the firmament upon the summit of the ground.

|| ಸಂಹಿತಾಪಾಠಃ ||

ಪುನಾನಃ ಸೋಮ ಧಾರಯೇಂದೋ ವಿಶ್ವಾ ಅಪ ಸ್ರಿಧಃ ।
ಜಹಿ ರಕ್ಷಾಂಸಿ ಸುಕ್ರತೋ || ೨೮ ||

|| ಪದಪಾಠಃ ||

ಪುನಾನಃ । ಸೋಮ । ಧಾರಯಾ । ಇಂದೋ ಇತಿ । ವಿಶ್ವಾಃ । ಅಪ । ಸ್ರಿಧಃ ।
ಜಹಿ । ರಕ್ಷಾಂಸಿ । ಸುಕ್ರತೋ ಇತಿ ಸುऽಕ್ರತೋ || ೨೮ ||

|| ಸಾಯಣಭಾಷ್ಯಂ ||

ಹೇ ಇಂದೋ ದೀಪ್ತ ಸುಕ್ರತೋ ಸುಕರ್ಮನ್ ಸೋಮ ಧಾರಯಾ ಪುನಾನಃ ಪೂಯಮಾನಸ್ತ್ವಂ ವಿಶ್ವಾಃ ಸರ್ವಾನ್ ಸ್ರಿಧೋ ದ್ವೇಷ್ಟ್ರೀಞ್ಛತ್ರೂನ್ರಕ್ಷಾಂಸಿ ರಾಕ್ಷಸಾಂಶ್ಚಾಪ ಜಹಿ । ಮಾರಯ ||

|| ಪ್ರತಿಪದಾರ್ಥ ||

**ಇಂದೋ**—ಕಾಂತಿಯುತನೂ । **ಸುಕ್ರತೋ**—ಉತ್ತಮವಾದ ಕರ್ಮಕರ್ತನೂ ಆದ । **ಸೋಮ**—ಎಲೈ ಸೋಮದೇವನೇ । **ಧಾರಯಾ**—ನಿನ್ನ ಪ್ರವಾಹದಿಂದ । **ಪುನಾನಃ**—ಶುದ್ಧಿಯನ್ನುಂಟುಮಾಡತಕ್ಕ ನೀನು **ವಿಶ್ವಾಃ**—ಸಮಸ್ತವಾದ । **ಸ್ರಿಧಃ**—ಶತ್ರುಗಳನ್ನೂ । **ರಕ್ಷಾಂಸಿ**—ರಾಕ್ಷಸರನ್ನೂ । **ಅಪ ಜಹಿ**—ನಾಶಪಡಿಸು.

|| ಭಾವಾರ್ಥ ||

ಕಾಂತಿಯುತನೂ, ಉತ್ತಮವಾದ ಕರ್ಮಕರ್ತನೂ ಆದ ಎಲೈ ಸೋಮದೇವನೇ, ನಿನ್ನ ಪ್ರವಾಹದಿಂದ ಶುದ್ಧಿಯನ್ನುಂಟುಮಾಡತಕ್ಕ ನೀನು ಸಮಸ್ತವಾದ ಶತ್ರುಗಳನ್ನೂ ರಾಕ್ಷಸರನ್ನೂ ನಾಶಪಡಿಸು.

## English Translation.

Brilliani Soma, do you, purified in a stream, achieving great acts, destroy all foes and the Rakshasas.

|| ಸಂಹಿತಾಪಾಠಃ ||

ಅಪಘ್ನನ್ತ್ಸೋಮ ರಕ್ಷಸೋಽಭ್ಯರ್ಷ ಕನಿಕ್ರದತ್ ।
ದ್ಯುಮಂತಂ ಶುಷ್ಮಮುತ್ತಮಂ || ೨೯ ||

|| ಪದಪಾಠಃ ||

ಅಪ॒ಽಘ್ನನ್ । ಸೋ॒ಮ॒ । ರ॒ಕ್ಷಸಃ॑ । ಅ॒ಭಿ । ಅ॒ರ್ಷ॒ । ಕನಿ॑ಕ್ರದತ್ ।

ದ್ಯು॒ಽಮಂತ॑ಂ । ಶುಷ್ಮ॑ಂ । ಉ॒ತ್ಽತ॒ಮಂ ॥ ೨೯ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ರಕ್ಷಸೋ ರಕ್ಷಾಂಸ್ಯಪಘ್ನನ್ ವಿನಾಶಯನ್ ಕನಿಕ್ರದಚ್ಛಬ್ದಂ ಕುರ್ವನ್ ದ್ಯುಮಂತಂ ದೀಪ್ತಿಮಂತಮುತ್ತಮಂ ಶ್ರೇಷ್ಠಂ ಶುಷ್ಮಂ ಬಲಮಭ್ಯರ್ಷ । ಅಸ್ಮಾನ್ಪ್ರತಿ ಪವಸ್ವ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ರಕ್ಷಸಃ**—ರಾಕ್ಷಸರನ್ನು । **ಅಪಘ್ನನ್**—ನಾಶಪಡಿಸುತ್ತಲೂ । **ಕನಿಕ್ರದತ್**—ಶಬ್ದಮಾಡುತ್ತಲೂ । **ದ್ಯುಮಂತಂ**—ಕಾಂತಿಯುತವಾದುದೂ । **ಉತ್ತಮಂ**—ಶ್ರೇಷ್ಠವಾದುದೂ ಆದ । **ಶುಷ್ಮಂ**—ಬಲವನ್ನು । **ಅಭ್ಯರ್ಷ**—ನಮ್ಮಲ್ಲಿಗೆ ಬರುವಂತೆಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ರಾಕ್ಷಸರನ್ನು ನಾಶಪಡಿಸುತ್ತಲೂ, ಶಬ್ದಮಾಡುತ್ತಲೂ, ಕಾಂತಿಯುತವಾದುದೂ ಶ್ರೇಷ್ಠವಾದುದೂ ಆದ ಬಲವನ್ನು ನಮ್ಮಲ್ಲಿಗೆ ಬರುವಂತೆ ಮಾಡು.

English Translation

Destroying the Rakshasas, pour forth, Soma, with a noise, brilliant and excellent vigour.

|| ಸಂಹಿತಾಪಾಠಃ ||

ಅ॒ಸ್ಮೇ ವಸೂ॑ನಿ ಧಾರಯ॒ ಸೋಮ॑ ದಿ॒ವ್ಯಾನಿ॒ ಪಾರ್ಥಿ॑ವಾ ।

ಇಂದೋ॒ ವಿಶ್ವಾ॑ನಿ॒ ವಾರ್ಯಾ॑ ॥ ೩೦ ॥

|| ಪದಪಾಠಃ ||

ಅ॒ಸ್ಮೇ ಇತಿ॑ । ವಸೂ॑ನಿ । ಧಾ॒ರ॒ಯ॒ । ಸೋಮ॑ । ದಿ॒ವ್ಯಾನಿ॑ । ಪಾರ್ಥಿ॑ವಾ ।

ಇಂದೋ॒ ಇತಿ॑ । ವಿಶ್ವಾ॑ನಿ । ವಾರ್ಯಾ॑ ॥ ೩೦ ॥

|| ಸಾಯಣಭಾಷ್ಯಂ ||

**ಹೇ ಇಂದೋ ದೀಪ್ತ ಸೋಮ ದಿವ್ಯಾನಿ ದಿವಿ ಭವಾನಿ ಪಾರ್ಥಿವಾ ಪಾರ್ಥಿವಾನಿ ಪೃಥಿವ್ಯಾಂ ಜಾತಾನಿ ಚ ವಿಶ್ವಾನಿ ಸರ್ವಾಣಿ ವಾರ್ಯಾ ವಾರ್ಯಾಣಿ ವರಣೀಯಾನಿ ವಸೂನ್ಯಸ್ಮೇ ಅಸ್ಮಾಸು ಧಾರಯ । ಪ್ರಕ್ಷಿಪ ||**

|| ಪ್ರತಿಪದಾರ್ಥ ||

**ಇಂದೋ**—ಕಾಂತಿಯುತನಾದ | **ಸೋಮ**—ಎಲೈ ಸೋಮದೇವನೇ | **ದಿವ್ಯಾನಿ**—ದ್ಯುಲೋಕೋತ್ಪನ್ನವಾದವೂ | **ಪಾರ್ಥಿವಾ**—ಪೃಥಿವ್ಯುತ್ಪನ್ನವಾದವೂ | **ವಿಶ್ವಾನಿ**—ಸಮಸ್ತವಾದವೂ | **ವಾರ್ಯಾ**—ಅಪೇಕ್ಷಿತವಾದವೂ ಆದ | **ವಸೂನಿ**—ಧನಗಳನ್ನು | **ಅಸ್ಮೇ**—ನಮ್ಮಲ್ಲಿಗೆ | **ಧಾರಯ**—ತಂದೊಗಿಸು.

|| ಭಾವಾರ್ಥ ||

ಕಾಂತಿಯುತನಾದ ಎಲೈ ಸೋಮದೇವನೇ, ದ್ಯುಲೋಕೋತ್ಪನ್ನವಾದವೂ, ಪೃಥಿವ್ಯುತ್ಪನ್ನವಾದವೂ ಪೂರ್ಣವಾಗಿ ಅಪೇಕ್ಷಿತವೂ ಆದ ಸಮಸ್ತ ಧನಗಳೂ ನಮಗೆ ಸೇರುವಂತೆ ಮಾಡು.

English Translation

Bestow upon us, Soma, celestial and terrestrial treasnres : (bestow), Indu, all desirable things.

# ಅರವತ್ತನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ವೃಷಾ ಸೋಮೇತಿ ತ್ರಿಂಶದೃಚಂ ಚತುರ್ಥಂ ಸೂಕ್ತಂ ಮಾರೀಚಸ್ಯ ಕಶ್ಯಪಸ್ಯಾರ್ಷಂ ಗಾಯತ್ರಂ ಪವಮಾನಸೌಮ್ಯಂ । ತಥಾ ಚಾನುಕ್ರಾಂತಂ । ವೃಷಾ ಸೋಮ ಕಶ್ಯಪ ಇತಿ । ಉಕ್ತೋ ವಿನಿಯೋಗಃ ||**

ಅನುವಾದವು—**ವೃಷಾ ಸೋಮ**—ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ—ಮಾರೀಚಃ ಕಾಶ್ಯಪಃ ಎಂಬುವನು ಋಷಿಯು ; ಪವಮಾನಸೋಮನು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ವೃಷಾ ಸೋಮಃ ಕಶ್ಯಪಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೪

ಮಂಡಲ—೯ || ಅನುವಾಕ—೩ || ಸೂಕ್ತ—೬೪ ||
ಅಷ್ಟಕ—೭ || ಅಧ್ಯಾಯ—೧ || ವರ್ಗ—೩೬, ೩೭, ೩೮, ೩೯, ೪೦, ೪೧ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ||
|| ಋಷಿಃ—ಕಶ್ಯಪಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

ವೃಷಾ ಸೋಮ ದ್ಯುಮಾಁ ಅಸಿ ವೃಷಾ ದೇವ ವೃಷವ್ರತಃ |
ವೃಷಾ ಧರ್ಮಾಣಿ ದಧಿಷೇ || ೧ ||

|| ಪದಪಾಠಃ ||

ವೃಷಾ | ಸೋಮ | ದ್ಯುಽಮಾನ್ | ಅಸಿ | ವೃಷಾ | ದೇವ | ವೃಷಽವ್ರತಃ |
ವೃಷಾ | ಧರ್ಮಾಣಿ | ದಧಿಷೇ || ೧ ||

|| ಸಾಯಣಭಾಷ್ಯಂ ||

ಹೇ ಸೋಮ ವೃಷಾ ವರ್ಷಕಸ್ತ್ವಂ ದ್ಯುಮಾನ್ದೀಪ್ತಿಮಾನಸಿ | ಅಪಿ ಚ ಹೇ ದೇವ ದ್ಯೋತಮಾನ ಸೋಮ ವೃಷಾ ತ್ವಂ ವೃಷವ್ರತೋ ವರ್ಷಣಶೀಲಕರ್ಮಾಸಿ | ಕಿಂ ಚ ಹೇ ಸೋಮ ವೃಷಾ ತ್ವಂ ಧರ್ಮಾಣಿ ದೇವಾನಾಂ ಮನುಷ್ಯಾಣಾಂ ಚ ಹಿತಾನಿ ಕರ್ಮಾಣಿ ದಧಿಷೇ | ಧಾರಯಸಿ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ವೃಷಾ**—ಇಷ್ಟಾರ್ಥಪ್ರದನಾದ ನೀನು | **ದ್ಯುಮಾನ್**—ಕಾಂತಿಯುತನಾಗಿ | **ಅಸಿ**—ಆಗಿದ್ದೀಯೆ | **ದೇವ**—ದೇವತಾತ್ಮನಾದ ಎಲೈ ಸೋಮನೇ | **ವೃಷಾ**—ಕಾಮವರ್ಷಕನಾದ ನೀನು | **ವೃಷವ್ರತಃ**—ಇಷ್ಟಾರ್ಥಪ್ರದವಾದ ಕರ್ಮವುಳ್ಳವನಾಗಿದ್ದೀಯೆ | **ವೃಷಾ**—ಕಾಮವರ್ಷಕನಾದ ನೀನು | **ಧರ್ಮಾಣಿ**—ಸಕಲರಿಗೂ ಧಾರಕವಾದ ಕರ್ಮಗಳನ್ನು | **ದಧಿಷೇ**—ಹೊಂದಿದ್ದೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಇಷ್ಟಾರ್ಥಪ್ರದನಾದ ನೀನು ಕಾಂತಿಯುತನಾಗಿ ಆಗಿದ್ದೀಯೆ. ದೇವತಾತ್ಮನಾದ ಎಲೈ ಸೋಮನೇ, ಕಾಮವರ್ಷಕನಾದ ನೀನು ಇಷ್ಟಾರ್ಥಪ್ರದವಾದ ಕರ್ಮವುಳ್ಳವನಾಗಿದ್ದೀಯೆ. ಕಾಮವರ್ಷಕನಾದ ನೀನು ಸಕಲರಿಗೂ ಧಾರಕವಾದ ಕರ್ಮಗಳನ್ನು ಹೊಂದಿದ್ದೀಯೆ.

## English Translation

You, Soma, are the bright sprinkler; you shining (Soma) are the sprinkler whose ocoupation is sprinkling ; you, the sprinkler, sustain the rites (of men and gods).

|| ಸಂಹಿತಾಪಾಠಃ ||

ವೃಷ್ಣಸ್ತೇ ವೃಷ್ಣ್ಯಂ ಶವೋ ವೃಷಾ ವನಂ ವೃಷಾ ಮದಃ |
ಸತ್ಯಂ ವೃಷನ್ವೃಷೇದಸಿ || ೨ ||

|| ಪದಪಾಠಃ ||

ವೃಷ್ಣಃ | ತೇ | ವೃಷ್ಣ್ಯಂ | ಶವಃ | ವೃಷಾ | ವನಂ | ವೃಷಾ | ಮದಃ |
ಸತ್ಯಂ | ವೃಷನ್ | ವೃಷಾ | ಇತ್ | ಅಸಿ || ೨ ||

|| ಸಾಯಣಭಾಷ್ಯಂ ||

ಹೇ ವೃಷನ್ ಕಾಮಾನಾಂ ವರ್ಷಕ ಸೋಮ ವೃಷ್ಣೋ ವರ್ಷಿತುಸ್ತೇ ತವ ಶವೋ ಬಲಂ ವೃಷ್ಣ್ಯಂ ವರ್ಷಣಶೀಲಂ ಭವತಿ | ವನಂ ತವ ಭಜನಮಪಿ ವೃಷಾ ವರ್ಷಣಶೀಲಂ | ಮದಸ್ತವ ರಸೋಽಪಿ ವೃಷಾ ವರ್ಷಣಶೀಲಃ | ಸತ್ಯಂ ಸತ್ಯಮೇವ ತ್ವಂ ವೃಷೇದ್ವರ್ಷಣಶೀಲ ಏವಾಸಿ | ಭವಸಿ ||

|| ಪ್ರತಿಪದಾರ್ಥ ||

ವೃಷನ್—ಕಾಮವರ್ಷಕನಾದ ಎಲೈ ಸೋಮದೇವನೇ | ವೃಷ್ಣಃ—ಇಷ್ಟಾರ್ಥಪ್ರದನಾದ | ತೇ—ನಿನ್ನ | ಶವಃ—ಬಲವು | ವೃಷ್ಣ್ಯಂ—ಅಪೇಕ್ಷಿಸಿದುದನ್ನು ಕೊಡುವುದಾಗಿದೆ | ವನಂ—ನಿನ್ನ ಪಾನವೂ ಸಹ | ವೃಷಾ—ಇಷ್ಟಾರ್ಥಪ್ರದವಾದುದಾಗಿದೆ | ಮದಃ—ಹರ್ಷಕಾರಕವಾದ ನಿನ್ನ ರಸವೂ ಸಹ | ವೃಷಾ—ಕಾಮವರ್ಷಕವಾದುದಾಗಿದೆ | ಸತ್ಯಂ—ಖಂಡಿತವಾಗಿಯೂ | ವೃಷೇತ್—ನೀನು ಇಷ್ಟಾರ್ಥಪ್ರದನಾಗಿಯೇ | ಅಸಿ—ಆಗಿದ್ದೀಯೆ.

|| ಭಾವಾರ್ಥ ||

ಕಾಮವರ್ಷಕನಾದ ಎಲೈ ಸೋಮದೇವನೇ, ಇಷ್ಟಾರ್ಥಪ್ರದನಾದ ನಿನ್ನ ಬಲವು ಅಪೇಕ್ಷಿಸಿದುದನ್ನು ಕೊಡುವುದಾಗಿದೆ. ನಿನ್ನ ಪಾನವೂ ಸಹ ಇಷ್ಟಾರ್ಥಪ್ರದವಾದುದಾಗಿದೆ. ಹರ್ಷಕಾರಕವಾದ ನಿನ್ನ ರಸವೂ ಸಹ ಕಾಮವರ್ಷಕವಾದುದಾಗಿದೆ. ಖಂಡಿತವಾಗಿಯೂ ನೀನು ಇಷ್ಟಾರ್ಥಪ್ರದನಾಗಿಯೇ ಆಗಿದ್ದೀಯೆ.

Engiish Translation

O sprinkler, the strength of you the sprinkler consists in sprinkling, your worship consists in sprinkling your juice consists in sprinkling; you truly are always. the sprinkler.

|| ಸಂಹಿತಾಪಾಠಃ ||

ಅಶ್ವೋ ನ ಚಕ್ರದೋ ವೃಷಾ ಸಂ ಗಾ ಇಂದೋ ಸಮರ್ವತಃ |
ವಿ ನೋ ರಾಯೋ ದುರೋ ವೃಧಿ || ೩ ||

|| ಪದಪಾಠಃ ||

ಅಶ್ವಃ | ನ | ಚಕ್ರದಃ | ವೃಷಾ | ಸಂ | ಗಾಃ | ಇಂದೋ ಇತಿ | ಸಂ | ಅರ್ವತಃ |

ವಿ | ನಃ | ರಾಯೇ | ದುರಃ | ವೃಧಿ || ೩ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ವೃಷಾ ತ್ವಮಶ್ವೋ ನಾಶ್ವ ಇವ ಸಂ ಚಕ್ರದಃ ಸಂಕ್ರಂದಸೇ | ಅಪಿ ಚ ಗಾಃ ಪಶೂನರ್ವತೋಽಶ್ವಾಂಶ್ಚಾಸ್ಮಭ್ಯಂ ಸಂ | ಪ್ರಯಚ್ಛಸೀತಿ ಶೇಷಃ | ಕಿಂ ಚ ನೋಽಸ್ಮಾಕಂ ರಾಯೇ ಧನಾಯ ದುರೋ ದ್ವಾರಾಣಿ ವಿ ವೃಧಿ | ವಿವೃತಾನಿ ಕುರು ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ವೃಷಾ—ಇಷ್ಟಾರ್ಥಪ್ರದನಾದ ನೀನು | ಅಶ್ವೋ ನ—ಅಶ್ವದಂತೆ| ಸಂ ಚಕ್ರದಃ—ಶಬ್ದಮಾಡುತ್ತೀಯೆ | ಗಾಃ—ಗೋವುಗಳನ್ನೂ | ಅರ್ವತಃ—ಅಶ್ವಗಳನ್ನೂ | ಸಂ—ನಮಗೆ ಕೊಡು | ನಃ—ನಮಗೆ | ರಾಯೇ—ಧನಲಾಭಕ್ಕೆ ಸಾಧಕವಾದ | ದುರಃ—ಬಾಗಿಲುಗಳನ್ನು | ವಿ ವೃಧಿ—ಪೂರ್ಣವಾಗಿ ತೆರೆ.

|| ಭಾವಾರ್ಥ ||

ಎಲೈ ಸೋಮದೇವನೇ, ಇಷ್ಟಾರ್ಥಪ್ರದನಾದ ನೀನು ಅಶ್ವದಂತೆ ಶಬ್ದಮಾಡುತ್ತೀಯೆ. ನಮ್ಮ ಧನಲಾಭಕ್ಕೆ ಸಾಧಕವಾದ ಬಾಗಿಲುಗಳನ್ನು ಪೂರ್ಣವಾಗಿ ತೆರೆ.

## English Translation.

Indu, the sprinkler, you neigh like a horse; you give us cattle, you give us horses; open the doors for our wealth.

|| ಸಂಹಿತಾಪಾಠಃ ||

ಅಸೃಕ್ಷತ ಪ್ರ ವಾಜಿನೋ ಗವ್ಯಾ ಸೋಮಾಸೋ ಅಶ್ವಯಾ |

ಶುಕ್ರಾಸೋ ವೀರಯಾಶವಃ || ೪ ||

|| ಪದಪಾಠಃ ||

ಅಸೃಕ್ಷತ | ಪ್ರ | ವಾಜಿನಃ | ಗವ್ಯಾ | ಸೋಮಾಸಃ | ಅಶ್ವಽಯಾ |

ಶುಕ್ರಾಸಃ | ವೀರಽಯಾ | ಆಶವಃ || ೪ ||

|| ಸಾಯಣಭಾಷ್ಯಂ ||

ವಾಜಿನೋ ಬಲವಂತಃ ಶುಕ್ರಾಸಃ ಶುಕ್ರಾ ಉಜ್ಜ್ವಲಾ ಆಶವೋ ವೇಗವಂತಶ್ಚ ಸೋಮಾಸಃ ಸೋಮಾ ಗವ್ಯಾ ಗವೇಚ್ಛಯಾಶ್ವಯಾಶ್ವೇಚ್ಛಯಾ ಚ ವೀರಯಾ ಪುತ್ರೇಚ್ಛಯಾ ಚ ಪ್ರಾಸೃಕ್ಷತ | ಋತ್ವಿಗ್ಭಿಃ ಸೃಜ್ಯಂತೇ ||

|| ಪ್ರತಿಪದಾರ್ಥ ||

ವಾಜಿನಃ—ಶಕ್ತಿಯುತವಾದವೂ | ಶುಕ್ರಾಸಃ—ಪ್ರಕಾಶಮಾನವಾದವೂ ಆದ | ಆಶವಃ—ವೇಗಗಾಮಿಗಳೂ ಆದ | ಸೋಮಾಸಃ—ಸೋಮರಸಗಳು | ಗವ್ಯಾ—ಗೋವುಗಳನ್ನು ಪಡೆಯುವ ಇಚ್ಛೆಯಿಂದಲೂ | ಅಶ್ವಯಾ—ಅಶ್ವಗಳನ್ನು ಪಡೆಯುವ ಇಚ್ಛೆಯಿಂದಲೂ | ವೀರಯಾ—ವೀರಪುತ್ರರನ್ನು ಪಡೆಯುವ ಇಚ್ಛೆಯಿಂದಲೂ | ಪ್ರ ಅಸೃಕ್ಷತ—ಹಿಂಡಲ್ಪಡುತ್ತವೆ.

|| ಭಾವಾರ್ಥ ||

ಶಕ್ತಿಯುತವಾದವೂ, ಪ್ರಕಾಶಮಾನವಾದವೂ, ವೇಗಗಾಮಿಗಳೂ ಆದ ಸೋಮರಸಗಳು ಗೋವುಗಳನ್ನೂ, ಅಶ್ವಗಳನ್ನೂ ವೀರಪುತ್ರರನ್ನೂ ಪಡೆಯುವ ಇಚ್ಛೆಯಿಂದ ಋತ್ವಿಕ್ಕುಗಳಿಂದ ಹಿಂಡಲ್ಪಡುತ್ತವೆ.

English Translation.

The powerrul, brilliant, rapid Soma-juices are effused in the hope of obtaining cattle, horses, and male offspring.

|| ಸಂಹಿತಾಪಾಠಃ ||

ಶುಂಭಮಾನಾ ಋತಾಯುಭಿರ್ಮೃಜ್ಯಮಾನಾ ಗಭಸ್ತ್ಯೋಃ |
ಪವಂತೇ ವಾರೇ ಅವ್ಯಯೇ || ೫ ||

|| ಪದಪಾಠಃ ||

ಶುಂಭಮಾನಾಃ | ಋತಯುಽಭಿಃ | ಮೃಜ್ಯಮಾನಾಃ | ಗಭಸ್ತ್ಯೋಃ |
ಪವಂತೇ | ವಾರೇ | ಅವ್ಯಯೇ || ೫ ||

|| ಸಾಯಣಭಾಷ್ಯಂ ||

ಋತಾಯುಭಿರ್ಯಜ್ಞಕಾಮೈಃ ಶುಂಭಮಾನಾ ಅಲಂಕ್ರಿಯಮಾಣಾ ಗಭಸ್ತ್ಯೋರ್ಗಭಸ್ತಿಭ್ಯಾಂ ಬಾಹುಭ್ಯಾಂ | ಗಭಸ್ತೀ ಬಾಹೂ ಇತಿ ಬಾಹುನಾಮಸು ಪಾಠಾತ್ | ಮೃಜ್ಯಮಾನಾಃ ಶೋಧ್ಯಮಾನಾಃ ಸೋಮಾ ಅವ್ಯಯೇಽವಿಮಯೇ ವಾರೇ ವಾಲೇ ಪವಿತ್ರೇ ಪವಂತೇ | ಕ್ಷರಂತಿ ||

|| ಪ್ರತಿಪದಾರ್ಥ ||

**ಋತಾಯುಭಿಃ**—ಯಜ್ಞವನ್ನು ಮಾಡುವ ಇಚ್ಛೆಯುಳ್ಳವರಿಂದ | **ಶುಂಭಮಾನಾಃ**—ಸಂಸ್ಕರಿಸಲ್ಪಟ್ಟವೂ | **ಗಭಸ್ತ್ಯೋಃ**— ತೋಳುಗಳಿಂದ | **ಮೃಜ್ಯಮಾನಾಃ**—ಶೋಧಿಸಲ್ಪಟ್ಟವೂ ಆದ ಸೋಮರಸಗಳು | **ಅವ್ಯಯೇ**—ಉಣ್ಣೆಯ | **ವಾರೇ**—ನಾರುಗಳುಳ್ಳ ದಶಾಪವಿತ್ರದಲ್ಲಿ | **ಪವಂತೇ**—ಹರಿಯುತ್ತವೆ.

|| ಭಾವಾರ್ಥ ||

ಯಜ್ಞಕಾಮರಿಂದ ಸಂಸ್ಕರಿಸಲ್ಪಟ್ಟವೂ, ತೋಳುಗಳಿಂದ ಶೋಧಿಸಲ್ಪಟ್ಟವೂ ಆದ ಸೋಮರಸಗಳು ಉಣ್ಣೆಯ ನಾರುಗಳುಳ್ಳ ದಶಾಪವಿತ್ರದಲ್ಲಿ ಹರಿಯುತ್ತವೆ.

English Translation.

The (Soma-juices) beautified by those desirous of sacrifice, cleansed by their hands, flow through the woollen fleece.

|| ಸಂಹಿತಾಪಾಠಃ ||

**ತೇ ವಿಶ್ವಾ ದಾಶುಷೇ ವಸು ಸೋಮಾ ದಿವ್ಯಾನಿ ಪಾರ್ಥಿವಾ |**
**ಪವಂತಾಮಾಂತರಿಕ್ಷ್ಯಾ || ೬ ||**

|| ಪದಪಾಠಃ ||

ತೇ | ವಿಶ್ವಾ | ದಾಶುಷೇ | ವಸು | ಸೋಮಾಃ | ದಿವ್ಯಾನಿ | ಪಾರ್ಥಿವಾ |
ಪವಂತಾಂ | ಆ | ಅಂತರಿಕ್ಷ್ಯಾ || ೬ ||

|| ಸಾಯಣಭಾಷ್ಯಂ ||

ತೇ ಸೋಮಾ ದಿವ್ಯಾನಿ ದಿವಿ ಭವಾನಿ ಪಾರ್ಥಿವಾ ಪಾರ್ಥಿವಾನಿ ಪೃಥಿವ್ಯಾಂ ಸಂಭೂತಾನಿ ಚಾಂತರಿಕ್ಷ್ಯಾಂತರಿಕ್ಷ್ಯಾಣ್ಯಂತರಿಕ್ಷೇ ಜಾತಾನಿ ಚ ವಿಶ್ವಾ ವಿಶ್ವಾನಿ ವಸು ವಸೂನಿ ಧನಾನಿ ದಾಶುಷೇ ಹವಿಷಾಂ ಪ್ರದಾತ್ರೇ ಯಜಮಾನಾಯ ಪವಂತಾಂ | ಕ್ಷರಂತು ||

|| ಪ್ರತಿಪದಾರ್ಥ ||

**ತೇ**—ಪ್ರಸಿದ್ಧವಾದ | **ಸೋಮಾಃ**— ಸೋಮರಸಗಳು | **ದಿವ್ಯಾನಿ**— ದ್ಯುಲೋಕೋತ್ಪನ್ನವಾದವೂ | **ಪಾರ್ಥಿವಾ**— ಪೃಥ್ವಿಯಲ್ಲಿರತಕ್ಕವೂ | **ಅಂತರಿಕ್ಷ್ಯಾ**— ಅಂತರಿಕ್ಷದಲ್ಲಿರತಕ್ಕವೂ ಆದ | **ವಿಶ್ವಾ**—ಸಮಸ್ತವಾದ | **ವಸು**—ಧನಗಳನ್ನೂ | **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ | **ಆ ಪವಂತಾಂ**—ಪ್ರಭೂತವಾಗಿ ಒದಗಿಸಿಕೊಡಲಿ.

|| ಭಾವಾರ್ಥ ||

ಪ್ರಸಿದ್ಧವಾದ ಸೋಮರಸಗಳು ದ್ಯುಲೋಕೋತ್ಪನ್ನವಾದವೂ, ಪೃಥ್ವಿಯಲ್ಲಿರತಕ್ಕವೂ, ಅಂತರಿಕ್ಷದಲ್ಲಿರತಕ್ಕವೂ ಆದ ಸಕಲ ಧನಗಳನ್ನು ಹವಿಸ್ಸನ್ನರ್ಪಿಸುವ ಯಜಮಾನನಿಗೆ ಪ್ರಭೂತವಾಗಿ ಒದಗಿಸಲಿ.

English Translation.

May those Soma-juices pour forth for the offerer (of libations) all the treasures of heaven and earth and the firmament.

|| ಸಂಹಿತಾಪಾಠಃ ||

ಪವಮಾನಸ್ಯ ವಿಶ್ವವಿತ್ಪ್ರ ತೇ ಸರ್ಗಾ ಅಸೃಕ್ಷತ ।

ಸೂರ್ಯಸ್ಯೇವ ನ ರಶ್ಮಯಃ || ೭ ||

|| ಪದಪಾಠಃ ||

ಪವಮಾನಸ್ಯ । ವಿಶ್ವಽವಿತ್ । ಪ್ರ । ತೇ । ಸರ್ಗಾಃ । ಅಸೃಕ್ಷತ ।

ಸೂರ್ಯಸ್ಯಽಇವ । ನ । ರಶ್ಮಯಃ || ೭ ||

|| ಸಾಯಣಭಾಷ್ಯಂ ||

ಹೇ ವಿಶ್ವವಿದ್ವಿಶ್ವಸ್ಯ ದ್ರಷ್ಟಃ ಸೋಮ ಪವಮಾನಸ್ಯ ಕ್ಷರತಸ್ತೇ ತವ ಸರ್ಗಾಃ ಪ್ರಸೃಜ್ಯಮಾನಾ ಧಾರಾಃ ಸೂರ್ಯಸ್ಯೇವ ರಶ್ಮಯಃ ಸೂರ್ಯಸ್ಯ ಕಿರಣಾ ಇವ ಪ್ರಕಾಶಮಾನಾಃ । ನೇತಿ ಸಂಪ್ರತ್ಯರ್ಥೇ । ಇದಾನೀಂ ಪ್ರಾಸೃಕ್ಷತ । ಪ್ರಾಸೃಜ್ಯಂತ ||

|| ಪ್ರತಿಪದಾರ್ಥ ||

**ವಿಶ್ವವಿತ್**— ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮದೇವನೇ । **ಪವಮಾನಸ್ಯ**— ಪ್ರವಾಹಾತ್ಮಕನಾದ । **ತೇ**— ನಿನ್ನ । **ಸರ್ಗಾಃ**— ಧಾರೆಗಳು । **ಸೂರ್ಯಸ್ಯೇವ ರಶ್ಮಯಃ**— ಸೂರ್ಯನ ರಶ್ಮಿಗಳಂತೆ । **ಪ್ರ ಅಸೃಕ್ಷತ**— ಉತ್ಪನ್ನವಾಗಿ ಪ್ರಸರಿಸುತ್ತವೆ.

|| ಭಾವಾರ್ಥ ||

ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮದೇವನೇ, ಪ್ರವಾಹಾತ್ಮಕನಾದ ನಿನ್ನ ಧಾರೆಗಳು ಸೂರ್ಯನ ರಶ್ಮಿಗಳಂತೆ ಉತ್ಪನ್ನವಾಗಿ ಪ್ರಸರಿಸುತ್ತವೆ.

English Translation.

All-beholding Soma, your streams as you are being purified are sent forth like the rays ot the sun at present.

॥ ಸಂಹಿತಾಪಾಠಃ ॥

ಕೇತುಂ ಕೃಣ್ವನ್ದಿವಸ್ಪರಿ ವಿಶ್ವಾ ರೂಪಾಭ್ಯರ್ಷಸಿ ।
ಸಮುದ್ರಃ ಸೋಮ ಪಿನ್ವಸೇ ॥ ೮ ॥

॥ ಪದಪಾಠಃ ॥

ಕೇತುಂ । ಕೃಣ್ವನ್ । ದಿವಃ । ಪರಿ । ವಿಶ್ವಾ । ರೂಪಾ । ಅಭಿ । ಅರ್ಷಸಿ ।
ಸಮುದ್ರಃ । ಸೋಮ । ಪಿನ್ವಸೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸಮುದ್ರಃ। ಸಮುದ್ದ್ರವಂತಿ ಯಸ್ಮಾದ್ರಸಾಃ ಸ ಸಮುದ್ರಃ । ಸ ತ್ವಂ ಕೇತುಂ ಪ್ರಜ್ಞಾನಂ ಕೃಣ್ವನ್ಕುರ್ವನ್ನಸ್ಮಾಕಂ ವಿಶ್ವಾ ವಿಶ್ವಾನಿ ರೂಪಾಣಿ ದಿವೋಽಂತರಿಕ್ಷಾದಭ್ಯರ್ಷಸಿ । ಅಭಿಪ-ವಸೇ । ಪಿನ್ವಸೇ । ನಾನಾವಿಧಾನಿ ಧನಾನಿ ಚಾಸ್ಮಭ್ಯಂ ಪ್ರಯಚ್ಛಸಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಸಮುದ್ರಃ—ರಸನಿಧಿಯಾದ ನೀನು । ಕೇತುಂ— ಉತ್ತಮವಾದ ಜ್ಞಾನವನ್ನು। ಕೃಣ್ವನ್—ಉತ್ಪನ್ನಮಾಡುತ್ತ । ವಿಶ್ವಾ—ಸಮಸ್ತವಾದ । ರೂಪಾ—ರೂಪಗಳನ್ನು। ದಿವಃ ಪರಿ—ಅಂತರಿಕ್ಷದಿಂದ । ಅಭ್ಯರ್ಷಸಿ —ಪ್ರೇರಿಸುತ್ತೀಯೆ । ಪಿನ್ವಸೇ—ನಮಗೂ ಒದಗಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ರಸನಿಧಿಯಾದ ನೀನು, ಉತ್ತಮವಾದ ಜ್ಞಾನವನ್ನು ಉತ್ಪನ್ನಮಾಡುತ್ತ, ಸಮಸ್ತವಾದ ರೂಪಗಳನ್ನು ಅಂತರಿಕ್ಷದಿಂದ ಪ್ರೇರಿಸುತ್ತೀಯೆ. ನಮಗೂ ಒದಗಿಸುತ್ತೀಯೆ.

## English Translation.

Soma, you who are the ocean, bestowing knowledge, hasten from heaven to all our various forms, and bestow (various kinds of wealth on us).

॥ ಸಂಹಿತಾಪಾಠಃ ॥

ಹಿನ್ವಾನೋ ವಾಚಮಿಷ್ಯಸಿ ಪವಮಾನ ವಿಧರ್ಮಣಿ ।
ಅಕ್ರಾನ್ದೇವೋ ನ ಸೂರ್ಯಃ ॥ ೯ ॥

|| ಪದಪಾಠಃ ||

ಹಿನ್ವಾನಃ । ವಾಚಂ । ಇಷ್ಯಸಿ । ಪವಮಾನ । ವಿಽಧರ್ಮಣಿ ।

ಅಕ್ರಾನ್ । ದೇವಃ । ನ । ಸೂರ್ಯಃ ॥ ೯ ॥

|| ಸಾಯಣಭಾಷ್ಯಂ ||

ಹೇ ಪವಮಾನ ಸೋಮ ಹಿನ್ವಾನಃ ಪ್ರೇರ್ಯಮಾಣಸ್ತ್ವಂ ವಾಚಂ ಶಬ್ದಮಿಷ್ಯಸಿ । ಪ್ರೇರಯಸಿ । ಕದೇತ್ಯತ್ರಾಹ । ಯದಾ ತವ ರಸಃ ಸೂರ್ಯೋ ದೇವೋ ನ ದೇವ ಇವ ವಿಧರ್ಮಣಿ ವಿಧಾರಕೇ ಪವಿತ್ರೇಽಕ್ರಾನ್ ಅಕ್ರಮೀತ್ತದೇತ್ಯರ್ಥಃ ॥

|| ಪ್ರತಿಪದಾರ್ಥ ||

**ಪವಮಾನ**—ಎಲೈ ಸೋಮದೇವನೇ । **ದೇವಃ**—ದೇವಾತ್ಮಕನಾದ । **ಸೂರ್ಯಃ ನ**—ಸೂರ್ಯನಂತೆ । **ವಿಧರ್ಮಣಿ**—ಸಕಲವನ್ನೂ ಧರಿಸುವ ದಶಾಪವಿತ್ರದಲ್ಲಿ । **ಅಕ್ರಾನ್**—ನೀನು ಪ್ರವೇಶಿಸುವಾಗ । **ಹಿನ್ವಾನಃ**—ಪ್ರೇರಿತನಾದ ನೀನು । **ವಾಚಂ**—ಶಬ್ದವನ್ನು । **ಇಷ್ಯಸಿ**—ಪ್ರಕಟಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ದೇವತಾತ್ಮನಾದ ಸೂರ್ಯನಂತೆ ಸಕಲವನ್ನೂ ಧರಿಸುವ ದಶಾಪವಿತ್ರದಲ್ಲಿ ನೀನು ಪ್ರವೇಶಿಸುವಾಗ ಪ್ರೇರಿತನಾದ ನೀನು ಶಬ್ದವನ್ನು ಪ್ರಕಟಿಸುತ್ತೀಯೆ.

English Translation

Purified Soma, when set forth you utter a cry; (when your juice) like the sun god passed through the supporting (filter).

|| ಸಂಹಿತಾಪಾಠಃ ||

ಇಂದುಃ ಪವಿಷ್ಟ ಚೇತನಃ ಪ್ರಿಯಃ ಕವೀನಾಂ ಮತೀ ।

ಸೃಜದಶ್ವಂ ರಥೀರಿವ ॥ ೧೦ ॥

|| ಪದಪಾಠಃ ||

ಇಂದುಃ । ಪವಿಷ್ಟ । ಚೇತನಃ । ಪ್ರಿಯಃ । ಕವೀನಾಂ । ಮತೀ ।

ಸೃಜತ್ । ಅಶ್ವಂ । ರಥೀಃಽಇವ ॥ ೧೦ ॥

|| ಸಾಯಣಭಾಷ್ಯಂ ||

**ಚೇತನಃ ಪ್ರಜ್ಞಾಪಕಃ ಪ್ರಿಯೋ ದೇವಾನಾಂ ಪ್ರೀತಿಕರ ಇಂದುಃ ಸೋಮಃ ಕವೀನಾಂ ಕ್ರಾಂತಕರ್ಮಣಾಂ ಸ್ತೋತೄಣಾಂ ಮತೀ ಮತ್ಯಾ ಸ್ತುತ್ಯಾ ಪವಿಷ್ಟ । ಪವತೇ । ಅಶ್ವಂ ಹಯಂ ರಥೀರಿವ ರಥೀವೋರ್ಮಿಂ ಸೃಜತ್ । ಸೃಜತಿ ಚ ||**

|| ಪ್ರತಿಪದಾರ್ಥ ||

**ಚೇತನಃ**—ಪ್ರಜ್ಞಾಪಕನಾದವನೂ | **ಪ್ರಿಯಃ**—ದೇವತೆಗಳಿಗೆ ಪ್ರೀತಿಕಾರಕನೂ ಆದ | **ಇಂದುಃ**—ಸೋಮದೇವನು | **ಕವೀನಾಂ**—ಸ್ತುತಿಕರ್ತರ | **ಮತೀ**—ಸ್ತುತಿಯಿಂದ ಪ್ರೇರಿತನಾಗಿ | **ಪವಿಷ್ಟ**—ಪ್ರವಹಿಸುತ್ತಾನೆ | **ರಥೀರಿವ**—ರಥಿಕನು | **ಅಶ್ವಂ**—ಅಶ್ವವನ್ನು ಚೋದಿಸುವಂತೆ | **ಸೃಜತ್**—ಪ್ರೇರಿಸುತ್ತಾನೆ.

|| ಭಾವಾರ್ಥ ||

ಪ್ರಜ್ಞಾಪಕನಾದವನೂ, ದೇವತೆಗಳಿಗೆ ಪ್ರೀತಿಕಾರಕನೂ ಆದ ಸೋಮದೇವನು ಸ್ತುತಿಕರ್ತರ ಸ್ತುತಿಯಿಂದ ಪ್ರೇರಿತನಾಗಿ ಪ್ರವಹಿಸುತ್ತಾನೆ. ರಥಿಕನು ಅಶ್ವವನ್ನು ಚೋದಿಸುವಂತೆ ರಸವನ್ನು ಪ್ರೇರಿಸುತ್ತಾನೆ.

## English Translation.

Indu the enlightener, beloved (of the gods), flows forth at the praise of the sages; he lets loose (his wave) as a charioteer his horse.

|| ಸಂಹಿತಾಪಾಠಃ ||

ಊರ್ಮಿರ್ಯಸ್ತೇ ಪವಿತ್ರ ಆ ದೇವಾವೀಃ ಪರ್ಯಕ್ಷರತ್ ।
ಸೀದನ್ನೃತಸ್ಯ ಯೋನಿಮಾ || ೧೧ ||

|| ಪದಪಾಠಃ ||

ಊರ್ಮಿಃ । ಯಃ । ತೇ । ಪವಿತ್ರೇ । ಆ । ದೇವsಅವೀಃ । ಪರಿsಅಕ್ಷರತ್ ।
ಸೀದನ್ । ಋತಸ್ಯ । ಯೋನಿಂ । ಆ || ೧೧ ||

|| ಸಾಯಣಭಾಷ್ಯಂ ||

**ಹೇ ಸೋಮ ತೇ ತವ ಯೋ ದೇವಾವೀರ್ದೇವ ಊರ್ಮಿಸ್ತರಂಗ ಋತಸ್ಯ ಯಜ್ಞಸ್ಯ ಯೋನಿಂ ಸ್ಥಾನಮಾ ಸೀದನ್ ಪವಿತ್ರೇ ಪರ್ಯಕ್ಷರತ್ ಪರಿಕ್ಷರತಿ ತಮೂರ್ಮಿಂ ಸೃಜತೀತಿ ಪೂರ್ವತ್ರ ಸಂಬಂಧಃ ||**

|| ಪ್ರತಿ ಪದಾರ್ಥ ||

(ಎಲೈ ಸೋಮದೇವನೇ) **ತೇ**—ನಿನ್ನ | **ದೇವಾವೀಃ**—ದೇವತೆಗಳನ್ನು ಅಪೇಕ್ಷಿಸುವ | **ಯಃ**—ಯಾವ | **ಊರ್ಮಿಃ**—ರಸಸಂಘಾತವು | **ಋತಸ್ಯ**—ಯಜ್ಞದ | **ಯೋನಿಂ**—ಸ್ಥಾನವನ್ನು | **ಆ ಸೀದನ್**—ಪ್ರವೇಶಿಸುತ್ತ | **ಪವಿತ್ರೇ**—ದಶಾಪವಿತ್ರದಲ್ಲಿ | **ಪರ್ಯಕ್ಷರತ್**—ಪ್ರವಹಿಸುವುದೋ ಆ ಊರ್ಮಿಯನ್ನು ಪ್ರೇರಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ದೇವತೆಗಳನ್ನು ಇಚ್ಛಿಸುವ ಯಾವ ನಿನ್ನ ರಸಸಂಘಾತವು ಯಜ್ಞಸ್ಥಾನವನ್ನು ಪ್ರವೇಶಿಸುತ್ತ ದಶಾಪವಿತ್ರದಲ್ಲಿ ಪ್ರವಹಿಸುವುದೋ ಆ ಊರ್ಮಿಯನ್ನು ಪ್ರೇರಿಸುತ್ತೀಯೆ.

## English Translation.

Your wave which, devoted to the gods flows to the filter, alighting upon the place of sacrifice.

|| ಸಂಹಿತಾಪಾಠಃ ||

**ಸ ನೋ ಅರ್ಷ ಪವಿತ್ರ ಆ ಮದೋ ಯೋ ದೇವವೀತಮಃ |**

**ಇಂದವಿಂದ್ರಾಯ ಪೀತಯೇ || ೧೨ ||**

|| ಪದಪಾಠಃ ||

**ಸಃ | ನಃ | ಅರ್ಷ | ಪವಿತ್ರೇ | ಆ | ಮದಃ | ಯಃ | ದೇವऽವೀತಮಃ |**

**ಇಂದೋ ಇತಿ | ಇಂದ್ರಾಯ | ಪೀತಯೇ || ೧೨ ||**

|| ಸಾಯಣಭಾಷ್ಯಂ ||

**ಹೇ ಇಂದೋ ಯಸ್ತ್ವಂ ದೇವವೀತಮೋಽತಿಶಯೇನ ದೇವಕಾಮೋ ಮದೋ ಮದಕರಶ್ಚ ಭವಸಿ ಸ ತ್ವಂ ನೋಽಸ್ಮಾಕಂ ಪವಿತ್ರ ಇಂದ್ರಾಯೇಂದ್ರಸ್ಯ ಪೀತಯೇ ಪಾನಾಯಾರ್ಷ | ಪವಸ್ವ ||**

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ | **ಯಃ**— ಯಾವ ನೀನು | **ದೇವವೀತಮಃ**— ಅತಿಶಯವಾಗಿ ದೇವತೆಗಳನ್ನು ಇಚ್ಛಿಸುವವನೂ | **ಮದಃ**—ಮದಕಾರಕರನೂ ಆಗಿದ್ದೀಯೋ | **ಸಃ**—ಆ ನೀನು | **ನಃ**—ನಮ್ಮ | **ಪವಿತ್ರೇ**—ದಶಾಪವಿತ್ರದಲ್ಲಿ ! **ಇಂದ್ರಾಯ**—ಇಂದ್ರನ | **ಪೀತಯೇ**—ಪಾನಾರ್ಥವಾಗಿ | **ಆ ಅರ್ಷ**—ಪ್ರವಹಿಸು

|| ಭಾವಾರ್ಥ ||

ಎಲೈ ಸೋಮದೇವನೇ, ಯಾವ ನೀನು ಅತಿಶಯವಾಗಿ ದೇವತೆಗಳನ್ನು ಇಚ್ಛಿಸುವವನೂ, ಮದಕಾರಕನೂ ಆಗಿದ್ದೀಯೋ ಅಂತಹ ನೀನು ನಮ್ಮ ದಶಾಪವಿತ್ರದಲ್ಲಿ ಇಂದ್ರನ ಪಾನಾರ್ಥವಾಗಿ ಪ್ರವಹಿಸು.

### English Translation

Indu, who are exhilarating and most devoted to the gods, hasten to the filter for Indra to drink.

॥ ಸಂಹಿತಾಪಾಠಃ ॥

ಇಷೇ ಪವಸ್ವ ಧಾರಯಾ ಮೃಜ್ಯಮಾನೋ ಮನೀಷಿಭಿಃ ।

ಇಂದೋ ರುಚಾಭಿ ಗಾ ಇಹಿ ॥ ೧೩ ॥

॥ ಪದಪಾಠಃ ॥

ಇಷೇ । ಪವಸ್ವ । ಧಾರಯಾ । ಮೃಜ್ಯಮಾನಃ । ಮನೀಷಿಽಭಿಃ ।

ಇಂದೋ ಇತಿ । ರುಚಾ । ಅಭಿ । ಗಾಃ । ಇಹಿ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಮನೀಷಿಭಿರ್ಋತ್ವಿಗ್ಭಿರ್ಮೃಜ್ಯಮಾನಃ ಶೋಧ್ಯಮಾನಸ್ತ್ವಮಿಷೇಽಸ್ಮಾಕಮನ್ನಾಯ ಧಾರಯಾ ಪವಸ್ವ। ಕ್ಷರ । ರುಚಾ ರೋಚಮಾನೇನಾಂಧಸಾ ಗಾಃ ಪಶೂನಭೀಹಿ । ಅಭಿಗಚ್ಛ॥

॥ಪ್ರತಿಪದಾರ್ಥ॥

ಇಂದೋ— ಎಲೈ ಸೋಮದೇವನೇ । ಮನೀಷಿಭಿಃ— ಋತ್ವಿಕ್ಕುಗಳಿಂದ । ಮೃಜ್ಯಮಾನಃ—ಶುದ್ಧಿಗೊಳಿಸಲ್ಪಟ್ಟವನಾಗಿ । ಇಷೇ— ನಮಗೆ ಅನ್ನಲಾಭಕ್ಕಾಗಿ । ಧಾರಯಾ—ಧಾರಾಪ್ರವಾಹದಿಂದ । ಪವಸ್ವ— ಪ್ರವಹಿಸು । ರುಚಾ—ಆಕರ್ಷಕವಾದ ಅನ್ನಗಳೊಡನೆ । ಗಾಃ—ಪಶುಗಳನ್ನು । ಅಭ್ಯೇಹಿ—ಸಮಿಾಪಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಋತ್ವಿಕ್ಕುಗಳಿಂದ ಶುದ್ಧಿಗೊಳಿಸಲ್ಪಟ್ಟವನಾಗಿ ನಮ್ಮ ಅನ್ನಲಾಭಕ್ಕಾಗಿ ಧಾರಾಪ್ರವಾಹದಿಂದ ಪ್ರವಹಿಸು. ಆಕರ್ಷಕವಾದ ಅನ್ನಗಳೊಡನೆ ಪಶುಗಳನ್ನು ಸಮೀಪಿಸು.

### English Translation.

Cleansed by the priests, Indu, flow in a stream for (our) food; approach the cattle with food.

॥ ಸಂಹಿತಾಪಾಠಃ ॥

ಪುನಾನೋ ವರಿವಸ್ಕೃಧ್ಯೂರ್ಜಂ ಜನಾಯ ಗಿರ್ವಣಃ ।

ಹರೇ ಸೃಜಾನ ಆಶಿರಂ ॥ ೧೪ ॥

॥ ಪದಪಾಠಃ ॥

ಪುನಾನಃ । ವರಿವಃ । ಕೃಧಿ । ಊರ್ಜಂ । ಜನಾಯ । ಗಿರ್ವಣಃ ।

ಹರೇ । ಸೃಜಾನಃ । ಆಽಶಿರಂ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಗಿರ್ವಣೋ ಗೀರ್ಭಿರ್ವನನೀಯ ಹರೇ ಹರಿತವರ್ಣ ಸೋಮ ಆಶಿರಂ ಕ್ಷೀರಂ ಪ್ರತಿ ಸೃಜಾನೋ ವಿಸೃಜ್ಯಮಾನಃ ಪುನಾನಃ ಪೂಯಮಾನಸ್ತ್ವಂ ಜನಾಯ ಯಜಮಾನಾರ್ಥಂ ವರಿವೋ ಧನಮೂರ್ಜಮನ್ನಂ ಚ ಕೃಧಿ । ಕುರು ॥

॥ ಪ್ರತಿಪದಾರ್ಥ ॥

ಗಿರ್ವಣಃ— ಸ್ತುತಿಗಳಿಂದ ಲಭ್ಯನೂ । ಹರೇ— ಪಚ್ಚೆವರ್ಣವುಳ್ಳವನೂ ಆದ ಎಲೈ ಸೋಮದೇವನೇ । ಆಶಿರಂ— ಕ್ಷೀರಾದ್ಯಾಶ್ರಯಣ ದ್ರವ್ಯಗಳೊಡನೆ । ಸೃಜಾನಃ— ಸುರಿಯಲ್ಪಟ್ಟವನಾಗಿಯೂ । ಪುನಾನಃ— ಶುದ್ಧಿಯನ್ನು ಹೊಂದಿದವನಾಗಿಯೂ । ಜನಾಯ— ಯಜಮಾನನಿಗೆ । ವರಿವಃ— ಧನವನ್ನೂ । ಊರ್ಜಂ— ಅನ್ನವನ್ನೂ । ಕೃಧಿ— ಉತ್ಪನ್ನಮಾಡು.

॥ ಭಾವಾರ್ಥ ॥

ಸ್ತುತಿಗಳಿಂದ ಲಭ್ಯನೂ, ಪಚ್ಚೆವರ್ಣವುಳ್ಳವನೂ ಆದ ಎಲೈ ಸೋಮದೇವನೇ, ಕ್ಷೀರಾದ್ಯಾಶ್ರಯಣ ದ್ರವ್ಯಗಳೊಡನೆ ಸುರಿಯಲ್ಪಟ್ಟವನಾಗಿಯೂ, ಶುದ್ಧಿಯನ್ನು ಹೊಂದಿದವನಾಗಿಯೂ ಆಗಿರುವ ನೀನು ಯಜಮಾನನಿಗೆ ಧನವನ್ನೂ ಅನ್ನವನ್ನೂ ಉತ್ಪನ್ನಮಾಡು.

English Translation.

Green-tinted (Soma) lauded by hymns, being dropped into the curds and milk and being purified, bestow wealth and food upon rhe worshipper.

॥ ಸಂಹಿತಾಪಾಠಃ ॥

ಪುನಾನೋ ದೇವವೀತಯ ಇಂದ್ರಸ್ಯ ಯಾಹಿ ನಿಷ್ಕೃತಂ ।

ದ್ಯುತಾನೋ ವಾಜಿಭಿರ್ಯತಃ ॥ ೧೫ ॥

॥ ಪದಪಾಠಃ ॥

ಪುನಾನಃ । ದೇವಽವೀತಯೇ । ಇಂದ್ರಸ್ಯ । ಯಾಹಿ । ನಿಃಽಕೃತಂ ।

ದ್ಯುತಾನಃ । ವಾಜಿಽಭಿಃ । ಯತಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ದ್ಯುತಾನೋ ದೀಪ್ಯಮಾನೋ ವಾಜಿಭಿರ್ಬಲಿಭಿರ್ಯಜಮಾನೈರ್ಯತಃ ಸಂಗೃಹೀತೋ ದೇವವೀತಯೇ ಯಜ್ಞಾರ್ಥಂ ಪುನಾನಃ ಪೂಯಮಾನಸ್ತ್ವಮಿಂದ್ರಸ್ಯ ನಿಷ್ಕೃತಂ ಸ್ಥಾನಂ ಯಾಹಿ ಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ದ್ಯುತಾನಃ— ಪ್ರಕಾಶವನ್ನು ಬೀರುವವನೂ | ವಾಜಿಭಿಃ—ಶಕ್ತಿಯುತರಾದ ಯಜಮಾನರಿಂದ| ಯತಃ—ಶೇಖರಿಸಲ್ಪಟ್ಟವನೂ| ದೇವವೀತಯೇ—ಯಜ್ಞಾರ್ಥವಾಗಿ| ಪುನಾನಃ-ಶುದ್ಧಿಯನ್ನು ಹೊಂದಿದವನೂ ಆದ ನೀನು | ಇಂದ್ರಸ್ಯ—ಇಂದ್ರನ । ನಿಷ್ಕೃತಂ—ಸ್ಥಾನವನ್ನು | ಯಾಹಿ—ಹೋಗಿ ಸೇರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಕಾಶವನ್ನು ಬೀರುವವನೂ, ಶಕ್ತಿಯುತರಾದ ಯಜಮಾನರಿಂದ ಶೇಖರಿಸಲ್ಪಟ್ಟವನೂ, ಯಜ್ಞಾರ್ಥವಾಗಿ ಶುದ್ಧಿಯನ್ನು ಹೊಂದಿದವನೂ ಆದ ನೀನು ಇಂದ್ರನ ಸ್ಥಾನವನ್ನು ಹೋಗಿ ಸೇರು.

English Translation.

Purified for the banquet of the gods, go to Indra's station radiant collected together by the vigorous (worshippers).

॥ ಸಂಹಿತಾಪಾಠಃ ॥

ಪ್ರ ಹಿನ್ವಾನಾಸ ಇಂದವೋಽಚ್ಛಾ ಸಮುದ್ರಮಾಶವಃ |
ಧಿಯಾ ಜೂತಾ ಅಸೃಕ್ಷತ ॥ ೧೬ ॥

॥ ಪದಪಾಠಃ ॥

ಪ್ರ | ಹಿನ್ವಾನಾಸಃ | ಇಂದವಃ | ಅಚ್ಛ | ಸಮುದ್ರಂ | ಆಶವಃ |
ಧಿಯಾ | ಜೂತಾಃ | ಅಸೃಕ್ಷತ ॥ ೧೬ ॥

॥ ಸಾಯಣಭಾಷ್ಯಂ ॥

ಆಶವೋ ವೇಗವಂತ ಇಂದವಃ ಸೋಮಾಃ ಸಮುದ್ರಮಂತರಿಕ್ಷಮಚ್ಛ ಪ್ರತಿ ಹಿನ್ವಾನಾಸೋ ಹಿನ್ವಾನಾಃ ಪ್ರೇರ್ಯಮಾಣಾ ಧಿಯಾಂಗುಲ್ಯಾ ಜೂತಾಃ ಕೃಷ್ಟಾಶ್ಚ ಪ್ರಾಸೃಕ್ಷತ | ಸೃಜ್ಯಂತೇ ॥

॥ ಪ್ರತಿಪದಾರ್ಥ ॥

ಆಶವಃ—ವೇಗಗಾಮಿಗಳಾದ | ಇಂದವಃ—ಸೋಮರಸಗಳು | ಸಮುದ್ರಂ ಅಚ್ಛ—ಅಂತರಿಕ್ಷಕ್ಕೆ ಅಭಿಮುಖವಾಗಿ | ಹಿನ್ವಾನಾಸಃ—ಕಳುಹಲ್ಪಟ್ಟವಾಗಿಯೂ | ಧಿಯಾ—ಅಂಗುಲಿಗಳಿಂದ | ಜೂತಾಃ—ಹಿಂಡಲ್ಪಟ್ಟವಾಗಿಯೂ | ಪ್ರ ಅಸೃಕ್ಷತ—ಸುರಿಯಲ್ಪಡುತ್ತವೆ.

॥ ಭಾವಾರ್ಥ ॥

ವೇಗಗಾಮಿಗಳಾದ ಸೋಮರಸಗಳು ಅಂತರಿಕ್ಷಕ್ಕೆ ಅಭಿಮುಖವಾಗಿ ಕಳುಹಲ್ಪಟ್ಟವಾಗಿಯೂ, ಬೆರಳುಗಳಿಂದ ಹಿಂಡಲ್ಪಟ್ಟವಾಗಿಯೂ ಸುರಿಯಲ್ಪಡುತ್ತವೆ.

## English Translation.

The rapid Soma-juices being sent towards the firmament, are poured forth expressed by the fingers.

॥ ಸಂಹಿತಾಪಾಠಃ ॥

ಮರ್ಮೃಜಾನಾಸ ಆಯವೋ ವೃಥಾ ಸಮುದ್ರಮಿಂದವಃ ।
ಅಗ್ಮನ್ನೃತಸ್ಯ ಯೋನಿಮಾ ॥ ೧೭ ॥

॥ ಪದಪಾಠಃ ॥

ಮರ್ಮೃಜಾನಾಸಃ । ಆಯವಃ । ವೃಥಾ । ಸಮುದ್ರಂ । ಇಂದವಃ ।
ಅಗ್ಮನ್ । ಋತಸ್ಯ । ಯೋನಿಂ । ಆ ॥ ೧೭ ॥

॥ ಸಾಯಣಭಾಷ್ಯಂ ॥

ಮರ್ಮೃಜಾನಾಸೋ ಮರ್ಮೃಜ್ಯಮಾನಾ ಆಯವೋ ಗಂತಾರ ಇಂದವಃ ಸೋಮಾ ವೃಥಾಯಾಸಂ ವಿನೈವ ಸಮುದ್ರಮಂತರಿಕ್ಷಂ ಗಚ್ಛಂತಿ । ಏತದೇವ ದರ್ಶಯತಿ । ಋತಸ್ಯೋದಕಸ್ಯ ಯೋನಿಂ ಸ್ಥಾನಮಾಗ್ಮನ್ । ಗಚ್ಛಂತೀತಿ ॥

॥ ಪ್ರತಿಪದಾರ್ಥ ॥

**ಮರ್ಮೃಜಾನಾಸಃ**—ಶುದ್ಧಿಯನ್ನು ಹೊಂದಿದವೂ । **ಆಯವಃ**—ಶೀಘ್ರಗಾಮಿಗಳೂ ಆದ । **ಇಂದವಃ**—ಸೋಮರಸಗಳು । **ವೃಥಾ**—ಪ್ರಯಾಸವಿಲ್ಲದೆ । **ಸಮುದ್ರಂ**—ಅಂತರಿಕ್ಷಕ್ಕೆ ಹೋಗಿ ಸೇರುತ್ತವೆ । **ಋತಸ್ಯ**—ಉದಕದ । **ಯೋನಿಂ**—ಸ್ಥಾನವನ್ನು । **ಆ ಅಗ್ಮನ್**—ಹೋಗಿ ಸೇರುತ್ತವೆ.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದಿದವೂ, ಶೀಘ್ರಗಾಮಿಗಳೂ ಆದ ಸೋಮರಸಗಳು ಪ್ರಯಾಸವಿಲ್ಲದೇ ಅಂತರಿಕ್ಷಕ್ಕೆ ಹೋಗಿ ಸೇರುತ್ತವೆ. ಉದಕದ ಸ್ಥಾನವನ್ನು ಹೋಗಿ ಸೇರುತ್ತವೆ.

## English Translation.

The swift Soma-juices being cleansed (go to) the firmament without an effort; they go to the abode of the water.

॥ ಸಂಹಿತಾಪಾಠಃ ॥

ಪರಿ ಣೋ ಯಾಹ್ಯಸ್ಮಯುರ್ವಿಶ್ವಾ ವಸೂನ್ಯೋಜಸಾ ।
ಪಾಹಿ ನಃ ಶರ್ಮ ವೀರವತ್ ॥ ೧೮ ॥

॥ ಪದಪಾಠಃ ॥

ಪರಿ । ನಃ । ಯಾಹಿ । ಅಸ್ಮಽಯುಃ । ವಿಶ್ವಾ । ವಸೂನಿ । ಓಜಸಾ ।
ಪಾಹಿ । ನಃ । ಶರ್ಮ । ವೀರಽವತ್ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅಸ್ಮಯುರಸ್ಮತ್ಕಾಮಸ್ತ್ವಂ ನೋಽಸ್ಮಾಕಂ ವಿಶ್ವಾ ವಿಶ್ವಾನಿ ವಸೂನಿ ಧನಾನ್ಯೋಜಸಾ ಬಲೇನ ಸಹ ಪರಿ ಯಾಹಿ । ರಕ್ಷಾರ್ಥಂ ಪರಿಗಚ್ಛ । ಅಪಿ ಚ ನೋಽಸ್ಮಾಕಂ ವೀರವತ್ಪುತ್ರವಚ್ಛರ್ಮ ಗೃಹಂ ಪಾಹಿ । ರಕ್ಷ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಅಸ್ಮಯುಃ—ನಮಗೆ ಒಳ್ಳೆಯದನ್ನು ಅಪೇಕ್ಷಿಸುವ ನೀನು । ನಃ—ನಮಗೆ । ವಿಶ್ವಾ—ಸಮಸ್ತವಾದ । ವಸೂನಿ—ಧನಗಳನ್ನು । ಓಜಸಾ—ಶಕ್ತಿಗಳೊಡನೆ ಸೇರಿಸಿ । ಪರಿ ಯಾಹಿ—ಕಳುಹಿಕೊಡು । ನಃ—ನಮ್ಮ । ವೀರವತ್—ಪುತ್ರಾದಿಗಳಿಂದ ಕೂಡಿದ । ಶರ್ಮ—ಗೃಹವನ್ನು । ಪಾಹಿ—ರಕ್ಷಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮಗೆ ಒಳ್ಳೆಯದನ್ನು ಅಪೇಕ್ಷಿಸುವ ನೀನು ನಮಗೆ ಸಮಸ್ತವಾದ ಧನಗಳನ್ನು ಶಕ್ತಿಗಳೊಡನೆ ಸೇರಿಸಿ ಕಳುಹಿಸಿಕೊಡು. ನಮ್ಮ ಪುತ್ರಾದಿಗಳಿಂದ ಕೂಡಿದ ಗೃಹವನ್ನು ರಕ್ಷಿಸು.

English Translation.

Soma, who are devoted to us, guard all our treasures with your might, protect our home and offspring.

॥ ಸಂಹಿತಾಪಾಠಃ ॥

ಮಿಮಾತಿ ವಹ್ನಿರೇತಶಃ ಪದಂ ಯುಜಾನ ಋಕ್ವಭಿಃ ।
ಪ್ರ ಯತ್ಸಮುದ್ರ ಆಹಿತಃ ॥ ೧೯ ॥

॥ ಪದಪಾಠಃ ॥

ಮಿಮಾತಿ । ವಹ್ನಿಃ । ಏತಶಃ । ಪದಂ । ಯುಜಾನಃ । ಋಕ್ವಽಭಿಃ ।

ಪ್ರ । ಯತ್ । ಸಮುದ್ರೇ । ಆಽಹಿತಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ಯದ್ಯದಾ ಯೋ ವಹ್ನಿರ್ವಹನಶೀಲ ಏತಶೋಽಶ್ವೋ ಮಿಮಾತಿ ಶಬ್ದಂ ಕರೋತಿ ಋಕ್ವಭಿರ್ಋತ್ವಿಗ್ಭಿಃ ಸ್ತೋತೃಭಿಃ ಪದಂ ಯಜ್ಞೇ ಯುಜಾನೋ ನಿದಧತ್ ಸ್ತೋತ್ರಶ್ರವಣಾರ್ಥಮಾಗಚ್ಛತಿ ತದಾ ಸ ಯಜ್ಞವಾಹಕಾಶ್ವಾತ್ಮಾ ತ್ವಂ ಸಮುದ್ರ ಉದಕೇ ವಸತೀವರೀಷು ಪ್ರಾಹಿತೋ ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಯತ್**—ಯಾವಾಗ । **ವಹ್ನಿಃ**—ಹವಿಸ್ಸನ್ನು ವಹಿಸುವ । **ಏತಶಃ**—ಅಶ್ವವು । **ಮಿಮಾತಿ**—ಶಬ್ದವನ್ನು ಮಾಡುವುದೋ । (**ಯತ್**—ಯಾವಾಗ) । **ಋಕ್ವಭಿಃ**—ಋತ್ವಿಕ್ಕುಗಳಿಂದ । **ಪದಂ**—ಯಜ್ಞಸ್ಥಾನದಲ್ಲಿ । **ಯುಜಾನಃ**—ಯೋಜಿಸಲ್ಪಡುವುದೋ ಆಗ (ಅಶ್ವರೂಪಿಯಾದ ನೀನು) । **ಸಮುದ್ರೇ**—ವಸತೀವರ್ಯಾದಿಗಳಲ್ಲಿ । **ಪ್ರ ಆಹಿತಃ**—ಸ್ಥಾಪಿತನಾಗುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಹವಿಸ್ಸನ್ನು ವಹಿಸುವ ಅಶ್ವವು ಯಾವಾಗ ಶಬ್ದಮಾಡುವುದೋ, ಯಾವಾಗ ಋತ್ವಿಕ್ಕುಗಳಿಂದ ಯಜ್ಞಸ್ಥಾನದಲ್ಲಿ ಯೋಜಿಸಲ್ಪಡುವುದೋ ಆಗ ಅಶ್ವರೂಪಿಯಾದ ನೀನು ವಸತೀವರ್ಯಾದಿಗಳಲ್ಲಿ ಸ್ಥಾಪಿತನಾಗುತ್ತೀಯೆ.

## English Translation.

The horse of burden neighs, yoked to the sacrifice by the priests, when placed in the ccean.

॥ ಸಂಹಿತಾಪಾಠಃ ॥

ಆ ಯದ್ಯೋನಿಂ ಹಿರಣ್ಯಯಮಾಶುರ್ಋತಸ್ಯ ಸೀದತಿ ।

ಜಹಾತ್ಯಪ್ರಚೇತಸಃ ॥ ೨೦ ॥

॥ ಪದಪಾಠಃ ॥

ಆ । ಯತ್ । ಯೋನಿಂ । ಹಿರಣ್ಯಯಂ । ಆಶುಃ । ಋತಸ್ಯ । ಸೀದತಿ ।

ಜಹಾತಿ । ಅಪ್ರಽಚೇತಸಃ ॥ ೨೦ ॥

॥ ಸಾಯಣಭಾಷ್ಯಂ ॥

ಯದ್ಯದಾಶುರ್ವೇಗವಾನ್ಸೋಮ ಋತಸ್ಯ ಯಜ್ಞಸ್ಯ ಹಿರಣ್ಯಯಂ ಹಿರಣ್ಮಯಂ ಯೋನಿಂ ಸ್ಥಾನಂ। ಹಿರಣ್ಯಪಾಣಿರಭಿಷುಣೋತೀತ್ಯುಕ್ತಂ। ಆ ಸೀದತಿ ತದಾನೀಮಪ್ರಚೇತಸೋ ಜಹಾತಿ । ವಿಸೃಜತಿ। ಅಸ್ತೋತೄಣಾಂ ಯಜ್ಞಂ ನಾಭಿಗಚ್ಛತಿ ಕಿಂತು ಸ್ತೋತೄಣಾಮೇವ ಯಜ್ಞಮಭಿಗಚ್ಛತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಆಶುಃ—ವೇಗಗಾಮಿಯಾದ ಸೋಮನು । ಋತಸ್ಯ—ಯಜ್ಞದ । ಹಿರಣ್ಯಯಂ—ಸುವರ್ಣನಿರ್ಮಿತವಾದ । ಯೋನಿಂ—ಸ್ಥಾನವನ್ನು । ಆ ಸೀದತಿ—ಆಕ್ರಮಿಸಿ ಕುಳಿತುಕೊಳ್ಳುವನೋ ಆಗ । ಅಪ್ರಚೇತಸಃ—ಪ್ರಜ್ಞಾರಹಿತನಾದ ಯಜಮಾನನ ಯಜ್ಞವನ್ನು। ಜಹಾತಿ—ತ್ಯಜಿಸುತ್ತಾನೆ.

॥ ಭಾವಾರ್ಥ ॥

ಯಾವಾಗ ವೇಗಗಾಮಿಯಾದ ಸೋಮನು ಯಜ್ಞದ ಸುವರ್ಣನಿರ್ಮಿತವಾದ ಸ್ಥಾನವನ್ನು ಆಕ್ರಮಿಸಿ ಕುಳಿತುಕೊಳ್ಳುವನೋ ಆಗ ಪ್ರಜ್ಞಾರಹಿತನಾದ ಯಜಮಾನನ ಯಜ್ಞವನ್ನು ತ್ಯಜಿಸುತ್ತಾನೆ.

## English Translation.

When the swift (Soma) takes his place on the golden seat of sacrifice, he abandons (the sacrifice) of the foolish man.

॥ ಸಂಹಿತಾಪಾಠಃ ॥

ಅಭಿ ವೇನಾ ಅನೂಷತೇಯಕ್ಷಂತಿ ಪ್ರಚೇತಸಃ ।

ಮಜ್ಜಂತ್ಯವಿಚೇತಸಃ ॥ ೨೧ ॥

॥ ಪದಪಾಠಃ ॥

ಅಭಿ । ವೇನಾಃ । ಅನೂಷತ । ಇಯಕ್ಷಂತಿ । ಪ್ರಽಚೇತಸಃ ।

ಮಜ್ಜಂತಿ । ಅವಿಽಚೇತಸಃ ॥ ೨೧ ॥

॥ ಸಾಯಣಭಾಷ್ಯಂ ॥

ವೇನಾಃ ಕಾಂತಾಃ ಸ್ತೋತಾರೋಽಭ್ಯನೂಷತ । ಸೋಮಮಭಿಷ್ಟುವಂತಿ । ಪ್ರಚೇತಸಃ ಸುಮತಯ ಇಯಕ್ಷಂತಿ । ಯಷ್ಟುಮಿಚ್ಛಂತಿ ಚ । ಅವಿಚೇತಸಃ । ವಿಶಿಷ್ಟಮತಯೋ ವಿಚೇತಸಃ । ಅವಿಚೇತಸೋ ವಿಪರೀತಮತಯ ಇತ್ಯರ್ಥಃ । ಮಜ್ಜಂತಿ । ನಿಮಜ್ಜಂತಿ । ಯೇ ಸೋಮಂ ನಾಭಿಷ್ಟುವಂತಿ ನ ಯಜಂತಿ ಚ ತೇ ನರಕೇ ಪತಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ವೇನಾಃ**—ಭಕ್ತಿಯುತರಾದ ಸ್ತೋತೃಗಳು । **ಅಭ್ಯನೂಷತ**—ಸೋಮನನ್ನು ಸ್ತುತಿಸುತ್ತಾರೆ । **ಪ್ರಚೇತಸಃ**—ಉತ್ಕೃಷ್ಟವಾದ ಜ್ಞಾನವುಳ್ಳವರು । **ಇಯಕ್ಷಂತಿ**—ಯಜ್ಞಮಾಡಲಿಚ್ಛಿಸುತ್ತಾರೆ । **ಅವಿಚೇತಸಃ**—ಪ್ರಜ್ಞಾರಹಿತರು । **ಮಜ್ಜಂತಿ** - ನರಕದಲ್ಲಿ ಮುಳುಗುತ್ತಾರೆ.

॥ ಭಾವಾರ್ಥ ॥

ಭಕ್ತಿಯುತರಾದ ಸ್ತುತಿಕರ್ತರು ಸೋಮನನ್ನು ಸ್ತುತಿಸುತ್ತಾರೆ. ಉತ್ಕೃಷ್ಟವಾದ ಜ್ಞಾನವುಳ್ಳವರು ಯಜ್ಞಮಾಡಲಿಚ್ಛಿಸುತ್ತಾರೆ. ಪ್ರಜ್ಞಾರಹಿತರು ನರಕದಲ್ಲಿ ಮುಳುಗುತ್ತಾರೆ.

## English Translation.

Devoted (worshippers) glorify Soma; the well-disposed desire to sacrifice; the perverse-minded sink (into hell).

॥ ಸಂಹಿತಾಪಾಠಃ ॥

ಇಂದ್ರಾಯೇಂದೋ ಮರುತ್ವತೇ ಪವಸ್ವ ಮಧುಮತ್ತಮಃ ।

ಋತಸ್ಯ ಯೋನಿಮಾಸದಂ ॥ ೨೨ ॥

॥ ಪದಪಾಠಃ ॥

ಇಂದ್ರಾಯ । ಇಂದೋ ಇತಿ । ಮರುತ್ವತೇ । ಪವಸ್ವ । ಮಧುಮತ್ಽತಮಃ ।

ಋತಸ್ಯ । ಯೋನಿಂ । ಆಽಸದಂ ॥ ೨೨ ॥

॥ ಸಾಯಣಭಾಷ್ಯಂ ॥

**ಹೇ ಇಂದೋ ಸೋಮ ಮಧುಮತ್ತಮೋಽತಿಶಯೇನ ಮಧುಮಾಂಸ್ತ್ವಮೃತಸ್ಯ ಯಜ್ಞಸ್ಯ ಯೋನಿಂ ಸ್ಥಾನಮಾಸದಮುಪವೇಷ್ಟುಂ ಮರುತ್ವತ ಇಂದ್ರಾಯೇಂದ್ರಾರ್ಥಂ ಪವಸ್ವ । ಕ್ಷರ ॥**

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಮಧುಮತ್ತಮಃ**—ಮಧುರವಾದ ರಸದೊಡನೆ ಕೂಡಿದ ನೀನು । **ಋತಸ್ಯ**—ಯಜ್ಞದ । **ಯೋನಿಂ**—ಸ್ಥಾನವನ್ನು । **ಆಸದಂ**—ಪ್ರವೇಶಿಸಲು । **ಮರುತ್ವತೇ**—ಮರುತ್ತುಗಳೊಡಗೂಡಿದ । **ಇಂದ್ರಾಯ**—ಇಂದ್ರಾರ್ಥವಾಗಿ । **ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಧುರವಾದ ರಸದೊಡನೆ ಕೂಡಿದ ನೀನು ಯಜ್ಞಸ್ಥಾನವನ್ನು ಪ್ರವೇಶಿಸಲು ಮರುತ್ತುಗಳೊಡಗೂಡಿದ ಇಂದ್ರಾರ್ಥವಾಗಿ ಪ್ರವಹಿಸು.

## English Translation.

Flow, Indu, for Indra associated with the Maruts, you who are most sweet-flavoured, and take your seat on the place of the sacrifice.

॥ ಸಂಹಿತಾಪಾಠಃ ॥

ತಂ ತ್ವಾ ವಿಪ್ರಾ ವಚೋವಿದಃ ಪರಿಷ್ಕೃಣ್ವಂತಿ ವೇಧಸಃ ।

ಸಂ ತ್ವಾ ಮೃಜಂತ್ಯಾಯವಃ ॥ ೨೩ ॥

॥ ಪದಪಾಠಃ ॥

ತಂ । ತ್ವಾ । ವಿಪ್ರಾಃ । ವಚಃಽವಿದಃ । ಪರಿ । ಕೃಣ್ವಂತಿ । ವೇಧಸಃ ।

ಸಂ । ತ್ವಾ । ಮೃಜಂತಿ । ಆಯವಃ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ತಂ ಪವಮಾನಂ ತ್ವಾ ತ್ವಾಂ ವಿಪ್ರಾಃ ಪ್ರಾಜ್ಞಾ ವೇಧಸಃ ಕರ್ಮಣಾಂ ಕರ್ತಾರೋ ವಚೋವಿದಃ ಸ್ತೋತಾರಃ ಪರಿಷ್ಕೃಣ್ವಂತಿ । ಅಲಂಕುರ್ವಂತಿ । ಅಪಿ ಚ ತ್ವಾ ತ್ವಾಮಾಯವೋ ಮನುಷ್ಯಾಃ ಸಂ ಮೃಜಂತಿ । ಸಮ್ಯಕ್ ಶೋಧಯಂತಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ತಂ**—ಪವಿತ್ರನಾದ | **ತ್ವಾ**—ನಿನ್ನನ್ನು | **ವಿಪ್ರಾಃ**—ಪ್ರಾಜ್ಞರಾದ | **ವೇಧಸಃ**—ಕರ್ಮಕರ್ತರೂ | **ವಚೋವಿದಃ**—ಸ್ತುತಿಕರ್ತರೂ | **ಪರಿಷ್ಕೃಣ್ವಂತಿ**—ಅಲಂಕರಿಸುತ್ತಾರೆ | **ತ್ವಾ**—ನಿನ್ನನ್ನು | **ಆಯವಃ**—ಮಾನವರು | **ಸಂ ಮೃಜಂತಿ**—ಶುದ್ಧಿಗೊಳಿಸುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಪವಿತ್ರನಾದ ನಿನ್ನನ್ನು ಪ್ರಾಜ್ಞರಾದ ಕರ್ಮಕರ್ತರೂ, ಸ್ತುತಿಕರ್ತರೂ ಅಲಂಕರಿಸುತ್ತಾರೆ. ನಿನ್ನನ್ನು ಮಾನವರು ಶುದ್ಧಿಗೊಳಿಸುತ್ತಾರೆ.

## English Translation.

The wise who are the performers of pious acts, who are acquainted with holy texts, adorn you : men purifv you.

|| ಸಂಹಿತಾಪಾಠಃ ||

ರಸಂ ತೇ ಮಿತ್ರೋ ಅರ್ಯಮಾ ಪಿಬಂತಿ ವರುಣಃ ಕವೇ ।

ಪವಮಾನಸ್ಯ ಮರುತಃ || ೨೪ ||

|| ಪದಪಾಠಃ ||

ರಸಂ । ತೇ । ಮಿತ್ರಃ । ಅರ್ಯಮಾ । ಪಿಬಂತಿ । ವರುಣಃ । ಕವೇ ।

ಪವಮಾನಸ್ಯ । ಮರುತಃ || ೨೪ ||

|| ಸಾಯಣಭಾಷ್ಯಂ ||

ಹೇ ಕವೇ ಕ್ರಾಂತಕರ್ಮನ್ ಸೋಮ ಪವಮಾನಸ್ಯ ಕ್ಷರತಸ್ತೇ ತವ ರಸಂ ಮಿತ್ರೋಽರ್ಯಮಾ ಚ ವರುಣಶ್ಚ ಮರುತಶ್ಚೈತೇ ಸರ್ವೇ ದೇವಾಃ ಪಿಬಂತಿ ||

|| ಪ್ರತಿಪದಾರ್ಥ ||

**ಕವೇ**—ಕ್ರಾಂತಪ್ರಜ್ಞನಾದ ಎಲೈ ಸೋಮದೇವನೇ । **ಪವಮಾನಸ್ಯ**—ಪ್ರವಹಿಸತಕ್ಕ । **ತೇ**—ನಿನ್ನ । **ರಸಂ**—ರಸವನ್ನು । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ವರುಣಃ**—ವರುಣದೇವನೂ । **ಮರುತಃ**—ಮರುತ್ತುಗಳೂ । **ಪಿಬಂತಿ**—ಪಾನಮಾಡುತ್ತಾರೆ.

|| ಭಾವಾರ್ಥ ||

ಕ್ರಾಂತಪ್ರಜ್ಞನಾದ ಎಲೈ ಸೋಮದೇವನೇ, ಪ್ರವಹಿಸತಕ್ಕ ನಿನ್ನ ರಸವನ್ನು ಮಿತ್ರನೂ, ಅರ್ಯಮನೂ, ವರುಣನೂ, ಮರುತ್ತುಗಳೂ ಪಾನಮಾಡುತ್ತಾರೆ.

## English Translation.

Mitra, Aryaman, Varuna and the Maruts drink, sage (Soma), your juice as you drop.

|| ಸಂಹಿತಾಪಾಠಃ ||

ತ್ವಂ ಸೋಮ ವಿಪಶ್ಚಿತಂ ಪುನಾನೋ ವಾಚಮಿಷ್ಯಸಿ ।

ಇಂದೋ ಸಹಸ್ರಭರ್ಣಸಂ || ೨೫ ||

|| ಪದಪಾಠಃ ||

ತ್ವಂ । ಸೋಮ । ವಿಪಃऽಚಿತಂ । ಪುನಾನಃ । ವಾಚಂ । ಇಷ್ಯಸಿ ।

ಇಂದೋ ಇತಿ । ಸಹಸ್ರಃऽಭರ್ಣಸಂ || ೨೫ ||

|| ಸಾಯಣಭಾಷ್ಯಂ ||

ಹೇ ಇಂದೋ ದೀಪ್ತ ಸೋಮ ಪುನಾನಃ ಪೂಯಮಾನಸ್ತ್ವಂ ವಿಪಶ್ಚಿತಂ **ಪ್ರಜ್ಞಯಾ ಪವಿತ್ರಾಂ** ಸಹಸ್ರಭರ್ಣಸಂ ಬಹುಭರಣಾಂ ವಾಚಮಿಷ್ಯಸಿ । ಪ್ರೇರಯಸಿ ||

|| ಪ್ರತಿಪದಾರ್ಥ ||

ಇಂದೋ—ಪ್ರಕಾಶಮಾನನಾದ । **ಸೋಮ**—ಎಲೈ ಸೋಮದೇವನೇ । **ಪುನಾನಃ—ಶುದ್ಧಿ**ಯನ್ನು ಹೊಂದುವ । **ತ್ವಂ**—ನೀನು । **ವಿಪಶ್ಚಿತಂ—**ಪ್ರಜ್ಞಾಪೂರಿತವಾದುದೂ । **ಸಹಸ್ರಭರ್ಣಸಂ—ಅನೇಕರನ್ನು** ಭರಿಸತಕ್ಕದ್ದೂ ಆದ । **ವಾಚಂ**—ವಾಕ್ಕನ್ನು । **ಇಷ್ಯಸಿ**—ಉಚ್ಚರಿಸುತ್ತೀಯೆ.

|| ಭಾವಾರ್ಥ ||

ಪ್ರಕಾಶಮಾನನಾದ ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದತಕ್ಕ ನೀನು ಪ್ರಜ್ಞಾಪೂರಿತವಾದುದೂ, ಅನೇಕರನ್ನು ಭರಿಸತಕ್ಕದ್ದೂ ಆದ ವಾಕ್ಕನ್ನು ಉಚ್ಚರಿಸುತ್ತೀಯೆ.

## English Translation.

Brilliant Soma, when purified you utter a sapient speech, feeding thousands.

|| ಸಂಹಿತಾಪಾಠಃ ||

ಉತೋ ಸಹಸ್ರಭರ್ಣಸಂ ವಾಚಂ ಸೋಮ ಮಖಸ್ಯುವಂ ।

ಪುನಾನ ಇಂದವಾ ಭರ || ೨೬ ||

|| ಪದಪಾಠಃ ||

ಉತೋ ಇತಿ । ಸಹಸ್ರಃऽಭರ್ಣಸಂ । ವಾಚಂ । ಸೋಮ । ಮಖಸ್ಯುವಂ ।

ಪುನಾನಃ । ಇಂದೋ ಇತಿ । ಆ । ಭರ || ೨೬ ||

|| ಸಾಯಣಭಾಷ್ಯಂ ||

ಉತೋ ಅಪಿ ಚ ಹೇ ಇಂದೋ ದೀಪ್ತ ಸೋಮ ಪುನಾನಃ ಪೂಯಮಾನಸ್ತ್ವಂ ಸಹಸ್ರಭರ್ಣಸಂ ಸಹಸ್ರಭರಣಾಂ ಮಖಸ್ಯುವಂ ಧನಕಾಮಾಂ ವಾಚಮಸ್ಮಭ್ಯಮಾ ಭರ | ಆಹರ ||

|| ಪ್ರತಿಪದಾರ್ಥ ||

**ಉತೋ**—ಮತ್ತು | **ಇಂದೋ**—ಕಾಂತಿಯುತನಾದ | **ಸೋಮ**—ಎಲೈ ಸೋಮದೇವನೇ | **ಪುನಾನಃ**—ಶುದ್ಧಿಯನ್ನು ಹೊಂದತಕ್ಕ ನೀನು | **ಸಹಸ್ರಭರ್ಣಸಂ**—ಅನೇಕರನ್ನು ಭರಿಸಬಲ್ಲದೂ | **ಮಖಸ್ಯುವಂ**—ಧನವನ್ನು ಅಪೇಕ್ಷಿಸತಕ್ಕದ್ದೂ ಆದ | **ವಾಚಂ**—ವಾಕ್ಕನ್ನು | **ಆ ಭರ**—ನಮಗಾಗಿ ಉಚ್ಚರಿಸು.

|| ಭಾವಾರ್ಥ ||

ಕಾಂತಿಯುತನಾದ ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದತಕ್ಕ ನೀನು ಅನೇಕರನ್ನು ಭರಿಸಬಲ್ಲದೂ; ಧನವನ್ನು ಅಪೇಕ್ಷಿಸತಕ್ಕದ್ದೂ ಆದ ವಾಕ್ಕನ್ನು ನಮಗಾಗಿ ಉಚ್ಚರಿಸು.

English Translation

Brilliant Soma, when purified bring (us) a voice, feeding thousands and desiring wealth.

|| ಸಂಹಿತಾಪಾಠಃ ||

ಪುನಾನ ಇಂದವೇಷಾಂ ಪುರುಹೂತ ಜನಾನಾಂ |
ಪ್ರಿಯಃ ಸಮುದ್ರಮಾ ವಿಶ || ೨೭ ||

|| ಪದಪಾಠಃ ||

ಪುನಾನಃ | ಇಂದೋ ಇತಿ | ಏಷಾಂ | ಪುರುऽಹೂತ | ಜನಾನಾಂ |
ಪ್ರಿಯಃ | ಸಮುದ್ರಂ | ಆ | ವಿಶ || ೨೭ ||

|| ಸಾಯಣಭಾಷ್ಯಂ ||

ಹೇ ಪುರುಹೂತ ಬಹುಭಿರಾಹುತೇಂದೋ ಸೋಮ ಪುನಾನಃ ಪೂಯಮಾನಸ್ತ್ವಮೇಷಾಮಸ್ಮಿನ್ಯಾಗೇ ಸ್ತೋತ್ರಂ ಕುರ್ವತಾಂ ಜನಾನಾಂ ಪ್ರಿಯಃ ಸನ್ ಸಮುದ್ರಂ ದ್ರೋಣಕಲಶಮಾ ವಿಶ | ಪ್ರವಿಶ ||

|| ಪ್ರತಿಪದಾರ್ಥ ||

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ | **ಇಂದೋ**—ಎಲೈ ಸೋಮದೇವನೇ | **ಪುನಾನಃ**—ಶುದ್ಧಿಯನ್ನು ಹೊಂದುವ ನೀನು | **ಏಷಾಂ ಜನಾನಾಂ**—ಈ ಯಜ್ಞಕರ್ತರಿಗೆ | **ಪ್ರಿಯಃ**—ಪ್ರೀತಿಪಾತ್ರನಾಗಿ | **ಸಮುದ್ರಂ**—ದ್ರೋಣಕಲಶವನ್ನು | **ಆ ವಿಶ**—ಪ್ರವೇಶಿಸು.

|| ಭಾವಾರ್ಥ ||

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದುವ ನೀನು ಈ ಯಜ್ಞ ಕರ್ತನಿಗೆ ಪ್ರೀತಿಪಾತ್ರನಾಗಿ ದ್ರೋಣಕಲಶವನ್ನು ಪ್ರವೇಶಿಸು.

English Translation

Indu, invoked hy many, being purified and being loved by these your worshippers, enter the pitcher.

|| ಸಂಹಿತಾಪಾಠಃ ||

ದವಿದ್ಯುತತ್ಯಾ ರುಚಾ ಪರಿಷ್ಟೋಭಂತ್ಯಾ ಕೃಪಾ ।

ಸೋಮಾಃ ಶುಕ್ರಾ ಗವಾಶಿರಃ || ೨೮ ||

|| ಪದಪಾಠಃ ||

ದವಿದ್ಯುತತ್ಯಾ । ರುಚಾ । ಪರಿऽಸ್ತೋಭಂತ್ಯಾ । ಕೃಪಾ ।

ಸೋಮಾಃ । ಶುಕ್ರಾಃ । ಗೋऽಆಶಿರಃ || ೨೮ ||

|| ಸಾಯಣಭಾಷ್ಯಂ ||

**ಶುಕ್ರಾ ಉಜ್ಜ್ವಲಾ ದವಿದ್ಯುತತ್ಯಾ ದ್ಯೋತಮಾನಯಾ ರುಚಾ ದೀಪ್ತ್ಯಾ ಪರಿಷ್ಟೋಭಂತ್ಯಾ ಪರಿತಃ ಶಬ್ದಾಯಮಾನಯಾ ಕೃಪಾ ಧಾರಯಾ ಚ ಯುಕ್ತಾಃ ಸೋಮಾ ಗವಾಶಿರೋ ಭವಂತಿ । ಗವ್ಯೇನ ಪಯಸಾ ಮಿಶ್ರಿತಾ ಭವಂತೀತ್ಯರ್ಥಃ ||**

|| ಪ್ರತಿಪದಾರ್ಥ ||

ಶುಕ್ರಾಃ— ಪ್ರಭಾಯುತವಾದವೂ । ದವಿದ್ಯುತತ್ಯಾ—ಕಾಂತಿಯುತವಾದ । ರುಚಾ— ಪ್ರಭೆಯೊಡನೆ ಕೂಡಿದವೂ । ಪರಿಷ್ಟೋಭಂತ್ಯಾ—ಶಬ್ದಮಾಡತಕ್ಕ । ಕೃಪಾ—ಧಾರೆಗಳೊಡಗೂಡಿದವೂ ಆದ । **ಸೋಮಾಃ—** ಸೋಮರಸಗಳು । ಗವಾಶಿರಃ—ಕ್ಷೀರಾದಿಗಳೊಡನೆ ಮಿಶ್ರಿತವಾಗುತ್ತದೆ.

|| ಭಾವಾರ್ಥ ||

**ಪ್ರಭಾವಯುತವಾದವೂ, ಹೊಳೆಯತಕ್ಕ ಕಾಂತಿಯೊಡಗೂಡಿದವೂ, ಶಬ್ದಮಾಡತಕ್ಕ ಧಾರೆಗಳಿಂದ ಕೂಡಿದವೂ ಆದ ಸೋಮರಸಗಳು ಕ್ಷೀರಾದಿಗಳೊಡನೆ ಮಿಶ್ರಿತವಾಗುತ್ತವೆ.**

## English Translation.

The bright Soma-juices with their shining radiance ond resounding stream are mixed with the milk and curds.

॥ ಸಂಹಿತಾಪಾಠಃ ॥

ಹಿನ್ವಾನೋ ಹೇತೃಭಿರ್ಯತ ಆ ವಾಜಂ ವಾಜ್ಯಕ್ರಮೀತ್ ।
ಸೀದಂತೋ ವನುಷೋ ಯಥಾ ॥ ೨೯ ॥

॥ ಪದಪಾಠಃ ॥

ಹಿನ್ವಾನಃ । ಹೇತೃಽಭಿಃ । ಯತಃ । ಆ । ವಾಜಂ । ವಾಜೀ । ಅಕ್ರಮೀತ್ ॥
ಸೀದಂತಃ । ವನುಷಃ । ಯಥಾ ॥ ೨೯ ॥

॥ ಸಾಯಣಭಾಷ್ಯಂ ॥

ವಾಜೀ ಬಲವಾನ್ ಸೋಮೋ ಹೇತೃಭಿಃ ಪ್ರೇರಕೈಃ ಸ್ತೋತೃಭಿರ್ಹಿನ್ವಾನಃ ಸ್ತೋತ್ರೈಃ ಪ್ರೇರ್ಯಮಾಣೋ ಯತಃ ಸಂಯತಃ ಸನ್ ವಾಜಂ ಯಾಗಾಖ್ಯಂ ಯುದ್ಧಮಾಕ್ರಮೀತ್ । ಆಕ್ರಾಮತಿ । ತತ್ರ ದೃಷ್ಟಾಂತಃ । ಯಥಾ ವನುಷೋ ಹಂತಾರೋ ಭಟಾಃ ಸೀದಂತೋ ಯುದ್ಧಂ ಪ್ರವಿಶಂತ ಆಕ್ರಾಮಂತಿ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಥಾ**—ಯಾವ ರೀತಿಯಲ್ಲಿ । **ವನುಷಃ**—ಶತ್ರುಹಿಂಸಕರಾದ ಭಟರು । **ಸೀದಂತಃ**—ಯುದ್ಧರಂಗವನ್ನು ಪ್ರವೇಶಿಸುವರೋ ಹಾಗೆ । **ವಾಜೀ**—ಶಕ್ತಿಯುತನಾದ ಸೋಮದೇವನು । **ಹೇತೃಭಿಃ**—ಸ್ತುತಿಕರ್ತರಿಂದ । **ಹಿನ್ವಾನಃ**—ಪ್ರೇರಿತನಾಗಿಯೂ । **ಯತಃ**—ಶೇಖರಿಸಲ್ಪಟ್ಟವನಾಗಿಯೂ । **ವಾಜಂ**—ಯಾಗರೂಪವಾದ ಯುದ್ಧವನ್ನು । **ಆಕ್ರಮೀತ್**—ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಯಾವ ಪ್ರಕಾರ ಶತ್ರುಹಿಂಸಕರಾದ ಭಟರು ಯುದ್ಧರಂಗವನ್ನು ಪ್ರವೇಶಿಸುವರೋ ಹಾಗೆ ಶಕ್ತಿಯುತನಾದ ಸೋಮದೇವನು ಸ್ತುತಿಕರ್ತರಿಂದ ಪ್ರೇರಿತನಾಗಿಯೂ, ಶೇಖರಿಸಲ್ಪಟ್ಟವನಾಗಿಯೂ ಯಾಗರೂಪವಾದ ಯುದ್ಧವನ್ನು ಪ್ರವೇಶಿಸುತ್ತಾನೆ.

## English Translation

The powerful Soma urged by the urging (worshippers) goes collected to the battle like warriors entering (the battle-field).

|| ಸಂಹಿತಾಪಾಠಃ ||

ಋಧಕ್ಸೋಮ ಸ್ವಸ್ತಯೇ ಸಂಜಗ್ಮಾನೋ ದಿವಃ ಕವಿಃ ।
ಪವಸ್ವ ಸೂರ್ಯೋ ದೃಶೇ ॥ ೩೦ ॥

|| ಪದಪಾಠಃ ||

ಋಧಕ್ । ಸೋಮ । ಸ್ವಸ್ತಯೇ । ಸಂऽಜಗ್ಮಾನಃ । ದಿವಃ । ಕವಿಃ ।
ಪವಸ್ವ । ಸೂರ್ಯಃ । ದೃಶೇ ॥ ೩೦ ॥

|| ಸಾಯಣಭಾಷ್ಯಂ ||

ಹೇ ಸೋಮ ಕವಿಃ ಕ್ರಾಂತಃ ಸೂರ್ಯಃ ಸುವೀರ್ಯಸ್ತ್ವಮೃಧಗೃಧ್ನುವನ್ । ತಥಾ ಚ ಯಾಸ್ಕಃ । ಋಧಗಿತಿ ಪೃಥಗ್ಭಾವಸ್ಯಾನುಪ್ರವಚನಂ ಭವತ್ಯಥಾಪ್ಯೃಧ್ನೋತ್ಯರ್ಥೇ ದೃಶ್ಯತೇ । ನಿ. ೪—೨೫ । ಇತಿ ॥ ಸಂಜಗ್ಮಾನಃ ಸಂಗಚ್ಛಮಾನಃ ಸ್ವಸ್ತಯೇ ದೃಶೇ ದರ್ಶನಾಯ ಚ ದಿವಃ ಪವಸ್ವ । ಕ್ಷರ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಕವಿಃ**—ಕ್ರಾಂತಪ್ರಜ್ಞನೂ । **ಸೂರ್ಯಃ**—ವೀರ್ಯಯುತನೂ । **ಋಧಕ್**—ವೃದ್ಧಿಯನ್ನು ಹೊಂದತಕ್ಕವನೂ ಆದ ನೀನು । **ಸಂಜಗ್ಮಾನಃ**—ನಮಗಭಿಮುಖನಾಗಿ ಬರುತ್ತ । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿಯೂ । **ದೃಶೇ**—ದರ್ಶನಾರ್ಥನಾಗಿಯೂ । **ದಿವಃ**—ಅಂತರಿಕ್ಷದಿಂದ **ಪವಸ್ವ**—ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಕ್ರಾಂತಪ್ರಜ್ಞನೂ, ವೀರ್ಯಯುತನೂ, ವೃದ್ಧಿಯನ್ನು ಹೊಂದತಕ್ಕವನೂ ಆದ ನೀನು ನಮಗಭಿಮುಖನಾಗಿ ಬರುತ್ತ ನಮ್ಮ ಕಲ್ಯಾಣಕ್ಕಾಗಿಯೂ, ದರ್ಶನಾರ್ಥವಾಗಿಯೂ ಅಂತರಿಕ್ಷದಿಂದ ಪ್ರವಹಿಸು.

## English Translation

Soma, you are a sage mighty and prospering, approaching flow from heaven for our prosperity and view.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಸಪ್ತಮಾಷ್ಟಕೇ ಪ್ರಥಮೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

---

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯ ಸಪ್ತಮಾಷ್ಟಕದಲ್ಲಿ ಒಂದನೆಯ ಅಧ್ಯಾಯವು ಮುಗಿದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥
॥ ಶುಭಂ ಭೂಯಾತ್ ॥
॥ ಮಂಗಳಂ ॥





|| ಶ್ರೀಃ ||

|| ಶ್ರೀ ಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ |
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ||
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ |
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ||
ವೇದಃ ಶಿವಃ ಶಿವೋ ವೇದೋ ವೇದಧ್ಯಾಯೀ ಸದಾಶಿವಃ |
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ||

## ಸಾಯಣಭಾಷ್ಯಸಂಹಿತಾ

# ಋಗ್ವೇದಸಂಹಿತಾ

## ಭಾಗ ೨೬

## || ಅಥ ಸಪ್ತಮಾಷ್ಟಕೇ ದ್ವಿತಿಯೋಽಧ್ಯಾಯಃ ||

## ಏಳನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು.

## ಒಂಭತ್ತನೆಯ ಮಂಡಲದಲ್ಲಿ ಅರವತ್ತೈದನೆಯ ಸೂಕ್ತವು

|| ಸಾಯಣಭಾಷ್ಯಂ ||

ಹಿನ್ವಂತೀತಿ ತ್ರಿಂಶದೃಚಂ ಪಂಚಮಂ ಸೂಕ್ತಂ | ವರುಣಪುತ್ರಸ್ಯ ಭೃಗೋರಾರ್ಷಂ **ಭಾರ್ಗವಸ್ಯ** **ಜಮದಗ್ನೇರ್ವಾ** ಗಾಯತ್ರಂ ಪವಮಾನಸೋಮದೇವತಾಕಂ | ತಥಾ ಚಾನುಕ್ರಮ್ಯತೇ | **ಹಿನ್ವಂತಿ** ಭೃಗುರ್ವಾರುಣಿರ್ಜಮದಗ್ನಿರ್ವೇತಿ | ಗತೋ ವಿನಿಯೋಗಃ ||

ಅನುವಾದವು—ಹಿನ್ವಂತಿ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. **ಇದರಲ್ಲಿ** ಮೂವತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವರುಣಪುತ್ರನಾದ ಭೃಗುವು ಋಷಿಯು ಅಥವಾ **ಭೃಗುಪುತ್ರನಾದ** ಜಮದಗ್ನಿಯು ಋಷಿಯು; ಪವಮಾನಸೋಮನು ದೇವತೆಯು; ಗಾಯತ್ರೀಛಂದಸ್ಸು. **ಅನುಕ್ರಮಣಿಕೆಯಲ್ಲಿ—** **ಹಿನ್ವಂತಿ ಭೃಗುರ್ವಾರುಣಿರ್ಜಮದಗ್ನಿರ್ವಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ **ಹೇಳ** **ಲಾಗಿದೆ.**

## ಸೂಕ್ತ—೬೫

ಮಂಡಲ—೯ ॥ ಅನುವಾಕ—೩ ॥ ಸೂಕ್ತ—೬೫ ॥
ಅಷ್ಟಕ—೭ ॥ ಅಧ್ಯಾಯ—೨ ॥ ವರ್ಗ—೧, ೨, ೩, ೪, ೫, ೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ॥
॥ ಋಷಿಃ—ಭೃಗುರ್ವಾರುಣಿರ್ಜಮದಗ್ನಿರ್ವಾ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಹಿನ್ವಂತಿ ಸೂರಮುಸ್ರಯಃ ಸ್ವಸಾರೋ ಜಾಮಯಸ್ಪತಿಂ ।
ಮಹಾಮಿಂದುಂ ಮಹೀಯುವಃ ॥ ೧ ॥

॥ ಪದಪಾಠಃ ॥

ಹಿನ್ವಂತಿ । ಸೂರಂ । ಉಸ್ರಯಃ । ಸ್ವಸಾರಃ । ಜಾಮಯಃ । ಪತಿಂ ।
ಮಹಾಂ । ಇಂದುಂ । ಮಹೀಯುವಃ ॥ ೧ ॥

॥ ಸಾಯಣಭಾಷ್ಯಂ ॥

ಅತ್ರ ಸರ್ವತ್ರ ಪವಮಾನಃ ಸೋಮಃ ಸ್ತೂಯತೇ । ತತ್ರಾದಾವೃಷಿಃ ಸೋಮಂ ಪ್ರತ್ಯಾಹ । ಮದೀಯಾ ಅಂಗುಲಯಸ್ತ್ವಾಮಭಿಷೋತುಂ ಪ್ರೇರಯಂತೀತಿ । ತದುಚ್ಯತೇ । ಸ್ವಸಾರಃ । ಅಂಗುಲಿನಾಮೈತತ್ । ಸುಷ್ಠು ಕರ್ಮಸು ಪ್ರೇರ್ಯಂತೆ ಋತ್ವಿಗ್ಭಿರಿತಿ ಸ್ವಸಾರಃ । ಜಾಮಯ ಏಕಸ್ಮಾತ್ಪಾಣೇರುತ್ಪನ್ನತ್ವಾತ್ಪರಸ್ಪರಂ ಬಂಧುಭೂತಾ ಉಸ್ರಯಃ ಕರ್ಮಾರ್ಥಂ ನಿವಸಂತ್ಯಃ । ಸರ್ವತ್ರ ಗಂತ್ರ್ಯ ಇತ್ಯರ್ಥಃ । ತಾದೃಶ್ಯೋಽಂಗುಲಯೋ ಮಹೀಯುವಸ್ತ್ವದಭಿಷವಂ ಕಾಮಯಮಾನಾಃ ಸತ್ಯಃ ಸೂರಂ ಸುವೀರ್ಯಂ ಸೋಮೋ ಹಿ ತೇ ವೀರ್ಯಂ ಭವತೀತಿ ಶೋಭನವೀರ್ಯಕಾರಣಂ ವಾ ಸರ್ವೇಷಾಂ ಕರ್ಮಣಿ ಪ್ರೇರಕಂ ವಾ ತಾದೃಶಂ ಪತಿಂ ಸರ್ವಸ್ಯ ಸ್ಥಾವರಜಂಗಮಜಾತಸ್ಯ ಸ್ವಾಮಿನಂ ಯಸ್ಮಾದ್ದೇವಾರ್ಥಮಿಜ್ಯತೇಽತ ಏವ ಮಹಾಂ ದೇವೇಭ್ಯೋ ದೀಯಮಾನತ್ವೇನ ಮಹಾಂತಂ ಮಹನೀಯಂ ವೇಂದುಂ ಗ್ರಹೇಷು ಸ್ಯಂದಮಾನಂ ಸೋಮಂ ಹಿನ್ವಂತಿ । ಪ್ರೇರಯಂತಿ ॥ ಹಿ ವರ್ಧನಗತ್ಯೋಃ ಸ್ವಾದಿಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಜಾಮಯಃ—ಒಂದುಗೂಡಿರುವುವೂ । ಉಸ್ರಯಃ—ಕರ್ಮನಿರತವಾದವೂ ಆದ । ಸ್ವಸಾರಃ—ಅಂಗುಲಿಗಳು । ಮಹೀಯುವಃ—ನಿನ್ನ ಅಭಿಷವವನ್ನು ಅಪೇಕ್ಷಿಸಿದವುಗಳಾಗಿ । ಸೂರಂ—ವೀರ್ಯವಂತನೂ । ಪತಿಂ—ಜಗತ್ಪಾಲಕನೂ । ಮಹಾಂ—ಮಹತ್ಸ್ವರೂಪವುಳ್ಳವನೂ । ಇಂದುಂ—ಪ್ರವಾಹಾತ್ಮಕನೂ ಆದ ನಿನ್ನನ್ನು । ಹಿನ್ವಂತಿ—ಹಿಂಡಿ ಸುರಿಸುತ್ತವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಒಂದುಗೂಡಿರುವುವೂ, ಕರ್ಮನಿರತವೂ ಆದ ಬೆರಳುಗಳು ನಿನ್ನ ಅಭಿಷವವನ್ನು ಅಪೇಕ್ಷಿಸಿದವುಗಳಾಗಿ ವೀರ್ಯವಂತನೂ, ಜಗತ್ಪಾಲಕನೂ, ಮಹತ್ಸ್ವರೂಪವುಳ್ಳವನೂ, ಪ್ರವಾಹಾತ್ಮಕನೂ ಆದ ನಿನ್ನನ್ನು ಹಿಂಡಿ ಸುರಿಸುತ್ತವೆ.

English Translation

The kindred fingers diligently operating, eager to squeeze you forth, send out the invigorating, the lord (of all), the mighty Indu,

|| ಸಂಹಿತಾಪಾಠಃ ||

ಪವಮಾನ ರುಚಾರುಚಾ ದೇವೋ ದೇವೇಭ್ಯಸ್ಪರಿ ।
ವಿಶ್ವಾ ವಸೂನ್ಯಾ ವಿಶ || ೨ ||

|| ಪದಪಾಠಃ ||

ಪವಮಾನ । ರುಚಾऽರುಚಾ । ದೇವಃ । ದೇವೇಭ್ಯಃ । ಪರಿ ।
ವಿಶ್ವಾ । ವಸೂನಿ । ಆ । ವಿಶ || ೨ ||

|| ಸಾಯಣಭಾಷ್ಯಂ ||

**ಹೇ ಪವಮಾನ ದಶಾಪವಿತ್ರೇಣ ಪೂಯಮಾನ ಯದ್ವಾ ಪುನಾನ ಶುದ್ಧ ಸೋಮ ರುಚಾರುಚಾ || ರುಚ ದೀಪ್ತೌ || ಸರ್ವೇಣ ತೇಜಸಾ ದೇವೋ ದೀಪ್ಯಮಾನಸ್ತ್ವಂ ದೇವೇಭ್ಯಃ ಪರಿ ದೇವೇಭ್ಯಃ ಸಕಾಶಾ-ದ್ವಿಶ್ವಾ ವ್ಯಾಪ್ತಾನಿ ಸರ್ವಾಣಿ ಬಹೂನಿ ವಸೂನಿ ಧನಾನ್ಯಸ್ಮಾಕಮಾ ವಿಶ । ಪ್ರಾಪಯ । ಯದ್ವಾ । ದೇವೇಭ್ಯಸ್ತದರ್ಥಂ ಸರ್ವಾಣಿ ವಸೂನಿ ನಿವಾಸಸ್ಥಾನಾನಿ ಗ್ರಹಾದೀನ್ಯಾ ವಿಶ । ಸಮಂತಾತ್ಪ್ರವಿಶ ||**

|| ಪ್ರತಿಪದಾರ್ಥ ||

**ಪವಮಾನ**—ಎಲೈ ಶುದ್ಧಿಕಾರಕನಾದ ಸೋಮದೇವನೇ । **ರುಚಾರುಚಾ**—ಅತ್ಯಧಿಕವಾದ ಕಾಂತಿಯಿಂದ। **ದೇವಃ**—ಪ್ರಕಾಶಮಾನನಾದ ನೀನು । **ದೇವೇಭ್ಯಃ ಪರಿ**—ದೇವತೆಗಳಿಂದ ಲಬ್ಧವಾಗುವ । **ವಿಶ್ವಾ**—ಸಮಸ್ತವಾದ । **ವಸೂನಿ**--ಧನಗಳನ್ನೂ । **ಆ ವಿಶ**—ನಮಗೆ ಸೇರುವಂತೆ ಮಾಡು

|| ಭಾವಾರ್ಥ ||

ಶುದ್ಧಿಕಾರಕನಾದ ಎಲೈ ಸೋಮದೇವನೇ, ಅತ್ಯಧಿಕವಾದ ಕಾಂತಿಯಿಂದ ಪ್ರಕಾಶಿಸುವ ನೀನು ದೇವತೆಗಳಿಂದ ಲಬ್ಧವಾಗುವ ಸಮಸ್ತ ಧನಗಳನ್ನೂ ನಮಗೆ ಸೇರುವಂತೆ ಮಾಡು.

## English Translation.

Filtered Soma, who with reiterated radiance shine in the presence of the gods, obtain all boons (for us).

|| ಸಂಹಿತಾಪಾಠಃ ||

ಆ ಪವಮಾನ ಸುಷ್ಟುತಿಂ ವೃಷ್ಟಿಂ ದೇವೇಭ್ಯೋ ದುವಃ ।
ಇಷೇ ಪವಸ್ವ ಸಂಯತಂ || ೩ ||

|| ಪದಪಾಠಃ ||

ಆ । ಪವಮಾನ । ಸುऽಸ್ತುತಿಂ । ವೃಷ್ಟಿಂ । ದೇವೇಭ್ಯಃ । ದುವಃ ।
ಇಷೇ । ಪವಸ್ವ । ಸಂऽಯತಂ || ೩ ||

|| ಸಾಯಣಭಾಷ್ಯಂ ||

ಹೇ ಪವಮಾನ ಪೂಯಮಾನ ಪುನಾನ ವಾ ಸೋಮ ಸುಷ್ಟುತಿಂ ಶೋಭನಸ್ತುತಿಯುಕ್ತಾಂ ವೃಷ್ಟಿಂ ದೇವೇಭ್ಯೋ ದೇವಾನಾಂ ದುವಃ || ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ || ದುವಸೇ ಪರಿಚರಣಾಯಾ ಪವಸ್ವ । ಆಗಮಯ । ತ್ವಂ ಯಥಾ ಮದೀಯಯಾ ಸ್ತುತ್ಯಾ ವೃಷ್ಟಿರ್ಭವಿಷ್ಯತಿ ತಥಾ ಕುರ್ವಿತ್ಯರ್ಥಃ । ಕಿಂಚಾಸ್ಮಾಕಮಿಷೇऽನ್ನಾರ್ಥಂ ಚ ಸಂಯತಂ ಸಮ್ಯಗಸ್ಮಾನ್ ಸಂಗಚ್ಛಂತೀಂ ವೃಷ್ಟಿಂ ಕುರು । ಯದ್ವಾ । ದುವಃ ಪರಿಚರ್ಯಾಮಭಿಲಕ್ಷ್ಯ ಕ್ರಿಯಮಾಣಾಂ ಸುಷ್ಟುತಿಂ ಶೋಭನಸ್ತುತಿರೂಪಾಂ ವೃಷ್ಟಿಂ । ಬಹುಸ್ತುತಿಮಿತ್ಯರ್ಥಃ । ಏತಾಂ ದೇವೇಭ್ಯಃ ಪ್ರಾಪಯ ||

|| ಪ್ರತಿಪದಾರ್ಥ ||

**ಪವಮಾನ**—ಶುದ್ಧಿಕಾರಕನಾದ ಎಲೈ ಸೋಮದೇವನೇ । **ಸುಷ್ಟುತಿಂ**—ಉತ್ತಮವಾದ ಸ್ತುತಿಯಿಂದ ಕೂಡಿದ । **ವೃಷ್ಟಿಂ**—ವೃಷ್ಟಿಯನ್ನು । **ದೇವೇಭ್ಯಃ**—ದೇವತೆಗಳನ್ನುದ್ದೇಶಿಸಿದ । **ದುವಃ**—ಪೂಜಾಸೌಕರ್ಯಕ್ಕಾಗಿ । **ಆ ಪವಸ್ವ**—ಸುತ್ತಲೂ ಸುರಿಸು । **ಇಷೇ**—ನಮಗೆ ಅನ್ನಸಂಪಾದನಾರ್ಥವಾಗಿ । **ಸಂಯತಂ**—ಸುಲಭವಾಗಿ ಹರಿಯುವ ವೃಷ್ಟಿಯನ್ನು ಸುರಿಸು.

|| ಭಾವಾರ್ಥ ||

ಶುದ್ಧಿಕಾರಕನಾದ ಎಲೈ ಸೋಮದೇವನೇ, ಉತ್ತಮವಾದ ಸ್ತುತಿಯಿಂದ ಕೂಡಿದ ವೃಷ್ಟಿಯನ್ನು ದೇವತೆಗಳನ್ನುದ್ದೇಶಿಸಿದ ಪೂಜಾಸೌಕರ್ಯಕ್ಕಾಗಿ ಸುತ್ತಲೂ ಸುರಿಸು. ನಮಗೆ ಅನ್ನಸಂಪಾದನಾರ್ಥವಾಗಿ ಸುಲಭವಾಗಿ ಹರಿಯುವ ವೃಷ್ಟಿಯನ್ನು ಸುರಿಸು.

English Translation

Pour, purified (Soma), a well-praised shower for the worship of the gods: (pour) a continual shower for our food.

॥ ಸಂಹಿತಾಪಾಠಃ ॥

ವೃಷಾ ಹ್ಯಸಿ ಭಾನುನಾ ದ್ಯುಮಂತಂ ತ್ವಾ ಹವಾಮಹೇ ।
ಪವಮಾನ ಸ್ವಾಧ್ಯಃ ॥ ೪ ॥

॥ ಪದಪಾಠಃ ॥

ವೃಷಾ । ಹಿ । ಅಸಿ । ಭಾನುನಾ । ದ್ಯುऽಮಂತಂ । ತ್ವಾ । ಹವಾಮಹೇ ।
ಪವಮಾನ । ಸುऽಆಧ್ಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ಸ್ವಾಧ್ಯಃ ಸುಕರ್ಮಾಣೋ ವಯಂ ಭಾನುನಾ ರಶ್ಮಿನಾ ದ್ಯುಮಂತಂ ದ್ಯುತಿಮಂತಂ ತ್ವಾ ತ್ವಾಂ ಹವಾಮಹೇ । ಆಹ್ವಯಾಮಃ । ಹಿ ಯಸ್ಮಾತ್ತ್ವಂ ವೃಷಾ ಕಾಮಾನಾಂ ವರ್ಷಯಿತಾಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) । (ತ್ವಂ—ನೀನು) । ವೃಷಾ—ಇಷ್ಟಾರ್ಥಪ್ರದನಾಗಿ । ಅಸಿ ಹಿ—ಖಂಡಿತ ಆಗಿದ್ದೀಯೆ । ಪವಮಾನ—ಶುದ್ಧಿಕಾರಕನಾದ ಎಲೈ ಸೋಮದೇವನೇ । ಸ್ವಾಧ್ಯಃ—ಉತ್ತಮವಾದ ಕರ್ಮವಂತರಾದ ನಾವು । ಭಾನುನಾ—ಸ್ವತೇಜಸ್ಸಿನಿಂದ । ದ್ಯುಮಂತಂ—ಪ್ರಭಾವಯುತನಾದ । ತ್ವಾ—ನಿನ್ನನ್ನು ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಇಷ್ಟಾರ್ಥಪ್ರದನಾಗಿ ಆಗಿದ್ದೀಯೆ. ಶುದ್ಧಿಕಾರಕನಾದ ಎಲೈ ಸೋಮದೇವನೇ, ಉತ್ತಮವಾದ ಕರ್ಮವಂತರಾದ ನಾವು ಸ್ವತೇಜಸ್ಸಿನಿಂದ ಪ್ರಭಾಯುತನಾದ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation.

We who perform good works praise you, purified Soma, brilliant with radiance, for you are the showerer (of benefits).

|| ಸಂಹಿತಾಪಾಠಃ ||

ಆ ಪವಸ್ವ ಸುವೀರ್ಯಂ ಮಂದಮಾನಃ ಸ್ವಾಯುಧ |
ಇಹೋ ಷ್ವಿಂದವಾ ಗಹಿ || ೫ ||

|| ಪದಪಾಠಃ ||

ಆ | ಪವಸ್ವ | ಸುऽವೀರ್ಯಂ | ಮಂದಮಾನಃ | ಸುऽಆಯುಧ |
ಇಹೋ ಇತಿ | ಸು | ಇಂದೋ ಇತಿ | ಆ | ಗಹಿ || ೫ ||

|| ಸಾಯಣಭಾಷ್ಯಂ ||

ಹೇ ಸ್ವಾಯುಧ | ಯಜ್ಞೇ ಸ್ಫ್ಯಕಪಾಲಾದೀನಿ ದಶಾಯುಧಾನೀತ್ಯಭಿಧೀಯಂತೇ | ಶೋಭನಾನಿ ತಾನಿ ಯಸ್ಯ ಸ ತಥೋಕ್ತಃ | ಯದ್ವಾ | ಧನುರಾದೀನ್ಯಾಯುಧಾನಿ ಯಸ್ಯ ಸಃ | ತಾದೃಶ ಹೇ ಸೋಮ ತ್ವಂ ಮಂದಮಾನೋ ಮೋದಮಾನಃ ಸನ್ | ಯದ್ವಾ | ಅಂತರ್ಣೀತಣ್ಯರ್ಥಃ | ದೇವಾನ್ ಸ್ವಯಂ ಮಾದಯನ್ ಸುವೀರ್ಯಂ ಶೋಭನವೀರ್ಯೋಪೇತಂ ಪುತ್ರಾದಿಕಮಸ್ಮಾಕಮಾ ಪವಸ್ವ | ಪವತಿರ್ಗತ್ಯರ್ಥಃ || ಆ ಪ್ರಾಪಯ | ಕಿಂ ಚ ಹೇ ಇಂದೋ ಗ್ರಹೇಷು ಚಮಸೇಷು ಚ ಕ್ಷರಣಶೀಲ | ಸೋಮ | ಇಹೋ | ಇಹ ಉ ಪದದ್ವಯಂ | ಉ ಇತ್ಯವಧಾರಣೇ | ಇಹೈವಾಸ್ಮದೀಯೇ ಯಜ್ಞ ಏವ ಸುಷ್ಠ್ವಾ ಗಹಿ | ಆಗಚ್ಛ ||

|| ಪ್ರತಿಪದಾರ್ಥ ||

ಸ್ವಾಯುಧ—ಉತ್ತಮವಾದ ಆಯುಧವುಳ್ಳ ಎಲೈ ಸೋಮದೇವನೇ | ಮಂದಮಾನಃ—ಹರ್ಷಯುಕ್ತನಾದ ನೀನು ಅಥವಾ ದೇವತೆಗಳಿಗೆ ಹರ್ಷಕಾರಕನಾದ ನೀನು | ಸುವೀರ್ಯಂ—ಉತ್ತಮವಾದ ವೀರಪುತ್ರರನ್ನು ಆ ಪವಸ್ವ—ನಮಗೆ ಒದಗಿಸು. | ಇಂದೋ—ಪ್ರವಾಹಾತ್ಮಕನಾದ ಎಲೈ ಸೋಮದೇವನೇ. | ಇಹ—ನಮ್ಮ ಈ ಯಜ್ಞಕ್ಕೆ | ಸು—ಅತಿಶಯವಾಗಿ | ಆ ಗಹಿ—ದಯಮಾಡು.

|| ಭಾವಾರ್ಥ ||

ಉತ್ತಮವಾದ ಆಯುಧವುಳ್ಳ ಎಲೈ ಸೋಮದೇವನೆ, ಹರ್ಷಯುಕ್ತನಾದ ನೀನು (ಅಥವಾ ದೇವತೆಗಳಿಗೆ ಹರ್ಷಕಾರಕನಾದ ನೀನು) ನಮಗೆ ಉತ್ತಮರಾದ ವೀರಪುತ್ರರನ್ನು ಒದಗಿಸು. ಪ್ರವಾಹಾತ್ಮಕನಾದ ಎಲೈ ಸೋಮದೇವನೇ, ನಮ್ಮ ಈ ಯಜ್ಞಕ್ಕೆ ಅತಿಶಯವಾಗಿ ದಯಮಾಡು.

## English Translation

Well-armed (Soma) who exhilarate (the gods), pour forth for us male offspring; come, Indu, favourably to our sacrifice.

|| ಸಂಹಿತಾಪಾಠಃ ||

ಯದದ್ಭಿಃ ಪರಿಷಿಚ್ಯಸೇ ಮೃಜ್ಯಮಾನೋ ಗಭಸ್ತ್ಯೋಃ ।
ದ್ರುಣಾ ಸಧಸ್ಥಮಶ್ನುಷೇ || ೬ ||

|| ಪದಪಾಠಃ ||

ಯತ್ । ಅತ್ಽಭಿಃ । ಪರಿಽಸಿಚ್ಯಸೇ । ಮೃಜ್ಯಮಾನಃ । ಗಭಸ್ತ್ಯೋಃ ।
ದ್ರುಣಾ । ಸಧಽಸ್ಥಂ । ಅಶ್ನುಷೇ || ೬ ||

|| ಸಾಯಣಭಾಷ್ಯಂ ||

ಹೇ ಸೋಮ ಗಭಸ್ತ್ಯೋಃ । ಬಹುನಾಮ್ನ್ಯೇತತ್ । ಬಭಸತಿ ದೀಪಯಂತಿ ನಿರ್ಮಥ್ಯಂತ್ಯಾಭ್ಯಾಮಗ್ನಿಮಿತಿ ಗಭಸ್ತೀ ಬಾಹೂ । ತಯೋರ್ಮೃಜ್ಯಮಾನಸ್ತಾಭ್ಯಾಂ ಶೋಧ್ಯಮಾನಃ ಸನ್ನದ್ಭಿಃ । ಸೋಮಸೇಚನಾರ್ಥಂ ಚತುರ್ವಿಧಾ ಆಪಃ । ತಾಭಿರ್ವಸತೀವರೀಭಿರೇಕಧನಾಭಿಶ್ಚ ಯದ್ಯದಾ ಪರಿಷಿಚ್ಯಸೇ ಪರಿತಃ ಸಿಚ್ಯಮಾನೋ ಭವಸಿ ತದಾನೀಂ ದ್ರುಣಾ ದ್ರುಮಮಯೇನ ಪಾರಿಪ್ಲವೇನ ಪಾತ್ರೇಣ ಗೃಹ್ಯಮಾಣಃ ಸನ್ ಸಧಸ್ಥಂ ಸಹ ತಿಷ್ಠಂತ್ಯತ್ರೇತಿ ಸಧಸ್ಥಂ ಸ್ಥಾನಂ ಗ್ರಹಚಮಸಾದಿಕಮಶ್ನುಷೇ । ಪ್ರಾಪ್ನೋಷಿ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಗಭಸ್ತ್ಯೋಃ**—ಬಾಹುಗಳಿಂದ । **ಮೃಜ್ಯಮಾನಃ**—ಶುದ್ಧಮಾಡಲ್ಪಟ್ಟ ನೀನು । **ಅದ್ಭಿಃ**—ವಸತೀವಾರ್ಯಾದಿ ಉದಕಗಳೊಡನೆ । **ಯತ್**—ಯಾವಾಗ । **ಪರಿಷಿಚ್ಯಸೇ**—ಸುರಿಯಲ್ಪಡುವೆಯೋ (ಆಗ) । **ದ್ರುಣಾ**—ಮರದಿಂದ ಮಾಡಿದ ಪಾತ್ರೆಯಿಂದ ಗೃಹೀತನಾಗಿ । **ಸಧಸ್ಥಂ**—ನಿನ್ನ ಸ್ಥಾನವಾದ ಚಮಸ ಪಾತ್ರೆಯಲ್ಲಿ । **ಅಶ್ನುಷೇ**—ಸೇರಿಕೊಳ್ಳುವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಬಾಹುಗಳಿಂದ ಶುದ್ಧಮಾಡಲ್ಪಟ್ಟ ನೀನು ವಸತೀವರ್ಯಾದ್ಯುದಕಗಳೊಡನೆ ಯಾವಾಗ ಸುರಿಯಲ್ಪಡುವೆಯೋ ಆಗ ಮರದಿಂದ ಮಾಡಿದ ಪಾತ್ರೆಯಿಂದ ಗೃಹೀತನಾಗಿ ನಿನ್ನ ಸ್ಥಾನವಾದ ಚಮಸಪಾತ್ರೆಯಲ್ಲಿ ಸೇರಿಕೊಳ್ಳುವೆ.

## English Translation.

When cleansed by the hands yon are sprinkled with the water, (taken up) with the wooden vessel you attain your abode.

॥ ಸಂಹಿತಾಪಾಠಃ ॥

## ಪ್ರ ಸೋಮಾಯ ವ್ಯಶ್ವವತ್ಪವಮಾನಾಯ ಗಾಯತ ।
## ಮಹೇ ಸಹಸ್ರಚಕ್ಷಸೇ ॥ ೭ ॥

॥ ಪದಪಾಠಃ ॥

ಪ್ರ । ಸೋಮಾಯ । ವ್ಯಶ್ವಽವತ್ । ಪವಮಾನಾಯ । ಗಾಯತ ।

ಮಹೇ । ಸಹಸ್ರಽಚಕ್ಷಸೇ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ಪವಮಾನಾಯ ದಶಾಪವಿತ್ರೇಣ ಪೂಯಮಾನಾಯ ಪುನಾನಾಯ ವಾ ಸೋಮಾಯ ಪ್ರ ಗಾಯತ । ಪ್ರಕರ್ಷೇಣ ಸಾಮಗಾನಂ ಕುರುತ । ಅಭಿಷ್ಟುತ ವಾ । ಕಥಮಿವ । ವ್ಯಶ್ವವತ್ । ಯಥಾ ಪೂರ್ವಂ ವ್ಯಶ್ವೋ ನಾಮರ್ಷಿಃ ಸೋಮಮಗಾಸೀತ್ ತದ್ವದ್ಯೂಯಮಪಿ । ಕೀದೃಶಾಯ । ಮಹೇ ಮಹತೇ ದೇವೇಭ್ಯಃ ಸ್ವೀಕ್ರಿಯಮಾಣತ್ವೇನ ಗುಣಾದಿಭಿರ್ವಾ ಮಹತ್ತ್ವಯುಕ್ತಾಯ ಸಹಸ್ರಚಕ್ಷಸೇ । ಪ್ರಯೋಗಬಾಹುಲ್ಯಾಪೇಕ್ಷಮೇತದ್ವಚನಂ । ಸಹಸ್ರಸಂಖ್ಯಾಕಸ್ತೋತ್ರಯುಕ್ತಾಯ । ಯದ್ವಾ । ನಾನಾವಿಧೈರ್ದೇವೈರನೇಕಧಾ ದ್ರಷ್ಟವ್ಯಾಯ ಸೋಮಾಯೇತಿ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ವ್ಯಶ್ವವತ್**—ಹಿಂದೆ ವ್ಯಶ್ವನು ಸ್ತುತಿಸಿದಂತೆ । **ಮಹೇ**—ಮಹತ್ವದಿಂದ ಕೂಡಿದವನೂ । **ಸಹಸ್ರಚಕ್ಷಸೇ**—ಅನೇಕ ವಿಧವಾದ ದೃಷ್ಟಿಯುಳ್ಳವನೂ । **ಪವಮಾನಾಯ**—ಶುದ್ಧಿಕಾರಕನೂ ಆದ । **ಸೋಮಾಯ**—ಸೋಮನನ್ನುದ್ದೇಶಿಸಿ । **ಪ್ರ ಗಾಯತ**—ಗಾನರೂಪದಲ್ಲಿ ಅತಿಶಯವಾಗಿ ಪ್ರಶಂಸಿಸಿರಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಹಿಂದೆ ವ್ಯಶ್ವನು ಸ್ತುತಿಸಿದಂತೆ ಮಹತ್ವದಿಂದ ಕೂಡಿದವನೂ, ಅನೇಕ ವಿಧವಾದ ದೃಷ್ಟಿಯುಳ್ಳವನೂ, ಶುದ್ಧಿಕಾರಕನೂ ಆದ ಸೋಮನನ್ನುದ್ದೇಶಿಸಿ ಗಾನರೂಪದಲ್ಲಿ ಅತಿಶಯವಾಗಿ ಪ್ರಶಂಸಿಸಿರಿ.

### English Translation.

Sing. as Vyashwa did, to the filtered Soma, the great, the all-beholding.

॥ ಸಂಹಿತಾಪಾಠಃ ॥

## ಯಸ್ಯ ವರ್ಣಂ ಮಧುಶ್ಚುತಂ ಹರಿಂ ಹಿನ್ವಂತ್ಯದ್ರಿಭಿಃ ।
## ಇಂದುಮಿಂದ್ರಾಯ ಪೀತಯೇ ॥ ೮ ॥

|| ಪದಪಾಠಃ ||

ಯಸ್ಯ । ವರ್ಣಂ । ಮಧುಽಶ್ಚುತಂ । ಹರಿಂ । ಹಿನ್ವಂತಿ । ಅದ್ರಿಽಭಿಃ ।

ಇಂದುಂ । ಇಂದ್ರಾಯ । ಪೀತಯೇ ॥ ೮ ॥

|| ಸಾಯಣಭಾಷ್ಯಂ ||

ಹೇ ಅಧ್ವರ್ಯ್ವಾದಯಃ ವರ್ಣಂ ಶತ್ರೂಣಾಂ ವಾರಕಂ ಯೇನಾಸೌ ಪೀಯತೇ ತೇನ ಮತ್ರೇಣ ಶತ್ರವಃ ಸಂಪ್ರಹಾರ್ಯಂತೆ ಇತಿ ಶತ್ರುನಿವಾರಣಸಮರ್ಥಂ ಮಧುಶ್ಚುತಂ ಮಧುರರಸಸ್ಯ ಚ್ಯಾವಯಿತಾರಂ ಹರಿಂ ಹರಿತವರ್ಣಮಿಂದುಂ । ಇಂಧೇರೇತದ್ರೂಪಮತ್ರೇಷ್ಯತೇ । ಸರ್ವತೋ ದೀಪ್ಯಮಾನಂ । ಉಂದ ಕ್ಲೇದನ ಇತ್ಯಸ್ಮಾದ್ವಾ । ಅಭಿಷವಾನಂತರಂ ಪಾತ್ರೇಷು ಕ್ಷರಣಶೀಲಂ । ಯಸ್ಯ ಸೋಮಸ್ಯ ತವ ಕಾರಣಮಂಶುಮದ್ರಿಭಿರ್ಹಿನ್ವಂತಿ ಪ್ರೇರಯಂತಿ । ಅಭಿಷುಣ್ವಂತೀತ್ಯರ್ಥಃ । ಇಂದ್ರಾಯ ಪೀತಯೇ ಇಂದ್ರಸ್ಯ ಪಾನಾಯ । ತದರ್ಥಮಿತ್ಯರ್ಥಃ ॥

|| ಪ್ರತಿಪದಾರ್ಥ ||

(ಎಲೈ ಅಧ್ವರ್ಯುಗಳೇ) ಯಸ್ಯ—ಯಾವ ಸೋಮವನ್ನು । ಅದ್ರಿಭಿಃ—ಹಿಂಡುವ ಕಲ್ಲುಗಳಿಂದ । ಇಂದ್ರಾಯ—ಇಂದ್ರನ । ಪೀತಯೇ—ಪಾನಾರ್ಥವಾಗಿ । ಹಿನ್ವಂತಿ—ಹಿಂಡುವರೋ ಅಂತಹ । ವರ್ಣಂ—ಶತ್ರುನಿರೋಧಕನೂ । ಮಧುಶ್ಚುತಂ—ಮಧುರವಾದ ರಸವನ್ನು ಸುರಿಸುವವನೂ । ಹರಿಂ—ಪಚ್ಚೆವರ್ಣದವನೂ ಆದ । ಇಂದುಂ—ಸೋಮದೇವನನ್ನು ಪ್ರಶಂಸಿಸಿರಿ.

|| ಭಾವಾರ್ಥ ||

ಎಲೈ ಅಧ್ವರ್ಯುಗಳೇ, ಯಾವ ಸೋಮವನ್ನು ಹಿಂಡುವ ಕಲ್ಲುಗಳಿಂದ ಇಂದ್ರನ ಪಾನಾರ್ಥವಾಗಿ ಹಿಂಡುವರೋ, ಅಂತಹ ಶತ್ರುನಿರೋಧಕನೂ, ಮಧುರವಾದ ರಸವನ್ನು ಸುರಿಸುವವನೂ, ಪಚ್ಚೆವರ್ಣದವನೂ ಆದ ಸೋಮದೇವನನ್ನು ಪ್ರಶಂಸಿಸಿರಿ.

## English Translation

(That Soma) whose juice they squeeze out with the stones, foe-repelling, honey-dropping, green-tinted, for Indra to drink.

|| ಸಂಹಿತಾಪಾಠಃ ||

ತಸ್ಯ ತೇ ವಾಜಿನೋ ವಯಂ ವಿಶ್ವಾ ಧನಾನಿ ಜಿಗ್ಯುಷಃ ।

ಸಖಿತ್ವಮಾ ವೃಣೀಮಹೇ ॥ ೯ ॥

|| ಪದಪಾಠಃ ||

ತಸ್ಯ | ತೇ | ವಾಜಿನಃ | ವಯಂ | ವಿಶ್ವಾ | ಧನಾನಿ | ಜಿಗ್ಯುಷಃ |
ಸಖಿऽತ್ವಂ | ಆ | ವೃಣೀಮಹೇ || ೯ ||

|| ಸಾಯಣಭಾಷ್ಯಂ ||

ಹೇ ಸೋಮ ವಾಜಿನಃ ಸಂಭೃತಹವಿಷ್ಕಾ ವಯಂ ವಿಶ್ವಾ ವಿಶ್ವಾನಿ ಸರ್ವಾಣಿ ವ್ಯಾಪ್ತಾನಿ ವಾ ಶತ್ರುಧನಾನಿ ಜಿಗ್ಯುಷೋ ಜಿತವತಸ್ತಸ್ಯ ಪೂರ್ವೋಕ್ತಲಕ್ಷಣಸ್ಯ ಪ್ರಸಿದ್ಧಸ್ಯ ವಾ ತೇ ತವ ಸಖಿತ್ವಂ ಸ್ತುತ್ಯಸ್ತೋತೃಲಕ್ಷಣಂ ಸಖ್ಯಮಾ ವೃಣೀಮಹೇ | ಸಂಭಜಾಮಹೇ | ಅಸ್ಮಭ್ಯಂ ಧನಂ ದೇಹೀತಿ ಸಂಭಜನಂ ಕುರ್ಮ ಇತ್ಯರ್ಥಃ || ಜಿಗ್ಯುಷಃ | ಜಿ ಜಯೇ | ಲಿಟಿ ಕ್ವಸೌ ವಸ್ವೇಕಾಜಾದಿತಿ ನಿಯಮಾದಿಡಭಾವಃ | ಸನ್ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಕವರ್ಗಾದೇಶಃ | ಉಸಿ ಪರತೋ ವಸೋಃ ಸಂಪ್ರಸಾರಣಂ | ಕ್ವಸುಪ್ರತ್ಯಯಸ್ವರಃ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ವಾಜಿನಃ**—ಹವಿಸ್ಸನ್ನು ಹೊಂದಿರುವ | **ವಯಂ**—ನಾವು | **ವಿಶ್ವಾ ಧನಾನಿ**—ಸಮಸ್ತವಾದ ಶತ್ರುಧನಗಳನ್ನೂ | **ಜಿಗ್ಯುಷಃ**—ಜಯಿಸಿ ತೆಗೆದುಕೊಂಡು ಬರುವವನೂ | **ತಸ್ಯ**—ಪ್ರಸಿದ್ಧನೂ ಆದ | **ತೇ**—ನಿನ್ನ | **ಸಖಿತ್ವಂ**—ಮಿತ್ರತ್ವವನ್ನು | **ಆ ವೃಣೀಮಹೇ**—ಯಾಚಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಸಕಲ ಶತ್ರುಧನಗಳನ್ನೂ ಅಪಹರಿಸಿಕೊಂಡು ಬರುವವನೂ, ಪ್ರಸಿದ್ಧನೂ ಆದ ನಿನ್ನ ಮಿತ್ರತ್ವವನ್ನು ಹವಿರ್ಯುಕ್ತರಾದ ನಾವು ಯಾಚಿಸುತ್ತೇವೆ.

## English Translation.

We, who have heaped up oblations, solicit his friendship, (the friendship) of you who have won all the riches (of the foe).

|| ಸಂಹಿತಾಪಾಠಃ ||

ವೃಷಾ ಪವಸ್ವ ಧಾರಯಾ ಮರುತ್ವತೇ ಚ ಮತ್ಸರಃ |
ವಿಶ್ವಾ ದಧಾನ ಓಜಸಾ || ೧೦ ||

|| ಪದಪಾಠಃ ||

ವೃಷಾ | ಪವಸ್ವ | ಧಾರಯಾ | ಮರುತ್ವತೇ | ಚ | ಮತ್ಸರಃ |
ವಿಶ್ವಾ | ದಧಾನಃ | ಓಜಸಾ || ೧೦ ||

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ವೃಷಾ ಸ್ತೋತೄಣಾಮಭಿಮತಫಲಸ್ಯ ವರ್ಷಕಃ ಸನ್ ಧಾರಯಾ ತ್ವದೀಯಯಾ ಪವಸ್ವ । ದ್ರೋಣಕಲಶಮಾಗಚ್ಛ । ಪವತಿರ್ಗತಿಕರ್ಮಾ । ಆಗತಸ್ತ್ವಂ ಯದಾಸ್ಮಾಭಿರಿಂದ್ರಾಯ ದೀಯಸೇ ತದಾ ಮರುತ್ವತೇ ಸಹಾಯಾ ಮರುತೋ ಯಸ್ಯ ಸಂತಿ ತಸ್ಮಾ ಇಂದ್ರಾಯ ಮತ್ಸರೋ ಮದಕರಶ್ಚ ಭವ । ಕೀದೃಶಃ । ವಿಶ್ವಾ ವಿಶ್ವಾನಿ ಸರ್ವಾಣಿ ವ್ಯಾಪ್ತಾನಿ ವಾ ಧನಾನ್ಯೋಜಸಾತ್ಮೀಯೇನ ಬಲೇನ ಯುಕ್ತಃ ಸನ್ ಸ್ತೋತೃಭ್ಯಸ್ತಾನಿ ದಧಾನಃ ಪ್ರಯಚ್ಛನ್ । ತ್ವಂ ಮಾದಯಿತಾ ಭವೇತಿ ಸಮನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ವೃಷಾ**—ಇಷ್ಟಾರ್ಥಪ್ರದನಾದ ನೀನು । **ಧಾರಯಾ**—ನಿನ್ನ ಪ್ರವಾಹರೂಪದಿಂದ । **ಪವಸ್ವ**—ದ್ರೋಣಕಲಶದ ಕಡೆಗೆ ಪ್ರವಹಿಸು । **ವಿಶ್ವಾ**—ಸಮಸ್ತವಾದ ಧನಗಳನ್ನೂ । **ಓಜಸಾ**—ನಿನ್ನ ವೀರ್ಯದ ಪ್ರಭಾವದಿಂದ । **ದಧಾನಃ**—ಹೊಂದಿರುವ ನೀನು । **ಮರುತ್ವತೇ**—ಮರುತ್ತುಗಳಿಂದ ಕೂಡಿದ ಇಂದ್ರನಿಗೆ । **ಮತ್ಸರಃ ಚ**—ಹರ್ಷಕಾರಕನಾಗಿರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಇಷ್ಟಾರ್ಥಪ್ರದನಾದ ನೀನು ನಿನ್ನ ಪ್ರವಾಹರೂಪದಿಂದ ದ್ರೋಣಕಲಶದ ಕಡೆಗೆ ಪ್ರವಹಿಸು. ಸಕಲ ಧನಗಳನ್ನೂ ನಿನ್ನ ವೀರ್ಯದ ಪ್ರಭಾವದಿಂದ ಹೊಂದಿರುವ ನೀನು ಮರುತ್ತುಗಳಿಂದ ಕೂಡಿದ ಇಂದ್ರನಿಗೆ ಹರ್ಷಕಾರಕನಾಗಿರು.

English Translation

Flow in a stream, you who are the showerer (of benefits): and (be) exhilarating to the lord of the Maruts, granting us all (wealth) by your power.

॥ ಸಂಹಿತಾಪಾಠಃ ॥

**ತಂ ತ್ವಾ ಧರ್ತಾರಮೋಣ್ಯೋ೩ಃ ಪವಮಾನ ಸ್ವರ್ದೃಶಂ ।**

**ಹಿನ್ವೇ ವಾಜೇಷು ವಾಜಿನಂ ॥ ೧೧ ॥**

॥ ಪದಪಾಠಃ ॥

**ತಂ । ತ್ವಾ । ಧರ್ತಾರಂ । ಓಣ್ಯೋಃ । ಪವಮಾನ । ಸ್ವಃऽದೃಶಂ ।**

**ಹಿನ್ವೇ । ವಾಜೇಷು । ವಾಜಿನಂ ॥ ೧೧ ॥**

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಪುನಾನ ವಾ ಹೇ ಸೋಮ ಓಣ್ಯೋಃ । ದ್ಯಾವಾಪೃಥಿವೀನಾಮೈತತ್ । ತಯೋರ್ಧರ್ತಾರಂ ಧಾರಕಂ ಅತ ಏವ ಸ್ವರ್ದೃಶಂ ಸ್ವರ್ಗಸ್ಯ ಸೂರ್ಯಸ್ಯ ವಾ ದ್ರಷ್ಟಾರಂ ಸರ್ವೈರ್ದೇವೈರ್ದ್ರಷ್ಟವ್ಯಂ ವಾ ವಾಜಿನಂ ಬಲವಂತಂ ಪೂರ್ವೋಕ್ತೈಗುಣಪ್ರಸಿದ್ಧಂ ತ್ವಾ ತ್ವಾಂ ವಾಜೇಷು ಸಂಗ್ರಾಮೇಷು ಹಿನ್ವೇ । ಪ್ರೇರಯಾಮಿ । ಯದ್ವಾ । ವಾಜೇಷ್ವನ್ನೇಷು ವಿಷಯೇಷು ಹಿನೋಮಿ । ಅನ್ನಾದಿಕಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪವಮಾನ**— ಶುದ್ಧಿಕಾರಕನಾದ ಎಲೈ ಸೋಮದೇವನೇ । **ಓಣ್ಯೋಃ**—ದ್ಯಾವಾಪೃಥಿವಿಗಳಿಗೆ । **ಧರ್ತಾರಂ**—ಧಾರಕನೂ । **ಸ್ವರ್ದೃಶಂ**—ಸಕಲವನ್ನೂ ನೋಡತಕ್ಕವನೂ । **ವಾಜಿನಂ**—ಶಕ್ತಿಯುತನೂ । **ತಂ**—ಪ್ರಸಿದ್ಧನೂ ಆದ । **ತ್ವಾ**—ನಿನ್ನನ್ನು । **ವಾಜೇಷು**—ಯುದ್ಧಗಳಲ್ಲಿ । **ಹಿನ್ವೇ**—ಪ್ರೇರಿಸುತ್ತೇನೆ.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ದ್ಯಾವಾಪೃಥಿವಿಗಳಿಗೆ ಧಾರಕನೂ, ಸಕಲವನ್ನೂ ನೋಡುವ ಶಕ್ತಿಯುಳ್ಳವನೂ, ಶಕ್ತಿಯುತನೂ, ಪ್ರಸಿದ್ಧನೂ ಆದ ನಿನ್ನನ್ನು ಯುದ್ಧಗಳಲ್ಲಿ ಪ್ರೇರಿಸುತ್ತೇನೆ.

English Translation.

You, the supporter of heaven and earth, O purified (Soma), the beholder of heaven, the powerful one, I send forth to battle.

॥ ಸಂಹಿತಾಪಾಠಃ ॥

ಅಯಾ ಚಿತ್ತೋ ವಿಪಾನಯಾ ಹರಿಃ ಪವಸ್ವ ಧಾರಯಾ ।
ಯುಜಂ ವಾಜೇಷು ಚೋದಯ ॥ ೧೨ ॥

॥ ಪದಪಾಠಃ ॥

ಅಯಾ । ಚಿತ್ತಃ । ವಿಪಾ । ಅನಯಾ । ಹರಿಃ । ಪವಸ್ವ । ಧಾರಯಾ ।
ಯುಜಂ । ವಾಜೇಷು । ಚೋದಯ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಅಯಾ ॥ ಅಯ ಪಯ ಗತೌ ॥ ಕರ್ಮಾರ್ಥಮಿತಸ್ತತೋ ಗಚ್ಛಂತೀಭಿರನಯಾ ವಿಪಾ ॥ ವಿಪ ಪ್ರೇರಣೇ । ಹವೀಂಷ್ಯಗ್ನೌ ಪ್ರೇರಯಂತೀತಿ ವಿಪೋಽಂಗುಲಯಃ । ಏಕವಚನಂ

ಛಾಂದಸಂ । ಪ್ರತ್ಯೇಕವಿವಕ್ಷಯಾ ವಾ ॥ ಏತಾಭಿರ್ಮದೀಯಾಭಿರಂಗುಲೀಭಿಶ್ಚಿತ್ರೋಽ ಜ್ಞಾತಃ । ನಿರ್ಗ-ತೋಽಭಿಷುತೋ ಹರಿರ್ಹರಿತವರ್ಣಸ್ತ್ವಂ ಧಾರಯಾ ಸಂತತಯಾ ಪವಸ್ವ । ದ್ರೋಣಕಲಶಂ ಗ್ರಹಾಂಶ್ಚಾ-ಗಚ್ಛ ತ್ವಂ । ಕಿಂಚ ಯುಜಂ ಸಖಾಯಮಿಂದ್ರಂ ವಾಜೇಷು ಸಂಗ್ರಾಮೇಷು ಚೋದಯ । ಪ್ರೇರಯ । ಯದಾಸ್ಮಾಭಿರಿಂದ್ರಾರ್ಥಂ ಸೋಮೋ ದೀಯತೇ ತದಾ ತತ್ಪಾನೇನ ಹೃಷ್ಟಃ ಸಞ್ಛತ್ರೂನ್ ಹಂತೀತ್ಯರ್ಥಃ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಅಯಾ ಅನಯಾ ವಿಪಾ—ಕರ್ಮನಿರತವಾದ ಈ ಬೆರಳುಗಳಿಂದ । ಚಿತ್ರಃ—ಹಿಂಡಲ್ಪಟ್ಟವನೂ । ಹರಿಃ—ಪಚ್ಚೆವರ್ಣವುಳ್ಳವನೂ ಆದ ನೀನು । ಧಾರಯಾ—ಧಾರಾರೂಪದಲ್ಲಿ । ಪವಸ್ವ—ಸ್ರವಿಸು । ಯುಜಂ—ಮಿತ್ರನಾದ ಇಂದ್ರನನ್ನು । ವಾಜೇಷು—ಯುದ್ಧಗಳಲ್ಲಿ । ಚೋದಯ—ಪ್ರೇರಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಕರ್ಮನಿರತವಾದ ಈ ಬೆರಳುಗಳಿಂದ ಹಿಂಡಲ್ಪಟ್ಟವನೂ, ಪಚ್ಚೆವರ್ಣವುಳ್ಳವನೂ ಆದ ನೀನು ಧಾರಾರೂಪದಲ್ಲಿ ಸ್ರವಿಸು. ಮಿತ್ರನಾದ ಇಂದ್ರನನ್ನು ಯುದ್ಧಗಳಲ್ಲಿ ಪ್ರೇರಿಸು.

English Translation

Expressed by these flexible fingers (of mine), do you who are green-tinted flow forth in a stream; excite (Indra) our ally to battle.

॥ ಸಂಹಿತಾಪಾಠಃ ॥

ಆ ನ ಇಂದೋ ಮಹೀಮಿಷಂ ಪವಸ್ವ ವಿಶ್ವದರ್ಶತಃ ।

ಅಸ್ಮಭ್ಯಂ ಸೋಮ ಗಾತುವಿತ್ ॥ ೧೩ ॥

॥ ಪದಪಾಠಃ ॥

ಆ । ನಃ । ಇಂದೋ ಇತಿ । ಮಹೀಂ । ಇಷಂ । ಪವಸ್ವ । ವಿಶ್ವಽದರ್ಶತಃ ।

ಅಸ್ಮಭ್ಯಂ । ಸೋಮ । ಗಾತುಽವಿತ್ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಕ್ಷರಣಶೀಲ ದೀಪನಶೀಲ ವಾ ಹೇ ಸೋಮ ವಿಶ್ವದರ್ಶತೋ ವಿಶ್ವೈಃ ಸರ್ವೈರ್ದ-ರ್ಶನೀಯಃ । ಯದ್ವಾ । ವಿಶ್ವಂ ಸರ್ವಂ ವಸ್ತುಜಾತಂ ದರ್ಶ್ಯತೇ ಜ್ಞಾಪ್ಯತೇಽನೇನೇತಿ । ಸ ವಿಶ್ವಸ್ಯ ಪ್ರಕಾಶಕ ಇತ್ಯರ್ಥಃ । ತಾದೃಶಸ್ತ್ವಂ ಮಹೀಮಿಷಂ ಮಹತ್ಪ್ರಭೂತಮನ್ನಂ ನೋಽಸ್ಮಭ್ಯಮಾ ಪವಸ್ವ ।

**ಆಗಮಯ । ಪ್ರಯಚ್ಛೇತ್ಯರ್ಥಃ । ಕಿಂಚ ಹೇ ಸೋಮಾಭಿಷೂಯಮಾಣ ಪವಮಾನ ಅಸ್ಮಭ್ಯಂ ಗಾತುವಿತ್ ಸ್ವರ್ಗಮಾರ್ಗಸ್ಯ ಲಂಭಯಿತಾ ಜ್ಞಾಪಯಿತಾ ಭವ ॥**

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ವಿಶ್ವದರ್ಶತಃ**—ಸಕಲವನ್ನೂ ನೋಡವ ಶಕ್ತಿಯುಳ್ಳ ನೀನು । **ಮಹೀಂ**—ಪ್ರಭೂತವಾದ । **ಇಷಂ**—ಅನ್ನವನ್ನು । **ನಃ**—ನಮಗೆ । **ಆ ಪವಸ್ವ**—ಒದಗಿಸಿಕೊಡು । **ಸೋಮ**—ಎಲೈ ಸೋಮದೇವನೇ । **ಅಸ್ಮಭ್ಯಂ**—ನಮಗೆ । **ಗಾತುವಿತ್**—ಸನ್ಮಾರ್ಗಪ್ರಾಪಕನಾಗಿರು.

॥ ಭಾವಾರ್ಥ ॥

ಎಲೈ ಸೊಮದೇವನೇ, ಸಕಲವನ್ನೂ ನೋಡುವ ಶಕ್ತಿಯುಳ್ಳ ನೀನು ನಮಗೆ ಪ್ರಭೂತವಾದ ಅನ್ನವನ್ನು ಕೊಡು. ಎಲೈ ಸೋಮನೇ, ನಮಗೆ ಸನ್ಮಾರ್ಗಪ್ರಾಪಕನಾಗಿರು.

English Translation

Swift-flowing Soma, who are the illuminator of the universe, pour down upon us abundant food, (and be) to us the revealer of the path (to heaven).

॥ ಸಂಹಿತಾಪಾಠಃ ॥

**ಆ ಕಲಶಾ ಅನೂಷತೇಂದೋ ಧಾರಾಭಿರೋಜಸಾ ।**
**ಏಂದ್ರಸ್ಯ ಪೀತಯೇ ವಿಶ ॥ ೧೪ ॥**

॥ ಪದಪಾಠಃ ॥

ಆ । ಕಲಶಾಃ । ಅನೂಷತ । ಇಂದೋ ಇತಿ । ಧಾರಾಭಿಃ । ಓಜಸಾ ।
ಆ । ಇಂದ್ರಸ್ಯ । ಪೀತಯೇ । ವಿಶ ॥ ೧೪ ॥

॥ ಸಾಯಣಭಾಷ್ಯಂ ॥

**ಹೇ ಇಂದೋ ಕ್ಷರಣಶೀಲ ಸೋಮ ಓಜಸಾ ಬಲೇನ ಯುಕ್ತಸ್ಯ ತವ ಧಾರಾಭಿರ್ನಿರಂತರಾಭಿಃ ಸಹಿತಾಃ ಕಲಶಾಃ ॥ ಪ್ರಯೋಗಬಾಹುಲ್ಯಾಪೇಕ್ಷಮೇತದ್ಬಹುವಚನಂ ॥ ದ್ರೋಣಕಲಶಾ ಅನೂಷತ । ಸ್ತೋತೃಭಿರಾಭಿಮುಖ್ಯೇನ ಸ್ತೂಯಂತೇ । ಸೋಮಾಭಿಷವಕಾಲೇ ಹ್ಯೃತ್ವಿಜಃ ಸ್ತುವಂತಿ ಖಲು । ತತಸ್ತ್ವಮಿಂದ್ರಸ್ಯ ಪೀತಯೇ ಪಾನಾಯಾ ವಿಶ । ಗೃಹಾಂಶ್ಚಮಸಾಂಶ್ಚ ಪ್ರವಿಶ ॥**

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ಓಜಸಾ—ಶಕ್ತಿಯುತನಾದ ನಿನ್ನ | ಧಾರಾಭಿಃ—ಧಾರೆಗಳಿಂದ ಕೂಡಿದ | ಕಲಶಾಃ—ದ್ರೋಣಕಲಶಗಳು | ಅ : ಅನೂಷತೆ—ಸ್ತೋತೃಗಳಿಂದ ಪ್ರಶಂಸಿತವಾಗುತ್ತವೆ | ಇಂದ್ರಸ್ಯ—ಇಂದ್ರನ | ಪೀತಯೇ—ಪಾನಾರ್ಥವಾಗಿ | ಆ ವಿಶ—ಚಮಸಪಾತ್ರೆಯನ್ನು ಪ್ರವೇಶಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಶಕ್ತಿಯುತನಾದ ನಿನ್ನ ಧಾರೆಗಳಿಂದ ಕೂಡಿದ ದ್ರೋಣಕಲಶಗಳು ಸ್ತೋತೃಗಳಿಂದ ಪ್ರಶಂಸಿತವಾಗುತ್ತವೆ. ಎಲೈ ಸೋಮನೇ, ಇಂದ್ರನ ಪಾನಾರ್ಥವಾಗಿ ಚಮಸಪಾತ್ರೆಯನ್ನು ಪ್ರವೇಶಿಸು.

English Translation.

Indu, they praise the vessels together with your streams (who are endowed) with strength ; enter for Indra's drinking.

|| ಸಂಹಿತಾಪಾಠಃ ||

ಯಸ್ಯ ತೇ ಮದ್ಯಂ ರಸಂ ತೀವ್ರಂ ದುಹಂತ್ಯದ್ರಿಭಿಃ |
ಸ ಪವಸ್ವಾಭಿಮಾತಿಹಾ || ೧೫ ||

|| ಪದಪಾಠಃ ||

ಯಸ್ಯ | ತೇ | ಮದ್ಯಂ | ರಸಂ | ತೀವ್ರಂ | ದುಹಂತಿ | ಅದ್ರಿಽಭಿಃ |
ಸಃ | ಪವಸ್ವ | ಅಭಿಮಾತಿಽಹಾ || ೧೫ ||

|| ಸಾಯಣಭಾಷ್ಯಂ ||

ಹೇ ಸೋಮ ಯಸ್ಯ ತೇ ತವ ಮದ್ಯಂ ಮದಕರಂ ತೀವ್ರಂ ಕ್ಷಿಪ್ರಂ ಮದಕಾರಿಣಂ ರಸಮದ್ರಿಭಿ-ರ್ಗ್ರಾವಭಿರಧ್ವರ್ಯವೋ ದುಹಂತಿ ಅಭಿಷುಣ್ವಂತಿ ಸ ತಾದೃಶಸ್ತ್ವಮಭಿಮಾತಿಹಾ | ಅಭಿತೋ ಮಾತಿರಭಿಮಾನಂ ಯೇಷಾಂ ತೇ ಶತ್ರವಃ| ಪಾಪರೂಪಾಣಾಂ ಶತ್ರೂಣಾಂ ಹಂತಾ ಸನ್ ಪವಸ್ವ| ಸರ್ವತೋ ಗಚ್ಛ | ಯೇಽಭಿಷುಣ್ವಂತಿ ತೇ ಪಾಪರಹಿತಾಃ ಸುಕೃತಿನೋ ಭವಂತೀತ್ಯರ್ಥಃ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ಯಸ್ಯ ತೇ—ಯಾವ ನಿನ್ನ | ಮದ್ಯಂ—ಹರ್ಷಕಾರಕವೂ | ತೀವ್ರಂ—ತೀಕ್ಷ್ಣವಾದುದೂ ಆದ | ರಸಂ—ರಸವನ್ನು | ಅದ್ರಿಭಿಃ—ಹಿಂಡುವ ಕಲ್ಲುಗಳಿಂದ | ದುಹಂತಿ—ಅಧ್ವರ್ಯುಗಳು

ಹಿಂಡುವರೋ | **ಸಃ**—ಅಂತಹ ನೀನು | **ಅಭಿಮಾತಿಹಾ**—ಶತ್ರುನಾಶಕನಾಗಿದ್ದುಕೊಂಡು | **ಪವಸ್ವ**—ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವ ನಿನ್ನ ಹರ್ಷಕಾರಕವೂ ತೀಕ್ಷ್ಣವಾದುದೂ ಆದ ರಸವನ್ನು ಹಿಂಡುವ ಕಲ್ಲುಗಳಿಂದ ಅಧ್ವರ್ಯುಗಳು ಹಿಂಡುವರೋ ಅಂತಹ ನೀನು ಶತ್ರುನಾಶಕನಾಗಿದ್ದುಕೊಂಡು ಪ್ರವಹಿಸು.

English Translation

Do you whose sharp exhilarating juice the priest express with the stones, flow the destroyer of the evil-minded.

|| ಸಂಹಿತಾಪಾಠಃ ||

ರಾಜಾ ಮೇಧಾಭಿರೀಯತೇ ಪವಮಾನೋ ಮನಾವಧಿ |

ಅಂತರಿಕ್ಷೇಣ ಯಾತವೇ || ೧೬ ||

|| ಪದಪಾಠಃ ||

ರಾಜಾ | ಮೇಧಾಭಿಃ | ಈಯತೇ | ಪವಮಾನಃ | ಮನೌ | ಅಧಿ |

ಅಂತರಿಕ್ಷೇಣ | ಯಾತವೇ || ೧೬ ||

| ಸಾಯಣಭಾಷ್ಯಂ ||

ಮನೌ ಮನುಷ್ಯೇ ಯಾಗಂ ಕುರ್ವಾಣೇ ಸತಿ | ಯದ್ವಾ | ಮನಾವಧಿ | ಮನುರ್ಮಂತವ್ಯೋ-ಯಜ್ಞಃ | ತಸ್ಮಿನ್ಪವಮಾನಃ ಪೂಯಮಾನಃ ಪುನಾನೋ ವಾ ರಾಜಾ | ರಾಜಶಬ್ದೇನ ಸೋಮೋಽಭಿಧೀ-ಯತೇ | ಸೋಮಂ ರಾಜಾನಮನುಕ್ರೀಣನ್ನಿತ್ಯಾದಿಷು ದೃಷ್ಟತ್ವಾತ್ | ಸ ರಾಜಾ ಮೇಧಾಭಿಃ ಸ್ತುತಿಭಿಃ ಸಹೇಯತೇ | ಗಚ್ಛತಿ | ಕಿಮರ್ಥಂ | ಅಂತರಿಕ್ಷೇಣಾಕಾಶಮಾರ್ಗೇಣ ದ್ರೋಣಕಲಶಂ ಪ್ರತಿ ಯಾತವೇ ಯಾತುಂ | ದ್ರೋಣಾಭಿಗಮನಕಾಲೇ ಹಿ ಸ್ತೋತೃಭಿಃ ಸ್ತೂಯತೇ ಖಲು ||

|| ಪ್ರತಿಪದಾರ್ಥ ||

**ಮನೌ ಅಧಿ**—ಯಜ್ಞಕಾಲದಲ್ಲಿ | **ಪವಮಾನಃ**—ಶುದ್ಧಿಕಾರಕನಾದವನೂ | **ರಾಜಾ**—ಪ್ರಭುವೂ ಆದ ಸೋಮನು | **ಅಂತರಿಕ್ಷೇಣ**—ಅಂತರಿಕ್ಷಮಾರ್ಗದಿಂದ | **ಯಾತವೇ**—ದ್ರೋಣಕಲಶಕ್ಕೆ ಹೋಗಿ ಸೇರಲು | **ಮೇಧಾಭಿಃ**—ಸ್ತುತಿಗಳೊಡನೆ | **ಈಯತೇ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಶುದ್ಧಿಕಾರಕನೂ, ಪ್ರಭುವೂ ಆದ ಸೋಮನು ಯಜ್ಞಕಾಲದಲ್ಲ ದ್ರೋಣಕಲಶಕ್ಕೆ ಹೋಗಿ ಸೇರಲು ಸ್ತುತಿಗಳೊಡನೆ ಅಂತರಿಕ್ಷಮಾರ್ಗದಿಂದ ಸಂಚರಿಸುತ್ತಾನೆ.

**English Translation.**

The king (Soma) purified at the sacrifice is urged by the priests to pass through the firmament.

॥ ಸಂಹಿತಾಪಾಠಃ ॥

ಆ ನ ಇಂದೋ ಶತಗ್ವಿನಂ ಗವಾಂ ಪೋಷಂ ಸ್ವಶ್ವ್ಯಂ ।
ವಹಾ ಭಗತ್ತಿಮೂತಯೇ ॥ ೧೭ ॥

॥ ಪದಪಾಠಃ ॥

ಆ । ನಃ । ಇಂದೋ ಇತಿ । ಶತಽಗ್ವಿನಂ । ಗವಾಂ । ಪೋಷಂ । ಸುಽಅಶ್ವ್ಯಂ ।
ವಹ । ಭಗತ್ತಿಂ । ಊತಯೇ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಪಾತ್ರೇಷು ಕ್ಷರಣಶೀಲ ದೀಪನಶೀಲ ವಾ ಹೇ ಸೋಮ ಶತಗ್ವಿನಂ ಶತಸಹಸ್ರಸಂಖ್ಯಾಭಿರ್ಗೋಭಿರ್ಯುಕ್ತಂ ಗವಾಂ ಪೋಷಂ ಗವಾದೀನಾಂ ಪುಷ್ಟಿವರ್ಧನಂ ಸ್ವಶ್ವ್ಯಂ ಶೋಭನಾಶ್ವಸಂಗಸಹಿತಂ ಭಗತ್ತಿಂ ಭಗದತ್ತಿಂ ಭಜನೀಯಧನದಾನಂ ಚೋತಯೇ ರಕ್ಷಣಾಯ ನೋಽಸ್ಮಾಕಮಾವಹ । ಪ್ರಾಪಯ । ಗವಾದೀಂಶ್ಚ ತೇಷಾಂ ಚ ವೃದ್ಧಿಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ನಃ**—ನಮ್ಮ । **ಊತಯೇ**—ರಕ್ಷಣಾರ್ಥವಾಗಿ । **ಶತಗ್ವಿನಂ**—ಅನೇಕ ಗೋವುಗಳಿಂದ ಕೂಡಿದುದೂ । **ಗವಾಂ**—ಗೋವುಗಳಿಗೆ । **ಪೋಷಂ**—ಪುಷ್ಟಿದಾಯಕವಾದುದೂ । **ಸ್ವಶ್ವ್ಯಂ**—ಉತ್ತಮವಾದ ಅಶ್ವಗಳಿಂದ ಕೂಡಿದುದೂ । **ಭಗತ್ತಿಂ**—ಪೂಜ್ಯವೂ ಆದ ಧನವನ್ನು । **ಆ ವಹ**—ನಮಗೆ ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ರಕ್ಷಣಾರ್ಥವಾಗಿ, ಅನೇಕ ಗೋವುಗಳಿಂದ ಕೂಡಿದುದೂ, ಗೋವುಗಳಿಗೆ ಪುಷ್ಟಿದಾಯಕವಾದುದೂ, ಉತ್ತಮವಾದ ಅಶ್ವಗಳಿಂದ ಕೂಡಿದುದೂ ಆದ ಧನವನ್ನು ನಮಗೆ ಒದಗಿಸು.

### English Translation

Bring to us, Indu, for our protection increase of cows with **hun dreds** of cattle and a gift of fortune with beautiful horses.

|| ಸಂಹಿತಾಪಾಠಃ ||

**ಆ ನಃ ಸೋಮ ಸಹೋ ಜುವೋ ರೂಪಂ ನ ವರ್ಚಸೇ ಭರ ।**

**ಸುಷ್ವಾಣೋ ದೇವವೀತಯೇ || ೧೮ ||**

|| ಪದಪಾಠಃ ||

**ಆ । ನಃ । ಸೋಮ । ಸಹಃ । ಜುವಃ । ರೂಪಂ । ನ । ವರ್ಚಸೇ । ಭರ ।**

**ಸುಸ್ವಾನಃ । ದೇವವೀತಯೇ || ೧೮ ||**

|| ಸಾಯಣಭಾಷ್ಯಂ ||

**ಹೇ ಸೋಮ ದೇವವೀತಯೇ ದೇವಪಾನಾಯ ದೇವಾನಾಂ ಕಾಮಾಯ ವಾ ಸುಷ್ವಾಣೋಽಭಿಷೂಯಮಾಣೋಽಭಿಷುತೋ ಭವ ತ್ವಂ । ಸಹಃ ಶತ್ರ್ವಭಿಭವನಸಮರ್ಥಂ ಬಲಂ ಜುವಃ । ಜು ಇತಿ ಗತ್ಯರ್ಥಃ । ಶತ್ರೂನ್ಪ್ರತಿ ಶೀಘ್ರಗಮನಂ ಚ । ಯದ್ವಾ । ಸರ್ವತೋ ಗಮನಶೀಲಂ । ಕಿಂಚ । ನೇತಿ ಚಾರ್ಥೇ । ವರ್ಚಸೇ || ವರ್ಚ ದೀಪ್ತೌ || ದೀಪ್ತ್ಯೈ ಸರ್ವತ್ರ ಪ್ರಕಾಶನಾಯ ರೂಪಂ ಚ ನೋಽಸ್ಮಭ್ಯಮಾ ಭರ । ಆಹರ । ಪ್ರಯಚ್ಛ ||**

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ದೇವವೀತಯೇ**—ದೇವತೆಗಳ ಪಾನಾರ್ಥವಾಗಿ । **ಸುಷ್ವಾಣಃ**—ಹಿಂಡಲ್ಪಡುವವನಾಗು । **ನಃ**—ನಮಗೆ । **ಸಹಃ**—ಶತ್ರುನಾಶಕವಾದ ಬಲವನ್ನೂ । **ಜುವಃ**—ಗಮನ ವೇಗವನ್ನೂ । **ವರ್ಚಸೇ**—ಪ್ರಕಾಶಸಾಧನವಾದ । **ರೂಪಂ**—ರೂಪವನ್ನೂ । **ಆ ಭರ**—ಒದಗಿಸು.

|| ಭಾವಾರ್ಥ ||

ಎಲೈ ಸೊಮದೇವನೇ, ದೇವತೆಗಳ ಪಾನಾರ್ಥವಾಗಿ ನೀನು ಹಿಂಡಲ್ಪಡುವುವವನಾಗು. ನಮಗೆ ಶತ್ರು**ನಾಶಕ**ವಾದ ಬಲವನ್ನೂ, ಸರ್ವತ್ರ ಸಂಚರಿಸುವ ವೇಗವನ್ನೂ, ಪ್ರಕಾಶಸಾಧನವಾದ ಉತ್ತಮರೂಪವನ್ನೂ **ಒದಗಿಸು.**

### English Translation.

(Be) expressed for the banquet of the gods: bestow on us, **Soma,** strength, speed and a form for brilliance.

|| ಸಂಹಿತಾಪಾಠಃ ||

ಅರ್ಷಾ ಸೋಮ ದ್ಯುಮತ್ತಮೋಽಭಿ ದ್ರೋಣಾನಿ ರೋರುವತ್ ।

ಸೀದಞ್ಛ್ಯೇನೋ ನ ಯೋನಿಮಾ ॥ ೧೯ ॥

|| ಪದಪಾಠಃ ||

ಅರ್ಷ । ಸೋಮ । ದ್ಯುಮತ್ಽತಮಃ । ಅಭಿ । ದ್ರೋಣಾನಿ । ರೋರುವತ್ ।

ಸೀದನ್ । ಶ್ಯೇನಃ । ನ । ಯೋನಿಂ । ಆ ॥ ೧೯ ॥

|| ಸಾಯಣಭಾಷ್ಯಂ ||

ಹೇ ಸೋಮಾಭಿಷೂಯಮಾಣ ಪವಮಾನ ದ್ಯುಮತ್ತಮೋಽತಿಶಯೇನ ದೀಪ್ತಿಮಾಂಸ್ತ್ವಂ ದ್ರೋಣಾನಿ ॥ ಪ್ರಯೋಗಬಾಹುಲ್ಯಾಪೇಕ್ಷಮೇತದ್ಬಹುವಚನಂ ॥ ದ್ರೋಣಾನಭಿ ಲಕ್ಷೀಕೃತ್ಯ ರೋರುವತ್ಪುನಃಪುನರ್ಭೃಶಂ ವಾ ಶಬ್ದಂ ಕುರ್ವನ್ನರ್ಷ । ತಾನಾಗಚ್ಛ । ದಶಾಪವಿತ್ರಮಧ್ಯಾನ್ನಿರ್ಗತಃ ಸೋಮೋಽವಿಚ್ಛಿನ್ನಧಾರಯಾ ದ್ರೋಣಕಲಶೇ ಪತಞ್ಛಬ್ದಂ ಕರೋತಿ ಖಲು । ತತ್ರ ದೃಷ್ಟಾಂತಃ । ಶ್ಯೇನೋ ನ ಯಥಾ ಸೀದನ್ ಸರ್ವತೋ ಗಚ್ಛಞ್ಛ್ಯೇನಃ ಶಂಸನೀಯಗತಿಃ ಪಕ್ಷೀ ಯೋನಿಂ ಸ್ವಸ್ಥಾನಂ ಕುಲಾಯಂ ಪ್ರತಿ ಭೃಶಂ ಶಬ್ದಾಯಮಾನಃ ಸನ್ನಾಗಚ್ಛತಿ ತದ್ವತ್ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಯೋನಿಂ** – ತನ್ನ ಗೂಡಿಗೆ ಸೇರಲು । **ಆ ಸೀದನ್** —ಪ್ರಶಸ್ಯವಾದ ಗಮನವುಳ್ಳ । **ಶ್ಯೇನೋ ನ**—ಶ್ಯೇನಪಕ್ಷಿಯು ವೇಗವಾಗಿಯೂ ಶಬ್ದ ಮಾಡುತ್ತಲೂ ಹೋಗುವಂತೆ । **ದ್ಯುಮತ್ತಮಃ**—ಅತಿಶಯವಾದ ಕಾಂತಿಯುಳ್ಳ ನೀನು । **ದ್ರೋಣಾನಿ ಅಭಿ**—ದ್ರೋಣಕಲಶಗಳಿಗೆ ಅಭಿಮುಖವಾಗಿ । **ರೋರುವತ್**—ಶಬ್ದಮಾಡುತ್ತಾ । **ಅರ್ಷ**—ಸಂಚರಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ತನ್ನ ಗೂಡಿಗೆ ಸೇರುವಾಗ ಪ್ರಶಸ್ಯವಾದ ಗಮನವುಳ್ಳ ಶ್ಯೇನಪಕ್ಷಿಯು ವೇಗವಾಗಿಯೂ ಶಬ್ದಮಾಡುತ್ತಲೂ ಹೋಗುವಂತೆ ಅತಿಶಯವಾದ ಕಾಂತಿಯುಳ್ಳ ನೀನು ದ್ರೋಣಕಲಶಗಳಿಗೆ ಅಭಿಮುಖನಾಗಿ ಶಬ್ದ ಮಾಡುತ್ತಾ ಸಂಚರಿಸು.

## English Translation.

Hasten, Soma, who are most radiant, with a roar to the wooden vessels; as a hawk flying to its nest.

॥ ಸಂಹಿತಾಪಾಠಃ ॥

ಅಪ್ಸಾ ಇಂದ್ರಾಯ ವಾಯವೇ ವರುಣಾಯ ಮರುದ್ಭ್ಯಃ ।
ಸೋಮೋ ಅರ್ಷತಿ ವಿಷ್ಣವೇ ॥ ೨೦ ॥

॥ ಪದಪಾಠಃ ॥

ಅಪ್ಸಾಃ । ಇಂದ್ರಾಯ । ವಾಯವೇ । ವರುಣಾಯ । ಮರುತ್ऽಭ್ಯಃ ।
ಸೋಮಃ । ಅರ್ಷತಿ । ವಿಷ್ಣವೇ ॥ ೨೦ ॥

॥ ಸಾಯಣಭಾಷ್ಯಂ ॥

ಅಪ್ಸಾ ವಸತೀವರೀನಾಮಧೇಯಾನಾಮಪಾಂ ಸಂಭಕ್ತಾ ॥ ಷಣ ಸಂಭಕ್ತೌ । ಜನಸನೇತಿ ವಿಟ್ । ಆತ್ವಂ ವಿಡ್ವನೋರಿತಿ ॥ ತಾದೃಶಃ ಸೋಮೋऽರ್ಷತಿ । ದ್ರೋಣಕಲಶಮಾಗಚ್ಛತಿ । ಕಿಮರ್ಥಂ । ಇಂದ್ರಾಯ । ಸರ್ವದೇವಾನಾಂ ಪ್ರಥಮ ಏವೇಂದ್ರಃ ಸೋಮಂ ಪಿಬತಿ ತಸ್ಮಾತ್ಪೂರ್ವಮೇವಾಭಿಹಿತಃ । ತಸ್ಮೈ ವಾಯವೇ ತತ್ಸಹಾಯಾಯ ಚ । ಐಂದ್ರವಾಯವೇ ಹೀಂದ್ರಸ್ಯಾನಂತರಂ ವಾಯುಃ ಸೋಮಂ ಪಿಬತಿ ತಸ್ಮಾತ್ತದನು ವಾಯುರುಕ್ತಃ । ತಸ್ಮೈ ಚ ವರುಣಾಯ ಮರುದ್ಭ್ಯೋ ಮಿತಂ ಶಬ್ದಂ ಕುರ್ವದ್ಭ್ಯ ಏತನ್ನಾಮಕೇಭ್ಯೋ ದೇವೇಭ್ಯೋ ವಿಷ್ಣವೇ ಸರ್ವಜಗದ್ವ್ಯಾಪಿನೇ ವಿಷ್ಣವೇ ಚ । ಏತೇಷಾಂ ಪಾತುಂ ಸೋಮಃ ಸ್ರವತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಪ್ಸಾಃ**—ವಸತಿವರೀಸಂಜ್ಞಕವಾದ ಉದಕದೊಡನೆ ಸೇರಿಕೊಳ್ಳುವ । **ಸೋಮಃ**—ಸೋಮನು । **ಇಂದ್ರಾಯ**—ಇಂದ್ರನಿಗೂ । **ವಾಯವೇ**—ವಾಯುವಿಗೂ । **ವರುಣಾಯ**—ವರುಣನಿಗೂ । **ಮರುದ್ಭ್ಯಃ**—ಮರುತ್ತುಗಳಿಗೂ । **ವಿಷ್ಣವೇ**—ವಿಷ್ಣುವಿಗೂ ಪಾನಕ್ಕೆ ಯೋಗ್ಯವಾಗಲು । **ಅರ್ಷತಿ**—ದ್ರೋಣಕಲಶಕ್ಕೆ ಹೋಗಿ ಸೇರಿಕೊಳ್ಳುತ್ತಾನೆ.

॥ ಭಾವಾರ್ಥ ॥

ವಸತೀವರೀಸಂಜ್ಞವಾದ ಉದಕದೊಡನೆ ಸೇರಿಕೊಳ್ಳುವ ಸೋಮನು, ಇಂದ್ರ, ವಾಯು, ಮರುತ್ತುಗಳು, ವರುಣ ಮತ್ತು ವಿಷ್ಣು ಈ ದೇವತೆಗಳ ಪಾನಕ್ಕೆ ಯೋಗ್ಯವಾಗಲು ದ್ರೋಣಕಲಶಕ್ಕೆ ಹೋಗಿ ಸೇರಿಕೊಳ್ಳುತ್ತಾನೆ.

## English Translation.

Soma, the enjoyer of the water, hasten (to the vessels) for Indra, Vayu, Varuna, the Maruts, and Vishnu.

|| ಸಂಹಿತಾಪಾಠಃ ||

ಇಷಂ ತೋಕಾಯ ನೋ ದಧದಸ್ಮಭ್ಯಂ ಸೋಮ ವಿಶ್ವತಃ ।

ಆ ಪವಸ್ವ ಸಹಸ್ರಿಣಂ || ೨೧ ||

|| ಪದಪಾಠಃ ||

ಇಷಂ । ತೋಕಾಯ । ನಃ । ದಧತ್ । ಅಸ್ಮಭ್ಯಂ । ಸೋಮ । ವಿಶ್ವತಃ ।

ಆ । ಪವಸ್ವ । ಸಹಸ್ರಿಣಂ || ೨೧ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ನೋಽಸ್ಮಾಕಂ ತೋಕಾಯ ಪುತ್ರಾಯೇಷಮನ್ನಂ ದಧದ್ದಿದಧತ್ಪ್ರಯಚ್ಛನ್ ಸಹಸ್ರಿಣಂ ಸಹಸ್ರಸಂಖ್ಯಾಕಂ ಧನಂ ವಿಶ್ವತಃ ಸರ್ವತೋ ದಿಕ್ಷ್ವಸ್ಮಭ್ಯಂ ಚಾ ಪವಸ್ವ । ಆ ಪ್ರಯಚ್ಛ। ಅಸ್ಮಭ್ಯಂ ಪುತ್ರಾಯ ಚಾನ್ನಧನಾದಿಕಂ ಪ್ರಯಚ್ಛೇತ್ಯರ್ಥಃ ||

|| ಪ್ರತಿಪದಾರ್ಥ ||

ಸೋಮ—ಎಲೈ ಸೋಮ ದೇವನೇ । ನಃ—ನಮ್ಮ । ತೋಕಾಯ—ಪುತ್ರರಿಗೆ । ಇಷಂ—ಅನ್ನವನ್ನು । ದಧತ್—ಕೊಡುತ್ತ । ಅಸ್ಮಭ್ಯಂ—ನಮಗೆ । ವಿಶ್ವತಃ—ಎಲ್ಲಾ ಕಡೆಗಳಿಂದಲೂ । ಸಹಸ್ರಿಣಂ—ಸಹಸ್ರ ಸಂಖ್ಯಾಕವಾದ ಧನವನ್ನು । ಆ ಪವಸ್ವ—ತುಂಬುವಂತೆ ಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ನಮ್ಮ ಪುತ್ರರಿಗೆ ಅನ್ನವನ್ನು ಕೊಡುತ್ತ ನಮಗೆ ಎಲ್ಲ ಕಡೆಗಳಿಂದಲೂ ಸಹಸ್ರ ಸಂಖ್ಯಾಕವಾದ ಧನವನ್ನು ಒದಗಿಸಿ ಕೊಡು.

English Translation.

Bestowing food upon our offspring, Soma, pour from all quarters thousand-fold (wealth).

|| ಸಂಹಿತಾಪಾಠಃ ||

ಯೇ ಸೋಮಾಸಃ ಪರಾವತಿ ಯೇ ಅರ್ವಾವತಿ ಸುನ್ವಿರೇ ।

ಯೇ ವಾದಃ ಶರ್ಯಣಾವತಿ || ೨೨ ||

॥ ಪದಪಾಠಃ ॥

ಯೇ । ಸೋಮಾಸಃ । ಪರಾಽವತಿ । ಯೇ । ಅರ್ವಾಽವತಿ । ಸುನ್ವಿರೇ ।

ಯೇ । ವಾ । ಅದಃ । ಶರ್ಯಣಾಽವತಿ ॥ ೨೨ ॥

॥ ಸಾಯಣಭಾಷ್ಯಂ ॥

ಏತದಾದಿಭ್ಯಾಮೃಗ್ಭ್ಯಾಮಿಂದ್ರಾರ್ಥಂ ಸರ್ವತ್ರ ಸೋಮಾಭಿಷವೋಽಸ್ತೀತ್ಯಾಹ । ಯೇ ಸೋಮಾಸಃ ಸೋಮಾಃ ಪರಾವತಿ ವಿಪ್ರಕೃಷ್ಟೇಽತಿದೂರೇ ದೇಶೇ ಯೇ ವಾರ್ವಾವತ್ಯಂತಿಕೇ ದೇಶ ಇಂದ್ರಾರ್ಥಂ ಸುನ್ವಿರೇ ಅಭಿಷೂಯಂತೇ ಅಭ್ಯಷೂಯಂತ ಯೇ ವಾ ಶರ್ಯಣಾವತಿ । ಕುರುಕ್ಷೇತ್ರಸ್ಯ ಜಘನಾರ್ಧೇ ಶರ್ಯಣಾವತ್ಸಂಜ್ಞಕಂ ಮಧುರರಸಯುಕ್ತಂ ಸೋಮವತ್ಸರೋಽಸ್ತಿ । ಅದೋಽಸ್ಮಿನ್ಸರಸಿ ಸುರಸಾ ಯೇ ಸೋಮಾ ಇಂದ್ರಾಯಾಭಿಷೂಯಂತೇ ತೇಽಸ್ಮಾಕಮಭಿಮತಫಲಂ ಪ್ರಯಚ್ಛಂತ್ವಿತಿ ವಕ್ಷ್ಯಮಾಣೇನ ಸಂಬಂಧಃ ॥

॥ ಪ್ರತಿಪದಾರ್ಥ ॥

ಯೇ ಸೋಮಾಸಃ— ಯಾವ ಸೋಮರಸಗಳು । ಪರಾವತಿ— ಅತ್ಯಂತ ದೂರದೇಶದಲ್ಲಿಯೂ । ಯೇ— ಯಾವುವು । ಅರ್ವಾವತಿ— ಸಮೀಪಪ್ರದೇಶದಲ್ಲಿಯೂ । ಸುನ್ವಿರೆ— ಹಿಂಡಲ್ಪಡುವುವೋ । ಯೇ ವಾ— ಯಾವುವು । ಶರ್ಯಣಾವತಿ— ಶರ್ಯಣಾವತ್ತವೆಂಬ । ಅದಃ— ಈ ಸರಸ್ಸಿನಲ್ಲಿ ಲಬ್ಧವಾಗುವುವೋ ಅವೆಲ್ಲವೂ ನಮ್ಮ ಇಷ್ಟಾರ್ಥಸಾಧಕಗಳಾಗಲಿ.

॥ ಭಾವಾರ್ಥ ॥

ಯಾವ ಸೋಮರಸಗಳು ಅತ್ಯಂತ ದೂರದೇಶದಲ್ಲಿಯೂ ಯಾವುವು ಅತ್ಯಂತ ಸಮೀಪದಲ್ಲಿಯೂ ಇಂದ್ರಾರ್ಥವಾಗಿ ಹಿಂಡಲ್ಪಡವುವೋ ಯಾವುವು ಶರ್ಯಣಾವತ್ತವೆಂಬ ಈ ಸರಸ್ಸಿನಲ್ಲಿ ಲಬ್ಧವಾಗುವುವೋ ಅವೆಲ್ಲವೂ ನಮ್ಮ ಇಷ್ಟಾರ್ಥಪ್ರದವಾಗಲಿ.

## English Translation.

May those Soma-juices which are effused at a distance or nigh or on this Sharyanavat (lake).—

॥ ಸಂಹಿತಾಪಾಠಃ ॥

ಯ ಆರ್ಜೀಕೇಷು ಕೃತ್ವಸು ಯೇ ಮಧ್ಯೇ ಪಸ್ತ್ಯಾನಾಂ ।

ಯೇ ವಾ ಜನೇಷು ಪಂಚಸು ॥ ೨೩ ॥

॥ ಪದಪಾಠಃ ॥

ಯೇ । ಆರ್ಜೀಕೇಷು । ಕೃತ್ವಽಸು । ಯೇ । ಮಧ್ಯೇ । ಪಸ್ತ್ಯಾನಾಂ ।
ಯೇ । ವಾ । ಜನೇಷು । ಪಂಚಽಸು ॥ ೨೩ ॥

॥ ಸಾಯಣಭಾಷ್ಯಂ ॥

ಯೇ ವಾ ಸೋಮಾ ಆರ್ಜೀಕೇಷು । ಋಜೀಕಾನಾಮದೂರಭವಾ ಆರ್ಜೀಕಾ ದೇಶಾಃ । ತೇಷು ತಥಾ ಕೃತ್ವಸು । ಕೃತ್ವಾನ ಇತಿ ದೇಶಾಭಿಧಾನಂ । ತೇಷು ಕರ್ಮವತ್ಸು ದೇಶೇಷು ಚ ಕಿಂಚ ಪಸ್ತ್ಯಾನಾಂ ಸರಸ್ವತ್ಯಾದೀನಾಂ ನದೀನಾಂ ಮಧ್ಯೇ ಸಮೀಪೇ ಚ ಯೇ ಸೋಮಾ ಅಭಿಷೂಯಂತೇ । ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ । ಐ. ಬ್ರಾ. ೨-೧೯ । ಇತ್ಯಾದಿಷು ನದೀತೀರೇ ಯಜ್ಞಕರಣಸ್ಯ ಶ್ರವಣಾತ್। ಕಿಂಚ ಜನೇಷು ಪಂಚಸು । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚ ಜನಾಃ । ತೇಷು ಚ ಯೇ ವಾ ಸೋಮಾ ಅಭಿಷುತಾಃ ತೇ ಸೋಮಾ ಅಸ್ಮಾಕಮಭಿಮತಂ ಪ್ರಯಚ್ಛಂತ್ವಿತ್ಯುತ್ತರೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಯೇ—ಯಾವ ಸೋಮರಸಗಳು । ಆರ್ಜೀಕೇಷು—ಆರ್ಜೀಕದೇಶಗಳಲ್ಲಿಯೂ । ಕೃತ್ವಸು—ಕರ್ಮಸ್ಥಾನವಾದ ಕೃತ್ವದೇಶಗಳಲ್ಲೂ ಲಭಿಸುವುವೋ । ಯೇ—ಯಾವ ರಸಗಳು । ಪಸ್ತ್ಯಾನಾಂ—ಸರಸ್ವತ್ಯಾದಿ ನದಿಗಳ । ಮಧ್ಯೇ—ಸಮೀಪದಲ್ಲಿ ಲಭಿಸುವುವೋ । ಯೇ ವಾ—ಯಾವ ರಸಗಳು । ಪಂಚಸು ಜನೇಷು—ನಿಷಾದಾದಿ ಪಂಚವರ್ಣಾತ್ಮಕರಾದ ಜನರಲ್ಲೂ ಇಂದ್ರಾರ್ಥವಾಗಿ ಹಿಂಡಲ್ಪಡುವುವೋ ಆ ಸೋಮರಸಗಳು ನಮ್ಮ ಇಷ್ಟಾರ್ಥಪ್ರದವಾಗಲಿ.

॥ ಭಾವಾರ್ಥ ॥

ಯಾವ ಸೋಮರಸಗಳು ಆರ್ಜೀಕದೇಶಗಳಲ್ಲೂ ಕರ್ಮಸ್ಥಾನವಾದ ಕೃತ್ವದೇಶಗಳಲ್ಲಿಯೂ ಲಭಿಸುವುವೋ, ಯಾವ ರಸಗಳು ಸರಸ್ವತ್ಯಾದಿನದಿಗಳ ಸಮೀಪದಲ್ಲಿ ಲಭಿಸುವುವೋ, ಯಾವ ರಸಗಳು ನಿಷಾದಾದಿ ಪಂಚವರ್ಣಾತ್ಮಕರಾದ ಜನರಲ್ಲೂ ಇಂದ್ರಾರ್ಥವಾಗಿ ಹಿಂಡಲ್ಪಡುವುವೋ ಆ ಸೋಮರಸಗಳು ನಮ್ಮ ಇಷ್ಟಾರ್ಥಪ್ರದವಾಗಲಿ.

## English Translation.

Or amongst the Rijikas, or the Kritwas, or in ihe neighbourhood of the rivers Sarasvati, etc., or in the five castes.—

॥ ಸಂಹಿತಾಪಾಠಃ ॥

ತೇ ನೋ ವೃಷ್ಟಿಂ ದಿವಸ್ಪರಿ ಪವಂತಾಮಾ ಸುವೀರ್ಯಂ ।
ಸುವಾನಾ ದೇವಾಸ ಇಂದವಃ ॥ ೨೪ ॥

॥ ಪದಪಾಠಃ ॥

ತೇ । ನಃ । ವೃಷ್ಟಿಂ । ದಿವಃ । ಪರಿ । ಪವಂತಾಂ । ಆ । ಸುಽವೀರ್ಯಂ ।

ಸುವಾನಾಃ । ದೇವಾಸಃ । ಇಂದವಃ ॥ ೨೪ ॥

॥ ಸಾಯಣಭಾಷ್ಯಂ ॥

ಸುವಾನಾಸ್ತತ್ರ ಚಾತ್ರ ಚಾಭಿಷೂಯಮಾಣಾ ದೇವಾ ದೀಪನಶೀಲಾಃ ಸ್ತುತ್ಯಾ ವೇಂದವೋ ಗ್ರಹೇಷು ಚಮಸೇಷು ಚ ಕ್ಷರಂತಸ್ತೇ ಸೋಮಾ ನೋಽಸ್ಮಾಕಂ ದಿವಸ್ಪರಿ । ಪರಿಶಬ್ದಃ ಪಂಚಮ್ಯಾದ್ಯೋತಕಃ । ಅಂತರಿಕ್ಷಾದಾದಿತ್ಯಾದ್ವಾ ವೃಷ್ಟಿಂ । ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ಆದಿತ್ಯಾಜ್ಜಾಯತೇ ವೃಷ್ಟಿರಿತಿ ವೃಷ್ಟಿಕಾರಣತ್ವಾತ್ । ಕಿಂಚ ಸುವೀರ್ಯಂ ಶೋಭನವೀರ್ಯೋಪೇತಂ ಪುತ್ರಂ ಚ ಧನಾದಿಕಂ ವಾ ಆ ಪವಂತಾಂ । ಪ್ರಾಪಯಂತು । ಯಜಮಾನಃ ಸೋಮೇನಾಭಿಮತಫಲಾನಿ ಪ್ರಾಪ್ನೋತಿ ಖಲು ॥

॥ ಪ್ರತಿಪದಾರ್ಥ ॥

**ದೇವಾಸಃ**—ಕಾಂತಿಯುತವಾದವೂ । **ಸುವಾನಾಃ**—ಇಂದ್ರಾರ್ಥವಾಗಿ ಹಿಂಡಲ್ಪಡುವುವೂ । **ಇಂದವಃ**—ಪ್ರವಾಹಾತ್ಮಕವೂ ಆದ । **ತೇ**—ಆ ಸೋಮರಸಗಳು । **ನಃ**—ನಮಗೆ । **ದಿವಸ್ಪರಿ**—ಅಂತರಿಕ್ಷದಿಂದ । **ವೃಷ್ಟಿಂ**—ವೃಷ್ಟಿಯನ್ನೂ । **ಸುವೀರ್ಯಂ**—ಉತ್ತಮವಾದ ವೀರ್ಯವುಳ್ಳ ಧನವನ್ನೂ । **ಆ ಪವಂತಾಂ**— ಹರಿಯುವಂತೆ ಮಾಡಲಿ.

॥ ಭಾವಾರ್ಥ ॥

ಕಾಂತಿಯುತವಾದವೂ, ಇಂದ್ರಾರ್ಥವಾಗಿ ಹಿಂಡಲ್ಪಡುವುವೂ ಪ್ರವಾಹಾತ್ಮಕವೂ ಆದ ಸೋಮರಸಗಳು ನಮಗೆ ಅಂತರಿಕ್ಷದಿಂದ ವೃಷ್ಟಿಯನ್ನೂ, ಉತ್ತಮವಾದ ವೀರ್ಯವುಳ್ಳ ಧನವನ್ನೂ ಸೇರುವಂತೆ ಮಾಡಲಿ.

## English Translation.

May those brilliant Soma-juices when expressed, pour down upon us from heaven, rain with male progency.

॥ ಸಂಹಿತಾಪಾಠಃ ॥

**ಪವತೇ ಹರ್ಯತೋ ಹರಿರ್ಗೃಣಾನೋ ಜಮದಗ್ನಿನಾ ।**

**ಹಿನ್ವಾನೋ ಗೋರಧಿ ತ್ವಚಿ ॥ ೨೫ ॥**

|| ಪದಪಾಠಃ ||

ಪವತೇ | ಹರ್ಯತಃ | ಹರಿಃ | ಗೃಣಾನಃ | ಜಮತ್ಽಅಗ್ನಿನಾ |

ಹಿನ್ವಾನಃ | ಗೋಃ | ಅಧಿ | ತ್ವಚಿ || ೨೫ ||

|| ಸಾಯಣಭಾಷ್ಯಂ ||

ಹರ್ಯತೋ ದೇವಾನ್ ಕಾಮಯಮಾನೋ ಹರಿರ್ಹರಿತವರ್ಣಃ ಕಿಂಚ ಗೋಸ್ತ್ವಚ್ಯಧ್ಯಾನಡುಹೇ ಚರ್ಮಣಿ ಹಿನ್ವಾನಃ ಪ್ರೇರ್ಯಮಾಣಃ ಸ ಸೋಮೋ ಜಮದಗ್ನಿನಾ ಮಂತ್ರದ್ರಷ್ಟ್ರರ್ಷಿಣಾ ಗೃಣಾನಃ ಸ್ತೂಯಮಾನಃ ಸನ್ ಪವತೇ | ದಶಾಪವಿತ್ರೇಣ ಪೂತೋ ಭವತಿ | ಯದ್ವಾ | ಪಾತ್ರಾಣ್ಯಭಿಗಚ್ಛತಿ ||

|| ಪ್ರತಿಪದಾರ್ಥ ||

ಹರ್ಯತಃ—ದೇವತೆಗಳನ್ನು ಅಪೇಕ್ಷಿಸುವವನೂ | ಹರಿಃ—ಪಚ್ಚೆವರ್ಣವುಳ್ಳವನೂ | ಗೋಃ ತ್ವಚಿ-ಅಧಿ—ಗೋ ಚರ್ಮದ ಮೇಲೆ | ಹಿನ್ವಾನಃ—ಸುರಿಯಲ್ಪಡುವವನೂ ಆದ ಸೋಮನು | ಜಮದಗ್ನಿನಾ—ಜಮದಗ್ನಿ ಋಷಿಯಿಂದ | ಗೃಣಾನಃ—ಸ್ತುತಿಸಲ್ಪಟ್ಟವನಾಗಿ | ಪವತೇ—ದಶಾಪವಿತ್ರದ ಕಡೆಗೆ ಹರಿಯುತ್ತಾನೆ.

|| ಭಾವಾರ್ಥ ||

ದೇವತೆಗಳನ್ನಪೇಕ್ಷಿಸುವವನೂ, ಪಚ್ಚೆವರ್ಣವುಳ್ಳವನೂ, ಗೋ ಚರ್ಮದ ಮೇಲೆ ಸುರಿಯಲ್ಪಡುವವನೂ ಆದ ಸೋಮನು ಜಮದಗ್ನಿ ಋಷಿಯಿಂದ ಸ್ತುತಿಸಲ್ಪಟ್ಟವನಾಗಿ ದಶಾ ಪವಿತ್ರದ ಕಡೆಗೆ ಹರಿಯುತ್ತಾನೆ.

## English Translation.

The delightful green-tinted Soma, praised by Jamadagni, urged on the cow-hide flows (to the vessels.)

|| ಸಂಹಿತಾಪಾಠಃ ||

ಪ್ರ ಶುಕ್ರಾಸೋ ವಯೋಜುವೋ ಹಿನ್ವಾನಾಸೋ ನ ಸಪ್ತಯಃ |

ಶ್ರೀಣಾನಾ ಅಪ್ಸು ಮೃಂಜತ || ೨೬ ||

|| ಪದಪಾಠಃ ||

ಪ್ರ | ಶುಕ್ರಾಸಃ | ವಯಃಽಜುವಃ | ಹಿನ್ವಾನಾಸಃ | ನ | ಸಪ್ತಯಃ |

ಶ್ರೀಣಾನಾಃ | ಅಪ್ಽಸು | ಮೃಂಜತ || ೨೬ ||

|| ಸಾಯಣಭಾಷ್ಯಂ ||

ಶುಕ್ರಾಸಃ ಶುಕ್ರಾ ದೀಪ್ಯಮಾನಾ ವಯೋಜುವೋಽನ್ನಂ ಪ್ರೇರಯಂತಃ । ಯದ್ಯದಪೇಕ್ಷ್ಯ ದೇವೇಭ್ಯಃ ಸೋಮಂ ಪ್ರಯಚ್ಛಂತಿ ತತ್ತದಪೇಕ್ಷಿತಂ ಸೋಮೋ ದದಾತಿ । ತೇ ಸೋಮಾಃ ಶ್ರೀಣಾನಾ ದಧಿಕ್ಷೀರಾದಿಭಿಃ ಶ್ರೀಯಮಾಣಾಃ ಸಂತೋಽಪ್ಸು ವಸತೀವರೀಷ್ವೇಕಧನಾಸು ಚ ಮೃಜಂತ । ಋತ್ವಿಗ್ಭಿಃ ಪ್ರಮೃಜ್ಯಂತೇ । ಶೋಧ್ಯಂತೇ ॥ ತತ್ರ ದೃಷ್ಟಾಂತಃ । ಹಿನ್ವಾನಾಸೋ ನ ಸಪ್ತಯಃ । ಅಶ್ವನಾಮೈತತ್ । ಯಥಾಶ್ವಾ ಹಿನ್ವಾನಾಸೋ ಹಿನ್ವಾನಾಃ ಸಾದಿಭಿಃ ಪ್ರೇರ್ಯಮಾಣಾಃ ಸಂತೋಽಪ್ಸು ತೈರೇವ ಪ್ರಶೋಧಿತಾ ಭವಂತಿ ತದ್ವತ್ ॥

|| ಪ್ರತಿಪದಾರ್ಥ ||

ಶುಕ್ರಾಸಃ— ಪ್ರಕಾಶಮಾನವಾದವೂ । ವಯೋಜುವಃ— ಅನ್ನ ಪ್ರೇರಕವಾದವೂ ಆದ ಸೋಮರಸಗಳು । ಶ್ರೀಣಾನಾಃ— ಆಶಿರ ದ್ರವ್ಯಗಳೊಡನೆ ಸೇರಿಕೊಂಡು । ಅಪ್ಸು— ವಸತೀವರ್ಯಾದ್ಯುದಕಗಳಲ್ಲಿ । ಹಿನ್ವಾನಾಸಃ— ಸಾರಥಿಯಿಂದ ಪ್ರೇರಿತಗಳಾದ । ಸಪ್ತಯಃ ನ— ಅಶ್ವಗಳಂತೆ । ಪ್ರ ಮೃಂಜತೆ— ಶುದ್ಧಿಯನ್ನು ಹೊಂದುತ್ತವೆ.

|| ಭಾವಾರ್ಥ ||

ಸಾರಥಿಗಳಿಂದ ಪ್ರೇರಿತಗಳಾದ ಅಶ್ವಗಳು ಉದಕಗಳಿಂದ ತೊಳೆಯಲ್ಪಟ್ಟು ಶುದ್ಧಿಗೊಳ್ಳುವಂತೆ, ಪ್ರಕಾಶಮಾನವಾದವೂ, ಅನ್ನ ಪ್ರೇರಕವಾದವೂ ಆದ ಸೋಮರಸಗಳು ಆಶಿರದ್ರವ್ಯಗಳೊಡನೆ ಸೇರಿಕೊಂಡು ವಸತೀವರ್ಯಾದ್ಯುದಕಗಳಲ್ಲಿ ಶುದ್ಧಿಯನ್ನು ಹೊಂದುತ್ತವೆ.

English Translation

The bright Soma-juices, the dispensers of food, being mixed with the curds and milk, are cleansed in the waters like horses urged (by the charioteers).

|| ಸಂಹಿತಾಪಾಠಃ ||

ತಂ ತ್ವಾ ಸುತೇಷ್ವಾಭುವೋ ಹಿನ್ವಿರೇ ದೇವತಾತಯೇ ।
ಸ ಪವಸ್ವಾನಯಾ ರುಚಾ ॥ ೨೭ ॥

|| ಪದಪಾಠಃ ||

ತಂ । ತ್ವಾ । ಸುತೇಷು । ಆಽಭುವಃ । ಹಿನ್ವಿರೇ । ದೇವಽತಾತಯೇ ।
ಸಃ । ಪವಸ್ವ । ಅನಯಾ । ರುಚಾ ॥ ೨೭ ॥

|| ಸಾಯಣಭಾಷ್ಯಂ ||

ಅಥ ಪ್ರತ್ಯಕ್ಷಕೃತಃ । ಹೇ ಸೋಮ ಆಭುವಃ । ಕರ್ಮಕರಣಾರ್ಥಂ ಸಮಂತಾದ್ಭವಂತೀತ್ಯಾಭುವ ಋತ್ವಿಜಃ । ತೇ ಸುತೇಷು । ಸುತೋಽಭಿಷುತಃ ಸೋಮಃ । ತದ್ವತ್ಸು ಯಜ್ಞೇಷು ದೇವತಾತಯೇ ॥ ಸರ್ವದೇವಾತ್ತಾತಿಲಿತಿ ಸ್ವಾರ್ಥಿಕಸ್ತಾತಿಲ್ ॥ ಇಂದ್ರಾದಿದೇವೇಭ್ಯಸ್ತಂ ತಾದೃಶಂ ಪ್ರಸಿದ್ಧಂ ತ್ವಾ ತ್ವಾಂ ಹಿನ್ವಿರೇ । ಗ್ರಾವಭಿಃ ಪ್ರೇರಯಂತಿ । ಅಭಿಷುಣ್ವಂತೀತ್ಯರ್ಥಃ । ತತಃ ಸೋಽಭಿಷುತಃ ಸ ತ್ವಮನಯಾ ರುಚಾ ದೀಪ್ಯಮಾನಯಾ ಧಾರಯಾ ದ್ರೋಣಕಲಶಂ ಪ್ರತಿ ಪವಸ್ವ । ಆಗಚ್ಛ । ಪವತಿರ್ಗತಿಕರ್ಮಾ । ಯದ್ವಾ । ಅನಯಾ ಮದೀಯಯಾ ರುಚಾ ಸ್ತುತ್ಯಾ ಸಹ ಕಲಶಮಾಗಚ್ಛ । ಕಲಶಾಭಿಗಮನಕಾಲೇ ಹಿ ಸೋಮಂ ಸ್ತುವಂತಿ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೆ) **ಆಭುವಃ**— ಕರ್ಮನಿರತರಾಗಿರುವ ಋತ್ವಿಕ್ಕುಗಳು । **ಸುತೇಷು**— ನಿನ್ನ ಅಭಿಷವಕಾಲದಲ್ಲಿ । **ದೇವತಾತಯೇ**— ದೇವಪೂಜಾರ್ಥವಾದ ಯಜ್ಞಕ್ಕಾಗಿ । **ತಂ**— ಪ್ರಸಿದ್ಧನಾದ । **ತ್ವಾಂ**— ನಿನ್ನನ್ನು । **ಹಿನ್ವಿರೇ**— ಕಲ್ಲುಗಳಿಂದ ಹಿಂಡುತ್ತಾರೆ । **ಸಃ**— ಹಾಗೆ ಹಿಂಡಲ್ಪಟ್ಟ ನೀನು । **ಅನಯಾ ರುಚಾ**— ಪ್ರಕಾಶಮಾನವಾದ ಈ ಸ್ತುತಿಯೊಡನೆ । **ಪವಸ್ವ**— ದ್ರೋಣಕಲಶಾಭಿಮುಖವಾಗಿ ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಕರ್ಮನಿರತರಾಗಿರುವ ಋತ್ವಿಕ್ಕುಗಳು ನಿನ್ನ ಅಭಿಷವಕಾಲದಲ್ಲಿ ದೇವಪೂಜಾರ್ಥವಾದ ಯಜ್ಞಕ್ಕಾಗಿ ಪ್ರಸಿದ್ಧನಾದ ನಿನ್ನನ್ನು ಕಲ್ಲುಗಳಿಂದ ಹಿಂಡುತ್ತಾರೆ. ಹಾಗೆ ಹಿಂಡಲ್ಪಟ್ಟ ನೀನು ಪ್ರಕಾಶಮಾನವಾದ ಈ ಸ್ತುತಿಯೊಡನೆ ದ್ರೋಣಕಲಶಾಭಿಮುಖವಾಗಿ ಪ್ರವಹಿಸು.

English Translation.

The priests who are present send you forth at the rites at which you are effused for the whole of the gods; do you flow with this splendour.

|| ಸಂಹಿತಾಪಾಠಃ ||

ಆ ತೇ ದಕ್ಷಂ ಮಯೋಭುವಂ ವಹ್ನಿಮದ್ಯಾ ವೃಣೀಮಹೇ ।
ಪಾಂತಮಾ ಪುರುಸ್ಪೃಹಂ ॥ ೨೮ ॥

|| ಪದಪಾಠಃ ||

ಆ । ತೇ । ದಕ್ಷಂ । ಮಯಃಽಭುವಂ । ವಹ್ನಿಂ । ಅದ್ಯ । ವೃಣೀಮಹೇ ।
ಪಾಂತಂ । ಆ । ಪುರುಽಸ್ಪೃಹಂ ॥ ೨೮ ॥

|| ಸಾಯಣಭಾಷ್ಯಂ ||

ಹೇ ಸೋಮ ಯುಷ್ಮಾರೋ ವಯಂ ತೇ ತವ ಸ್ವಭೂತಂ ದಕ್ಷಂ ಬಲಮದ್ಯಾಸ್ಮಿನ್ಯಾಗದಿನ ಆಭಿಮುಖ್ಯೇನಾ ವೃಣೀಮಹೇ । ಸಂಭಜಾಮಹೇ । ಕೀದೃಶಂ । ಮಯೋಭುವಂ ಸುಖಸ್ಯ ಭಾವಕಂ ವಹ್ನಿಂ ಧನಾದೀನಾಂ ಪ್ರಾಪಕಂ ಪಾಂತಂ ಶತ್ರುಭ್ಯೋ ರಕ್ಷಕಂ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಕಾಮ್ಯಮಾನಂ ಬಲಮಿತಿ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಮಯೋಭುವಂ**— ಸುಖದಾಯಕವಾದುದೂ । **ವಹ್ನಿಂ**— ಧನಪ್ರಾಪಕ ವಾದುದೂ । **ಪಾಂತಂ**— ರಕ್ಷಕವಾದುದೂ । **ಪುರುಸ್ಪೃಹಂ**— ಅನೇಕರಿಂದ ಅಪೇಕ್ಷಿತವಾದುದೂ ಆದ । **ತೇ-ದಕ್ಷಂ**— ನಿನ್ನ ಅಸಾಧಾರಣವಾದ ಶಕ್ತಿಯನ್ನು । **ಅದ್ಯ**— ಈ ಯಾಗಕಾಲದಲ್ಲಿ । **ಆ ವೃಣೀಮಹೇ**— ಆರಾಧಿಸುತ್ತೇವೆ (ಆಶ್ರಯಿಸುತ್ತೇವೆ)

|| ಭಾವಾರ್ಥ ||

ಎಲೈ ಸೋಮದೇವನೇ, ಸುಖದಾಯಕವೂ, ಧನಪ್ರಾಪಕವೂ, ರಕ್ಷಕವೂ, ಅನೇಕರಿಂದ ಅಪೇಕ್ಷಿತವೂ, ಆದ ನಿನ್ನ ಅಸಾಧಾರಣವಾದ ಶಕ್ತಿಯನ್ನು ಈ ಯಾಗಕಾಲದಲ್ಲಿ ನಾವು ಆರಾಧಿಸಿ ಆಶ್ರಯಿಸುತ್ತೇವೆ.

English Translation

We have recourse to-day to your strength, the source of happiness, the bearer (of good things), the defender (against foes), the desired of many—

|| ಸಂಹಿತಾಪಾಠಃ ||

ಆ ಮಂದ್ರಮಾ ವರೇಣ್ಯಮಾ ವಿಪ್ರಮಾ ಮನೀಷಿಣಂ ।

ಪಾಂತಮಾ ಪುರುಸ್ಪೃಹಂ || ೨೯ ||

|| ಪದಪಾಠಃ ||

ಆ । ಮಂದ್ರಂ । ಆ । ವರೇಣ್ಯಂ । ಆ । ವಿಪ್ರಂ । ಆ । ಮನೀಷಿಣಂ ।

ಪಾಂತಂ । ಆ । ಪುರುऽಸ್ಪೃಹಂ || ೨೯ ||

|| ಸಾಯಣಭಾಷ್ಯಂ ||

ಹೇ ಸೋಮ ಮಂದ್ರಂ ಮದಕರಂ ಸ್ತುತ್ಯಂ ವಾ ತ್ವಾಮಾ ವೃಣೀಮಹೇ । ವರೇಣ್ಯಂ ಸರ್ವೈರ್ವ-ರಣೀಯಂ ಸಂಭಜನೀಯಂ ಚ । ಕಿಂಚ ವಿಪ್ರಂ ಮೇಧಾವಿನಂ ತ್ವಾ । ತಥಾ ಮನೀಷಿಣಂ । ಮನಸ ಈಷಾ ಮನೀಷಾ । ತದ್ವಂತಂ ಸ್ತುತಿಮಂತಂ ವಾ ತ್ವಾಮಾ ವೃಣೀಮಹೇ । ಪ್ರತ್ಯೇಕಂ ವಿಶೇಷಣಾ-

ಪೇಕ್ಷಯಾ ಆ ಇತ್ಯುಪಸರ್ಗಃ ಕೃತಃ । ಕಿಂಚ ಪಾಂತಂ ಸರ್ವೇಷಾಂ ರಕ್ಷಕಂ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಚ ತ್ವಾಂ ಸಂಭಜಾಮಹೇ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಮಂದ್ರಂ—ಆಹ್ಲಾದಕರನೂ । ವರೇಣ್ಯಂ—ಅತ್ಯಂತ ಪೂಜ್ಯನೂ ಆದ ನಿನ್ನನ್ನು । ಆ (ವೃಣೀಮಹೇ)—ಆರಾಧಿಸುತ್ತೇವೆ । ವಿಪ್ರಂ—ಮೇಧಾವಿಯೂ । ಮನೀಷಿಣಂ ಸ್ತುತಿ ಯುಕ್ತನೂ ಆದ ನಿನ್ನನ್ನು । ಆ—ಆರಾಧಿಸುತ್ತೇವೆ । ಪಾಂತಂ—ರಕ್ಷಕನೂ । ಪುರುಸ್ಪೃಹಂ—ಅನೇಕರಿಂದ ಅಪೇಕ್ಷಿತನೂ ಆದ ನಿನ್ನನ್ನು । ಆ(ವೃಣೀಮಹೇ)—ಆರಾಧಿಸುತ್ತೇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಆಹ್ಲಾದಕರನೂ, ಅತ್ಯಂತಪೂಜ್ಯನೂ ಆದ ನಿನ್ನನ್ನು ಆರಾಧಿಸುತ್ತೇವೆ. ಮೇಧಾವಿಯೂ, ಸ್ತುತಿಯುಕ್ತನೂ ಆದ ನಿನ್ನನ್ನು ಆರಾಧಿಸುತ್ತೇವೆ. ರಕ್ಷಕನೂ, ಅನೇಕರಿಂದ ಅಪೇಕ್ಷಿತನೂ, ಆದ ನಿನ್ನನ್ನು ಆರಾಧಿಸುತ್ತೇವೆ.

English Translation

The exhilarating, the desirable, the wise, the intelligent, the defender (of all), the desired of many.

॥ ಸಂಹಿತಾಪಾಠಃ ॥

ಆ ರಯಿಮಾ ಸುಚೇತುನಮಾ ಸುಕ್ರತೋ ತನೂಷ್ವಾ ।
ಪಾಂತಮಾ ಪುರುಸ್ಪೃಹಂ ॥ ೩೦ ॥

॥ ಪದಪಾಠಃ ॥

ಆ । ರಯಿಂ । ಆ । ಸುಽಚೇತುನಂ । ಆ । ಸುಕ್ರತೋ ಇತಿ ಸುಽಕ್ರತೋ । ತನೂಷು । ಆ ।
ಪಾಂತಂ । ಆ । ಪುರುಽಸ್ಪೃಹಂ ॥ ೩೦ ॥

॥ ಸಾಯಣಭಾಷ್ಯಂ ॥

ಹೇ ಸುಕ್ರತೋ ಶೋಭನಯಜ್ಞ ಸೋಮ ತ್ವದೀಯಂ ರಯಿಂ ಧನಂ ವಯಮಾ ವೃಣೀಮಹೇ । ಕಿಂ ಚ ಸುಚೇತುನಂ ॥ ಚಿತೀ ಸಂಜ್ಞಾನೇ । ಭಾವ ಔಣಾದಿಕ ಉನನ್ಪ್ರತ್ಯಯಃ ॥ ಸುಜ್ಞಾನಂ ಚ । ತನೂಷ್ವಸ್ಮತ್ಪುತ್ರೇಷು ಚ ಧನಂ ಸುಜ್ಞಾನಂ ಚ ತ್ವಮಾ ವಿಧೇಹಿ । ಯದ್ವಾ । ಪುತ್ರಾರ್ಥಂ ವಯಮಾ ವೃಣೀಮಹೇ । ತಥಾ ಪಾಂತಂ ಸರ್ವಸ್ಯ ರಕ್ಷಕಂ ಪುರುಸ್ಪೃಹಂ ಬಹುಭಿರ್ಯಃಸ್ಪೃಭಿಃ ಕಾಮ್ಯಮಾನಂ ತ್ವಾಂ ಸಂಭಜಾಮಹೇ ॥

। ಪ್ರತಿಪದಾರ್ಥ ॥

**ಸುಕ್ರತೋ**— ಉತ್ತಮವಾದ ಪ್ರಜ್ಞೆಯುಳ್ಳ ಎಲೈ ಸೋಮದೇವನೇ । **ಸುಚೇತುನಂ**— ಉತ್ತಮವಾದ ಶಕ್ತಿದಾಯಕವಾದ । **ರಯಿಂ**— ನಿನ್ನ ಧನವನ್ನು । ಆ (**ವೃಣೀಮಹೇ**)— ನಾವು ಪೂಜಿಸಿ ಅಪೇಕ್ಷಿಸುತ್ತೇವೆ । **ತನೂಷು**— ನಮ್ಮ ಪುತ್ರಾದಿಗಳಲ್ಲಿ । ಆ (ವಿಧೇಹಿ)— ಆ ಧನಗಳನ್ನು ಒದಗಿಸಿಕೊಡು । **ಪಾಂತಂ**— ಸರ್ವ ರಕ್ಷಕನೂ । **ಪುರುಸ್ಪೃಹಂ**— ಅನೇಕರಿಂದ ಅಪೇಕ್ಷಿತನೂ ಆದ ನಿನ್ನನ್ನು । **ಆ**— ಪೂಜಿಸುತ್ತೇವೆ.

। ಭಾವಾರ್ಥ ॥

ಉತ್ತಮವಾದ ಪ್ರಜ್ಞೆಯುಳ್ಳ ಎಲೈ ಸೋಮದೇವನೇ, ಉತ್ತಮವಾದ ಶಕ್ತಿದಾಯಕವಾದ ನಿನ್ನ ಧನವನ್ನು ನಾವು ಪೂಜಿಸಿ ಅಪೇಕ್ಷಿಸುತ್ತೇವೆ. ನಮ್ಮ ಪುತ್ರಾದಿಗಳಲ್ಲಿ ಆ ಧನವನ್ನು ತುಂಬಿಕೊಡು. ಸರ್ವರಕ್ಷಕನೂ ಅನೇಕ ರಿಂದ ಅಪೇಕ್ಷಿತನೂ ಆದ ನಿನ್ನನ್ನು ಪೂಜಿಸುತ್ತೇವೆ.

English Translation.

(We have recourse) to your wealth and intelligence for our prosterity O you to whom fair sacrifices are offered, and to you the defender (of all), the desired of many.

## ಅರವತ್ತಾರನೆಯ ಸೂಕ್ತವು

। ಸಾಯಣಭಾಷ್ಯಂ ।

**ಪವಸ್ವೇತಿ ತ್ರಿಂಶದೃಚಂ ಷಷ್ಠಂ ಸೂಕ್ತಂ । ಅತ್ರಾನುಕ್ರಮ್ಯತೇ । ಪವಸ್ವ ಶತಂ ವೈಖಾನಸಾ ಅಷ್ಟಾದಶ್ಯನುಷ್ಟುಪ್ಪರಾಸ್ತಿಸ್ರ ಆಗ್ನೇಯ್ಯ ಇತಿ । ಶತಸಂಖ್ಯಾಕಾ ವೈಖಾನಸಾಖ್ಯಾಃ ಸಂಹತಾ ಋಷಯಃ। ತ್ವಂ ಸೋಮ ಸೂರ ಇತ್ಯೇಷಾನುಷ್ಟುಪ್ । ಶಿಷ್ಟಾ ಗಾಯತ್ರ್ಯಃ । ಅಗ್ನ ಆಯೂಂಷೀತ್ಯಾದ್ಯಾಸ್ತಿಸ್ರಃ ಪವಮಾನವಿಶಿಷ್ಟಾಗ್ನಿದೇವತಾಕಾಃ । ಅನ್ಯಾಸಾಂ ಪವಮಾನಃ ಸೋಮೋ ದೇವತಾ ॥ ಗತಃ ಸೂಕ್ತ-ವಿನಿಯೋಗಃ ॥**

ಅನುವಾದವು— **ಪವಸ್ವ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಪವಸ್ವ ಶತಂ ವೈಖಾನಸಾ ಅಷ್ಟಾದಶ್ಯನುಷ್ಟುಪ್ಪರಾಸ್ತಿಸ್ರ ಆಗ್ನೇಯ್ಯಃ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವೈಖಾನಸರೆಂಬ ನೂರುಮಂದಿ ಋಷಿಗಳು ಸಾಮೂಹಿಕ ವಾಗಿ ಋಷಿಗಳು. ಈ ಸೂಕ್ತದ **ತ್ವಂ ಸೋಮ ಸೂರಃ** ಎಂಬ ಹದಿನೆಂಟನೆಯ ಋಕ್ಕು ಅನುಷ್ಟುಪ್‌ಛಂದಸ್ಸವು; ಉಳಿದ ಋಕ್ಕುಗಳು ಗಾಯತ್ರೀಛಂದಸ್ಸವು. **ಅಗ್ನ ಆಯೂಂಷಿ** ಎಂದು ಮೊದಲಾಗುವ ಮೂರು ಋಕ್ಕುಗಳು (೧೯–೨೧ ಋಕ್ಕುಗಳು) ಪವಮಾನವಿಶಿಷ್ಟ ಅಗ್ನಿದೇವತಾಕವು. ಇತರ ಋಕ್ಕುಗಳಿಗೆ ಪವಮಾನಃ ಸೋಮನು ದೇವತೆಯು ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೬೬

ಮಂಡಲ—೯ || ಅನುವಾದ—೩ || ಸೂಕ್ತ—೬೬ ||

ಅಷ್ಟಕ—೭ || ಅಧ್ಯಾಯ – ೨ || ವರ್ಗ—೭, ೮, ೯, ೧೦, ೧೧, ೧೨ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ||

|| ಋಷಿಃ—ಶತಂ ವೈಖಾನಸಾಃ ||

|| ದೇವತಾ—೧-೧೮, ೨೨-೩೦. ಪವಮಾನಃ ಸೋಮಃ । ೧೯-೨೧, ಅಗ್ನಿಃ ||

|| ಛಂದಃ—೧-೧೭, ೧೯-೩೦. ಗಾಯತ್ರೀ । ೧೮ ಅನುಷ್ಟುಪ್ ||

|| ಸಂಹಿತಾಪಾಠಃ ||

ಪವಸ್ವ ವಿಶ್ವಚರ್ಷಣೇಽಭಿ ವಿಶ್ವಾನಿ ಕಾವ್ಯಾ ।

ಸಖಾ ಸಖಿಭ್ಯ ಈಡ್ಯಃ || ೧ ||

|| ಪದಪಾಠಃ ||

ಪವಸ್ವ । ವಿಶ್ವಽಚರ್ಷಣೇ । ಅಭಿ । ವಿಶ್ವಾನಿ । ಕಾವ್ಯಾ ।

ಸಖಾ । ಸಖಿಽಭ್ಯಃ । ಈಡ್ಯಃ || ೧ ||

|| ಸಾಯಣಭಾಷ್ಯಂ ||

ಹೇ ವಿಶ್ವಚರ್ಷಣೇ ಸರ್ವವ್ಯಾಪಿತ್ವೇನ ಸರ್ವಸ್ಯ ದ್ರಷ್ಟರ್ಹೇ ಸೋಮ ಸಖಾ ಸ್ತುತ್ಯಸ್ತೋತೃ-ಯುಷ್ಮದ್ಯುಷ್ಮಲ್ಲಕ್ಷಣೇನ ಸಂಬಂಧೇನ ಸಖಿಭೂತಸ್ತ್ವಮೀಡ್ಯಃ ಸ್ತೋತವ್ಯಃ ಸನ್ ಸಖಿಭ್ಯೋ ಹವಿಷ್ಪ್ರದಾನೇನೋಪಕಾರಕತ್ವಾನ್ಮಿತ್ರಭೂತೇಭ್ಯೋಽಸ್ಮಭ್ಯಂ ವಿಶ್ವಾನಿ ಸರ್ವಾಣಿ ಕಾವ್ಯಾ ಕವೇಃ ಕರ್ಮಾಣಿ ; ಕಾವ್ಯಾನಿ || ಬ್ರಾಹ್ಮಣಾದಿತ್ವಾತ್ ಷ್ಯಞ್ || ಸರ್ವಾಣಿ ಸ್ತೋತ್ರಾಣ್ಯಭಿ ಲಕ್ಷೀಕೃತ್ಯ ಪವಸ್ವ । ಆಗಚ್ಛ ||

|| ಪ್ರತಿಪದಾರ್ಥ ||

ವಿಶ್ವಚರ್ಷಣೇ—ಸಕಲವನ್ನೂ ನೋಡಬಲ್ಲ ಎಲೈ ಸೋಮನೇ । **ಸಖಾ**—ನಮಗೆ ಮಿತ್ರನಾದ ನೀನು । **ಈಡ್ಯಃ**—ಸ್ತುತಿಗೆ ಅರ್ಹನಾಗಿ । **ಸಖಿಭ್ಯಃ**—ನಿನ್ನ ಮಿತ್ರರಾದ ನಮ್ಮ । **ವಿಶ್ವಾನಿ**—ಸಮಸ್ತವಾದ । **ಕಾವ್ಯಾ ಅಭಿ**—ಸ್ತುತಿಕರ್ಮಗಳನ್ನು ಲಕ್ಷಿಸಿ । **ಪವಸ್ವ**—ಹರಿದು ಬಾ.

|| ಭಾವಾರ್ಥ ||

ಸಕಲವನ್ನೂ ನೋಡಬಲ್ಲ ಎಲೈ ಸೋಮನೇ, ನಮಗೆ ಮಿತ್ರನಾದ ನೀನು ನಮ್ಮ ಸ್ತುತಿಗೆ ಅರ್ಹನಾಗಿ ನಿನ್ನ ಮಿತ್ರರಾದ ನಮ್ಮ ಸಮಸ್ತ ಸ್ತುತಿಕರ್ಮಗಳನ್ನು ಲಕ್ಷಿಸಿ ಹರಿದು ಬಾ.

English Translation

All-seeing (Soma), who are the adorable friend (of the worshippers), **flow** for (us your) friends towards all (our) hymns of praise.

॥ ಸಂಹಿತಾಪಾಠಃ ॥

**ತಾಭ್ಯಾಂ ವಿಶ್ವಸ್ಯ ರಾಜಸಿ ಯೇ ಪವಮಾನ ಧಾಮನೀ ।**

**ಪ್ರತೀಚೀ ಸೋಮ ತಸ್ಥತುಃ ॥ ೨ ॥**

॥ ಪದಪಾಠಃ ॥

ತಾಭ್ಯಾಂ । ವಿಶ್ವಸ್ಯ । ರಾಜಸಿ । ಯೇ ಇತಿ । ಪವಮಾನ । ಧಾಮನೀ ಇತಿ ।

ಪ್ರತೀಚೀ ಇತಿ । ಸೋಮ । ತಸ್ಥತುಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ದಶಾಪವಿತ್ರೇಣ ಪೂಯಮಾನ ಪುನಾನ ವಾ ಹೇ ಸೋಮ ಯೇ ಧಾಮನೀ ಪೂರ್ವಪಕ್ಷಾಪರಪಕ್ಷಯೋರ್ಲತಾರೂಪಸ್ಯ ಸೋಮಸ್ಯ ತನ್ವೈಕೈಕಪರ್ಣವೃದ್ಧಿಹ್ರಾಸಾಭ್ಯಾಂ ತೇನ ಸ್ವಭೂತೌ ಪೂರ್ವಾದಿಪಕ್ಷೌ । ಯದ್ವಾ । ಯೇ ಧಾಮನೀ ನಾಮನೀ ಅಂಶುಸೋಮಾತ್ಮಕೇ । ಅಪಿ ಪ್ರತೀಚೀ ತ್ವದಭಿಮುಖಂ ಗಚ್ಛಂತೌ ಗಚ್ಛತೀ ವಾ ಪಕ್ಷೌ ನಾಮನೀ ತಸ್ಥತುಃ ಉಪಜಗ್ಮತುಃ ತಾಭ್ಯಾಂ ತ್ವಂ ವಿಶ್ವಸ್ಯ ಸರ್ವಸ್ಯ ಲೋಕಸ್ಯ ರಾಜಸಿ । ಸ್ವಾಮೀ ಭವಸಿ । ಪೂರ್ವಾದಿಪಕ್ಷಾಭ್ಯಾಂ ಸರ್ವಲೋಕಸ್ಯೋಪನಾಯಕತ್ವಾತ್ತಸ್ಯ ಸ್ವಾಮೀ ಭವಸಿ । ಪೃಥಿವ್ಯಾಮಂಶುನಾಮ್ನಾ ಮನುಷ್ಯಾಣಾಂ ಸರ್ವೇಷಾಮಭೀಪ್ಸಿತದಾನೇನ ತಸ್ಯ ಲೋಕಸ್ಯ ದ್ಯುಲೋಕೇ ದೇವೇಭ್ಯಃ ಸ್ವಸುಧಾಮಯಕಲಾದಾನೇನ ತೇಷಾಂ ಪ್ರೀಣಯಿತಾ ಭವಸಿ । ದೇವಾಃ ಖಲು ಸೋಮಸ್ಯೈಕೈಕವೃದ್ಧಿಹ್ರಾಸಾಭ್ಯಾಂ ಕಲಾಃ ಪಿಬಂತಿ ॥

॥ ಪ್ರತಿಪದಾರ್ಥ ॥

**ಪವಮಾನ**—ಶುದ್ಧಿಕಾರಕನಾದ । **ಸೋಮ** - ಎಲೈ ಸೋಮನೇ । **ಯೇ**—ಯಾವ । **ಧಾಮನೀ**—ಪೂರ್ವ ಮತ್ತು ಅಪರಪಕ್ಷಗಳೆಂಬ ಎರಡು ಮುಖಗಳು (ಪ್ರಭಾವಗಳು) । **ಪ್ರತೀಚೀ**—ನಿನ್ನ ಅಭಿಮುಖವಾಗಿ । **ತಸ್ಥತುಃ** – ಸ್ಥಾಪಿತವಾಗಿಯೋ (ಚಲಿಸುವುವೊ) । **ತಾಭ್ಯಾಂ**—ಅವುಗಳೊಡನೆ । **ವಿಶ್ವಸ್ಯ**—ಸಕಲ ಲೋಕಕ್ಕೂ **ರಾಜಸಿ**—ನೀನು ಪ್ರಭುವಾಗಿದ್ದೀಯೆ.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ಪೂರ್ವ ಮತ್ತು ಅಪರಪಕ್ಷಗಳೆಂಬ ಯಾವ ಎರಡು ಮುಖಗಳು ನಿನಗಭಿಮುಖವಾಗಿ ಸ್ಥಾಪಿತವಾಗಿ ಚಲಿಸುತ್ತಿರುವುವೋ ಅವುಗಳೊಡನೆ ನೀನು ಸಕಲ ಲೋಕಕ್ಕೂ ಪ್ರಭುವಾಗಿದ್ದೀಯೆ,

## English Translation.

You, purfied Soma, rule the universe by those two halves (of the lunar month) which stand facing you.

|| ಸಂಹಿತಾಪಾಠಃ ||

ಪರಿ ಧಾಮಾನಿ ಯಾನಿ ತೇ ತ್ವಂ ಸೋಮಾಸಿ ವಿಶ್ವತಃ |
ಪವಮಾನ ಋತುಭಿಃ ಕವೇ || ೩ ||

|| ಪದಪಾಠಃ ||

ಪರಿ | ಧಾಮಾನಿ | ಯಾನಿ | ತೇ | ತ್ವಂ | ಸೋಮ | ಅಸಿ | ವಿಶ್ವತಃ |
ಪವಮಾನ | ಋತುಽಭಿಃ | ಕವೇ || ೩ ||

|| ಸಾಯಣಭಾಷ್ಯಂ ||

ಹೇ ಸೋಮ ಯಸ್ಮಾತ್ತೇ ತ್ವದೀಯಾನಿ ಧಾಮಾನಿ ತೇಜಾಂಸಿ ಪರಿತೋ ವರ್ತಂತೇ ಅತ ಏವ ಹೇ ಪವಮಾನ ಪೂಯಮಾನ ಹೇ ಕವೇ ಕ್ರಾಂತಕರ್ಮನ್ ಹೇ ಸೋಮ ತ್ವಮೃತುಭಿರ್ವಸಂತಾದಿಕಾಲವಿಶೇಷೈಃ ಸಹ ವಿಶ್ವತಃ ಸರ್ವತೋಽಸಿ | ಭವಸಿ | ಅಹೋರಾತ್ರೌ ಯತ್ರ ಯತ್ರ ವ್ಯಾಪ್ತೌ ತತ್ರ ತತ್ರ ವಸಂತಾದಿಕಾಲೋಪಾಧಿಕಃ ಸೋಮಸ್ತಿಷ್ಠತಿ | ತಯೋಸ್ತದಧೀನತ್ವಾದಿತ್ಯರ್ಥಃ ||

||ಪ್ರತಿಪದಾರ್ಥ||

**ಪವಮಾನ**—ಶುದ್ಧಿಕಾರಕನೂ | **ಕವೇ**—ಕ್ರಾಂತಕರ್ಮವುಳ್ಳವನೂ ಆದ | **ಸೋಮ**—ಎಲೈ ಸೋಮದೇವನೇ | **ತೇ**—ನಿನ್ನ | **ಯಾನಿ ಧಾಮಾನಿ**—ಅಹೋರಾತ್ರರೂಪವಾದ ಯಾವ (ಪ್ರಭಾವಗಳು) ಕಾಲವಿಶೇಷಗಳು **ಪರಿ**—ಸರ್ವತ್ರ ವ್ಯಾಪಿಸಿರುವುವೋ ಅಂತಹ | **ತ್ವಂ**—ನೀನು | **ಋತುಭಿಃ**—ವಸಂತಾದಿ ಋತುಭೇದಗಳೊಡನೆ **ವಿಶ್ವತಃ**—ಸರ್ವತ್ರ | **ಅಸಿ**—ವ್ಯಾಪಿಸಿದ್ದೀಯೆ.

| ಭಾವಾರ್ಥ ||

ಶುದ್ಧಿಕಾರಕನೂ, ಕ್ರಾಂತಕರ್ಮವುಳ್ಳವನೂ ಆದ ಎಲೈ ಸೋಮದೇವನೇ, ಅಹೋರಾತ್ರರೂಪವಾದ ಯಾವ ನಿನ್ನ ಕಾಲವಿಶೇಷಗಳು ಯಾವ ನಿಮಿತ್ತವಾಗಿ ಸರ್ವತ್ರ ವ್ಯಾಪಿಸಿರುವುವೋ, ಅದುದರಿಂದಲೇ ನೀನು ವಸಂತಾದಿ ಋತುಭೇದಗಳೊಡನೆ ಸರ್ವತ್ರ ವ್ಯಾಪಿಸಿದ್ದೀಯೆ.

## English Translation.

Since your splendours abound, you purified sage, Soma, are everywhere (associated) with the seasons.

|| ಸಂಹಿತಾಪಾಠಃ ||

ಪವಸ್ವ ಜನಯನ್ನಿಷೋಽಭಿ ವಿಶ್ವಾನಿ ವಾರ್ಯಾ ।
ಸಖಾ ಸಖಿಭ್ಯ ಊತಯೇ ॥ ೪ ॥

|| ಪದಪಾಠಃ ||

ಪವಸ್ವ । ಜನಯನ್ । ಇಷಃ । ಅಭಿ । ವಿಶ್ವಾನಿ । ವಾರ್ಯಾ ।
ಸಖಾ । ಸಖಿಽಭ್ಯಃ । ಊತಯೇ ॥ ೪ ॥

|| ಸಾಯಣಭಾಷ್ಯಂ ||

ಹೇ ಸೋಮ ಸಖಾ ಸಖಿಭೂತಸ್ತ್ವಂ ವಿಶ್ವಾನಿ ಸರ್ವಾಣಿ ವಾರ್ಯಾ ವರಣೀಯಾನ್ಯಸ್ಮದ್ದತ್ತಾನಿ ಸ್ತೋತ್ರಾಣ್ಯಭಿ ಲಕ್ಷೀಕೃತ್ಯ ಸಖಿಭ್ಯೋಽಸ್ಮಭ್ಯಮೂತಯೇ ರಕ್ಷಣಾಯ ಜೀವನಾಯೇಷೋಽನ್ನಾನಿ ಜನಯನ್ ಪ್ರಯಚ್ಛನ್ ಪವಸ್ವ । ಆಗಚ್ಛ । ಪವತಿರ್ಗತಿಕರ್ಮಾ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಸಖಾ**—ಮಿತ್ರಭೂತನಾದ ನೀನು । **ವಿಶ್ವಾನಿ**—ಸಮಸ್ತವಾದುವೂ । **ವಾರ್ಯಾ ಅಭಿ**—ನಿನ್ನಿಂದ ಅಪೇಕ್ಷಿತವಾದವೂ ಆದ ನಮ್ಮ ಸ್ತುತಿಗಳಿಗಭಿಮುಖವಾಗಿ । **ಸಖಿಭ್ಯಃ**—ನಿನ್ನ ಮಿತ್ರರಾದ ನಮ್ಮ । **ಊತಯೇ**—ರಕ್ಷಣಾರ್ಥವಾಗಿ । **ಇಷಃ**—ಅನ್ನಗಳನ್ನು । **ಜನಯನ್**—ಉತ್ಪನ್ನಮಾಡುತ್ತ । **ಪವಸ್ವ**—ಪ್ರವಹಿಸಿ ಬಾ.

|| ಭಾವಾರ್ಥ ||

ಎಲೈ ಸೋಮದೇವನೇ, ಮಿತ್ರಭೂತನಾದ ನೀನು ನಿನ್ನಿಂದ ಅಪೇಕ್ಷಿತವಾದ ನಮ್ಮ ಸಮಸ್ತ ಸ್ತುತಿಗಳಿಗೂ ಅಭಿಮುಖವಾಗಿ ನಿನ್ನ ಮಿತ್ರರಾದ ನಮ್ಮ ರಕ್ಷಣಾರ್ಥವಾಗಿ ಅನ್ನಗಳನ್ನು ಉತ್ಪನ್ನಮಾಡುತ್ತ ಪ್ರವಹಿಸಿ ಬಾ.

**English Translation.**

Soma, who are a friend, do you for the sake of all our desirable (praises) approach generating food for (us your) friends for our support

|| ಸಂಹಿತಾಪಾಠಃ ||

ತವ ಶುಕ್ರಾಸೋ ಅರ್ಚಯೋ ದಿವಸ್ಪೃಷ್ಠೇ ವಿ ತನ್ವತೇ ।
ಪವಿತ್ರಂ ಸೋಮ ಧಾಮಭಿಃ ॥ ೫ ॥

|| ಪದಪಾಠಃ ||

ತವ । ಶುಕ್ರಾಸಃ । ಅರ್ಚಯಃ । ದಿವಃ । ಪೃಷ್ಠೇ । ವಿ । ತನ್ವತೇ ।

ಪವಿತ್ರಂ । ಸೋಮ । ಧಾಮಽಭಿಃ ॥ ೫ ॥

|| ಸಾಯಣಭಾಷ್ಯಂ ||

ಹೇ ಸೋಮ ಶುಕ್ರಾಸಃ ಸರ್ವತ್ರ ಜ್ವಲನಶೀಲಾ ಧಾಮಭಿಸ್ತೇಜೋಭಿಃ ಸಹಿತಸ್ಯ ತವ ಸ್ವಭೂತಾ ಅರ್ಚಯೋಽರ್ಚನೀಯಾ ರಶ್ಮಯೋ ದಿವೋ ದ್ಯೋತಮಾನಸ್ಯಾದಿತ್ಯಸ್ಯ ದ್ಯುಲೋಕಸ್ಯ ವಾ ಪೃಷ್ಠೇಽಧರಭಾಗೇ । ಪೃಥಿವ್ಯಾಮಿತ್ಯರ್ಥಃ । ಪವಿತ್ರಂ ಪವಮಾನಸಾಧನಮುದಕಂ ವಿ ತನ್ವತೇ । ವಿಶೇಷೇಣ ತನ್ವಂತಿ । ವಿಸ್ತಾರಯಂತಿ । ಸರ್ವತ್ರ ಕುರ್ವಂತೀತ್ಯರ್ಥಃ ॥

|| ಪ್ರತಿಪದಾರ್ಥ ||

ಸೋಮ—ಎಲೈ ಸೋಮದೇವನೇ । ಧಾಮಭಿಃ—ತೇಜಸ್ಸುಗಳೊಡನೆ ಕೂಡಿರುವ । ತವ—ನಿನ್ನ । ಶುಕ್ರಾಸಃ—ಪ್ರಕಾಶಮಾನಗಳಾದ । ಅರ್ಚಯಃ—ರಶ್ಮಿಗಳು । ದಿವಃ—ಅಂತರಿಕ್ಷದ । ಪೃಷ್ಠೇ—ಅಧಃ ಪ್ರದೇಶವಾದ ಪೃಥ್ವಿಯಲ್ಲಿ । ಪವಿತ್ರಃ—ಶುದ್ಧಿಸಾಧಕವಾದ ಉದಕವನ್ನು । ವಿ ತನ್ವತೇ—ವಿಸ್ತರಿಸುವಂತೆ ಮಾಡುತ್ತವೆ

|| ಭಾವಾರ್ಥ ||

ಎಲೈ ಸೋಮದೇವನೇ, ತೇಜಸ್ಸುಗಳೊಡನೆ ಕೂಡಿರುವ ನಿನ್ನ ಪ್ರಕಾಶಮಾನಗಳಾದ ರಶ್ಮಿಗಳು ಅಂತರಿಕ್ಷಕ್ಕೆ ಅಧೋಭಾಗದಲ್ಲಿರುವ ಪೃಥ್ವಿಯಲ್ಲಿ ಶುದ್ಧಸಾಧಕವಾಗಿ ಉದಕವನ್ನು ವಿಸ್ತರಿಸುತ್ತವೆ.

English Translation.

Soma, the shinning rays of you who are accompanied by brilliance, spread the purifying (water) over the surface of heaven.

|| ಸಂಹಿತಾಪಾಠಃ ||

ತವೇಮೇ ಸಪ್ತ ಸಿಂಧವಃ ಪ್ರಶಿಷಂ ಸೋಮ ಸಿಸ್ರತೇ ।
ತುಭ್ಯಂ ಧಾವಂತಿ ಧೇನವಃ ॥ ೬ ॥

|| ಪದಪಾಠಃ ||

ತವ । ಇಮೇ । ಸಪ್ತ । ಸಿಂಧವಃ । ಪ್ರಽಶಿಷಂ । ಸೋಮ । ಸಿಸ್ರತೇ ।

ತುಭ್ಯಂ । ಧಾವಂತಿ । ಧೇನವಃ ॥ ೬ ॥

॥ ಸಾಯಣಭಾಷ್ಯಂ ॥

ವೃಷ್ಟಿಕರ್ತೃತ್ವಪ್ರಸಂಗಾದಾಹ । ಹೇ ಸೋಮ ಇಮ ಇಮಾಸ್ತ್ವಯಾ ಸೃಷ್ಟಾಃ ಸಪ್ತ ಸಪ್ತಸಂಖ್ಯಾಕಾಃ ಸಿಂಧವಃ ಸ್ಯಂದಮಾನಾ ಗಂಗಾದ್ಯಾ ನದ್ಯಃ । ಯದ್ವಾ । ಸಪ್ತ ಸರ್ಪಣಶೀಲಾ ನದ್ಯಃ । ತವ ಪ್ರಶಿಷಂ ಪ್ರಶಾಸನಮಾಜ್ಞಾಮಭಿ ಸಿಸ್ರತೇ । ಅನುಸರಂತಿ । ತ್ವದಾಜ್ಞಾಮನುಸೃತ್ಯ ಸಮುದ್ರಂ ಗಚ್ಛಂತೀತ್ಯರ್ಥಃ । ಕಿಂಚ ಧೇನವೋ ನವಪ್ರಸೂತಿಕಾ ದೇವಾನಾಂ ಹವಿಷ್ಪ್ರದಾನೇನ ಪ್ರೀಣಯಿತ್ರ್ಯೋ ಗಾವಸ್ತುಭ್ಯಂ ತ್ವದರ್ಥಮೇವಾಶಿರಂ ಕ್ಷೀರಂ ಪ್ರಯಚ್ಛಾಮ ಇತಿ ಧಾವಂತಿ । ಆಗಚ್ಛಂತಿ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಇಮೇ**—ನಿನ್ನಿಂದ ಸೃಷ್ಟವಾದವೂ । **ಸಪ್ತ**—ಸಂಖ್ಯಾಕವಾದವೂ ಆದ । **ಸಿಂಧವಃ**—ಗಂಗಾದಿ ನದಿಗಳು । **ತವ**—ನಿನ್ನ । **ಪ್ರಶಿಷಂ**—ಆಜ್ಞಾವರ್ತಿಗಳಾಗಿ । **ಸಿಸ್ರತೇ**—ಪ್ರವಹಿಸುತ್ತವೆ । **ಧೇನವಃ**—ಕ್ಷೀರದಾಯಿಗಳಾದ ಧೇನುಗಳು । **ತುಭ್ಯಂ**—ನಿನಗೆ ಆಶಿರದ್ರವ್ಯಗಳನ್ನು ಒದಗಿಸಲು । **ಧಾವಂತಿ**—ಶೀಘ್ರವಾಗಿ ಬರುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನಿಂದ ಸೃಷ್ಟವಾದವೂ, ಸಪ್ತಸಂಖ್ಯಾಕವೂ ಆದ ಈ ಗಂಗಾದಿನದಿಗಳು ನಿನ್ನ ಆಜ್ಞಾವರ್ತಿಗಳಾಗಿಯೇ ಪ್ರವಹಿಸುತ್ತವೆ. ಕ್ಷೀರದಾಯಿಗಳಾದ ಧೇನುಗಳು ನಿನಗೆ ಆಶಿರದ್ರವ್ಯವನ್ನು ಒದಗಿಸಲು ಶೀಘ್ರವಾಗಿ ಬರುತ್ತವೆ.

English Translation.

These your seven rivers flow, Soma, at your command: the milch cows hasten to you.

॥ ಸಂಹಿತಾಪಾಠಃ ॥

ಪ್ರ ಸೋಮ ಯಾಹಿ ಧಾರಯಾ ಸುತ ಇಂದ್ರಾಯ ಮತ್ಸರಃ ।
ದಧಾನೋ ಅಕ್ಷಿತಿ ಶ್ರವಃ ॥ ೭ ॥

॥ ಪದಪಾಠಃ ॥

ಪ್ರ । ಸೋಮ । ಯಾಹಿ । ಧಾರಯಾ । ಸುತಃ । ಇಂದ್ರಾಯ । ಮತ್ಸರಃ ।
ದಧಾನಃ । ಅಕ್ಷಿತಿ । ಶ್ರವಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೋಮಾಭಿಷೂಯಮಾಣ ದೇವ ಮತ್ಸರ ಇಂದ್ರಸ್ಯ ಮದಕರಸ್ತ್ವಂ ಸುತೋಽಸ್ಮಾಭಿರಭಿಷುತಃ ಸನ್ನಿಂದ್ರಾಯೇಂದ್ರಾರ್ಥಂ ದಶಾಪವಿತ್ರಾನ್ನಿರ್ಗತಯಾ ಸಂತತಯಾ ತ್ವದೀಯಯಾ ಧಾರಯಾ

**ದ್ರೋಣಕಲಶಂ ಪ್ರ ಯಾಹಿ । ಪ್ರಕರ್ಷೇಣ ಪ್ರಾಪ್ನುಹಿ । ಯದ್ವಾ । ಹೇ ಸೋಮ ಸುತೋಽಭಿಷುತ-ಸ್ತ್ವಮಿಂದ್ರಾಯ ಮತ್ಸರೋ ಮಾದಯಿತೃತಮಃ ಸನ್ ಧಾರಯಾಗ್ನೌ ಸ್ವಾಹಾಕಾರೇಣ ಪಾತ್ರಾತ್ಪತಂತ್ಯಾ ಧಾರಯಾ ಸಹ ತ್ವಮಿಂದ್ರಮುಪಯಾಹಿ । ಕೀದೃಶಃ । ಅಕ್ಷಿತ್ಯಕ್ಷೀಣಂ ಶ್ರವಃ । ಶ್ರವ ಇತ್ಯನ್ನನಾಮ । ದಧಾನೋಽಸ್ಮಭ್ಯಂ ಪ್ರಯಚ್ಛನ್ ಪ್ರ ಯಾಹೀತಿ ॥**

॥ ಪ್ರತಿಪದಾರ್ಥ ॥

**ಸೋಮ**— ಎಲೈ ಸೋಮದೇವನೇ । **ಮತ್ಸರಃ** - ಇಂದ್ರನಿಗೆ ಹರ್ಷವನ್ನುಂಟುಮಾಡುವ ನೀನು । **ಸುತಃ** —ಹಿಂಡಲ್ಪಟ್ಟ । **ಅಕ್ಷಿತಿ**—ಕ್ಷಯರಹಿತವಾದ । **ಶ್ರವಃ**—ಅನ್ನವನ್ನು । **ದಧಾನಃ**—ನಮಗೆ ಕೊಡುತ್ತ । **ಇಂದ್ರಾಯ** — ಇಂದ್ರಾರ್ಥವಾಗಿ । **ಧಾರಯಾ** - ಪ್ರವಾಹರೂಪದಲ್ಲಿ । **ಪ್ರ ಯಾಹಿ** – ದ್ರೋಣಕಲಶಕ್ಕೆ ಅಭಿಮುಖವಾಗಿ ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಇಂದ್ರನಿಗೆ ಹರ್ಷವನ್ನುಂಟುಮಾಡುವ ನೀನು ಹಿಂಡಲ್ಪಟ್ಟವನಾಗಿ, ಕ್ಷಯರಹಿತವಾದ ಅನ್ನವನ್ನು ನಮಗೆ ಕೊಡುತ್ತ ಇಂದ್ರಾರ್ಥವಾಗಿ ಪ್ರವಾಹರೂಪದಲ್ಲಿ ದ್ರೋಣಕಲಶಕ್ಕೆ ಅಭಿಮುಖವಾಗಿ ಪ್ರವಹಿಸು.

## English Translation

Proceed, Soma, in a stream when effused, giving exhilaration to Indra, bestowing (upon us) inexhaustible food.

॥ ಸಂಹಿತಾಪಾಠಃ ॥

ಸಮು ತ್ವಾ ಧೀಭಿರಸ್ವರನ್ ಹಿನ್ವತೀಃ ಸಪ್ತ ಜಾಮಯಃ ।
ವಿಪ್ರಮಾಜಾ ವಿವಸ್ವತಃ ॥ ೮ ॥

॥ ಪದಪಾಠಃ ॥

ಸಂ । ಊಂ ಇತಿ । ತ್ವಾ । ಧೀಭಿಃ । ಅಸ್ವರನ್ । ಹಿನ್ವತೀಃ । ಸಪ್ತ । ಜಾಮಯಃ ।
ವಿಪ್ರಂ । ಆಜಾ । ವಿವಸ್ವತಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ಹಿನ್ವತೀಃ ॥ ಲಿಂಗವ್ಯತ್ಯಯಃ ॥ ಹಿನ್ವಂತಃ ಸ್ತುತೀಃ ಪ್ರೇರಯಂತಃ ಸಪ್ತ ಸಪ್ತ-ಸಂಖ್ಯಾಕಾ ಜಾಮಯ ಏಕಸ್ಮಿನ್ಯಜ್ಞೇ ಕರ್ಮಕರಣೇನ ಪರಸ್ಪರಂ ಬಂಧುಭೂತಾ ಹೋತೃಪ್ರಭೃತಯಃ ಸಪ್ತ ಹೋತ್ರಕಾ ವಿವಸ್ವತೋ ದೇವಾನಾಂ ಹವಿಷ್ಪ್ರದಾನೇನ ಪರಿಚರಣವತೋ ಯಜಮಾನಸ್ಯಾಜಾ ।

ಅಜಂತಿ ಗಚ್ಛಂತ್ಯೃತ್ವಿಜೋಽತ್ರೇತ್ಯಾಜಿರ್ಯಜ್ಞಃ । ತಸ್ಮಿನ್ ವಿಪ್ರಂ ಮೇಧಾವಿನಂ ಪವಮಾನಂ ತ್ವಾ ತ್ವಾಮೇವ ಧೀಭಿರ್ಧೀಯತೇ ಇತಿ ಧೀಭಿಃ ಸ್ತುತಿಭಿಃ ಸಮಸ್ವರನ್ । ಅಶಬ್ದಯನ್ । ಅಸ್ತುವನ್ । ಯದ್ವಾ । ಹಿನ್ವತೀರ್ಗಚ್ಛಂತ್ಯಃ ಸಪ್ತ ಜಾಮಯೋ ಗಂಗಾದ್ಯಾಃ ಸಪ್ತ ನದ್ಯೋ ಧೀಭಿಃ ॥ ವರ್ಣಲೋಪಶ್ಛಾಂದಸಃ ॥ ಧೀತಿಭಿರಂಗುಲೀಭಿರ್ವಿಪ್ರಂ ತ್ವಾಂ ಸಮಸ್ವರನ್ । ಪ್ರೇರಯಂತಿ । ವಸತೀವರೀಭಿರೇಕಧನಾಭಿಶ್ಚ ಪರಿಶೋಧನಾರ್ಥಂ ಪ್ರೇರಯಂತೀತಿ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಹಿನ್ವತೀಃ**—ಸ್ತುತಿಗಳನ್ನು ಅರ್ಪಿಸುವವರೂ । **ಸಪ್ತ**—ಏಳು ಸಂಖ್ಯೆಯುಳ್ಳವರೂ । **ಜಾಮಯಃ**—ಒಂದೇ ಯಜ್ಞದಲ್ಲಿ ಆಪ್ತರಾಗಿ ಕರ್ಮನಿರತರಾಗಿರುವವರೂ ಆದ **ಹೋತೃ**ಗಳು । **ವಿವಸ್ವತಃ**—ಯಜಮಾನನ । **ಆಜಾ**—ಯಜ್ಞದಲ್ಲಿ । **ವಿಪ್ರಂ**—ಮೇಧಾವಿಯಾದ । **ತ್ವಾ ಉ**—ನಿನ್ನನ್ನೇ । **ಧೀಭಿಃ**—ಸ್ತುತಿಗಳಿಂದ । **ಸಮಸ್ವರನ್**—ಪ್ರಶಂಸಿಸುತ್ತಾರೆ.

। ಭಾವಾರ್ಥ ॥

ಎಲೈ ಸೋಮದೇವನೇ, ಸ್ತುತಿಗಳನ್ನು ಅರ್ಪಿಸುವವರೂ ಒಂದೇ ಯಜ್ಞದಲ್ಲಿ ಪರಸ್ಪರ ಸಹಾಯಕರಾಗಿರುವವರೂ ಆದ ಈ ಸಪ್ತಹೋತೃಗಳು ಯಜಮಾನನ ಯಜ್ಞದಲ್ಲಿ ಮೇಧಾವಿಯಾದ ನಿನ್ನನ್ನೇ ಸ್ತುತಿಗಳಿಂದ ಪ್ರಶಂಸಿಸುತ್ತಾರೆ

**English Translation.**

The seven kindred (priests) uttering (praises) and worshipping (the gods with oblations) invoked you the sage at the sacrifice with hymns.

॥ ಸಂಹಿತಾಪಾಠಃ ॥

ಮೃಜಂತಿ ತ್ವಾ ಸಮಗ್ರುವೋಽವ್ಯೇ ಜೀರಾವಧಿ ಷ್ವಣಿ ।
ರೇಭೋ ಯದಜ್ಯಸೇ ವನೇ ॥ ೯ ॥

॥ ಪದಪಾಠಃ ॥

ಮೃಜಂತಿ । ತ್ವಾ । ಸಂ । ಅಗ್ರುವಃ । ಅವ್ಯೇ । ಜೀರೌ । ಅಧಿ । ಸ್ವನಿ ।
ರೇಭಃ । ಯತ್ । ಅಜ್ಯಸೇ । ವನೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅಗ್ರುವಃ । ಅಂಗುಲಿನಾಮೈತತ್ । ಅಜಂತಿ ಪ್ರಕ್ಷಿಪಂತಿ ಹ
ಯದ್ವಾ । ಅಗೇರ್ಗತ್ಯರ್ಥಸ್ಯ । ಕರ್ಮಕರಣಾರ್ಥಮಿತ

ಯೋಽಸ್ಮದೀಯೋ । ಜೀರೌ ಪಾಪಾನಾಮಭಿಭಾವುಕೇ ಕ್ಷಿಪ್ರಂ ಕೃತೇ ವಾ ಸ್ವನ್ಯಧ್ಯಧಿಕಂ ಶಬ್ದಾಯಮಾನೇಽನ್ಯೇಽವಿವಾಲೇನ ಕೃತೇ ಪವಿತ್ರೇ ತ್ವಾ ತ್ವಾಂ ತದಾ ಸಂ ಮೃಜಂತಿ । ಸಮ್ಯಕ್ ಶೋಧಯಂತಿ । ಯದ್ಯದಾ ರೇಭಃ ॥ ರೇಭೃ ಶಬ್ದೇ ॥ ಉದಕಮಧ್ಯೇ ಪ್ರಕ್ಷೇಪೇಣ ಶಬ್ದಾಯಮಾನಸ್ತ್ವಂ ವನೇ ವನನೀಯೇ ವಸತೀವರ್ಯೋಖ್ಯ ಉದಕೇಽಜ್ಯಸೇ ಅಕ್ತಃ ಸಿಕ್ತೋ ಭವಸಿ । ತದಾ ಮೃಜಂತೀತ್ಯನ್ವಯಃ ॥

॥ಪ್ರತಿಪದಾರ್ಥ॥

(ಎಲೈ ಸೋಮದೇವನೇ) ಯತ್—ಯಾವಾಗ । ರೇಭಃ—ಉದಕ ಮಧ್ಯದಲ್ಲಿ ಶಬ್ದಮಾಡುವ ನೀನು । ವನೇ—ಪೂಜ್ಯವಾದ ಉದಕದಲ್ಲಿ । ಅಜ್ಯಸೇ—ಮಿಶ್ರನಾಗುವೆಯೋ ಆಗ । ಅಗ್ರುವಃ—ಅಂಗುಲಿಗಳು । ಜೀರೌ—ಕ್ಷಿಪ್ರವಾಗಿ । ಸ್ವನಿ ಅಧಿ—ಅಧಿಕವಾಗಿ ಶಬ್ದಮಾಡತಕ್ಕದ್ದೂ ಆದ । ಅನ್ಯೇ—ದಶಾಪವಿತ್ರದಲ್ಲಿ । ತ್ವಾ—ನಿನ್ನನ್ನು । ಸಂ ಮೃಜಂತಿ—ಶುದ್ಧಿಗೊಳಿಸುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಉದಕಮಧ್ಯದಲ್ಲಿ ಶಬ್ದಮಾಡತಕ್ಕ ನೀನು ಪೂಜ್ಯವಾದ ಉದಕದಲ್ಲಿ ಯಾವಾಗ ಮಿಶ್ರಿತನಾಗುವೆಯೋ ಆಗ ಹತ್ತು ಅಂಗುಲಿಗಳೂ ಸಹ ಕ್ಷಿಪ್ರವಾಗಿ ನಿರ್ಮಿತವಾದುವೂ ಅಧಿಕವಾಗಿ ಶಬ್ದಮಾಡತಕ್ಕವೂ ಆದ ದಶಾಪವಿತ್ರದಲ್ಲಿ ನಿನ್ನನ್ನು ಶುದ್ಧಿಗೊಳಿಸುತ್ತವೆ.

English Translation.

The fingers cleanse you in the quickly-made loud-sounding (woollen) filter, when with a noise you are sprinkled with the water.

॥ ಸಂಹಿತಾಪಾಠಃ ॥

ಪವಮಾನಸ್ಯ ತೇ ಕವೇ ವಾಜಿನ್ತ್ಸರ್ಗಾ ಅಸೃಕ್ಷತ ।
ಅರ್ವಂತೋ ನ ಶ್ರವಸ್ಯವಃ ॥ ೧೦ ॥

॥ ಪದಪಾಠಃ ॥

ಪವಮಾನಸ್ಯ । ತೇ । ಕವೇ । ವಾಜಿನ್ । ಸರ್ಗಾಃ । ಅಸೃಕ್ಷತ ।
ಅರ್ವಂತಃ । ನ । ಶ್ರವಸ್ಯವಃ ॥ ೧೦ ॥

॥ ಸಾಯಣಭಾಷ್ಯಂ ॥

ಮಾರ್ಜನಪ್ರಸಂಗಮಾಹ । ಹೇ ಕವೇ ಕ್ರಾಂತಪ್ರಜ್ಞ ಹೇ ವಾಜಿನ್ನನ್ನವನ್ ಸೋಮ ಪವಮಾನಸ್ಯ ದಶಾಪವಿತ್ರೇಣ ಪೂಯಮಾನಸ್ಯ ತೇ ತವ ಸರ್ಗಾಃ । ಸೃಜ್ಯಂತ ಇತಿ ಸರ್ಗಾ ಧಾರಾಃ । ಕೀದೃಶಾಃ ।

ಶ್ರವಸ್ಯವಃ ॥ ಛಂದಸಿ ಪರೇಚ್ಛಾಯಾಂ ಕ್ಯಚ್ ॥ ಯಷ್ಟ್ರೄಣಾಮನ್ನಂ ಕಾಮಯಮಾನಾಸ್ತ್ವದೀಯಾ ಧಾರಾ ಅಸೃಕ್ಷತ । ಸೃಜಂತಿ । ನಿರ್ಗಚ್ಛಂತೀತ್ಯರ್ಥಃ । ತತ್ರ ದೃಷ್ಟಾಂತಃ । ಅರ್ವಂತೋ ನ । ಯಥಾಶ್ವಾ ಮಂದುರಾತೋ ನಿರ್ಗಚ್ಛಂತಿ ತದ್ವತ್ ಪವಿತ್ರಾನ್ನಿಃಸರಂತೀತ್ಯರ್ಥಃ । ಪ್ರಯೋಗಾಪೇಕ್ಷಂ ಚಾತ್ರ ಧಾರಾಬಾಹುಲ್ಯಂ ॥

॥ ಪ್ರತಿಪದಾರ್ಥ ॥

**ಕವೇ**—ಕ್ರಾಂತಪ್ರಜ್ಞನೂ । **ವಾಜಿನ್**—ಅನ್ನವಂತನೂ ಆದ ಎಲೈ ಸೋಮದೇವನೇ । **ಪವಮಾನಸ್ಯ**—ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದಿದ । **ತೇ**—ನಿನ್ನ । **ಶ್ರವಸ್ಯವಃ**—ಹವಿಸ್ಸನ್ನು ಇಚ್ಛಿಸುವ । **ಸರ್ಗಾಃ**— ಧಾರೆಗಳು । **ಅರ್ವಂತೋ ನ**— ವೇಗವಾಗಿ ಓಡುವ ಅಶ್ವಗಳಂತೆ । **ಅಸೃಕ್ಷತ**— ಶೀಘ್ರವಾಗಿ ಪ್ರವಹಿಸುತ್ತವೆ.

॥ ಭಾವಾರ್ಥ ॥

ಕ್ರಾಂತಪ್ರಜ್ಞನೂ, ಅನ್ನವಂತನೂ ಆದ ಎಲೈ ಸೋಮದೇವನೇ, ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದಿದ ನಿನ್ನ ಹವಿಸ್ಸನ್ನು ಇಚ್ಛಿಸುವ ಧಾರೆಗಳು ವೇಗವಾಗಿ ಓಡುವ ಅಶ್ವಗಳಂತೆ ಶೀಘ್ರವಾಗಿ ಪ್ರವಹಿಸುತ್ತವೆ.

## English Translation.

Sage Soma, possessor of food, your food-desiring streams when you are filtered are let loose like horses.

॥ ಸಂಹಿತಾಪಾಠಃ ॥

ಅಚ್ಛಾ ಕೋಶಂ ಮಧುಶ್ಚುತಮಸೃಗ್ರಂ ವಾರೇ ಅವ್ಯಯೇ ।
ಅವಾವಶಂತ ಧೀತಯಃ ॥ ೧೧ ॥

॥ ಪದಪಾಠಃ ॥

ಅಚ್ಛ । ಕೋಶಂ । ಮಧುಽಶ್ಚುತಂ । ಅಸೃಗ್ರಂ । ವಾರೇ । ಅವ್ಯಯೇ ।
ಅವಾವಶಂತ । ಧೀತಯಃ ॥ ೧೧ ॥

॥ ಸಾಯಣಭಾಷ್ಯಂ ॥

ಧಾರಾನಿರ್ಗಮನಪ್ರಸಂಗಾದಭಿಧೀಯತೇ । ಮಧುಶ್ಚುತಂ ಮಧುರರಸಸ್ಯ ಚ್ಯಾವಯಿತಾರಂ ಕ್ಷಾರಯಿತಾರಂ ಕೋಶಂ ದ್ರೋಣಕಲಶಮಚ್ಛಾಭಿಲಕ್ಷ್ಯಾವ್ಯಯೇಽವಿಮಯೇಽವಿಸ್ವಭೂತೇ ವಾ ವಾರೇ ವಾಲೇ ದಶಾಪವಿತ್ರೇಽಸೃಗ್ರಂ । ಸೋಮಾ ಋತ್ವಿಗ್ಭಿಃ ಸೃಜ್ಯಂತೇ ॥ ಸೃಜೇಃ ಕರ್ಮಣಿ ಲಿಙಾಂ ಲಿಙೋ ಭವಂತೀತಿ ರ್ಘೋ ರಮಾದೇಶಃ ॥ ಕಿಂಚ ಧೀತಯಃ । ಅಂಗುಲಿನಾಮ್ಯೈತತ್ । ಧಯಂತಿ ಪಿಬಂತ್ಯಾಭಿರಿತಿ । ಅಸ್ಮದೀಯಾ ಅಂಗುಲಯೋಽವಾವಶಂತ । ತಾನ್ ಸೋಮಾನ್ ಪುನಃಪುನರ್ಮಾರ್ಜನಾರ್ಥಂ ಕಾಮಯಂತೇ ॥

॥ ಪ್ರತಿಪದಾರ್ಥ ॥

**ಮಧುಶ್ಚುತಂ**—ಮಧುರವಾದ ರಸವನ್ನು ಸುರಿಸತಕ್ಕ | **ಕೋಶಂ ಅಚ್ಛ**—ದಶಾಪವಿತ್ರಕ್ಕೆ ಅಭಿಮುಖವಾಗಿ | **ಅವ್ಯಯೇ**—ಉಣ್ಣೆಯಿಂದ ನಿರ್ಮಿತವಾದ | **ವಾರೇ**—ನಾರುಗಳ ಮೇಲೆ | **ಅಸೃಗ್ರಂ**—ಸೋಮರಸಗಳು ಸುರಿಯಲ್ಪಡುತ್ತವೆ | **ಧೀತಯಃ**—ಅಂಗುಲಿಗಳು | **ಅವಾವಶಂತ**—ಅವನ್ನು ಶುದ್ಧಿಗೊಳಿಸಲು ತವಕಪಡುತ್ತವೆ.

॥ ಭಾವಾರ್ಥ ॥

ಮಧುರವಾದ ರಸವನ್ನು ಸುರಿಸತಕ್ಕ ದಶಾಪವಿತ್ರಕ್ಕೆ ಅಭಿಮುಖವಾಗಿ ಉಣ್ಣೆಯಿಂದ ನಿರ್ಮಿತವಾದ ನಾರುಗಳ ಮೇಲೆ ಸೋಮರಸಗಳು ಸುರಿಯಲ್ಪಡುತ್ತವೆ. ಅಂಗುಲಿಗಳು ಅವನ್ನು ಶುದ್ಧಿಗೊಳಿಸಲು ತವಕಪಡುತ್ತವೆ.

## English Translation.

They are let loose in the woollen filter (to go) towards the honey-dropping vessel; our fingers have desired them.

॥ ಸಂಹಿತಾಪಾಠಃ ॥

ಅಚ್ಛಾ ಸಮುದ್ರಮಿಂದವೋಽಸ್ತಂ ಗಾವೋ ನ ಧೇನವಃ ।
ಅಗ್ಮನ್ನೃತಸ್ಯ ಯೋನಿಮಾ ॥ ೧೨ ॥

॥ ಪದಪಾಠಃ ॥

ಅಚ್ಛ । ಸಮುದ್ರಂ । ಇಂದವಃ । ಅಸ್ತಂ । ಗಾವಃ । ನ । ಧೇನವಃ ।
ಅಗ್ಮನ್ । ಋತಸ್ಯ । ಯೋನಿಂ । ಆ ॥ ೧೨ ॥

॥ ಸಾಯಣಭಾಷ್ಯಂ ॥

ಇಂದವಃ ಕ್ಷರಂತಃ ಸೋಮಾಃ ಸಮುದ್ರಂ ಸೋಮಾನಾಮೇಕತ್ರೈವ ಸಂಗಮನಸ್ಥಾನಂ ದ್ರೋಣಕಲಶಮಭಿಗಚ್ಛಂತಿ । ತತ್ರ ದೃಷ್ಟಾಂತಃ । ಧೇನವಃ ಪಯಃಪ್ರದಾನೇನ ಜನಾನಾಂ ಪ್ರೀಣಯಿತ್ರ್ಯೋ ನವಪ್ರಸೂತಿಕಾ ಗಾವೋಽಸ್ತಂ ಗೃಹಂ ಯಥಾಭಿಗಚ್ಛಂತಿ ತದ್ವತ್ । ಕಿಂಚ ತೇ ಸೋಮಾ ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಯೋನಿಂ ಸ್ಥಾನಮಾಗ್ಮನ್ । ಆಭಿಮುಖ್ಯೇನ ಗಚ್ಛಂತಿ ॥ ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗಮಹನೇತ್ಯುಪಧಾಲೋಪಃ ॥

॥ ಪ್ರತಿಪದಾರ್ಥ ॥

**ಧೇನವಃ**—ಕ್ಷೀರವನ್ನು ಕೊಡತಕ್ಕ | **ಗಾವಃ**—ಗೋವುಗಳು | **ಅಸ್ತಂ ನ**—ಗೃಹಾಭಿಮುಖವಾಗಿ ಹೋಗುವಂತೆ | **ಇಂದವಃ**—ಸ್ರವಿಸುವ ಸೋಮಗಳು | **ಸಮುದ್ರಂ ಅಚ್ಛ**—ರಸಗಳೆಲ್ಲವೂ ಒಟ್ಟಿಗೆ ಸೇರತಕ್ಕ

ದ್ರೋಣಕಲಶಕ್ಕೆ ಅಭಿಮುಖವಾಗಿ ಹೋಗಿ ಸೇರುತ್ತವೆ. (ಮತ್ತು) | ಋತಸ್ಯ—ಯಜ್ಞದ | ಯೋನಿಂ—ಸ್ಥಾನಕ್ಕೆ| ಆ ಅಗ್ಮನ್— ಹೋಗಿ ಸೇರುತ್ತವೆ.

|| ಭಾವಾರ್ಥ ||

ಕ್ಷೀರವನ್ನು ಕೊಡತಕ್ಕ ಗೋವುಗಳು ಗೃಹಾಭಿಮುಖವಾಗಿ ಆದರದಿಂದ ಹೋಗುವಂತೆ ಪ್ರವಿಸುವ ಸೋಮಗಳು ರಸಗಳೆಲ್ಲವೂ ಒಟ್ಟಿಗೆ ಸೇರತಕ್ಕ ದ್ರೋಣಕಲಶಕ್ಕೆ ಅಭಿಮುಖವಾಗಿ ಹೋಗಿ ಸೇರುತ್ತವೆ. ಮತ್ತು ಅಲ್ಲಿಂದ ಯಜ್ಞಸ್ಥಾನವನ್ನು ಹೋಗಿ ಸೇರುತ್ತವೆ.

English Translation.

The Soma-juices go to the ocean, as milch cows to their stall; they go to the place of sacrifice.

|| ಸಂಹಿತಾಪಾಠಃ ||

ಪ್ರ ಣ ಇಂದೋ ಮಹೇ ರಣ ಆಪೋ ಅರ್ಷಂತಿ ಸಿಂಧವಃ |

ಯದ್ಗೋಭಿರ್ವಾಸಯಿಷ್ಯಸೇ || ೧೩ ||

|| ಪದಪಾಠಃ ||

ಪ್ರ | ನಃ | ಇಂದೋ ಇತಿ | ಮಹೇ | ರಣೇ | ಆಪಃ | ಅರ್ಷಂತಿ | ಸಿಂಧವಃ |

ಯತ್ | ಗೋಭಿಃ | ವಾಸಯಿಷ್ಯಸೇ || ೧೩ ||

|| ಸಾಯಣಭಾಷ್ಯಂ ||

ಹೇ ಇಂದೋ ಕ್ಷರನ್ ಸೋಮ ನೋಽಸ್ಮಾಕಂ ಸ್ವಭೂತಾಯ ರಣೇ ರಣಾಯ | ರಣಂತಿ ಸ್ತುವಂತಿ ದೇವಾನತ್ರೇತಿ ರಣೋ ಯಜ್ಞಃ || ಅಧಿಕರಣೇ ಅಪ್ | ಜಿೇರ್ಯಃ | ಪಾ. ೭–೧–೧೩ | ಇತಿ ನ ಭವತಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ || ಮಹೇ ಮಹತೇ ರಣಾಯ ಯಜ್ಞಾಯ ತದರ್ಥಂ ಸಿಂಧವಃ ಸ್ಯಂದಮಾನಾ ಆಪೋ ವಸತೀವರ್ಯೋಖ್ಯಾಃ ಸೋಮಸೇಕಾರ್ಥಂ ತದಾರ್ಷಂತಿ | ಪ್ರಗಚ್ಛಂತಿ | ಯದ್ಯದಾ ತ್ವಂ ಗೋಭಿರ್ಗವ್ಯೈರ್ದಧಿಕ್ಷೀರಾದಿಭಿರ್ವಾಸಯಿಷ್ಯಸೇ ಆಚ್ಛಾದ್ಯಸೇ ಮಿಶ್ರಿತೋ ಭವಸಿ ತದಾಪೋ ಗಚ್ಛಂತೀತಿ |'

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ಯತ್—ಯಾವಾಗ | ಗೋಭಿಃ—ಕ್ಷೀರಾದ್ಯಾಶಿರದ್ರವ್ಯಗಳೊಡನೆ | ವಾಸಯಿಷ್ಯಸೇ—ನೀನು ಸೇರಿಕೊಳ್ಳುವೆಯೋ (ಆಗ) | ನಃ—ನಮ್ಮ | ಮಹೇ—ಮಹತ್ತಾದ |

ರಣೇ— ಯಜ್ಞಾರ್ಥವಾಗಿ | ಸಿಂಧವಃ— ಪ್ರವಾಹಾತ್ಮಕಗಳಾದ | ಆಪಃ— ವಸತೀವರ್ಯಾದ್ಯುದಕಗಳು | ಪ್ರ ಅರ್ಷಂತಿ— ಪ್ರವಹಿಸಿ ಬರುತ್ತವೆ.

|| ಭಾವಾರ್ಥ ||

ಎಲೈ ಸೋಮದೇವನೇ. ಕ್ಷೀರಾದ್ಯಾಶಿರದ್ರವ್ಯಗಳೊಡನೆ ನೀನು ಯಾವಾಗ ಸೇರಿಕೊಳ್ಳುವೆಯೋ, ಆಗ ನಮ್ಮ ಮಹತ್ತಾದ ಯಜ್ಞಾರ್ಥವಾಗಿ ಪ್ರವಾಹಾತ್ಮಕಗಳಾದ ವಸತೀವರ್ಯಾದ್ಯುದಕಗಳು ಪ್ರವಹಿಸಿ ಬರುತ್ತವೆ.

## English Translation.

Indu, the flowing waters hasten to our great sacrifices when you are mixed with the curds and milk.

|| ಸಂಹಿತಾಪಾಠಃ ||

ಅಸ್ಯ ತೇ ಸಖ್ಯೇ ವಯಮಿಯಕ್ಷಂತಸ್ತ್ವೋತಯಃ |

ಇಂದೋ ಸಖಿತ್ವಮುಶ್ಮಸಿ || ೧೪ ||

|| ಪದಪಾಠಃ ||

ಅಸ್ಯ | ತೇ | ಸಖ್ಯೇ | ವಯಂ | ಇಯಕ್ಷಂತಃ | ತ್ವಾಽಊತಯಃ |

ಇಂದೋ ಇತಿ | ಸಖಿಽತ್ವಂ | ಉಶ್ಮಸಿ || ೧೪ ||

|| ಸಾಯಣಭಾಷ್ಯಂ ||

**ಹೇ ಇಂದೋ ಪವಮಾನ ಇಯಕ್ಷಂತೋ ಯಷ್ಟುಮಿಚ್ಛಂತಃ ಪೂಜಯಿತುಮಿಚ್ಛಂತೋ ವಾಸ್ಯ ಪ್ರಸಿದ್ಧಸ್ಯ ತೇ ತವ ಸಖ್ಯೇ ಸಖಿಕರ್ಮಣಿ ಸ್ಥಿತಾ ವಯಂ ತ್ವೋತಯಸ್ತ್ವದಾಯತ್ತರಕ್ಷಣಾಃ ಸಂತಃ ಸಖಿತ್ವಂ ಸಖಿಭಾವಮೇವೋಶ್ಮಸಿ | ಉಶ್ಮಃ | ಕಾಮಯಾಮಹೇ ||**

|| ಪ್ರತಿಪದಾರ್ಥ ||

ಇಂದೋ— ಎಲೈ ಸೋಮದೇವನೇ | ಇಯಕ್ಷಂತಃ— ಯಜ್ಞವನ್ನು ಮಾಡಲಿಚ್ಛಿಸುವವರೂ | **ಅಸ್ಯ—** ಪ್ರಸಿದ್ಧವಾದ | ತೇ— ನಿನ್ನ | ಸಖ್ಯೇ— ಮಿತ್ರತ್ವದಲ್ಲಿರುವವರೂ ಆದ | **ವಯಂ**— ನಾವು | **ತ್ವೋತಯಃ—** ನಿನ್ನ ರಕ್ಷಣೆಯನ್ನಿಚ್ಛಿಸುವವರಾಗಿ | ಸಖಿತ್ವಂ— ನಿನ್ನ ಮಿತ್ರತ್ವವನ್ನು | ಉಶ್ಮಸಿ— ಅಪೇಕ್ಷಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಯಜ್ಞವನ್ನು ಮಾಡಲಿಚ್ಛಿಸುವವರೂ ಪ್ರಸಿದ್ಧವಾದ ನಿನ್ನ ಮಿತ್ರತ್ವವನ್ನು ಹೊಂದಿರುವವರೂ ಆದ ನಾವು ನಿನ್ನ ರಕ್ಷಣೆಯನ್ನಿಚ್ಛಿಸುವವರಾಗಿ ನಿನ್ನ ಮಿತ್ರತ್ವವನ್ನು ಅಪೇಕ್ಷಿಸುತ್ತೇವೆ

## English Translation.

Indu, we abiding in your friendship, desiring to sacrifice, depending on your protection, desire your friendship.

॥ ಸಂಹಿತಾಪಾಠಃ ॥

ಆ ಪವಸ್ವ ಗವಿಷ್ಟಯೇ ಮಹೇ ಸೋಮ ನೃಚಕ್ಷಸೇ ।
ಏಂದ್ರಸ್ಯ ಜಠರೇ ವಿಶ ॥ ೧೫ ॥

॥ ಪದಪಾಠಃ ॥

ಆ । ಪವಸ್ವ । ಗೋಽಇಷ್ಟಯೇ । ಮಹೇ । ಸೋಮ । ನೃಽಚಕ್ಷಸೇ ।
ಆ । ಇಂದ್ರಸ್ಯ । ಜಠರೇ । ವಿಶ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪವಮಾನ ಗವಿಷ್ಟಯೇಽಂಗಿರಸಾಂ ಗವಾಮನ್ವೇಷ್ಟ್ರೇ ಮಹೇ ಮಹತೇ ನೃಚಕ್ಷಸೇ ನೃಣಾಂ ಮನುಷ್ಯಾಣಾಂ ದ್ರಷ್ಟ್ರೇ ಕರ್ಮನೇತ್ರೃಣಾಂ ಫಲಂ ಪಶ್ಯತೇ ವಾ ಚಿಂದ್ರಾಯಾ ಪವಸ್ವ । ಪಾತ್ರೇಷು ದಶಾಪವಿತ್ರೇಣ ಪೂತೋ ಭವ । ಇಂದ್ರಸ್ಯ ಜಠರ ಉದರ ಉದರಭೂತೇ ದ್ರೋಣಕಲಶೇ ವಾ ವಿಶ । ಪ್ರವಿಶ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಗವಿಷ್ಟಯೇ**—ಗೋವುಗಳನ್ನು ಹುಡುಕಿಕೊಡುವವನೂ **ಮಹೇ**—ಮಹತ್ವ್ವರೂಪವುಳ್ಳವನೂ । **ನೃಚಕ್ಷಸೇ**—ಮಾನವರ ಕರ್ಮಗಳನ್ನು ನೋಡತಕ್ಕವನೂ ಆದ ನೀನು ಇಂದ್ರಾರ್ಥವಾಗಿ । **ಆ ಪವಸ್ವ**—ಪ್ರವಹಿಸು । **ಇಂದ್ರಸ್ಯ**—ಇಂದ್ರನ । **ಜಠರೇ**—ಉದರದಲ್ಲಿ । **ಆ ವಿಶ**—ಪ್ರವೇಶಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಗೋವುಗಳನ್ನು ಹುಡುಕಿಕೊಡುವವನೂ, ಮಹತ್ವ್ವರೂಪವುಳ್ಳವನೂ, ಮಾನವರ ಕರ್ಮಗಳನ್ನು ನೋಡತಕ್ಕವನೂ ಆದ ನೀನು ಇಂದ್ರಾರ್ಥವಾಗಿ ಪ್ರವಹಿಸು. ಇಂದ್ರನ ಉದರದಲ್ಲೂ ಪ್ರವೇಶಿಸು.।

## English Translation.

Flow, Soma, for the mighty cattle-seeker, the beholder of men, enter Indra's belly.

|| ಸಂಹಿತಾಪಾಠಃ ||

ಮಹಾँ ಅಸಿ ಸೋಮ ಜ್ಯೇಷ್ಠ ಉಗ್ರಾಣಾಮಿಂದ ಓಜಿಷ್ಠಃ ।
ಯುಧ್ವಾ ಸಞ್ಛಶ್ವಜ್ಜಿಗೇಥ ॥ ೧೬ ॥

|| ಪದಪಾಠಃ ||

ಮಹಾನ್ । ಅಸಿ । ಸೋಮ । ಜ್ಯೇಷ್ಠಃ । ಉಗ್ರಾಣಾಂ । ಇಂದೋ ಇತಿ । ಓಜಿಷ್ಠಃ ।
ಯುಧ್ವಾ । ಸನ್ । ಶಶ್ವತ್ । ಜಿಗೇಥ ॥ ೧೬ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ಮಹಾನಸಿ । ಯತಸ್ತ್ವಂ ದೇವಾನಾಂ ಪ್ರೀಣಯಿತಾ ಖಲು । **ತ್ವಂ ಜ್ಯೇಷ್ಠಃ** ಪ್ರಶಸ್ಯತಮೋ ಭವಸಿ । ಕಿಂಚ ಹೇ ಇಂದೋ ಪವಮಾನ ತ್ವಮುಗ್ರಾಣಾಮುದ್ಗೂರ್ಣಬಲಾನಾಮ**ಪ್ಯೋಜಿಷ್ಠ** ಓಜಸ್ವಿತಮೋ ಭವಸಿ । ತ್ವಂ ಯುಧ್ವಾ ಸಞ್ಛತ್ರುಭಿಃ ಸಹ ಯುದ್ಧಂ ಕುರ್ವನ್ನೇವ **ಶಶ್ವತ್ ಸರ್ವದಾ** ಜಿಗೇಥ । ತಾಂಸ್ತೇಷಾಂ ಧನಾನಿ ಚ ಜಿತವಾನಸಿ ॥ ಜಿ ಜಯೇ । ಥಲಿ **ಸನ್‌ಲಿಟೋರ್ಜೇರಿತ್ಯಭ್ಯಾಸಾ**-ದುತ್ತರಸ್ಯ ಕವರ್ಗಾದೇಶಃ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಮಹಾನ್ ಅಸಿ**—ನೀನು ಮಹತ್ತ್ವರೂಪವುಳ್ಳವ**ನಾಗಿದ್ದೀಯೆ** । **ಜ್ಯೇಷ್ಠಃ**—ಎಲ್ಲರಿಗಿಂತಲೂ ಅಧಿಕನಾಗಿದ್ದೀಯೆ । **ಇಂದೋ**—ಪ್ರವಾಹಾತ್ಮಕನಾದ ಎಲೈ **ಸೋಮನೇ** । **ಉಗ್ರಾಣಾಂ**—ಅಧಿಕವಾದ ಬಲವುಳ್ಳವರಲ್ಲೆಲ್ಲಾ । **ಓಜಿಷ್ಠಃ**—ಅತ್ಯಧಿಕವಾದ ವೀರ್ಯವುಳ್ಳ ನೀನು । **ಯುಧ್ವಾ ಸನ್**—ಶತ್ರುಗಳೊಡನೆ ಯುದ್ಧಮಾಡುತ್ತಿರುವಾಗಲೆಲ್ಲಾ । **ಶಶ್ವತ್**—ಯಾವಾಗಲೂ । **ಜಿಗೇಥ**—**ಜಯವನ್ನೇ** ಪಡೆಯುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ನೀನು ಮಹತ್ತ್ವರೂಪವುಳ್ಳವನಾಗಿದ್ದೀಯೆ ಎಲ್ಲರಿಗಿಂತಲೂ ಅಧಿಕನಾಗಿದ್ದೀಯೆ. ಪ್ರವಾಹಾತ್ಮಕನಾದ ಎಲೈ ಸೋಮನೇ, ಅಧಿಕವಾದ ಬಲವುಳ್ಳವರಲ್ಲೆಲ್ಲಾ ಅತ್ಯಧಿಕವಾದ ವೀರ್ಯವುಳ್ಳ ನೀನು ಶತ್ರುಗಳೊಡನೆ ಯುದ್ಧಮಾಡುವ ಎಲ್ಲಾ ಕಾಲಗಳಲ್ಲೂ ಜಯವನ್ನೇ ಪಡೆಯುತ್ತೀಯೆ.

## English Translation.

Soma, you are great, most worthy to be praised; Indu, (you are) the most vigorous of the mighty; engaged in battle you ever triumph.

॥ ಸಂಹಿತಾಪಾಠಃ ॥

ಯ ಉಗ್ರೇಭ್ಯಶ್ಚಿದೋಜೀಯಾಞ್ಛೂರೇಭ್ಯಶ್ಚಿಚ್ಛೂರತರಃ ।
ಭೂರಿದಾಭ್ಯಶ್ಚಿನ್ಮಂಹೀಯಾನ್ ॥ ೧೭ ॥

॥ ಪದಪಾಠಃ ॥

ಯಃ । ಉಗ್ರೇಭ್ಯಃ । ಚಿತ್ । ಓಜೀಯಾನ್ । ಶೂರೇಭ್ಯಃ । ಚಿತ್ । ಶೂರಽತರಃ ।
ಭೂರಿಽದಾಭ್ಯಃ । ಚಿತ್ । ಮಂಹೀಯಾನ್ ॥ ೧೭ ॥

॥ ಸಾಯಣಭಾಷ್ಯಂ ॥

ಯಃ ಸೋಮ ಉಗ್ರೇಭ್ಯಶ್ಚಿದುದ್ಗೂರ್ಣೇಭ್ಯೋ ಬಲವದ್ಭ್ಯೋಽಪ್ಯೋಜೀಯಾನೋಜಸ್ವಿತಮಃ ಕಿಂಚ ಯಃ ಶೂರೇಭ್ಯಶ್ಚಿದ್ವೀರೇಭ್ಯೋಽಪಿ ಶೂರತರೋಽತ್ಯಂತಸಮರ್ಥೋ ಭವತಿ । ತಥಾ ಯಃ ಸೋಮೋ ಭೂರಿದಾಭ್ಯಃ ॥ ಡುದಾಞ್ ದಾನೇ । ಆತೋ ಮನಿನ್ನಿತಿ ವಿಚ್ ॥ ಬಹುಧನಾನಾಂ ದಾತೃಭ್ಯೋಽಪಿ ಮಂಹೀಯಾನ್ । ದಾತೃತಮೋ ಭವತಿ । ತಂ ತ್ವಾಂ ವೃಣೀಮಹ ಇತ್ಯುತ್ತರೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಯಃ**—ಯಾವ ನೀನು । **ಉಗ್ರೇಭ್ಯಶ್ಚಿತ್**—ಅತ್ಯಧಿಕವಾದ ಬಲವುಳ್ಳವರಲ್ಲೆಲ್ಲಾ । **ಓಜೀಯಾನ್**— ಅತ್ಯಂತ ವೀರ್ಯವಂತನಾಗಿರುವೆಯೋ । **ಶೂರೇಭ್ಯಶ್ಚಿತ್**— ಶೂರರಲ್ಲೆಲ್ಲಾ । **ಶೂರತರಃ**—ಅತ್ಯಂತ ಶೂರನೂ । **ಭೂರಿದಾಭ್ಯಃ ಚಿತ್**—ಅಧಿಕವಾದ ದಾನಮಾಡುವವರಲ್ಲೆಲ್ಲ । **ಮಂಹೀಯಾನ್**—ಅತ್ಯಂತ ಉದಾರಿಯೂ ಆಗಿರುವೆಯೋ (ಅಂತಹ ನಿನ್ನನ್ನು ಆರಾಧಿಸುತ್ತೇವೆ.)

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವ ನೀನು ಅತ್ಯಧಿಕವಾದ ಬಲವುಳ್ಳವರಲ್ಲೆಲ್ಲಾ ಅತ್ಯಂತ ವೀರ್ಯವಂತನಾಗಿರುವೆಯೋ, ಶೂರರಲ್ಲೆಲ್ಲಾ ಅತ್ಯಂತ ಶೂರನೂ, ಅಧಿಕವಾಗಿ ದಾನಮಾಡುವವರಲ್ಲೆಲ್ಲಾ ಅತ್ಯಂತ ಉದಾರಿಯೂ ಆಗಿರುವೆಯೋ ಅಂತಹ ನಿನ್ನನ್ನು ಆರಾಧಿಸುತ್ತೇವೆ.

## English Translation.

(You) who (are) mightier than the mighty, braver, more generous than generous –

॥ ಸಂಹಿತಾಪಾಠಃ ॥

ತ್ವಂ ಸೋಮ ಸೂರ ಏಷಸ್ತೋಕಸ್ಯ ಸಾತಾ ತನೂನಾಂ ।
ವೃಣೀಮಹೇ ಸಖ್ಯಾಯ ವೃಣೀಮಹೇ ಯುಜ್ಯಾಯ ॥ ೧೮ ॥

॥ ಪದಪಾಠಃ ॥

ತ್ವಂ । ಸೋಮ । ಸೂರಃ । ಆ । ಇಷಃ । ತೋಕಸ್ಯ । ಸಾತಾ । ತನೂನಾಂ ।
ವೃಣೀಮಹೇ । ಸಖ್ಯಾಯ । ವೃಣೀಮಹೇ । ಯುಜ್ಯಾಯ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸೂರಃ ಸುವೀರ್ಯಃ । ಯದ್ವಾ । ಸರ್ವಸ್ಯ ಯಾಗಾದಿಕರ್ಮಣಿ ಪ್ರೇರಕಃ । ತ್ವಮಿಷೋಽನ್ನಾನ್ಯಸ್ಮಾಕಮಾ ಧೇಹಿ । ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಕಿಂಚ ತ್ವಂ ತೋಕಸ್ಯ ಪುತ್ರಸ್ಯ ತನೂನಾಂ । ತನ್ವಂತಿ ವಿಸ್ತಾರಯಂತಿ ಕುಲಮಿತಿ ತನ್ವಃ ಪೌತ್ರಾಃ । ತೇಷಾಂ ಚ ಸಾತಾ ದಾತಾ ಭವ ॥ ಷಣು ದಾನೇ । ಜನಸನೇತಿ ವಿಟ್ । ಜನಸನೇತ್ಯಾತ್ವಂ ॥ ವಯಂ ತಂ ತ್ವಾಂ ಸಖ್ಯಾಯ ಸಖಿಭಾವಾಯ ಕರ್ಮಣೇ ವಾ ವೃಣೀಮಹೇ । ಸಂಭಜಾಮಹೇ । ತಥಾ ಯುಜ್ಯಾಯ ॥ ಯುಜ್ ಸಹಾಯಃ । ತಸ್ಯ ಭಾವೇ ಕರ್ಮಣಿ ವಾ ಷ್ಯಞ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ-ವೃದ್ಧಿಃ ॥ ಶತ್ರುವಧಾದಿಲಕ್ಷಣಸಾಹಾಯ್ಯಾಯ ಚ ವಯಂ ವೃಣೀಮಹೇ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಸೂರಃ**—ಸರ್ವಪ್ರೇರಕನಾದ । **ತ್ವಂ**—ನೀನು । **ಇಷಃ** । ಅನ್ನಗಳನ್ನು । **ಆ (ದೇಹಿ)**—ನಮಗೆ ಒದಗಿಸು । **ತೋಕಸ್ಯ**—ನಮ್ಮ ಪುತ್ರರಿಗೂ ! **ತನೂನಾಂ**—ಪೌತ್ರರಿಗೂ । **ಸಾತಾ**—ಅನ್ನದಾತನಾಗು । **ಸಖ್ಯಾಯ**—ನಿನ್ನ ಮಿತ್ರತ್ವವನ್ನು ಸಂಪಾದಿಸಲು । **ವೃಣೀಮಹೇ**—ನಾವು ನಿನ್ನನ್ನು ಆರಾಧಿಸುತ್ತೇವೆ । **ಯುಜ್ಯಾಯ**—ನಿನ್ನ ಸಹಾಯವನ್ನು ಪಡೆಯಲು । **ವೃಣೀಮಹೇ**—ನಿನ್ನನ್ನು ಆರಾಧಿಸುತ್ತೇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಸರ್ವಪ್ರೇರಕನಾದ ನೀನು ನಮಗೆ ಅನ್ನಗಳನ್ನು ಒದಗಿಸು ನಮ್ಮ ಪುತ್ರರಿಗೂ ಪೌತ್ರರಿಗೂ ಅನ್ನದಾತನಾಗಿರು. ನಿನ್ನ ಮಿತ್ರತ್ವವನ್ನೂ. ಸಹಾಯವನ್ನೂ, ಪಡೆಯಲು ನಾವು ನಿನ್ನನ್ನು ಆರಾಧಿಸಿ ಆರಿಸುತ್ತೇವೆ.

## English Translation

You, Soma, who are a hero, (bestow) upon (us) food, (be) the giver of sons (to us); we choose you for your friendship. (we choose you) for your alliance.

|| ಸಂಹಿತಾಪಾಠಃ ||

ಅಗ್ನ ಆಯೂಂಷಿ ಪವಸ ಆ ಸುವೋರ್ಜಮಿಷಂ ಚ ನಃ |

ಆರೇ ಬಾಧಸ್ವ ದುಚ್ಛುನಾಂ || ೧೯ ||

|| ಪದಪಾಠಃ |

ಅಗ್ನೇ | ಆಯೂಂಷಿ | ಪವಸೇ | ಆ | ಸುವ | ಊರ್ಜಂ | ಇಷಂ | ಚ | ನಃ |

ಆರೇ | ಬಾಧಸ್ವ | ದುಚ್ಛುನಾಂ || ೧೯ ||

|| ಸಾಯಣಭಾಷ್ಯಂ ||

ಅಗ್ನಿಹೋತ್ರೇ ಪೂರ್ವಸ್ಯಾಮಾಹುತೌ ಹುತಾಯಾಮುಪಸ್ಥಿತೇನ ಯಜಮಾನೇನ ಪ್ರತಿದಿವಸ ಪ್ರತಿಸಂವತ್ಸರಂ ವಾನೇನ ತೃಚೇನಾಗ್ನಿರುಪಸ್ಥೇಯಃ | ಸೂತ್ರಿತಂ ಚ | ಆಗ್ನೇಯೀಭಿಶ್ಚಾಗ್ನ ಆಯೂಂಷಿ ಪವಸ ಇತಿ ತಿಸೃಭಿಃ ಸಂವತ್ಸರೇ ಸಂವತ್ಸರೇ | ಆ. ೨-೩ | ಇತಿ || ಚೌಲಾದಿಕರ್ಮಸು ಚತಸ್ರ ಆಜ್ಯಾಹುತಯೋ ಹೋತವ್ಯಾಸ್ತತ್ರೈವ ತಿಸ್ರಃ | ಸೂತ್ರಿತಂ ಚ | ತೇಷಾಂ ಪುರಸ್ತಾಚ್ಚತಸ್ರ ಆಜ್ಯಾಹುತೀರ್ಜುಹುಯಾದಗ್ನ ಆಯೂಂಷಿ ಪವಸ ಇತಿ ತಿಸೃಭಿಃ | ಆ. ಗೃ. ೧-೪-೩ || ಇತಿ || ಆಧಾನೇ ಪವಮಾನೇಷ್ಟಾವಗ್ನೇಃ ಪವಮಾನಸ್ಯಾಗ್ನ ಆಯೂಂಷೀತ್ಯೇಷಾನುವಾಕ್ಯಾ | ಅಗ್ನೇ ಪವಸ್ವೇತ್ಯೇಷಾ ಯಾಜ್ಯಾ | ಸೂತ್ರಿತಂ ಚ | ಪ್ರಥಮಾಯಾಮಗ್ನಿರಗ್ನಿಃ ಪವಮಾನೋಽಗ್ನ ಆಯೂಂಷಿ ಪವಸೇಽಗ್ನೇ ಪವಸ್ವ ಸ್ವಪಾಃ. ಆ. ೨-೧ | ಇತಿ || ಪುನರಾಧೇಯೇ ದ್ವಿತೀಯಾಜ್ಯಭಾಗಸ್ಯಾಗ್ನ ಆಯೂಂಷೀತ್ಯೇಷಾ ವೈಕಲ್ಪಿಕಾನುವಾಕ್ಯಾ | ಸೂತ್ರಿತಂ ಚ | ನಿತ್ಯಂ ಪೂರ್ವಮನುಬ್ರಾಹ್ಮಣಿನೋಽಗ್ನ ಆಯೂಂಷಿ ಪವಸ ಇತ್ಯುತ್ತರಂ | ಆ. ೨-೮ | ಇತಿ ||

ಹೇ ಅಗ್ನೇ ಪವಮಾನರೂಪ ತ್ವಮಸ್ಮಾಕಮಾಯೂಂಷಿ ಜೀವನಾನಿ ಪವಸೇ | ರಕ್ಷಸಿ | ನೋಽಸ್ಮಾಕಮೂರ್ಜಮನ್ನರಸಮಿಷಮನ್ನಂ ಚಾ ಸುವ| ಅಭಿಮುಖ್ಯೇನ ಪ್ರೇರಯ | ಕಿಂಚ ದುಚ್ಛುನಾಂ| ರಕ್ಷೋನಾಮೈತತ್ | ರಕ್ಷಾಂಸ್ಯಾರೇಽಸ್ಮತ್ತೋ ದೂರ ಏವ ಬಾಧಸ್ವ | ಸಂಪೀಡಯ ||

|| ಪ್ರತಿಪದಾರ್ಥ ||

ಅಗ್ನೇ —ಪವಮಾನರೂಪನಾದ ಎಲೈ ಅಗ್ನಿಯೇ | **ಆಯೂಂಷಿ**— ನಮ್ಮ ಜೀವಮಾನಗಳನ್ನೂ | **ಪವಸೇ**— ನೀನು ರಕ್ಷಿಸುತ್ತೀಯೆ | **ನಃ**—ನಮಗೆ | **ಊರ್ಜಂ**—ಅನ್ನರಸವನ್ನೂ | **ಇಷಂ ಚ**—ಅನ್ನವನ್ನೂ | **ಆ ಸುವ**—ಒದಗಿಸಿಕೊಡು | **ದುಚ್ಛುನಾಂ**— ರಾಕ್ಷಸರನ್ನು | **ಆರೇ**—ನಮಗಿಂತ ದೂರವಾಗಿರುವಾಗಲೇ | **ಬಾಧಸ್ವ**—ಹಿಂಸಿಸಿ ನಾಶಪಡಿಸು

|| ಭಾವಾರ್ಥ ||

ಪವಮಾನರೂಪನಾದ ಎಲೈ ಅಗ್ನಿಯೇ. ನಮ್ಮ ಜೀವಮಾನಗಳನ್ನು ನೀನು ವೃದ್ಧಿಪಡಿಸಿ ರಕ್ಷಿಸುತ್ತೀಯೆ. ನಮಗೆ ತತ್ಪೋಷಕವಾದ ಅನ್ನವನ್ನೂ ಅನ್ನರಸವನ್ನೂ ಒದಗಿಸು. ನಮ್ಮನ್ನು ಹಿಂಸಿಸುವ ರಾಕ್ಷಸರನ್ನು **ನಮಗಿಂತ** ದೂರವಾಗಿರುವಾಗಲೇ ನಾಶಪಡಿಸು.

English Translation

Agni, you support our lives, send us nutriment and food. **drive far** off the Rakshasas.

ವಿಶೇಷವಿಷಯಗಳು

ಅಗ್ನಿಹೋತ್ರಹೋಮದಲ್ಲಿ ಯಜಮಾನನು ಮೊದಲನೆಯ ಆಹುತಿಯನ್ನು ಹೋಮಮಾಡಿದನಂತರ ಪ್ರತಿ ದಿನಸವೂ ಅಥವಾ ಪ್ರತಿಸಂವತ್ಸರವೂ **ಅಗ್ನ ಆಯೂಂಷಿ** ಎಂದು ಮೊದಲಾಗುವ ಮೂರು ಋಕ್ಕುಗಳಿಂದ (೧೯–೨೧) ಅಗ್ನಿಯನ್ನು ಉಪಸ್ಥಾನಮಾಡಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆಗ್ನೇಯೀಭಿಶ್ಚಾಗ್ನ ಆಯೂಂಷಿ ಪವಸ ಇತಿ ತಿಸೃಭಿಃ ಸಂವತ್ಸರೇ ಸಂವತ್ಸರೇ** ಎಂಬ ಸೂತ್ರದಿಂದ (ಆ. ೨–೩, ೪) ವಿವೃತವಾಗಿರುವುದು. ಚೌಲಾದಿಗೃಹ್ಯಕರ್ಮಗಳಲ್ಲಿ ನಾಲ್ಕು ಆಜ್ಯಾಹುತಿಗಳನ್ನು ಹೋಮಮಾಡಬೇಕು. ಅವುಗಳಲ್ಲಿ ಅಗ್ನ ಆಯೂಂಷಿ ಎಂದು ಮೊದಲಾಗುವ ಈ ಮೂರುಋಕ್ಕುಗಳಿಂದ (೧೯–೨೧) ಮೂರು ಹೋಮಗಳನ್ನು ಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ತೇಷಾಂ ಪುರಸ್ತಾಚ್ಚತಸ್ರ ಆಜ್ಯಾಹುತೀರ್ಜುಹುಯಾದಗ್ನ . ಆಯೂಂಷಿ ಪವಸ ಇತಿ ತಿಸೃಭಿಃ** ಎಂಬ ಸೂತ್ರದಿಂದ (ಆ. ಗೃ. ೧–೪–೩–೪) ವಿವೃವಾಗಿರುವುದು. ಆಧಾನೇಷ್ಟಿಯಲ್ಲಿ ಪವಮಾನೇಷ್ಟಿಯ ಕಾಲದಲ್ಲಿ ಪವಮಾನಾಗ್ನಿಯನ್ನುದ್ದೇಶಿಸಿ ಹೋಮಮಾಡುವಾಗ **ಅಗ್ನ ಆಯೂಂಷಿ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದೂ **ಅಗ್ನೇ ಪವಸ್ವ** ಎಂಬ ಋಕ್ಕನ್ನು (೨೧ ನೇ ಋಕ್ಕು) ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ—**ಪ್ರಥಮಾಯಾಮಗ್ನಿರಗ್ನಿಃ ಪವಮಾನೋಽಗ್ನ ಆಯೂಂಷಿ ಪವಸೇಽಗ್ನೇ ಪವಸ್ವ ಸ್ವಪಾಃ** ಎಂಬ ಸೂತ್ರದಿಂದ (ಆ, ೨–೧) ವಿವೃತವಾಗಿರುವುದು. ಪುನರಾಧೇಯಹೋಮದಲ್ಲಿ **ಅಗ್ನ ಆಯೂಂಷಿ** ಎಂಬ ಈ ಋಕ್ಕನ್ನು ಎರಡನೇ ಆಜ್ಯಭಾಗವನ್ನು ಹೋಮ ಮಾಡುವಾಗ ವಿಕಲ್ಪವಾಗಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ನಿತ್ಯಂ ಪೂರ್ವಮನುಬ್ರಾಹ್ಮಣಿನೋಽಗ್ನ ಆಯೂಂಷಿ ಪವಸ ಇತ್ಯುತ್ತರಂ** ಎಂಬ ಸೂತ್ರದಿಂದ **(ಆ. ೩–೮)** ವಿವೃತವಾಗಿರುವುದು.

|| ಸಂಹಿತಾಪಾಠಃ ||

**ಅಗ್ನಿರೃಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ।**

**ತಮೀಮಹೇ ಮಹಾಗಯಂ ॥ ೨೦ ॥**

॥ ಪದಪಾಠಃ ॥

ಅಗ್ನಿಃ । ಋಷಿಃ । ಪವಮಾನಃ । ಪಾಂಚಃಽಜನ್ಯಃ । ಪುರಃಽಹಿತಃ ।
ತಂ । ಈಮಹೇ । ಮಹಾಽಗಯಂ ॥ ೨೦ ॥

॥ ಸಾಯಣಭಾಷ್ಯಂ ॥

**ಪಾಂಚಜನ್ಯಃ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚಜನಾಃ । ಯದ್ವಾ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇತೇ ಪಂಚಜನಾಃ । ಅಥವಾ ದೇವಮನುಷ್ಯಾ ಗಂಧರ್ವಾಪ್ಸರಸಃ ಸರ್ಪಾಃ ಪಿತರ ಇತಿ ಬ್ರಾಹ್ಮಣೇಽಭಿಹಿತಾಃ ಪಂಚಜನಾಃ ॥ ಗಂಭೀರಾಜ್ಞ್ಯ ಇತ್ಯತ್ರ ಬಹಿರ್ದೇವಪಂಚಜನೇಭ್ಯ ಇತಿ ವಕ್ತವ್ಯಮಿತಿ ವಚನಾತ್ । ಕಾ. ೪-೩-೫೮-೧ । ಭವಾರ್ಥೇ ಞ್ಯಪ್ರತ್ಯಯಃ ॥ ತೇಷಾಂ ತತ್ತದಭೀಷ್ಟಪ್ರದಾನೇನ ಸ್ವಭೂತ ಋಷಿಃ ಸರ್ವದ್ರಷ್ಟಾ ಪವಮಾನಸ್ವರೂಪೋಽಗ್ನಿಃ ಪುರೋಹಿತಃ ಕರ್ಮಾರ್ಥಮೃತ್ವಿಗ್ಭಿಃ ಪುರೋ ನಿಹಿತಃ । ತಂ ಪೂರ್ವೋಕ್ತಲಕ್ಷಣಂ ಮಹಾಗಯಂ ಮಹದ್ಭಿರ್ದೇವಾದಿಭಿರಪಿ ಗೀರ್ಭಿರ್ಗಾತವ್ಯಂ । ಮಹಾಂತಿ ಪ್ರಭೂತಾನಿ ಯಜ್ಞಗೃಹಾಣಿ ವಾ ಯಸ್ಯ ಸ ತಥೋಕ್ತಃ । ತಂ ಪವಮಾನಗುಣವಿಶಿಷ್ಟಮಗ್ನಿಮೀಮಹೇ । ಧನಾದೀನಿ ಯಾಚಾಮಹೇ ॥**

॥ ಪ್ರತಿಪದಾರ್ಥ ॥

**ಪಾಂಚಜನ್ಯಃ**—ಗಂಧರ್ವಾದಿ ಐದು ಗುಂಪಿನ ಪ್ರಜೆಗಳಿಗೂ ಸಂಬಂಧಿಸಿದವನೂ । **ಋಷಿಃ**—ಸರ್ವಜ್ಞನೂ (ದ್ರಷ್ಟೃವೂ) । **ಪವಮಾನಃ**—ಪವಮಾನರೂಪನೂ ಆದ । **ಅಗ್ನಿಃ**—ಅಗ್ನಿಯು । **ಪುರೋಹಿತಃ**—ನಮ್ಮ ಮುಂದೆ ಸ್ಥಾಪಿತನಾಗಿದ್ದಾನೆ. । **ಮಹಾಗಯಂ**—ಉತ್ತಮವಾದ ಯಜ್ಞಗೃಹವುಳ್ಳ । **ತಂ**—ಆ ಅಗ್ನಿಯಿಂದ । **ಈಮಹೇ**—ಧನಾದಿಗಳನ್ನು ಯಾಚಿಸುತ್ತೇವೆ.

॥ ಭಾವಾರ್ಥ ॥

ಗಂಧರ್ವಾದಿ ಪಂಚಜನರಿಗೂ ಸಂಬಂಧಿಸಿದವನೂ ಸರ್ವಜ್ಞನೂ ಸಕಲವನ್ನೂ ವೀಕ್ಷಿಸಬಲ್ಲವನೂ, ಪವಮಾನ ರೂಪನೂ ಆದ ಅಗ್ನಿಯು ನಮ್ಮ ಮುಂದೆ ಸ್ಥಾಪಿತನಾಗಿದ್ದಾನೆ. ಉತ್ತಮವಾದ ಯಜ್ಞಗೃಹವುಳ್ಳ ಆ ಅಗ್ನಿಯಿಂದ ಧನಾದಿಗಳನ್ನು ಯಾಚಿಸುತ್ತೇವೆ.

## English Translation.

Agni, the all-beholding, who is in the form of the Pavamana, the benefactor of the five orders, the preceder at sacrifices: him we solict, who is hymned by the great.

॥ ಸಂಹಿತಾಪಾಠಃ ॥

ಅಗ್ನೇ ಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಂ ।
ದಧದ್ರಯಿಂ ಮಯಿ ಪೋಷಂ ॥ ೨೧ ॥

|| ಪದಪಾಠಃ ||

ಅಗ್ನೇ | ಪವಸ್ವ | ಸುಽಅಪಾಃ | ಅಸ್ಮೇ ಇತಿ | ವರ್ಚಃ | ಸುಽವೀರ್ಯಂ |

ದಧತ್ | ರಯಿಂ | ಮಯಿ | ಪೋಷಂ || ೨೦ ||

|| ಸಾಯಣಭಾಷ್ಯಂ ||

ಹೇ ಅಗ್ನೇ ಸ್ವಪಾಃ || ಸೋರ್ಮನಸೀ ಇತ್ಯುತ್ತರಪದಾದ್ಯುದಾತ್ತತ್ವಂ || ಶೋಭನಕರ್ಮಾ ತ್ವಮಸ್ಮೇ ಅಸ್ಮಾಸು ಸುವೀರ್ಯಂ ಶೋಭನವೀರ್ಯೋಪೇತಂ ವರ್ಚಃ || ವರ್ಚ ದೀಪ್ತೌ || ತೇಜಃ ಪವಸ್ವ | ಆಗಮಯ | ತಥಾ ಭವಾನ್ರಯಿಂ ಧನಂ ಪುತ್ರಂ ವಾ ಪೋಷಂ || ಭಾವೇ ಕರ್ಮಣಿ ವಾ ಘಞ್|| ಗವಾಂ ಪುಷ್ಟಿಂ ಯದ್ವಾ ಗವಾದಿಕಂ ಮಯಿ ಭವಾನ್ದಧತ್ | ದಧಾತು | ಕರೋತ್ವಿತ್ಯರ್ಥಃ || ದಧಾತೇರ್ಲೇಟ್ಯಡಾಗಮಃ | ಘೋರ್ಲೋಪೋ ಲೇಟಿ ವಾ | ಪಾ. ೭-೩-೭೦ | ಇತ್ಯಾಕಾರಲೋಪಃ ||

|| ಪ್ರತಿಪದಾರ್ಥ ||

ಅಗ್ನೇ—ಪವಮಾನರೂಪನಾದ ಎಲೈ ಅಗ್ನಿಯೇ | ಸ್ವಪಾಃ—ಉತ್ತಮವಾದ ಕರ್ಮವುಳ್ಳ ನೀನು | ಅಸ್ಮೇ—ನಮ್ಮಲ್ಲಿ | ಸುವೀರ್ಯಂ—ಉತ್ತಮವಾದ ವೀರ್ಯದಿಂದ ಕೂಡಿದ | ವರ್ಚಃ—ತೇಜಸ್ಸನ್ನು | ಪವಸ್ವ—ತುಂಬಿಕೊಡು | ಮಯಿ—ನನ್ನಲ್ಲಿ | ರಯಿಂ—ಧನವನ್ನೂ | ಪೋಷಂ—ಪುಷ್ಟಿದಾಯಕವಾದ ಗವಾದಿ ಸಂಪತ್ತನ್ನೂ | ದಧತ್—ಒದಗಿಸು.

|| ಭಾವಾರ್ಥ ||

ಪವಮಾನರೂಪನಾದ ಎಲೈ ಅಗ್ನಿಯೇ, ಉತ್ತಮವಾದ ಕರ್ಮವುಳ್ಳ ನೀನು ನಮ್ಮಲ್ಲಿ ಶ್ರೇಷ್ಠವಾದ ವೀರ್ಯದಿಂದ ಕೂಡಿದ ತೇಜಸ್ಸನ್ನು ತುಂಬು. ನನಗೆ ಧನವನ್ನೂ ಪುಷ್ಟಿದಾಯಕವಾದ ಗವಾದಿ ಸಂಪತ್ತನ್ನೂ ಒದಗಿಸು.

English Translation

Agni, who are the doer of good, pour upon us brightness and fair offspring ; may he make me wealth and plenty.

|| ಸಂಹಿತಾಪಾಠಃ ||

ಪವಮಾನೋ ಅತಿ ಸ್ರಿಧೋಽಭ್ಯರ್ಷತಿ ಸುಷ್ಟುತಿಂ |

ಸೂರೋ ನ ವಿಶ್ವದರ್ಶತಃ || ೨೧ ||

|| ಪದಪಾಠಃ ||

ಪವಮಾನಃ । ಅತಿ । ಸ್ರಿಧಃ । ಅಭಿ । ಅರ್ಷತಿ । ಸುऽಸ್ತುತಿಂ ।

ಸೂರಃ । ನ । ವಿಶ್ವऽದರ್ಶತಃ ॥ ೨೨ ॥

|| ಸಾಯಣಭಾಷ್ಯಂ ||

ಪವಮಾನಃ ಸೋಮಃ ಸ್ರಿಧೋ ಹಿಂಸಕಾನ್ಶತ್ರೂನತಿಕ್ರಮ್ಯ ಗಚ್ಛತಿ । ತಥಾ ಸುಷ್ಟುತಿಂ ಸ್ತೋತೄಣಾಂ ಶೋಭನಾಂ ಸ್ತುತಿಮಭ್ಯರ್ಷತಿ । ಆಭಿಮುಖ್ಯೇನ ಗಚ್ಛತಿ ॥ ಋಷೀ ಗತೌ ಭೌವಾದಿಕಃ । ಬಹುಲಂ ಛಂದಸೀತಿ ಶಪ್ । ಗುಣಃ ॥ ಕಿಂಚ ಸೂರೋ ನ ಸೂರ್ಯ ಇವ ವಿಶ್ವದರ್ಶತಃ ಸರ್ವಸ್ಯ ದ್ರಷ್ಟಾ । ಸರ್ವೈರ್ವಾ ದರ್ಶನೀಯೋ ಭವತಿ ॥

|| ಪ್ರತಿಪದಾರ್ಥ ||

ಪವಮಾನಃ—ಸೋಮದೇವನು । ಸ್ರಿಧಃ ಅತಿ—ಹಿಂಸಕರಾದ ಶತ್ರುಗಳನ್ನು ದಾಟಿಕೊಂಡು । ಸುಷ್ಟುತಿಂ—ಉತ್ತಮವಾದ ಸ್ತುತಿಕರ್ತನಲ್ಲಿಗೆ । ಅಭ್ಯರ್ಷತಿ—ಶೀಘ್ರವಾಗಿ ಬರುತ್ತಾನೆ । ಸೂರೋ ನ—ಆದಿತ್ಯನಂತೆ । ವಿಶ್ವದರ್ಶತಃ—ಸಕಲರಿಗೂ ಗೋಚರನಾಗುತ್ತಾನೆ.

|| ಭಾವಾರ್ಥ ||

ಸೋಮದೇವನು ಹಿಂಸಕರಾದ ಶತ್ರುಗಳನ್ನು ದಾಟಿಕೊಂಡು ಉತ್ತಮವಾದ ಸ್ತುತಿಕರ್ತನಲ್ಲಿಗೆ ಶೀಘ್ರವಾಗಿ ಬರುತ್ತಾನೆ. ಆದಿತ್ಯನಂತೆ ಸಕಲರಿಗೂ ಗೋಚರನಾಗುತ್ತಾನೆ.

English Translation

The purified (Soma) hastens past the adversaries towards the fair praise of the worshippers, visible to all like the sun.

|| ಸಂಹಿತಾಪಾಠಃ ||

ಸ ಮರ್ಮೃಜಾನ ಆಯುಭಿಃ ಪ್ರಯಸ್ವಾನ್ಪ್ರಯಸೇ ಹಿತಃ ।

ಇಂದುರತ್ಯೋ ವಿಚಕ್ಷಣಃ ॥ ೨೩ ॥

|| ಪದಪಾಠಃ ||

ಸಃ । ಮರ್ಮೃಜಾನಃ । ಆಯುऽಭಿಃ । ಪ್ರಯಸ್ವಾನ್ । ಪ್ರಯಸೇ । ಹಿತಃ ।

ಇಂದುಃ । ಅತ್ಯಃ । ವಿऽಚಕ್ಷಣಃ ॥ ೨೩ ॥

|| ಸಾಯಣಭಾಷ್ಯಂ ||

ಆಯುಭಿಃ ಕರ್ಮನೇತೃಭಿರ್ಮನುಷ್ಯೈರ್ಮರ್ಮೃಜಾನಃ ಪುನಃಪುನರ್ಮೃಜ್ಯಮಾನಃ ಶೋಧ್ಯಮಾನಃ ಸ ಇಂದುಃ ಸ ಸೋಮೋಽತ್ಯೋ ದೇವಾನ್ಸತತಂ ಗಂತಾ ಭವತಿ । ಕೀದೃಶಃ । ಪ್ರಯಸ್ವಾನ್ ಪ್ರೀಣನಶೀಲಾನ್ನವಾನ್ । ಯದ್ವಾ । ಸ್ತೋತೃಭ್ಯೋ ದೇಯತ್ವೇನಾನ್ನಯುಕ್ತಃ । ಅತ ಏವ ಪ್ರಯಸೇ ಹವೀರೂಪಾಯಾನ್ನಾಯ ಹಿತೋ ವಿಚಕ್ಷಣಃ ಸರ್ವಸ್ಯ ಪ್ರದರ್ಶನಕಾರೀ ಸರ್ವಸ್ಯ ವಿದ್ರಷ್ಟಾ ವಾ ಸೋಮೋ ದೇವಾನಭಿಗಂತಾ ಭವತಿ ॥ ಚಕ್ಷಿಙ್ ವ್ಯಕ್ತಾಯಾಂ ವಾಚಿ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ ॥

|| ಪ್ರತಿಪದಾರ್ಥ ||

ಪ್ರಯಸ್ವಾನ್—ಪ್ರೀತಿಕರವಾದ ಅನ್ನವುಳ್ಳವನೂ । ಪ್ರಯಸೇ—ಅನ್ನಾರ್ಥವಾಗಿ । ಹಿತಃ—ಸ್ಥಾಪಿತನೂ । ವಿಚಕ್ಷಣಃ—ಸೂಕ್ಷ್ಮವಾದ ದೃಷ್ಟಿಯುಳ್ಳವನೂ ಆದ । ಸಃ ಇಂದುಃ—ಅದೇ ಸೋಮದೇವನು । ಆಯುಭಿಃ—ಕರ್ಮನಿರತರಾದ ಮಾನವರಿಂದ । ಮರ್ಮೃಜಾನಃ—ಶುದ್ಧಿಗೊಳಿಸಲ್ಪಟ್ಟವನಾಗಿ । ಅತ್ಯಃ—ದೇವತೆಗಳಲ್ಲಿಗೆ ಹೋಗುವವನಾಗುತ್ತಾನೆ.

|| ಭಾವಾರ್ಥ ||

ಪ್ರೀತಿಕರವಾದ ಅನ್ನವುಳ್ಳವನೂ, ಅನ್ನಾರ್ಥವಾಗಿ ಸ್ಥಾಪಿತನೂ, ಸೂಕ್ಷ್ಮವಾದ ದೃಷ್ಟಿಯುಳ್ಳವನೂ ಆದ ಅದೇ ಸೋಮದೇವನು ಕರ್ಮನಿರತರಾದ ಮಾನವರಿಂದ ಶುದ್ಧಿಗೊಳಿಸಲ್ಪಟ್ಟವನಾಗಿ ದೇವತೆಗಳಲ್ಲಿಗೆ ಹೋಗುವವನಾಗುತ್ತಾನೆ.

## English Translation.

Repeatedly purified by the priest, Indu, abounding with food, placed for food, the beholder of all continually goes (to the gods.)

|| ಸಂಹಿತಾಪಾಠಃ ||

ಪವಮಾನ ಋತಂ ಬೃಹಚ್ಛುಕ್ರಂ ಜ್ಯೋತಿರಜೀಜನತ್ ।
ಕೃಷ್ಣಾ ತಮಾಂಸಿ ಜಂಘನತ್ ॥ ೨೪ ॥

|| ಪದಪಾಠಃ ||

ಪವಮಾನಃ । ಋತಂ । ಬೃಹತ್ । ಶುಕ್ರಂ । ಜ್ಯೋತಿಃ । ಅಜೀಜನತ್ ।
ಕೃಷ್ಣಾ । ತಮಾಂಸಿ । ಜಂಘನತ್ ॥ ೨೪ ॥

|| ಸಾಯಣಭಾಷ್ಯಂ ||

ಪವಮಾನ ಋತಂ ಸತ್ಯಂ ಯಥಾರ್ಥಭೂತಂ ಬೃಹತ್ಪ್ರಭೂತಂ ಸರ್ವದೇಶೇಷು ವ್ಯಾಪಕಂ ಶುಕ್ರಂ ದೀಪ್ಯಮಾನಂ ಶ್ವೇತವರ್ಣಂ ಜ್ಯೋತಿಸ್ತೇಜೋಽಜೀಜನತ್ | ದ್ಯುಲೋಕ ಉದಪಾದಯತ್ | ಕಿಂ ಕುರ್ವನ್ | ಕೃಷ್ಣಾ ಕೃಷ್ಣವರ್ಣಾನಿ ತಮಾಂಸಿ ಜಂಘನದ್ಭೃಶಂ ವಿನಾಶಯನ್ || ಹಂತೇರ್ಯಙ್ಲುಕಿ ಶತರಿ ರೂಪಂ | ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ||

|| ಪ್ರತಿಪದಾರ್ಥ ||

ಪವಮಾನಃ— ಶುದ್ಧಿಕಾರಕನಾದ ಸೋಮದೇವನು | ಕೃಷ್ಣಾ — ಕೃಷ್ಣವರ್ಣವುಳ್ಳ | ತಮಾಂಸಿ— ಕಗ್ಗತ್ತಲೆಗಳನ್ನು | ಜಂಘನತ್— ನಾಶಪಡಿಸುತ್ತಾ | ಋತಃ— ಸತ್ಯಾತ್ಮಕವಾದುದೂ | ಬೃಹತ್— ಪ್ರಭೂತವಾದುದೂ | ಶುಕ್ರಂ— ಪ್ರಕಾಶಮಾನವಾದುದೂ ಆದ | ಜ್ಯೋತಿಃ— ತನ್ನ ಪ್ರಭೆಯನ್ನು | ಅಜೀಜನತ್— ದ್ಯುಲೋಕದಲ್ಲಿ ವಿಸ್ತರಿಸಿ ಹರಡಿದ್ದಾನೆ.

|| ಭಾವಾರ್ಥ ||

ಶುದ್ಧಿಕಾರಕನಾದ ಸೋಮದೇವನು ಕೃಷ್ಣವರ್ಣವುಳ್ಳ ಕಗ್ಗತ್ತಲೆಗಳನ್ನು ನಾಶಪಡಿಸುತ್ತ, ಸತ್ಯಾತ್ಮಕವಾದುದೂ, ಪ್ರಭೂತವಾದುದೂ ಪ್ರಕಾಶಮಾನವಾದುದೂ ಆದ ತನ್ನ ಪ್ರಭೆಯನ್ನು ದ್ಯುಲೋಕದಲ್ಲಿ ವಿಸ್ತರಿಸಿ ಹರಡಿದ್ದಾನೆ

English Translation.

The purified (Soma) generated the veracious all-pervading bright-shining light, destroying the black darkness,

|| ಸಂಹಿತಾಪಾಠಃ ||

ಪವಮಾನಸ್ಯ ಜಂಘ್ನತೋ ಹರೇಶ್ಚಂದ್ರಾ ಅಸೃಕ್ಷತ |
ಜೀರಾ ಅಜಿರಶೋಚಿಷಃ || ೨೫ ||

|| ಪದಪಾಠಃ ||

ಪವಮಾನಸ್ಯ | ಜಂಘ್ನತಃ | ಹರೇಃ | ಚಂದ್ರಾಃ | ಅಸೃಕ್ಷತ |
ಜೀರಾಃ | ಅಜಿರಽಶೋಚಿಷಃ || ೨೫ ||

|| ಸಾಯಣಭಾಷ್ಯಂ ||

ಜಂಘ್ನತಃ ಪುನಃಪುನಸ್ತಮಾಂಸಿ ವಿನಾಶಯತೋ ಹರೇರ್ಹರಿತವರ್ಣಸ್ಯಾಜಿರಶೋಚಿಷಃ ಸರ್ವತ್ರ ಗಮನಶೀಲತೇಜಸಃ ಪವಮಾನಸ್ಯ ಸೋಮಸ್ಯ ಚಂದ್ರಾಃ || ಚದಿ ಆಹ್ಲಾದನೇ || ದೇವಾನಾಮಾ-

ಹ್ಲಾದಯಿತ್ರ್ಯೋ ಜೀರಾಃ ಕ್ಷಿಪ್ರಂಕ್ಷರಣಶೀಲಾ ಧಾರಾ ಅಸೃಕ್ಷತ । ಸೃಜಂತಿ । ಪವಿತ್ರಾನ್ನಿರ್ಗಂಚ್ಛಂತೀ-ತ್ಯರ್ಥಃ ॥

॥ ಪ್ರತಿಪದಾರ್ಥ ॥

ಜಙ್ಘ್ನತಃ—ಕತ್ತಲನ್ನು ಬಾರಿಬಾರಿಗೂ ನಾಶಮಾಡುವವನೂ । ಹರೇಃ— ಪಚ್ಚೆವರ್ಣವುಳ್ಳವನೂ । ಅಜಿರಶೋಚಿಷಃ—ವ್ಯಾಪಿಸುವ ತೇಜಸ್ಸುಳ್ಳವನೂ । ಪವಮಾನಸ್ಯ—ಶುದ್ಧಿಕಾರಕನೂ ಆದ ಸೋಮದೇವನ । ಚಂದ್ರಾಃ—ಆಹ್ಲಾದ ಕಾರಕವಾದವೂ । ಜೀರಾಃ—ವೇಗಗಾಮಿಗಳೂ ಆದ ಧಾರೆಗಳು । ಅಸೃಕ್ಷತ—ದಶಾಪವಿತ್ರದಿಂದ ಹೊರಹೊರಟಿವೆ.

॥ ಭಾವಾರ್ಥ ॥

ಕತ್ತಲನ್ನು ಬಾರಿಬಾರಿಗೂ ನಾಶಮಾಡುವವನೂ, ಪಚ್ಚೆವರ್ಣವುಳ್ಳವನೂ, ವ್ಯಾಪಿಸುವ ತೇಜಸ್ಸುಳ್ಳವನೂ ಶುದ್ಧಿಕಾರಕನೂ ಆದ ಸೋಮದೇವನ ಆಹ್ಲಾದಕಾರಕವೂ ವೇಗಗಾಮಿಗಳೂ ಆದ ಧಾರೆಗಳು ದಶಾಪವಿತ್ರದಿಂದ ಹೊರಹೊರಟಿವೆ.

## English Translation.

The gladsome swift-moving streams of the purified, green-tinted unfadingly radiant (Soma), the destroyer (of darkness), have been let forth.

॥ ಸಂಹಿತಾಪಾಠಃ ॥

ಪವಮಾನೋ ರಥೀತಮಃ ಶುಭ್ರೇಭಿಃ ಶುಭ್ರಶಸ್ತಮಃ ।
ಹರಿಶ್ಚಂದ್ರೋ ಮರುದ್ಗಣಃ ॥ ೨೬ ॥

॥ ಪದಪಾಠಃ ॥

ಪವಮಾನಃ । ರಥಿऽತಮಃ । ಶುಭ್ರೇಭಿಃ । ಶುಭ್ರಶಃऽತಮಃ ।
ಹರಿऽಚಂದ್ರಃ । ಮರುತ್ऽಗಣಃ ॥ ೨೬ ॥

॥ ಸಾಯಣಭಾಷ್ಯಂ ॥

ಪವಮಾನೋ ದೇವೋ ರಥೀತಮೋऽತಿಶಯೇನ ರಥವಾನ್ ॥ ಈದ್ರಥಿನಃ । ಪಾ. ೮-೨-೧೭-೧ । ಇತೀಕಾರಃ ॥ ತಥಾ ಶುಭ್ರೇಭಿಃ ಶೋಭಾಯುಕ್ತೇಭ್ಯಸ್ತೇಜೋಭ್ಯೋऽಪಿ ಶುಭ್ರಶಸ್ತಮೋऽತ್ಯಂತದೀ-ಪ್ಯಮಾನಶ್ಚ । ಯದ್ವಾ । ನಿರ್ಮಲೇಭ್ಯೋऽಪಿ ನಿರ್ಮಲತಮಯಶೋಯುಕ್ತಃ । ಹರಿಶ್ಚಂದ್ರಃ ॥ ಹ್ರಸ್ವಾಚ್ಚಂದ್ರೋತ್ತರಪದೇ ಇತಿ [ಸಾಂಹಿತಿಕಃ ಸುಟ್ ॥ ಹರಿತವರ್ಣದೀಪ್ತಿರ್ಹರಿತಧಾರಾವಾನ್ವಾ ಮರು-

**ದ್ಗಣಃ । ಮರುತೋ ಯಸ್ಯ ಗಣಃ ಸಹಾಯಭೂತಾಃ ಸ ತಥೋಕ್ತಃ । ತಾದೃಶಃ ಸರ್ವಾಲ್ಲೋಕಾನ್ ಸ್ವರಶ್ಮಿಭಿಃ ಸ್ವದೀಪ್ತಿಭಿರ್ವ್ಯಶ್ನವತ್ ವ್ಯಾಪ್ನೋತ್ವಿತ್ಯುತ್ತರೇಣಾನ್ವಯಃ ॥**

॥ ಪ್ರತಿಪದಾರ್ಥ ॥

**ಪವಮಾನಃ**— ಶುದ್ಧಿಕಾರಕನೂ । **ರಥೀತಮಃ**— ಅತ್ಯತಿಶಯವಾದ ರಥವುಳ್ಳವನೂ । **ಶುಭ್ರೇಭಿಃ**— ಪ್ರಕಾಶಮಾನವಾದ ತೇಜಸ್ಸುಗಳಿಗಿಂತಲೂ । **ಶುಭ್ರಶಸ್ತಮಃ**— ಅತಿಶಯವಾದ ಕಾಂತಿಯುಳ್ಳವನೂ । **ಹರಿಶ್ಚಂದ್ರಃ**— ಪಚ್ಚೆವರ್ಣವುಳ್ಳ ಧಾರೆಯುಳ್ಳವನೂ । **ಮರುದ್ಗಣಃ**— ಮರುತ್ತುಗಳೊಡನೆ ಕೂಡಿದವನೂ ಆದ ಸೋಮದೇವನು ಸರ್ವತ್ರ ವ್ಯಾಪಿಸಲಿ.

॥ ಭಾವಾರ್ಥ ॥

ಶುದ್ಧಿಕಾರಕನೂ, ಅತ್ಯತಿಶಯವಾದ ರಥವುಳ್ಳವನೂ, ಪ್ರಕಾಶಮಾನವಾದ ತೇಜಸ್ಸುಗಳಿಗಿಂತಲೂ ಅತಿಶಯವಾದ ಕಾಂತಿಯುಳ್ಳವನೂ, ಪಚ್ಚೆವರ್ಣವುಳ್ಳ ಧಾರೆಯುಳ್ಳವನೂ ಮರುತ್ತುಗಳೊಡನೆ ಕೂಡಿದವನೂ ಆದ ಸೋಮದೇನನು ಸರ್ವತ್ರ ವ್ಯಾಪಿಸಲಿ.

## English Translation.

The purified (Soma), possessing many chariots most radiant with beauteous splendours, having green-tined streams, attended by the Maruts—

॥ ಸಂಹಿತಾಪಾಠಃ ॥

ಪವಮಾನೋ ವ್ಯಶ್ನವದ್ರಶ್ಮಿಭಿರ್ವಾಜಸಾತಮಃ ।
ದಧತ್ಸ್ತೋತ್ರೇ ಸುವೀರ್ಯಂ ॥ ೨೭ ॥

॥ ಪದಪಾಠಃ ॥

ಪವಮಾನಃ । ವಿ । ಅಶ್ನವತ್ । ರಶ್ಮಿಽಭಿಃ । ವಾಜಽಸಾತಮಃ ।
ದಧತ್ । ಸ್ತೋತ್ರೇ । ಸುಽವೀರ್ಯಂ ॥ ೨೭ ॥

॥ ಸಾಯಣಭಾಷ್ಯಂ ॥

**ಪವಮಾನಃ ಸೋಮೋ ರಶ್ಮಿಭಿಃ ಸ್ವದೀಪ್ತಿಭಿರ್ವ್ಯಶ್ನವತ್ । ಸರ್ವಂ ಜಗದ್ವ್ಯಾಪ್ನೋತು । ಕೀದೃಶಃ । ವಾಜಸಾತಮೋಽತಿಶಯೇನಾನ್ನಸ್ಯ ದಾತಾ ಬಲಸ್ಯ ಸಂಭಕ್ತಾ ವಾ । ತಥಾ ಸ್ತೋತ್ರೇ ಪವಮಾನಸ್ತೋತ್ರಂ ಕುರ್ವತೇ ಮನವೇ ಸುವೀರ್ಯಂ ಸುವೀರ್ಯೋಪೇತಂ ಪುತ್ರಂ ಧನಂ ವಾ ದಧದ್ವಿದಧತ್ ಪ್ರಯಚ್ಛನ್ ವ್ಯಾಪ್ನೋತು ॥ ಅಶ್ನೋತೇರ್ಲೇಟ್ಯಡಾಗಮಃ ॥**

|| ಪ್ರತಿಪದಾರ್ಥ ||

**ವಾಜಸಾತಮಃ**— ಅತಿಶಯವಾದ ಅನ್ನದಾತೃವಾದ | **ಪವಮಾನಃ**—ಸೋಮದೇವನು | **ಸ್ತೋತ್ರೇ**— ಸ್ತುತಿಕರ್ತನಿಗೆ | **ಸುವೀರ್ಯಂ**—ಉತ್ತಮವಾದ ಶಕ್ತಿಯುಳ್ಳ ಪುತ್ರಾದಿಗಳನ್ನು | **ದಧತ್**—ಕೊಡುತ್ತ | **ರಶ್ಮಿಭಿಃ**—ತನ್ನ ಕಿರಣಗಳೊಡನೆ | **ವ್ಯಶ್ನವತ್**—ಸರ್ವತ್ರ ವ್ಯಾಪಿಸಲಿ.

|| ಭಾವಾರ್ಥ ||

ಶ್ರೇಷ್ಠವಾದ ಅನ್ನದಾತೃವಾದ ಸೋಮದೇವನು ಸ್ತುತಿಕರ್ತನಿಗೆ ಉತ್ತಮವಾದ ಶಕ್ತಿಯುಳ್ಳ ಪುತ್ರಾದಿಗಳನ್ನು ಕೊಡುತ್ತ ತನ್ನ ಕಿರಣಗಳೊಡನೆ ಸರ್ವತ್ರ ವ್ಯಾಪಿಸಲಿ.

English Translation

May the purified Soma, the most liberal dispenses of food, pervade (the world) with his rays, granting excellent male offespring to the worshipper.

|| ಸಂಹಿತಾಪಾಠಃ ||

ಪ್ರ ಸುವಾನ ಇಂದುರಕ್ಷಾಃ ಪವಿತ್ರಮತ್ಯವ್ಯಯಂ |
ಪುನಾನ ಇಂದುರಿಂದ್ರಮಾ || ೨೮ ||

|| ಪದಪಾಠಃ ||

ಪ್ರ | ಸುವಾನಃ | ಇಂದುಃ | ಅಕ್ಷಾರಿತಿ | ಪವಿತ್ರಂ | ಅತಿ | ಅವ್ಯಯಂ |
ಪುನಾನಃ | ಇಂದುಃ | ಇಂದ್ರಂ | ಆ || ೨೮ ||

|| ಸಾಯಣಭಾಷ್ಯಂ ||

ಸುವಾನೋಽಭಿಷೂಯಮಾಣ ಇಂದುಃ ಸೋಮೋಽವ್ಯಯಮವಿಮಯಮೂರ್ಣಾಸ್ತುಕೇನ ನಿರ್ಮಿತಂ ದಶಾಪವಿತ್ರಮತೀತ್ಯ ಪ್ರಾಕ್ಷಾಃ | ಕಲಶಂ ಪ್ರತಿಕರ್ಷೇಣ ಕ್ಷರತಿ || ಕ್ಷರತೇರ್ಲುಙಿ ತಿಪಿ ಸಿಚಿ ಚ್ಲೌಂಪಸ ಇಡಾಗಮಾಭಾವಃ | ಅತೋಲ್ಲಾಂತಸ್ಯ | ಪಾ- ೭-೨-೨ | ಇತಿ ವೃದ್ಧಿಃ ರಾತ್ಸಸ್ಯೇತಿ ಸಿಟೋ ಲೋಪಃ | ರೇಫಾಂತಂ ಸ್ಪಷ್ಟಯಿತುಮಿತೀಕಾರಃ | ಬಹುಲಂ ಛಂದಸಿ | ಪಾ- ೭-೩-೯೭| ಇತೀಡಭಾವಃ | ಹಲ್‌ಜ್ಯಾದಿನಾ ತಿಲೋಪಃ || ತತಃ ಪುನಾನಃ ಪವಿತ್ರೇಣ ಶುದ್ಧ ಇಂದುಃ ಸೋಮ ಇಂದ್ರಮಾ ವಿಶತಿ | ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ||

॥ ಪ್ರತಿಪದಾರ್ಥ ॥

**ಸುವಾನಃ**— ಅಭಿಷವಕರ್ಮದಿಂದ ಹಿಂಡಲ್ಪಟ್ಟ | **ಇಂದುಃ**— ಸೋಮನು | **ಅವ್ಯಯಂ**— ಉಣ್ಣೆಯಿಂದ ನಿರ್ಮಿತವಾದ | **ಪವಿತ್ರಂ ಅತಿ** — ದಶಾಪವಿತ್ರವನ್ನು ದಾಟಿ | **ಪ್ರ ಅಕ್ಷಾಃ**— ದ್ರೋಣಕಲಶಕ್ಕೆ ಹೋಗಿ ಸೇರುತ್ತಾನೆ | **ಪುನಾನಃ**-- ಶುದ್ಧಿಯನ್ನು ಹೊಂದಿದ | **ಇಂದುಃ**— ಸೋಮನು | **ಇಂದ್ರಂ**— ಇಂದ್ರನನ್ನು **ಆ (ವಿಶತಿ)**— ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಅಭಿಷವಕರ್ಮದಿಂದ ಹಿಂಡಲ್ಪಟ್ಟ ಸೋಮನು ಉಣ್ಣೆಯಿಂದ ನಿರ್ಮಿತವಾದ ದಶಾ ಪವಿತ್ರವನ್ನು ದಾಟಿ ದ್ರೋಣಕಲಶಕ್ಕೆ ಹೋಗಿ ಸೇರುತ್ತಾನೆ. ಶುದ್ಧಿಯನ್ನು ಹೊಂದಿದ ಸೋಮನು ಇಂದ್ರನನ್ನು ಪ್ರವೇಶಿಸುತ್ತಾನೆ.

English Translation

Indu when effused drops through the fleecy filter (into the vessel); being filtered Indu (enters) into Indra.

॥ ಸಂಹಿತಾಪಾಠಃ ॥

ಏಷ ಸೋಮೋ ಅಧಿ ತ್ವಚಿ ಗವಾಂ ಕ್ರೀಳತ್ಯದ್ರಿಭಿಃ |
ಇಂದ್ರಂ ಮದಾಯ ಜೋಹುವತ್ ॥ ೨೯ ॥

॥ ಪದಪಾಠಃ ॥

ಏಷಃ | ಸೋಮಃ | ಅಧಿ | ತ್ವಚಿ | ಗವಾಂ | ಕ್ರೀಳತಿ | ಅದ್ರಿಽಭಿಃ |
ಇಂದ್ರಂ | ಮದಾಯ | ಜೋಹುವತ್ ॥ ೨೯ ॥

॥ ಸಾಯಣಭಾಷ್ಯಂ ॥

**ಏಷ ಅಂಶುರೂಪಃ ಸೋಮೋ ಗವಾಂ ತ್ವಚ್ಯಾನಡುಹಚರ್ಮಣಿ | ಅಧಿಶಬ್ದ ಉಪರ್ಯರ್ಥದ್ಯೋತಕಃ | ಚರ್ಮಣ್ಯುಪರ್ಯದ್ರಿಭಿರ್ಗ್ರಾವಭಿಃ ಸಹ ಕ್ರೀಡತಿ | ಅಭಿಷವಾಯ ಸಂಕ್ರೀಡತೇ | ಏತೇನ ತತ್ಕಾಲ ಇಂದ್ರವಿಷಯಾಂ ಸ್ತುತಿಂ ಕುರ್ವಂತೀತ್ಯವಗಮ್ಯತೇ ॥**

॥ ಪ್ರತಿಪದಾರ್ಥ ॥

**ಏಷಃ**— ಲತಾರೂಪಿಯಾದ | **ಸೋಮಃ**— ಈ ಸೋಮದೇವನು | **ಮದಾಯ**— ಹರ್ಷವನ್ನು ಹೊಂದಲು | **ಇಂದ್ರಂ** — ಇಂದ್ರನನ್ನು | **ಜೋಹುವತ್**— ಪದೇ ಪದೇ ಕರೆಯುತ್ತ | **ಗವಾಂ ತ್ವಚಿ ಅಧಿ**— ಗೋ ಚರ್ಮದ ಮೇಲೆ | **ಅದ್ರಿಭಿಃ**— ಹಿಂಡುವ ಕಲ್ಲುಗಳೊಡನೆ | **ಕ್ರೀಡತಿ**— ಆಡುತ್ತಾನೆ.

॥ ಭಾವಾರ್ಥ ॥

ಲತಾರೂಪಿಯಾದ ಈ ಸೋಮದೇವನು ತನ್ನ ಪಾನದಿಂದ ಹರ್ಷವನ್ನು ಪಡೆಯಲು ಇಂದ್ರನನ್ನು ಪದೇ ಪದೇ ಕರೆಯುತ್ತಾ ಗೋ ಚರ್ಮದ ಮೇಲೆ ಹಿಂಡುವ ಕಲ್ಲುಗಳೊಡನೆ ಆಡುತ್ತಾನೆ.

English Translation.

This Soma sports with the stones upon the cowhide, calling Indra for exhilaration.

॥ ಸಂಹಿತಾಪಾಠಃ ॥

ಯಸ್ಯ ತೇ ದ್ಯುಮ್ನವತ್ಪಯಃ ಪವಮಾನಾಭೃತಂ ದಿವಃ ।
ತೇನ ನೋ ಮೃಳ ಜೀವಸೇ ॥ ೩೦ ॥

॥ ಪದಪಾಠಃ ॥

ಯಸ್ಯ । ತೇ । ದ್ಯುಮ್ನಽವತ್ । ಪಯಃ । ಪವಮಾನ । ಆಽಭೃತಂ । ದಿವಃ ।
ತೇನ । ನಃ । ಮೃಳ । ಜೀವಸೇ ॥ ೩೦ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಹೇ ಸೋಮ ದಿವೋ ದ್ಯುಲೋಕಾದಾಭೃತಂ ಶ್ಯೇನರೂಪಯಾ ಗಾಯತ್ರ್ಯಾಹೃತಂ ದ್ಯುಮ್ನವದನ್ನವದ್ಯಶೋಯುಕ್ತಂ ವಾ ಪಯಃ ಸೋಮಲಕ್ಷಣಮನ್ನಂ ಯಸ್ಯ ತೇ ತವ ಸ್ವಭೂತಂ ವಿದ್ಯತೇ ತಸ್ಮಾತ್ತ್ವಂ ತೇನಾನ್ನೇನ ನೋಽಸ್ಮಾಞ್ಜೀವಸೇ ಚಿರಜೀವನಾಯ ಮೃಳ । ಮೃಳಯ । ಸುಖಯ ॥

॥ ಪ್ರತಿಪದಾರ್ಥ ॥

**ಪವಮಾನ**—ಶುದ್ಧಿಯನ್ನು ಹೊಂದಿದ ಎಲೈ ಸೋಮ ದೇವನೇ । **ದಿವಃ**—ಅಂತರಿಕ್ಷದಿಂದ । **ಆ ಭೃತಂ**—ತರಲ್ಪಟ್ಟಿದ್ದೂ । **ದ್ಯುಮ್ನವತ್**—ಅನ್ನಯುಕ್ತವಾದುದೂ ಆದ । **ಪಯಃ**—ಸೋಮರೂಪವಾದ ಅನ್ನವು **ಯಸ್ಯ**—ಯಾವ । **ತೇ**—ನಿನ್ನಲ್ಲಿರುವುದೋ । **ತೇನ**— ಆ ಅನ್ನದಿಂದ । **ನಃ**—ನಮ್ಮನ್ನು । **ಜೀವಸೇ**—ದೀರ್ಘಕಾಲ ಜೀವಿಸಲು । **ಮೃಳ**—ಸುಖಪಡಿಸು.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದಿದ ಎಲೈ ಸೋಮದೇವನೇ, ಅಂತರಿಕ್ಷದಿಂದ ತರಲ್ಪಟ್ಟಿದ್ದೂ, ಅನ್ನಯುಕ್ತವಾದುದೂ ಆದ ಸೋಮರೂಪವಾದ ಯಾವ ಅನ್ನವು ನಿನ್ನಲ್ಲಿರುವುದೋ ಆ ಅನ್ನದಿಂದ ನಮ್ಮನ್ನು ದೀರ್ಘಕಾಲ ಜೀವಿಸುವಂತೆ ಸುಖಪಡಿಸು.

## English Translation.

Purified (Soma), bless us with long life by means of that your nutritious milk which has been brought from heaven.

# ಅರವತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

ತ್ವಂ ಸೋಮಾಸೀತಿ ದ್ವಾತ್ರಿಂಶದೃಚಂ ಸಪ್ತಮಂ ಸೂಕ್ತಂ । ಆದ್ಯತೃಚಸ್ಯ ಬಾರ್ಹಸ್ಪತ್ಯೋ ಭರದ್ವಾಜ ಋಷಿಃ । ದ್ವಿತೀಯಸ್ಯ ಮಾರೀಚಃ ಕಶ್ಯಪಃ । ತೃತೀಯಸ್ಯ ರಾಹೂಗಣೋ ಗೋತಮಃ । ಚತುರ್ಥಸ್ಯ ಭೌಮೋಽತ್ರಿಃ । ಪಂಚಮಸ್ಯ ಗಾಥಿನೋ ವಿಶ್ವಾಮಿತ್ರಃ । ಷಷ್ಠಸ್ಯ ಭಾರ್ಗವೋ ಜಮದಗ್ನಿಃ । ಸಪ್ತಮಸ್ಯ ಮೈತ್ರಾವರುಣಿರ್ವಸಿಷ್ಠಃ । ಸೂಕ್ತಶೇಷಸ್ಯಾಂಗಿರಸಃ ಪವಿತ್ರೋ ವಸಿಷ್ಠೋ ವೋಭೌ ವಾ ಸಮುದಿತಾವೃಷೀ। ಪವಸ್ವ ಸೋಮ ಮಂದಯನ್ನಿತ್ಯಾದ್ಯಾಸ್ತಿಸ್ರೋ ದ್ವಿಪದಾ ಗಾಯತ್ರ್ಯಃ । ಅವಿತಾ ನೋ ಅಜಾಶ್ವ ಇತ್ಯಾದ್ಯಾಸ್ತಿಸ್ರಃ ಪವಮಾನಪೂಷದೇವತ್ಯಾಃ । ಪವಮಾನಸೋಮದೇವತಾಕಾ ವಾ । ಯತ್ತೇ ಪವಿತ್ರಮರ್ಚಿಷೀತ್ಯಾದ್ಯಾಃ ಪಂಚರ್ಚಃ ಪವಮಾನಾಗ್ನಿದೇವತ್ಯಾಃ । ಆಸಾಂ ಪಂಚಾನಾಂ ಮಧ್ಯ ಉಭಾಭ್ಯಾಂ ದೇವ ಸವಿತರಿತಿ ತೃತೀಯಾ ಪವಮಾನಸವಿತೃದೇವತಾಕಾ ವಾ । ಚತುರ್ಥೀ ತ್ರಿಭಿಷ್ಟ್ವಂ ದೇವ ಸವಿತರಿತ್ಯೇಷಾ ವಿಕಲ್ಪೇನ ಪವಮಾನಾಗ್ನಿಸವಿತೃದೇವತಾಕಾ । ಪುನಂತು ಮಾಮಿತ್ಯೇಷಾ ವಿಕಲ್ಪೇನ ವೈಶ್ವದೇವೀ। ಯಃ ಪಾವಮಾನೀರಧ್ಯೇತೀತ್ಯಾದಿಕೇ ದ್ವೇ ಪವಮಾನಮಂಡಲಾಧ್ಯೇತೃಸ್ತುತಿಪ್ರತಿಪಾದಿಕೇ । ಅತಃ ಸೈವ ದೇವತಾ । ಶಿಷ್ಟಾಃ ಸರ್ವಾಃ ಪವಮಾನಸೋಮದೇವತಾಕಾಃ । ತಥಾ ಚಾನುಕ್ರಮ್ಯತೇ । ತ್ವಂ ಸೋಮಾಸಿ ದ್ವಾತ್ರಿಂಶದ್ಭರದ್ವಾಜಃ ಕಶ್ಯಪೋ ಗೋತಮೋಽತ್ರಿರ್ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠ ಇತಿ ಹ ತೃಚಾಃ ಸಪ್ತ ಋಷಯಃ ಶೇಷೇ ಪವಿತ್ರೋ ವಸಿಷ್ಠೋ ವೋಭೌ ವಾ ಪವಸ್ವ ಸೋಮ ತಿಸ್ರೋ ನಿತ್ಯದ್ವಿಪದಾ ಗಾಯತ್ರ್ಯೋಽವಿತಾ ನಸ್ತಿಸ್ರಃ ಪೌಷ್ಣ್ಯೋ ವಾ ಯತ್ತೇ ಪವಿತ್ರಂ ಪಂಚಾಗ್ನೇಯ್ಯಃ ಸಾವಿತ್ರ್ಯಗ್ನಿಸಾವಿತ್ರೀ ವೈಶ್ವದೇವೀ ವಾಸಾಮಂತ್ಯಾಸ್ತ್ರಿಂಶೀ ಪುರಉಷ್ಣಿಕ್ ಸಪ್ತವಿಂಶ್ಯನುಷ್ಟುಬಂತ್ಯೇ ಚ ತೇ ಪಾವಮಾನ್ಯಧ್ಯೇತೃಸ್ತುತೀ ಇತಿ । ಗತಃ ಸೂಕ್ತವಿನಿಯೋಗಃ ||

ಅನುವಾದವು:— **ತ್ವಂ ಸೋಮಾಸಿ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಮೂವತ್ತೆರಡು ಋಕ್ಕುಗಳಿರುವುವು. ಈ ಸೂಕ್ತದಲ್ಲಿ ಮೊದಲು ಮೂರು ಋಕ್ಕುಗಳಿಗೆ ಬೃಹಸ್ಪತಿಪುತ್ರನಾದ ಭರದ್ವಾಜನು, ಋಷಿಯು; ೪-೬ ಋಕ್ಕುಗಳಿಗೆ ಮಾರೀಚಃ ಕಶ್ಯಪನು ಋಷಿಯು; ೭-೯ ಋಕ್ಕುಗಳಿಗೆ ರಾಹೂಗಣೋ ಗೌತಮಃ ಎಂಬುವನು ಋಷಿಯು; ೧೦-೧೨ ಋಕ್ಕುಗಳಿಗೆ ಭೌಮೋಽತ್ರಿಃ ಎಂಬುವನು ಋಷಿಯು; ೧೩-೧೫ ಋಕ್ಕುಗಳಿಗೆ ಗಾಥಿನೋ ವಿಶ್ವಾಮಿತ್ರಃ ಎಂಬುವನು ಋಷಿಯು; ೧೬-೧೮ ಋಕ್ಕುಗಳಿಗೆ ಭಾರ್ಗವೋ ಜಮದಗ್ನಿಃ ಎಂಬುವನು ಋಷಿಯು; ೧೯-೨೧ ಋಕ್ಕುಗಳಿಗೆ ಮೈತ್ರಾವರುಣಿರ್ವಸಿಷ್ಠಃ ಎಂಬುವನು ಋಷಿಯು; ಸೂಕ್ತದ ಉಳಿದ ಋಕ್ಕುಗಳಿಗೆ ಎಂದರೆ ೨೨-೩೨ ಋಕ್ಕುಗಳಿಗೆ ಆಂಗಿರಸಃ ಪವಿತ್ರಃ ಎಂಬ ಋಷಿಯಾಗಲೀ,

ವಸಿಷ್ಠನಾಗಲೀ ಅಥವಾ ಇಬ್ಬರೂ ಒಟ್ಟಾಗಿಯಾಗಲೀ ಋಷಿಗಳು. ಈ ಸೂಕ್ತದಲ್ಲಿ **ಪವಸ್ವ ಸೋಮ ಮಂದಯನ್** ಎಂದು ಮೊದಲಾಗುವ ಮೂರು ಋಕ್ಕುಗಳು (೧೬–೧೮) ದ್ವಿಪದಾ ಗಾಯತ್ರೀ ಎಂಬ ಛಂದಸ್ಸಿನದು. **ಅಲಾಯ್ಯಸ್ಯ** ಎಂಬ ಮೂವತ್ತನೆಯ ಋಕ್ಕು ಪುರ ಉಷ್ಣಿಕ್ ಛಂದಸ್ಕವು. ಒಂದು ಋಕ್ಕಿನಲ್ಲಿ ಮೂರುಪಾದಗಳಿದ್ದು ಮೊದಲನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ, ಉಳಿದ ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇದ್ದಲ್ಲಿ ಆ **ಋಕ್ಕು** ಪುರಉಷ್ಣಿಕ್‌ಛಂದಸ್ಸೆನಿಸುವುದು. ೨೭, ೩೧, ೩೨, ನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಉಳಿದ **ಋಕ್ಕುಗಳು** ಗಾಯತ್ರೀಛಂದಸ್ಕವು. **ಅವಿತಾ ನೋ ಅಜಾಶ್ವಃ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (೧೦.–೧೨.) ಪವಮಾನಪೂಷದೇವತೆಗಳಾಗಲಿ ಅಥವಾ ಪವಮಾನಸೋಮದೇವತೆಯಾಗಲಿ ದೇವತೆಯು; **ಯತ್ತೇ ಪವಿತ್ರಮರ್ಚಿಷಿ** ಎಂದು ಮೊದಲಾಗುವ ಐದು ಋಕ್ಕುಗಳಿಗೆ (೨೩–೨೭) ಪವಮಾನಾಗ್ನಿಗಳು ದೇವತೆಯು; ಈ ಐದು **ಋಕ್ಕು**ಗಳಮಧ್ಯದಲ್ಲಿರುವ **ಉಭಾಭ್ಯಾಂ ದೇವ ಸವಿತಃ**ಎಂಬ ಋಕ್ಕಿಗೆ (೨೫ ನೇ ಋಕ್ಕು) ಪವಮಾನಸವಿತೃಗಳೂ ದೇವತೆಯಾಗಬಹುದು. **ತ್ರಿಭಿಷ್ಟ್ವಂ ದೇವ ಸವಿತಃ** ಎಂಬ ೨೬ನೇ ಋಕ್ಕಿಗೆ ಪವಮಾನ ಅಗ್ನಿ ಸವಿತೃಗಳು ವಿಕಲ್ಪವಾಗಿ ದೇವತೆಯಾಗಬಹುದು. **ಪುನಂತು ಮಾಂ** ಎಂಬ ೨೭ನೆಯ ಋಕ್ಕಿಗೆ ವಿಕಲ್ಪವಾಗಿ ವಿಶ್ವದೇವತೆಗ**ಳು** ದೇವತೆಯಾಬಹುದು. **ಯಃ ಪಾವಮಾನೀರಧ್ಯೇತಿ** ಎಂದು ಮೊದಲಾಗವ ೨ ಋಕ್ಕುಗಳು (೩೧–೩೨ಋಕ್ಕುಗ**ಳು)** ಪವಮಾನ ಮಂಡಲಸೂಕ್ತಗಳನ್ನು ಅಧ್ಯಯನಮಾಡುವ ಪುರುಷನ ಸ್ತುತಿಯನ್ನು ಪ್ರತಿಪಾದಿಸುವುವು. ಆದ್ದರಿಂ**ದ ಆ** ಋಕ್ಕುಗಳಿಗೆ ಆ ಸ್ತುತಿಯೇ ದೇವತೆಯು. ಉಳಿದ ಇತರ ಎಲ್ಲಾ ಋಕ್ಕುಗಳಿಗೂ ಪವಮಾನಃ ಸೋಮನು ದೇವತೆಯು. ಅನುಕ್ರಮಣಿಯಲ್ಲಿ—**ತ್ವಂ ಸೋಮಾಸಿ ದ್ವಾತ್ರಿಂಶದ್ಭರದ್ವಾಜಃ ಕಶ್ಯಪೋಗೋತಮೋಽತ್ರಿರ್ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠ ಇತಿ ಹ ತೃಚಾಃ ಸಪ್ತ ಋಷಯಃ ಶೇಷೇ ಪವಿತ್ರೋ ವಸಿಷ್ಠೋ ವೋಭೌ ವಾ ಪವಸ್ವ ಸೋಮ ತಿಸ್ರೋ ನಿತ್ಯದ್ವಿಪದಾ ಗಾಯತ್ರ್ಯೋಽವಿತಾನಸ್ತಿಸ್ರಃ ಪೌಷ್ಣ್ಯೋ ವಾ ಯತ್ತೇ ಪವಿತ್ರಂ ಪಂಚಾಗ್ನೇಯ್ಯಃ ಸಾವಿತ್ರ್ಯಗ್ನಿಸಾವಿತ್ರೀ ವೈಶ್ವದೇವೀ ವಾಸಾಮಂತ್ಯಾಸ್ತ್ರಿಂಶೀ ಪುರಉಷ್ಣಿಕ್ ಸಪ್ತವಿಂಶ್ಯನುಷ್ಟುಬಂತ್ಯೇ ಚ ತೇ ಪಾವಮಾನ್ಯಧ್ಯೇತೃಸ್ತುತೀ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೭

ಮಂಡಲ—೯ || ಅನುವಾಕ—೩ || ಸೂಕ್ತ—೬೭ ||

ಅಷ್ಟಕ—೭ || ಅಧ್ಯಾಯ—೨ || ವರ್ಗ—೧೩, ೧೪, ೧೫, ೧೬ ೧೭, ೧೮, ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩೨ ||

|| ಋಷಿ—೧–೩. ಭರದ್ವಾಜಃ | ೪–೬. ಕಶ್ಯಪಃ | ೭–೯. ಗೋತಮಃ | ೧೦–೧೨. ಅತ್ರಿಃ | ೧೩–೧೫. ವಿಶ್ವಾಮಿತ್ರಃ | ೧೬–೧೮. ಜಮದಗ್ನಿ | ೧೯–೨೧. ವಸಿಷ್ಠಃ | ೨೨–೩೨. ಪವಿತ್ರೋ ವಸಿಷ್ಠೋ ವೋಭೌ ವಾ ||

|| ದೇವತಾ—೧–೯, ೧೩–೨೨, ೨೮–೩೦. ಪವಮಾನಃ ಸೋಮಃ | ೧೦–೧೨ ಪವಮಾನಃ ಸೋಮಃ ಪೂಷಾ ವಾ | ೨೩–೨೪. ಅಗ್ನಿಃ | ೨೫. ಅಗ್ನಿಃ ಸವಿತಾ ವಾ | ೨೬. ಅಗ್ನಿರಗ್ನಿರ್ವಾ ಸವಿತಾ ಚ | ೨೭. ಅಗ್ನಿರ್ವಿಶ್ವೇದೇವಾ ವಾ | ೩೧, ೩೨. ಪಾವಮಾನ್ಯಧ್ಯೇತೃಸ್ತುತಿಃ ||

|| ಛಂದಃ—೧–೧೫, ೧೯–೨೬, ೨೮, ೨೯. ಗಾಯತ್ರೀ | ೧೬–೧೮. ದ್ವಿಪದಾ ಗಾಯತ್ರೀ | ೨೭. ೩೧, ೩೨. ಅನುಷ್ಟುಪ್ | ೩೦. ಪುರಉಷ್ಣಿಕ್ ||

|| ಸಂಹಿತಾಪಾಠಃ ||

ತ್ವಂ ಸೋಮಾಸಿ ಧಾರಯುರ್ಮಂದ್ರ ಓಜಿಷ್ಠೋ ಅಧ್ವರೇ ।

ಪವಸ್ವ ಮಂಹಯದ್ರಯಿಃ ॥ ೧ ॥

|| ಪದಪಾಠಃ ||

ತ್ವಂ । ಸೋಮ । ಅಸಿ । ಧಾರಯುಃ । ಮಂದ್ರಃ । ಓಜಿಷ್ಠಃ । ಅಧ್ವರೇ ।

ಪವಸ್ವ । ಮಂಹಯತ್ಽರಯಿಃ ॥ ೧ ॥

| ಸಾಯಣಭಾಷ್ಯಂ ||

ಹೇ ಸೋಮಾಭಿಷೂಯಮಾಣ ಪವಮಾನ ಮಂದ್ರೋ ಮೋದಯಿತೃತಮ ಓಜಿಷ್ಠ ಓಜಸ್ವಿತಮ-ಸ್ತ್ವಮಧ್ವರೇ ಹಿಂಸಾರಹಿತೇಽಸ್ಮದೀಯೇ ಯಜ್ಞೇ ಧಾರಯುರಭಿಷವಣಧಾರಾಕಾಮೋಽಸಿ । ಭವಸಿ । ತತಸ್ತ್ವಂ ಮಂಹಯದ್ರಯಿಃ ಸ್ತೋತೃಭ್ಯಃ ಪ್ರದೀಯಮಾನಧನಃ ಸನ್ ಪವಸ್ವ । ದ್ರೋಣಕಲಶೇ ಗ್ರಹಾದಿಷು ದಶಾಪವಿತ್ರೇಣ ಪೂತೋ ಭವ । ಯದ್ವಾ ॥ ಧಾರಯುಸ್ತದ್ವದರ್ಥೇ ಛಾಂದಸ ಇತಿ ಮತ್ವರ್ಥೀಯೋ ಯುಃ ॥ ಸ ಹೇ ಸೋಮ ತ್ವಂ ಧಾರಾವಾನಿವ ತತಃ ಪವಸ್ವೇತಿ ಸಂಬಂಧಃ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಮಂದ್ರಃ**—ಅತಿಶಯವಾಗಿ ಹರ್ಷವನ್ನು ಕೊಡುವವನೂ । **ಓಜಿಷ್ಠಃ**—ಶ್ರೇಷ್ಠವಾದ ವೀರ್ಯವುಳ್ಳವನೂ ಆದ । **ತ್ವಂ**—ನೀನು । **ಅಧ್ವರೇ**—ಯಜ್ಞದಲ್ಲಿ । **ಧಾರಯುಃ**—ಧಾರಾರೂಪದಲ್ಲಿ ಪ್ರವಹಿಸಲಿಚ್ಛೆಯುಳ್ಳವನಾಗಿ । **ಅಸಿ**—ಆಗಿದ್ದೀಯೆ. । **ಮಂಹಯದ್ರಯಿಃ**—ಸ್ತುತಿಕರ್ತನಿಗೆ ಧನವನ್ನು ದಾನಮಾಡತಕ್ಕವನಾಗಿ । **ಪವಸ್ವ**—ದ್ರೋಣಕಲಶಾಭಿಮುಖವಾಗಿ ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಅತಿಶಯವಾಗಿ ಹರ್ಷವನ್ನು ಕೊಡುವವನೂ ಶ್ರೇಷ್ಠವಾದ ವೀರ್ಯವುಳ್ಳವನೂ ಆದ ನೀನು ಯಜ್ಞದಲ್ಲಿ ಧಾರಾರೂಪದಲ್ಲಿ ಪ್ರವಹಿಸಲಿಚ್ಛೆಯುಳ್ಳವನಾಗಿ ಆಗಿದ್ದೀಯೆ. ಸ್ತುತಿಕರ್ತನಿಗೆ ಧನವನ್ನು ದಾನ ಮಾಡತಕ್ಕವನಾಗಿ ದ್ರೋಣಕಲಶಾಭಿಮುಖವಾಗಿ ಪ್ರವಹಿಸು.

## English Translation.

You, Soma, who are most exhilaratiug, most powerful, are disposed to shed your stream at our sacrifice: flow then you who are giver of riches.

॥ ಸಂಹಿತಾಪಾಠಃ ॥

ತ್ವಂ ಸುತೋ ನೃಮಾದನೋ ದಧನ್ವಾನ್ಮತ್ಸರಿಂತಮಃ ।
ಇಂದ್ರಾಯ ಸೂರಿರಂಧಸಾ ॥ ೨ ॥

॥ ಪದಪಾಠಃ ॥

ತ್ವಂ । ಸುತಃ । ನೃಽಮಾದನಃ । ದಧನ್ವಾನ್ । ಮತ್ಸರಿನ್ಽತಮಃ ।
ಇಂದ್ರಾಯ । ಸೂರಿಃ । ಅಂಧಸಾ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಸೋಮ ನೃಮಾದನೋ ನೃಣಾಂ ಕರ್ಮಣೋ ನೇತ್ರೃಣಾಮೃತ್ವಿಜಾಂ ಮಾದಯಿತಾ ಅತ ಏವ ದಧನ್ವಾಂಸ್ತೇಭ್ಯೋ ಧನಾನಿ ಧಾರಯನ್ ಪ್ರಯಚ್ಛನ್ ಯದ್ವಾ ಯಜ್ಞಸ್ಯ ಧಾರಕಃ ಸೂರಿಃ ಪ್ರಾಜ್ಞಃ ಸುತೋಽಸ್ಮಾಭಿರಭಿಷುತಸ್ತ್ವಮಂಧಸಾ ಹವೀರೂಪೇಣಾನ್ನೇನ ಸಹೇಂದ್ರಾಯ ಮತ್ಸರಿಂತಮಸ್ತಸ್ಯಾತಿಶಯೇನ ಮದಕಾರೀ ಭವ ॥ ನಾದ್ಘಸ್ಯೇತಿ ನಕಾರಃ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ನೃಮಾದನಃ**— ಯಜಮಾನರಿಗೆ ಹರ್ಷಕಾರಕನೂ । **ದಧನ್ವಾನ್**— ಅವರಿಗೆ ಧನವನ್ನು ಕೊಡುವವನೂ । **ಸೂರಿಃ**— ಪ್ರಾಜ್ಞನೂ । **ಸುತಃ**— ಹಿಂಡಲ್ಪಟ್ಟವನೂ ಆದ ನೀನು । **ಅಂಧಸಾ**— ಹವಿಸ್ಸಿನೊಡನೆ । **ಇಂದ್ರಾಯ** — ಇಂದ್ರನಿಗೆ । **ಮತ್ಸರಿಂತಮಃ**— ಅಧಿಕವಾದ ಆನಂದಕಾರಕನಾಗು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಜಮಾನರಿಗೆ ಹರ್ಷಕಾರಕನೂ ಅವರಿಗೆ ಧನವನ್ನು ಕೊಡುವವನೂ, ಪ್ರಾಜ್ಞನೂ, ಹಿಂಡಲ್ಪಟ್ಟವನೂ ಆದ ನೀನು ಹವಿಸ್ಸಿನೊಡನೆ ಕೂಡಿ ಇಂದ್ರನಿಗೆ ಅಧಿಕವಾದ ಆನಂದಕಾರಕನಾಗು.

## English Translation.

You who are the exhilarator of the priests, bestowing (wealth upon them) and intelligent, do you when effused together with food be the especial cause of exhilaration to Indra.

। ಸಂಹಿತಾಪಾಠಃ ॥

ತ್ವಂ ಸುಷ್ವಾಣೋ ಅದ್ರಿಭಿರಭ್ಯರ್ಷ ಕನಿಕ್ರದತ್ ।
ದ್ಯುಮಂತಂ ಶುಷ್ಮಮುತ್ತಮಂ ॥ ೩ ॥

|| ಪದಪಾಠಃ ||

ತ್ವಂ । ಸುಸ್ವಾನಃ । ಅದ್ರಿಽಭಿಃ । ಅಭಿ । ಅರ್ಷ । ಕನಿಕ್ರದತ್ ।

ದ್ಯುಽಮಂತಂ । ಶುಷ್ಮಂ । ಉತ್ಽತಮಂ || ೩ ||

|| ಸಾಯಣಭಾಷ್ಯಂ ||

ಹೇ ಪವಮಾನ ಸೋಮ ಅದ್ರಿಭಿರ್ಗ್ರಾವಭಿಃ ಸುಷ್ವಾಣಃ ಸುನ್ವಾನೋಽಭಿಷೂಯಮಾಣಸ್ತ್ವಂ ಕನಿಕ್ರದದ್ಭೃಶಂ ಶಬ್ದಂ ಕುರ್ವನ್ನಭ್ಯರ್ಷ । ಕಲಶಂ ಪಾತ್ರಾಣಿ ವಾಭಿಗಚ್ಛ । ತಥಾ ದ್ಯುಮಂತಂ ದೀಪ್ತಿಯುಕ್ತಮುತ್ತಮಂ ಶುಷ್ಮಂ ಶತ್ರೂಣಾಂ ಶೋಷಕಂ ಬಲಂ ಚ ಪ್ರಾಪ್ನುಹಿ । ಯದ್ವಾ । ಏಕವಾಕ್ಯತಯಾ ಯೋಜನೀಯಃ । ಸೂಯಮಾನಸ್ತ್ವಂ ಬಲಮಭಿಗಚ್ಛೇತಿ ॥ ಕದಿ ಕ್ರದಿ ಆಹ್ವಾನೇ । ಕ್ರದೇರ್ಯಙ್ಲುಕಿ ನಲೋಪೋಽಭ್ಯಾಸಸ್ಯ ನಿಗಾಗಮಶ್ಚ ದಾಧರ್ತಿ ದರ್ಧರ್ತೀತಿ ಸೂತ್ರೇಣ ಸರ್ವಂ ನಿಪಾತ್ಯತೇ । ತಸ್ಮಾಚ್ಛತೃಪ್ರತ್ಯಯಃ । ಅಭ್ಯಸ್ತಾನಾಮಾದಿರಿತಿ ಸ್ವರಃ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) ಅದ್ರಿಭಿಃ—ಗ್ರಾವಗಳಿಂದ । ಸುಷ್ವಾಣಃ—ಹಿಂಡಲ್ಪಟ್ಟ । ತ್ವಂ—ನೀನು । ಕನಿಕ್ರದತ್—ಶಬ್ದಮಾಡುತ್ತ । ಅಭ್ಯರ್ಷ—ದ್ರೋಣಕಲಶವನ್ನು ಸೇರು । ದ್ಯುಮಂತಂ—ಕಾಂತಿಯುತವಾದುದೂ । ಉತ್ತಮಂ—ಉತ್ತಮವಾದುದೂ ಆದ । ಶುಷ್ಮಂ—ಶಕ್ತಿಯನ್ನು ಹೊಂದು.

|| ಭಾವಾರ್ಥ ||

ಎಲೈ ಸೋಮದೇವನೇ, ಗ್ರಾವಗಳಿಂದ ಹಿಂಡಲ್ಪಟ್ಟ ನೀನು ಶಬ್ದಮಾಡುತ್ತ ದ್ರೋಣಕಲಶವನ್ನು ಸೇರು. ಕಾಂತಿಯುತವಾದುದೂ ಉತ್ತಮವಾದುದೂ ಆದ ಶಕ್ತಿಯನ್ನು ಹೊಂದು.

English Translaton

Do you when effused by the stones proceed resounding (to the vessed): (grant) bright excellenl strength.

|| ಸಂಹಿತಾಪಾಠಃ ||

ಇಂದುರ್ಹಿನ್ವಾನೋ ಅರ್ಷತಿ ತಿರೋ ವಾರಾಣ್ಯವ್ಯಯಾ ।

ಹರಿರ್ವಾಜಮಚಿಕ್ರದತ್ || ೪ ||

| ಪದಪಾಠಃ ||

ಇಂದುಃ | ಹಿನ್ವಾನಃ | ಅರ್ಷತಿ | ತಿರಃ | ವಾರಾಣಿ | ಅವ್ಯಯಾ |

ಹರಿಃ | ವಾಜಂ | ಅಚಿಕ್ರದತ್ || ೪ ||

|| ಸಾಯಣಭಾಷ್ಯಂ ||

ಹಿನ್ವಾನೋ ಗ್ರಾವಭಿಃ ಪ್ರೇರ್ಯಮಾಣೋಽಭಿಷೂಯಮಾಣ ಇಂದುಃ ಸೋಮೋಽವ್ಯಯಾವಿಮಯಾನ್ಯವೀನಾಂ ಸ್ವಭೂತಾನಿ ವಾರಾಣಿ ವಾಲಾನಿ | ಪವಿತ್ರಾಣೀತ್ಯರ್ಥಃ | ತಾನಿ ತಿರಸ್ತಿರಸ್ಕೃತ್ಯ ವ್ಯವಧಾಯಾರ್ಷತಿ | ಗಚ್ಛತಿ | ಪ್ರಭೂತಂ ನಿರ್ಗಚ್ಛತೀತ್ಯರ್ಥಃ | ಸೋಽಯಂ ಹರಿರ್ಹರಿತವರ್ಣಃ ಸೋಮೋ ವಾಜಮನ್ನಮಚಿಕ್ರದತ್ | ಶಬ್ದಯತಿ | ತ್ವಯಾ ಸಹೇಂದ್ರಮುಹಮಾಹ್ವಯಾಮೀತ್ಯರ್ಥಃ ||

|| ಪ್ರತಿಪದಾರ್ಥ ||

ಹಿನ್ವಾನಃ—ಹಿಂಡಲ್ಪಟ್ಟ | ಇಂದುಃ—ಸೋಮನು | ಅವ್ಯಯಾ—ಉಣ್ಣೆಯ | ವಾರಾಣಿ—ನಾರುಗಳುಳ್ಳ ಪಾತ್ರೆಗಳನ್ನು | ತಿರಃ—ದಾಟಿಕೊಂಡು | ಅರ್ಷತಿ—ಮುಂದಕ್ಕೆ ಪ್ರವಿಸುತ್ತಾನೆ | ಹರಿಃ—ಪಚ್ಚೆ ವರ್ಣವುಳ್ಳ ಸೋಮನು | ವಾಜಃ—ಅನ್ನವನ್ನು | ಅಚಿಕ್ರದತ್—ಪ್ರಕಟಿಸಿ ಒದಗಿಸುತ್ತಾನೆ.

|| ಭಾವಾರ್ಥ ||

ಹಿಂಡಲ್ಪಟ್ಟ ಸೋಮದೇವನು ಉಣ್ಣೆಯ ನಾರುಗಳುಳ್ಳ ಪಾತ್ರೆಗಳನ್ನು ದಾಟಿಕೊಂಡು ಮುಂದಕ್ಕೆ ಪ್ರವಿಸುತ್ತಾನೆ. ಪಚ್ಚೆ ವರ್ಣವುಳ್ಳ ಸೋಮನು ಅನ್ನವನ್ನು ಪ್ರಕಟಿಸಿ ಒದಗಿಸುತ್ತಾನೆ.

English Translation.

Indu effused (by the stones) passes through the woollen filter : green-tinted he roars forth food.

|| ಸಂಹಿತಾಪಾಠಃ ||

ಇಂದೋ ವ್ಯವ್ಯಮರ್ಷಸಿ ವಿ ಶ್ರವಾಂಸಿ ವಿ ಸೌಭಗಾ |

ವಿ ವಾಜಾನ್ತ್ಸೋಮ ಗೋಮತಃ || ೫ ||

|| ಪದಪಾಠಃ ||

ಇಂದೋ ಇತಿ | ವಿ | ಅವ್ಯಂ | ಅರ್ಷಸಿ | ವಿ | ಶ್ರವಾಂಸಿ | ವಿ | ಸೌಭಗಾ |

ವಿ | ವಾಜಾನ್ | ಸೋಮ | ಗೋಽಮತಃ || ೫ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಅವ್ಯಮವಿವಾಲೇ ಭವಂ ಪವಿತ್ರಂ ವ್ಯರ್ಷಸಿ। ವಿವಿಧಂ ಧಾರಾಭಿರ್ಗಚ್ಛಸಿ। ಕಿಂಚ ಶ್ರವಾಂಸಿ ಹವೀರೂಪಾಣ್ಯನ್ನಾನಿ ಚ ವಿಗಚ್ಛಸಿ। ತಥಾ ಸೌಭಗಾ। ಸುಭಗಸ್ಯ ಭಾವಃ ಸೌಭಗಂ॥ ಸುಭಗಶಬ್ದ ಉದ್ಗಾತ್ರಾದಿಷು ಪಠ್ಯತೇ। ತಸ್ಯೋತ್ತರಪದವೃದ್ಧಿರ್ನೇಷ್ಯತೇ॥ ಸೌಭಗಾನಿ ಧನಾನಿ ವಿವಿಧಂ ಪ್ರಾಪ್ನೋಷಿ। ತಥಾ ಹೇ ಸೋಮ ಗೋಮತಃ ಪಶುಮಂತಿ ವಾಜಾನ್ ಬಲಾನಿ ಚ ವಿವಿಧಂ ಪ್ರಾಪ್ನುಹಿ। ತಾನಿ ಸರ್ವಾಣ್ಯಸ್ಮಾಕಂ ಪ್ರಾಪಯೇತ್ಯಭಿಪ್ರಾಯಃ॥

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ । ಅವ್ಯಂ—ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರವನ್ನು । ವಿ ಅರ್ಷಸಿ— ಅನೇಕಧಾರೆಗಳಿಂದ ಪ್ರವೇಶಿಸುತ್ತೀಯೆ । ಶ್ರವಾಂಸಿ—ಅನ್ನಗಳನ್ನೂ । ವಿ—ಅಧಿಕವಾಗಿ ಹೊಂದುತ್ತೀಯೆ । ಸೌಭಗಾ—ಕಲ್ಯಾಣಾರ್ಥವಾದ ಧನಗಳನ್ನೂ । ವಿ—(ನಮಗೆ ಕೊಡಲು) ಹೊಂದುತ್ತೀಯೆ । ಸೋಮ—ಎಲೈ ಸೋಮದೇವನೇ । ಗೋಮತಃ—ಗೋಯುಕ್ತವಾದ । ವಾಜಾನ್—ಅನ್ನಗಳನ್ನೂ । ವಿ—ಅನೇಕ ರೂಪಗಳಲ್ಲಿ ಹೊಂದು.

|| ಭಾವಾರ್ಥ ||

ಎಲೈ ಸೋಮದೇವನೇ, ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರವನ್ನು ಅನೇಕ ಧಾರೆಗಳಿಂದ ಪ್ರವೇಶಿಸುತ್ತೀಯೆ. ಅನ್ನಗಳನ್ನೂ ಅಧಿಕವಾಗಿ ಹೊಂದುತ್ತೀಯೆ. ಕಲ್ಯಾಣಾತ್ಮಕವಾದ ಧನಗಳನ್ನೂ ನಮಗೆ ಕೊಡಲು ಹೊಂದುತ್ತೀಯೆ. ಎಲೈ ಸೋಮದೇವನೇ, ಗೋಯುಕ್ತವಾದ ಅನ್ನಗಳನ್ನೂ ಅನೇಕರೂಪಗಳಲ್ಲಿ ಹೊಂದು.

## English Translation.

Indu, hasten through the fleece, grant us food and wealth (therefore grant us), Soma, strength of flocks.

|| ಸಂಹಿತಾಪಾಠಃ ||

ಆ ನ ಇಂದೋ ಶತಗ್ವಿನಂ ರಯಿಂ ಗೋಮಂತಮಶ್ವಿನಂ ।
ಭರಾ ಸೋಮ ಸಹಸ್ರಿಣಂ ॥ ೬ ॥

|| ಪದಪಾಠಃ ||

ಆ । ನಃ । ಇಂದೋ ಇತಿ । ಶತಽಗ್ವಿನಂ । ರಯಿಂ । ಗೋಽಮಂತಂ । ಅಶ್ವಿನಂ ।
ಭರ । ಸೋಮ । ಸಹಸ್ರಿಣಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಪಾತ್ರೇಷು ಕ್ಷರನ್ ಹೇ ಸೋಮ ನೋಽಸ್ಮಭ್ಯಮಾ ಭರ । ಸಂಪಾದಯ । ದೇಹಿ । ಕಿಮಿತಿ ಉಚ್ಯತೇ । ಶತಗ್ವಿನಂ । ಶತಂ ಗಾವೋ ಯಸ್ಯ ಸ ಶತಗುಃ । ತದ್ವಂತಂ ಗೋಮಂತಂ ಪ್ರಶಸ್ತ-ಪಶುಮಂತಮಶ್ವಿನಮಶ್ವಯುಕ್ತಂ ಸಹಸ್ರಿಣಂ ಸಹಸ್ರಸಂಖ್ಯಾಕಂ ರಯಿಂ ಧನಂ ಪುತ್ರಂ ವಾ ಭರ ॥

॥ಪ್ರತಿಪದಾರ್ಥ॥

ಇಂದೋ—ಪ್ರವಹಿಸತಕ್ಕ । ಸೋಮ—ಎಲೈ ಸೋಮದೇವನೇ । ನಃ—ನಮಗೆ । ಶತಗ್ವಿನಃ—ನೂರು ಗೋವುಗಳುಳ್ಳದ್ದೂ । ಗೋಮಂತಂ—ಉತ್ತಮವಾದ ಗೋವುಗಳುಳ್ಳದ್ದೂ । ಅಶ್ವಿನಂ—ಅಶ್ವಯುಕ್ತವಾದುದೂ । ಸಹಸ್ರಿಣಂ—ಸಹಸ್ರಸಂಖ್ಯಾಕವಾದುದೂ ಆದ । ರಯಿಂ—ಧನವನ್ನು । ಆಭರ—ತಂದೊದಗಿಸು,

॥ ಭಾವಾರ್ಥ ॥

ಪ್ರವಾಹಾತ್ಮಕನಾದ ಎಲೈ ಸೋಮದೇವನೇ, ನಮಗೆ ನೂರಾರು ಪ್ರಶಸ್ತವಾದ ಗೋವುಗಳುಳ್ಳದ್ದೂ, ಅಶ್ವಯುಕ್ತವಾದುದೂ, ಸಹಸ್ರಸಂಖ್ಯಾಕವಾದುದೂ ಆದ ಧನವನ್ನು ತಂದೊದಗಿಸು.

## English Translation.

Indu, Soma, bring us thousand-fold wealth, consisting of hundreds of cows, having excellent cows and horses.

॥ ಸಂಹಿತಾಪಾಠಃ ॥

ಪವಮಾನಾಸ ಇಂದವಸ್ತಿರಃ ಪವಿತ್ರಮಾಶವಃ ।
ಇಂದ್ರಂ ಯಾಮೇಭಿರಾಶತ ॥ ೭ ॥

॥ ಪದಪಾಠಃ ॥

ಪವಮಾನಾಸಃ । ಇಂದವಃ । ತಿರಃ । ಪವಿತ್ರಂ । ಆಶವಃ ।
ಇಂದ್ರಂ । ಯಾಮೇಭಿಃ । ಆಶತ ॥ ೭ ॥

॥ ಸಾಯಣಭಾಷ್ಯಂ ॥

ಪವಿತ್ರಮೂರ್ಣಾಸ್ತುಕೇನ ನಿರ್ಮಿತಂ ದಶಾಪವಿತ್ರಂ ತಿರಸ್ತಿರಸ್ಕೃತ್ಯ ವ್ಯವಧಾಯಕಂ ಕೃತ್ವಾ ಪವಮಾನಾಸಃ ಕಲಶಂ ಪ್ರತಿ ಬಹುಧಾರಾಃ ಕ್ಷರಂತ ಆಶವಃ ಕ್ಷಿಪ್ರಂಮುದಕಾರಿಣಶ್ಚ ಮಸಾದೀನ್ ವ್ಯಾಪ್ನು-ವಂತೋ ನೇಂದವಃ ಸೋಮಾ ಯಾಮೇಭಿಃ ಸ್ವೀಯೈರ್ಗಮನೈರಿಂದ್ರಮಾಶತ । ವ್ಯಾಪ್ನುವಂತಿ ॥

|| ಪ್ರತಿಪದಾರ್ಥ ||

**ಪವಿತ್ರಂ**—ದಶಾಪವಿತ್ರವನ್ನು | **ತಿರಃ**—ದಾಟಿ | **ಪವಮಾನಾಸಃ**—ಅನೇಕಧಾರೆಗಳಲ್ಲಿ ಪ್ರವಹಿಸುವುವೂ ಆದ | **ಆಶವಃ**—ಶೀಘ್ರಗಾಮಿಗಳೂ ಆದ | **ಇಂದವಃ**—ಸೋಮರಸಗಳು | **ಯಾಮೇಭಿಃ**—ತಮ್ಮ ಗಮನಗಳಿಂದ | **ಇಂದ್ರಂ**—ಇಂದ್ರನನ್ನು | **ಆಶತ**—ಸಮಿಾಪಿಸುತ್ತವೆ.

|| ಭಾವಾರ್ಥ ||

ಅನೇಕ ಧಾರೆಗಳಲ್ಲಿ ಪ್ರವಹಿಸುವುವೂ, ಶೀಘ್ರಗಾಮಿಗಳೂ ಆದ ಸೋಮರಸಗಳು ತಮ್ಮ ಗಮನಗಳಿಂದ ದಶಾಪವಿತ್ರವನ್ನು ದಾಟಿ ಇಂದ್ರನನ್ನು ಸಮಿಾಪಿಸುತ್ತವೆ.

## English Translation.

The purified swift-flowing Soma-juices passing through the filter reach Indra by their own paths.

|| ಸಂಹಿತಾಪಾಠಃ ||

ಕಕುಹಃ ಸೋಮ್ಯೋ ರಸ ಇಂದುರಿಂದ್ರಾಯ ಪೂರ್ವ್ಯಃ |
ಆಯುಃ ಪವತ ಆಯವೇ || ೮ ||

|| ಪದಪಾಠಃ ||

ಕಕುಹಃ | ಸೋಮ್ಯಃ | ರಸಃ | ಇಂದುಃ | ಇಂದ್ರಾಯ | ಪೂರ್ವ್ಯಃ |
ಆಯುಃ | ಪವತೇ | ಆಯವೇ || ೮ ||

|| ಸಾಯಣಭಾಷ್ಯಂ ||

ಕಕುಹಃ | ಸೋಮಃ ಸರ್ವಕರ್ಮಕಾರಯಿತೃತ್ವೇನ ಸರ್ವೇಷಾಂ ಸಮುಚ್ಛ್ರಿತೋಽತಿಶಯಿತೋ ಭವತಿ | ಸೋಽಯಂ ಪೂರ್ವ್ಯಃ ಪೂರ್ವೈಃ ಕೃತೋಽಭಿಷುತಃ ಪೂರ್ವಂ ಪ್ರಾತಃಕಾಲೇ ಕೃತೋ ವಾಯುರಿಂದ್ರಮಭಿಗಂತೇದುಃ ಪಾತ್ರೇಷು ಕ್ಷರನ್ ಸೋಮ್ಯಃ || ಮಯೇ ಚ | ಪಾ. ೪-೪-೧೩೮ | ಇತಿ ಯಪ್ರತ್ಯಯಃ || ಸೋಮಮಯೋ ರಸ ಆಯವೇ ಸರ್ವತ್ರ ಗಂತ್ರೆ ಇಂದ್ರಾಯ ಪವತೇ | ಕಲಶೇಷು ಪವಿತ್ರೇಣ ಪೂತೋ ಭವತಿ | ಯದ್ವಾ | ಇಂದ್ರಾರ್ಥಮಭಿಮುಖಂ ಗಚ್ಛತಿ | ಪವತಿರ್ಗತಿಕರ್ಮಾ ||

|| ಪ್ರತಿಪದಾರ್ಥ ||

**ಇಂದುಃ**—ಸ್ರವಾಹಾತ್ಮಕವೂ | **ಕಕುಹಃ**—ಶ್ರೇಷ್ಠವೂ | **ಪೂರ್ವ್ಯಃ**—ಹಿಂದಿನವರಿಂದ ಹಿಂಡಲ್ಪಟ್ಟಿದೂ | **ಆಯುಃ**—ಇಂದ್ರನನ್ನು ಸಮಿಾಪಿಸುವುದೂ | **ಸೋಮ್ಯಃ**—ಸೋಮಸಂಬಂಧಿಯೂ ಆದ | **ರಸಃ**—ರಸವು |

**ಆಯವೇ**—ಗವ್ಯಸ್ಥಾನವಾದ । **ಇಂದ್ರಾಯ**— ಇಂದ್ರನನ್ನುದ್ದೇಶಿಸಿ । **ಪವತೇ**—ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದುತ್ತದೆ

॥ ಭಾವಾರ್ಥ ॥

ಪ್ರವಾಹಾತ್ಮಕವೂ, ಶ್ರೇಷ್ಠವೂ, ಹಿಂದಿನವರಿಂದ ಹಿಂಡಲ್ಪಟ್ಟುದೂ ಇಂದ್ರನನ್ನು ಸಮೀಪಿಸುವುದೂ, ಸೋಮಸಂಬಂಧಿಯೂ ಆದ ರಸವು ಗವ್ಯಸ್ಥಾನವಾದ ಇಂದ್ರನನ್ನುದ್ದೇಶಿಸಿ ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದುತ್ತದೆ.

English Translation.

The excellent juice of the Soma dropping (into the vessels) poured forth by men of old, the goer (to Indra) is filtered for Indra the goer.

॥ ಸಂಹಿತಾಪಾಠಃ ॥

ಹಿನ್ವಂತಿ ಸೂರಮುಸ್ರಯಃ ಪವಮಾನಂ ಮಧುಶ್ಚುತಂ ।
ಅಭಿ ಗಿರಾ ಸಮಸ್ವರನ್ ॥ ೯ ॥

॥ ಪದಪಾಠಃ ॥

ಹಿನ್ವಂತಿ । ಸೂರಂ । ಉಸ್ರಯಃ । ಪವಮಾನಂ । ಮಧುಽಶ್ಚುತಂ ।
ಅಭಿ । ಗಿರಾ । ಸಂ । ಅಸ್ವರನ್ ॥ ೯ ॥

॥ ಸಾಯಣಭಾಷ್ಯಂ ॥

ಉಸ್ರಯಃ ಕರ್ಮಕರಣಾರ್ಥಮಿತಸ್ತತಃ ಸಂಚರಂತ್ಯೋಽಂಗುಲಯೋ ಮಧುಶ್ಚುತಂ ಮುದಕರಸ್ಯ ರಸಸ್ಯ ಚ್ಯಾವಯಿತಾರಂ ಸೂರಂ ಸುವೀರ್ಯಂ ಸರ್ವಸ್ಯ ಯಾಗಾದಿಕರ್ಮಣಿ ಪ್ರೇರಕಂ ಪವಮಾನಂ ಸೋಮಂ ಹಿನ್ವಂತಿ । ಅಭಿಷವಾರ್ಥಂ ಸಂಪ್ರೇರಯಂತಿ । ತತಃ ಸ್ತೋತಾರೋ ಗಿರಾ ಸ್ತುತ್ಯಾ ತಮೇನಮಭಿ ಸಮಸ್ವರನ್ । ಸಮ್ಯಗಭಿಷ್ಟುವಂತಿ ॥

॥ ಪ್ರತಿಪದಾರ್ಥ ॥

ಮಧುಶ್ಚುತಂ—ಮಧುರರಸವನ್ನು ಸುರಿಸುವವನೂ । **ಸೂರಂ**—ವೀರ್ಯವುಳ್ಳವನೂ ಆದ । **ಪವಮಾನಂ**—ಸೋಮನನ್ನು । **ಉಸ್ರಯಃ**—ಅಂಗುಲಿಗಳು । **ಹಿನ್ವಂತಿ**—ಹಿಂಡುತ್ತವೆ । **ಗಿರಾ**—ಸ್ತುತಿಗಳಿಂದ । **ಅಭಿ ಸಮಸ್ವರನ್**—ಸ್ತೋತೃಗಳು ಪ್ರಶಂಸಿಸುತ್ತಾರೆ.

॥ ಭಾವಾರ್ಥ ॥

ಮಧುರವಾದ ರಸವನ್ನು ಸುರಿಸುವವನೂ, ವೀರ್ಯವುಳ್ಳವನೂ ಆದ ಸೋಮನನ್ನು ಬೆರಳುಗಳು ಹಿಂಡುತ್ತವೆ. ಸ್ತೋತೃಗಳು ಸ್ತುತಿಗಳಿಂದ ಪ್ರಶಂಸಿಸುತ್ತಾರೆ.

## English Translation

The fingers express the purified honey-dropping heroic Soma : (the worshippers) hail him with praise.

|| ಸಂಹಿತಾಪಾಠಃ ||

ಅವಿತಾ ನೋ ಅಜಾಶ್ವಃ ಪೂಷಾ ಯಾಮನಿಯಾಮನಿ ।
ಆ ಭಕ್ಷತ್ಕನ್ಯಾಸು ನಃ ॥ ೧೦ ॥

|| ಪದಪಾಠಃ ||

ಅವಿತಾ । ನಃ । ಅಜಽಅಶ್ವಃ । ಪೂಷಾ । ಯಾಮನಿಽಯಾಮನಿ ।
ಆ । ಭಕ್ಷತ್ । ಕನ್ಯಾಸು । ನಃ ॥ ೧೦ ॥

|| ಸಾಯಣಭಾಷ್ಯಂ ||

ಅಜಾಶ್ವಃ । ಅಜಾಃ ಪೂಷ್ಣ ಇತ್ಯುಕ್ತತ್ವಾದಜಾ ಏವಾಶ್ವಾ ವಾಹನಾನಿ ಯಸ್ಯ ಸ ತಥೋಕ್ತಃ । ಸ ಪೂಷೈತನ್ನಾಮಕೋ ದೇವೋ ಯಾಮನಿ ಯಾಮನಿ ಸರ್ವಸ್ಮಿನ್ಗಮನೇ ಭೌಮದಿವ್ಯಲಕ್ಷಣೇ ನೋಽಸ್ಮಾಕಮವಿತಾ ಪಾಲಯಿತಾ ಭವತು । ಕಿಂಚ ಕನ್ಯಾಸು ಕಮನೀಯಾಸ್ವಭಿಮತಾಸು ಸ್ತ್ರೀಷು ನೋಽಸ್ಮಾನಾ ಭಕ್ಷತ್ । ಆ ಭಜತಾಂ । ಅಸ್ಮಾಕಂ ಕನ್ಯಾಃ ಪ್ರಯಚ್ಛತ್ವಿತ್ಯರ್ಥಃ ॥ ಭಜಃ ಸೇವಾರ್ಥಾಲ್ಲೇಟಿ ಸಿಪ್ಯಡಾಗಮೇ ರೂಪಂ ॥ ಯದ್ವಾ । ಅಜಾಶ್ವೋಽಜವಾಹನಃ ಪೂಷಾ ಸರ್ವಸ್ಯ ಪೋಷಯಿತಾ ಸೋಮೋ ಯಾಮನಿ ಯಾಮನಿ । ಯಾಯತೇ ಪ್ರಾಪ್ಯತೇ ದೇವೈರತ್ರೇತಿ ಯಾಮ ಯಜ್ಞಃ । ತತ್ರ ಯಜ್ಞೇ ನೋಽಸ್ಮಾಕಮವಿತಾ ರಕ್ಷಿತಾ ಭವತು । ತಥಾ ಕನ್ಯಾಸು ಸ್ತ್ರೀಷ್ವಿಷ್ಟಾಸ್ವಸ್ಮಾನಾ ಭಕ್ಷತ್ । ಪ್ರಾಪಯತು ॥

|| ಪ್ರತಿಪದಾರ್ಥ ||

**ಅಜಾಶ್ವಃ**—ಅಜಸಂಜ್ಞಕವಾದ ವಾಹನವುಳ್ಳ । **ಪೂಷಾ**—ಪೂಷದೇವನು । **ಯಾಮನಿಯಾಮನಿ**—ನಮ್ಮ ಎಲ್ಲಾ ಗಮನಮಾರ್ಗಗಳಲ್ಲೂ । **ನಃ**—ನಮಗೆ । **ಅವಿತಾ**—ರಕ್ಷಕನಾಗಿರಲಿ । **ಕನ್ಯಾಸು**—ಆಕರ್ಷಕವಾದ ಕನ್ಯೆಯರೊಡನೆ । **ನಃ**—ನಮ್ಮನ್ನು । **ಆ ಭಕ್ಷತ್**—ಸೇರುವಂತೆ ಮಾಡಲಿ.

|| ಭಾವಾರ್ಥ ||

ಅಜಸಂಜ್ಞವಾದ ವಾಹನಗಳುಳ್ಳ ಪೂಷದೇವನು ನಮ್ಮ ಎಲ್ಲ ಗಮನಮಾರ್ಗಗಳಲ್ಲೂ ನಮಗೆ ರಕ್ಷಕನಾಗಿರಲಿ. ಆಕರ್ಷಕವಾದ ಕನ್ಯೆಯೊಡನೆ ನಮನ್ನು ಸೇರುವಂತೆ ಮಾಡಲಿ.

## English Translation.

May the goat-borne Pushan in all his paths be our protector : may he bestow maidens on us.

॥ ಸಂಹಿತಾಪಾಠಃ ॥

ಅಯಂ ಸೋಮಃ ಕಪರ್ದಿನೇ ಘೃತಂ ನ ಪವತೇ ಮಧು ।

ಆ ಭಕ್ಷತ್ಕನ್ಯಾಸು ನಃ ॥ ೧೧ ॥

॥ ಪದಪಾಠಃ ॥

ಅಯಂ । ಸೋಮಃ । ಕಪರ್ದಿನೇ । ಘೃತಂ । ನ । ಪವತೇ । ಮಧು ।

ಆ । ಭಕ್ಷತ್ । ಕನ್ಯಾಸು । ನಃ ॥ ೧೧ ॥

॥ ಸಾಯಣಭಾಷ್ಯಂ ॥

ಕಪರ್ದಿನೇ ಕಲ್ಯಾಣಮುಕುಟವತೇ ಸೋಮಾಯ ಪೂಷ್ಣೇ ವಾ ತದರ್ಥಮಯಂ ಮಾದಯಿತಾಭಿಷುತೋಽಸ್ಮದೀಯಃ ಸೋಮಃ ಪವತೇ ಚ । ಗಚ್ಛತಿ । ತಂ ಪ್ರಾಪ್ನೋತಿ । ತತ್ರ ದೃಷ್ಟಾಂತಃ । ಘೃತಂ ನ ಮಧು ಮಾದಕಂ ಹವೀರೂಪಂ ಘೃತಂ ಯಥಾ ಸೋಮಂ ಪೂಷಣಂ ವಾ ಗಚ್ಛತಿ ತದ್ವತ್ । ತತಃ ಸ ಕನ್ಯಾಸ್ವಸ್ಮಾನಾಗಮಯತ್ ॥

॥ ಪ್ರತಿಪದಾರ್ಥ ॥

**ಮಧು**—ಮಧುರವಾದ । **ಘೃತಂ ನ**—ಆಜ್ಯದಂತೆ । **ಅಯಂ ಸೋಮಃ**—ಈ ಸೋಮರಸವು **ಕಪರ್ದಿನೇ**—ಕಲ್ಯಾಣವಸ್ತ್ರವನ್ನುಳ್ಳ ಪೂಷನನ್ನುದ್ದೇಶಿಸಿ । **ಪವತೇ**—ಪ್ರವಹಿಸುತ್ತದೆ । (**ಸಃ**—ಅದೇ ಪೂಷನು । **ನಃ**—ನಮ್ಮನ್ನು । **ಕನ್ಯಾಸು**—ಆಕರ್ಷವಾದ ಕನ್ಯೆಯರೊಡನೆ । **ಆ ಭಕ್ಷತ್**—ಸೇರುವಂತೆಮಾಡಲಿ,

॥ ಭಾವಾರ್ಥ ॥

ಮಧುರವಾದ ಆಜ್ಯದಂತೆ ಈ ಸೋಮರಸವು ಕಲ್ಯಾಣವಸ್ತ್ರವನ್ನುಳ್ಳ ಪೂಷದೇವನನ್ನುದ್ದೇಶಿಸಿ ಪ್ರವಹಿಸುತ್ತದೆ· ಅದೇ ಪೂಷನು ನಮ್ಮನ್ನು ಆಕರ್ಷವಾದ ಕನ್ಯೆಯರೊಡನೆ ಸೇರುವಂತೆ ಮಾಡಲಿ.

## English Translation

This Soma flows to Pushan, who wears a beautiful tiara like exhilarating ghee : may he bestow maidens on us.

|| ಸಂಹಿತಾಪಾಠಃ ||

ಅಯಂ ತ ಆಘೃಣೇ ಸುತೋ ಘೃತಂ ನ ಪವತೇ ಶುಚಿ ।
ಆ ಭಕ್ಷತ್ಕನ್ಯಾಸು ನಃ ॥ ೧೨ ॥

|| ಪದಪಾಠಃ ||

ಅಯಂ । ತೇ । ಆಘೃಣೇ । ಸುತಃ । ಘೃತಂ । ನ । ಪವತೇ । ಶುಚಿ ।
ಆ । ಭಕ್ಷತ್ । ಕನ್ಯಾಸು । ನಃ ॥ ೧೨ ॥

|| ಸಾಯಣಭಾಷ್ಯಂ ||

ಹೇ ಆಘೃಣೇ ॥ ಘೃ ಕ್ಷರಣದೀಪ್ತ್ಯೋಃ ॥ ಸರ್ವತೋ ದೀಪ್ಯಮಾನ ಪವಮಾನ ಪೂಷನ್ ವಾ ತೇ ತ್ವದರ್ಥಂ ಸುತೋಽಭಿಷುತೋಽಯಂ ಸೋಮಃ ಪವತೇ । ತ್ವದಭಿಮುಖಮಾಗಚ್ಛತಿ । ಯದ್ವಾ । ತ್ವದರ್ಥಂ ಪಾತ್ರೇಷು ಪವಿತ್ರೇಣ ಪೂತೋ ಭವತಿ ಕ್ಷರತಿ ವಾ । ತತ್ರ ದೃಷ್ಟಾಂತಃ । ಘೃತಂ ನ ಶುಚಿ ಶುದ್ಧಂ ಘೃತಂ ಯಥಾ ತ್ವಾಂ ಪ್ರಾಪ್ನೋತಿ ತದ್ವತ್ । ತತಸ್ತ್ವಮಭಿಲಷಿತಾನ್ಯಸ್ಮಾಕಂ ದೇಹೀತಿ ॥

|| ಪ್ರತಿಪದಾರ್ಥ ||

**ಆಘೃಣೇ**—ಕಾಂತಿಯುತನಾದ ಎಲೈ ಪೂಷದೇವನೇ । **ತೇ**—ನಿನ್ನನ್ನುದ್ದೇಶಿಸಿ । **ಸುತಃ**—ಹಿಂಡಲ್ಪಟ್ಟ । **ಅಯಂ**—ಈ ಸೋಮವು । **ಶುಚಿ**—ಪರಿಶುದ್ಧವಾದ । **ಘೃತಂ ನ**—ಘೃತದಂತೆ । **ಪವತೇ**—ಹರಿಯುತ್ತದೆ । **ನಃ**—ನಮ್ಮನ್ನು । **ಕನ್ಯಾಸು**—ಕನ್ಯೆಯರೊಂದಿಗೆ । **ಆಭಕ್ಷತ್**—ಸೇರಿರುವಂತೆ ಮಾಡು.

|| ಭಾವಾರ್ಥ ||

ಕಾಂತಿಯುತನಾದ ಎಲೈ ಪೂಷದೇವನೇ, ನಿನ್ನನ್ನುದ್ದೇಶಿಸಿ ಹಿಂಡಲ್ಪಟ್ಟ ಈ ಸೋಮವು ಪರಿಶುದ್ಧವಾದ ಘೃತದಂತೆ ಹರಿಯುತ್ತದೆ. ನಮ್ಮನ್ನು ಕನ್ಯೆಯರೊಂದಿಗೆ ಸೇರಿರುವಂತೆ ಮಾಡು.

## English Translation.

This Soma poured forth for you, shining (Pushan) flows like pure ghee : may he bestow maidens on us.

|| ಸಂಹಿತಾಪಾಠಃ ||

ವಾಚೋ ಜಂತುಃ ಕವೀನಾಂ ಪವಸ್ವ ಸೋಮ ಧಾರಯಾ ।
ದೇವೇಷು ರತ್ನಧಾ ಅಸಿ ॥ ೧೩ ॥

|| ಪದಪಾಠಃ ||

ವಾಚಃ । ಜಂತುಃ । ಕವೀನಾಂ । ಪವಸ್ವ । ಸೋಮ । ಧಾರಯಾ ।

ದೇವೇಷು । ರತ್ನಽಧಾಃ । ಅಸಿ || ೧೩ ||

|| ಸಾಯಣಭಾಷ್ಯಂ ||

ಹೇ ಸೋಮ ಕವೀನಾಂ ಕ್ರಾಂತಪ್ರಜ್ಞಾನಾಂ ಸ್ತೋತೄಣಾಂ ವಾಚೋ ಜಂತುಃ ಸ್ತುತೇರ್ಜನಯಿತಾ । ಯದ್ವಾ । ಮೇಧಾವಿನಾಂ ಮಧ್ಯೇ ತ್ವಮೇವ ವಾಚಂ ಜನಯಸಿ । ಅತ್ಯಂತಂ ವಾಗ್ಮೀ । ತ್ವಂ ಧಾರಯಾ ಪವಸ್ವ । ದ್ರೋಣಕಲಶಂ ಗ್ರಹಾಂಶ್ಚ ಪರಿಪ್ರುಹಿ । ತತ ಇಂದ್ರಾದಿದೇವೇಷು ರತ್ನಧಾ ರಮಣಶೀಲಸ್ಯ ಸೋಮಸ್ಯ ನಿಧಾತಾಸಿ । ಭವಸಿ । ಅಥವಾ ದೇವೇಷು ಸ್ತೋತ್ರಕಾರಿಷು ಕರ್ಮ ಕುರ್ವಾಣೇಷು ವಾಸ್ಮಾಸು ರತ್ನಸ್ಯ ಕನಕಾದೇರ್ದಾತಾ ಭವಸಿ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಕವೀನಾಂ**—ಮೇಧಾವಿಗಳಿಗೆ । **ವಾಚಃ**—ಸ್ತುತಿವಾಕ್ಕನ್ನು **ಜಂತುಃ**—ಪ್ರೇರಿಸತಕ್ಕ ನೀನು । **ಧಾರಯಾ**—ಪ್ರವಾಹರೂಪದಿಂದ । **ಪವಸ್ವ**—ಪ್ರವಹಿಸು । **ದೇವೇಷು**—ದೇವತೆಗಳಲ್ಲಿ । **ರತ್ನಧಾಃ**—ಸಂಪತ್ಪ್ರದನಾಗಿ । **ಅಸಿ**—ಆಗಿದ್ದೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮೇಧಾವಿಗಳಿಗೆ ಸ್ತುತಿವಾಕ್ಕನ್ನು ಪ್ರೇರಿಸತಕ್ಕ ನೀನು ಪ್ರವಾಹರೂಪದಿಂದ ಪ್ರವಹಿಸು. ದೇವತೆಗಳಲ್ಲಿ ನೀನೇ ಸಂಪತ್ಪ್ರದನಾಗಿದ್ದೀಯೆ.

## English Translation.

Soma, generator of the praises of the wise, flow in a stream; you are the dispenser of treasure among the gods.

|| ಸಂಹಿತಾಪಾಠಃ ||

ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತೇ ।

ಅಭಿ ದ್ರೋಣಾ ಕನಿಕ್ರದತ್ || ೧೪ ||

|| ಪದಪಾಠಃ ||

ಆ ಕಲಶೇಷು । ಧಾವತಿ । ಶ್ಯೇನಃ । ವರ್ಮ । ವಿ । ಗಾಹತೇ ।

ಅಭಿ । ದ್ರೋಣಾ । ಕನಿಕ್ರದತ್ || ೧೪ ||

॥ ಸಾಯಣಭಾಷ್ಯಂ ॥

ಗ್ರಾವಸ್ತೋತ್ರೇ ಗಾಣಗಾರಿಮತೇನಾಭಿರೂಪಕೆರಣೇ ಕಲಶೇಷು ಸೋಮ ಆಸಿಚ್ಯಮಾನೇಽಸ್ಯ ತೃಚಸ್ಯಾ ಕಲಶೇಷ್ವಿತ್ಯಾದಿಕೇ ದ್ವಿತೀಯಾತೃತೀಯೇ । ಸೂತ್ರಿತಂ ಚ । ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತ ಇತಿ ದ್ವೇ । ಆ. ೫–೧೨ । ಇತಿ ॥

ಋತ್ವಿಗ್ಭಿರಭಿಷಿಚ್ಯಮಾನಃ ಕಕ್ಷಿತ್ಸೋಮಃ ಕಲಶೇಷು ಸೋಮಾಧಾರೇಷು ದ್ರೋಣಕಲಶೇಷ್ವಾ ಧಾವತಿ । ಸರ್ವತೋ ಗಚ್ಛತಿ । ಶ್ಯೇನಃ। ಲುಪ್ತೋಪಮಮೇತತ್ । ಯಥಾ ಶ್ಯೇನೋ ವರ್ಮ ವರಣೀಯಂ ಕುಲಾಯಂ ವಿ ಗಾಹತೇ ಪ್ರವಿಶತಿ ತದ್ವತ್ ಕನಿಕ್ರದತ್ಯಂತಂ ಶಬ್ದಂ ಕುರ್ವನ್ ದ್ರೋಣಾ ದ್ರೋಣಕಲ-ಶಾನಭಿ ಗಚ್ಛತಿ ಚ । ಯದ್ವಾ । ದ್ರೋಣಾಧವನೀಯಪೂತಭೃತ್ಸಂಜ್ಞಕಾಭಿಪ್ರಾಯಂ । ಏಕಃ ಸಿಚ್ಯಮಾನಃ ಸೋಮೋ ದ್ರೋಣಂ ಪ್ರತಿ ಶಬ್ದಾಯಮಾನಃ ಪಶ್ಚಾತ್ಪ್ರಥಮಂ ಗಚ್ಛತಿ । ತತಃ ಪಾತ್ರದ್ವಯಮಿತಿ ॥

॥ ಪ್ರತಿಪದಾರ್ಥ ॥

ಶ್ಯೇನಃ—ಶ್ಯೇನಪಕ್ಷಿಯು । ವರ್ಮ—ತನ್ನ ಗೂಡನ್ನು । ವಿ ಗಾಹತೇ—ಸೇರಿಕೊಳ್ಳುವಂತೆ । ಕಲಶೇಷು—ದ್ರೋಣಕಲಶಗಳಲ್ಲಿ । ಆ ಧಾವತಿ—ಸೋಮದೇವನು ಸೇರಿಕೊಳ್ಳುತ್ತಾನೆ । ಕನಿಕ್ರದತ್—ಶಬ್ದ ಮಾಡುತ್ತ । ದ್ರೋಣಾ—ದ್ರೋಣಕಲಶವನ್ನು । ಅಭಿ—ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಶ್ಯೇನಪಕ್ಷಿಯು ತನ್ನ ಗೂಡನ್ನು ಸೇರಿಕೊಳ್ಳುವಂತೆ ದ್ರೋಣಕಲಶಗಳಲ್ಲಿ ಸೋಮನು ಸೇರಿಕೊಳ್ಳುತ್ತಾನೆ. ಶಬ್ದಮಾಡುತ್ತ ದ್ರೋಣಕಲಶವನ್ನು ಪ್ರವೇಶಿಸುತ್ತಾನೆ.

## English Translation.

He hastens to the vessels as a falcon enters its nest and enters the wooden (vessels) with a cry.

ವಿಶೇಷವಿಷಯಗಳು

ಗಾಣಗಾರಿ ಎಂಬ ಆಚಾರ್ಯರ ಮತಾನುಸಾರವಾಗಿ—ಗ್ರಾವ ಎಂಬ ಸೋಮರಸವನ್ನು ಜಜ್ಜುವ ಕಲ್ಲುಗಳನ್ನು ಸ್ತೋತ್ರಮಾಡುವಾಗ ಪಠಿಸಬೇಕಾದ ಮೂರು ಋಕ್ಕುಗಳಲ್ಲಿ ಆ ಕಲಶೇಷು ಎಂಬ ಈ ಋಕ್ಕನ್ನೂ ಇದರ ಮುಂದಿನ ಪರಿಪ್ರಸೋಮ ಎಂಬ ಋಕ್ಕನ್ನೂ ತೃಚದ (ಮೂರು ಋಕ್ಕುಗಳು) ಎರಡು ಮತ್ತು ಮೂರನೆಯ ಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತೆ ಇತಿ ದ್ವೇ ಎಂಬ ಸೂತ್ರದಿಂದ (ಆ. ೫–೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪರಿ ಪ್ರ ಸೋಮ ತೇ ರಸೋಽಸರ್ಜಿ ಕಲಶೇ ಸುತಃ ।
ಶ್ಯೇನೋ ನ ತಕ್ತೋ ಅರ್ಷತಿ ॥ ೧೫ ॥

|| ಪದಪಾಠಃ ||

ಪರಿ | ಪ್ರ | ಸೋಮ | ತೇ | ರಸಃ | ಅಸರ್ಜಿ | ಕಲಶೇ | ಸುತಃ |

ಶ್ಯೇನಃ | ನ | ತಕ್ತಃ | ಅರ್ಷತಿ || ೧೫ ||

|| ಸಾಯಣಭಾಷ್ಯಂ ||

ಹೇ ಸೋಮ ಕಲಶೇಷು ದ್ರೋಣಾಭಿಧಾನೇಷು ಸುತೋಽಭಿಷುತಸ್ತೇ ತವ **ರಸಃ ಪರಿ ಪ್ರಾಸರ್ಜಿ** | ಪರಿತೋ ಗ್ರಹೇಷು ಚಮಸೇಷು ಚ ಪ್ರಸೃಷ್ಟೋ ವಿಭಕ್ತೋ ಭವತಿ | ಕಥಮಿವ | **ಶ್ಯೇನೋ ನ ತಕ್ತಃ** | ತಕಿರ್ಗತಿಕರ್ಮಾ | ಗಮನಶೀಲಃ ಶ್ಯೇನಃ ಪಕ್ಷೀ ಯಥಾ ಸರ್ವತ್ರಾರ್ಷತಿ ಗಚ್ಛತಿ ತದ್ವತ್ | ಯದ್ವಾ | ಯಥಾ ಶ್ಯೇನಃ ಸರ್ವತೋ ಗಂತಾ ತದ್ವತ್ತಕ್ತಃ ಪಾತ್ರೇಷು ಗತಃ ಸೋಮೋ**ಽರ್ಷತಿ** | ಇಂದ್ರಾದಿದೇವಾನಾಗಚ್ಛತ್ || ಅರ್ತೇರ್ಲೇಟಿ ಸಿಪಿ ವಾ ರೂಪಂ | ಪೂರ್ವಮೃಷೀ ಗತಾವಿತ್ಯಸ್ಮಾಲ್ಲಟಿ ಶಪಿ ರೂಪಂ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಕಲಶೇಷು**—ದ್ರೋಣಕಲಶಗಳಲ್ಲಿ | **ಸುತಃ**—ಹಿಂಡಲ್ಪಟ್ಟ | **ತೇ**—ನಿನ್ನ | **ರಸಃ**—ರಸವು | **ಪರಿ ಪ್ರ ಅಸರ್ಜಿ**—ಸುತ್ತಲೂ ಹರಡುತ್ತದೆ | **ತಕ್ತಃ**—ವೇಗಗಾಮಿಯಾದ | **ಶ್ಯೇನೋ ನ**—ಶ್ಯೇನಪಕ್ಷಿಯಂತೆ | **ಅರ್ಷತಿ**—ವೇಗವಾಗಿ ಹೋಗುತ್ತದೆ.

| ಭಾವಾರ್ಥ |

ಎಲೈ ಸೋಮದೇವನೇ, ದ್ರೋಣಕಲಶಗಳಲ್ಲಿ ಹಿಂಡಲ್ಪಟ್ಟ ನಿನ್ನ ರಸವು ಸುತ್ತಲೂ ಹರಡುತ್ತದೆ. ವೇಗಗಾಮಿಯಾದ ಶ್ಯೇನಪಕ್ಷಿಯಂತೆ ವೇಗವಾಗಿ ಹರಿಯುತ್ತದೆ.

## English Translation.

Your juice, Soma, spreads around when effused into the vessel as a swift falcon rushes along.

|| ಸಂಹಿತಾಪಾಠಃ ||

**ಪವಸ್ವ ಸೋಮ ಮಂದಯನ್ನಿಂದ್ರಾಯ ಮಧುಮತ್ತಮಃ || ೧೬ ||**

|| ಪದಪಾಠಃ ||

ಪವಸ್ವ | ಸೋಮ | ಮಂದಯನ್ | ಇಂದ್ರಾಯ | ಮಧುಮತ್ಽತಮಃ || ೧೬ ||

|| ಸಾಯಣಭಾಷ್ಯಂ ||

**ಹೇ ಸೋಮ ಮಧುಮತ್ತಮೋಽತಿಶಯೇನ ಮಧುರರಸವಾಂಸ್ತ್ವಂ ಮಂದಯನ್ ಮಾದಯಿತಾ ಭವನ್ | ಯದ್ವಾ | ಇಂದ್ರಾಯ || ಕ್ರಿಯಾಗ್ರಹಣಂ ಕರ್ತವ್ಯಮಿತಿ ಸಂಪ್ರದಾನಂ || ಇಂದ್ರಂ ಮೋದಮಾನಃ ಸನ್ ಪವಸ್ವ | ಇಂದ್ರಾರ್ಥಮಾಗಚ್ಛ ||**

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಮಧುಮತ್ತಮಃ**— ಮಧುರವಾದ ರಸವುಳ್ಳ ನೀನು | **ಮಂದಯನ್**— ಹರ್ಷವನ್ನುಂಟುಮಾಡುತ್ತ | **ಇಂದ್ರಾಯ** — ಇಂದ್ರನನ್ನುದ್ದೇಶಿಸಿ | **ಪವಸ್ವ**— ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಮಧುರವಾದ ರಸವುಳ್ಳ ನೀನು ಹರ್ಷವನ್ನುಂಟುಮಾಡುತ್ತ ಇಂದ್ರನನ್ನುದ್ದೇಶಿಸಿ ಪ್ರವಹಿಸು.

## English Translation.

Flow, Soma, you are most sweet-flavoured, giving exhilaration to Indra.

|| ಸಂಹಿತಾಪಾಠಃ ||

ಅಸೃಗ್ರನ್ ದೇವವೀತಯೇ ವಾಜಯಂತೋ ರಥಾಇವ || ೧೭ ||

|| ಪದಪಾಠಃ ||

ಅಸೃಗ್ರನ್ | ದೇವಽವೀತಯೇ | ವಾಜಽಯಂತಃ | ರಥಾಃಽಇವ || ೧೭ ||

|| ಸಾಯಣಭಾಷ್ಯಂ ||

**ಏತೇಽಭಿಷುತಾಃ ಸೋಮಾ ವಾಜಯಂತಃ ಸಂತೋ ದೇವವೀತಯೇ ದೇವಯಜನಾಯಾಸೃಗ್ರನ್ | ವಿಸೃಜ್ಯಂತೇ | ಋತ್ವಿಗ್ಭಿಃ ಪ್ರದೀಯಂತೇ | ತತ್ರ ದೃಷ್ಟಾಂತಃ | ರಥಾ ಇವ ವಾಜಯಂತಃ ಶತ್ರುಧನಾನಿ ಬಲಾನಿ ವಾ ಸ್ವಾಮಿನ ಇಚ್ಛಂತೋ ರಥಾ ದೇವವೀತಯೇ ದೇವಾನಾಂ ಗಮನಾಯ ಯಥಾ ವಿಸೃಜ್ಯಂತೇ ತದ್ವತ್ ||**

|| ಪ್ರತಿಪದಾರ್ಥ ||

**ವಾಜಯಂತಃ**—ಶತ್ರುಧನವನ್ನು ತರಲಿಚ್ಛಿಸುವ | **ರಥಾ ಇವ** —ರಥಗಳಂತೆ | (**ಸೋಮಾಃ**—ಸೋಮರಸಗಳು) **ದೇವವೀತಯೇ** —ದೇವತೆಗಳ ತೃಪ್ತ್ಯರ್ಥವಾಗಿ | **ಅಸೃಗ್ರನ್**—ಅರ್ಪಿತವಾಗುತ್ತವೆ.

| ಭಾವಾರ್ಥ ||

ಶತ್ರುಧನವನ್ನು ತರಲಿಚ್ಛಿಸುವ ರಥಗಳಂತೆ ಸೋಮರಸಗಳು ದೇವವತೆಗಳ ತೃಪ್ತ್ಯರ್ಥವಾಗಿ ಅರ್ಪಿತವಾಗುತ್ತವೆ.

## English Translation.

(The Soma-juices) are let loose for the banquet of the gods like **chariots** desiring the wealth (of the enemy).

॥ ಸಂಹಿತಾಪಾಠಃ ॥

**ತೇ ಸುತಾಸೋ ಮದಿಂತಮಾಃ ಶುಕ್ರಾ ವಾಯುಮಸೃಕ್ಷತ ॥ ೧೮ ॥**

॥ ಪದಪಾಠಃ ॥

ತೇ । ಸುತಾಸಃ । ಮದಿನ್ಽತಮಾಃ । ಶುಕ್ರಾಃ । ವಾಯುಂ । ಅಸೃಕ್ಷತ ॥ ೧೮ ॥

॥ ಸಾಯಣಭಾಷ್ಯಂ ॥

ಮದಿಂತಮಾ ಅತಿಶಯೇನ ಮಾದಯಿತಾರಃ ಶುಕ್ರಾ ದೀಪ್ಯಮಾನಾಃ ಸುತಾ **ಅಭಿಷುತಾಸ್ತೇ ಸೋಮಾ** ವಾಯುಂ ಶಬ್ದಮಸೃಕ್ಷತ । ಅಸೃಜನ್ । ಅಕಾರ್ಷುಃ । ಯದ್ವಾ । ವಾಯುಮೇವ **ಸೋಮ-ಪಾನಾರ್ಥಮಸೃಜನ್** । ಸೋಮೇಷು ಸುತೇಷು ಸತ್ಸು ವಾಯುಸ್ತತ್ಪಾನಾರ್ಥಮಾಗಚ್ಛತಿ ॥

॥ ಪ್ರತಿಪದಾರ್ಥ ॥

**ಮದಿಂತಮಾಃ**—ಅತಿಶಯವಾಗಿ ಹರ್ಷವನ್ನುಂಟುಮಾಡತಕ್ಕವೂ । **ಶುಕ್ರಾಃ**—ಪ್ರಭಾಯುತವಾದವೂ ಆದ । **ತೇ**—ಸೋಮರಸಗಳು । **ವಾಯುಂ**—ವಾಯುವನ್ನುದ್ದೇಶಿಸಿ । **ಅಸೃಕ್ಷತ**—ಅರ್ಪಿತವಾಗುತ್ತವೆ.

॥ ಭಾವಾರ್ಥ ॥

ಅತಿಶಯವಾಗಿ ಹರ್ಷವನ್ನುಂಟುಮಾಡತಕ್ಕವೂ, ಪ್ರಭಾಯುತವಾದವೂ ಆದ ಸೋಮರಸಗಳು ವಾಯುವನ್ನುದ್ದೇಶಿಸಿ ಅರ್ಪಿತವಾಗುತ್ತವೆ.

## English Translation

These effused (Soma-juices), brilliant and extremely exhilarating, are let forth for Vayu.

॥ ಸಂಹಿತಾಪಾಠಃ ॥

**ಗ್ರಾವ್ಣಾ ತುನ್ನೋ ಅಭಿಷ್ಟುತಃ ಪವಿತ್ರಂ ಸೋಮ ಗಚ್ಛಸಿ ।**

**ದಧತ್ಸ್ತೋತ್ರೇ ಸುವೀರ್ಯಂ ॥ ೧೯ ॥**

॥ ಪದಪಾಠಃ ॥

ಗ್ರಾವ್ಣಾ । ತುನ್ನಃ । ಅಭಿಽಸ್ತುತಃ । ಪವಿತ್ರಂ । ಸೋಮ । ಗಚ್ಛಸಿ ।

ದಧತ್ । ಸ್ತೋತ್ರೇ । ಸುಽವೀರ್ಯಂ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ಗ್ರಾವ್ಣಾ ತುನ್ನೋಽಭಿಷೀಡಿತೋಽಭಿಷುತಸ್ತ್ವಂ ಸ್ತೋತೃಭಿರಭಿಷ್ಟುತಃ ಸನ್ ಪವಿತ್ರಂ ಗಚ್ಛಸಿ । ಪ್ರಾಪ್ನೋಷಿ । ಕಿಂ ಕುರ್ವನ್ । ಸ್ತೋತ್ರೇ ಸ್ತೋತ್ರಕಾರಿಣೇ ಜನಾಯ ಸುವೀರ್ಯಂ ಶೋಭನವೀರ್ಯೋಪೇತಂ ಧನಾದಿಕಂ ದಧದ್ವಿದಧತ್ ಪ್ರಯಚ್ಛನ್ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಗ್ರಾವ್ಣಾ—ಹಿಂಡುವ ಕಲ್ಲುಗಳಿಂದ । ತುನ್ನಃ—ಹಿಂಡಲ್ಪಟ್ಟ ನೀನು । ಅಭಿಷ್ಟುತಃ—ಪ್ರಶಂಸಿತನಾಗಿ । ಸ್ತೋತ್ರೇ—ಸ್ತುತಿಕರ್ತನಿಗೆ । ಸುವೀರ್ಯಂ—ವೀರಪುತ್ರಾದಿಗಳಿಂದ ಕೂಡಿದ ಧನವನ್ನು । ದಧತ್—ಕೊಡುತ್ತ । ಪವಿತ್ರಂ—ದಶಾಪವಿತ್ರಕ್ಕೆ । ಗಚ್ಛಸಿ—ಪ್ರವೇಶಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟ ನೀನು ಪ್ರಶಂಸಿತನಾಗಿ ಸ್ತುತಿಕರ್ತನಿಗೆ ವೀರಪುತ್ರಾದಿಗಳಿಂದ ಕೂಡಿನ ಧನವನ್ನು ಕೊಡುತ್ತ ದಶಾಪವಿತ್ರಕ್ಕೆ ಪ್ರವೇಶಿಸುತ್ತೀಯೆ.

## English Translation.

Bruised with the stones and effused (by the worshippers) you, Soma, enter the filter, bestowing upon your praiser (wealth), accompanied with excellent male offspring.

॥ ಸಂಹಿತಾಪಾಠಃ ॥

ಏಷ ತುನ್ನೋ ಅಭಿಷ್ಟುತಃ ಪವಿತ್ರಮತಿ ಗಾಹತೇ ।

ರಕ್ಷೋಹಾ ವಾರಮವ್ಯಯಂ ॥ ೨೦ ॥

॥ ಪದಪಾಠಃ ॥

ಏಷಃ । ತುನ್ನಃ । ಅಭಿಽಸ್ತುತಃ । ಪವಿತ್ರಂ । ಅತಿ । ಗಾಹತೇ ।

ರಕ್ಷಃಽಹಾ । ವಾರಂ । ಅವ್ಯಯಂ ॥ ೨೦ ॥

|| ಸಾಯಣಭಾಷ್ಯಂ ||

ತುನ್ನಃ || ತುದ ವ್ಯಥನೇ || ಗ್ರಾವಭಿರಭಿವ್ಯಥಿತಃ ಸುತಃ ಅತ ಏವ ಸರ್ವೈರಭಿಷ್ಟುತ ಏಷೋಽಸ್ಮದೀಯಃ ಸೋಮೋ ರಕ್ಷೋಹಾ ಕರ್ಮವಿಘ್ನಕಾರಿಣಾಂ ರಾಕ್ಷಸಾನಾಂ ಪಾಪಾನಾಂ ವಾ ಹಂತಾಭವತ್ | ಅವ್ಯಯಮವಿಮಯಮವ್ಯವಯವಭೂತಂ ವಾರಂ ವಾಲಂ ತೇನ ಕೃತಂ ಪವಿತ್ರಂ ದಶಾಪವಿತ್ರಮತ್ಯತಿಕ್ರಮ್ಯ ಗಾಹತೇ | ದ್ರೋಣಕಲಶಂ ಪ್ರವಿಶತಿ ||

|| ಪ್ರತಿಪದಾರ್ಥ ||

ತುನ್ನಃ—ಹಿಂಡಲ್ಪಟ್ಟವನೂ | ಅಭಿಷ್ಟುತಃ—ಪ್ರಶಂಸಿತನಾದವನೂ ಆದ | ಏಷಃ— ಈ ಸೋಮದೇವನು | ರಕ್ಷೋಹಾ—ರಾಕ್ಷಸರಿಗೆ ನಾಶಕನಾಗಿ | ಅವ್ಯಯಾ—ಉಣ್ಣೆಯ | ವಾರಂ—ನಾರುಗಳುಳ್ಳ | ಪವಿತ್ರಂ—ದಶಾಪವಿತ್ರವನ್ನು | ಅತಿ—ದಾಟಿ | ಗಾಹತೇ—ದ್ರೋಣಕಲಶವನ್ನು ಪ್ರವೇಶಿಸುತ್ತಾನೆ.

|| ಭಾವಾರ್ಥ ||

ಹಿಂಡಲ್ಪಟ್ಟವನೂ, ಪ್ರಶಂಸಿತನೂ ಆದ ಸೋಮದೇವನು ರಾಕ್ಷಸರಿಗೆಲ್ಲ ನಾಶಕನಾಗಿ ಉಣ್ಣೆಯ ನಾರುಗಳುಳ್ಳ ದಶಾಪವಿತ್ರವನ್ನು ದಾಟಿ ದ್ರೋಣಕಲಶವನ್ನು ಪ್ರವೇಶಿಸುತ್ತಾನೆ.

English Translation

The (Soma). bruised (with stones), and praised by (all), the slayer of Rakshasas, plunges through the woollen filter (into the vessel).

|| ಸಂಹಿತಾಪಾಠಃ ||

ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ |
ಪವಮಾನ ವಿ ತಜ್ಜಹಿ || ೨೧ ||

|| ಪದಪಾಠಃ ||

ಯತ್ | ಅಂತಿ | ಯತ್ | ಚ | ದೂರಕೇ | ಭಯಂ | ವಿಂದತಿ | ಮಾಂ | ಇಹ |
ಪವಮಾನ | ವಿ | ತತ್ | ಜಹಿ || ೨೧ ||

|| ಸಾಯಣಭಾಷ್ಯಂ ||

ಹೇ ಪವಮಾನ ಪೂಯಮಾನ ಪುನಾನ ವಾ ಸೋಮ ಯದ್ಭಯಮಂತ್ಯಂತಿಕೇ ತಥಾ ಯಚ್ಚ ಭಯಂ ದೂರಕೇಽತಿದೂರೇ ದೇಶೇಽಭವೇಹಾಸ್ಮಿನ್ ಪ್ರದೇಶೇಽಪಿ ಭಯಂ ಮಾಂ ವಿಂದತಿ ಲಭತೇ ಪ್ರಾಪ್ನೋತಿ ತದ್ಭಯಂ ತ್ವಂ ವಿ ಜಹಿ | ವಿಶೇಷೇಣ ನಾಶಯ | ಯದ್ವಾ | ಇಹೇತಿ ಯಜ್ಞೋಽಯಂ

ಲೋಕೋ ವಾ । ಅಸ್ಮಿನ್ ಕ್ರಿಯಮಾಣೇ ಯಜ್ಞೇಽಸ್ಮಿಲ್ಲೋಕೇ ವಾ ಯದ್ಭಯಂ ವ್ಯಾಪ್ನೋತಿ ತನ್ನಾಶಯೇತ್ಯರ್ಥಃ ॥

। ಪ್ರತಿಪದಾರ್ಥ ॥

ಪವಮಾನ—ಎಲೈ ಸೋಮದೇವನೇ । ಯತ್ ಭಯಂ—ಯಾವ ಭೀತಿಯು । ಅಂತಿ—ಸಮೀಪದಲ್ಲಿಯೂ । ಯಚ್ಚ—ಯಾವುದು । ದೂರಕೇ—ದೂರದಲ್ಲಿಯೂ (ಅಥವಾ) । ಇಹ—ಈ ಪ್ರದೇಶದಲ್ಲಿಯೂ । ಮಾಂ—ನನ್ನನ್ನು । ವಿಂದತಿ—ಸಮಾಪಿಸುವುದೋ । ತತ್—ಅದೆಲ್ಲವನ್ನೂ । ವಿ ಜಹಿ—ನಾಶಪಡಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವ ಭೀತಿಯು ನನ್ನನ್ನು ಸಮೀಪದಿಂದಲೂ, ದೂರಪ್ರದೇಶದಿಂದಲೂ ಅಥವಾ ಈ ಪ್ರದೇಶದಿಂದಲೂ ಬಂದು ಕಾಡಿಸುವುದೋ ಆ ಭೀತಿಯನ್ನೆಲ್ಲಾ ಪೂರ್ಣವಾಗಿ ನಾಶಪಡಿಸು.

English Translation.

Whatever fear seizes me, near, afar off, or here, purified (Soma), dispel that (fear).

॥ ಸಂಹಿತಾಪಾಠಃ ॥

ಪವಮಾನಃ ಸೋ ಅದ್ಯ ನಃ ಪವಿತ್ರೇಣ ವಿಚರ್ಷಣಿಃ ।
ಯಃ ಪೋತಾ ಸ ಪುನಾತು ನಃ ॥ ೨೨ ॥

॥ ಪದಪಾಠಃ ॥

ಪವಮಾನಃ । ಸಃ । ಅದ್ಯ । ನಃ । ಪವಿತ್ರೇಣ । ವಿಽಚರ್ಷಣಿಃ ।
ಯಃ । ಪೋತಾ । ಸಃ । ಪುನಾತು । ನಃ ॥ ೨೨ ॥

॥ ಸಾಯಣಭಾಷ್ಯಂ ॥

ಸ ತಾದೃಶಃ ಪ್ರಸಿದ್ಧೋ ವಿಚರ್ಷಣಿಃ ಸರ್ವಸ್ಯ ದ್ರಷ್ಟಾ ಪವಮಾನೋಽದ್ಯೇದಾನೀಮೇವ ಪವಿತ್ರೇಣ ಪಾಪಶೋಧಕೇನ ತೇಜಸಾ ನೋಽಸ್ಮಾನ್ಪುನಾತು । ಪಾಪರಹಿತಾನ್ ಕರೋತು ॥

॥ ಪ್ರತಿಪದಾರ್ಥ ॥

ಸಃ—ಪ್ರಸಿದ್ಧನೂ । ವಿಚರ್ಷಣಿಃ—ಉತ್ತಮವಾದ ದೃಷ್ಟಿಯುಳ್ಳವನೂ । ಪವಮಾನಃ—ಶುದ್ಧಿಕಾರಕನೂ ಆದ ಸೋಮನು । ಅದ್ಯ—ಇಂದು । ಪವಿತ್ರೇಣ—ಶುದ್ಧಿಕಾರಕವಾದ ತನ್ನ ತೇಜಸ್ಸಿನಿಂದ । ನಃ—ನಮ್ಮನ್ನು । ಪುನಾತು—ಶುದ್ಧಿಗೊಳಿಸಲಿ.

॥ ಭಾವಾರ್ಥ ॥

ಪ್ರಸಿದ್ಧನೂ, ಉತ್ತಮವಾದ ದೃಷ್ಟಿಯುಳ್ಳವನೂ, ಶುದ್ಧಿಕಾರಕನೂ ಆದ ಸೋಮನು ಇಂದು ತನ್ನ ಶುದ್ಧಿಕಾರಕವಾದ ತೇಜಸ್ಸಿನಿಂದ ನಮ್ಮನ್ನು ಶುದ್ಧಿಗೊಳಿಸಲಿ.

## English Translation.

May that purified Soma, the beholder of all, who is the purifier, **purify** us now by his purifying (might).

॥ ಸಂಹಿತಾಪಾಠಃ ॥

ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ ।
ಬ್ರಹ್ಮ ತೇನ ಪುನೀಹಿ ನಃ ॥ ೨೩ ॥

॥ ಪದಪಾಠಃ ॥

ಯತ್ । ತೇ । ಪವಿತ್ರಂ । ಅರ್ಚಿಷಿ । ಅಗ್ನೇ । ವಿऽತತಂ । ಅಂತಃ । ಆ ।
ಬ್ರಹ್ಮ । ತೇನ । ಪುನೀಹಿ । ನಃ ॥ ೨೩ ॥

॥ ಸಾಯಣಭಾಷ್ಯಂ ॥

ಪವಿತ್ರೇಷ್ಟ್ಯಾಂ ಪ್ರಥಮಾಜ್ಯಭಾಗಸ್ಯ ಯಾಜ್ಯಾ ಯತ್ತೇ ಪವಿತ್ರಮಿತ್ಯೇಷಾ । ಸೂತ್ರಿತಂ ಚ । ಯತ್ತೇ ಪವಿತ್ರಮರ್ಚಿಷ್ಯಾ ಕಲಶೇಷು ಧಾವತೀತಿ ಪವಿತ್ರ ಇತ್ಯೇತೇ । ಆ- ೨-೧೨ । ಇತಿ ॥

ಹೇ ಪವಮಾನಗುಣವಿಶಿಷ್ಟಾಗ್ನೇ ತೇ ತ್ವದೀಯಂ ಪವಿತ್ರಂ ಶೋಧಕಂ ಯತ್ತ್ವತ್ತೇಜೋಽರ್ಚಿಷಿ ಸೌರವೈದ್ಯುತಾದಿತೇಜಸ್ಯಂತರ್ಮಧ್ಯ ಆ ವಿತತಮಾವಿಸ್ತೃತಂ ವಿದ್ಯತೇ । ಯದ್ವಾ । ಹೇ ಅಗ್ನೇ ತೇ ತವ ಸ್ವಭೂತೇಽರ್ಚಿಷಿ ತೇಜಸ್ಯಂತರ್ಮಧ್ಯೇ ಯತ್ಪವಿತ್ರಂ ಶುದ್ಧ್ಯುತ್ಪಾದಕಂ ಸಾಮರ್ಥ್ಯಮಸ್ತಿ । ತೇನ ತಾದೃಶೇನ ತೇಜಸಾ ಬ್ರಹ್ಮ ಪುತ್ರಾದಿವರ್ಧನಕಾರಿ ನಃ ಶರೀರಂ ಪುನೀಹಿ । ಪಾಪರಹಿತಂ ಪೂತಂ ಕುರು ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಪವಿತ್ರಂ**—ಶುದ್ಧಿಕಾರಕವಾದ । **ಯತ್**—ಯಾವ ತೇಜಸ್ಸು । **ಅರ್ಚಿಷಿ ಅಂತಃ**—ಸೂರ್ಯಾದಿಗಳ ಜ್ಯೋತಿಗಳ ನಡುವೆ । **ಆ ವಿತತಂ**—ವಿಸ್ತೃತವಾಗಿ ಹರಡಿರುವುದೋ । **ತೇನ**—ಆ ತೇಜಸ್ಸಿನಿಂದ । **ಬ್ರಹ್ಮ**—ಪುತ್ರಾದಿಸಂತತಿವೃದ್ಧಿಕಾರವಾದ । **ನಃ**—ನಮ್ಮ ಶರೀರಗಳನ್ನು । **ಪುನೀಹಿ**—ಶುದ್ಧಿಗೊಳಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ಶುದ್ಧಿಕಾರಕವಾದ ಯಾವ ತೇಜಸ್ಸು ಸೂರ್ಯಾದಿ ಜ್ಯೋತಿಗಳ ನಡುವೆ **ವಿಸ್ತೃತ**ವಾಗಿ ಹಡಿರುವುದೋ ಆ ತೇಜಸ್ಸಿನಿಂದ ಪುತ್ರಾದಿಸಂತತಿವೃದ್ಧಿಕಾರಕವಾದ ನಮ್ಮ ಶರೀರಗಳನ್ನು ಶುದ್ಧಿಗೊಳಿಸು.

## English Translation.

Purify, Agni, our divine (body) with your purifying (light), which is diffused in the midst of the light.

ವಿಶೇಷ ವಿಷಯಗಳು

ಪವಿತ್ರೇಷ್ಟಿಯಲ್ಲಿ ಮೊದಲನೆಯ ಆಜ್ಯಭಾಗವನ್ನು ಹೋಮಮಾಡುವಾಗ **ಯತ್ತೇ ಪವಿತ್ರಂ** ಎಂಬ **ಈ** ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯತ್ತೇ ಪವಿತ್ರಮರ್ಚಿಷ್ಯಾ ಕಲಶೇಷು ಧಾವತೀತಿ ಪವಿತ್ರ ಇತ್ಯೇತೇ** ಎಂಬ ಸೂತ್ರದಿಂದ (ಆ. ೨–೧೨) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಯತ್ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ ।

ಬ್ರಹ್ಮಸವೈಃ ಪುನೀಹಿ ನಃ || ೨೪ ||

|| ಪದಪಾಠಃ ||

ಯತ್ । ತೇ । ಪವಿತ್ರಂ । ಅರ್ಚಿಽವತ್ । ಅಗ್ನೇ । ತೇನ । ಪುನೀಹಿ । ನಃ ।

ಬ್ರಹ್ಮಽಸವೈಃ । ಪುನೀಹಿ । ನಃ || ೨೪ ||

|| ಸಾಯಣಭಾಷ್ಯಂ ||

**ಹೇ ಅಗ್ನೇ ಪವಿತ್ರಂ ಶೋಧಕಮರ್ಚಿವದರ್ಚಿರ್ವತ್ || ಛಂದಸೀರ ಇತಿ ಮತುಪೋ ವತ್ವಂ || ಸೌರಾದಿತೇಜೋಯುಕ್ತಂ ತೇ ತ್ವದೀಯಂ ಯತ್ತೇಜೋ ವಿದ್ಯತೇ ತೇನ ಸ್ವೀಯೇನೈವ ತೇಜಸಾ ನೋಽಸ್ಮಾನ್ ಪುನೀಹಿ । ಪೂತಾನ್ ಕುರು । ಕಿಂಚ ಬ್ರಹ್ಮಸವೈರ್ಬ್ರಾಹ್ಮಣಕರ್ತೃಕಸೋಮಾಭಿಷವೈಃ । ಯದ್ವಾ । ಬ್ರಹ್ಮ ಸೋಮಃ । ತಸ್ಯಾಭಿಷವೈಃ । ನೋಽಸ್ಮಾನ್ಪುನೀಹಿ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಪವಿತ್ರಂ**—ಶುದ್ಧಿಕಾರಕವಾದುದೂ ಆದ । **ಅರ್ಚಿವತ್**—ತೇಜೋಯುತವಾದುದೂ ಆದ । **ತೇ**—ನಿನ್ನ । **ಯತ್**—ಯಾವ ಜ್ಯೋತಿಯಿದೆಯೋ । **ತೇನ**—ಅದರಿಂದ । **ನಃ**—

ನಮ್ಮನ್ನು । ಪುನೀಹಿ – ಶುದ್ಧಿಗೊಳಿಸು । ಬ್ರಹ್ಮಸವೈಃ— ಸೋಮಾಭಿಷವಗಳಿಂದ । ನಃ—ನಮ್ಮನ್ನು । ಪುನೀಹಿ—ಶುದ್ಧಿಗೊಳಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಶುದ್ಧಿಕಾರಕವಾದುದೂ, ತೇಜೋಯುತವಾದುದೂ ಆದ ನಿನ್ನ ಯಾವ ಜ್ಯೋತಿಯಿದೆಯೋ ಅದರಿಂದ ನಮ್ಮನ್ನು ಶುದ್ಧಿಗೊಳಿಸು. ಸೋಮಾಭಿಷವಗಳಿಂದ ಶುದ್ಧಿಗೊಳಿಸು.

English Translation

Purify us, Agni, with your purifying (light) which possesses the light; purify us with the effusions of the Soma.

॥ ಸಂಹಿತಾಪಾಠಃ ॥

ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ ।
ಮಾಂ ಪುನೀಹಿ ವಿಶ್ವತಃ ॥ ೨೫ ॥

॥ ಪದಪಾಠಃ ॥

ಉಭಾಭ್ಯಾಂ । ದೇವ । ಸವಿತರಿತಿ । ಪವಿತ್ರೇಣ । ಸವೇನ । ಚ ।
ಮಾಂ । ಪುನೀಹಿ । ವಿಶ್ವತಃ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಸವಿತಃ ಸರ್ವಸ್ಯ ಪ್ರೇರಕ ಹೇ ದೇವ ದ್ಯೋತಮಾನ ಸೋಮ ತ್ವಂ ಪವಿತ್ರೇಣ ಪಾಪಶೋಧಕೇನ ತ್ವದೀಯೇನ ತೇಜಸಾ ಸವೇನ ಸೋಮಾಭಿಷವೇಣ ಚ ಏತಾಭ್ಯಾಮುಭಾಭ್ಯಾಂ ವಿಶ್ವತಃ ಸರ್ವತೋ ಮಾಂ ಪುನೀಹಿ । ಪೂತಂ ಕುರು ॥

॥ ಪ್ರತಿಪದಾರ್ಥ ॥

ಸವಿತಃ—ಸರ್ವಪ್ರೇರಕನೂ । ದೇವ—ದೇವತಾತ್ಮನೂ ಆದ ಎಲೈ ಸೋಮದೇವನೇ । ಪವಿತ್ರೇಣ—ಶುದ್ಧಿಕಾರಕವಾದ ನಿನ್ನ ತೇಜಸ್ಸಿನಿಂದಲೂ । ಸವೇನ ಚ—ಸೋಮಾಭಿಷವದಿಂದಲೂ । ಉಭಾಭ್ಯಾಂ—ಈ ಎರಡು ಕರ್ಮಗಳಿಂದಲೂ । ವಿಶ್ವತಃ—ಎಲ್ಲಾ ಕಡೆಯೂ । ಮಾಂ—ನನ್ನನ್ನು । ಪುನೀಹಿ— ಶುದ್ಧಿಗೊಳಿಸು.

॥ ಭಾವಾರ್ಥ ॥

ಸರ್ವಪ್ರೇರಕನೂ, ದೇವತಾತ್ಮನೂ ಆದ ಎಲೈ ಸೋಮದೇವನೇ, ಶುದ್ಧಿಕಾರಕವಾದ ನಿನ್ನ ತೇಜಸ್ಸಿನಿಂದಲೂ ಸೋಮಾಭಿಷವದಿಂದಲೂ ಈ ಎರಡು ಕರ್ಮಗಳಿಂದಲೂ ಎಲ್ಲಾ ಕಡೆಯೂ ನನ್ನನ್ನು ಶುದ್ಧಿಗೊಳಿಸು.

## English Translation

Shining (Soma), urger of all things, purify me by both, by your purifying (light) and by the effusion (of the Soma); purify me in every way.

॥ ಸಂಹಿತಾಪಾಠಃ ॥

ತ್ರಿಭಿಷ್ಟ್ವಂ ದೇವ ಸವಿತರ್ವರ್ಷಿಷ್ಠೈಃ ಸೋಮ ಧಾಮಭಿಃ ।
ಅಗ್ನೇ ದಕ್ಷೈಃ ಪುನೀಹಿ ನಃ ॥ ೨೬ ॥

॥ ಪದಪಾಠಃ ॥

ತ್ರಿऽಭಿಃ । ತ್ವಂ । ದೇವ । ಸವಿತಃ । ವರ್ಷಿಷ್ಠೈಃ । ಸೋಮ । ಧಾಮऽಭಿಃ ।
ಅಗ್ನೇ । ದಕ್ಷೈಃ । ಪುನೀಹಿ । ನಃ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ದೇವ ಸ್ತುತ್ಯ ದೀಪ್ಯಮಾನ ವಾ ಹೇ ಸವಿತಃ ಸರ್ವಸ್ಯ ಸ್ವಸ್ವಕರ್ಮಣಿ ಚೋದಯಿತರ್ಹೇ ಸೋಮ ಪವಮಾನಗುಣವಿಶಿಷ್ಟ ಹೇ ಅಗ್ನೇ ತ್ವಂ ವರ್ಷಿಷ್ಠೈರ್ವೃದ್ಧತಮೈಃ ಅತ ಏವ ದಕ್ಷೈಃ ಸಾಮರ್ಥ್ಯವದ್ಭಿಸ್ತ್ರಿಭಿರ್ಧಾಮಭಿಃ ಶರೀರೈರಗ್ನಿವಾಯುಸೂರ್ಯಾತ್ಮಕೈಸ್ತ್ರಿಭಿಃ ಶರೀರೈರ್ನೋऽಸ್ಮಾನ್ ಪುನೀಹಿ । ಪರಿಶುದ್ಧಾನ್ ಕುರು ॥

॥ ಪ್ರತಿಪದಾರ್ಥ ॥

ದೇವ—ದೇವತಾತ್ಮನೂ। ಸವಿತಃ ಸರ್ವಪ್ರೇರಕನೂ । ಸೋಮ—ಶುದ್ಧಿಕಾರಕನೂ ಆದ। ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ವರ್ಷಿಷ್ಠೈಃ—ಅತ್ಯಂತ ಪೂಜ್ಯವಾದವೂ । ದಕ್ಷೈಃ—ಸಮರ್ಥವಾದವೂ ಆದ । ತ್ರಿಭಿಃ ಧಾಮಭಿಃ—ಅಗ್ನಿವಾಯುಸೂರ್ಯಾತ್ಮಕಗಳಾದ ನಿನ್ನ ಮೂರುವಿಧವಾದ ಶರೀರಗಳಿಂದಲೂ । ನಃ—ನಮ್ಮನ್ನು । ಪುನೀಹಿ—ಶುದ್ಧಿಗೊಳಿಸು.

॥ ಭಾವಾರ್ಥ ॥

ದೇವತಾತ್ಮನೂ, ಸರ್ವಪ್ರೇರಕನೂ, ಶುದ್ಧಿಕಾರಕನೂ ಆದ ಎಲೈ ಅಗ್ನಿಯೇ, ನೀನು ಅತ್ಯಂತ ಪೂಜ್ಯವಾದವೂ, ಸಮರ್ಥವಾದವೂ ಆದ ನಿನ್ನ ಅಗ್ನಿ, ವಾಯು, ಸೂರ್ಯ ಎಂಬ ಮೂರು ವಿಧವಾದ ಶರೀರಗಳಿಂದಲೂ ನಮ್ಮನ್ನು ಶುದ್ಧಿಗೊಳಿಸು.

## English Translation.

Purify us, shining Agni Pavamana, urger of all things, with your three most mighty powerful forms.

|| ಸಂಹಿತಾಪಾಠಃ ||

ಪುನಂತು ಮಾಂ ದೇವಜನಾಃ ಪುನಂತು ವಸವೋ ಧಿಯಾ |
ವಿಶ್ವೇ ದೇವಾಃ ಪುನೀತ ಮಾ ಜಾತವೇದಃ ಪುನೀಹಿ ಮಾ || ೨೭ ||

|| ಪದಪಾಠಃ ||

ಪುನಂತು | ಮಾಂ | ದೇವಽಜನಾಃ | ಪುನಂತು | ವಸವಃ | ಧಿಯಾ |
ವಿಶ್ವೇ | ದೇವಾಃ | ಪುನೀತ | ಮಾ | ಜಾತಽವೇದಃ | ಪುನೀಹಿ | ಮಾ || ೨೭ ||

|| ಸಾಯಣಭಾಷ್ಯಂ ||

ದೇವಜನಾಃ | ದೇವಾನಾಂ ಜನೋ ಪ್ರಾದುರ್ಭಾವೋ ಯೇಷಾಂ ಯಜ್ಞೇಷ್ವಿತಿ ದೇವಜನಾ ಯಜಮಾನಾಃ | ಯದ್ವಾ | ಇಂದ್ರಾದಿದೇವಗಣಾಃ | ಮಾಂ ಪುನಂತು | ಪರಿಪೂತಂ ಕುರ್ವಂತು | ತಥಾ ವಸವೋ ವಾಸಕಾ ದೇವಾ ಧಿಯಾತ್ಮೀಯೇನ ಕರ್ಮಣಾ ಮಾಂ ಪುನಂತು | ಅಥವಾ ಪ್ರತ್ಯಕ್ಷಃ | ಹೇ ವಿಶ್ವೇ ದೇವಾಃ ಸರ್ವೇ ದೇವಾಃ ಮಾ ಮಾಂ ಪುನೀತ | ಪೂತಂ ಕುರುತ | ಹೇ ಜಾತವೇದಃ | ಜಾತಾನಿ ಭೂತಜಾತಾನಿ ವೇತ್ತೀತಿ ಯದ್ವಾ ಜಾತಪ್ರಜ್ಞ ಹೇ ಅಗ್ನೇ ಮಾ ಮಾಂ ಪುನೀಹಿ ||

|| ಪ್ರತಿಪದಾರ್ಥ ||

**ದೇವಜನಾಃ**—ದೇವಪೂಜಕರಾದ ಯಜಮಾನರು | **ಮಾಂ**—ನನ್ನನ್ನು | **ಪುನಂತು**—ಶುದ್ಧಿಗೊಳಿಸಲಿ | **ವಸವಃ**— ವಸತಿದಾಯಕರಾದ ದೇವತೆಗಳು | **ಧಿಯಾ**—ತಮ್ಮ ಕರ್ಮಗಳಿಂದ | **ಪುನಂತು**—ನಮ್ಮನ್ನು ಶುದ್ಧಿಗೊಳಿಸಲಿ | **ವಿಶ್ವೇ ದೇವಾಃ**—ಎಲೈ ಸಕಲ ದೇವತೆಗಳೇ | **ಮಾ**—ನನ್ನನ್ನು | **ಪುನೀತ**—ಶುದ್ಧಿಗೊಳಿಸಿರಿ | **ಜಾತವೇದಃ**—ಸಕಲಪ್ರಜ್ಞೆಯುಳ್ಳ ಎಲೈ ಅಗ್ನಿಯೇ | **ಮಾ**—ನನ್ನನ್ನು | **ಪುನೀಹಿ**—ಶುದ್ಧಿಗೊಳಿಸು.

|| ಭಾವಾರ್ಥ ||

ಇಂದ್ರಾದಿ ದೇವಗಣಗಳು ನನ್ನನ್ನು ಶುದ್ಧಿಗೊಳಿಸಲಿ. ವಸತಿದಾಯಕರಾದ ದೇವತೆಗಳು ತಮ್ಮ ಕರ್ಮಗಳಿಂದ ನಮ್ಮನ್ನು ಶುದ್ಧಿಗೊಳಿಸಲಿ. ಎಲೈ ಸಕಲ ದೇವತೆಗಳೇ, ನನ್ನನ್ನು ಶುದ್ಧಿಗೊಳಿಸಿರಿ. ಸಕಲ ಪ್ರಜ್ಞೆಯುಳ್ಳ ಎಲೈ ಅಗ್ನಿಯೇ, ನನ್ನನ್ನು ಶುದ್ಧಿಗೊಳಿಸು.

## English Translation.

May the worshippers purify me, may the Vasus purify (me) by their acts; purify me, all ye gods, (Agni) the intelligent purify me.

॥ ಸಂಹಿತಾಪಾಠಃ ॥

ಪ್ರ ಪ್ಯಾಯಸ್ವ ಪ್ರ ಸ್ಯಂದಸ್ವ ಸೋಮ ವಿಶ್ವೇಭಿರಂಶುಭಿಃ ।

ದೇವೇಭ್ಯ ಉತ್ತಮಂ ಹವಿಃ ॥ ೨೮ ॥

॥ ಪದಪಾಠಃ ॥

ಪ್ರ । ಪ್ಯಾಯಸ್ವ । ಪ್ರ । ಸ್ಯಂದಸ್ವ । ಸೋಮ । ವಿಶ್ವೇಭಿಃ । ಅಂಶುಽಭಿಃ ।

ದೇವೇಭ್ಯಃ । ಉತ್ಽತಮಂ । ಹವಿಃ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪ್ರ ಪ್ಯಾಯಸ್ವ । ಅಸ್ಮಾನ್ಪ್ರಕರ್ಷೇಣ ವರ್ಧಯ । ಯದ್ವಾ । ದೇವಾನ್ ಸೋಮೇನ ವರ್ಧಯ । ಕಿಂಚ ವಿಶ್ವೇಭಿರಂಶುಭಿಃ ಸರ್ವೈಸ್ತ್ವದೀಯೈರಂಶುಭಿರ್ದೇವೇಭ್ಯೋ ದೇವಾರ್ಥಮುತ್ತಮಂ ಪ್ರಶಸ್ತತಮಂ ಹವಿಃ ಸೋಮರೂಪಂ ಪ್ರ ಸ್ಯಂದಸ್ವ। ಕಲಶಾದೀನ್ಪ್ರತಿ ಪ್ರಸ್ರವ। ಪ್ರಯಚ್ಛೇತಿ ಯಾವತ್ ॥

॥ ಪ್ರತಿಪದಾರ್ಥ ॥

ಸೋಮ— ಎಲೈ ಸೋಮದೇವನೇ । ಪ್ರ ಪ್ಯಾಯಸ್ವ— ಅಧಿಕವಾದ ವೃದ್ಧಿಯನ್ನು ಹೊಂದು. । ವಿಶ್ವೇಭಿಃ ಅಂಶುಭಿಃ—ನಿನ್ನ ಸಕಲ ಲತಾರಸಗಳಿಂದಲೂ । ದೇವೇಭ್ಯಃ—ದೇವತೆಗಳಿಗೆ ! ಉತ್ತಮಂ— ಶ್ರೇಷ್ಠವಾದ । ಹವಿಃ—ಹವಿಸ್ಸನ್ನು । ಪ್ರ ಸ್ಯಂದಸ್ವ—ಸುರಿಸಿ ಅರ್ಪಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಅಧಿಕವಾದ ವೃದ್ಧಿಯನ್ನು ಹೊಂದು. ನಿನ್ನ ಸಕಲ ಲತಾರಸಗಳಿಂದಲೂ ದೇವತೆಗಳಿಗೆ ಶ್ರೇಷ್ಠವಾದ ಹವಿಸ್ಸನ್ನು ಸುರಿಸಿ ಅರ್ಪಿಸು.

## English Translation.

Soma, nourish (us), pour forth for the gods with all your juices the most excellent oblation.

॥ ಸಂಹಿತಾಪಾಠಃ ॥

ಉಪ ಪ್ರಿಯಂ ಪನಿಪ್ನತಂ ಯುವಾನಮಾಹುತೀವೃಧಂ ।

ಅಗನ್ಮ ಬಿಭ್ರತೋ ನಮಃ ॥ ೨೯ ॥

॥ ಪದಪಾಠಃ ॥

**ಉಪ । ಪ್ರಿಯಂ । ಪನಿಪ್ನತಂ । ಯುವಾನಂ । ಆಹುತಿsವೃಧಂ ।**

**ಅಗನ್ಮ । ಬಿಭ್ರತಃ । ನಮಃ ॥ ೨೯ ॥**

॥ ಸಾಯಣಭಾಷ್ಯಂ ॥

**ಅಗ್ನೀಷೋಮಪ್ರಣಯನ ಉಪ ಪ್ರಿಯಮಿತ್ಯೇಷಾ । ಸೂತ್ರಿತಂ ಚ । ಉಪ ಪ್ರಿಯಂ ಪನಿಪ್ನತಮಿತ್ಯರ್ಧರ್ಚ ಆರಮೇತ್ । ಆ. ೪–೧೦ । ಇತಿ ॥**

**ಪ್ರಿಯಂ ಸರ್ವಸ್ಯ ಪ್ರೀಣಯಿತಾರಂ ಪನಿಪ್ನತಮತ್ಯಂತಂ ಶಬ್ದಾಯಮಾನಂ ಯುವಾನಂ ತರುಣಮಾಹುತಿವೃಧಮಾಹುತಿಭಿರ್ವರ್ಧನೀಯಂ ಪವಮಾನಂ ವಯಂ ನಮೋ ಹವಿರ್ನಮಸ್ಕಾರಂ ವಾ ಬಿಭ್ರತೋ ಧಾರಯಂತಃ ಸಂತ ಉಪಾಗನ್ಮ । ಉಪಗಚ್ಛೇಮ ॥ ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕಿ ಸತಿ ಮ್ವೋಶ್ಚೇತಿ ನಕಾರಃ । ಪನಿಪ್ನತಂ । ಪನೇಃ ಸ್ತುತ್ಯರ್ಥಸ್ಯ ಯಙ್ಲುಕಿ ರೂಪಂ । ದಾಧರ್ತಿ ದರ್ಧರ್ತೀತಿ ಸೂತ್ರೇ ಇತಿಕರಣಸ್ಯ ಪ್ರದರ್ಶನಾರ್ಥತ್ವಾದತ್ರಾಭ್ಯಾಸಸ್ಯ ನಿಗಾಗಮ ಉಪಧಾಲೋಪಶ್ಚ ನಿಪಾತ್ಯತೇ ॥**

॥ ಪ್ರತಿಪದಾರ್ಥ ॥

**ಪ್ರಿಯಂ**—ಎಲ್ಲರಿಗೂ ಹಿತಕರನೂ । **ಪನಿಪ್ನತಂ**–ಅತಿಶಯವಾಗಿ ಶಬ್ದಮಾಡುವವನೂ । **ಯುವಾನಂ**–ತರುಣನೂ । **ಆಹುತಿವೃಧಂ**—ಆಹುತಿಗಳಿಂದ ಪುಷ್ಟನಾಗತಕ್ಕವನೂ ಆದ ಸೋಮನನ್ನು । **(ವಯಂ**—ನಾವು) । **ನಮಃ** –ನಮಸ್ಕಾರವನ್ನು । **ಬಿಭ್ರತಃ**—ಅರ್ಪಿಸುತ್ತ । **ಉಪ ಅಗನ್ಮ**—ಸಮೀಪಿಸುವೆವು.

॥ ಭಾವಾರ್ಥ ॥

ಎಲ್ಲರಿಗೂ ಹಿತಕರನೂ, ಅತಿಶಯವಾಗಿ ಶಬ್ದಮಾಡುವವನೂ, ತರುಣನೂ, ಆಹುತಿಗಳಿಂದ ಪುಷ್ಟನಾಗತಕ್ಕವನೂ ಆದ ಸೋಮದೇವನನ್ನು ನಾವು ನಮಸ್ಕಾರಪೂರ್ವಕವಾಗಿ ಸಮೀಪಿಸುತ್ತೇವೆ.

## English Translation.

Let us approach bearing the beloved loud-sounding youthful oblation fostered by our offerings.

ವಿಶೇಷ ವಿಷಯಗಳು

ಅಗ್ನೀಷೋಮಪ್ರಣಯನವೆಂಬ ಯಜ್ಞಾಂಗಕರ್ಮದಲ್ಲಿ **ಉಪ ಪ್ರಿಯಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಉಪ ಪ್ರಿಯಂ ಪನಿಪ್ನತಮಿತ್ಯರ್ಧರ್ಚ ಆರಮೇತ್** ಎಂಬ ಸೂತ್ರದಿಂದ (ಆ ೪–೧೦) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಅಲಾಯ್ಯಸ್ಯ ಪರಶುರ್ನನಾಶ ತಮಾ ಪವಸ್ವ ದೇವ ಸೋಮ ।
ಆಖುಂ ಚಿದೇವ ದೇವ ಸೋಮ || ೩೦ ||

|| ಪದಪಾಠಃ ||

ಅಲಾಯ್ಯಸ್ಯ । ಪರಶುಃ । ನನಾಶ । ತಂ । ಆ । ಪವಸ್ವ । ದೇವ । ಸೋಮ ।
ಆಖುಂ । ಚಿತ್ । ಏವ । ದೇವ । ಸೋಮ || ೩೦ ||

|| ಸಾಯಣಭಾಷ್ಯಂ ||

ಅಲಾಯ್ಯಸ್ಯ || ಅರ್ತೇರೌಣಾದಿಕ ಆಯ್ಯಪ್ರತ್ಯಯಃ । ಕಪಿಲಕಾದಿತ್ವಾಲ್ಲತ್ವಂ || **ಅಭಿಗಮನ ಶೀಲಸ್ಯ ಶತ್ರೋಃ ಪರಶುಶ್ಛೇದಕಃ ಪವಮಾನಸ್ತಮೇವ ಶತ್ರುಂ ನನಾಶ । ನಾಶಯತು । ಅಸ್ಮಾನಪಾಪಾಂಸ್ತತೋ ಹೇ ದೇವ ದೀಪ್ಯಮಾನ ಸೋಮ ಆ ಪವಸ್ವ । ಅಸ್ಮದಾಭಿಮುಖ್ಯೇನ ಗಚ್ಛ । ಕಿಂಚ ಹೇ ದೇವ ದ್ಯೋತಮಾನ ಸ್ತುತ್ಯ ವಾ ಹೇ ಸೋಮ ಆಖುಂ ಚಿತ್ || ಖನು ಅವಧಾರಣೇ । ಸರ್ವಸ್ಯಾಹಂತಾರಮಪಿ ತಂ ಶತ್ರುಮೇವ ಬಾಧಸ್ವ ನಾಸ್ಮಾನಪಾಪಾನಿತಿ ||**

|| ಪ್ರತಿಪದಾರ್ಥ ||

ಅಲಾಯ್ಯಸ್ಯ—ಮುಂದೆ ನುಗ್ಗಿ ಬರುತ್ತಿರುವ ಶತ್ರುವಿನ । **ಪರಶುಃ**—ಛೇದಕನಾದ ಸೋಮನು । **ತಂ**—ಆ ಶತ್ರುವನ್ನು । **ನನಾಶ**—ನಾಶಮಾಡಲಿ । **ದೇವ**—ಪ್ರಕಾಶಾತ್ಮಕನಾದ । **ಸೋಮ**—ಎಲೈ ಸೋಮನೇ । **ಆ ಪವಸ್ವ**—ನಮ್ಮ ಅಭಿಮುಖವಾಗಿ ಹರಿದು ಬಾ । **ದೇವ**—ದೇವತಾತ್ಮನಾದ । **ಸೋಮ**—ಎಲೈ ಸೋಮನೇ । **ಆಖುಂ ಚಿತ್ ಏವ**—ನಮ್ಮನ್ನು ಕೊಲ್ಲಲು ನುಗ್ಗಿಬರುವ ಶತ್ರುವನ್ನೂ ಕೊಲ್ಲು.

|| ಭಾವಾರ್ಥ ||

ನಮ್ಮ ಮೇಲೆ ನುಗ್ಗಿಬರುತ್ತಿರುವ ಶತ್ರುವನ್ನು ಶತ್ರುಚ್ಛೇದಕನಾದ ಸೋಮನು ನಾಶಮಾಡಲಿ. ಪ್ರಕಾಶಾತ್ಮಕನಾದ ಎಲೈ ಸೋಮನೇ ನಮ್ಮ ಅಭಿಮುಖವಾಗಿ ಹರಿದು ಬಾ. ಎಲೈ ದೇವತಾತ್ಮನಾದ ಸೋಮನೇ ನಮ್ಮನ್ನು ಕೊಲ್ಲಲು ನುಗ್ಗಿ ಬರುವ ಶತ್ರುವನ್ನೂ ಕೊಲ್ಲು.

## English Translation.

May the battle-axe of the foe destroy the foe alone; flow to us, bright Soma : (slay) the villian only bright Soma.

|| ಸಂಹಿತಾಪಾಠಃ ||

ಯಃ ಪಾವಮಾನೀರಧ್ಯೇತ್ಯೃಷಿಭಿಃ ಸಂಭೃತಂ ರಸಂ ।
ಸರ್ವಂ ಸ ಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ || ೩೧ ||

|| ಪದಪಾಠಃ ||

ಯಃ । ಪಾವಮಾನೀಃ । ಅಧಿऽಏತಿ । ಋಷಿऽಭಿಃ । ಸಂऽಭೃತಂ । ರಸಂ ।
ಸರ್ವಂ । ಸಃ । ಪೂತಂ । ಅಶ್ನಾತಿ । ಸ್ವದಿತಂ । ಮಾತರಿಶ್ವನಾ || ೩೧ ||

|| ಸಾಯಣಭಾಷ್ಯಂ ||

**ಯೋ** ಜನಃ ಪಾವಮಾನೀಃ ಪವಮಾನದೇವತಾಕಾಃ ಸರ್ವಾ ಋಚಃ ತದ್ರೂಪಮೃಷಿಭಿಃ **ಸೂಕ್ತ**ದ್ರಷ್ಟೃಭಿರ್ಮಧುಚ್ಛಂದಪ್ರಭೃತಿಭಿಃ ಸಂಭೃತಂ ಸಂಪಾದಿತಂ ರಸಂ ವೇದರಸಭೂತಂ ಸಾರಂ **ಸೂಕ್ತ**ಸಂಘಮಧ್ಯೇತಿ ಅಧೀತೇ ಸ ಜನಃ ಸರ್ವಂ ಭೋಜ್ಯಜಾತಂ ಪೂತಂ ಪರಿಶುದ್ಧಮೇವಾಶ್ನಾತಿ । **ಪರಿಪೂತಂ** ಪಾಪರಹಿತಮನ್ನಂ ಭಕ್ಷಯತಿ । ಕಥಮಸ್ಯ ಪೂತತ್ವಂ ತತ್ರಾಹ । ಸ್ವಸ್ಯಾಶನಾತ್ಪ್ರಾಗೇವ **ಮಾತರಿಶ್ವನಾ** । ಮಾತರ್ಯಂತರಿಕ್ಷೇ ಶ್ವಸಿತೀತಿ ಮಾತರಿಶ್ವಾ ವಾಯುಃ । ಸ ಚ ವಾಯುಃ ಪವಿತ್ರಮೇವ । **ಪವಿತ್ರೇಣ** ವಾಯುನಾ ಸ್ವದಿತಂ ಸ್ವಾದೂಕೃತಂ ಪರಿಪೂತಮೇವಾನ್ನಂ ಪಶ್ಚಾತ್ಸ ನರೋऽಶ್ನಾತಿ ||

|| ಪ್ರತಿಪದಾರ್ಥ ||

**ಯಃ**— ಯಾವ ಮಾನವನು । **ಪಾವಮಾನೀಃ**— ಪವಮಾನದೇವತೆಯನ್ನು ಉದ್ದೇಶಿಸಿದವೂ । **ಋಷಿಭಿಃ**—ಸೂಕ್ತದ್ರಷ್ಟೃಗಳಾದ ಋಷಿಗಳಿಂದ । **ಸಂಭೃತಂ**—ಸಂಪಾದಿತವಾದವೂ । **ರಸಂ**—ವೇದದ ಸಾರಭೂತವಾದವೂ ಆದ ಸೂಕ್ತಗಳನ್ನು । **ಅಧ್ಯೇತಿ**—ಪಠಿಸುವನೋ । **ಸಃ**—ಅವನು । **ಪೂತಂ**—ಪರಿಶುದ್ಧವಾದುದೂ । **ಮಾತರಿಶ್ವನಾ**—ವಾಯುವಿನಿಂದ । **ಸ್ವದಿತಂ**—ರುಚಿಕರವಾಗಿ ಮಾಡಲ್ಪಟ್ಟುದೂ ಆದ । **ಸರ್ವಂ**—ಸಕಲ ಭೋಗ್ಯವಸ್ತುಗಳನ್ನೂ । **ಅಶ್ನಾತಿ**—ಅನುಭವಿಸುತ್ತಾನೆ.

|| ಭಾವಾರ್ಥ ||

ಯಾವ ಮಾನವನು ಪವಮಾನದೇವತೆಯನ್ನು ಉದ್ದೇಶಿಸಿದವೂ, ಸೂಕ್ತದ್ರಷ್ಟೃಗಳಾದ ಋಷಿಗಳಿಂದ ಸಂಪಾದಿತವಾದವೂ, ವೇದದ ಸಾರಭೂತವಾದವೂ ಆದ ಈ ಸೂಕ್ತಗಳನ್ನು ಪಠಿಸುವನೋ ಅವನು ಪರಿಶುದ್ಧವಾದುದೂ, ವಾಯುವಿನಿಂದ ರುಚಿಕರವಾಗಿ ಮಾಡಲ್ಪಟ್ಟುದೂ ಆದ ಸಕಲ ಭೋಗ್ಯವಸ್ತುಗಳನ್ನೂ ಅನುಭವಿಸುತ್ತಾನೆ.

## English Translation.

He who reads thc hymns to Pavamana, the essence (of the Veda) collected by the Rishis, enjoys all (his food) purified, sweetened by Matarishwan.

|| ಸಂಹಿತಾಪಾಠಃ ||

ಪಾವಮಾನೀರ್ಯೋ ಅಧ್ಯೇತ್ಯೃಷಿಭಿಃ ಸಂಭೃತಂ ರಸಂ ।

ತಸ್ಮೈ ಸರಸ್ವತೀ ದುಹೇ ಕ್ಷೀರಂ ಸರ್ಪಿರ್ಮಧೂದಕಂ || ೩೨ ||

|| ಪದಪಾಠಃ ||

ಪಾವಮಾನೀಃ । ಯಃ । ಅಧಿಽಏತಿ । ಋಷಿಽಭಿಃ । ಸಂಽಭೃತಂ । ರಸಂ ।

ತಸ್ಮೈ । ಸರಸ್ವತೀ । ದುಹೇ । ಕ್ಷೀರಂ । ಸರ್ಪಿಃ । ಮಧು । ಉದಕಂ || ೩೨ ||

|| ಸಾಯಣಭಾಷ್ಯಂ ||

ಯೋ ಬ್ರಾಹ್ಮಣಃ ಪಾವಮಾನೀಃ ಪವಮಾನದೇವತಾಕಾಃ ಋಚಃ ತದಾತ್ಮಕನ್ಮೃಷಿಭಿರ್ಮಧುಚ್ಛಂದಆದಿಭಿಃ ಸಂಭೃತಂ ರಸಂ ವೇದಸಾರಂ ಸೂಕ್ತಸಂಘಮಧ್ಯೇತಿ ಅಧೀತೇ ತಸ್ಮೈ ಪವಮಾನಾಧ್ಯಯನಂ ಕುರ್ವತೇ ಜನಾಯ ಸರಸ್ವತೀ ಸರ್ವತ್ರ ಸರಣವತೀ ವಾಗ್ದೇವತಾ ಕ್ಷೀರಂ ಯಜ್ಞಸಾಧನಭೂತಂ ಪಯಃ ಸರ್ಪಿಸ್ತಾತ್ಪೃಶಂ ಘೃತಂ ಮಧು ಮದಕರಮುದಕಂ ಸೋಮಂ ದುಹೇ । ಸ್ವಯಮೇವ ದೋಗ್ಧಿ । ಏನಂ ನರಂ ಯೋಗಾದಿಪರಂ ವೇದಶಾಸ್ತ್ರವಿದಂ ಕರೋತೀತ್ಯರ್ಥಃ || ದುಹ ಪ್ರಪೂರಣೇ । ಕರ್ಮಕರ್ತರಿ ನ ದುಹಸ್ನುನಮಾಂ ಯಕ್ಚಿಣಾವಿತಿ ಯಕಃ ಪ್ರತಿಷೇಧಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ||

|| ಪ್ರತಿಪದಾರ್ಥ ||

**ಯಃ**—ಯಾವ ಮಾನವನು । **ಪಾವಮಾನೀಃ**—ಪವಮಾನದೇವತೆಯನ್ನು ದ್ದೇಶಿಸಿದುದೂ । **ಋಷಿಭಿಃ**—ಋಷಿಗಳಿಂದ । **ಸಂಭೃತಂ**—ಸಂಪಾದಿತವಾದುದೂ । **ರಸಂ**—ವೇದಗಳ ಸಾರಭೂತವಾದುದೂ ಆದ ಸೂಕ್ತವನ್ನು **ಅಧ್ಯೇತಿ**—ಪಠಿಸುವನೋ । **ತಸ್ಮೈ**—ಅವನಿಗೆ । **ಸರಸ್ವತೀ**—ಸರಸ್ವತೀದೇವಿಯು । **ಕ್ಷೀರಂ**—ಕ್ಷೀರವನ್ನೂ । **ಸರ್ಪಿಃ**—ಘೃತವನ್ನೂ । **ಮಧು**—ಮಧುವನ್ನೂ । **ಉದಕಂ**—ಸೋಮವನ್ನೂ । **ದುಹೇ**—ಕರೆಯುತ್ತಾಳೆ.

। ಭಾವಾರ್ಥ ।

ಯಾವ ಮಾನವನು ಪವಮಾನ ದೇವತೆಯನ್ನುದ್ದೇಶಿಸಿದುದೂ, ಋಷಿಗಳಿಂದ ಸಂಪಾದಿತವಾದುದೂ, ವೇದಗಳ ಸಾರಭೂತವಾದುದೂ ಆದ ಈ ಸೂಕ್ತಗಳನ್ನು ಪಠಿಸುವನೋ ಅವನಿಗೆ ಸರಸ್ವತೀದೇವಿಯು ಕ್ಷೀರವನ್ನೂ, ಘೃತವನ್ನೂ ಮಧುವನ್ನೂ ಮತ್ತು ಸೋಮವನ್ನೂ ಕರೆಯುತ್ತಾಳೆ.

English Translation.

For him who reads the hymns to Pavamana, the essence (of the Veda) collected by the Rishis, Saraswati milks milk, ghee, and exilarating Soma.

### ೬೭ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ

## ಪರಿಶಿಷ್ಟ ಮಂತ್ರಗಳು

ಈ ಒಂಭತ್ತನೆಯ ಮಂಡಲದ ೬೭ ಸೂಕ್ತಗಳ ಒಟ್ಟು ೬೧೦ ಋಕ್ಕುಗಳು ಪಾವಮಾನೀ ಋಕ್ಕುಗಳೆಂದು ಪ್ರಸಿದ್ಧವಾಗಿವೆ. ಈ ಋಕ್ಕುಗಳೆಲ್ಲವೂ ಗಾಯತ್ರೀಛಂದಸ್ಸಿನಲ್ಲಿವೆ. ಗಾಯತ್ರೀಛಂದಸ್ಸಿನ ಋಕ್ಕುಗಳಿಗೆ ವಿಶೇಷ ಪ್ರಾಶಸ್ತ್ಯವಿರುವುದನ್ನು ನಾವು ಅನೇಕಾವರ್ತಿ ವಿವರಿಸಿದ್ದೇವೆ. ಆದ್ದರಿಂದ ಪವಮಾನಸೋಮದೇವತಾಕವಾದ ಗಾಯತ್ರೀಛಂದಸ್ಸಿನ ೬೧೦ ಋಕ್ಕುಗಳನ್ನು ಅಧ್ಯಯನ ಮಾಡುವವರಿಗೆ ಲಭಿಸುವ ಫಲಗಳನ್ನೂ, ಅವರು ಹಿಂದೆ ಮಾಡಿರಬಹುದಾದ ಅನೇಕವಿಧವಾದ ಪಾಪಗಳ ಪರಿಹಾರವನ್ನೂ ಈ ಪಾವಮಾನೀ ಋಕ್ಕುಗಳು ಎಂದರೆ ಸರ್ವೇಶ್ವರನಾದ ವೇದಪುರುಷನೇ ಅನುಗ್ರಹಿಸುವನೆಂದು ಈ ಪರಿಶಿಷ್ಟ ಮಂತ್ರಗಳಲ್ಲಿ ಹೇಳಲಾಗಿದೆ. ಪರಿಶಿಷ್ಟ ಮಂತ್ರಗಳನ್ನೂ ಅವುಗಳ ಮುಖ್ಯಾಭಿಪ್ರಾಯವನ್ನೂ ಇನ್ನೂ ವಿವರಿಸಲಾಗಿದೆ.

**ಪಾವಮಾನೀಃ ಸ್ವಸ್ತ್ಯಯನೀಃ ಸುದುಘಾ ಹಿ ಘೃತಶ್ಚುತಃ ।**
**ಋಷಿಭಿಃ ಸಂಭೃತೋ ರಸೋ ಬ್ರಾಹ್ಮಣೇಷ್ವಮೃತಂ ಹಿತಂ ॥ ೧ ॥**

ಪವಮಾನಸೋಮನೆಂಬ ದೇವತೆಯನ್ನು ಸ್ತುತಿಸುವ ಈ (೬೧೦) ಗಾಯತ್ರೀ ಛಂದಸ್ಸಿನ ಋಕ್ಕುಗಳು ಅವುಗಳನ್ನು ಅಧ್ಯಯನ ಮಾಡುವವರಿಗೆ ಕಲ್ಯಾಣವನ್ನುಂಟುಮಾಡುವವು. ಅವರ ತೃಪ್ತಿಗಾಗಿ ಘೃತವನ್ನು (ಸಂಪತ್ಸಾಧನವನ್ನು) ಅಥವಾ ವೃಷ್ಟಿರೂಪವಾದ ಉದಕವನ್ನು ಕರೆಯುವವು ಎಂದರೆ, ವೃಷ್ಟಿಪ್ರದಾನದಿಂದ ಸಂಪತ್ಸಾಧನಕ್ಕೆ ಕಾರಣಭೂತವಾಗುವವು. ಅನೇಕ ಋಷಿಗಳು ಅನೇಕ ಮಂತ್ರಗಳ ಸಾರವನ್ನು ತೆಗೆದು, ಈ ಮಂತ್ರಗಳಲ್ಲಿ ಅಮೃತಸದೃಶವಾಗಿರುವುದೂ, ಹಿತಕರವಾಗಿರುವುದೂ ಆದ ಆ ರಸವನ್ನು ಅಥವಾ ಸಾರವನ್ನು ಈ ಪಾವಮಾನೀ ಮಂತ್ರಗಳಲ್ಲಿ ಅಡಕ ಮಾಡಿರುವರು.

**ಪಾವಮಾನೀರ್ದಿಶಂತು ನ ಇಮಂ ಲೋಕಮಥೋ ಅಮುಂ ।**
**ಕಾಮಾನ್ತ್ಸಮರ್ಧಯಂತು ನೋ ದೇವೀರ್ದೇವೈಃ ಸಮಾಹಿತಾಃ ॥ ೨ ॥**

ದೇವತಾತ್ಮಕಗಳಾದ ಈ ಪಾವಮಾನೀ ಋಕ್ಕುಗಳು ಇತರ ಸಮಸ್ತ ದೇವತೆಗಳೊಡನೆ ಸೇರಿ, ನಮಗೆ ಈ ಲೋಕದಲ್ಲಿ ದೊರೆಯಬಹುದಾದ ಸುಖವನ್ನೂ, ಪರಲೋಕದಲ್ಲಿ ದೊರೆಯಬಹುದಾದ ಸುಖವನ್ನೂ ದೊರಕಿಸಿಕೊಡಲಿ. ಮತ್ತು ನಮ್ಮ ಸಮಸ್ತ ಅಭೀಷ್ಟಗಳನ್ನೂ ನೆರವೇರಿಸಲಿ.

**ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।**
**ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ ॥ ೩ ॥**

ದೇವತೆಗಳೆಲ್ಲರೂ ಯಾವಾಗಲೂ ತಮ್ಮನ್ನು ಯಾವ ಸೋಮರಸದ ಧಾರೆಯಿಂದ (ಎಂದರೆ ಸೋಮಪಾನದಿಂದ) ಪವಿತ್ರರನ್ನಾಗಿ ಮಾಡಿಕೊಳ್ಳುವರೋ ಅಂತಹ ಸಾವಿರಾರು ಹರಿಯುವ ಸೋಮರಸದ ಧಾರೆಗಳಿಂದ ಈ ಪಾವಮಾನಿ ಋಕುಗಳು ನನ್ನನ್ನೂ ಶುದ್ಧನನ್ನಾಗಿ ಮಾಡಲಿ.

**ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಂ ।**
**ತೇನ ಬ್ರಹ್ಮವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥ ೪ ॥**

ಪ್ರಜಾಪತಿಸಂಬಂಧವಾದುದೂ ಎಂದರೆ ಪ್ರಜಾಪತಿಯಿಂದ ಸೃಷ್ಟವಾದುದೂ ನೂರಾರು ಧಾರೆಗಳಿಂದ ಸ್ರವಿಸಿ ಪ್ರವಹಿಸುತ್ತಿರುವುದೂ, ಸುವರ್ಣದಂತೆ ಥಳಥಳಿಸುವ ಕಾಂತಿಯಿಂದ ಯುಕ್ತವಾದುದೂ ಸ್ವಯಂ ಶುದ್ಧವಾದುದೂ ಆದ ಯಾವ ಯಾವ ಸೋಮರಸವಿರುವುದೋ ಅದರಿಂದ (ಅದರ ಪಠನ ಮೂಲಕ) ಬ್ರಹ್ಮವೇತ್ತೃಗಳಾದ ಅಥವಾ ಮಂತ್ರ ವೇತ್ತೃಗಳಾದ ನಾವು (ಋಷಿಗಳು) ಮಂತ್ರವನ್ನು ಅಥವಾ ಹವೀರೂಪವಾದ ಅನ್ನವನ್ನು ಶುದ್ಧಿಗೊಳಿಸುತ್ತೇವೆ.

ಇಂದ್ರಃ ಪುನೀತೀ ಸಹ ಮಾ ಪುನಾತು ಸೋಮಃ ಸ್ವಸ್ತ್ಯಾ ವರುಣಃ ಸಮೀಚ್ಯಾ ।
ಯಮೋ ರಾಜಾ ಪ್ರಮೃಣಾಭಿಃ ಪುನಾತು ಮಾ ಜಾತವೇದಾ ಮೂರ್ಜಯಂತ್ಯಾ ಪುನಾತು ॥ ೫ ॥

ಸೋಮಪಾನ ಮಾಡಿ ಅದರಿಂದ ಶುದ್ಧನಾದ (ಅಥವಾ ಹರ್ಷಗೊಂಡ) ಇಂದ್ರನು ನನ್ನನ್ನೂ ಸಹ ಶುದ್ಧನನ್ನಾಗಿ ಮಾಡಲಿ. ಸೋಮದೇವನು ಮಂಗಳ ಪ್ರದಾನದಿಂದಲೂ, ವರುಣನು ಉತ್ತಮ ಮಾರ್ಗದರ್ಶನ ದಿಂದಲೂ ಪ್ರಭುವಾದ ಯಮನು ಶ್ರೇಷ್ಠವಸ್ತುಗಳಿಂದಲೂ ಅಗ್ನಿಯು ರಸಾತ್ಮಕವಾದ ಅನ್ನಪ್ರದಾನದಿಂದಲೂ ನನ್ನನ್ನು ಶುದ್ಧಿಮಾಡಲಿ.

ಋಷಯಸ್ತು ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ ।
ತಪಂತಸ್ತಪಸೋಗ್ರೇಣ ಪಾವಮಾನೀರ್ಋಚೋಽಬ್ರುವನ್ ॥ ೬ ॥
(ಪರಿಶಿಷ್ಟ. ೧೮-೬)

ಪೂರ್ವದಲ್ಲಿ ಸ್ವರ್ಗವನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಮಸ್ತ ಋಷಿಗಳೂ ಉಗ್ರವಾದ ತಪಸ್ಸನ್ನು ಮಾಡಿ ಈ ಪಾವಮಾನೀ ಋಕ್ಕುಗಳನ್ನು ಅಧ್ಯಯನಮಾಡಿ ಅವುಗಳ ಪಾಪಪರಿಹಾರಕವಾದ ಪ್ರಶಂಸೆಯನ್ನು ಈ ರೀತಿ ಮಾಡಿರುವರು.

ಯನ್ಮೇ ಗರ್ಭೇ ವಸತಃ ಪಾಪಮುಗ್ರಂ ಯಜ್ಜಾಯಮಾನಸ್ಯ ಚ ಕಿಂಚಿದನ್ಯತ್ ।
ಜಾತಸ್ಯ ಚ ಯಚ್ಚಾಪಿ ಚ ವರ್ಧತೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥ ೭ ॥
(ಪರಿ. ೧೮-೭)

ಸರ್ವೇಶ್ವರನಾದ ವೇದಪುರುಷನು ಈ ರೀತಿ ಹೇಳುವನು—ಯಾವ ಪುರುಷನು ಗರ್ಭವಾಸದಲ್ಲಿರುವಾಗಲೂ, ಅನಂತರ ಹುಟ್ಟುವಾಗಲೂ, ಹುಟ್ಟಿದ ಮೇಲೆಯೂ, ಬೆಳೆಯುತ್ತಿರುವಾಗಲೂ ಅತ್ಯುಗ್ರವಾದ ಪಾಪವನ್ನು ಮಾಡಿದ್ದರೂ ಅವನು ಪಾವಮಾನೀ ಮಂತ್ರಗಳನ್ನು ಅಧ್ಯಯನ ಮಾಡಿದಲ್ಲಿ ಅಂತಹ ಪಾಪಗಳನ್ನೆಲ್ಲ ನಾಶಮಾಡಿ ಅವನನ್ನು ಪರಿಶುದ್ಧ ನನ್ನಾಗಿ ಮಾಡುತ್ತೇನೆ.

ಮಾತಾಪಿತ್ರೋರ್ಯನ್ನ ಕೃತಂ ವಚೋ ಮೇ ಯತ್ಸ್ಥಾವರಂ ಜಂಗಮಮಾ ಬಭೂವ ।
ವಿಶ್ವಸ್ಯ ತತ್ಪ್ರಹೃಷಿತಂ ವಚೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥ ೮ ॥
(೧೮-೮)

ತಂದೆತಾಯಿಗಳ ಮಾತನ್ನು ಮೀರಿದ ಪಾಪವನ್ನೂ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಯಾವ ಪ್ರಾಣಿಗೇ ಆಗಲಿ ಅಹಿತವನ್ನು ಬಯಸಿ ಆಡುವ ಮಾತಿನಿಂದ ಯಾವ ಪಾಪವು ಉಂಟಾಗುವುದೋ ಅಂತಹ ಪಾಪವನ್ನೂ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

ಗೋಘ್ನಾತ್ ತಸ್ಕರತ್ವಾತ್ಸ್ತ್ರೀವಧಾದ್ಯಚ್ಚ ಕಿಲ್ಬಿಷಂ ।
ಪಾಪಕಂ ಚ ಚರಣೇಭ್ಯಸ್ತತ್ಪಾವಮಾನೀಭಿರಹಂ ಪುನಾಮಿ ॥ ೯ ॥

(ಪರಿ. ೧೮-೯)

ಗೋಹತ್ಯ, ಕಳ್ಳತನ, ಸ್ತ್ರೀಹತ್ಯ, ಕಾಲುಗಳಿಂದ ಪ್ರಾಣಿಗಳನ್ನು ತುಳಿದು ಹಿಂಸಿಸುವ ಕೃತ್ಯ ಇವುಗಳಿಂದ ಉಂಟಾಗಬಹುದಾದ ಪಾಪವನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಬ್ರಹ್ಮವಧಾತ್ಸುರಾಪಾನಾತ್ಸ್ವರ್ಣಸ್ತೇಯಾದ್ವೃಷಲಿಗಮನಮೈಥುನಸಂಗಮಾತ್ ।
ಗುರೋರ್ದಾರಾಧಿಗಮನಾಚ್ಚ ತತ್ಪಾವಮಾನೀಭಿರಹಂ ಪುನಾಮಿ ॥ ೧೦ ॥

(ಪರಿ. ೧೮-೧೦)

ಬ್ರಹ್ಮಹತ್ಯ, ಮದ್ಯಪಾನ, ಚಿನ್ನವನ್ನು ಕದಿಯುವುದು, ತಂಗಿಗೆ ಮದುವೆಯಾಗಿದ್ದರೂ ತನಗೆ ಮದುವೆಯಾಗದಿರುವ ವೃಷಲಿ ಎಂಬ ಸ್ತ್ರೀಯನ್ನು ಸಂಗಮಾಡಿದ ಪಾಪ, ಗುರುವಿನ ಪತ್ನಿಯಲ್ಲಿ ಸಂಭೋಗಮಾಡಿದ ಪಾಪ ಇವುಗಳನ್ನೆಲ್ಲಾ ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಬಾಲಘ್ನಾನ್ಮಾತೃಪಿತೃವಧಾದ್ಭೂಮಿತಸ್ಕರಾತ್ಸರ್ವವರ್ಣಗಮನಮೈಥುನಸಂಗಮಾತ್ ।
ಪಾಪೇಭ್ಯಶ್ಚ ಪ್ರತಿಗ್ರಹಾತ್ಸದ್ಯಃ ಪ್ರಹರತಿ ಸರ್ವದುಷ್ಕೃತಂ ತತ್ಪಾವಮಾನೀಭಿರಹಂ ಪುನಾಮಿ ॥ ೧೧ ॥

(ಪರಿ. ೧೮-೧೧)

ಮಕ್ಕಳನ್ನು ಕೊಲ್ಲುವುದು, ತಂದೆತಾಯಿಗಳನ್ನು ಕೊಲ್ಲುವುದು, ಹೊಲಗದ್ದೆ ಮೊದಲಾದ ಭೂಮಿಯನ್ನು ಮೋಸದಿಂದ ಅಪಹರಿಸುವುದು, ಎಲ್ಲಾ ನೀಚಜಾತಿಯ ಸ್ತ್ರೀಯರೊಂದಿಗೆ ಸಂಗಮಾಡುವುದು, ದುರ್ದಾನವನ್ನು ಸ್ವೀಕರಿಸುವುದು, ಇತರ ಕೆಟ್ಟಕೆಲಸಗಳನ್ನು ಮಾಡುವುದು ಇವುಗಳಿಂದ ಯಾವಯಾವ ಪಾಪಗಳು ಸಂಭವಿಸುವುವೋ ಆ ಪಾಪಗಳನ್ನೆಲ್ಲಾ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

ಕ್ರಯವಿಕ್ರಯಾದ್ಯೋನಿದೋಷಾದ್ಭಕ್ಷಾದ್ಭೋಜ್ಯಾತ್ಪ್ರತಿಗ್ರಹಾತ್ ।
ಅಸಂಭೋಜನಾಚ್ಚಾಪಿ ನೃಶಂಸಂ ತತ್ಪಾವಮಾನೀಭಿರಹಂ ಪುನಾಮಿ ॥ ೧೨ ॥

(ಪರಿ. ೧೮-೧೨)

ಅನ್ಯಾಯರೀತಿಯಿಂದ ಎಂದರೆ ಮೋಸದಿಂದ ಕೊಳ್ಳುವುದು, ಮಾರುವುದು, ಸಿಕ್ಕಿದ ಸ್ತ್ರೀಯರ ಸಂಗಮಾಡುವುದು, ತಿನ್ನಬಾರದ ಪದಾರ್ಥಗಳನ್ನು ತಿನ್ನುವುದು, ಸ್ವೀಕಾರಾರ್ಹವಲ್ಲದ ವಸ್ತುಗಳನ್ನು ಸ್ವೀಕರಿಸುವುದು, ಮನೆಗೆ ಬಂದ ಅತಿಥಿಯನ್ನು ಬಿಟ್ಟು ಭೋಜನಮಾಡುವುದು ಇವುಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸುತ್ತೇನೆ.

ದುರ್ಯಷ್ಟಂ ದುರಧೀತಂ ಪಾಪಂ ಯಚ್ಚಾಜ್ಞಾನತೋ ಕೃತಂ ।
ಅಯಾಜಿತಾಶ್ಚಾಸಂಯಾಜ್ಯಾಸ್ತತ್ಪಾವಮಾನೀಭಿರಹಂ ಪುನಾಮಿ ॥ ೧೩ ॥

ವಿಧ್ಯುಕ್ತರೀತಿಯನ್ನು ಬಿಟ್ಟು ಬೇರೆವಿಧವಾಗಿ ಯಜ್ಞಮಾಡುವುದು, ನಿಯಮರಹಿತವಾಗಿ ವೇದಾಧ್ಯಯನಮಾಡುವುದು ಅಜ್ಞಾನದಿಂದ ಮಾಡಿದ ಪಾಪ, ಯಜ್ಞವನ್ನು ಮಾಡಲು ಅರ್ಹರಲ್ಲದವರಿಗೆ ಯಜ್ಞಮಾಡಿಸುವುದು, ಯಜ್ಞಾರ್ಹರಿಗೆ ಮಾಡಿಸದಿರುವುದು ಈ ವಿಧವಾದ ದುಷ್ಕೃತ್ಯಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಅಮಂತ್ರಮನ್ನಂ ಯತ್ಕಿಂಚಿದ್ಧೂಯತೇ ಚ ಹುತಾಶನೇ ।
ಸಂವತ್ಸರಕೃತಂ ಪಾಪಂ ತತ್ಪಾವಮಾನೀಭಿರಹಂ ಪುನಾಮಿ ॥ ೧೪ ॥

(ಪರಿ. ೧೮-೧೪)

ವಿಧ್ಯುಕ್ತಮಂತ್ರಪಠನವಿಲ್ಲದೆ ಅಥವಾ ತಪ್ಪುತಪ್ಪಾಗಿ ಮಂತ್ರವನ್ನು ಪಠಿಸುತ್ತಾ ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡುವುದರಿಂದ ಸಂಭವಿಸುವ ಪಾಪವನ್ನೂ, ಸಂವತ್ಸರದಲ್ಲಿ ಯಾವಯಾವ ಪಾಪಗಳನ್ನು ಮಾಡಿದ್ದರೂ ಅವೆಲ್ಲ ವನ್ನೂ ಪರಿಹಾರಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

ಋತಸ್ಯ ಯೋನಯೋಽಮೃತಸ್ಯ ಧಾಮ ವಿಶ್ವಾ ದೇವೇಭ್ಯಃ ಪುಣ್ಯಗಂಧಾಃ ।
ತಾ ನ ಆಪಃ ಪ್ರ ವಹಂತು ಪಾಪಂ ಶುದ್ಧಾ ಗಚ್ಛಾಮಿ ಸುಕೃತಾಮು ಲೋಕಂ ತತ್ಪಾವಮಾನೀ-
ಭಿರಹಂ ಪುನಾಮಿ ॥ ೧೫ ॥

(ಪರಿ. ೧೮-೧೫)

ಸತ್ಯ ಅಥವಾ ಯಜ್ಞಕ್ಕೆ ಮುಖ್ಯ ಆಧಾರಭೂತವೂ, ಶಾಶ್ವತವಾದ ಸ್ವರ್ಗದಲ್ಲಿ ನೆಲೆಸಿರುವವೂ, ದೇವತೆಗಳಿಗೆ ಪ್ರಿಯ ವನ್ನುಂಟುಮಾಡುವವೂ ಆದ ಸ್ವರ್ಗೀಯೋದಕಗಳು ಮೇಲೆ ಹೇಳಿದ ಪಾಪಗಳನ್ನು ಕೊಚ್ಚಿಕೊಂಡು ಹೋಗಲಿ. ಆ ಪುರುಷನನ್ನು ಶುದ್ಧನನ್ನಾಗಿ ಮಾಡಿ ಉತ್ತಮ ಲೋಕವನ್ನು ಪಡೆಯುವಂತೆ ಮಾಡುವೆನು.

ಪಾವಮಾನೀಃ ಸ್ವಸ್ತ್ಯಯನೀರ್ಯಾಭಿರ್ಗಚ್ಛತಿ ನಾಂದನಂ ।
ಪುಣ್ಯಾಂಶ್ಚ ಭಕ್ಷಾನ್ಭಕ್ಷಯತ್ಯಮೃತತ್ವಂ ಚ ಗಚ್ಛತಿ ॥ ೧೬ ॥

ಈ ಪಾವಮಾನೀಋಕ್ಕುಗಳು ಅವುಗಳನ್ನು ಪಠಿಸುವವರಿಗೆ ಮಂಗಳವನ್ನುಂಟುಮಾಡುವವು. ಈ ಋಕ್ಕುಗಳ ಅಧ್ಯಯನದಿಂದ ಅಥವಾ ಪಠನದಿಂದ ಪುರುಷನು ಸಂತೋಷವನ್ನೂ ಪುಣ್ಯವನ್ನೂ ಪಡೆಯುವನು. ಉತ್ತಮವಾದ ಭಕ್ಷ್ಯಭೋಜ್ಯಾದಿಗಳನ್ನು ಭಕ್ಷಿಸಿ ತೃಪ್ತಿಪಡುವನು ಜೀವಿತಾಂತ್ಯದಲ್ಲಿ ಮರಣರಹಿತವಾದ ಪರಮಪದವಿಯನ್ನು ಪಡೆದು ಸುಖಿಸುವನು.

ಪಾವಮಾನೀಃ ಪಿತೄನ್ದೇವಾನ್ ಧ್ಯಾಯೇದ್ಯಶ್ಚ ಸರಸ್ವತೀಂ ।
ಪಿತೄಂಸ್ತಸ್ಯೋಪವರ್ತೇತ ಕ್ಷೀರಂ ಸರ್ಪಿರ್ಮಧೂದಕಂ ॥೧೭ ॥

ಯಾವ ಪುರುಷನು ಪಾವಮಾನೀ ಋಕ್ಕುಗಳನ್ನು ಪಠಿಸಿ ಪಿತೃದೇವತೆಗಳನ್ನೂ ಸರಸ್ವತೀದೇವತೆಯನ್ನೂ ಧ್ಯಾನ ಮಾಡುವನೋ ಪಿತೃದೇವತೆಗಳು ಅಂತಹ ಪುರುಷನ ಸಮೀಪವರ್ತಿಗಳಾಗಿದ್ದು ಅವನಿಗೆ ಯಥೇಷ್ಟವಾಗಿ ಹಾಲು ತುಪ್ಪ, ಮಧು, ಉದಕ ಇವುಗಳೆಲ್ಲವನ್ನು ಕರೆಯುವರು ಎಂದರೆ ಅವುಗಳ ಸಮೃದ್ಧಿಯುಂಟಾಗುವಂತೆ ಮಾಡುವರು.

ಪಾವಮಾನಂ ಪರಂ ಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ ।
ಋಷೀಂಸ್ತಸ್ಯೋಪತಿಷ್ಠೇತ ಕ್ಷೀರಂ ಸರ್ಪಿರ್ಮಧೂದಕಂ ॥೧೮॥

ಯಾವ ಪುರುಷನು ಪರಬ್ರಹ್ಮಸ್ವರೂಪನೂ, ಅತ್ಯತಿಶಯವಾದ ಕಾಂತಿಯಿಂದ ಬೆಳಗುವವನೂ, ಜ್ಯೋತಿರೂಪನೂ ಆದ್ಯಂತರಹಿತನೂ ಆದ ಪವಮಾನಸೋಮದೇವತೆಯನ್ನೂ, ಆ ದೇವನನ್ನೂ ಸ್ತುತಿಸಿರುವ ಋಷಿಗಳನ್ನು ಧ್ಯಾನಿಸಿ

ಭಜಿಸುವನೋ ಅವನಿಗೆ ಹಾಲು, ತುಪ್ಪ, ಮಧು, ಉದಕ ಇವುಗಳ ಸಮೃದ್ಧಿಯುಂಟಾಗುವುದು ಎಂದರೆ ನಾನಾವಿಧ ಸಂಪತ್ಸಮೃದ್ಧಿಯುಂಟಾಗುವುದು.

ಪಾವಮಾನಂ ಪರಂ ಬ್ರಹ್ಮ ಯೇ ಪಠಂತಿ ಮನೀಷಿಣಃ ।
ಸಪ್ತ ಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ॥೧೯॥

ಪರಬ್ರಹ್ಮಸ್ವರೂಪವಾದ ಈ ಪವಮಾನ ಮಂತ್ರವನ್ನು ಯಾವ ವಿವೇಕಿಗಳಾದ ಪುರುಷರು ಪಠಿಸಿ ಸ್ತುತಿಸುವರೋ ಅವರು ಮುಂದಿನ ಏಳು ಜನ್ಮಗಳಲ್ಲಿಯೂ ಬ್ರಾಹ್ಮಣಜನ್ಮದಲ್ಲಿಯೇ ಹುಟ್ಟಿ ಧನವಂತರಾಗಿಯೂ, ವೇದಾಢ್ಯರಾಗಿಯೂ ಸಂಪನ್ನರಾಗಿಯೂ ಇದ್ದು ಸುಖಿಸುವರು.

ದಶೋತ್ತರಾಣ್ಯೃಚಾಂಶ್ಚೈವ ಪಾವಮಾನೀಃ ಶತಾನಿ ಷಟ್ ।
ಏತಜ್ಜುಹ್ವನ್ ಜಪೇನ್ಮಂತ್ರಂ ಘೋರಮೃತ್ಯುಭಯಂ ಹರೇತ್ ॥೨೦॥

ಪವಮಾನ ಸೋಮದೇವತೆಯನ್ನು ಸ್ತುತಿಸುವ ಗಾಯತ್ರೀಛಂದಸ್ಸಿನ ಈ ಆರನೂರ ಹತ್ತು (೬೧೦) ಋಕ್ಕುಗಳನ್ನೂ ಪಠಿಸಿ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಿದರೆ ಎಂತಹ ಘೋರವಾದ ಮೃತ್ಯುಭಯವೂ ಸಹ ಪರಿಹಾರವಾಗುವುದು.

ಏತತ್ಪುಣ್ಯಂ ಪಾಪಹರಂ ರೋಗಮೃತ್ಯುಭಯಾಪಹಂ ।
ಪಠತಾಂ ಶೃಣ್ವತಾಂ ಚೈವ ದದಾತಿ ಪರಮಾಂ ಗತಿಂ ॥ ೨೧ ॥

ಪುಣ್ಯಪ್ರದವಾದುದೂ, ಪಾಪಪರಿಹಾರಕವಾದುದೂ ಆದ ಈ ಪಾವಮಾನೀ ಮಂತ್ರಗಳನ್ನು ಪಠಿಸುವವರ ಅಥವಾ ಶ್ರವಣಮಾಡುವವರ ಸಮಸ್ತ ರೋಗ, ಮೃತ್ಯುಭಯ ಇವೆಲ್ಲವೂ ನಾಶವಾಗಿ ಅವರಿಗೆ ಪರಮಪದವಿಯು ಎಂದರೆ ಉತ್ತಮವಾದ ಸ್ವರ್ಗಲೋಕಪ್ರಾಪ್ತಿಯು ಉಂಟಾಗುವುದು

## ಅರವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಚತುರ್ಥೇಽನುವಾಕೇಽಷ್ಟಾದಶ ಸೂಕ್ತಾನಿ । ತತ್ರ ಪ್ರ ದೇವಮಿತಿ ದಶರ್ಚಂ ಪ್ರಥಮಂ ಸೂಕ್ತಂ । ಭಲಂದನಪುತ್ರಸ್ಯ ವತ್ಸಪ್ರೇರಾರ್ಷಂ ಪವಮಾನಸೋಮದೇವತಾಕಂ । ದಶಮೀ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಮ್ಯತೇ । ಪ್ರ ದೇವಂ ದಶ ವತ್ಸಪ್ರಿರ್ಭಾಲಂದನಸ್ತ್ರಿಷ್ಟುಬಂತಂ ಹೇತಿ ॥ ಗತೋ ವಿನಿಯೋಗಃ ॥

ಅನುವಾದವು—ಒಂಭತ್ತನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿನೆಂಟು ಸೂಕ್ತಗಳಿರುವವು. ಅವುಗಳಲ್ಲಿ ಪ್ರ ದೇವಂ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭಲಂದನ ಎಂಬ ಋಷಿಯ ಪುತ್ರನಾದ ವತ್ಸಪ್ರಿ ಎಂಬುವನು ಋಷಿಯು. ಪವಮಾನಸೋಮಮು ದೇವತೆಯು;

ಈ ಸೂಕ್ತದ ಹತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—ಪ್ರ ದೇವಂ ದಶ ವತ್ಸಪ್ರಿರ್ಭಾಲಂದನಸ್ತ್ರಿಷ್ಟುಬಂತಂ ಹ ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೮

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೬೮ ॥

ಅಷ್ಟಕ—೭ ॥ ಅಧ್ಯಾಯ—೨ ॥ ವರ್ಗ—೧೯, ೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ವತ್ಸಪ್ರಿರ್ಭಾಲಂದನಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—೧-೯. ಜಗತೀ । ೧೦-ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ದೇವಮಚ್ಛಾ ಮಧುಮಂತ ಇಂದವೋಽಸಿಷ್ಯದಂತ ಗಾವ ಆ ನ ಧೇನವಃ ।

ಬರ್ಹಿಷದೋ ವಚನಾವಂತ ಊಧಭಿಃ ಪರಿಸ್ರುತಮುಸ್ರಿಯಾ ನಿರ್ಣಿಜಂ ಧಿರೇ ॥ ೧ ॥

॥ ಪದಪಾಠಃ ॥

ಪ್ರ । ದೇವಂ । ಅಚ್ಛ । ಮಧುಽಮಂತಃ । ಇಂದವಃ । ಅಸಿಸ್ಯದಂತ । ಗಾವಃ । ಆ । ನ । ಧೇನವಃ ।

ಬರ್ಹಿಃಽಸದಃ । ವಚನಾಽವಂತಃ । ಊಧಃಽಭಿಃ । ಪರಿಽಸ್ರುತಂ । ಉಸ್ರಿಯಾಃ । ನಿಃಽನಿಜಂ । ಧಿರೇ ॥ ೧ ॥

॥ ಸಾಯಣಭಾಷ್ಯಂ ॥

ಮಧುಮಂತೋ ಮಾದಕರಸಸಂಯುಕ್ತಾ ಇಂದವಃ ಸೋಮಾ ದೇವಂ ದ್ಯೋತಮಾನಂ ಸೋಮಾತ್ಮಕಮಿಂದ್ರಮಚ್ಛ ಪ್ರತಿ ಪ್ರಾಸಿಷ್ಯದಂತ । ಪ್ರಸ್ಯಂದಂತೇ । ಗ್ರಹಾದಿಷು ಪ್ರಕ್ಷರಂತಿ ॥ ಸ್ಯಂದತೇರ್ಣ್ಯಂತಸ್ಯ ಲುಙಿ ಚಙಿ ರೂಪಂ ॥ ತತ್ರ ದೃಷ್ಟಾಂತಃ । ಗಾವ ಆ ನ ಧೇನವಃ । ಪಯಸ್ವಿನ್ಯಃ ಪ್ರೀಣಯಿತ್ರ್ಯೋ ಗಾವೋ ಯಥಾ ವತ್ಸಂ ಪ್ರತಿ ಪ್ರಸ್ರವಂತಿ ತದ್ವತ್ । ಕಿಂಚ ಬರ್ಹಿಷದೋ ಬರ್ಹಿಷಿ ಸೀದಂತೋ ವಚನಾವಂತೋ ಹಂಭಾರವಾದಿಶಬ್ದವಂತ ಉಸ್ರಿಯಾಃ । ಗೋನಾಮೈತತ್ । ತಾದೃಶ್ಯೋ ಗಾವ ಊಧಭಿಃ ಪಯೋಧಾರಕೈಃ ಸ್ವೈಃ ಸ್ವೈರೂಧಭಿಃ ಪರಿಸ್ರುತಂ ಪರಿತಃಸ್ರವಣಶೀಲಂ ನಿರ್ಣಿಜಂ ಶುದ್ಧಂ ಪಯೋಭೂತಂ ಸೋಮರಸಂ ಧಿರೇ । ದಧಿರೇ । ಇಂದ್ರಾರ್ಥಂ ಧಾರಯಂತಿ ॥

|| ಪ್ರತಿಪದಾರ್ಥ ||

**ಧೇನವಃ**—ಕ್ಷೀರವನ್ನು ಕೊಡತಕ್ಕ | **ಗಾವಃ ನ**—ಗೋವುಗಳು ತಮ್ಮ ಕರುವಿನಲ್ಲಿಗೆ ಆದರದಿಂದ ಓಡುವಂತೆ | **ಮಧುಮಂತಃ**—ಮಧುರವಾದ ರಸದಿಂದ ಕೂಡಿದವೂ | **ಇಂದವಃ**—ಪ್ರವಹಿಸುವುವೂ ಆದ ಸೋಮರಸಗಳು | **ದೇವಂ ಅಚ್ಛ**—ದೇವತಾತ್ಮನಾದ ಇಂದ್ರನಿಗಭಿಮುಖವಾಗಿ | **ಪ್ರ ಅಸಿಷ್ಯದಂತ**—ಪ್ರವಹಿಸುತ್ತವೆ | **ಬರ್ಹಿಷದಃ**—ದರ್ಭಾಸನದ ಮೇಲೆ ಕುಳಿತಿರುವುವೂ | **ವಚನಾವಂತಃ**—ಶಬ್ದಮಾಡತಕ್ಕವೂ | **ಉಸ್ರಿಯಾಃ**—ಕರೆಯತಕ್ಕವೂ ಆದ ಗೋವುಗಳು | **ಊಧಭಿಃ**—ತಮ್ಮ ಕೆಚ್ಚಲುಗಳಿಂದ | **ಪರಿಸ್ರುತಂ**—ಹರಿಯತಕ್ಕದ್ದೂ | **ನಿರ್ಣಿಜಂ**—ಪರಿಶುದ್ಧವಾದುದೂ ಆದ ಸೋಮರಸವನ್ನು | **ಧಿರೇ**—ಧರಿಸಿವೆ.

|| ಭಾವಾರ್ಥ ||

ಕ್ಷೀರವನ್ನು ಕೊಡತಕ್ಕ ಗೋವುಗಳು ತಮ್ಮ ಕರುವಿನಲ್ಲಿಗೆ ಆದರದಿಂದ ಓಡುವಂತೆ ಮಧುರವಾದ ರಸದಿಂದ ಕೂಡಿದವೂ, ಪ್ರವಹಿಸುವುವೂ ಆದ ಸೋಮರಸಗಳು ದೇವತಾತ್ಮನಾದ ಇಂದ್ರನಿಗಭಿಮುಖವಾಗಿ ಪ್ರವಹಿಸುತ್ತವೆ. ದರ್ಭಾಸನದ ಮೇಲೆ ಕುಳಿತಿರುವುವೂ ಶಬ್ದಮಾಡತಕ್ಕವೂ, ಕರೆಯತಕ್ಕವೂ ಆದ ಗೋವುಗಳು ತಮ್ಮ ಕೆಚ್ಚಲುಗಳಿಂದ ಹರಿಯುವುದೂ, ಪರಿಶುದ್ಧವಾದುದೂ ಆದ ಹಾಲೆಂಬ ಸೋಮರಸವನ್ನು ಧರಿಸಿವೆ.

## English Translation.

The exhilarating Soma-juices flow towards the shining (Indra), as milch cow (hasten to their calves) the lowing cows sitting on the barhis grass hold in their udders the pure (juice) welling up.

|| ಸಂಹಿತಾಪಾಠಃ ||

ಸ ರೋರುವದಭಿ ಪೂರ್ವಾ ಅಚಿಕ್ರದದುಪಾರುಹಃ ಶ್ರಥಯನ್ತ್ಸ್ವಾದತೇ ಹರಿಃ |
ತಿರಃ ಪವಿತ್ರಂ ಪರಿಯನ್ನುರು ಜ್ರಯೋ ನಿ ಶರ್ಯಾಣಿ ದಧತೇ ದೇವ ಆ ವರಂ || ೨ ||

|| ಪದಪಾಠಃ ||

ಸಃ | ರೋರುವತ್ | ಅಭಿ | ಪೂರ್ವಾಃ | ಅಚಿಕ್ರದತ್ | ಉಪऽಆರುಹಃ | ಶ್ರಥಯನ್ | ಸ್ವಾದತೇ | ಹರಿಃ |
ತಿರಃ | ಪವಿತ್ರಂ | ಪರಿऽಯನ್ | ಉರು | ಜ್ರಯಃ | ನಿ | ಶರ್ಯಾಣಿ | ದಧತೇ | ದೇವಃ | ಆ | ವರಂ || ೨ ||

॥ ಸಾಯಣಭಾಷ್ಯಂ ॥

ರೋರುವತ್ ಕಲಶಾದಿಕಂ ಪ್ರತ್ಯತ್ಯಂತಂ ಶಬ್ದಂ ಕುರ್ವನ್ ಸ ಸೋಮಃ ಪೂರ್ವಾ ಮುಖ್ಯಾಃ ಸ್ತೋತೄಣಾಂ ಸ್ತುತೀರಭ್ಯಚಿಕ್ರದತ್ । ಅಭಿಮುಖಮಧ್ವನಯತ್ । ಸ್ತುತಯಃ ಸಾಧೀಯಸ್ಯ ಇತಿ ಪ್ರತಿಧ್ವನಿಮಂಗೀಕಾರಮಕಾರ್ಷೀದಿತ್ಯರ್ಥಃ । ಕಿಂಚ ಹರಿರ್ಹರಿತವರ್ಣ ಉಪಾರುಹಃ । ರೋಹತೇಸ್ತಾ-ಚ್ಛೀಲಿಕಃ ಕ್ವಿಪ್ ॥ ಉಪಾರೋಹಣಶೀಲಾ ಊರ್ಧ್ವಂ ಪ್ರಾದುರ್ಭವನಶೀಲಾ ಓಷಧೀಃ ಶ್ರಥಯನ್ನಗ್ರೇ ವಿಶ್ಲೇಷಯನ್ ಸ್ವಾದತೇ । ಸ್ವಾದೂಕರೋತಿ । ತಾಃ ಫಲನೀಃ ಕುರ್ವನ್ ಸ್ವಾದುಯುಕ್ತಾ ವಿದಧಾತೀ-ತ್ಯರ್ಥಃ । ತಥಾ ಪವಿತ್ರಮವಿವಾಲಾತ್ಮಕಂ ದಶಾಪವಿತ್ರಂ ತಿರಸ್ತಿರಸ್ಕೃತ್ಯ ಪಾತ್ರಾಣಿ ಪ್ರತ್ಯಾತ್ಮನಃ ಕ್ಷರಣಕಾಲೇ ಪವಿತ್ರಂ ವ್ಯವಧಾಯಕಂ ಕೃತ್ವಾ ಪರಿಯನ್ ಪರಿತೋ ಗಚ್ಛನ್ ಸೋಮ ಉರು ಮಹಾಂತಂ ಜ್ರಯೋ ವೇಗಂ ಕರೋತಿ । ತತಃ ಶರ್ಯಾಣಿ ॥ ಶ್ರಾ ಹಿಂಸಾಯಾಂ ॥ ಹಿಂಸಿತವ್ಯಾನಿ ಯದ್ವಾ ಶರೇಣ ಹಂತವ್ಯಾನಿ ರಕ್ಷಾಂಸಿ ನಿ ದಧತೇ । ನಿಕ್ಷಿಪತಿ । ನ್ಯಕ್ಕರೋತಿ । ಹಿನಸ್ತೀತಿ ಯಾವತ್ । ಪಶ್ಚಾದ್ದೇವೋ ದೀಪ್ಯಮಾನಃ ಸೋಮೋ ವರಂ ವರಣೀಯಂ ಧನಂ ಸೋಮಂ ದಾತೃಭ್ಯೋ ಯಜಮಾನೇಭ್ಯ ಆ ದಧತೇ । ಆಧಾರಯತಿ । ಪ್ರಯಚ್ಛತೀತ್ಯರ್ಥಃ ॥ ದಧಾತೇರ್ಲೇಟ್ಯಡಾಗಮೋ ಘೋರ್ಲೋಪೋ ಲೇಟಿ ವೇತ್ಯಾಕಾರ ಲೋಪಃ ॥

॥ ಪ್ರತಿಪದಾರ್ಥ ॥

**ಸಃ**— ಪ್ರಸಿದ್ಧನಾದ ಸೋಮನು । **ರೋರುವತ್**— ಶಬ್ದಮಾಡುತ್ತ । **ಪೂರ್ವಾಃ**— ಮುಖ್ಯವಾದ ಸ್ತುತಿಗಳನ್ನು । **ಅಭ್ಯಚಿಕ್ರದತ್**— ಪ್ರತಿಧ್ವನಿಯಾಗುವಂತೆ ಮಾಡುತ್ತಾನೆ । **ಹರಿಃ**— ಪಚ್ಚೆವರ್ಣವುಳ್ಳ ಸೋಮನು । **ಉಪಾರುಹಃ**— ಊರ್ಧ್ವಮುಖವಾಗಿ ಬೆಳೆಯುವ ಓಷಧಿಗಳನ್ನು । **ಶ್ರಥಯನ್**— ವಿಂಗಡಿಸುತ್ತ । **ಸ್ವಾದತೇ**— ಅವುಗಳನ್ನು ರುಚಿಕರವಾಗುವಂತೆ ಮಾಡುತ್ತಾನೆ । **ಪವಿತ್ರಂ**— ದಶಾಪವಿತ್ರವನ್ನು । **ತಿರಃ**— ದಾಟಿ । **ಪರಿಯನ್**— ಪ್ರವಹಿಸುವ ಸೋಮನು । **ಉರು**— ಅಧಿಕವಾದ । **ಜ್ರಯಃ**— ವೇಗವನ್ನು ಹೊಂದುತ್ತಾನೆ । **ನಿ ದಧತೇ**— ರಾಕ್ಷಸಾದಿಗಳನ್ನು ನಾಶಪಡಿಸುತ್ತಾನೆ । **ದೇವಃ**— ಪ್ರಕಾಶಮಾನನಾದ ಸೋಮನು । **ವರಂ**— ಉತ್ತಮವಾದ ಧನವನ್ನು । **ಆ ದಧತೇ**— ಯಜಮಾನಾದಿಗಳಿಗೆ ಒದಗಿಸುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧನಾದ ಸೋಮನು ಶಬ್ದಮಾಡುತ್ತ ಮುಖ್ಯವಾದ ಸ್ತುತಿಗಳನ್ನು ಪ್ರತಿಧ್ವನಿತವಾಗುವಂತೆ ಮಾಡುತ್ತಾನೆ. ಪಚ್ಚೆವರ್ಣವುಳ್ಳ ಸೋಮನು ಊರ್ಧ್ವಮುಖವಾಗಿ ಬೆಳೆಯುವ ಓಷಧಿಗಳನ್ನು ವಿಂಗಡಿಸುತ್ತ ಅವುಗಳನ್ನು ರುಚಿಕರವಾಗಿರುವಂತೆ ಮಾಡುತ್ತಾನೆ. ದಶಾಪವಿತ್ರವನ್ನು ದಾಟಿ ಪ್ರವಹಿಸುವ ಸೋಮನು ಅಧಿಕವಾದ ವೇಗವನ್ನು ಹೊಂದುತ್ತಾನೆ. ರಾಕ್ಷಸಾದಿಗಳನ್ನು ನಾಶಪಡಿಸುತ್ತಾನೆ. ಪ್ರಕಾಶಮಾನನಾದ ಸೋಮನು ಉತ್ತಮವಾದ ಧನವನ್ನು ಯಜಮಾನಾದಿಗಳಿಗೆ ಒದಗಿಸುತ್ತಾನೆ.

## English Translation.

He with a noise re-echoes the principal (praises) separating the growing herbs, the green-tinted (Soma, sweetens them ; passing through the filter, (he

exerts) great speed, he annihilates the Rakhasas, the shining (Soma) bestows wealth (upon the worshippers.)

|| ಸಂಹಿತಾಪಾಠಃ ||

ವಿ ಯೋ ಮಮೇ ಯಮ್ಯಾ ಸಂಯತೀ ಮದಃ ಸಾಕಂವೃಧಾ ಪಯಸಾ ಪಿನ್ವದಕ್ಷಿತಾ ।
ಮಹೀ ಅಪಾರೇ ರಜಸೀ ವಿವೇವಿದದಭಿವ್ರಜನ್ನಕ್ಷಿತಂ ಪಾಜ ಆ ದದೇ ॥ ೩ ॥

|| ಪದಪಾಠಃ ||

ವಿ । ಯಃ । ಮಮೇ । ಯಮ್ಯಾ । ಸಂಯತೀ ಇತಿ ಸಂऽಯತೀ । ಮದಃ । ಸಾಕಂऽವೃಧಾ । ಪಯಸಾ । ಪಿನ್ವತ್ । ಅಕ್ಷಿತಾ ।
ಮಹೀ ಇತಿ । ಅಪಾರೇ ಇತಿ । ರಜಸೀ ಇತಿ । ವಿऽವೇವಿದತ್ । ಅಭಿऽವ್ರಜನ್ । ಅಕ್ಷಿತಂ । ಪಾಜಃ । ಆ । ದದೇ ॥ ೩ ॥

|| ಸಾಯಣಭಾಷ್ಯಂ ||

ಯೋ ಮದಃ । ಮಾದ್ಯತ್ಯನೇನೇತಿ ಮದಃ ಸೋಮರಸಃ । ಯಮ್ಯಾ ಯುಗಲಭೂತೇ ಸಂಯತೀ ಪರಸ್ಪರಂ ಸಂಗಚ್ಛಮಾನೇ ದ್ಯಾವಾಪೃಥಿವ್ಯೌ ವಿ ಮಮೇ ವಿಶೇಷೇಣ ನಿರ್ಮಿತವಾನ್ ತತಃ ತೇ ಸಾಕಂವೃಧಾ ಸಹೈವ ವರ್ಧನಶೀಲೇ ತಥಾಕ್ಷಿತಾಕ್ಷೀಣೇ ಸಾಮರ್ಥ್ಯವತ್ಯೌ ಯಥಾ ಭವಿಷ್ಯತಃ [ತಥಾ ಸ ಸೋಮಃ ಪಯಸಾ ಪಯೋರೂಪೇಣ ಸ್ವೀಯರಸೇನ ಪಿನ್ವತ್ । ಅಸಿಂಚತ್ । ಅವರ್ಧಯದಿತಿ ಯಾವತ್। ಕಿಂಚ ಮಹೀ ಮಹತ್ಯೌ ಅತ ಏವಾಪಾರೇ ಪರ್ಯಂತರಹಿತೇ ರಜಸೀ । ದ್ಯಾವಾಪೃಥಿವೀನಾಮ್ನೈತತ್ । ತೇ ದ್ಯಾವಾಪೃಥಿವ್ಯೌ ವಿವೇವಿದತ್ ॥ ವಿದ ಜ್ಞಾನೇ । ಯಙ್ಲುಕಿ ಶತರಿ ರೂಪಂ । ಅಭ್ಯಾಸಸ್ವರಃ ॥ ಇಯಂ ಪೃಥಿವೀಯಂ ದ್ಯೌರಿತಿ ಸರ್ವೇಷಾಂ ವಿವಿಚ್ಯ ತೇಜಸಾ ಪ್ರಜ್ಞಾಪಯನ್ನಭಿವ್ರಜನ್ನಭಿತಃ ಸರ್ವತೋ ಗಚ್ಛನ್ ಸೋಮೋऽಕ್ಷಿತಮಕ್ಷೀಣಮವಿನಶ್ವರಂ ಪಾಜೋ ಬಲಮಾ ದದೇ । ಸ್ವೀಕೃತವಾನ್ । ಅತ್ಯಂತಂ ಬಲವಾನಭವದಿತ್ಯರ್ಥಃ ॥

|| ಪ್ರತಿಪದಾರ್ಥ ||

ಮದಃ—ಹರ್ಷಕಾರಕನಾದ । ಯಃ—ಯಾವ ಸೋಮದೇವನು । ಯಮ್ಯಾ—ಯುಗಲರೂಪದಲ್ಲಿ (ಎರಡಾಗಿ)ರುವುವೂ । ಸಂಯತೀ—ಒಂದುಗೂಡಿರುವುವೂ ಆದ ದ್ಯಾವಾಪೃಥಿವಿಗಳನ್ನು । ವಿ ಮಮೇ—ನಿರ್ಮಿಸಿದನೋ ಅದೇ ಸೋಮನು । ಸಾಕಂವೃಧಾ—ಅವೆರಡೂ ಒಟ್ಟಿಗೆ ಬೆಳೆಯುವಂತೆಯೂ । ಅಕ್ಷಿತಾ—

ನಾಶರಹಿತವಾಗುವಂತೆಯೂ | **ಪಯಸಾ**—ತನ್ನ ರಸದಿಂದ | **ಪಿನ್ವತ್**—ಪುಷ್ಟಿಗೊಳಿಸಿದನು | **ಮಹೀ**—ಮಹತ್ಸ್ವರೂಪವುಳ್ಳವೂ | **ಅಪಾರೇ**—ಅನಂತವಾದವೂ ಆದ | **ರಜಸೀ**—ದ್ಯಾವಾಪೃಥಿವಿಗಳನ್ನು | **ವಿವೇವಿದತ್**—ಎಲ್ಲರಿಗೂ ತಿಳಿಯುವಂತೆ ವಿಂಗಡಿಸಿ ಸ್ಥಾಪಿಸಿದನು | **ಅಭಿವ್ರಜನ್**—ಸುತ್ತಲೂ ಸಂಚರಿಸುತ್ತ | **ಅಕ್ಷಿತಂ**—ನಾಶರಹಿತವಾದ | **ಪಾಜಃ**—ಬಲವನ್ನು | **ಆ ದದೇ**—ಪಡೆದನು.

|| ಭಾವಾರ್ಥ ||

ಹರ್ಷಕಾರಕನಾದ ಯಾವ ಸೋಮದೇವನು ಎರಡಾಗಿರುವುವೂ ಆದರೂ ಒಂದು ಗೂಡಿರುವುವೂ ಆದ ದ್ಯಾವಾ ಪೃಥಿವಿಗಳನ್ನು ನಿರ್ಮಿಸಿದನೋ, ಅದೇ ಸೋಮನು ಅವೆರಡೂ ಒಟ್ಟಿಗೆ ಬೆಳೆಯುವಂತೆಯೂ ನಾಶರಹಿತವಾಗುವಂತೆಯೂ ತನ್ನ ರಸದಿಂದ ಪುಷ್ಟಿಗೊಳಿಸಿದನು. ಮಹತ್ಸ್ವರೂಪವುಳ್ಳವೂ, ಅನಂತವೂ ಆದ ದ್ಯಾವಾಪೃಥಿವಿಗಳನ್ನು ಎಲ್ಲರಿಗೂ ತಿಳಿಯುವಂತೆ ವಿಂಗಡಿಸಿ ಸ್ಥಾಪಿಸಿದನು. ಸುತ್ತಲೂ ಸಂಚರಿಸುತ್ತ, ನಾಶರಹಿತವಾದ ಬಲವನ್ನು ಪಡೆದನು.

## English Translation.

The exhilarating (Soma) who constructed the twin united (heaven and earth) does by means of his juice maintain them growing together, imperishable: he has distinguished these two great unbounded worlds. wandaring everywhere, he has assumed imperishable strength.

|| ಸಂಹಿತಾಪಾಠಃ ||

ಸ ಮಾತರಾ ವಿಚರನ್ವಾಜಯನ್ನಪಃ ಪ್ರ ಮೇಧಿರಃ ಸ್ವಧಯಾ ಪಿನ್ವತೇ ಪದಂ |
ಅಂಶುರ್ಯವೇನ ಪಿಪಿಶೇ ಯತೋ ನೃಭಿಃ ಸಂ ಜಾಮಿಭಿರ್ನಸತೇ ರಕ್ಷತೇ ಶಿರಃ || ೪ ||

|| ಪದಪಾಠಃ ||

ಸಃ | ಮಾತರಾ | ವಿऽಚರನ್ | ವಾಜಯನ್ | ಅಪಃ | ಪ್ರ | ಮೇಧಿರಃ | ಸ್ವಧಯಾ | ಪಿನ್ವತೇ | ಪದಂ |
ಅಂಶುಃ | ಯವೇನ | ಪಿಪಿಶೇ | ಯತಃ | ನೃऽಭಿಃ | ಸಂ | ಜಾಮಿऽಭಿಃ | ನಸತೇ | ರಕ್ಷತೇ | ಶಿರಃ || ೪ ||

|| ಸಾಯಣಭಾಷ್ಯಂ ||

ಮೇಧಿರಃ || ಮೇಧಾರಥಾಭ್ಯಾಮಿರನಿರಚೌ | ಪಾ- ೫-೨-೧೦೯-೩ | ಇತೀರನ್ಪ್ರತ್ಯಯೋ ಮತ್ವರ್ಥೀಯಃ || ಮೇಧಾವಾನ್ ಪ್ರಾಜ್ಞಃ ಸೋಮೋ ಮಾತರಾ ಮಾತರೌ ಜಗತೋ ನಿರ್ಮಾತ್ರ್ಯೌ

**ದ್ಯಾವಾಪೃಥಿವ್ಯೌ ವಿಚರನ್ನಂತರೇಣಾತ್ಯಂತಂ ಚರನ್ ತಥಾಪೋಽಂತರಿಕ್ಷಸ್ಥಿತಾನ್ಯುದಕಾನಿ ವಾಜಯನ್ ಪ್ರೇರಯನ್ ॥ ವಜೇರ್ಣ್ಯಂತಸ್ಯ ಶತರಿ ರೂಪಂ ॥ ತಾದೃಶಃ ಸ್ವಧಯಾ ಸಕ್ತುಲಕ್ಷಣೇನಾನ್ನೇನ ಸಹ ಪದಂ ಸ್ವಸ್ಥಾನಮುತ್ತರವೇದಿರೂಪಂ ಪ್ರ ಪಿನ್ವತೇ । ಪ್ರಕರ್ಷೇಣಾಪ್ಯಾಯಯತಿ । ತತೋ ನೃಭಿಃ ಕರ್ಮ-ನೇತೃಭಿರ್ಋತ್ವಿಗ್ಭಿರ್ಯತಃ ಸಂಯತೋಽಂಶುಃ ಸೋಮೋ ಯವೇನ ಪಿಪಿಶೇ ॥ ಪಿಶ ಅವಯವೇ ॥ ಅವಯವತ್ವೇನ ಕೃತಃ । ಮಿಶ್ರಿತ ಇತ್ಯರ್ಥಃ । ಸೋಮಸ್ತು ಯವಸಕ್ತುಭಿಃ ಶ್ರೀಯತೇ ಖಲು । ಸೋಽಯಂ ಜಾಮಿಭಿರೇಕಸ್ಮಾತ್ಪಾಣೇರುತ್ಪನ್ನಾಭಿರಂಗುಲೀಭಿಃ ಸಂ ನಸತೇ । ಸಂಗಚ್ಛತೇ ಚ । ಶಿರಃ ಶೀರ್ಣಂ ಭೂತಜಾತಂ ಚ ರಕ್ಷತೇ ಚ । ಸ್ವೀಯರಸೇನ ರಕ್ಷತಿ । ಪೋಷಯತಿ ॥ ನಸತಿರ್ಗತಿಕರ್ಮಾ । ಚಾದಿಲೋಪೇ ವಿಭಾಷೇತಿ ನ ನಿಘಾತಃ ॥**

॥ ಪ್ರತಿಪದಾರ್ಥ ॥

**ಮೇಧಿರಃ**—ಪ್ರಜ್ಞಾವಂತನಾದ । **ಸಃ**—ಸೋಮದೇವನು । **ಮಾತರಾ** – ಜಗತ್ತಿಗೆ ನಿರ್ಮಾಪಕಿಯರಾದ ದ್ಯಾವಾಪೃಥಿವಿಗಳನ್ನು । **ವಿಚರನ್**—ಸುತ್ತಿಸಂಚರಿಸುತ್ತಲೂ। **ಅಪಃ**—ವೃಷ್ಟ್ಯುದಕವನ್ನು (ಸುರಿಯುವಂತೆ)। **ವಾಜಯನ್**—ಪ್ರೇರಿಸುತ್ತಲೂ । **ಸ್ವಧಯಾ**—ಅನ್ನದಿಂದ । **ಪದಂ**—ತನ್ನ ಉತ್ತರವೇದೀರೂಪವಾದ ಸ್ಥಾನವನ್ನು । **ಪ್ರ ಪಿನ್ವತೇ**—ಪುಷ್ಟಿಗೊಳಿಸುತ್ತಾನೆ । **ನೃಭಿಃ**—ಋತ್ವಿಕ್ಕುಗಳಿಂದ । **ಯತಃ**—ಶೇಖರಿಸಲ್ಪಟ್ಟ । **ಅಂಶುಃ**—ಸೋಮನು । **ಯವೇನ**—ಯವಧಾನ್ಯದೊಡನೆ । **ಪಿಪಿಶೇ**—ಮಿಶ್ರಿತನಾಗುತ್ತಾನೆ । **ಜಾಮಿಭಿಃ**—ಅಂಗುಲಿಗಳೊಡನೆ । **ಸಂ ನಸತೇ** – ಕೂಡಿಕೊಳ್ಳುತ್ತಾನೆ । **ಶಿರಃ** – ಉತ್ತಮಸ್ಥಾನವನ್ನು । **ರಕ್ಷತೇ**—ಸಂರಕ್ಷಿಸುತ್ತಾನೆ.

॥ ಭಾವಾರ್ಥ॥

ಪ್ರಜ್ಞಾವಂತನಾದ ಸೋಮನು ಜಗತ್ತಿಗೆಲ್ಲ ನಿರ್ಮಾಪಕಿಯರಾದ ದ್ಯಾವಾಪೃಥಿವಿಗಳನ್ನು ಸುತ್ತಿ ಸಂಚರಿಸುತ್ತಲೂ, ವೃಷ್ಟ್ಯುದಕವನ್ನು ಸುರಿಯುವಂತೆ ಪ್ರೇರಿಸುತ್ತಲೂ ಅನ್ನದಿಂದ ತನ್ನ ಉತ್ತರವೇದೀರೂಪವಾನ ಸ್ಥಾನವನ್ನು ಪುಷ್ಟಿಗೊಳಿಸುತ್ತಾನೆ. ಋತ್ವಿಕ್ಕುಗಳಿಂದ ಶೇಖರಿಸಲ್ಪಟ್ಟ ಸೋಮನು ಯವಧಾನ್ಯದೊಡನೆ ಮಿಶ್ರಿತನಾಗುತ್ತಾನೆ. ಬೆರಳುಗಳೊಡನೆ ಕೂಡಿಕೊಳ್ಳುತ್ತಾನೆ. ಉತ್ತಮಸ್ಥಾನವನ್ನು ಸಂರಕ್ಷಿಸುತ್ತಾನೆ.

## English Translation

The wise (Soma) wandering through the two worlds, sending forth the waters, fattens his station with food : the Soma-juice collected by the priests is mixed with the barley : it is united by the fingers : it protects the head.

॥ ಸಂಹಿತಾಪಾಠಃ ॥

**ಸಂ ದಕ್ಷೇಣ ಮನಸಾ ಜಾಯತೇ ಕವಿರ್ಋತಸ್ಯ ಗರ್ಭೋ ನಿಹಿತೋ ಯಮಾ ಪರಃ ।**

ಯೂನಾ ಹ ಸಂತಾ ಪ್ರಥಮಂ ವಿ ಜಜ್ಞತುರ್ಗುಹಾ ಹಿತಂ ಜನಿಮ ನೇಮ-

ಮುದ್ಯತಂ ॥ ೫ ॥

॥ ಪದಪಾಠಃ ॥

ಸಂ । ದಕ್ಷೇಣ । ಮನಸಾ । ಜಾಯತೇ । ಕವಿಃ । ಋತಸ್ಯ । ಗರ್ಭಃ । ನಿऽಹಿತಃ । ಯಮಾ । ಪರಃ ।

ಯೂನಾ । ಹ । ಸಂತಾ । ಪ್ರಥಮಂ । ವಿ । ಜಜ್ಞತುಃ । ಗುಹಾ । ಹಿತಂ । ಜನಿಮ । ನೇಮಂ । ಉತ್ऽ-

ಯತಂ ॥ ೫ ॥

॥ ಸಾಯಣಭಾಷ್ಯಂ ॥

ಪ್ರಸಂಗಾತ್ಸೋಮಸೂರ್ಯಯೋರಾವಿರ್ಭಾವಮಾಹ । ದಕ್ಷೇಣ ಪ್ರವೃದ್ಧೇನ ಮನಸಾ ಸಹ ಸಂ ಜಾಯತೇ । ಪೃಥಿವ್ಯಾಃ ಸಮ್ಯಗ್ಜಾಯತೇ । ತಥಾ ಋತಸ್ಯೋದಕಸ್ಯೈವ ಗರ್ಭೋ ಗರ್ಭಸ್ಥಾನೀಯಃ । ಯದ್ವಾ । ಸತ್ಯಸ್ಯ ಯಜ್ಞಸ್ಯ ಮಧ್ಯೇ ಗರ್ಭಃ ಶಬ್ದನೀಯಃ ಸ್ತುತ್ಯಃ । ಸ ಏವ ಸೋಮಃ ಪರಃ ಪರಸ್ತಾದಂತರಿಕ್ಷೇ ಯಮಾ ಯಮೇನ ನಿಯಮೇನ ದೇವೈರ್ನಿಹಿತಃ ಸಃ । ಸೂರ್ಯಾದ್ಧಿ ವೃಷ್ಟಿರ್ಭವತಿ । ತಸ್ಮಾತ್ಸೋಮಃ ಸೂರ್ಯಾತ್ಮಕತಯಾವಸ್ಥಿತ ಇತ್ಯರ್ಥಃ । ಏವಂ ಯೂನಾ । ಹೇತ್ಯವಧಾರಣೇ । ಯುವಾನಾವೇವ ಸಂತೌ ತೌ ಪ್ರಥಮಂ ಜನನಕಾಲೇ ವಿ ಜಜ್ಞತುಃ । ಅಯಂ ಸೋಮೋऽಯಂ ಸೂರ್ಯ ಇತಿ ವಿಶೇಷೇಣ ಜ್ಞಾಯತೇ । ತಯೋಶ್ಚಾರ್ಧಂ ಜನಿಮ ಜನ್ಮ ಗುಹಾ ಗುಹಾಯಾಂ ಹಿತಂ । ನಿಹಿತಂ ಭವತಿ । ತಯೋರ್ನೇಮಮರ್ಧಂ ಚೋದ್ಯತಂ ಪ್ರಕಾಶಿತಂ ಭವತಿ । ದಿವಾ ಸೂರ್ಯಃ ಪ್ರಾದುರ್ಭವತಿ ರಾತ್ರೌ ಚಂದ್ರಮಾ ಇತಿ ॥

॥ ಪ್ರತಿಪದಾರ್ಥ ॥

ಕವಿಃ— ಕ್ರಾಂತಪ್ರಜ್ಞನಾದ । (ಸೋಮಃ—ಸೋಮನು) । ದಕ್ಷೇಣ—ಪ್ರವೃದ್ಧವಾದ । ಮನಸಾ— ಮನಸ್ಸಿನೊಡನೆ । ಸಂ ಜಾಯತೇ—ಉತ್ಪನ್ನನಾಗುತ್ತಾನೆ । ಋತಸ್ಯ—ಉದಕಕ್ಕೆ । ಗರ್ಭಃ—ಗರ್ಭರೂಪನಾಗಿ । ಪರಃ—ಉತ್ಕೃಷ್ಟವಾದ ಅಂತರಿಕ್ಷದಲ್ಲಿ । ಯಮಾ—ನಿಯತವಾಗಿ । ನಿಹಿತಃ—ದೇವತೆಗಳಿಂದ ಸ್ಥಾಪಿತನಾಗಿದ್ದಾನೆ । ಯೂನಾ ಹ ಸಂತಾ—ನಿತ್ಯ ಯುವಕರಾದ ಈ ಸೂರ್ಯ ಮತ್ತು ಚಂದ್ರರು (ಸೋಮನು) ಪ್ರಥಮಂ—ಉತ್ಪನ್ನ ಕಾಲದಲ್ಲಿ । ವಿ ಜಜ್ಞತುಃ—ಬೇರೆ ಬೇರೆ ಎಂಬುದಾಗಿ ತಿಳಿಯಲ್ಪಟ್ಟಿದ್ದಾರೆ । ಜನಿಮ— ಅವರಲ್ಲಿ ಅರ್ಧಭಾಗದ ಜನ್ಮವು । ಗುಹಾ—ರಹಸ್ಯವಾಗಿ । ಹಿತಂ – ಸ್ಥಾಪಿತವಾಗಿದೆ । ನೇಮಂ—ಉಳಿದರ್ಧ ಭಾಗವು । ಉದ್ಯತಂ—ಎಲ್ಲರಿಗೂ ಕಾಣುವಂತೆ ಪ್ರಕಾಶಿತವಾಗಿರುತ್ತದೆ.

॥ ಭಾವಾರ್ಥ ॥

ಕ್ರಾಂತಪ್ರಜ್ಞನಾದ ಸೋಮನು ಪ್ರವೃದ್ಧವಾದ ಮನಸ್ಸಿನೊಡನೆ ಉತ್ಪನ್ನನಾಗುತ್ತಾನೆ. ಉದಕಕ್ಕೆ ಗರ್ಭರೂಪನಾಗಿ ಉತ್ಕೃಷ್ಟವಾದ ಅಂತರಿಕ್ಷದಲ್ಲಿ ನಿಯತವಾಗಿ ದೇವತೆಗಳಿಂದ (ಅಥವಾ ಸೂರ್ಯಾತ್ಮಕನಾಗಿ) ಸ್ಥಾಪಿತ

ನಾಗಿದ್ದಾನೆ. ನಿತ್ಯಯುವಕರಾದ ಈ ಸೂರ್ಯ ಮತ್ತು ಚಂದ್ರರು ಉತ್ಪನ್ನ ಕಾಲದಲ್ಲಿ ಬೇರೆ ಬೇರೆಯಾಗಿ ತಿಳಿಯಲ್ಪಟ್ಟಿದ್ದಾರೆ. ಅವರ ಜನ್ಮಕ್ರಮದ ಅರ್ಧಭಾಗವು ರಹಸ್ಯವಾಗಿ ಸ್ಥಾಪಿತವಾಗಿದೆ. ಉಳಿದರ್ಧ ಭಾಗವು ಪ್ರಕಾಶಿತವಾಗಿರುತ್ತದೆ.

English Translation

The sage (Soma) is born with developed mind; having his place in the womb of the water, he is deposited (by the gods) by rule from far off; even when young these two were distinct; the birth (of one half) was placed in secret, the (other) half was visible.

|| ಸಂಹಿತಾಪಾಠಃ ||

ಮಂದ್ರಸ್ಯ ರೂಪಂ ವಿವಿದುರ್ಮನೀಷಿಣಃ ಶ್ಯೇನೋ ಯದಂಧೋ ಅಭರತ್ಪರಾವತಃ ।
ತಂ ಮರ್ಜಯಂತ ಸುವೃಧಂ ನದೀಷ್ವಾ ಉಶಂತಮಂಶುಂ ಪರಿಯಂತಮೃಗ್ಮಿಯಂ ॥ ೬ ॥

|| ಪದಪಾಠಃ ||

ಮಂದ್ರಸ್ಯ । ರೂಪಂ । ವಿವಿದುಃ । ಮನೀಷಿಣಃ । ಶ್ಯೇನಃ । ಯತ್ । ಅಂಧಃ । ಅಭರತ್ । ಪರಾऽವತಃ । ತಂ । ಮರ್ಜಯಂತ । ಸುऽವೃಧಂ । ನದೀಷು । ಆ । ಉಶಂತಂ । ಅಂಶುಂ । ಪರಿऽಯಂತಂ । ಋಗ್ಮಿಯಂ ॥ ೬ ॥

|| ಸಾಯಣಭಾಷ್ಯಂ ||

ಮನೀಷಿಣಃ ಪ್ರಾಜ್ಞಾ ಯಷ್ಟಾರೋ ಮಂದ್ರಸ್ಯ ಮದಕರಸ್ಯ ರಸಸ್ಯ ಸೋಮಸ್ಯ ರೂಪಂ ವಿವಿದುಃ । ಜಾನಂತಿ । ಯದಂಧೋ ಯತ್ಸೋಮಲಕ್ಷಣಮನ್ನಂ ಶ್ಯೇನೋ ಗಾಯತ್ರೀರೂಪೋ ಪಕ್ಷೀ ಪರಾವತೋ ದೂರಾದ್ದ್ಯುಲೋಕಾದಾಭರತ್ ಆಜಹಾರ ॥ ಹೃಗ್ರಹೋರ್ಭಶ್ಛಂದಸೀತಿ ಭಕಾರಃ ॥ ತಂ ತಾದೃಶಂ ಸುವೃಧಂ ಸುಷ್ಠು ವರ್ಧಮಾನಂ ಸುವರ್ಧಯಿತಾರಂ ವಾಂಶುಂ ಸೋಮಂ ನದೀಷು ನದಮಾನಾಸು ವಸತೀವರ್ಯೇಕಧನ್ಯಾಸ್ವಪ್ಸ್ವಾ ಮರ್ಜಯಂತ । ಋತ್ವಿಜ ಆಶೋಧಯಂತಿ । ಅಲಂಕುರ್ವಂತಿ ವಾ । ಕೀದೃಶಂ । ಉಶಂತಂ ದೇವಾನ್ ಕಾಮಯಮಾನಂ ಪರಿಯಂತಂ ಪರಿತೋ ಗಚ್ಛಂತಮೃಗ್ಮಿಯಮೃಗರ್ಹಂ ಸ್ತುತ್ಯಂ ಸೋಮಮಾಮರ್ಜಯಂತೀತಿ ॥

|| ಪ್ರತಿಪದಾರ್ಥ ||

**ಮನೀಷಿಣಃ**—ಮೇಧಾವಿಗಳಾದ ಯಜ್ಞಕರ್ತರು | **ಮಂದ್ರಸ್ಯ**— ಮದಕಾರಕನಾದ ಸೋಮನ | **ರೂಪಂ**—ಸ್ವರೂಪವನ್ನು | **ವಿವಿದುಃ**—ಪೂರ್ಣವಾಗಿ ಅರಿತಿದ್ದಾರೆ | **ಯತ್ ಅಂಧಃ**— ಯಾವ ಸೋಮ ರೂಪವಾದ ಅನ್ನವನ್ನು | **ಶ್ಯೇನಃ**—ಶ್ಯೇನರೂಪಿಯಾದ ಪಕ್ಷಿಯು | **ಪರಾವತಃ**—ಅತ್ಯಂತ ದೂರದೇಶದಿಂದ | **ಅಭರತ್**—ತಂದಿತೋ | **ತಂ** —ಅಂತಹುದೂ | **ಉಶಂತಂ**—ದೇವತೃಪ್ತಿಯನ್ನಿಚ್ಛಿಸುವುದೂ | **ಪರಿಯಂತಂ**— ಸುತ್ತಲೂ ಪ್ರವಹಿಸುವುದೂ | **ಋಗ್ಮಿಯಂ**—ಪೂಜ್ಯವಾದುದೂ | **ಸುವೃಧಂ**—ವೃದ್ಧಿಕಾರಕವಾದುದೂ ಆದ | **ಅಂಶುಂ**—ಸೋಮವನ್ನು | **ನದೀಷು**—ಶಬ್ಧಮಾಡತಕ್ಕ ವಸತೀವರ್ಯಾದಿಗಳಲ್ಲಿ | **ಆ ಮರ್ಜಯಂತೆ**—ಶೋಧಿಸುತ್ತಾರೆ.

|| ಭಾವಾರ್ಥ ||

ಮೇಧಾವಿಗಳಾದ ಯಜ್ಞಕರ್ತರು ಮದಕಾರಕನಾದ ಸೋಮನ ಸ್ವರೂಪವನ್ನು ಪೂರ್ಣವಾಗಿ ಅರಿತಿದಾರೆ. ಯಾವ ಸೋಮರೂಪವಾದ ಅನ್ನವನ್ನು ಶ್ಯೇನರೂಪಿಯಾದ ಪಕ್ಷಿಯು ಅತ್ಯಂತ ದೂರದೇಶದಿಂದ ತಂದಿತೋ ಅಂತಹುದೂ ದೇವತೆಗಳ ತೃಪ್ತಿಯನ್ನಿಚ್ಛಿಸುವುದೂ, ಪೂಜ್ಯವಾದುದೂ, ವೃದ್ಧಿಕಾರಕವಾದುದೂ ಆದ ಸೋಮವನ್ನು ಶಬ್ದಮಾಡತಕ್ಕ ವಸತೀವರ್ಯಾದ್ಯುದಕಗಳಲ್ಲಿ ಶುದ್ಧಿಗೊಳಿಸುತ್ತಾರೆ.

English Translaton

The wise (worshippers) know the form of the exhilarating Soma-juice, the food that the falcon brought from far; they cleanse in the waters the fostering (Soma) delighting (the gods, flowing around, and deserving laudation.

|| ಸಂಹಿತಾಪಾಠಃ ||

ತ್ವಾಂ ಮೃಜಂತಿ ದಶ ಯೋಷಣಃ ಸುತಂ ಸೋಮ ಋಷಿಭಿರ್ಮತಿಭಿರ್ಧೀತಿಭಿರ್ಹಿತಂ |

ಅವ್ಯೋ ವಾರೇಭಿರುತ ದೇವಹೂತಿಭಿರ್ನೃಭಿರ್ಯತೋ ವಾಜಮಾ ದರ್ಷಿ ಸಾತಯೇ || ೭ ||

|| ಪದಪಾಠಃ ||

ತ್ವಾಂ | ಮೃಜಂತಿ | ದಶ | ಯೋಷಣಃ | ಸುತಂ | ಸೋಮ | ಋಷಿಽಭಿಃ | ಮತಿಽಭಿಃ | ಧೀತಿಽಭಿಃ | ಹಿತಂ |

ಅವ್ಯಃ | ವಾರೇಭಿಃ | ಉತ | ದೇವಹೂತಿಽಭಿಃ | ನೃಽಭಿಃ | ಯತಃ | ವಾಜಂ | ಆ | ದರ್ಷಿ | ಸಾತಯೇ ||೭||

|| ಸಾಯಣಭಾಷ್ಯಂ ||

ಹೇ ಸೋಮ ಯೋಷಣೋ ದ್ವಾಭ್ಯಾಂ ಪಾಣಿಭ್ಯಾಂ ವಿಭಜ್ಯೋತ್ಪನ್ನಾ ದಶ ದಶಸಂಖ್ಯಾಕಾ ಅಂಗುಲಯ ಋಷಿಭಿರ್ಮಧುಚ್ಛಂದಃಪ್ರಭೃತಿಭಿಃ ಸುತಮಭಿಷುತಂ ಹಿತಂ ಪಾತ್ರೇಷು ನಿಹಿತಂ ತ್ವಾಂ ಮತಿಭಿಃ ಸ್ತುತಿಭಿರ್ಧೀತಿಭಿಃ ಕರ್ಮಭಿಶ್ಚಾವ್ಯೋ ವಾರೇಭಿರವಿವಾಲೈಃ । ಪವಿತ್ರೈರ್ಮೃಜಂತಿ । ಶೋಧಯಂತಿ । ಉತಾಪಿ ಚ ದೇವಹೂತಿಭಿರ್ದೇವಾಹ್ವಾನಯುಕ್ತೈರ್ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿರ್ಯತೋ ಗ್ರಹೇಷು ಸಂಯಮಿತಃ ಸಂಗೃಹೀತಸ್ತ್ವಂ ಸಾತಯೇ ದಾನಾಯ ವಾಜಮನ್ನಮಾ ದರ್ಷಿ । ಆವಿದಾರಯಸಿ । ವಿವೃತಂ ಕರೋಷಿ । ಸ್ತೋತೃಭ್ಯೋಽನ್ನಾದಿಕಂ ಪ್ರಯಚ್ಛಸೀತಿ ಯಾವತ್ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಋಷಿಭಿಃ**—ಋಷಿಗಳಿಂದ । **ಸುತಂ**—ಹಿಂಡಲ್ಪಟ್ಟುದೂ । **ಹಿತಂ**—ಪಾತ್ರೆಗಳಲ್ಲಿ ಇಡಲ್ಪಟ್ಟುದೂ ಆದ । **ತ್ವಾಂ**—ನಿನ್ನನ್ನು (ರಸವನ್ನು) । **ಯೋಷಣಃ**—ಹಸ್ತಗಳಲ್ಲಿ ಉತ್ಪನ್ನವಾದ । **ದಶ**—ಹತ್ತು ಅಂಗುಲಿಗಳೂ । **ಮತಿಭಿಃ**—ಸ್ತುತಿಗಳೊಡನೆಯೂ । **ಧೀತಿಭಿಃ**—ಕರ್ಮಗಳೊಡನೆಯೂ । **ಅವ್ಯಃ**—ಉಣ್ಣೆಯ । **ವಾರೇಭಿಃ**—ನಾರುಗಳುಳ್ಳ ದಶಾಪವಿತ್ರಗಳಿಂದಲೂ । **ಮೃಜಂತಿ**—ಶುದ್ಧಿಗೊಳಿಸುತ್ತವೆ । **ಉತ**—ಮತ್ತು । **ದೇವಹೂತಿಭಿಃ**—ದೇವತೆಗಳನ್ನು ಕರೆಯುವ । **ನೃಭಿಃ**—ಋತ್ವಿಕ್ಕುಗಳಿಂದ **ಯತಃ**—ಶೇಖರಿಸಲ್ಪಟ್ಟ ನೀನು । **ಸಾತಯೇ**—ದಾನಾರ್ಥವಾಗಿ । **ವಾಜಂ**—ಅನ್ನವನ್ನು । **ಆ ದರ್ಷಿ**—ಒದಗಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮನೇ, ಋಷಿಗಳಿಂದ ಹಿಂಡಲ್ಪಟ್ಟುದೂ, ಪಾತ್ರೆಗಳಲ್ಲಿ ಇಡಲ್ಪಟ್ಟುದೂ ಆದ ನಿನ್ನ ರಸವನ್ನು ಹಸ್ತಗಳಲ್ಲಿ ಉತ್ಪನ್ನಗಳಾದ ಹತ್ತು ಬೆರಳುಗಳೂ ಸ್ತುತಿಗಳೊಡನೆಯೂ ಕರ್ಮಗಳೊಡನೆಯೂ ಉಣ್ಣೆಯ ನಾರುಗಳುಳ್ಳ ದಶಾಪವಿತ್ರಗಳಿಂದಲೂ ಶುದ್ಧಿಗೊಳಿಸುತ್ತವೆ. ಮತ್ತು ದೇವತೆಗಳನ್ನು ಕರೆಯುವ ಋತ್ವಿಕ್ಕುಗಳಿಂದ ಶೇಖರಿಸಲ್ಪಟ್ಟ ನೀನು ದಾನಾರ್ಥವಾಗಿ ಅನ್ನವನ್ನು ಒದಗಿಸುತ್ತೀಯೇ.

## English Translation.

The ten fingers cleanse you, Soma, when effused and placed in the vessels by the Rishis, with praises, religious rites, and woollen filters; and collected by the priests with oblations to the gods you bestow food (upon 'the worshippers) for a gift.

|| ಸಂಹಿತಃಪಾಠಃ ||

ಪರಿಪ್ರಯಂತಂ ವಯ್ಯಂ ಸುಷಂಸದಂ ಸೋಮಂ ಮನೀಷಾ ಅಭ್ಯನೂಷತ

ಸ್ತುಭಃ ।

ಯೋ ಧಾರಯಾ ಮಧುಮಾಁ ಊರ್ಮಿಣಾ ದಿವ ಇಯರ್ತಿ ವಾಚಂ
ರಯಿಷಾಳಮರ್ತ್ಯಃ ॥ ೮ ॥

॥ ಪದಪಾಠಃ ॥

ಪರಿಽಪ್ರಯಂತಂ । ವಯ್ಯಂ । ಸುಽಸಂಸದಂ । ಸೋಮಂ । ಮನೀಷಾಃ । ಅಭಿ । ಅನೂಷತ । ಸ್ತುಭಃ ।
ಯಃ । ಧಾರಯಾ । ಮಧುಽಮಾನ್ । ಊರ್ಮಿಣಾ । ದಿವಃ । ಇಯರ್ತಿ । ವಾಚಂ । ರಯಿಷಾಟ್ ।
ಅಮರ್ತ್ಯಃ ॥ ೮ ॥

॥ ಸಾಯಣಭಾಷ್ಯಂ ॥

ಪರಿಪ್ರಯಂತಂ ಪಾತ್ರಾಣಿ ಪರಿತಃ ಪ್ರಗಚ್ಛಂತಂ ವಯ್ಯಂ ದೇವೈಃ ಕಾಮ್ಯಮಾನಂ ಸುಸಂಸದಂ ಶೋಭನಸಂಸದನಂ ಸೋಮಂ ಮನೀಷಾ ಮನಸ ಈಶಿತ್ರ್ಯಃ ಸ್ತುಭಃ ಸ್ತುತಯೋಽಭ್ಯನೂಷತ । ಅಭಿಷ್ಟುವಂತಿ ॥ ವಯ್ಯಂ । ವೀ ಗತ್ಯಾದಿಷ್ವಿತ್ಯಸ್ಮಾದ್ಯತಿ ಛಯ್ಯಪ್ರವಯ್ಯೇ ಚ ಛಂದಸಿ । ಪಾ. ೬-೧-೮೩। ಇತಿ ನಿಪಾತಿತಃ । ಅತ್ರಾನುಪಸರ್ಗಸ್ಯಾಪಿ ನಿಪಾತನಂ ಭವತಿ ॥ ಮಧುಮಾನ್ಮದಕರರಸವಾನ್ ಯಃ ಸೋಮೋ ಧಾರಯಾ ಸ್ತ್ರೀಯಯೋರ್ಮಿಣಾ ವಸತೀವರ್ಯಾಖ್ಯೇನೋದಕೇನ ಸಹ ದಿವ ಆಕಾಶಾ-ದ್ದ್ರೋಣಕಲಶ ಆಪತತಿ ರಯಿಷಾಟ್ ಶತ್ರುಧನಾನಾಮಭಿಭವಿತಾಮರ್ತ್ಯೋ ಮನುಷ್ಯಧರ್ಮರಹಿತಃ ಸಃ ಸೋಮೋ ವಾಚಮಿಯರ್ತಿ । ಪ್ರೇರಯತಿ । ತದಾ ಹಿ ಸ್ತೋತಾರಃ ಸ್ತುವಂತಿ ॥

॥ ಪ್ರತಿಪದಾರ್ಥ ॥

**ಮಧುಮಾನ್**—ಮಧುರವಾದ ರಸಯುಕ್ತನಾದ । **ಯಃ**—ಯಾವ ಸೋಮದೇವನು । **ಧಾರಯಾ**—ತನ್ನ ಧಾರೆಯೊಡಗೂಡಿದ । **ಉರ್ಮಿಣಾ**—ವಸತೀವರ್ಯಾದ್ಯುದಕಗಳೊಡನೆ । **ದಿವಃ**—ಅಂತರಿಕ್ಷದಿಂದ ಇಳಿದು । **ರಯಿಷಾಟ್**—ಶತ್ರುಧನವನ್ನು ಅಪಹರಿಸುತ್ತಲೂ । **ಅಮರ್ತ್ಯಃ**—ಮರಣಧರ್ಮರಹಿತನಾಗಿಯೂ । **ವಾಚಂ**—ವಾಕ್ಕನ್ನು । **ಇಯರ್ತಿ**— ಪ್ರೇರಿಸುವನೋ ಅಂತಹ । **ಪರಿಪ್ರಯಂತಂ**— ಸುತ್ತಲೂ ಪ್ರವಹಿಸುವವನೂ । **ವಯ್ಯಂ**—ದೇವತೆಗಳಿಂದ ಅಪೇಕ್ಷಿತನೂ । **ಸುಸಂಸದಂ**—ಉತ್ತಮಸ್ಥಾನವುಳ್ಳವನೂ ಆದ । **ಸೋಮಂ**—ಸೋಮದೇವನನ್ನು । **ಮನೀಷಾಃ**— ಧ್ಯಾನಾತ್ಮಕಗಳಾದ । **ಸ್ತುಭಃ**— ಸ್ತುತಿಗಳು । **: ಅಭ್ಯನೂಷತ**—ಪ್ರಶಂಸಿಸುತ್ತವೆ.

॥ ಭಾವಾರ್ಥ ॥

ಮಧುರವಾದ ರಸಯುಕ್ತನಾದ ಯಾವ ಸೋಮದೇವನು ತನ್ನ ಧಾರೆಯೊಡಗೂಡಿದ ವಸತೀವರ್ಯಾದ್ಯುದಕಗಳೊಡನೆ ಅಂತರಿಕ್ಷದಿಂದ ಇಳಿದು ಶತ್ರುಧನವನ್ನು ಅಪಹರಿಸುತ್ತಲೂ, ಮರಣಧರ್ಮರಹಿತನಾಗಿಯೂ ವಾಕ್ಕನ್ನು ಪ್ರೇರಿಸುವನೋ ಅಂತಹವನೂ, ಸುತ್ತಲೂ ಪ್ರವಹಿಸುವವನೂ, ದೇವತೆಗಳಿಂದ ಅಪೇಕ್ಷಿತನೂ, ಉತ್ತಮಸ್ಥಾನವುಳ್ಳವನೂ ಆದ ಸೋಮದೇವನನ್ನು ಧ್ಯಾನಾತ್ಮಕಗಳಾದ ಸ್ತುತಿಗಳು ಪ್ರಶಂಸಿಸುತ್ತವೆ.

### English Translation.

Intelligent praises celebrate the wide-flowing (god) delighting Soma who sits in company, who sits in good company, who exhilarating (falls) in a stream with his water from the sky (and) wealth-conquering, immortal, sends out his voice.

|| ಸಂಹಿತಾಪಾಠಃ ||

ಅಯಂ ದಿವ ಇಯರ್ತಿ ವಿಶ್ವಮಾ ರಜಃ ಸೋಮಃ ಪುನಾನಃ ಕಲಶೇಷು ಸೀದತಿ |
ಅದ್ಭಿರ್ಗೋಭಿರ್ಮೃಜ್ಯತೇ ಅದ್ರಿಭಿಃ ಸುತಃ ಪುನಾನ ಇಂದುರ್ವರಿವೋ ವಿದತ್ಪ್ರಿಯಂ ॥ ೯ ॥

|| ಪದಪಾಠಃ ||

ಅಯಂ | ದಿವಃ | ಇಯರ್ತಿ | ವಿಶ್ವಂ | ಆ | ರಜಃ | ಸೋಮಃ | ಪುನಾನಃ | ಕಲಶೇಷು | ಸೀದತಿ |
ಅತ್ಽಭಿಃ | ಗೋಭಿಃ | ಮೃಜ್ಯತೇ | ಅದ್ರಿಽಭಿಃ | ಸುತಃ | ಪುನಾನಃ | ಇಂದುಃ | ವರಿವಃ | ವಿದತ್ | ಪ್ರಿಯಂ ॥ ೯ ॥

|| ಸಾಯಣಭಾಷ್ಯಂ ||

ಅಯಂ ಸೋಮೋ ದಿವೋ ದ್ಯುಲೋಕಾದ್ವಿಶ್ವಂ ರಜ ಉದಕಮಿಯರ್ತಿ | ಅಭಿಪ್ರಾಪಯತಿ | ಕಿಂಚ ಪುನಾನೋ ದಶಾಪವಿತ್ರೇಣ ಪೂಯಮಾನಃ ಸೋಮಃ ಕಲಶೇಷು ದ್ರೋಣನಾಮಸು ಸೀದತಿ | ತಥಾದ್ರಿಭಿರ್ಗ್ರಾವಭಿರದ್ಭಿರ್ವಸತೀವರ್ಯಾಖ್ಯಾಭಿರ್ಗೋಭಿರ್ಗೋವಿಕಾರೈಃ ಕ್ಷೀರದಧ್ಯಾದಿಭಿಶ್ಚ ಮೃಜ್ಯತೇ | ಶೋಧ್ಯತೇ | ಅಲಂಕ್ರಿಯತೇ | ತತಃ ಪುನಾನಃ ಪೂತ ಇಂದುಃ ಸೋಮಃ ಪ್ರಿಯಂ ಪ್ರಿಯತರಂ ಪ್ರೀಣನಕಾರಿ ವಾ ವರಿವೋ ವರಣೀಯಂ ಧನಂ ವಿದತ್ | ಸ್ತೋತೃಭ್ಯೋ ಲಂಭಯತಿ | ಪ್ರಯಚ್ಛತೀತಿ ಯಾವತ್ ||

|| ಪ್ರತಿಪದಾರ್ಥ ||

ಅಯಂ—ಈ ಸೋಮದೇವನು | ದಿವಃ—ದ್ಯುಲೋಕದಿಂದ | ವಿಶ್ವಂ ರಜಃ—ಸಮಸ್ತ ಉದಕಗಳನ್ನೂ | ಇಯರ್ತಿ—ಪ್ರೇರಿಸುತ್ತಾನೆ | ಪುನಾನಃ—ಶುದ್ಧಿಯನ್ನು ಹೊಂದಿದವನಾಗಿ | **ಸೋಮಃ**—ಸೋಮನು | **ಕಲಶೇಷು**—ದ್ರೋಣ ಕಲಶಗಳಲ್ಲಿ | ಸೀದತಿ—ಸ್ಥಾಪಿತನಾಗುತ್ತಾನೆ | ಅದ್ರಿಭಿಃ—ಹಿಂಡುವ ಕಲ್ಲುಗಳಿಂದ | **ಸುತಃ**—ಹಿಂಡಲ್ಪಟ್ಟು | ಅದ್ಭಿಃ—ಉದಕಗಳಿಂದಲೂ | **ಗೋಭಿಃ**—ಕ್ಷೀರಾದಿಗಳಿಂದಲೂ |

**ಮೃಜ್ಯತೇ**—ಶುದ್ಧನಾಗುತ್ತಾನೆ । **ಪುನಾನಃ**—ಪರಿಶುದ್ಧನಾದ । **ಇಂದುಃ**—ಸೋಮನು । **ಪ್ರಿಯಂ**—ಹಿತಕರವಾದ । **ವರಿವಃ**—ಧನವನ್ನು । **ವಿದತ್**—ಸ್ತೋತೃಗಳಿಗೆ ಒದಗಿಸುತ್ತಾನೆ.

॥ ಭಾವಾರ್ಥ ॥

ಈ ಸೋಮದೇವನು ದ್ಯುಲೋಕದಿಂದ ಸಕಲ ಉದಕಗಳನ್ನೂ ಪ್ರೇರಿಸುತ್ತಾನೆ. ಶುದ್ಧಿಯನ್ನು ಹೊಂದಿದವನಾಗಿ ಸೋಮನು ದ್ರೋಣಕಲಶಗಳಲ್ಲಿ ಸ್ಥಾಪಿತನಾಗುತ್ತಾನೆ. ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟು ಉದಕಗಳಿಂದಲೂ ಕ್ಷೀರಾದಿಗಳಿಂದಲೂ ಮಿಶ್ರಿತನಾಗಿ ಪರಿಶುದ್ಧನಾಗುತ್ತಾನೆ. ಪರಿಶುದ್ಧನಾದ ಸೋಮನು ಹಿತಕರವಾದ ಧನಗಳನ್ನು ಸ್ತೋತೃಗಳಿಗೆ ಒದಗಿಸುತ್ತಾನೆ

English Translation

This Soma sends from heaven all water ; being filtered he settles in the vessels ; effused with the stones he is cleansed with water and milk ; the filtered Indu bestows delightful wealth.

॥ ಸಂಹಿತಾಪಾಠಃ ॥

ಏವಾ ನಃ ಸೋಮ ಪರಿಷಿಚ್ಯಮಾನೋ ವಯೋ ದಧಚ್ಚಿತ್ರತಮಂ ಪವಸ್ವ ।
ಅದ್ವೇಷೇ ದ್ಯಾವಾಪೃಥಿವೀ ಹುವೇಮ ದೇವಾ ಧತ್ತ ರಯಿಮಸ್ಮೇ
ಸುವೀರಂ ॥ ೧೦ ॥

॥ ಪದಪಾಠಃ ॥

ಏವ । ನಃ । ಸೋಮ । ಪರಿಽಸಿಚ್ಯಮಾನಃ । ವಯಃ । ದಧತ್ । ಚಿತ್ರಽತಮಂ । ಪವಸ್ವ ।
ಅದ್ವೇಷೇ ಇತಿ । ದ್ಯಾವಾಪೃಥಿವೀ ಇತಿ । ಹುವೇಮ । ದೇವಾಃ । ಧತ್ತ । ರಯಿಂ । ಅಸ್ಮೇ ಇತಿ ।
ಸುಽವೀರಂ ॥ ೧೦ ॥

॥ ಸಾಯಣಭಾಷ್ಯಂ ॥

ಅಯಂ ಪ್ರತ್ಯಕ್ಷಕೃತಃ । ಹೇ ಸೋಮ ದಧತ್ಪ್ರಯಚ್ಛಂಸ್ತ್ವಂ ಪರಿಷಿಚ್ಯಮಾನಃ ಪರಿತೋಽದ್ಭಿರ್ಗೋಭಿರ್ವಾ ಸಿಚ್ಯಮಾನ ಏವ ಚಿತ್ರತಮಂ ಚಿತ್ರಂ ನಾನಾವಿಧಂ ಚಾಯನೀಯತಮಂ ವಾ ವಯೋಽನ್ನಂ ನೋಽಸ್ಮಭ್ಯಂ ಪವಸ್ವ । ಪ್ರಾಪಯ । ಪ್ರಯಚ್ಛೇತಿ ಯಾವತ್ । ಕಿಂಚಾದ್ವೇಷೇ ದ್ವೇಷರಹಿತೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಹುವೇಮ । ಹವಿಷ್ಪ್ರದಾನಾರ್ಥಂ ವಯಮಾಹ್ವಯೇಮ । ಹೇ ದೇವಾಃ

**ಯೊಾಯಂ ಚ ಸುವೀರಂ । ವೀರಃ ಕರ್ಮಣಿ ಸಮರ್ಥಃ ಪುತ್ರಃ । ತಾದೃಶಪುತ್ರೋಪೇತಂ ರಯಿಂ ಧನಮಸ್ಮೇ ಅಸ್ಮಾಸು ಧತ್ತ । ನಿಧತ್ತ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ದಧತ್**—ಸಂಪತ್ತನ್ನು ಹೊಂದಿರುವ ನೀನು । **ಪರಿಷಿಚ್ಯಮಾನಃ-ಏವ**—ನಮ್ಮಿಂದ ಸೇಚಿತನಾದೊಡನೆಯೇ । **ಚಿತ್ರತಮಂ**—ಅನೇಕ ವಿಧವಾದ । **ವಯಃ**—ಅನ್ನವನ್ನೂ । **ನಃ**—ನಮಗೆ । **ಪವಸ್ವ**—ಒದಗಿಸು । **ಅದ್ವೇಷೇ**—ನಮಗೆ ಕೇಡನ್ನು ಬಯಸದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೆರಡನ್ನೂ । **ಹುವೇಮ**—ನಾವು ಪ್ರಾರ್ಥಿಸಿ ಕರೆಯೋಣ । **ದೇವಾಃ**—ಎಲೈ ದೇವತೆಗಳೇ । **ಸುವೀರಂ**—ಉತ್ತಮರಾದ ವೀರಪುತ್ರರಿಂದ ಕೂಡಿದ । **ರಯಿಂ**—ಧನವನ್ನು । **ಅಸ್ಮೇ**—ನಮ್ಮಲ್ಲಿ । **ಧತ್ತ**—ಸ್ಥಾಪಿಸಿರಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ಸಂಪತ್ತನ್ನು ಹೊಂದಿರುವ ನೀನು ನಮ್ಮಿಂದ ಸೇಚಿತನಾದೊಡನೆಯೇ ಅನೇಕ ವಿಧವಾದ ಅನ್ನವನ್ನೂ ನಮಗೆ ಒದಗಿಸು. ನಮಗೆ ಕೇಡನ್ನು ಬಯಸದ ದ್ಯಾವಾ ಪೃಥಿವಿಗಳೆರಡನ್ನೂ ನಾವು ಪ್ರಾರ್ಥಿಸಿ ಕರೆಯೋಣ. ಎಲೈ ದೇವತೆಗಳೇ, ಉತ್ತಮರಾದ ವೀರಪುತ್ರರಿಂದ ಕೂಡಿದ ಧನವನ್ನು ನಮ್ಮಲ್ಲಿ ಸ್ಥಾಪಿಸಿರಿ.

English Translation

Soma offering (wealth) as soon as you are sprinkled (with the water and milk), pour various kinds of food (upon us) ; let us invoke the friendly heaven and earth : do you ; O gods grant us wealth with excellent male off-spring.

## ಅರವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಷುರ್ನೇತಿ ದಶರ್ಚಂ ದ್ವಿತೀಯಂ ಸೂಕ್ತಂ । ಆಂಗಿರಸಸ್ಯ ಹಿರಣ್ಯಸ್ತೂಪಸ್ಯಾರ್ಷಂ ಪವಮಾನ-ಸೋಮದೇವತಾಕಂ । ನವಮೀದಶಮ್ಯೌ ತ್ರಿಷ್ಟುಭೌ । ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ಇಷುರ್ನ ಹಿರಣ್ಯಸ್ತೂಪೋಽಂತ್ಯೇ ತ್ರಿಷ್ಟುಭಾವಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಇಷುರ್ನ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಹಿರಣ್ಯಸ್ತೂಪ ಆಂಗಿರಸಃ ಎಂಬುವನು ಋಷಿಯು; ಪವಮಾನ ಸೋಮನು ದೇವತೆಯು; ಈ ಸೂಕ್ತದ ಒಂಭತ್ತು ಮತ್ತು ಹತ್ತನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸವು. ಉಳಿದ ಋಕ್ಕುಗಳು ಜಗತೀಛಂದಸ್ಸವು. ಅನುಕ್ರಮಣಿಕೆಯಲ್ಲಿ—**ಇಷುರ್ನ ಹಿರಣ್ಯಸ್ತೂಪೋಽನ್ತ್ಯೇ ತ್ರಿಷ್ಟುಭೌ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೯

ಮಂಡಲ—೯ || ಅನುವಾಕ—೪ || ಸೂಕ್ತ—೬೯ ||
ಅಷ್ಟಕ—೭ || ಅಧ್ಯಾಯ—೨ || ವರ್ಗ—೨೧, ೨೨||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ||
|| ಋಷಿಃ—ಹಿರಣ್ಯಸ್ತೂಪಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ— ೧-೮. ಜಗತೀ | ೯-೧೦. ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಇಷುರ್ನ ಧನ್ವನ್ಪ್ರತಿ ಧೀಯತೇ ಮತಿರ್ವತ್ಸೋ ನ ಮಾತುರುಪ ಸರ್ಜ್ಯೂಧನಿ |
ಉರುಧಾರೇವ ದುಹೇ ಅಗ್ರ ಆಯತ್ಯಸ್ಯ ವ್ರತೇಷ್ವಪಿ ಸೋಮ ಇಷ್ಯತೇ ||೧||

|| ಪದಪಾಠಃ ||

ಇಷುಃ | ನ | ಧನ್ವನ್ | ಪ್ರತಿ | ಧೀಯತೇ | ಮತಿಃ | ವತ್ಸಃ | ನ | ಮಾತುಃ | ಉಪ | ಸರ್ಜಿ | ಊಧನಿ |
ಉರುಧಾರಾಽಇವ | ದುಹೇ | ಅಗ್ರೇ | ಆಽಯತೀ | ಅಸ್ಯ | ವ್ರತೇಷು | ಅಪಿ | ಸೋಮಃ | ಇಷ್ಯತೇ ||೧||

|| ಸಾಯಣಭಾಷ್ಯಂ ||

ಅಸ್ಮಿನ್ಪವಮಾನರೂಪ ಇಂದ್ರೇ ಮತಿರ್ಮನನೀಯಾಸ್ಮದೀಯಾಃ ಸ್ತುತಿಃ ಪ್ರತಿ ಧೀಯತೇ | ಅಸ್ಮಾಭಿರ್ನಿಧೀಯತೇ ವಾ || ದಧಾತೇ ರೂಪಂ || ತತ್ರ ದೃಷ್ಟಾಂತಃ | ಇಷುರ್ನ ಯಥೇಷುಃ ಶರೋ ಧನ್ವನ್ ಧನುಷಿ ಪ್ರತಿ ಧೀಯತೇ ತದ್ವತ್ | ಕಿಂಚೋಧನಿ ಸರ್ವಸ್ಯ ಪೋಷಯಿತೃತ್ವೇನೋಧಃಸ್ಥಾನೀಯ ಇಂದ್ರೇ ಸೋಮೋ ಮದಾರ್ಥಮಸ್ಮಾಭಿರುಪ ಸರ್ಜಿ | ಉಪಸೃಜ್ಯತೇ | ಕಥಮಿವ | ಮಾತುರ್ಗೋರೂಧನಿ ಪಯೋಧಾರಕೇ ವತ್ಸೋ ನ ವತ್ಸೋ ಯಥಾ ಪಯಃಪಾನಾರ್ಥಂ ಸೃಜ್ಯತೇ ತದ್ವತ್ | ಉರುಧಾರೇವ ಬಹುವಿಧಪಯೋಧಾರಾ ಗೌರಿವಾಗ್ರೇ ವತ್ಸಸ್ಯ ಪುರತ ಆಯತೀ ಗಚ್ಛಂತೀ ಸತೀ ಪಯೋ ದುಹೇ ದುಗ್ಧೇ ತಥಾ ಸೋಽಯಮಿಂದ್ರೋ ವತ್ಸಭೂತೇಭ್ಯಃ ಸ್ತೋತೃಭ್ಯಃ ಪುರತೋ ಗಚ್ಛನ್ ಬಹುವಿಧಾನ್ಕಾಮಾನ್ದುಗ್ಧೇ| ಕಿಂಚಾಸ್ಯೈತಾದೃಶಸ್ಯ ವ್ರತೇಷ್ವಪಿ ಸೋಮ ಇಷ್ಯತೇ | ಯಷ್ಟೃಭಿಃ ಪ್ರೇರ್ಯತೇ ಖಲು ||

|| ಪ್ರತಿಪದಾರ್ಥ ||

ಧನ್ವನ್—ಧನುಸ್ಸಿನಲ್ಲಿ | ಇಷುಃ ನ— ಬಾಣವು ಸೇರಿಕೊಳ್ಳುವಂತೆ | ಮತಿಃ—ನಮ್ಮ ಸ್ತುತಿಯು | ಪ್ರತಿ ಧೀಯತೇ—ಇಂದ್ರನಲ್ಲಿ ಸೇರಿಕೊಳ್ಳುತ್ತದೆ | ಮಾತುಃ—ತಾಯಿಯಾದ ಗೋವಿನ | ಊಧನಿ—

ಕೆಚ್ಚಲು ಪ್ರದೇಶಕ್ಕೆ| **ವತ್ಸೋ ನ**—ಕರುವನ್ನು ಹಾಲು ಕುಡಿಯಲು ಬಿಡುವಂತೆ | **ಊಧನಿ**—ಸರ್ವಪೋಷಕನಾದ ಇಂದ್ರನಲ್ಲಿಗೆ | **ಉಪಸರ್ಜಿ**—(ಅವನ ತೃಪ್ತ್ಯರ್ಥವಾಗಿ) ಸೋಮವು ಬಿಡಲ್ಪಟ್ಟಿದೆ;(ಅರ್ಪಿತವಾಗಿದೆ) **ಉರುಧಾರಾ**—ಅಧಿಕವಾಗಿ ಹಾಲನ್ನು ಧಾರಾರೂಪದಲ್ಲಿ ಸುರಿಸಬಲ್ಲ ಧೇನುವು | **ಅಗ್ರೇ**—ಕರುವಿನ ಮುಂದೆ | **ಆಯತೀ**—ಹೋಗುವಾಗ | **ದುಹೇ ಇವ**—ಪ್ರಭೂತವಾಗಿ ಹಾಲನ್ನು ಕರೆಯುವಂತೆ ( ಇಂದ್ರನು ಯಜಮಾನನಲ್ಲಿಗೆ ಬಂದಾಗ ಅಧಿಕವಾದ ಸಂಪತ್ತನ್ನು ಸುರಿಸುತ್ತಾನೆ) | **ಅಸ್ಯ**—ಈ ಇಂದ್ರನನ್ನುದ್ದೇಶಿಸಿ ಮಾಡುವ | **ವ್ರತೇಷ್ವಪಿ**—ಯಜ್ಞಾದಿಗಳಲ್ಲಿ | **ಸೋಮಃ**—ಸೋಮವು | **ಇಷ್ಯತೇ**—ಅರ್ಪಿತವಾಗುತ್ತದೆ.

|| ಭಾವಾರ್ಥ ||

ಧನುಸ್ಸಿನಲ್ಲಿ ಬಾಣವು ಸೇರಿಕೊಳ್ಳುವಂತೆ ನಮ್ಮ ಸ್ತುತಿಯು ಇಂದ್ರನಲ್ಲಿ ಸೇರಿಕೊಳ್ಳುತ್ತದೆ. ತಾಯಿಯಾದ ಗೋವಿನ ಕೆಚ್ಚಲು ಪ್ರದೇಶಕ್ಕೆ ಕರುವನ್ನು ಹಾಲುಕುಡಿಯಲು ಬಿಡುವಂತೆ ಸರ್ವಪೋಷಕನಾದ ಇಂದ್ರನಲ್ಲಿಗೆ ಅವನ ತೃಪ್ತ್ಯರ್ಥವಾಗಿ ಸೋಮವು ಅರ್ಪಿತವಾಗಿದೆ. ಅಧಿಕವಾದ ಹಾಲನ್ನು ಧಾರಾರೂಪದಲ್ಲಿ ಸುರಿಸಬಲ್ಲ ಧೇನುವು ಕರುವಿನ ಮುಂದೆ ಹೋಗುವಾಗ ಪ್ರಭೂತವಾಗಿ ಹಾಲನ್ನು ಕರೆಯುವಂತೆ ಇಂದ್ರನು ಯಜಮಾನನಲ್ಲಿಗೆ ಬಂದಾಗ ಅಧಿಕವಾದ ಸಂಪತ್ತನ್ನು ಸುರಿಸುತ್ತಾನೆ. ಈ ಇಂದ್ರನ ಪರವಾದ ಯಜ್ಞಗಳಲ್ಲಿ ಸೋಮವು ಅರ್ಪಿತವಾಗುತ್ತದೆ.

## English Translation.

(Our) praise is attached (to Indra) as an arrow to the bow ; (the Soma-juice) is let loose to (Indra) the fosterer as a calf to the udder of its mother : (Indra sheds blessings) as a cow having a copious stream of milk yields it when coming into the presence (of the calf) : in Indra's sacrifiices the Soma is stimulated.

|| ಸಂಹಿತಾಪಾಠಃ ||

ಉಪೋ ಮತಿಃ ಪೃಚ್ಯತೇ ಸಿಚ್ಯತೇ ಮಧು ಮಂದ್ರಾಜನೀ ಚೋದತೇ ಅಂತರಾಸನಿ |
ಪವಮಾನಃ ಸಂತನಿಃ ಪ್ರಘ್ನತಾಮಿವ ಮಧುಮಾನ್ದ್ರಪ್ಸಃ ಪರಿ ವಾರಮರ್ಷತಿ || ೨ ||

| ಪದಪಾಠಃ ||

ಉಪೋ ಇತಿ | ಮತಿಃ | ಪೃಚ್ಯತೇ | ಸಿಚ್ಯತೇ | ಮಧು | ಮಂದ್ರಽಅಜನೀ | ಚೋದತೇ | ಅಂತಃ | ಆಸನಿ |
ಪವಮಾನಃ | ಸಂಽತನಿಃ | ಪ್ರಘ್ನತಾಂಽಇವ | ಮಧುಽಮಾನ್ | ದ್ರಪ್ಸಃ | ಪರಿ | ವಾರಂ | ಅರ್ಷತಿ || ೨ ||

|| ಸಾಯಣಭಾಷ್ಯಂ ||

ಅಸ್ಮಿನ್ಪವಮಾನರೂಪ ಇಂದ್ರೇ ಮತಿಃ ಸ್ತುತಿರೂಪೋ ಪೃಚ್ಯತೇ । ಉಪಪೃಚ್ಯತೇ । ಸ್ತೋತೃಭಿಃ ಸಂಯೋಜ್ಯತೇ ॥ ಪೃಚೀ ಸಂಪರ್ಕೇ ॥ ತಥಾ ಮಧು ಮದಕರಃ ಸೋಮ ಇಂದ್ರಾರ್ಥಂ ಸಿಚ್ಯತೇ । ಅದ್ಭಿರ್ಯವಸಕ್ತುಭಿಶ್ಚ ಸಿಕ್ತೋ ಭವತಿ । ತತಶ್ಚ ಮಂದ್ರಾಜನೀ ॥ ಅಜ ಗತಿಕ್ಷೇಪಣಯೋರಿತ್ಯಸ್ಯ ಲ್ಯುಟಿ ಜೀಪಿ ರೂಪಂ ॥ ಮದಕರಸ್ಯ ರಸಸ್ಯ ಪ್ರೇರಯಿತ್ರೀ ಸೋಮಧಾರಾ ತಸ್ಯೇಂದ್ರಸ್ಯಾಸನ್ಯಾಸ್ಯೇಽಂತರ್ಮಧ್ಯೇ ಚೋದತೇ । ಯಷ್ಟೃಭಿಃ ಪ್ರೇರ್ಯತೇ ॥ ಆಸ್ಯಶಬ್ದಸ್ಯ ಪದ್ದನ್ನೋಮಾಸಿತ್ಯಾದಿನಾಸನ್ನಿತ್ಯಾದೇಶಃ ॥ ಕಿಂಚ ಸಂತನಿರ್ಗ್ರಹಾದಿಷು ಸಮ್ಯಗ್ವಿಸ್ತೃತೋ ಮಧುಮಾನ್ ಮದಕರರಸವಾನ್ ಪವಮಾನಃ ಪೂಯಮಾನಃ ಸೋಮೋ ದ್ರಪ್ಸೋ ದ್ರುತಗಮನಶೀಲೋ ಯದ್ವಾ ಕ್ಷಿಪ್ರಂಹಸನಶೀಲಃ ಸನ್ ವಾರಮವಿವಾಲಮಯಂ ಪವಿತ್ರಂ ಪರಿತೋಽರ್ಷತಿ । ಆಗಚ್ಛತಿ । ತತ್ರ ದೃಷ್ಟಾಂತಃ । ಪ್ರಘ್ನತಾಮಿವ ಪ್ರಕರ್ಷೇಣ ಹಂತ್ರೃಣಾಂ ಯೋದ್ಧೃಣಾಂ ಸಂತನಿಃ ಸಮ್ಯಗ್ವಿಸೃಷ್ಟಃ ಶರೋ ಯಥಾ ಶೀಘ್ರಂ ಪ್ರಾಪ್ಯಮಭಿತೋ ಗಚ್ಛತಿ ತದ್ವತ್ ॥

|| ಪ್ರತಿಪದಾರ್ಥ ||

**ಮತಿಃ**—ಸ್ತುತಿಯು । **ಉಪೋ ಪೃಚ್ಯತೇ**—ಇಂದ್ರನೊಡನೆ ಯೋಜಿಸಲ್ಪಡುತ್ತದೆ । **ಮಧು**—ಮದಕರವಾದ ಸೋಮವು । **ಸಿಚ್ಯತೇ**—ಸೇಕಿಸಲ್ಪಡುತ್ತದೆ । **ಮಂದ್ರಾಜನೀ**—ಹರ್ಷಕರವಾದ ಸೋಮ ಧಾರೆಯು । **ಆಸನಿ ಅಂತಃ**—ಇಂದ್ರನ ಮುಖದ ಮಧ್ಯದಲ್ಲಿ । **ಚೋದತೇ**—ಅರ್ಪಿತವಾಗುತ್ತದೆ **ಪ್ರಘ್ನತಾಂ ಇವ**—ಯೋಧರಬಾಣವು ವೇಗವಾಗಿ ಮುನ್ನುಗ್ಗುವಂತೆ । **ಸಂತನಿಃ**—ಪಾತ್ರೆಗಳಲ್ಲಿ ಹರಡಿರುವುದೂ **ಮಧುಮಾನ್**—ರುಚಿಕರವಾದುದೂ । **ಪವಮಾನಃ**—ಶುದ್ಧಿಯನ್ನು ಹೊಂದುವುದೂ ಆದ ಸೋಮವು । **ದ್ರಪ್ಸಃ**—। ವೇಗಗಾಮಿಯಾಗಿ । **ವಾರಂ**—ದಶಾಪವಿತ್ರವನ್ನು । **ಪರಿ ಅರ್ಷತಿ**—ಸುತ್ತಲೂಹೋಗಿ ಸೇರುತ್ತದೆ.

|| ಪ್ರತಿಪದಾರ್ಥ ||

ಸ್ತುತಿಯು ಇಂದ್ರನಿಗೆ ಅರ್ಪಿತವಾಗಿ ಅವನೊಂದಿಗೆ ಯೋಜಿತವಾಗುತ್ತದೆ. ಮದಕರವಾದ ಸೋಮವು ಸೇಕಿಸಲ್ಪಡುತ್ತದೆ. ಹರ್ಷಕಾರಕವಾದ ಸೋಮಧಾರೆಯು ಇಂದ್ರನ ಮುಖದ ಮಧ್ಯದಲ್ಲಿ ಅರ್ಪಿತವಾಗುತ್ತದೆ. ಯೋಧರ ಬಾಣವು ವೇಗವಾಗಿ ಮುನ್ನುಗ್ಗುವಂತೆ ಪಾತ್ರಾದಿಗಳಲ್ಲಿ ಹರಡಿರುವುದೂ, ರುಚಿಕರವಾದುದೂ, ಶುದ್ಧಿಯನ್ನು ಹೊಂದುವುದೂ, ಆದ ಸೋಮವು ವೇಗಗಾಮಿಯಾಗಿದ್ದು ದಶಾಪವಿತ್ರನನ್ನು ಹೋಗಿ ಸೇರುತ್ತದೆ.

## English Translation.

The praise is united (to Indra) ; the excellent (Soma) is sprinkled : (the Soma stream) emitting pleasant juice is driven into (Indra's) mouth : the filtered diffused exhilarating swift-flowing (Soma) hastens to the fleece like the arrow of the combatants.

॥ ಸಂಹಿತಾಪಾಠಃ ॥

ಅವ್ಯೇ ವಧೂಯುಃ ಪವತೇ ಪರಿ ತ್ವಚಿ ಶ್ರಥ್ನೀತೇ ನಪ್ತೀರದಿತೇರೃತಂ ಯತೇ ।
ಹರಿರಕ್ರಾನ್ಯಜತಃ ಸಂಯತೋ ಮದೋ ನೃಮ್ಣಾ ಶಿಶಾನೋ ಮಹಿಷೋ ನ ಶೋಭತೇ ॥ ೩ ॥

॥ ಪದಪಾಠಃ ॥

ಅವ್ಯೇ । ವಧೂಽಯುಃ । ಪವತೇ । ಪರಿ । ತ್ವಚಿ । ಶ್ರಥ್ನೀತೇ । ನಪ್ತೀಃ । ಅದಿತೇಃ । ಋತಂ । ಯತೇ ।
ಹರಿಃ । ಅಕ್ರಾನ್ । ಯಜತಃ । ಸಂಽಯತಃ । ಮದಃ । ನೃಮ್ಣಾ । ಶಿಶಾನಃ । ಮಹಿಷಃ । ನ । ಶೋಭತೇ ॥

॥ ಸಾಯಣಭಾಷ್ಯಂ ॥

ವಧೂಯುಃ । ವಧೂಭೂತಾ ವಸತೀವರ್ಯ ಏಕಧನಾಸಹಿತಾ ಆಪಃ । ತದ್ವಾನ್ ಸೋಮೋಽವ್ಯೇಽವೇಃ ಸ್ವಭೂತೇ ತ್ವಚಿ ಚರ್ಮಣಿ ಪರಿ ಪವತೇ । ಪರಿತೋ ವರ್ತತೇ । ಪೂತೋ ಭವತಿ । ಕಿಂಚ ನಪ್ತೀರ್ನಪ್ತ್ರೀಃ । ನಪ್ತೃಶಬ್ದಶ್ಚತುರ್ಥಾಪತ್ಯವಾಚೀ । ಸೋಮಸ್ಯ ನಪ್ತ್ರೀಃ । ಸೋಮೋ ಹ್ಯೋಷಧೀನಾಮಗ್ರೇ ರೇತೋ ನಿಷಿಂಚತಿ । ಪ್ರಜಾಪತೇ ರೇತೋ ದೇವಾ ದೇವಾನಾಂ ರೇತೋ ವರ್ಷಂ ವರ್ಷಸ್ಯ ರೇತ ಓಷಧಯ ಇತಿ ಶ್ರುತೇಃ । ಯದ್ವಾ । ನಪ್ತೃಶಬ್ದೋಽಪತ್ಯವಾಚೀ । ತಸ್ಯಾಪತ್ಯಾನಿ । ಸೋಮಃ ಸುಧಾಮಯೈಃ ಸ್ವಕಿರಣೈರೋಷಧೀರ್ವರ್ಧಯತಿ । ತಸ್ಮಾದಪತ್ಯಭೂತಾಃ । ಅದಿತೇಃ । ಪೃಥಿವೀನಾಮೈತತ್ । ಅದೀನಾಯಾಃ ಪೃಥಿವ್ಯಾ ಉತ್ಪನ್ನಾ ಓಷಧೀರೃತಂ ಸತ್ಯರೂಪಂ ಯಜ್ಞಂ ಯತೇ ಗಚ್ಛತೇ ಯಜಮಾನಾಯ ಶ್ರಥ್ನೀತೇ । ಅಗ್ರಭಾಗೇ ಫಲಿನೀಃ ಕರ್ತುಂ ವಿಶ್ಲೇಷಯತಿ । ಕಿಂಚ ಹರಿರ್ಹರಿತವರ್ಣೋ ಯಜತಃ ಸರ್ವೈರ್ಯಷ್ಟವ್ಯಃ ಅತ ಏವ ಸಂಯತೋ ಗ್ರಹಾದಿಷು ಸಂಗೃಹೀತೋ ಮದಃ । ಮಾದ್ಯತ್ಯನೇನೇತಿ ಮದಃ ಸೋಮಃ । ತಾದೃಶೋಽಕ್ರಾನ್ । ಕ್ರಾಮತಿ । ಪಾತ್ರೇಷ್ವವತಿಷ್ಠತೇ । ಯದ್ವಾ । ಶತ್ರೂನತಿಕ್ರಾಮತಿ ॥ ಕ್ರಮೇರ್ಲುಙಿ ತಿಪಿ ಬಹುಲಂ ಛಂದಸೀತೀಡಾಗಮಾಭಾವಾದ್ವೃದ್ಧೌ ಕೃತಾಯಾಂ ಸಿಜ್ಲೋಪೇ ಸತಿ ಹಲ್ಙ್ಯಾದಿನಾ ತಿಪೋ ಲೋಪೇ ಮೋ ನೋ ಧಾತೋರಿತಿ ನತ್ವೇ ಕೃತೇ ರೂಪಂ ॥ ಅತ ಏವ ಸೋಮ ನೃಮ್ಣಾ ಸ್ವಬಲಾನಿ ಶಿಶಾನಸ್ತೀಕ್ಷ್ಣೀಕುರ್ವನ್ ಅಥವಾ ಶತ್ರುಬಲಾನಿ ತನೂಕುರ್ವನ್ ಮಹಿಷೋ ನ । ಮಹನ್ನಾಮೈತತ್ । ಮಹಾನಿವ ಸರ್ವತ್ರ ವ್ಯಾಪ್ತ ಇವ ಶೋಭತೇ । ಸ್ವತೇಜಸಾ ಸರ್ವತ್ರ ದೀಪ್ಯತೇ । ಯದ್ವಾ । ನಃ ಸಂಪ್ರತ್ಯರ್ಥೇ । ಇದಾನೀಮೇವಂಗುಣಯುಕ್ತೋ ಮಹಾನ್ ಸೋಮಃ ಶೋಭತ ಇತಿ ॥

|| ಪ್ರತಿಪದಾರ್ಥ ||

**ವಧೂಯುಃ**-ವಸತೀವರೀರೂಪವಾದ ವಧುವನ್ನು ಅಪೇಕ್ಷಿಸುವ ಸೋಮವು | **ಆವ್ಯೇ**—ಆಡಿನ | **ಶ್ವತಿ**—ಚರ್ಮದಮೇಲೆ | **ಪರಿ ಪವತೇ**—ಶುದ್ಧಿಯನ್ನು ಹೊಂದುತ್ತಾನೆ | **ಋತಂ**—ಸತ್ಯಾತ್ಮಕವಾದ ಯಜ್ಞವನ್ನು | **ಯತೇ**—ನೆರವೇರಿಸುವ ಯಜಮಾನನ ಹಿತಾರ್ಥವಾಗಿ | **ನಪ್ತ್ರೀಃ**—ತನ್ನ ಪುತ್ರೀರೂಪಿಯರಾದವರೂ | **ಅದಿತೇಃ**—ಪೃಥ್ವಿಯಲ್ಲಿ ಉತ್ಪನ್ನರಾದವರೂ ಆದ ಓಷಧಿಗಳನ್ನು | **ಶೃಥ್ನೀತೇ**—ಫಲಗಳನ್ನು ಬಿಡುವಂತೆ ವಿಂಗಡಿಸುತ್ತಾನೆ | **ಹರಿಃ**—ಪಚ್ಚೆವರ್ಣಉಳ್ಳವನೂ | **ಯಜತಃ**—ಪೂಜ್ಯನೂ | **ಸಂಯತಃ**— ಶೇಖರಿಸಲ್ಪಟ್ಟವನೂ | **ಮದಃ**—ಹರ್ಷಕಾರಕನೂ ಆದ ಸೋಮನು | **ಅಕ್ರಾನ್**—ಪಾತ್ರೆಗಳನ್ನು ಆಕ್ರಮಿಸುತ್ತಾನೆ | **ನೃಮ್ಣಾ**—ತನ್ನ ಬಲಗಳನ್ನು | **ಶಿಶಾನಃ**—ತೀಕ್ಷ್ಣಪಡಿಸುತ್ತ | **ಮಹಿಷೋ ನ**—ಮಹಾತ್ಮನಂತೆ | **ಶೋಭತೇ**—ಪ್ರಕಾಶಿಸುತ್ತಾನೆ.

|| ಭಾವಾರ್ಥ ||

ವಸತೀವರೀರೂಪವಾದ ವಧುವನ್ನು ಅಪೇಕ್ಷಿಸುವ ಸೋಮನು ಆಡಿನ ಚರ್ಮದ ಮೇಲೆ ಶುದ್ಧಿಯನ್ನು ಹೊಂದುತ್ತಾನೆ. ಸತ್ಯಾತ್ಮಕವಾದ ಯಜ್ಞವನ್ನು ನೆರವೇರಿಸುವ ಯಜಮಾನನ ಹಿತಾರ್ಥವಾಗಿ ತನ್ನ ಪುತ್ರೀರೂಪಿಯರೂ ಪೃಥ್ವಿಯಲ್ಲಿ ಉತ್ಪನ್ನರಾದವರೂ ಆದ ಓಷಧಿಗಳನ್ನು ಫಲಗಳನ್ನು ಬಿಡುವಂತೆ ವಿಂಗಡಿಸುತ್ತಾನೆ. ಪಚ್ಚೆವರ್ಣವುಳ್ಳವನೂ, ಪೂಜ್ಯನೂ ಶೇಖರಿಸಲ್ಪಟ್ಟವನೂ ಹರ್ಷಕಾರಕನೂ ಆದ ಸೋಮನು ಪಾತ್ರೆಗಳನ್ನ ಆಕ್ರಮಿಸುತ್ತಾನೆ. ತನ್ನ ಬಲಗಳನ್ನು ತೀಕ್ಷ್ಣಪಡಿಸುತ್ತ ಮಹಾತ್ಮನಂತೆ ಪ್ರಕಾಶಿಸುತ್ತಾನೆ.

English Translation

(Soma) seeking his spouse is filtered in the sheepskin; he separates his grand-daughters on the earth for the sacrificer: green-tinted, adorable, collected (in the ladles) exhilarating, he overcomes (his foes); sharpening his vigour he shines like one of might.

| ಸಂಹಿತಾಪಾಠಃ ||

ಉಕ್ಷಾ ಮಿಮಾತಿ ಪ್ರತಿ ಯಂತಿ ಧೇನವೋ ದೇವಸ್ಯ ದೇವೀರುಪ ಯಂತಿ
ನಿಷ್ಕೃತಂ |
ಅತ್ಯಕ್ರಮೀದರ್ಜುನಂ ವಾರಮವ್ಯಯಮತ್ಕಂ ನ ನಿಕ್ತಂ ಪರಿ ಸೋಮೋ
ಅವ್ಯತ || ೪ ||

|| ಪದಪಾಠಃ ||

ಉಕ್ಷಾ | ಮಿಮಾತಿ | ಪ್ರತಿ | ಯಂತಿ | ಧೇನವಃ | ದೇವಸ್ಯ | ದೇವೀಃ | ಉಪ | ಯಂತಿ | ನಿಃऽಕೃತಂ |
ಅತಿ | ಅಕ್ರಮೀತ್ | ಅರ್ಜುನಂ | ವಾರಂ | ಅವ್ಯಯಂ | ಅತ್ಕಂ | ನ | ನಿಕ್ತಂ | ಪರಿ | ಸೋಮಃ |
ಅವ್ಯತ || ೪ ||

|| ಸಾಯಣಭಾಷ್ಯಂ ||

ಉಕ್ಷಾ ರೇತಸಃ ಸೇಕ್ತಾ ವೃಷಭಃ ಪುರತೋ ಮಿಮಾತಿ । ಶಬ್ದಾಯತೇ || ಮಾಙ್ ಮಾನೇ ಶಬ್ದೇ ಚ || ತಂ ವೃಷಭಂ ಧೇನವೋ ಗಾವಃ ಪ್ರತಿ ಯಂತಿ | ಅನುಗಚ್ಛಂತಿ | ತಥಾ ದೇವಸ್ಯ ದ್ಯೋತಮಾನಸ್ಯ ನಿಷ್ಕೃತಂ ಸಂಸ್ಕೃತಂ ಸ್ಥಾನಂ ದೇವೀರ್ದೇವ್ಯ ಉಪ ಯಂತಿ | ಉಪಗಚ್ಛಂತಿ | ಅನೇನಾರ್ಥೇನ ಸೋಮಸ್ತುತಿಶ್ಚಾಭಿಧೀಯತೇ | ಸೋಮಃ ಸನ್ ದ್ರೋಣಕಲಶಾಭಿಗಮನಕಾಲೇ ಶಬ್ದಂ ಕರೋತಿ | ತಮನು ಧೇನವಃ ಪ್ರೀಣಯಿತ್ರ್ಯಃ ಸ್ತುತಯಃ ಪರಿಯಂತಿ | ದೇವಸ್ಯ ಸ್ಥಾನಂ ಸ್ತುತಯೋಽಭಿಗಚ್ಛಂತಿ | ತಥಾ ಸೋಽಯಂ ಸೋಮೋಽರ್ಜುನಂ ಶ್ವೇತವರ್ಣಮವ್ಯಯಮವಿಮಯಮವಿಸ್ವಭೂತಂ ವಾರಂ ವಾಲಂ ಪವಿತ್ರಮತ್ಯಕ್ರಮೀತ್ | ಅತಿಕ್ರಾಮತಿ | ಅತಿಕ್ರಮ್ಯ ಪಾತ್ರಾಣಿ ಗಚ್ಛತೀತ್ಯರ್ಥಃ | ಕಿಂಚ ಸೋಮ ಅತ್ಕಂ ನಾತ್ಮೀಯಂ ಕವಚಮಿವ ನಿಕ್ತಮುಜ್ಜ್ವಲಂ ಶ್ರಯಣದ್ರವ್ಯಂ ಪರ್ಯವ್ಯತ | ಪರಿತಃ ಸಂವೃಣೋತಿ ||

|| ಪ್ರತಿಪದಾರ್ಥ ||

ಉಕ್ಷಾ—ವೃಷಭವು | ಮಿಮಾತಿ—ಶಬ್ದ ಮಾಡುತ್ತದೆ | ಧೇನವಃ—ಗೋವುಗಳು | ಪ್ರತಿ ಯಂತಿ—ಅದರ ಸುತ್ತಲೂ ಅನುಸರಿಸುತ್ತವೆ | ದೇವಸ್ಯ—ದೇವತಾತ್ಮನಾದ ಸೋಮನ | ನಿಷ್ಕೃತಂ—ಸುಸಂಸ್ಕೃತವಾದ ಸ್ಥಾನವನ್ನು | ದೇವೀಃ—ಪ್ರಕಾಶಮಾನವಾದ ಸ್ತುತಿಗಳು | ಉಪಯಂತಿ—ಸಮೀಪಿಸುತ್ತವೆ | ಅವ್ಯಯಂ—ಉಣ್ಣೆಯ | ಅರ್ಜುನಂ—ಶುಭ್ರವಾದ | ವಾರಂ—ದಶಾಪವಿತ್ರದ ನೂಲುಗಳನ್ನು | ಅತ್ಯಕ್ರಮೀತ್—ದಾಟಿ ಸೋಮನು ಪಾತ್ರೆಗಳಲ್ಲಿ ಸೇರುತ್ತಾನೆ | ಸೋಮಃ—ಸೋಮನು | ಅತ್ಕಂ ನ—ಕವಚವನ್ನು ಧರಿಸುವಂತೆ | ನಿಕ್ತಂ—ಪ್ರಕಾಶಮಾನವಾದ ಶ್ರಯಣದ್ರವ್ಯವನ್ನು | ಪರಿ ಅವ್ಯತ—ತನ್ನೊಂದಿಗೆ ಸೇರಿಸಿಕೊಳ್ಳುತ್ತಾನೆ.

|| ಭಾವಾರ್ಥ ||

ವೃಷಭವು ಶಬ್ದಮಾಡಿದಾಗ ಗೋವುಗಳು ಅದರ ಸುತ್ತಲೂ ಅನುಸರಿಸುವಂತೆ ದೇವತಾತ್ಮನಾದ ಸೋಮನ ಸುಸಂಸ್ಕೃತವಾದ ಸ್ಥಾನವನ್ನು ಪ್ರಕಾಶಮಾನವಾದ ಸ್ತುತಿಗಳು ಸಮೀಪಿಸುತ್ತವೆ. ಉಣ್ಣೆಯ ಶುಭ್ರವಾದ ದಶಾಪವಿತ್ರದ ನೂಲುಗಳನ್ನು ದಾಟಿ ಸೋಮನು ಪಾತ್ರೆಗಳಲ್ಲಿ ಸೇರುತ್ತಾನೆ. ಸೋಮನು ಕವಚವನ್ನು ಧರಿಸುವಂತೆ ಪ್ರಕಾಶಮಾನವಾದ ಶ್ರಯಣದ್ರವ್ಯವನ್ನು ತನ್ನೊಂದಿಗೆ ಸೇರಿಸಿಕೊಳ್ಳುತ್ತಾನೆ.

## English Translation.

The bull lows, the cows flock around him: the divine (praises) gather round the station of the radiant (Soma): Soma passes through the white sheep-skin; he clothes himself with it as it were with a burnished armour.

|| ಸಂಹಿತಾಪಾಠಃ ||

ಅಮೃಕ್ತೇನ ರುಶತಾ ವಾಸಸಾ ಹರಿರಮರ್ತ್ಯೋ ನಿರ್ಣಿಜಾನಃ ಪರಿ ವ್ಯತ ।
ದಿವಸ್ಪೃಷ್ಠಂ ಬರ್ಹಣಾ ನಿರ್ಣಿಜೇ ಕೃತೋಪಸ್ತರಣಂ ಚಮ್ವೋರ್ನಭ-
ಸ್ಮಯಂ || ೫ ||

|| ಪದಪಾಠಃ ||

ಅಮೃಕ್ತೇನ । ರುಶತಾ । ವಾಸಸಾ । ಹರಿಃ । ಅಮರ್ತ್ಯಃ । ನಿಃऽನಿಜಾನಃ । ಪರಿ । ವ್ಯತ ।
ದಿವಃ । ಪೃಷ್ಠಂ । ಬರ್ಹಣಾ । ನಿಃऽನಿಜೇ । ಕೃತ । ಉಪऽಸ್ತರಣಂ । ಚಮ್ವೋಃ । ನಭಸ್ಮಯಂ || ೫ ||

|| ಸಾಯಣಭಾಷ್ಯಂ ||

ಅಮರ್ತ್ಯೋ ಮನುಷ್ಯಧರ್ಮರಹಿತೋ ಹರಿರ್ಹರಿತವರ್ಣಃ ಸೋಮೋ ನಿರ್ಣಿಜಾನ ಉದಕೇನ ಶೋಧ್ಯಮಾನಃ ಸನ್ನಮೃಕ್ತೇನ || ಮೃಜೀ ಶೌಚಾಲಂಕಾರಯೋಃ || ಅನಿರ್ಣಿಕ್ತೇನಾಪಿ ರುಶತಾ ಸ್ವತಃ ಶುಕ್ಲವರ್ಣೇನ ಪಯೋರೂಪೇಣ ವಾಸಸಾ ಪರಿ ವ್ಯತ । ಪರಿತ ಆಚ್ಛಾದಯತಿ । ಸೋಮೋ ಪರಿಪೂತೇ ಗವ್ಯೇನ ಪಯಸಾ ಮಿಶ್ರೀಕುರ್ವಂತಿ ಖಲು । ತದುಚ್ಯತೇ । ತತಃ ಸೋऽಯಂ ಸೋಮೋ ದಿವೋ ದ್ಯುಲೋಕಸ್ಯ ಪೃಷ್ಠಂ ಪೃಷ್ಠಭಾಗೇ ತಿಷ್ಠಂತಮಾದಿತ್ಯಂ ಬರ್ಹಣಾ ಬರ್ಹಣಾಯ ಪಾಪಾನಾಮುದ್ಯಮನ-ಕಾರಿಣೇ ಪಾಪನಾಶಿನೇ ನಿರ್ನಿಜೇ ನಿರ್ಣೇಜನಾಯ ಪರಿಪವನಾಯ ಕೃತ । ದ್ಯುಲೋಕೇऽಕಾರ್ಷೀತ್ । ಸ ಹಿ ಸ್ವದೀಪ್ತ್ಯಾ ಸರ್ವಂ ನಿರ್ಣೇಕ್ತಿ || ಕೃತ । ಕೃಞೋ ತೇರ್ಲುಙಿ ಹ್ರಸ್ವಾದಿತಿ ಸಿಚೋ ಲೋಪಃ || ತದೇವಾಹ । ಚಮ್ವೋಃ । ದ್ಯಾವಾಪೃಥಿವೀನಾಮೈತತ್ । ಚಮಂತಿ ಭಕ್ಷಯಂತ್ಯತ್ರ ದೇವಾ ಮನುಷ್ಯಾ ಇತಿ । ತಯೋರುಪಸ್ತರಣಮಾಚ್ಛಾದನಶೀಲಂ ನಭಸ್ಮಯಮಾದಿತ್ಯಮಯಮಾದಿತ್ಯಸ್ಯ ಸ್ವಭೂತಂ ತೇಜಶ್ಚ ಸರ್ವೇಷಾಂ ನಿರ್ಣೇಜನಾಯಾಕಾರ್ಷೀತ್ ||

|| ಪ್ರತಿಪದಾರ್ಥ ||

**ಅಮರ್ತ್ಯಃ**—ಮರಣಧರ್ಮರಹಿತನೂ । **ಹರಿಃ**—ಪಚ್ಚೆವರ್ಣವುಳ್ಳವನೂ ಆದ ಸೋಮನು । **ನಿರ್ಣಿಜಾನಃ**—ಶುದ್ಧಿಯನ್ನು ಹೊಂದಿದ್ದರೂ । **ಅಮೃಕ್ತೇನ**—ಸಂಸ್ಕಾರವನ್ನು ಹೊಂದದೇ ಇರುವುದೂ । **ರುಶತಾ**—ಬಿಳೀಬಣ್ಣವುಳ್ಳದ್ದೂ ಆದ । **ವಾಸಸಾ**—ಕ್ಷೀರರೂಪವಾದ ಬಟ್ಟೆಯಿಂದ । **ಪರಿವ್ಯತ**—ಹೊದ್ದಿಸಲ್ಪಡುತ್ತಾನೆ । **ದಿವಃ**—ಅಂತರಿಕ್ಷದ। **ಪೃಷ್ಠಂ**—ಪೃಷ್ಠಭಾಗದಲ್ಲಿರುವ ಆದಿತ್ಯನನ್ನು। **ಬರ್ಹಣಾ**—ಜಗತ್ತಿನ ಪಾಪನಾಶಕ್ಕಾಗಿಯೂ । **ನಿರ್ನಿಜೇ**—ಜಗತ್ತಿನ ಶುದ್ಧಿಗಾಗಿಯೂ । **ಕೃತ**—ನಿರ್ಮಿಸಿದನು । **ಚಮ್ವೋಃ**—ದ್ಯಾವಾಪೃಥಿವಿಗಳೆರಡನ್ನೂ । **ಉಪಸ್ತರಣಂ**—ಆಚ್ಛಾದಿಸುವ (ಆವರಿಸುವ) । **ನಭಸ್ಮಯಂ**—ಆದಿತ್ಯನ ತೇಜಸ್ಸನ್ನು ನಿರ್ಮಿಸಿದನು.

|| ಭಾವಾರ್ಥ ||

ಮರಣಧರ್ಮರಹಿತನೂ, ಪಚ್ಚೆವರ್ಣವುಳ್ಳವನೂ ಆದ ಸೋಮದೇವನು ಶುದ್ಧಿಯನ್ನು ಹೊಂದಿದ್ದರೂ ಸಹ ಸಂಸ್ಕಾರವನ್ನು ಹೊಂದದೇ ಇರುವುದೂ ಬಿಳೀವರ್ಣವುಳ್ಳದ್ದೂ ಆದ ಕ್ಷೀರರೂಪವಾದ ಬಟ್ಟೆಯಿಂದ ಆಚ್ಛಾದಿತ ನಾಗುತ್ತಾನೆ. ಅಂತರಿಕ್ಷದ ಪೃಷ್ಠಭಾಗದಲ್ಲಿರುವ ಆದಿತ್ಯನನ್ನು ಜಗತ್ತಿನ ಪಾಪನಾಶಕ್ಕಾಗಿಯೂ, ಜಗತ್ತಿನ ಶುದ್ಧಿಗಾಗಿಯೂ ನಿರ್ಮಿಸಿದನು. ದ್ಯಾವಾಪೃಥಿಥಿಗಳೆರಡನ್ನೂ ಆವರಿಸುವ ಆದಿತ್ಯನ ತೇಜಸ್ಸನ್ನೂ ನಿರ್ಮಿಸಿದನು.

English Translation.

The immortal green-tinted Soma when purified is arranged in an uncleansed shining vestment; he has created (Aditya) who stands on the back of the sky for the destruction (of sin) and purification, (and has created) Aditya's brilliance, the cover of the two worlds.

|| ಸಂಹಿತಾಪಾಠಃ ||

ಸೂರ್ಯಸ್ಯೇವ ರಶ್ಮಯೋ ದ್ರಾವಯಿತ್ನವೋ ಮತ್ಸರಾಸಃ ಪ್ರಸುಪಃ ಸಾಕಮೀರತೇ ।
ತಂತುಂ ತತಂ ಪರಿ ಸರ್ಗಾಸ ಆಶವೋ ನೇಂದ್ರಾದೃತೇ ಪವತೇ ಧಾಮ ಕಿಂ ಚನ ॥ ೬ ॥

|| ಪದಪಾಠಃ ||

ಸೂರ್ಯಸ್ಯಽಇವ । ರಶ್ಮಯಃ । ದ್ರವಯಿತ್ನವಃ । ಮತ್ಸರಾಸಃ । ಪ್ರಽಸುಪಃ । ಸಾಕಂ । ಈರತೇ ।
ತಂತುಂ । ತತಂ । ಪರಿ । ಸರ್ಗಾಸಃ । ಆಶವಃ । ನ । ಇಂದ್ರಾತ್ । ಋತೇ । ಪವತೇ । ಧಾಮ । ಕಿಂ । ಚನ ॥

|| ಸಾಯಣಭಾಷ್ಯಂ ||

ಸೂರ್ಯಸ್ಯ ರಶ್ಮಯಃ ಸರ್ವಸ್ಯ ಪ್ರೇರಕಸ್ಯ ಸುವೀರ್ಯಸ್ಯ ವಾದಿತ್ಯಸ್ಯ ರಶ್ಮಯಃ ಸರ್ವತೋ ವ್ಯಾಪಕಾಃ ಕಿರಣಾ ಇವ ದ್ರಾವಯಿತ್ನವಃ ಸರ್ವತ್ರದ್ರವಣಶೀಲಾ ಮತ್ಸರಾಸೋ ಮದಕರಾಃ ಪ್ರಸುಪಃ ಶತ್ರೂಣಾಂ ಪ್ರಸ್ವಾಪಕಾ ಹಂತಾರ ಆಶವೋ ಗ್ರಹೇಷು ಚಮಸೇಷು ಚ ವ್ಯಾಪ್ತಾಃ ಸರ್ಗಾಸಃ ಸೃಜ್ಯಮಾನಾಃ ಸೋಮಾಸ್ತತಂ ವಿಸ್ತೃತಂ ತಂತುಂ ತಂತುಭಿಃ ಕೃತಂ ವಸ್ತ್ರಂ ಸಾಕಂ ಸಹ ಯುಗಪತ್ ಪರೀರತೇ । ಪರಿತೋ ಗಚ್ಛಂತಿ । ತೇ ಸೋಮಾ ಇಂದ್ರಾದೃತೆ ಇಂದ್ರಂ ವರ್ಜಯಿತ್ವಾನ್ಯತ್ಕಿಂ ಚನ

ಧಾಮ ದೇವಶರೀರಂ ಲಕ್ಷೀಕೃತ್ಯ ನ ಪವತೇ । ನ ಗಚ್ಛತಿ ॥ ಏಕವಚನಂ ಛಾಂದಸಂ ॥ ನ ಗಚ್ಛಂತಿ । ಕಿಂತ್ವಿಂದ್ರಸ್ಯೈವ ಧಾಮ ಪ್ರತಿ ಗಚ್ಛಂತಿ । ಇಂದ್ರಸ್ಯ ಧಾಮ್ನೋ ಯಷ್ಟವ್ಯತ್ವಂ ಚ ಅಯೋಳಿಂದ್ರಸ್ಯ ಪ್ರಿಯಾ ಧಾಮಾನಿ । ವಾ. ಸಂ. ೨೧–೪೭ । ಇತಿ ಮಂತ್ರವರ್ಣಾದವಗಮ್ಯತೇ ॥

॥ ಪ್ರತಿಪದಾರ್ಥ ॥

**ದ್ರಾವಯಿತ್ನವಃ**—ಪ್ರಸರಿಸುವ ಸ್ವಭಾವವುಳ್ಳವೂ । **ಮತ್ಸರಾಸಃ**—ಹರ್ಷಕಾರಕಗಳೂ । **ಪ್ರಸುಪಃ**—ಶತ್ರುನಾಶಕಗಳೂ । **ಆಶವಃ**—ಶೀಘ್ರಗಾಮಿಗಳೂ । **ಸರ್ಗಾಸಃ**—ಯಜ್ಞಾರ್ಥವಾಗಿ ಅರ್ಪಿತವಾದವೂ ಆದ ಸೋಮರಸಗಳು । **ತತಂ**—ವಿಸ್ತೃತವಾದುದೂ । **ತಂತುಂ**—ನೂಲಿನಿಂದ ಮಾಡಿದುದೂ ಆದ ವಸ್ತ್ರದ ಮೇಲೆ । **ಸೂರ್ಯಸ್ಯ ರಶ್ಮಯ ಇವ**—ಸೂರ್ಯನ ಕಿರಣಗಳಂತೆ । **ಸಾಕಂ**—ಒಟ್ಟಿಗೆ । **ಪರಿ**—ಸುತ್ತಲೂ । **ಈರತೇ**—ವ್ಯಾಪಿಸುತ್ತವೆ । **ಇಂದ್ರಾದೃತೇ**—ಇಂದ್ರನನ್ನು ಬಿಟ್ಟು । **ಕಿಂ ಚನ ಧಾಮ**—ಇನ್ನು ಯಾವ ಪ್ರದೇಶಕ್ಕೂ । **ನ ಪವತೇ**—ಸೋಮನು ಪ್ರವೇಶಿಸುವುದಿಲ್ಲ.

॥ ಭಾವಾರ್ಥ ॥

ಪ್ರಸರಿಸುವ ಸ್ವಭಾವವುಳ್ಳವೂ, ಹರ್ಷಕಾರಕಗಳೂ, ಶತ್ರುನಾಶಕಗಳೂ, ಶೀಘ್ರಗಾಮಿಗಳೂ. ಯಜ್ಞಾರ್ಥವಾಗಿ ಅರ್ಪಿತವಾದವೂ ಆದ ಸೋಮರಸಗಳು ವಿಸ್ತೃತವಾದುದೂ, ನೂಲಿನಿಂದ ಮಾಡಿದುದೂ ಆದ ವಸ್ತ್ರದಮೇಲೆ ಸೂರ್ಯನಕಿರಣಗಳಂತೆ ಒಟ್ಟಿಗೆ ಸುತ್ತಲೂ ವ್ಯಾಪಿಸುತ್ತವೆ. ಇಂದ್ರನನ್ನು ಬಿಟ್ಟು ಈ ಸೋಮನು ಇನ್ನು ಬೇರೆ ಯಾವ ಪ್ರದೇಶಕ್ಕೂ ಪ್ರವೇಶಿಸುವುದಿಲ್ಲ.

English Translation

The rushing exhilarating foe-slaying Soma-juices when let loose flow together round the extended cloth like the son's rays : they flow to no other person except, Indra.

॥ ಸಂಹಿತಾಪಾಠಃ ॥

ಸಿಂಧೋರಿವ ಪ್ರವಣೇ ನಿಮ್ನ ಆಶವೋ ವೃಷಚ್ಯುತಾ ಮದಾಸೋ ಗಾತುಮಾಶತ ।
ಶಂ ನೋ ನಿವೇಶೇ ದ್ವಿಪದೇ ಚತುಷ್ಪದೇಽಸ್ಮೇ ವಾಜಾಃ ಸೋಮ ತಿಷ್ಠಂತು ಕೃಷ್ಟಯಃ ॥ ೭ ॥

|| ಪದಪಾಠಃ ||

ಸಿಂಧೋಃऽಇವ । ಪ್ರವಣೇ । ನಿಮ್ನೇ । ಆಶವಃ । ವೃಷऽಚ್ಯುತಾಃ । ಮದಾಸಃ । ಗಾತುಂ । ಆಶತ ।

ಶಂ । ನಃ । ನಿऽವೇಶೇ । ದ್ವಿऽಪದೇ । ಚತುಃऽಪದೇ । ಅಸ್ಮೇ ಇತಿ । ವಾಜಾಃ । ಸೋಮ । ತಿಷ್ಠಂತು ।

ಕೃಷ್ಟಯಃ ॥ ೭ ॥

|| ಸಾಯಣಭಾಷ್ಯಂ ||

ವೃಷಚ್ಯುತಾಃ ॥ ವೃಷ ಹಿಂಸಾಸಂಕ್ಲೇಶನದಾನೇಷ್ವಪಿ ॥ ವೃಷಭಿಃ ಸೋಮಸ್ಯ ದಾತೃಭಿರೃತ್ವಿಗ್ಭಿಶ್ಚ್ಯುತಾಃ ಪರಿಸ್ರುತಾ ಮದಾಸೋ ಮದಕಾರಿಣಃ ಸೋಮಾಃ ಸ್ತುತಿಭಿಃ ಪ್ರಾಪ್ತವ್ಯ ಇಂದ್ರೇ ಗಾತುಂ ಗಮನಮಾಶತ । ಪ್ರಾಪ್ನುವಂತಿ । ತತ್ರ ದೃಷ್ಟಾಂತಃ । ಸಿಂಧೋರಿವ ಪ್ರವಣೇ । ಪ್ರಗಚ್ಛಂತ್ಯುದಕಾನಿ ಯತ್ರೇತಿ ತತ್ಪ್ರವಣಂ । ತಸ್ಮಿನ್ನಿಮ್ನೇ ಸ್ಥಲೇ ಸಿಂಧೋರ್ನದ್ಯಾ ಆಶವೋ ವ್ಯಾಪ್ತಾ ಅಪೋ ಯಥಾ ಗಚ್ಛಂತಿ ತದ್ವತ್ । ಅಥ ಪ್ರತ್ಯಕ್ಷಃ । ಹೇ ಸೋಮ ನೋऽಸ್ಮಾಕಂ ನಿವೇಶೇ ಸ್ವಗೃಹಂ ಪ್ರತಿ ಪ್ರವೇಶನೇ ನಿರ್ಗಮನೇ ವಾ ದ್ವಿಪದೇ ಪುತ್ರಾದಿಕಾಯ ಚತುಷ್ಪದೇ ಗವಾದಿಕಾಯ ಪಶವೇ ಶಂ ಸುಖಂ ಕುರು । ಕಿಂಚ ಹೇ ಸೋಮ ಅಸ್ಮೇ ಅಸ್ಮಾಸು ವಾಜಾ ಅನ್ನಾನಿ ಕೃಷ್ಟಯಃ ಪುತ್ರಾದಿಕಾಃ ಪ್ರಜಾಶ್ಚ ತಿಷ್ಠಂತು । ಅನ್ನಾದಿಕಂ ದೇಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಆಶವಃ**—ವೇಗಗಾಮಿಗಳಾದ । **ಸಿಂಧೋಃ**—ನದಿಯ ಪ್ರವಾಹಗಳು । **ಪ್ರವಣೇ**—ಜಲಾಶ್ರಯವಾದ । **ನಿಮ್ನೇ ಇವ**—ತಗ್ಗು ಪ್ರದೇಶಗಳಿಗೆ ಹರಿಯುವಂತೆ । **ವೃಷಚ್ಯುತಾಃ**—ಋತ್ವಿಕ್ಕುಗಳಿಂದ ಅರ್ಪಿತವಾದವೂ । **ಮದಾಸಃ**—ಹರ್ಷಕಾರಕವಾದವೂ ಆದ ಸೋಮರಸಗಳು । **ಗಾತುಂ**—ತಮಗೆ ಆಶ್ರಯಸ್ಥಾನವಾದ ಇಂದ್ರನಲ್ಲಿಗೆ **ಆಶತ**—ಹೋಗಿ ಸೇರುತ್ತವೆ । **ಸೋಮ**—ಎಲೈ ಸೋಮದೇವನೇ । **ನಃ**—ನಮ್ಮ । **ನಿವೇಶೇ**—ಗೃಹವನ್ನು ಪ್ರವೇಶಿಸುವ । **ದ್ವಿಪದೇ**—ಪುತ್ರಾದಿಗಳಿಗೂ । **ಚತುಷ್ಪದೇ**—ಪಶುಗಳಿಗೂ । **ಶಂ**—ಸುಖವನ್ನುಂಟು ಮಾಡು । **ಅಸ್ಮೇ**—ನಮ್ಮಲ್ಲಿ । **ವಾಜಾಃ**—ಅನ್ನಗಳೂ । **ಕೃಷ್ಟಯಃ**—ಪುತ್ರಾದಿಪ್ರಜೆಗಳೂ । **ತಿಷ್ಠಂತು**—ಸ್ಥಾಪಿತವಾಗಲಿ.

॥ ಭಾವಾರ್ಥ ॥

ವೇಗಗಾಮಿಗಳಾದ ನದಿಪ್ರವಾಹಗಳು ಜಲಾಶ್ರಯವಾದ ತಗ್ಗುಪ್ರದೇಶಗಳಿಗೆ ಹರಿಯುವಂತೆ ಋತ್ವಿಕ್ಕುಗಳಿಂದ ಅರ್ಪಿತವಾದವೂ, ಹರ್ಷಕಾರಕವೂ ಆದ ಸೋಮರಸಗಳು ತಮಗೆ ಆಶ್ರಯ ಸ್ಥಾನವಾದ ಇಂದ್ರನಲ್ಲಿಗೆ ಹೋಗಿ ಸೇರುತ್ತವೆ. ಎಲೈ ಸೋಮದೇವನೇ, ನಮ್ಮ ಗೃಹವನ್ನು ಪ್ರವೇಶಿಸುವ ಪುತ್ರಾದಿಗಳಿಗೂ ಪಶುಗಳಿಗೂ ಸುಖವನ್ನುಂಟು ಮಾಡು. ನಮ್ಮಲ್ಲಿ ಅನ್ನಗಳೂ ಪುತ್ರಾದಿಪ್ರಜೆಗಳೂ ಸ್ಥಾಪಿತವಾಗಲಿ.

English Translation

The exhilarating (Soma-juices) poured forth by the sprinklers effect their way to Indra as in a waterfall of a river the pervading (waters find their

way) to dry ground; bless on our return our two-footed and four-footed things; may food and offspring ever abide with us.

॥ ಸಂಹಿತಾಪಾಠಃ ॥

ಆ ನಃ ಪವಸ್ವ ವಸುಮದ್ಧಿರಣ್ಯವದಶ್ವಾವದ್ಗೋಮದ್ಯವಮತ್ಸುವೀರ್ಯಂ ।
ಯೂಯಂ ಹಿ ಸೋಮ ಪಿತರೋ ಮಮ ಸ್ಥನ ದಿವೋ ಮೂರ್ಧಾನಃ
ಪ್ರಸ್ಥಿತಾ ವಯಸ್ಕೃತಃ ॥ ೮ ॥

॥ ಪದಪಾಠಃ ॥

ಆ । ನಃ । ಪವಸ್ವ । ವಸುಽಮತ್ । ಹಿರಣ್ಯಽವತ್ । ಅಶ್ವಽವತ್ । ಗೋಽಮತ್ । ಯವಽಮತ್ । ಸುಽವೀರ್ಯಂ ।
ಯೂಯಂ । ಹಿ । ಸೋಮ । ಪಿತರಃ । ಮಮ । ಸ್ಥನ । ದಿವಃ । ಮೂರ್ಧಾನಃ । ಪ್ರಽಸ್ಥಿತಾ । ವಯಃಽಕೃತಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಂ ವಸುಮದ್ವಸುಯುಕ್ತಂ ಹಿರಣ್ಯವತ್ಕನಕಾದಿಸಹಿತಮಶ್ವವದ್ಗೋಮದ್ಗವಾಶ್ವಸಹಿತಂ ಯವಮತ್ । ಯವೋ ನಾಮ ಧಾನ್ಯವಿಶೇಷಃ । ಧಾನ್ಯವಿಶಿಷ್ಟಂ ಸುವೀರ್ಯಂ ಶೋಭನವೀರ್ಯೋಪೇತಂ ಧನಂ ನೋಽಸ್ಮಭ್ಯಮಾ ಪವಸ್ವ । ಆಪ್ರಾಪಯ । ಪ್ರಯಚ್ಛೇತಿ ಯಾವತ್ । ಕಿಂಚ ಹೇ ಸೋಮ ಯತಸ್ತ್ವಂ ಮಮ ಪಿತೄಣಾಮಂಗಿರಸಾಮಪಿ ಪಿತಾಸಿ ತತೋ ಯೂಯಮೇವ ಮಮ ಪಿತರಃ ಸ್ಥನ । ಭವಥ । ಪಿತೃಬಹುತ್ವಮತ್ರ ಸೋಮಸ್ಯಾಭಿಧೀಯತೇ । ಕೀದೃಶಾಃ । ದಿವೋ ದ್ಯುಲೋಕಸ್ಯ ಮೂರ್ಧಾನೋ ಮೂರ್ಧವದುಚ್ಛ್ರಿತಾಃ । ಕರ್ಮಭಿಃ ಸ್ವರ್ಗಾದಿಕಮಲಭಂತೇತ್ಯರ್ಥಃ । ಪ್ರಸ್ಥಿತಾಃ ಸರ್ವದಾ ಕರ್ಮಕರಣಾರ್ಥಂ ಸ್ಥಿತಾಃ ವಯಸ್ಕೃತೋ ಹವೀರೂಪಸ್ಯಾನ್ನಸ್ಯ ಕರ್ತಾರಃ । ತಾದೃಶಾ ಮಮ ಪಿತರಸ್ತ್ವಂ ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ವಸುಮತ್**—ಧನಯುಕ್ತವಾದುದೂ । **ಹಿರಣ್ಯವತ್**—ಸುವರ್ಣಪೂರಿತವಾದುದೂ । **ಅಶ್ವವತ್**—ಅಶ್ವಯುಕ್ತವಾದುದೂ । **ಗೋಮತ್**—ಗೋವುಗಳಿಂದ ಕೂಡಿದುದೂ । **ಯವಮತ್**—ಯವಧಾನ್ಯಯುಕ್ತವಾದುದೂ । **ಸುವೀರ್ಯಂ**—ಉತ್ತಮವಾದ ವೀರ್ಯೋಪೇತವಾದುದೂ ಆದ ಧನವನ್ನು । **ನಃ**—ನಮಗೆ । **ಆಪವಸ್ವ**—ಒದಗಿಸು । **ಸೋಮ**—ಎಲೈ ಸೋಮದೇವನೇ। **ದಿವಃ**—ದ್ಯು

ಲೋಕಕ್ಕೆ । ಮೂರ್ಧಾನಃ— ಶಿರಸ್ಸಿನಂತಿರುವವರೂ । ಪ್ರಸ್ಥಿತಾಃ— ಕರ್ಮನಿರತರೂ । ವಯಸ್ಕೃತಃ— ಹವಿಸ್ಸನ್ನು ಅರ್ಪಿಸುವವರೂ ಆದ । ಮಮ ಪಿತರಃ— ನನ್ನ ಪಿತೃರೂಪನಾಗಿ । ಯೂಯಂ ಹಿ ಸ್ಥನ— ನೀನೇ ಆಗಿದ್ದೀಯೆ.

। ಭಾವಾರ್ಥ ।।

ಎಲೈ ಸೋಮದೇವನೇ, ಧನಯುಕ್ತವಾದುದೂ, ಸುವರ್ಣಪೂರಿತವಾದುದೂ, ಅಶ್ವಯುಕ್ತವಾದುದೂ, ಗೋವುಗಳಿಂದ ಕೂಡಿದುದೂ ಯವಧಾನ್ಯಯುಕ್ತವಾದುದೂ, ಉತ್ತಮವಾದ ವೀರ್ಯೋಪೇತವಾದುದೂ ಆದ ಧನವನ್ನು ನಮಗೆ ಒದಗಿಸು. ಎಲೈ ಸೋಮದೇವನೇ, ದ್ಯುಲೋಕಕ್ಕೆ ಶಿರಸ್ಸಿನಂತಿರುವವರೂ, ಕರ್ಮನಿರತನೂ, ಹವಿಸ್ಸನ್ನು ಅರ್ಪಿಸುವವರೂ, ಆದ ನಮ್ಮ ಪಿತೃರೂಪನಾಗಿ ನೀನೇ ಆಗಿದ್ದೀಯೆ.

## English Translation.

Pour upon us (wealth), comprising treasure, gold, horses, cattle, barley, and excellent male offspring; you Soma, are my progenitors, the chiefs of heaven, placed (for sacrifices), the offerers of oblation.

।। ಸಂಹಿತಾಪಾಠಃ ।।

ಏತೇ ಸೋಮಾಃ ಪವಮಾನಾಸ ಇಂದ್ರಂ ರಥಾಇವ ಪ್ರ ಯಯುಃ ಸಾತಿ-
ಮಚ್ಛ ।
ಸುತಾಃ ಪವಿತ್ರಮತಿ ಯಂತ್ಯವ್ಯಂ ಹಿತ್ವೀ ವವ್ರಿಂ ಹರಿತೋ ವೃಷ್ಟಿಮಚ್ಛ ।।೯।।

।। ಪದಪಾಠಃ ।।

ಏತೇ । ಸೋಮಾಃ । ಪವಮಾನಾಸಃ । ಇಂದ್ರಂ । ರಥಾಃಽಇವ । ಪ್ರ । ಯಯುಃ । ಸಾತಿಂ । ಅಚ್ಛ ।।
ಸುತಾಃ । ಪವಿತ್ರಂ । ಅತಿ । ಯಂತಿ । ಅವ್ಯಂ । ಹಿತ್ವೀ । ವವ್ರಿಂ । ಹರಿತಃ । ವೃಷ್ಟಿಂ । ಅಚ್ಛ ।। ೯ ।।

।। ಸಾಯಣಭಾಷ್ಯಂ ।।

ಪವಮಾನಾಸಃ ಪವಿತ್ರೇಣ ಪೂಯಮಾನಾಃ ಏತೇಽಸ್ಮದೀಯಾಃ ಸೋಮಾಃ ಸಾತಿಂ ।। ಷಣ ಸಂಭಕ್ತೌ । ಕರ್ಮಣಿ ಕ್ತಿನ್ ।। ಸರ್ವೈಃ ಸಂಭಜನೀಯಮಿಂದ್ರಮಚ್ಛ ಪ್ರ ಯಯುಃ । ಪ್ರಕರ್ಷೇಣ ಗಚ್ಛಂತಿ । ತತ್ರ ದೃಷ್ಟಾಂತಃ । ರಥಾ ಇವೇಂದ್ರಸ್ಯ ರಥಾ ಯಥಾ ಸಾತಿಂ ।। ಷೋ ಅಂತಕರ್ಮಣಿ । ಊತಿಯೂತೀತ್ಯಾದಿನಾ ನಿಪಾತಿತಃ ।। ಸೀಯತೇ ಮ್ರಿಯತೇಽಸ್ಮಿನ್ನಿತಿ ಸಾತಿಃ ಸಂಗ್ರಾಮಃ । ತಮಚ್ಛ ತಂ ಪ್ರತಿ ಪ್ರಗಚ್ಛಂತಿ ತದ್ವತ್ । ಕಿಂಚ ಸುತಾ ಗ್ರಾವಭಿರಭಿಷುತಾಃ ಸೋಮಾ ಅವ್ಯಮವಿವಾಲಭವಂ

ಪವಿತ್ರಮತಿ ಯಂತಿ । ಅತೀತ್ಯ ಗಚ್ಛಂತಿ । ತೇऽಮೀ ಹರಿತೋ ಹರಿತವರ್ಣಾ ಅಶ್ವಾಃ । ಯದ್ವಾ। ಹರಿತಸ್ತ್ವಾದಿತ್ಯವಾಹನರೂಪಾ ಅಶ್ವಾ ಭೂತ್ವಾ । ವವ್ರಿಂ । ವೃಣೋತಿ ಶರೀರಮಿತಿ ವವ್ರಿರ್ಜರಾ ॥ ಆದೃಗಮಹನೇತಿ ಕಿಪ್ರತ್ಯಯಃ ॥ ಸರ್ವಾಂಗವ್ಯಾಪಿನೀಂ ಜರಾಂ ಹಿತ್ವೀ ಹಿತ್ವಾ ತರುಣಾಃ ಸಂತೋ ವೃಷ್ಟಿಮಚ್ಛ ವೃಷ್ಟಿಂ ಗಮಯಿತುಂ ಗಚ್ಛಂತಿ ॥ ಹಿತ್ವೀ । ಜಹಾತೇಶ್ಚ ಕ್ತ್ವಿ । ಪಾ. ೭-೪-೪೩ । ಇತಿ ಹ್ಯಾದೇಶಃ । ಸ್ನಾತ್ವ್ಯಾದಯಶ್ಚೇತಿ ಛಂದಸಿ ನಿಪಾತಿತಂ ॥

॥ ಪ್ರತಿಪದಾರ್ಥ ॥

**ರಥಾಃ**—ಇಂದ್ರನ ರಥಗಳು । **ಸಾತಿಂ ಇವ**—ಯುದ್ಧರಂಗಕ್ಕೆ ಹೋಗುವಂತೆ । **ಪವಮಾನಾಸಃ**—ಶುಧ್ಯರ್ಹವಾದವೂ । **ಏತೇ**—ಇಲ್ಲಿ ಅರ್ಪಿತವಾದುವೂ ಆದ । **ಸೋಮಾಃ**—ಸೋಮರಸಗಳು । **ಸಾತಿಂ**—ಪೂಜ್ಯನಾದ । **ಇಂದ್ರಂ ಅಚ್ಛ**—ಇಂದ್ರನಿಗಭಿಮುಖವಾಗಿ । **ಪ್ರಯಯುಃ**—ಹೋಗಿ ಸೇರುತ್ತವೆ । **ಹರಿತಃ**—ಹರಿತವರ್ಣವುಳ್ಳ ಆದಿತ್ಯನ ಅಶ್ವಗಳು । **ವವ್ರಿಂ**—ತಮ್ಮ ಮುದಿತನವನ್ನು । **ಹಿತ್ವೀ**—ಬಿಟ್ಟು (ಯೌವನವನ್ನು ಹೊಂದಿ) । **ವೃಷ್ಟಿಂ ಅಚ್ಛ**—ವೃಷ್ಟಿಗಭಿಮುಖವಾಗಿ ಹೋಗುವಂತೆ । **ಸುತಾಃ**—ಹಿಂಡಿರುವ ಸೋಮರಸಗಳು । **ಅವ್ಯಂ**—ಉಣ್ಣೆಯ । **ಪವಿತ್ರಂ ಅತಿ**—ದಶಾಪವಿತ್ರವನ್ನು ದಾಟಿ । **ಯಂತಿ**—ಮುನ್ನುಗ್ಗುತ್ತವೆ.

॥ ಭಾವಾರ್ಥ ॥

ಇಂದ್ರನ ರಥಗಳು ಯುದ್ಧರಂಗಕ್ಕೆ ಮುನ್ನುಗ್ಗಿ ಹೋಗುವಂತೆ ಶುಧ್ಯರ್ಹವಾದುವೂ, ಅರ್ಪಿತವಾದುವೂ ಆದ ಸೋಮರಸಗಳು ಪೂಜ್ಯವಾದ ಇಂದ್ರನಿಗಭಿಮುಖವಾಗಿ ಹೋಗಿ ಸೇರುತ್ತವೆ. ಹರಿತವರ್ಣವುಳ್ಳ ಆದಿತ್ಯನ ಅಶ್ವಗಳು ತಮ್ಮ ಮುದಿತನವನ್ನು ಬಿಟ್ಟು ಯೌವನವನ್ನು ಹೊಂದಿ ವೃಷ್ಟಿಗಭಿಮುಖವಾಗಿ ಹೋಗುವಂತೆ ಹಿಂಡಿರುವ ಸೋಮರಸಗಳು ಉಣ್ಣೆಯ ದಶಾಪವಿತ್ರವನ್ನು ದಾಟಿ ಮುನ್ನುಗ್ಗುತ್ತವೆ.

[ಸೋಮರಸಗಳೇ ಆದಿತ್ಯನ ಅಶ್ವರೂಪದಲ್ಲಿ ವೃಷ್ಟಿಗಭಿಮುಖವಾಗಿ ಹೋಗುತ್ತವೆ. ಎಂಬರ್ಥವೂ ಹೊಂದಿಕೊಳ್ಳುತ್ತದೆ.]

## English Translation.

These filtered Soma-juices advance to Indra worthy of honour, as (Indra's) chariots advance to battle; expressed (with the stones) they pass through the woollen filter, casting off infirmity the horses go towards the rain.

॥ ಸಂಹಿತಾಪಾಠಃ ॥

ಇಂದವಿಂದ್ರಾಯ ಬೃಹತೇ ಪವಸ್ವ ಸುಮೃಳೀಕೋ ಅನವದ್ಯೋ ರಿಶಾದಾಃ ।
ಭರಾ ಚಂದ್ರಾಣಿ ಗೃಣತೇ ವಸೂನಿ ದೇವೈರ್ದ್ಯಾವಾಪೃಥಿವೀ ಪ್ರಾವತಂ ನಃ ॥

|| ಪದಪಾಠಃ ||

ಇಂದೋ ಇತಿ | ಇಂದ್ರಾಯ | ಬೃಹತೇ | ಪವಸ್ವ | ಸುsಮೃಳೀಕಃ | ಅನವದ್ಯಃ | ರಿಶಾದಾಃ |

ಭರ | ಚಂದ್ರಾಣಿ | ಗೃಣತೇ | ವಸೂನಿ | ದೇವೈಃ | ದ್ಯಾವಾಪೃಥಿವೀ ಇತಿ | ಪ್ರ | ಅವತಂ | ನಃ ||೧೦||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ತ್ವಂ ಬೃಹತೇ ಮಹತ ಇಂದ್ರಾಯ ತದರ್ಥಂ ಪವಸ್ವ | ಪಾತ್ರೇಷು ಕ್ಷರ | ಇಂದ್ರಂ ಪ್ರತ್ಯಾಗಚ್ಛ ವಾ | ಕೀದೃಶಃ | ಸುಮೃಳೀಕ ಇಂದ್ರಸ್ಯ ಸುಷ್ಠು ಸುಖಯಿತಾ ಅತ ಏವಾನವದ್ಯೋ ಗರ್ಹಾರಹಿತಃ ರಿಶಾದಾ ರಿಶತಾಂ ಬಾಧಕಾನಾಮಸಿತಾ | ಏತಾದೃಶಸ್ತ್ವಮಿಂದ್ರಾಯ ಪವಸ್ವ | ಕಿಂಚ ಗೃಣತೇ ಸ್ತುವತೇ ಮಹ್ಯಂ ಚಂದ್ರಾಣ್ಯಾಹ್ಲಾದಕಾನಿ ವಸೂನಿ ಧನಾನಿ ಭರ | ಪ್ರಯಚ್ಛ | ಕಿಂಚ ಹೇ ದ್ಯಾವಾಪೃಥಿವೀ ಯುವಾಂ ಚ ಪವಮಾನೇ ಸತ್ಯಾ ದೇವೈಃ ಸುಭಗೈರ್ಧನೈಃ ಸಹ ನೋಽಸ್ಮಾನ್ ಪ್ರಾವತಂ | ಪ್ರರಕ್ಷತಂ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ಸುಮೃಳೀಕಃ—ಉತ್ತಮವಾದ ಸುಖಕಾರಕನೂ | ಅನವದ್ಯಃ—ದೋಷರಹಿತನೂ | ರಿಶಾದಾಃ—ಶತ್ರುನಾಶಕನೂ ಆದ ನೀನು | ಬೃಹತೇ—ಮಹತ್ಸ್ವರೂಪವುಳ್ಳ | ಇಂದ್ರಾಯ—ಇಂದ್ರನ ಪಾನಾರ್ಥವಾಗಿ | ಪವಸ್ವ—ಸ್ರವಿಸು | ಗೃಣತೇ—ನಿನ್ನನ್ನು ಸ್ತುತಿಸುವ ನನಗೆ | ಚಂದ್ರಾಣಿ—ಆಹ್ಲಾದಕವಾದ | ವಸೂನಿ—ಧನಗಳನ್ನು | ಭರ—ತಂದೊದಗಿಸು | ದ್ಯಾವಾಪೃಥಿವೀ—ಎಲೈ ದ್ಯಾವಾಪೃಥಿವಿಗಳೇ | ದೇವೈಃ—ಮಂಗಳಕರಗಳಾದ ಸಂಪತ್ತುಗಳೊಡನೆ | ನಃ—ನಮ್ಮನ್ನು | ಪ್ರಾವತಂ—ರಕ್ಷಿಸಿರಿ

|| ಭಾವಾರ್ಥ ||

ಎಲೈ ಸೋಮದೇವನೇ, ಉತ್ತಮವಾದ ಸುಖಕಾರಕನೂ, ದೋಷರಹಿತನೂ, ಶತ್ರುನಾಶಕನೂ ಆದ ನೀನ. ಮಹತ್ಸ್ವರೂಪವುಳ್ಳ ಇಂದ್ರನ ಪಾನಾರ್ಥವಾಗಿ ಸ್ರವಿಸು. ನಿನ್ನನ್ನು ಸ್ತುತಿಸುವ ನನಗೆ ಆಹ್ಲಾದಕವಾದ ಧನಗಳನ್ನು ತಂದೊದಗಿಸು. ಎಲೈ ದ್ಯಾವಾಪೃಥಿವಿಗಳೇ, ಮಂಗಳಕರವಾದ ಸಂಪತ್ತುಗಳೊಡನೆ ನಮ್ಮನ್ನು ರಕ್ಷಿಸಿರಿ.

## English Translation.

Indu, who makes (men) very happy, the blameless one, the destroyer of foes, flow for mighty Indra; bring to (me) your worshipper gratifying riches; heaven and earth, protect us with auspicious (riches).

# ಎಪ್ಪತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

ತ್ರಿರಸ್ಮಾ ಇತಿ ದಶರ್ಚಂ ತೃತೀಯಂ ಸೂಕ್ತಂ ವೈಶ್ವಾಮಿತ್ರಸ್ಯ ರೇಣೋರಾರ್ಷಂ ಪಂಚಮ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ | ಪವಮಾನಃ ಸೋಮೋ ದೇವತಾ | ತ್ರಿರಸ್ಮೈ ರೇಣುರಿತ್ಯನುಕ್ರಾಂತಂ || ಗತೋ ವಿನಿಯೋಗಃ ||

ಅನುವಾದವು—ತ್ರಿರಸ್ಮೈ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ರೇಣುರ್ವೈಶ್ವಾಮಿತ್ರಃ ಎಂಬುವನು ಋಷಿಯು. ಪವಮಾನ ಸೋಮನು ದೇವತೆಯು; ಈ ಸೂಕ್ತದ ಹತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಯಲ್ಲಿ—ತ್ರಿರಸ್ಮೈ ರೇಣುಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೭೦

ಮಂಡಲ—೯ || ಅನುವಾಕ—೪ || ಸೂಕ್ತ—೭೦ ||

ಅಷ್ಟಕ—೭ || ಅಧ್ಯಾಯ – ೨ || ವರ್ಗ—೨೩, ೨೪ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ||

|| ಋಷಿಃ—ರೇಣುರ್ವೈಶ್ವಾಮಿತ್ರಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—೧-೯, ಜಗತೀ | ೧೦ ತ್ರಿಷ್ಟುಪ್ ||

|| ಸಂಹಿತಾಪಾಠಃ ||

ತ್ರಿರಸ್ಮೈ ಸಪ್ತ ಧೇನವೋ ದುದುಹ್ರೇ ಸತ್ಯಾಮಾಶಿರಂ ಪೂರ್ವ್ಯೇ ವ್ಯೋಮನಿ।
ಚತ್ವಾರ್ಯನ್ಯಾ ಭುವನಾನಿ ನಿರ್ಣಿಜೇ ಚಾರೂಣಿ ಚಕ್ರೇ ಯದೃತೈರ-
ವರ್ಧತ || ೧ ||

|| ಪದಪಾಠಃ ||

ತ್ರಿಃ | ಅಸ್ಮೈ | ಸಪ್ತ | ಧೇನವಃ | ದುದುಹ್ರೇ | ಸತ್ಯಾಂ | ಆऽಶಿರಂ | ಪೂರ್ವ್ಯೇ | ವಿऽಓಮನಿ |
ಚತ್ವಾರಿ | ಅನ್ಯಾ | ಭುವನಾನಿ | ನಿಃऽನಿಜೇ | ಚಾರೂಣಿ | ಚಕ್ರೇ | ಯತ್ | ಋತೈಃ | ಅವರ್ಧತ || ೧ ||

|| ಸಾಯಣಭಾಷ್ಯಂ ||

ಅಸ್ಮೈ ಪವಮಾನಾಯ ಪೂರ್ವ್ಯೇ ಪೂರ್ವೈಃ ಕೃತೇ ವ್ಯೋಮನಿ | ವಿವಿಧವೋಮಾವನಂ ಗಮನಂ ದೇವಾನಾಮತ್ರೇತಿ ವ್ಯೋಮ ಯಜ್ಞಃ | ತಸ್ಮಿನ್ಸ್ಥಿತಾಯ | ಯದ್ವಾ | ಪ್ರತ್ನೇ ವ್ಯೋಮನ್ಯಂತರಿಕ್ಷೇ ವರ್ತಮಾನಾಯ | ತ್ರಿಃ ಸಪ್ತೈಕವಿಂಶತಿಸಂಖ್ಯಾಕಾ ಧೇನವಃ ಪ್ರೀಣಯಿತ್ರ್ಯೋ ಗಾವಃ ಸತ್ಯಾಂ ಯಥಾ-ರ್ಥಭೂತಾಮಾಶಿರಮಾಶ್ರಯಣಸಾಧನಂ ಕ್ಷೀರಾದಿ ದುದುಹ್ರೇ | ದುಹಂತಿ | ಯದ್ವಾ | ತ್ರಿಃ ಸಪ್ತ ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶ ಇತ್ಯೇತೈಃ ಸರ್ವೈಃ ಸಹ ಗೋಷು ಪಯ ಉತ್ಪಾದ್ಯತೇ ತದ್ಗಾವೋ ದುಹಂತ ಇತಿ। ಕಿಂಚಾಯಂ ಸೋಮೋऽನ್ಯಾನ್ಯನ್ಯಾನಿ ಚತ್ವಾರಿ ಭುವನಾ-ನ್ಯುದಕಾನಿ ವಸತೀವರೀಸ್ತಿಸ್ರಶ್ಚೈಕಧನಾ ಇತಿ ತಾನಿ ಚತುಃಸಂಖ್ಯಾಕಾನಿ ಚಾರೂಣಿ ಕಲ್ಯಾಣಾನ್ಯುದಕಾನಿ

**ನಿರ್ಣಿಜೇ ನಿರ್ಣೇಜನಾಯ ಪರಿಶೋಧನಾಯ ಪರಿಪೋಷಣಾಯ ವಾ ಚಕ್ರೇ । ಕದಾ ಕರೋತಿ । ಯದ್ಯದಾಯಮೃತ್ವೈರ್ಯಜ್ಞೈರವರ್ಧತ ವರ್ಧಿತವಾನ್ ತದಾ ಕರೋತಿ ॥**

॥ ಪ್ರತಿಪದಾರ್ಥ ॥

**ಅಸ್ಮೈ**—ಈ ಪವಮಾನಸಂಜ್ಞಕನಾದ ಸೋಮನಿಗಾಗಿ । **ಪೂರ್ವ್ಯೇ**—ಹಿಂದೆ ನೆರವೇರಿಸಿದ । **ವ್ಯೋಮನಿ**—ಯಜ್ಞದಲ್ಲಿ । **ತ್ರಿಃ ಸಪ್ತ**—ಏಕವಿಂಶತಿಸಂಖ್ಯಾಕವಾದ । **ಧೇನವಃ**—ಗೋವುಗಳು । **ಸತ್ಯಾಂ**—ಸತ್ಯಾತ್ಮಕವಾದ । **ಆಶಿರಂ**—ಕ್ಷೀರಾದ್ಯಾಶ್ರಯಣದ್ರವ್ಯಗಳನ್ನು । **ದುದುಹ್ರೇ**—ಕರೆದವು । **ಯತ್**—ಯಾವಾಗ । **ಋತ್ವೈಃ**—ಯಜ್ಞಗಳಿಂದ । **ಅನುವರ್ಧತ**—ಈ ಸೋಮನು ಪುಷ್ಟನಾದನೋ ಆಗ । **ಅನ್ಯಾ**—ಉಳಿದ । **ಚತ್ವಾರಿ ಭುವನಾನಿ**—ನಾಲ್ಕು ರೂಪವಾದ ವಸತೀವರ್ಯಾದ್ಯುದಕಗಳನ್ನೂ । **ನಿರ್ಣಿಜೇ**—ಪರಿಶುದ್ಧಿಗಾಗಿ । **ಚಾರೂಣಿ**—ಕಲ್ಯಾಣಾತ್ಮಕನಾಗಿರುವಂತೆ । **ಚಕ್ರೇ**—ಮಾಡಿದನು.

॥ ಭಾವಾರ್ಥ ॥

ಈ ಪವಮಾನಸಂಜ್ಞಕನಾದ ಸೋಮನಿಗಾಗಿ ಹಿಂದೆ ನೆರವೇರಿಸಿದ ಯಜ್ಞದಲ್ಲಿ ಏಕವಿಂಶತಿ ಸಂಖ್ಯಾಕವಾದ ಗೋವುಗಳೂ ಸತ್ಯಾತ್ಮಕವಾದ ಕ್ಷೀರಾದ್ಯಾಶ್ರಯಣದ್ರವ್ಯಗಳನ್ನು ಕರೆದವು. ಯಜ್ಞಗಳಿಂದ ಈ ಸೋಮನು ಯಾವಾಗ ಪುಷ್ಟನಾದನೋ ಆಗ ಉಳಿದ ವಸತೀವರ್ಯಾದಿ ನಾಲ್ಕು ಬಗೆಯ ಉದಕಗಳನ್ನು ತನ್ನ ಶುದ್ಧಿಗಾಗಿ ಕಲ್ಯಾಣಾತ್ಮಕವಾಗಿರುವಂತೆ ಮಾಡಿದನು.

ತ್ರಿಃ ಸಪ್ತ=೧೨ ಮಾಸಗಳು + ೫ ಋತುಗಳು+೩ ಲೋಕಗಳು + ಆದಿತ್ಯ=೨೧

## English Translation.

For him in the ancient sacrifice thrice seven milch cows milk forth the right mixture; he makes four other beautiful waters for purification when he is nourished with the sacrifices.

॥ ಸಂಹಿತಾಪಾಠಃ ॥

**ಸ ಭಿಕ್ಷಮಾಣೋ ಅಮೃತಸ್ಯ ಚಾರುಣ ಉಭೇ ದ್ಯಾವಾ ಕಾವ್ಯೇನಾ ವಿ ಶಶ್ರಥೇ ।**
**ತೇಜಿಷ್ಠಾ ಅಪೋ ಮಂಹನಾ ಪರಿ ವ್ಯತ ಯದೀ ದೇವಸ್ಯ ಶ್ರವಸಾ ಸದೋ ವಿದುಃ ॥ ೨ ॥**

|| ಪದಪಾಠಃ ||

ಸಃ । ಭಿಕ್ಷಮಾಣಃ । ಅಮೃತಸ್ಯ । ಚಾರುಣಃ । ಉಭೇ ಇತಿ । ದ್ಯಾವಾ । ಕಾವ್ಯೇನ । ವಿ । ಶಶ್ರಥೇ ।

ತೇಜಿಷ್ಠಾಃ । ಅಪಃ । ಮಂಹನಾ । ಪರಿ । ವ್ಯತ । ಯದಿ । ದೇವಸ್ಯ । ಶ್ರವಸಾ । ಸದಃ । ವಿದುಃ ॥ ೨ ॥

|| ಸಾಯಣಭಾಷ್ಯಂ ||

ಸ ಪವಮಾನಶ್ಚಾರುಣಃ ಕಲ್ಯಾಣಸ್ಯಾಮೃತಸ್ಯೋದಕಸ್ಯ || ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ। ಚತುರ್ಥ್ಯರ್ಥೇ ಬಹುಲಂ । ಪಾ. ೨-೩-೬೨ । ಇತಿ ಷಷ್ಠೀ || ಚಾರೂದಕಂ ಭಿಕ್ಷಮಾಣೋ ಯಷ್ಟೃಭಿರ್ಯಾಚ್ಯಮಾನಃ ಸನ್ನುಭೇ || ದ್ಯಾವಾದೇಶಸ್ಯ ದ್ವಂದ್ವೇ ವಿಹಿತತ್ವಾದತ್ರೋತ್ತರಪದಾಭಾವೇ ದ್ವಂದ್ವಃ ಪ್ರತೀಯತೇ || ಉಭೇ ದ್ಯಾವಾಪೃಥಿವ್ಯೌ ಕಾವ್ಯೇನ ಕವಿಕರ್ಮಣಾ ವಿ ಶಶ್ರಥೇ । ವಿಸೃತೇ ಕರೋತಿ । ಯಜ್ಞನಿಮಿತ್ತೇನೋದಕೇನ ಸಂಪೂರಯತೀತ್ಯರ್ಥಃ । ಕಿಂಚ ತೇಜಿಷ್ಠಾತಿಶಯೇನ ದೀಪ್ತಾನ್ಯಪ ಉದಕಾನಿ ಮಂಹನಾ ಮಹತ್ತ್ವೇನ ಪರಿ ವ್ಯತ । ವರಣಾರ್ಥಂ ಪರಿತ ಆಚ್ಛಾದಯಂತಿ । ಯದಿ ಯದರ್ತ್ವಿಜೋ ದೇವಸ್ಯ ದ್ಯೋತಮಾನಸ್ಯ ಸೋಮಸ್ಯ ಸದಃ ಸ್ಥಾನಂ ಶ್ರವಸಾ ಹವಿಷಾ ಯುಕ್ತಾಃ ಸಂತೋ ವಿದುಃ ಯಾಗಾರ್ಥಂ ಜಾನಂತಿ ಲಭಂತೇ ತದಾ ಪರಿತ ಆವೃಣೋತೀತಿ || ವಿದ ಜ್ಞಾನೇ । ಸಿಜಭ್ಯಸ್ತೇತಿ ಝೋರ್ಜುಸಾದೇಶಃ ||

|| ಪ್ರತಿಪದಾರ್ಥ ||

ಸಃ— ಪವಮಾನನು । ಚಾರುಣಃ ಅಮೃತಸ್ಯ— ಕಲ್ಯಾಣಕಾರಕವಾದ ಉದಕವನ್ನು । ಭಿಕ್ಷಮಾಣಃ— ಯಾಚಿಸಲ್ಪಟ್ಟು । ಉಭೇ— ದ್ಯಾವಾಪೃಥಿವಿಗಳೆರಡನ್ನೂ । ಕಾವ್ಯೇನ— ತನ್ನ ಮೇಧಾಯುತವಾದ ಕರ್ಮದಿಂದ । ವಿ ಶಶ್ರಥೇ— ಬಿಡಿಸಿ ಬೇರೆಮಾಡಿದ್ದಾನೆ । ಯದಿ— ಯಾವಾಗ । ದೇವಸ್ಯ— ದೇವತಾತ್ಮನಾದ ಸೋಮನ । ಸದಃ— ಸ್ಥಾನವನ್ನು । ಶ್ರವಸಾ— ಹವಿಸ್ಸಿನಿಂದ (ಯುಕ್ತರಾದ ಋತ್ವಿಕ್ಕುಗಳು) । ವಿದುಃ— ಅರಿಯುವರೋ ಆಗ । ತೇಜಿಷ್ಠಾಃ— ಪ್ರಭಾಯುತವಾದ । ಅಪಃ— ಉದಕಗಳನ್ನು । ಮಂಹನಾ— ತನ್ನ ಮಹತ್ತ್ವದಿಂದ । ಪರಿ ವ್ಯತ— ಸೋಮದೇವನು ವ್ಯಾಪಿಸುತ್ತಾನೆ.

|| ಭಾವಾರ್ಥ ||

ಪವಮಾನನು ಕಲ್ಯಾಣಕಾರವಾದ ಉದಕವನ್ನು ಯಾಚಿಸಲ್ಪಟ್ಟು ದ್ಯಾವಾಪೃಥಿವಿಗಳೆರಡನ್ನೂ ತನ್ನ ಮೇಧಾಯುತವಾದ ಕರ್ಮದಿಂದ ಬಿಡಿಸಿ ಬೇರೆ ಮಾಡಿದ್ದಾನೆ. ಯಾವಾಗ ಹವಿಸ್ಸಿನಿಂದ ಯುಕ್ತರಾದ ಋತ್ವಿಕ್ಕುಗಳು ದೇವತಾತ್ಮನಾದ ಸೋಮನ ಸ್ಥಾನವನ್ನು ಅರಿಯುವರೋ ಆಗ ಪ್ರಭಾಯುತವಾದ ಉದಕಗಳನ್ನು ತನ್ನ ಮಹತ್ತ್ವದಿಂದ ಸೋಮದೇವನು ವ್ಯಾಪಿಸುತ್ತಾನೆ.

## English Translation.

He being solicited for auspicious ambrosia opens both heaven and earth by his intelligence; he covers the lustrous waters with his greatness, when (the priests) with the oblation recognize the station of the radiant (Soma).

|| ಸಂಹಿತಾಪಾಠಃ ||

ತೇ ಅಸ್ಯ ಸಂತು ಕೇತವೋಽಮೃತ್ಯವೋಽದಾಭ್ಯಾಸೋ ಜನುಷೀ ಉಭೇ ಅನು ।

ಯೇಭಿರ್ನೃಮ್ಣಾ ಚ ದೇವ್ಯಾ ಚ ಪುನತ ಆದಿದ್ರಾಜಾನಂ ಮನನಾ ಅಗೃಭ್ಣತ ॥ ೨ ॥

|| ಪದಪಾಠಃ ||

ತೇ । ಅಸ್ಯ । ಸಂತು । ಕೇತವಃ । ಅಮೃತ್ಯವಃ । ಅದಾಭ್ಯಾಸಃ । ಜನುಷೀ ಇತಿ । ಉಭೇ ಇತಿ । ಅನು ।

ಯೇಭಿಃ । ನೃಮ್ಣಾ । ಚ । ದೇವ್ಯಾ । ಚ । ಪುನತೇ । ಆತ್ । ಇತ್ । ರಾಜಾನಂ । ಮನನಾಃ । ಅಗೃಭ್ಣತ ।।೨।।

|| ಸಾಯಣಭಾಷ್ಯಂ ||

ಅಸ್ಯೈತಾದೃಶಸ್ಯ ಸೋಮಸ್ಯ ಕೇತವಃ ಪ್ರಜ್ಞಾಪಕಾಃ ಸರ್ವೈಶ್ಚಾಯನೀಯಾ ಅಮೃತ್ಯವೋ ಮರಣಧರ್ಮರಹಿತಾಃ ಅತ ಏವಾದಾಭ್ಯಾಸಃ ॥ ದಭೇಶ್ಚೇತಿ ವಕ್ತವ್ಯಮಿತಿ ಣ್ಯತ್ । ಪಾ. ೨–೧–೧೩೪–೨ ॥ ಪರೈರಹಿಂಸ್ಯಾಸ್ತೇ ತಾದೃಶಾ ಅಸ್ಯ ರಶ್ಮಯ ಉಭೇ ಜನುಷೀ ಜನ್ಮನೀ ಸ್ಥಾವರಜಂಗಮಾತ್ಮಕೇ ದ್ವೇ ಅನು ಲಕ್ಷೀಕೃತ್ಯ ಸಂತು । ರಕ್ಷಂತು । ಓಷಧೀನಾಮಯಂ ಸೋಮೋ ರೇತೋ ನಿಷಿಂಚತಿ ಯಜ್ಞೇ ಮನುಷ್ಯಾಣಾಂ ಚ ಧಾರಾಃ ಸ್ರವಂತಿ ಖಲು । ಸೋಽಯಂ ಯೇಭಿರ್ಯೈಃ ಕೇತುಭಿರ್ನೃಮ್ಣಾ ನೃಮ್ಣಾನಿ ಬಲಾನಿ ದೇವ್ಯಾ ದೇವಾರ್ಹಾಣಿ ಚಾನ್ನಾನಿ ಪುನತೇ ಪ್ರೇರಯತಿ ಆದಿದಭಿಷವಾನಂತರಮೇವ ರಾಜಾನಂ ಸೋಮಂ ಮನನಾ ಮನನೀಯಾಃ ಸ್ತುತಯೋಽಗೃಭ್ಣತ । ಪರಿಗೃಹ್ಣಂತಿ । ಪ್ರಾಪ್ನುವಂತೀತ್ಯರ್ಥಃ ॥ ಹೃಗ್ರಹೋರಿತಿ ಭಕಾರಃ ॥

|| ಪ್ರತಿಪದಾರ್ಥ ||

ಅಸ್ಯ—ಈ ಸೋಮದೇವನ । ಯೇಭಿಃ—ಯಾವ ರಶ್ಮಿಗಳಿಂದ । (ಸಃ—ಸೋಮನು) । ನೃಮ್ಣಾ-ಚ—ಮಾನವರಿಗೆ ಶಕ್ತಿಯನ್ನು । ದೇವ್ಯಾ ಚ—ದೇವ ಸಂಬಂಧವಾದ ಅನ್ನಗಳನ್ನೂ । ಪುನತೇ—ಪ್ರೇರಿಸುವನೋ ಅಂತಹ । ಕೇತವಃ—ಜಗತ್ಪ್ರಜ್ಞಾಪಕಗಳೂ । ಅಮೃತ್ಯವಃ—ಮರಣ ಧರ್ಮರಹಿತವಾದವೂ । ಅದಾಭ್ಯಾಸಃ—ಹಿಂಸಾರಹಿತವಾದವೂ ಆದ । ತೇ—ರಶ್ಮಿಗಳು । ಉಭೇ ಜನುಷೀ ಅನು—ಸ್ಥಾವರ ಜಂಗಮಾತ್ಮಕಗಳಾದ ಎರಡು ತತ್ತ್ವಗಳ ರಕ್ಷಣೆಗಾಗಿಯೂ ! ಸಂತು—ಇರಲಿ । ಆದಿತ್—ಹಿಂಡಲ್ಪಟ್ಟನಂತರವೇ । ರಾಜಾನಂ—ಪ್ರಭುವಾದ ಈ ಸೋಮದೇವನನ್ನು । ಮನನಾಃ—ಧ್ಯಾನಾತ್ಮಕವಾದ ಸ್ತುತಿಗಳು । ಅಗೃಭ್ಣತ—ಆಶ್ರಯಿಸುತ್ತವೆ.

॥ ಭಾವಾರ್ಥ ॥

ಸೋಮದೇವನು ತನ್ನ ಯಾವ ರಶ್ಮಿಗಳಿಂದ ಮಾನವರಿಗೆ ಶಕ್ತಿಯನ್ನೂ ದೇವಸಂಬಂಧವಾದ ಅನ್ನಗಳನ್ನೂ ಪ್ರೇರಿಸುವನೋ ಅಂತಹ ಜಗತ್ಪ್ರಜ್ಞಾಪಕಗಳೂ, ಮರಣಧರ್ಮರಹಿತವಾದವೂ ಹಿಂಸಾರಹಿತವಾದವೂ ಆದ ರಶ್ಮಿಗಳು ಸ್ಥಾವರ ಜಂಗಮಾತ್ಮಕಗಳಾದ ಎರಡು ತತ್ತ್ವಗಳ ರಕ್ಷಣೆಗಾಗಿಯೂ ಇರಲಿ. ಹಿಂಡಲ್ಪಟ್ಟನಂತರವೇ, ಪ್ರಭುವಾದ ಸೋಮದೇವನನ್ನು ಧ್ಯಾನಾತ್ಮಕವಾದ ಸ್ತುತಿಗಳು ಆಶ್ರಯಿಸುತ್ತವೆ.

English Translation.

May those his immortal, inviolable rays protect both classes of beings, wherewith he stimulates human (strength) and divine (food); thereupon praises reach the royal (Soma).

॥ ಸಂಹಿತಾಪಾಠಃ ॥

ಸ ಮೃಜ್ಯಮಾನೋ ದಶಭಿಃ ಸುಕರ್ಮಭಿಃ ಪ್ರ ಮಧ್ಯಮಾಸು ಮಾತೃಷು
ಪ್ರಮೇ ಸಚಾ ।
ವ್ರತಾನಿ ಪಾನೋ ಅಮೃತಸ್ಯ ಚಾರುಣ ಉಭೇ ನೃಚಕ್ಷಾ ಅನು ಪಶ್ಯತೇ
ವಿಶೌ ॥ ೪ ॥

॥ ಪದಪಾಠಃ ॥

ಸಃ । ಮೃಜ್ಯಮಾನಃ । ದಶಽಭಿಃ । ಸುಕರ್ಮಽಭಿಃ । ಪ್ರ । ಮಧ್ಯಮಾಸು । ಮಾತೃಷು । ಪ್ರಽಮೇ । ಸಚಾ । ವ್ರತಾನಿ । ಪಾನಃ । ಅಮೃತಸ್ಯ । ಚಾರುಣಃ । ಉಭೇ ಇತಿ । ನೃಽಚಕ್ಷಾಃ । ಅನು । ಪಶ್ಯತೇ । ವಿಶೌ ॥ ೪ ॥

॥ ಸಾಯಣಭಾಷ್ಯಂ ॥

ಸ ಪವಮಾನಃ ಸುಕರ್ಮಭಿಃ ಶೋಭನಕರ್ಮಯುಕ್ತಾಭಿರ್ದಶಭಿರ್ದಶಸಂಖ್ಯಾಕಾಭಿರಂಗುಲೀಭಿರ್ಮೃಜ್ಯಮಾನಃ ಸ ಚಾಗ್ನೌ ಪ್ರಾಸ್ತಾಹುತಿರಿತ್ಯಾದಿಕ್ರಮೇಣಾಪಾಂ ಸಹಾಯಃ ಪ್ರಮೇ ಲೋಕಾನ್ ಪ್ರಮಾತುಂ ಮಧ್ಯಮಾಸ್ವಂತರಿಕ್ಷಸ್ಥಿತಾಸ್ವವತಿಷ್ಠತೇ ॥ ಪ್ರಮೇ । ಪ್ರಪೂರ್ವಾನ್ಮಾತೇಃ ಕ್ವಿಪಿ ಜಯಿ ಆತ ಇತಿ ಯೋಗವಿಭಾಗಾದಾಕಾರಲೋಪಃ ॥ ಕಿಂಚ ನೃಚಕ್ಷಾ ನೃಣಾಂ ದ್ರಷ್ಟಾ ಪವಮಾನಶ್ಚಾರುಣಃ ಕಲ್ಯಾಣಸ್ಯಾಮೃತಸ್ಯೋದಕಸ್ಯ ವೃಷ್ಟ್ಯರ್ಥಂ ವ್ರತಾನಿ ಯಾಗಾದಿಕರ್ಮಾಣಿ ಪಾನೋ ರಕ್ಷನ್ನುಭೇ ವಿಶೌ ಮನುಷ್ಯಾನ್ ದೇವಾಂಶ್ಚಾಂತರಿಕ್ಷೇಣ ಗಚ್ಛನ್ನನು ಪಶ್ಯತೇ । ಅನುಪಶ್ಯತಿ । ಮನುಷ್ಯಾನಭಿಮತದಾನೇನ ದೇವಾನ್ ಹವಿಷ್ಪ್ರದಾನೇನೇತಿ ॥

॥ ಪ್ರತಿಪದಾರ್ಥ ॥

**ಸಃ**— ಪವಮಾನನು । **ಸುಕರ್ಮಭಿಃ**— ಉತ್ತಮವಾದ ಕರ್ಮಯುಕ್ತವಾದ । **ದಶಭಿಃ**—ಹತ್ತು ಅಂಗುಲಿಗಳಿಂದ । **ಮೃಜ್ಯಮಾನಃ**— ಶೋಧಿಸಲ್ಪಟ್ಟು । **ಸಚಾ**—ವಸತೀವರ್ಯಾದಿಗಳೊಡನೆ ಸೇರಿ । **ಪ್ರಮೇ**—ಲೋಕಗಳ ಪ್ರಮಾಣಗಳನ್ನು ತಿಳಿಯಲು । **ಮಧ್ಯಮಾಸು**—ಅಂತರಿಕ್ಷದಲ್ಲಿ ಸ್ಥಿತನಾಗುತ್ತಾನೆ । **ನೃಚಕ್ಷಾಃ**—ಮಾನವರ ಕರ್ಮಗಳನ್ನು ವೀಕ್ಷಿಸುವ ಪವಮಾನನು । **ಚಾರುಣಃ**— ಕಲ್ಯಾಣಾತ್ಮಕವಾದ । **ಅಮೃತಸ್ಯ**—ವೃಷ್ಟ್ಯುದಕಕ್ಕೋಸ್ಕರ । **ವ್ರತಾನಿ**—ಯಾಗಾದಿ ಕರ್ಮಗಳನ್ನು । **ಪಾನಃ**—ರಕ್ಷಿಸುತ್ತ । **ವಿಶ್ವಾ**—ದೇವಮಾನವಾದಿಗಳನ್ನೆಲ್ಲಾ । **ಅನು ಪಶ್ಯತಿ**—ವೀಕ್ಷಿಸುತ್ತಾನೆ.

॥ ಭಾವಾರ್ಥ ॥

ಪವಮಾನನು ಉತ್ತಮವಾದ ಕರ್ಮಯುಕ್ತವಾದ ಹತ್ತು ಬೆರಳುಗಳಿಂದ ಶೋಧಿಸಲ್ಪಟ್ಟು ವಸತೀವರ್ಯಾದಿಗಳೊಡನೆ ಸೇರಿ ಲೋಕಗಳ ಪ್ರಮಾಣಗಳನ್ನು ತಿಳಿಯಲು: ಅಂತರಿಕ್ಷದಲ್ಲಿ ಸ್ಥಿತನಾಗುತ್ತಾನೆ. ಮಾನವರ ಕರ್ಮಗಳನ್ನು ವೀಕ್ಷಿಸುವ ಪವಮಾನನು ಕಲ್ಯಾಣಾತ್ಮಕವಾದ ವೃಷ್ಟ್ಯುದಕಕ್ಕಾಗಿ ಯಾಗಾದಿ ಕರ್ಮಗಳನ್ನು ರಕ್ಷಿಸುತ್ತ ದೇವಮಾನವಾದಿಗಳನ್ನೆಲ್ಲ ವೀಕ್ಷಿಸುತ್ತಾನೆ.

English Translation

Cleansed by the ten well-working (fingers), the companion (of the waters) stands amongst the midmost mothers to measure (the worlds); the beholder of men protecting sacred rites (for the sake) of auspicious ambrosia looks after both races.

॥ ಸಂಹಿತಾಪಾಠಃ ॥

ಸ ಮರ್ಮೃಜಾನ ಇಂದ್ರಿಯಾಯ ಧಾಯಸ ಓಭೇ ಅಂತಾ ರೋದಸೀ
ಹರ್ಷತೇ ಹಿತಃ ।
ವೃಷಾ ಶುಷ್ಮೇಣ ಬಾಧತೇ ವಿ ದುರ್ಮತೀರಾದೇದಿಶಾನಃ ಶರ್ಯಹೇವ
ಶುರುಧಃ ॥ ೫ ॥

॥ ಪದಪಾಠಃ ॥

ಸಃ । ಮರ್ಮೃಜಾನಃ । ಇಂದ್ರಿಯಾಯ । ಧಾಯಸೇ । ಆ । ಉಭೇ ಇತಿ । ಅಂತರಿತಿ । ರೋದಸೀ ಇತಿ । ಹರ್ಷತೇ । ಹಿತಃ ।

ವೃಷಾ । ಶುಷ್ಮೇಣ । ಬಾಧತೇ । ವಿ । ದುಃಽಮತೀಃ । ಆಽದೇದಿಶಾನಃ । ಶರ್ಯಹಾಽಇವ । ಶುರುಧಃ ॥ ೫ ॥

|| ಸಾಯಣಭಾಷ್ಯಂ ||

**ಮರ್ಮೃಜಾನಃ ಪವಿತ್ರೇಣ ಮೃಜ್ಯಮಾನಃ ಸ ಪವಮಾನೋ ಧಾಯಸೇ ಜಗತೋ ಧಾರಕಾಯೇಂದ್ರಿಯಾಯೇಂದ್ರಸ್ಯ ಪರ್ಯಾಪ್ತಾಯ ಬಲಾಯ ತದರ್ಥಮುಭೇ ರೋದಸೀ || ಕಾಲಾಧ್ವನೋರಿತಿ ದ್ವಿತೀಯಾ || ಉಭಯೋರ್ದ್ಯಾವಾಪೃಥಿವ್ಯೋರಂತರ್ಹಿತೋ ಮಧ್ಯೇ ವರ್ತಮಾನಃ ಸನ್ನಾ ಹರ್ಷತೇ | ಸರ್ವತೋ ಗಚ್ಛತಿ | ಇಂದ್ರಸ್ಯ ಹಿ ಸೋಮೇನ ಬಲಂ ಭವತಿ | ವೃಷಾ ಕಾಮಾನಾಮುದಕಾನಾಂ ವಾ ವರ್ಷಕಃ ಸೋಽಯಂ ಶುಷ್ಮೇಣ ಶೋಷಕೇಣ ಬಲೇನ ದುರ್ಮತೀರ್ದುಷ್ಟಬುದ್ಧೀನಸುರಾನ್ ವಿ ಬಾಧತೇ | ವಿಶೇಷೇಣ ಪೀಡಯತಿ | ಕಿಂ ಕುರ್ವನ್ | ಶುರುಧಃ || ಶುಚಾ ರುಂಧತಿ ಪರಾನಿತಿ | ಪೃಷೋದರಾದಿಃ || ದುಃಖಕಾರಿಣೋಽಸುರಾನಾದೇದಿಶಾನಃ ಪುನಃಪುನರಾಹ್ವಯನ್ ಹಂತಿ | ತತ್ರ ದೃಷ್ಟಾಂತಃ | ಶರ್ಯಹೇವ ಹನನಸಾಧನೈರಿಷುಭಿರ್ಹಂತಾ ವೀರಃ ಪ್ರತಿಭಟಾನ್ ಯಥಾ ಹಿನಸ್ತಿ ತದ್ವತ್||**

|| ಪ್ರತಿಪದಾರ್ಥ ||

**ಮರ್ಮೃಜಾನಃ**—ಶುದ್ಧಿಯನ್ನು ಹೊಂದಿದ | **ಸಃ**—ಪವಮಾನನು | **ಧಾಯಸೇ**—ಲೋಕಧಾರಕನಾದ | **ಇಂದ್ರಿಯಾಯ**—ಇಂದ್ರನ ಶಕ್ತಿವೃದ್ಧಿಗಾಗಿ | **ಉಭೇ ರೋದಸೀ ಅಂತಃ**—ದ್ಯಾವಾಪೃಥಿವಿಗಳೆರಡರಲ್ಲೂ| **ಹಿತಃ**—ಸ್ಥಾಪಿತನಾಗಿ | **ಆ ಹರ್ಷತೇ**—ಸರ್ವತ್ರ ಸಂಚರಿಸುತ್ತಾನೆ | **ವೃಷಾ**—ಕಾಮವರ್ಷಕನಾದ ಸೋಮನು | **ಶರ್ಯಹೇವ**—ಧನುರ್ಧಾರಿಯಂತೆ | **ಶುರುಧಃ**—ದುಃಖಕಾರಿಗಳಾದ ಅಸುರರನ್ನು | **ಆದೇದಿಶಾನಃ**—ಪದೇ ಪದೇ ಎದುರಿಸುತ್ತ | **ಶುಷ್ಮೇಣ**—ತನ್ನ ಬಲದಿಂದ | **ದುರ್ಮತೀಃ**—ದುಷ್ಟಬುದ್ಧಿಯುಳ್ಳ ಅಸುರರನ್ನು | **ವಿ ಬಾಧತೇ**—ಹಿಂಸಿಸಿ ನಾಶಪಡಿಸುತ್ತಾನೆ.

|| ಭಾವಾರ್ಥ ||

ಶುದ್ಧಿಯನ್ನು ಹೊಂದಿದ ಪವಮಾನನು ಲೋಕಧಾರಕನಾದ ಇಂದ್ರನ ಶಕ್ತಿವೃದ್ಧಿಗಾಗಿ ದ್ಯಾವಾಪೃಥಿವಿಗಳೆರಡನ್ನೂ ಒಳಗೊಂಡ ಪ್ರದೇಶದಲ್ಲಿ ಸ್ಥಾಪಿತನಾಗಿ ಸರ್ವತ್ರ ಸಂಚರಿಸುತ್ತಾನೆ. ಕಾಮವರ್ಷಕನಾದ ಸೋಮವು ಧನುರ್ಧಾರಿಯಂತೆ ದುಃಖಕಾರಿಗಳಾದ ಅಸುರರನ್ನು ಪದೇ ಪದೇ ಎದುರಿಸುತ್ತ ದುಷ್ಟಬುದ್ಧಿಯುಳ್ಳ ಅವರನ್ನು ಹಿಂಸಿಸಿ ನಾಶಪಡಿಸುತ್ತಾನೆ.

## English Translation.

Being filtered for Indra's world supporting strength, stationed in the midst of both worlds he goes (everywhere); the showerer destroys the evil-minded by his vigour, challenging the Asuras like an archer.

|| ಸಂಹಿತಾಪಾಠಃ ||

**ಸ ಮಾತರಾ ನ ದದೃಶಾನ ಉಸ್ರಿಯೋ ನಾನದದೇತಿ ಮರುತಾಮಿವ ಸ್ವನಃ |**
**ಜಾನನ್ನೃತಂ ಪ್ರಥಮಂ ಯತ್ಸ್ವರ್ಣರಂ ಪ್ರಶಸ್ತಯೇ ಕಮವೃಣೀತ**
**ಸುಕ್ರತುಃ || ೬ ||**

|| ಪದಪಾಠಃ ||

**ಸಃ । ಮಾತರಾ । ನ । ದದೃಶಾನಃ । ಉಸ್ರಿಯಃ । ನಾನದತ್ । ಏತಿ । ಮರುತಾಂऽಇವ । ಸ್ವನಃ ।**

**ಜಾನನ್ । ಋತಂ । ಪ್ರಥಮಂ । ಯತ್ । ಸ್ವಃऽನರಂ । ಪ್ರಶಸ್ತಯೇ । ಕಂ । ಅವೃಣೀತ । ಸುಽಕ್ರತುಃ ॥**

|| ಸಾಯಣಭಾಷ್ಯಂ ||

ಸ ಪವಮಾನೋ ಮಾತರಾ ಮಾತರೌ ದ್ಯಾವಾಪೃಥಿವ್ಯೌ ದದೃಶಾನಃ ಪುನಃಪುನಃ ಪಶ್ಯನ್ ತತೋ ನಾನದದ್ಭೃಶಂ ಶಬ್ದಂ ಕುರ್ವನ್ನೇತಿ । ಸರ್ವತ್ರ ಗಚ್ಛತಿ । ತತ್ರ ದೃಷ್ಟಾಂತಃ । ಉಸ್ರಿಯೋ ನ । ಉಸ್ರಿಯೇತಿ ಗೋನಾಮ । ತಸ್ಯ ಸ್ವರೂಪತೋ ವತ್ಸೋ ಯಥಾ ಮಾತರಂ ಗಾಂ ಪಶ್ಯಞ್ಛಬ್ದಂ ಕರೋತಿ ತದ್ವತ್ । ಕಿಂಚ ಮರುತಾಮಿವ ಯಥಾ ಮರುತಾಂ ಗಣಃ ಸ್ವನಃ ॥ ಪಚಾದ್ಯಜಂತಃ ॥ ಸ್ವನಂ ಕುರ್ವನ್ ಸರ್ವತೋ ಗಚ್ಛತಿ । ತದ್ವತ್ । ಯದುದಕಂ ಸ್ವರ್ಣರಂ । ಸ್ವರಿತಿ ಸರ್ವಪರ್ಯಾಯಃ । ಸರ್ವಮನುಷ್ಯ-ಹಿತಂ ಭವತಿ । ಸರ್ವೇ ಹಿ ಮನುಷ್ಯಾ ಉದಕೇ ಸಂಗಚ್ಛಂತೇ ತತ್ಕಾರ್ಯತ್ವಾತ್ । ತಾದೃಶಂ ಪ್ರಥಮಂ ಮುಖ್ಯಮೃತಮುದಕಂ ಜಾನನ್ ವಿದ್ವಾನ್ ಸುಕ್ರತುಃ ಶೋಭನಕರ್ಮಾ ಸುಪ್ರಜ್ಞೋ ವಾ ಸ ಪವಮಾನಃ ಪ್ರಶಸ್ತಯೇ ಪ್ರಶಂಸನಾಯಾತ್ಮಸ್ತೋತ್ರಕರಣಾಯ ಕಂ ಮನುಷ್ಯಮವೃಣೀತ । ಸಮಭಜತ । ನಾನ್ಯಮಸ್ಮದ್ವ್ಯತಿರಿಕ್ತಮಿತ್ಯರ್ಥಃ ॥

||ಪ್ರತಿಪದಾರ್ಥ||

**ಸಃ**—ಪವಮಾನನು । **ಮಾತರಾ**—ದ್ಯಾವಾಪೃಥಿವಿಗಳನ್ನು । **ದದೃಶಾನಃ**—ನೋಡುತ್ತ । **ಉಸ್ರಿಯಃ ನ**—ಕರುಗಳು ತಾಯಿಗೋವುಗಳನ್ನು ನೋಡಿ ಶಬ್ದಮಾಡುವಂತೆ । **ನಾನದತ್**—ಶಬ್ದಮಾಡುತ್ತಲೂ । **ಮರುತಾಂ ಇವ**—ಮರುತ್ತುಗಳಂತೆ । **ಸ್ವನಃ**—ಧ್ವನಿಮಾಡುತ್ತಲೂ । **ಏತಿ**—ಸರ್ವತ್ರ ಸಂಚರಿಸುತ್ತಾನೆ । **ಯತ್**—ಯಾವ ಕಾರಣದಿಂದ । **ಪ್ರಥಮಂ**—ಶ್ರೇಷ್ಠವಾದ । **ಋತಂ**—ಉದಕವನ್ನು । **ಸ್ವರ್ಣರಂ**—ಮಾನವರಿಗೆ ಹಿತಕಾರಿಯೆಂದು । **ಜಾನನ್**—ತಿಳಿದನೋ ಆದುದರಿಂದಲೇ । **ಸುಕ್ರತುಃ**--ಉತ್ತಮವಾದ ಕರ್ಮವುಳ್ಳ ಪವಮಾನನು । **ಪ್ರಶಸ್ತಯೇ**—ತನ್ನ ಪ್ರಶಂಸೆಗಾಗಿ । **ಕಂ**—ಮಾನವನನ್ನು । **ಅವೃಣೀತ**—ಆರಿಸಿಕೊಂಡನು.

|| ಭಾವಾರ್ಥ||

ತಾಯಿಗೋವುಗಳನ್ನು ನೋಡಿದೊಡನೆಯೇ ಶಬ್ದಮಾಡುವ ಕರುಗಳಂತೆಯೂ, ಮರುದ್ಗಣಗಳಂತೆಯೂ ಶಬ್ದಮಾಡುವ ಪವಮಾನನು ದ್ಯಾವಾಪೃಥಿವಿಗಳೆರಡನ್ನೂ ನೋಡುತ್ತ ಸರ್ವತ್ರ ಸಂಚರಿಸುತ್ತಾನೆ. ಶ್ರೇಷ್ಠವಾದ ಉದಕವೇ ಮಾನವರಿಗೆ ಹಿತಕಾರಿಯೆಂದು ತಿಳಿದುದರಿಂದ ಉತ್ತಮವಾದ ಕರ್ಮವುಳ್ಳ ಪವಮಾನನು ತನ್ನ ಪ್ರಶಂಸೆಗಾಗಿ ಮಾನವನನ್ನು ಆರಿಸಿಕೊಂಡನು.

English Translation

He repeatedly beholding his parents (heaven and earth) proceeds with a loud noise, like cows (looking at their calves and lowing), and with a roar (like the troop) of Maruts; knowing that water to be thc best which is good for all men, the intelligent (Pavamana) chose man to be the offerer of his praise.

॥ ಸಂಹಿತಾಪಾಠಃ ॥

ರುವತಿ ಭೀಮೋ ವೃಷಭಸ್ತವಿಷ್ಯಯಾ ಶೃಂಗೇ ಶಿಶಾನೋ ಹರಿಣೀ ವಿಚಕ್ಷಣಃ।
ಆ ಯೋನಿಂ ಸೋಮಃ ಸುಕೃತಂ ನಿ ಷೀದತಿ ಗವ್ಯಯೀ ತ್ವಗ್ಭವತಿ ನಿರ್ಣಿ-
ಗವ್ಯಯೀ ॥ ೭ ॥

॥ ಪದಪಾಠಃ ॥

ರುವತಿ । ಭೀಮಃ । ವೃಷಭಃ । ತವಿಷ್ಯಯಾ । ಶೃಂಗೇ ಇತಿ । ಶಿಶಾನಃ । ಹರಿಣೀ ಇತಿ । ವಿऽಚಕ್ಷಣಃ ।
ಆ । ಯೋನಿಂ । ಸೋಮಃ । ಸುऽಕೃತಂ । ನಿ । ಸೀದತಿ । ಗವ್ಯಯೀ । ತ್ವಕ್ । ಭವತಿ । ನಿಃऽನಿಕ್ ।
ಅವ್ಯಯೀ ॥ ೭ ॥

॥ ಸಾಯಣಭಾಷ್ಯಂ ॥

ಭೀಮಃ ಶತ್ರೂಣಾಂ ಭಯಂಕರೋ ವೃಷಭಃ ಕಾಮಾನಾಮುದಕಾನಾಂ ವಾ ವರ್ಷಕೋ ವಿಚಕ್ಷಣಃ ಸರ್ವಸ್ಯ ವಿದರ್ಶನಶೀಲಃ ಸ ಪವಮಾನಸ್ತವಿಷ್ಯಯಾ ॥ ತು ಇತಿ ವೃದ್ಧ್ಯರ್ಥಃ । ಅಸ್ಮಾದಚ ಇಃ । ಉ. ೪-೧೩೮ । ಇತೀಪ್ರತ್ಯಯಃ । ತಸ್ಮಾದಿಚ್ಛಾಯಾಮರ್ಥೇ ಕ್ಯಚ್ । ಸರ್ವಪ್ರಾತಿಪದಿಕೇಭ್ಯಃ । ಪಾ. ೭-೧-೫೧-೩ । ಇತಿ ಸುಗಾಗಮಃ ॥ ಆತ್ಮನೋ ಬಲೇಚ್ಛಯಾ ಹರಿಣೀ ಹರಿತವರ್ಣೇ ದ್ವೇ ಶೃಂಗೇ ಶಿಶಾನಸ್ತೀಕ್ಷ್ಣೀಕುರ್ವನ್ ದ್ರೋಣಕಲಶಂ ಪ್ರತಿ ದ್ವಾಭ್ಯಾಂ ಧಾರಾಭ್ಯಾಂ ಸ್ಥಾಲ್ಯಾ ಗ್ರಹಣಂ ಗೃಹ್ಣಾತಿ । ತದುಚ್ಯತೇ । ತೇ ಧಾರಾರೂಪಶೃಂಗೇ ತೀಕ್ಷ್ಣೀಕುರ್ವನ್ ರುವತಿ । ಶಬ್ದಾಯತೇ ॥ ರು ಶಬ್ದೇ। ಬಹುಲಂ ಛಂದಸೀತಿ ಶಃ ॥ ತತಃ ಸ ಸೋಮಃ ಸುಕೃತಂ ಸುಷ್ಠು ಕೃತಂ ಯೋನಿಂ ಸ್ವಸ್ಥಾನಂ ದ್ರೋಣಕಲಶಮಾ ನಿ ಷೀದತಿ । ಸಮಂತಾತ್ತಿಷ್ಠತಿ । ತಸ್ಯ ಸೋಮಸ್ಯ ನಿರ್ಣೇಜನ್ಯಿರ್ಣೇಕ್ತ್ರೀ ಪರಿಶೋಧಯಿತ್ರೀ ಗವ್ಯಯೀ ಗೋಮಯೀ ತ್ವಗ್ಭವತಿ । ಆನಡುಹೇ ಹಿ ಚರ್ಮಣಿ ಸೋಮಾಭಿಷವಃ । ಏವಮವ್ಯಯೀ ಅವಿಮಯೀ ತ್ವಕ್ಚ ನಿರ್ಣೇಕ್ತ್ರೀ ಭವತಿ । ತದ್ಧಿ ದಶಾಪವಿತ್ರಾಪೇಕ್ಷ್ಯಮಭಿಹಿತಂ ॥

|| ಪ್ರತಿಪದಾರ್ಥ ||

**ಭೀಮಃ**—ಶತ್ರುಗಳಿಗೆ ಭಯಂಕರನೂ | **ವೃಷಭಃ**—ಕಾಮವರ್ಷಕನೂ | **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ | **ತವಿಷ್ಯಯಾ**—ತನ್ನ ಶಕ್ತಿಸಂಪಾದನೆಯ ಇಚ್ಛೆಯಿಂದ | **ಹರಿಣೀ**—ಪಚ್ಚೆವರ್ಣವುಳ್ಳ | **ಶೃಂಗೇ**—ಧಾರಾರೂಪವಾದ ಕೊಂಬುಗಳನ್ನು | **ನಿಶಾನಃ**—ತೀಕ್ಷ್ಣವಾಗಿ ಮಾಡುತ್ತ | **ರುವತಿ**—ಶಬ್ದಮಾಡುತ್ತಾನೆ| **ಸೋಮಃ**—ಸೋಮನು | **ಸುಕೃತಂ**—ಉತ್ತಮವಾಗಿ ನಿರ್ಮಿತವಾದ | **ಯೋನಿಂ**—ಸ್ವಸ್ಥಾನವನ್ನಾಶ್ರಯಿಸಿ | **ಆ ನಿ ಷೀದತಿ**—ಕುಳಿತುಕೊಳ್ಳುತ್ತಾನೆ | **ಗವ್ಯಯೀ**—ಗೋಮಯವಾದ| **ತ್ವಕ್**—ಚರ್ಮವೂ | **ಅವ್ಯಯೀ**—ಉಣ್ಣೆಯ ನಾರುಗಳೂ | **ನಿರ್ಣಿಕ್**—ಅವನಿಗೆ ಶುದ್ಧಕಾರಕಗಳಾಗಿ | **ಭವತಿ**—ಆಗಿರುತ್ತವೆ.

|| ಭಾವಾರ್ಥ ||

ಶತ್ರುಗಳಿಗೆ ಭಯಂಕರನೂ, ಕಾಮವರ್ಷಕನೂ, ಸೂಕ್ಷ್ಮದೃಷ್ಟಿಯುಳ್ಳವನೂ ಆದ ಪವಮಾನನು ತನ್ನ ಶಕ್ತಿಸಂಪಾದನೆಯ ಇಚ್ಛೆಯಿಂದ ಪಚ್ಚೆವರ್ಣವುಳ್ಳ ಧಾರಾರೂಪವಾದ ಕೊಂಬುಗಳನ್ನು ತೀಕ್ಷ್ಣವಾಗಿ ಮಾಡುತ್ತ ಶಬ್ದಮಾಡುತ್ತಾನೆ. ಸೋಮನು ಉತ್ತಮವಾಗಿ ನಿರ್ಮಿತವಾದ ಸ್ವಸ್ಥಾನವನ್ನಾಶ್ರಯಿಸಿ ಕುಳಿತುಕೊಳ್ಳುತ್ತಾನೆ. ಗೋಮಯವಾದ ಚರ್ಮವೂ, ಉಣ್ಣೆಯನಾರುಗಳೂ ಅವನಿಗೆ ಶುದ್ಧಿಕಾರಕಗಳಾಗಿರುತ್ತವೆ.

## English Translation.

The formidable showerer, the contemplator of all, through desire for strength roars, sharpening his green-tinted horns; the Soma settles on his well-prepared station; the cowhide is his cleanser and the sheepskin (too).

|| ಸಂಹಿತಾಪಾಠಃ ||

ಶುಚಿಃ ಪುನಾನಸ್ತನ್ವಮರೇಪಸಮವ್ಯೇ ಹರಿರ್ನ್ಯಧಾವಿಷ್ಟ ಸಾನವಿ |
ಜುಷ್ಟೋ ಮಿತ್ರಾಯ ವರುಣಾಯ ವಾಯವೇ ತ್ರಿಧಾತು ಮಧು ಕ್ರಿಯತೇ
ಸುಕರ್ಮಭಿಃ || ೮ ||

|| ಪದಪಾಠಃ ||

ಶುಚಿಃ | ಪುನಾನಃ | ತನ್ವಂ | ಅರೇಪಸಂ | ಅವ್ಯೇ | ಹರಿಃ | ನಿ | ಅಧಾವಿಷ್ಟ | ಸಾನವಿ |
ಜುಷ್ಟಃ | ಮಿತ್ರಾಯ | ವರುಣಾಯ | ವಾಯವೇ | ತ್ರಿಽಧಾತು | ಮಧು | ಕ್ರಿಯತೇ | ಸುಕರ್ಮಽಭಿಃ ||೮||

॥ ಸಾಯಣಭಾಷ್ಯಂ ॥

ಅರೇಪಸಂ ಪಾಪರಹಿತಂ। ಯದ್ವಾ ॥ ರಿಪಿ ಗತೌ ॥ ಗತಿರಹಿತಂ । ಪಾತ್ರೇ(ಽ)ಸ್ಥಿತಮಿತ್ಯರ್ಥಃ । ತಾದೃಶಂ ತನ್ವಮಾತ್ಮೀಯಂ ಶರೀರಂ ಪುನಾನಃ ಶೋಧಯನ್ ಅತ ಏವ ಶುಚಿಃ ಪೂತೋ ದೀಪ್ಯಮಾನೋ ವಾ ಹರಿರ್ಹರಿತವರ್ಣಃ ಸೋಮಃ ಸಾನವಿ ಸಾನುನಿ ಸಮುಚ್ಛ್ರಿತೇಽವ್ಯೇಽವಿವಾಲಕೃತೇ ದಶಾಪವಿತ್ರೇ ನ್ಯಧಾವಿಷ್ಟ । ಋತ್ವಿಗ್ಭಿರ್ನಿಧೀಯತೇ ॥ ಧೂಞ್ ಕಂಪನೇ । ಸ್ತುಸಿಞ್ಸೀಯುಟ್ತಾಸಿಷು । ಪಾ. ೬–೪–೬೨ । ಇತಿ ಕರ್ಮಣಿ ಲುಙ ಚಿಣ್ವದಿಟ್ । ಣಿತ್ತ್ವಾದ್ವೃದ್ಧಿಃ ॥ ತತೋ ಮಿತ್ರಾಯ ವರುಣಾಯ ವಾಯವ ಏತೇಭ್ಯೋ ಜುಷ್ಟಃ ಪರ್ಯಾಪ್ತಸ್ತ್ರಿಧಾತು ತ್ರಿಸಂಧಾನೋ ವಸತೀವರೀಭಿರ್ದಧ್ನಾ ಪಯಸಾ ಸಂಸ್ಪೃಷ್ಟಃ ಸೋಮಸ್ತ್ರಿಧಾತು ತಾದೃಶಂ ಮಧು ಮದಕರಃ ಸೋಮಃ ಸುಕರ್ಮಭಿಃ ಶೋಭನಕರ್ಮಯುಕ್ತೈರ್ಋತ್ವಿಗ್ಭಿಃ ಕ್ರಿಯತೇ । ಮಿತ್ರಾದಿದೇವಾರ್ಥಂ ಪ್ರದೀಯತೇ ॥

॥ ಪ್ರತಿಪದಾರ್ಥ ॥

ಅರೇಪಸಂ—ಪಾಪರಹಿತವಾದ । ತನ್ವಂ—ತನ್ನ ಶರೀರವನ್ನು । ಪುನಾನಃ—ಶುದ್ಧಿಗೊಳಿಸುತ್ತ । ಹರಿಃ—ಪಚ್ಚೆವರ್ಣವುಳ್ಳವನೂ । ಶುಚಿಃ—ಪ್ರಕಾಶಮಾನನೂ ಆದ ಸೋಮನು । ಸಾನವಿ—ಉನ್ನತವಾದ ಪ್ರದೇಶದಲ್ಲಿರುವ । ಅವ್ಯೇ—ದಶಾಪವಿತ್ರದಲ್ಲಿ । ನ್ಯಧಾವಿಷ್ಟ—ಸ್ಥಾಪಿತನಾಗಿದ್ದಾನೆ । ಮಿತ್ರಾಯ—ಮಿತ್ರನಿಗೂ । ವರುಣಾಯ—ವರುಣನಿಗೂ । ವಾಯವೇ—ವಾಯುವಿಗೂ । ಜುಷ್ಟಃ—ಸಾಕಾಗುವಷ್ಟು । ತ್ರಿಧಾತು—ವಸತೀವರ್ಯಾದಿಗಳೊಡನೆ ಸೇರಿ । ಮಧು—ಮದಕಾರಕನಾಗಿ । ಸುಕರ್ಮಭಿಃ ಕ್ರಿಯತೇ—ಉತ್ತಮವಾದ ಕರ್ಮವುಳ್ಳ ಋತ್ವಿಕ್ಕುಗಳಿಂದ ಅರ್ಪಿತನಾಗುತ್ತಾನೆ.

॥ ಭಾವಾರ್ಥ ॥

ಪಚ್ಚೆವರ್ಣವುಳ್ಳವನೂ, ಪ್ರಕಾಶಮಾನನೂ ಆದ ಸೋಮನು ಪಾಪರಹಿತವಾದ ತನ್ನ ಶರೀರವನ್ನು ಶುದ್ಧಿಗೊಳಿಸುತ್ತ ಉನ್ನತವಾದ ಪ್ರದೇಶದಲ್ಲಿರುವ ದಶಾಪವಿತ್ರದಲ್ಲಿ ಸ್ಥಾಪಿತನಾಗಿದ್ದಾನೆ. ಮಿತ್ರನಿಗೂ, ವರುಣನಿಗೂ, ವಾಯುವಿಗೂ ಸಾಕಾಗುವಷ್ಟು ವಸತೀವರ್ಯುದಕ, ಹಾಲು, ಮೊಸರು ಇವುಗಳೊಡನೆ ಸೇರಿ ಮದಕಾರಕನಾಗಿ ಉತ್ತಮವಾದ ಕರ್ಮವುಳ್ಳ ಋತ್ವಿಕ್ಕುಗಳಿಂದ ಅರ್ಪಿತನಾಗುತ್ತಾನೆ.

## English Translation.

Brilliant, cleansing his sinless body, the green-tinted (Soma) is placed on the high-placed fleece; sufficient for Mitra, Varuua, and Vayu the exhilarating (Soma) mixed with the three ingredients is prepared by the performers of good rites.

॥ ಸಂಹಿತಾಪಾಠಃ ॥

ಪವಸ್ವ ಸೋಮ ದೇವವೀತಯೇ ವೃಷೇಂದ್ರಸ್ಯ ಹಾರ್ದಿ ಸೋಮಧಾನಮಾ ವಿಶ ।

ಪುರಾ ನೋ ಬಾಧಾದ್ದುರಿತಾತಿ ಪಾರಯ ಕ್ಷೇತ್ರವಿದ್ಧಿ ದಿಶ ಆಹಾ
ವಿಪೃಚ್ಛತೇ ॥ ೯ ॥

॥ ಪದಪಾಠಃ ॥

ಪವಸ್ವ । ಸೋಮ । ದೇವಽವೀತಯೇ । ವೃಷಾ । ಇಂದ್ರಸ್ಯ । ಹಾರ್ದಿ । ಸೋಮಽಧಾನಂ । ಆ । ವಿಶ ।
ಪುರಾ । ನಃ । ಬಾಧಾತ್ । ದುಃಽಇತಾ । ಅತಿ । ಪಾರಯ । ಕ್ಷೇತ್ರಽವಿತ್ । ಹಿ । ದಿಶಃ । ಆಹ ।
ವಿಽಪೃಚ್ಛತೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ವೃಷಾ ಕಾಮಾನಾಮುದಕಾನಾಂ ವಾ ಸೇಚಕಸ್ತ್ವಂ ದೇವವೀತಯೇ ದೇವಾನಾಂ ಪಾನಾಯ ಪವಸ್ವ । ಕಲಶಾದಿಷು ಕ್ಷರ । ಅಥ ಹೇ ಸೋಮ ತ್ವಮಿಂದ್ರಸ್ಯ ಹಾರ್ದಿ ಹೃದಯಂಗಮಂ ಪ್ರಿಯಂ ಸೋಮಧಾನಂ । ಸೋಮೋ ನಿಧೀಯತೇಽಸ್ಮಿನ್ನಿತಿ ಸೋಮಧಾನಂ ಪಾತ್ರಂ। ತದಾ ವಿಶ। ಪ್ರವಿಶ ಕಿಂಚ ನೋಽಸ್ಮಾಕಂ ಬಾಧಾದ್ಬಾಧನಾತ್ಪೀಡನಾತ್ಪುರಾ ಪೂರ್ವಮೇವ ದುರಿತಾನಿ ದುರ್ಗಮನಾನಿ ರಕ್ಷಾಂಸ್ಯತಿ ಪಾರಯ । ಅತೀತ್ಯ ಪಾರಂ ಗಮಯ । ಅಪಿ ಚ ಕ್ಷೇತ್ರವಿನ್ಮಾರ್ಗಜ್ಞಃ ಪುರುಷೋ ವಿಪೃಚ್ಛತೇ ವಿವಿಧಂ ಪಂಥಾನಂ ಪೃಚ್ಛತೇ ಜನಾಯ ದಿಶೋ ಮಾರ್ಗಾನಾಹ ಹಿ । ಬ್ರೂತೇ ಖಲು । ಉಕ್ತ್ವಾ ತಂ ಯಥಾ ರಕ್ಷತಿ ತಥಾ ಯಜ್ಞಮಾರ್ಗವೇತ್ತಾ ತ್ವಮಸ್ಮಭ್ಯಂ ಯಜ್ಞಪಥ ಉಕ್ತ್ವಾಽಸ್ಮಾನ್ಪಾಲಯೇತಿ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ವೃಷಾ**—ಕಾಮವರ್ಷಕನಾದ ನೀನು । **ದೇವವೀತಯೇ**—ದೇವತೆಗಳ ಪಾನಾರ್ಥವಾಗಿ । **ಪವಸ್ವ**—ಪ್ರವಹಿಸು । **ಇಂದ್ರಸ್ಯ**—ಇಂದ್ರನಿಗೆ । **ಹಾರ್ದಿ**—ತೃಪ್ತಿಕರವಾದ । **ಸೋಮಧಾನಂ**—ಪಾತ್ರವನ್ನು । **ಆ ವಿಶ**—ಪ್ರವೇಶಿಸು । **ನಃ ದುರಿತಾ**—ನಮ್ಮ ಶತ್ರುಗಳನ್ನು । **ಬಾಧಾತ್-ಪುರಾ**—ನಮ್ಮನ್ನು ಹಿಂಸಿಸುವುದಕ್ಕೆ ಮೊದಲೇ । **ಅತಿ ಪಾರಯ**—ಅವರನ್ನು ನಾಶಪಡಿಸು । **ಕ್ಷೇತ್ರವಿತ್ ಹಿ**—ಸ್ಥಳಪರಿಚಯವುಳ್ಳವನು ಮಾತ್ರ । **ವಿಪೃಚ್ಛತೇ**—ಮಾರ್ಗಗಳನ್ನು ಕೇಳುವವನಿಗೆ । **ದಿಶಃ**—ಮಾರ್ಗಗಳನ್ನು । **ಆಹ**—ಹೇಳಬಲ್ಲನು.

॥ ಭಾವಾರ್ಥ ॥

ಎಲೈ ಸೋಮದೇವನೇ, ಕಾಮವರ್ಷಕನಾದ ನೀನು ದೇವತೆಗಳ ಪಾನಾರ್ಥವಾಗಿ ಪ್ರವಹಿಸು. ಇಂದ್ರನಿಗೆ ತೃಪ್ತಿಕರವಾದ ಸೋಮಪಾತ್ರೆಯನ್ನು ಪ್ರವೇಶಿಸು. ನಮ್ಮ ಶತ್ರುಗಳು ನಮ್ಮನ್ನು ಹಿಂಸಿಸುವುದಕ್ಕೆ ಮೊದಲೇ ಅವರನ್ನು ನಾಶಪಡಿಸು. ಪ್ರದೇಶವನ್ನು ಅರಿತವನು ಮಾತ್ರ ಮಾರ್ಗಗಳನ್ನು ಕೇಳುವವನಿಗೆ ಅವನ್ನು ಹೇಳಬಲ್ಲನು.

English Translaton

Flow Soma, the showerer, for the banquet of the gods; enter the Soma-vessel dear to Indra; bring us safe past the hostile (Rakshasas) before they oppress us; for he who knows the country tells the direction to him who asks (the way).

॥ ಸಂಹಿತಾಪಾಠಃ ॥

ಹಿತೋ ನ ಸಪ್ತಿರಭಿ ವಾಜಮರ್ಷೇಂದ್ರಸ್ಯೇಂದೋ ಜಠರಮಾ ಪವಸ್ವ।
ನಾವಾ ನ ಸಿಂಧುಮತಿ ಪರ್ಷಿ ವಿದ್ವಾಞ್ಛೂರೋ ನ ಯುಧ್ಯನ್ನವ ನೋ
ನಿದಃ ಸ್ಪಃ ॥ ೧೦ ॥

॥ ಪದಪಾಠಃ ॥

ಹಿತಃ । ನ । ಸಪ್ತಿಃ । ಅಭಿ । ವಾಜಂ । ಅರ್ಷ । ಇಂದ್ರಸ್ಯ । ಇಂದೋ ಇತಿ । ಜಠರಂ । ಆ । ಪವಸ್ವ ।
ನಾವಾ । ನ । ಸಿಂಧುಂ । ಅತಿ । ಪರ್ಷಿ । ವಿದ್ವಾನ್ । ಶೂರಃ । ನ । ಯುಧ್ಯನ್ । ಅವ । ನಃ । ನಿದಃ ।
ಸ್ಪರಿತಿ ಸ್ಪಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಸೋಮ ಋತ್ವಿಗ್ಭಿಃ ಪ್ರೇರ್ಯಮಾಣಃ ಸನ್ ವಾಜಂ ಸೋಮನಿಧಾನಂ ದ್ರೋಣಕಲಶಮಭ್ಯರ್ಷ । ಅಭಿಗಚ್ಛ । ತತ್ರ ದೃಷ್ಟಾಂತಃ । ಹಿತೋ ನ ಸಪ್ತಿಃ । ಅಶ್ವೋ ಹಿತಃ ಪ್ರೇರ್ಯಮಾಣಃ ಸನ್ ವಾಜಂ ಸಂಗ್ರಾಮಮಭಿಲಕ್ಷ್ಯ ಯಥಾ ಯಾತಿ ತದ್ವತ್ । ತತೋ ಹೇ ಇಂದೋ ಇಂದ್ರಸ್ಯ ಜಠರಂ ಜಠರಭೂತಂ ದ್ರೋಣಕಲಶಂ ವಾ ಪವಸ್ವ । ಆಭಿಮುಖ್ಯೇನ ಪ್ರವಿಶ । ಕಿಂಚ ವಿದ್ವಾನ್ ಸರ್ವಂ ಜಾನಂಸ್ತ್ವಮಸ್ಮಾನತಿ ಪರ್ಷಿ । ದುರಿತಾನ್ಯತೀತ್ಯ ಪಾರಯ । ತತ್ರ ದೃಷ್ಟಾಂತಃ । ನಾವಾ ನ ಯಥಾ ನಾವಿಕಾಃ ಸಿಂಧುಂ ನದೀಂ ನಾವಾ ಮನುಷ್ಯಾನ್ ಪಾರಯಂತಿ ತದ್ವತ್ । ಕಿಂಚ ಹೇ ಸೋಮ ತ್ವಂ ಶೂರೋ ನ ಶೂರೋ ವೀರ ಇವ ಯುಧ್ಯಞ್ಛತ್ರೂನ್ ಸಂಪ್ರಹರನ್ ನಿದೋ ನಿಂದಕಾಚ್ಛತ್ರೋರ್ನೋಽಸ್ಮಾನವ ಸ್ಪಃ । ಅವಪಾರಯ । ಬಾಧಾಸ್ವಿನಾಶ್ಯ ಪಾಲಯ । ಯದ್ವಾ । ನೋಽಸ್ಮಾಕಂ ನಿದೋ ನಿಂದಕಾಞ್ಛತ್ರೂನವ ಸ್ಪಃ । ಅವಾಙ್ಮುಖಂ ಜಹಿ ॥ ಸ್ಪೃ ಹಿಂಸಾಯಾಂ । ಬಹುಲಂ ಛಂದಸೀತಿ ಶ್ನಾಪ್ರತ್ಯಯಸ್ಯ ಲುಕ್ । ತಿಪಿ ಗುಣೇ ಹಲ್ಙ್ಯಾದಿನಾ ತಿಪೋ ಲೋಪಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಹಿತಃ**—ಪ್ರಚೋದಿತವಾದ । **ಸಪ್ತಿಃ ನ**—ಅಶ್ವವು ಯುದ್ಧರಂಗವನ್ನು ಪ್ರವೇಶಿಸುವಂತೆ । **ವಾಜಂ**—ದ್ರೋಣಕಲಶವನ್ನು । **ಅಭ್ಯರ್ಷ**—ಪ್ರವೇಶಿಸು । **ಇಂದ್ರಸ್ಯ**—ಇಂದ್ರನ । **ಜಠರಂ**—ಜಠರವನ್ನು ಕುರಿತು । **ಆ ಪವಸ್ವ**—ಪ್ರವಹಿಸು । **ಸಿಂಧುಂ**—ನದಿಯನ್ನು । **ನಾವಾ ನ**—ಅಂಬಿಗನು ದೋಣಿಯಿಂದ ದಾಟಿಸುವಂತೆ । **ವಿದ್ವಾನ್**—ಎಲ್ಲವನ್ನೂ ತಿಳಿದ ನೀನು । **ಅತಿ ಪರ್ಷಿ**—ನಮ್ಮನ್ನು ದುಃಖಗಳಿಂದ ದಾಟಿಸು । **ಶೂರೋ ನ**—ಶೂರನಂತೆ । **ಯುಧ್ಯನ್**—ಯುದ್ಧಮಾಡುತ್ತ । **ನಿದಃ**—ದೂಷಕರಾದ ಶತ್ರುಗಳಿಂದ । **ನಃ**—ನಮ್ಮನ್ನು । **ಅವ ಸ್ಪಃ**—ರಕ್ಷಿಸಿ ಧರಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಚೋದಿತವಾದ ಅಶ್ವವು ಯುದ್ಧವನ್ನು ಪ್ರವೇಶಿಸುವಂತೆ ನೀನು ಋತ್ವಿಕ್ಕುಗಳಿಂದ ಪ್ರಚೋದಿತನಾಗಿ ದ್ರೋಣಕಲಶವನ್ನು ಪ್ರವೇಶಿಸು. ನದಿಯನ್ನು ಅಂಬಿಗನು ದೋಣಿಯಿಂದ ದಾಟಿಸುವಂತೆ ಎಲ್ಲವನ್ನೂ ತಿಳಿದ ನೀನು ನಮ್ಮನ್ನು ದುಃಖಗಳಿಂದ ದಾಟಿಸು. ಯುದ್ಧಮಾಡುವ ಶೂರನಂತೆ ನೀನು ನಮ್ಮನ್ನು ದೂಷಕರಾದ ಶತ್ರುಗಳಿಂದ ರಕ್ಷಿಸು.

## English Translation.

Hasten (to the vessel) as a horse when urged (hastens) to the battle; flow Indu into Indra's belly; all knowing (Soma) bear us (safe) across, as (boatmen bear people) across a river in a boat; fighting like a hero, defend us from the reviling (of the foe).

# ಎಪ್ಪತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಆ ದಕ್ಷಿಣೇತಿ ನವರ್ಚಂ ಚತುರ್ಥಂ ಸೂಕ್ತಂ ವೈಶ್ವಾಮಿತ್ರಸ್ಯರ್ಷಭಸ್ಯಾರ್ಷಂ ಪವಮಾನಸೋಮದೇವತಾಕಂ ನವಮೀ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ಆ ದಕ್ಷಿಣಾ ನವ ಋಷಭಸ್ತ್ರೈಷ್ಟುಭಾಂತಂ ವೈಶ್ವಾಮಿತ್ರಾವಿತಿ । ತಾವಿತ್ಯನೇನ ಪ್ರಕೃತೋ ರೇಣುರ್ಋಷಭಶ್ಚೋಭೇ ಪರಾಮೃಶ್ಯೇತೇ । ಶ್ರೂಯತೇ ಹಿ । ಅಥ ಹ ವಿಶ್ವಾಮಿತ್ರಃ ಪುತ್ರಾನಾಮಂತ್ರಯಾಮಾಸ ಮಧುಚ್ಛಂದಾಃ ಶೃಣೋತನ ಋಷಭೋ ರೇಣುರಷ್ಟಕಃ । ಐ. ಬ್ರಾ. ೭-೧೭ । ಇತಿ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು–**ಆ ದಕ್ಷಿಣಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ **ಒಂಭತ್ತು** ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರಪುತ್ರನಾದ ಋಷಭನೆಂಬುವನು ಋಷಿಯು ; ಪವಮಾನ **ಸೋಮ**ನು ದೇವತೆಯು ; **ಈ** ಸೂಕ್ತದ ಒಂಭತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು **ಜಗತೀ** ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಆ ದಕ್ಷಿಣಾ ನವ ಋಷಭಸ್ತ್ರೈಷ್ಟುಭಾಂತಂ ವೈಶ್ವಾಮಿತ್ರೌ** ಎಂದು ಹೇಳಿರುವುದು.

**ಇತಿ ತೌ** ಎಂದು ಹೇಳಿರುವುದರಿಂದ ಹಿಂದಿನ ಸೂಕ್ತಕ್ಕೆ ರೇಣುವೂ, ಈ ಸೂಕ್ತಕ್ಕೆ ಋಷಭನೂ ಈ ಇಬ್ಬರೂ ಋಷಿಗಳೆಂದರ್ಥವು. ಐತರೇಯ ಬ್ರಾಹ್ಮಣದಲ್ಲಿ—**ಅಥ ಹ ವಿಶ್ವಾಮಿತ್ರಃ ಪುತ್ರಾನಾಮಂತ್ರಯಾಮಾಸ ಮಧುಚ್ಛಂದಾಃ ಶೃಣೋತನ ಋಷಭೋ ರೇಣುರಷ್ಟಕಃ** (ಐ. ಬ್ರಾ. ೭–೧೭) ಎಂದರೆ ವಿಶ್ವಾಮಿತ್ರಋಷಿಯು ತನ್ನ ಪುತ್ರರನ್ನು ಕರೆಯುವ ಸಂದರ್ಭದಲ್ಲಿ ಮಧುಚ್ಛಂದಾಃ, ಋಷಭಃ, ರೇಣುಃ, ಅಷ್ಟಕಃ ಎಂಬ ತನ್ನ ಪುತ್ರರಲ್ಲಿ ಕೆಲವರ ಹೆಸರುಗಳನ್ನು ಹೇಳಿದಾನೆ ಎಂದಿದೆ. ಆದ್ದರಿಂದ ರೇಣು ಮತ್ತು ಋಷಭ ಎಂಬೀರ್ವರೂ ವಿಶ್ವಾಮಿತ್ರಋಷಿಯ ಪುತ್ರರು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೧

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೭೧ ॥

ಅಷ್ಟಕ—೭ ॥ ಅಧ್ಯಾಯ—೨ ॥ ವರ್ಗ—೨೫, ೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಋಷಭೋ ವೈಶ್ವಾಮಿತ್ರಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—೧–೮. ಜಗತೀ । ೯–ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ದಕ್ಷಿಣಾ ಸೃಜ್ಯತೇ ಶುಷ್ಮ್ಯಾ೩ಸದಂ ವೇತಿ ದ್ರುಹೋ ರಕ್ಷಸಃ ಪಾತಿ ಜಾಗೃವಿಃ ।
ಹರಿರೋಪಶಂ ಕೃಣುತೇ ನಭಸ್ಪಯ ಉಪಸ್ತಿರೇ ಚಮ್ವೋ೩ರ್ಬ್ರಹ್ಮ ನಿರ್ಣಿಜೇ ॥ ೧ ॥

॥ ಪದಪಾಠಃ ॥

ಆ । ದಕ್ಷಿಣಾ । ಸೃಜ್ಯತೇ । ಶುಷ್ಮೀ । ಆಽಸದಂ । ವೇತಿ । ದ್ರುಹಃ । ರಕ್ಷಸಃ । ಪಾತಿ । ಜಾಗೃವಿಃ ।
ಹರಿಃ । ಓಪಶಂ । ಕೃಣುತೇ । ನಭಃ । ಪಯಃ । ಉಪಽಸ್ತಿರೇ । ಚಮ್ವೋಃ । ಬ್ರಹ್ಮ । ನಿಃಽನಿಜೇ ॥ ೧ ॥

॥ ಸಾಯಣಭಾಷ್ಯಂ ॥

ಸೋಮಸ್ಯ ಸ್ವಭೂತೇ ಯಜ್ಞ ಋತ್ವಿಗ್ಭ್ಯೋ ದಕ್ಷಿಣಾ ಸೃಜ್ಯತೇ । ಅಸ್ಮಾಭಿಃ ಪ್ರದೀಯತೇ । ಶುಷ್ಮೀ ಬಲವಾನ್ ಸೋಮ ಆಸದಮಾಸ್ಥಾನಂ ದ್ರೋಣಾಖ್ಯಂ ವೇತಿ । ಪ್ರವಿಶತಿ । ಕಿಂಚ ಜಾಗೃವಿರ್ಜಾಗರಣಶೀಲಃ ಸೋಮೋ ದ್ರುಹೋ ದ್ರೋಹಕಾರಿಣೋ ರಕ್ಷಸೋ ರಾಕ್ಷಸಾತ್ಪಾತಿ । ಸ್ತೋತೄನ್ರಕ್ಷತಿ । ಅಪಿ ಚ ಹರಿರ್ಹರಿತವರ್ಣಃ ಸೋಮ ಓಪಶಂ । ಆ ಸಮಂತಾದುಪಶೇತೆ ಇತ್ಯೋಪಶಃ । ಸರ್ವಸ್ಯ ಧಾರಕಂ

ನಭೋ ನಭಸ ಆದಿತ್ಯಸ್ಯ ಸ್ವಭೂತಮುದಕಂ ಕೃಣುತೇ । ಸರ್ವತ್ರ ಕರೋತಿ । ಅಗ್ನೌ ಪ್ರಾಸ್ತಾಹುತಿರಿತ್ಯಾದಿಕ್ರಮೇಣ ಕರೋತೀತ್ಯರ್ಥಃ । ಯದ್ವಾ । ನಭೋಽಂತರಿಕ್ಷಂ ಪಯಃ ಪಯಸೋ ಧಾರಕಂ ಕರೋತೀತಿ । ಕಿಂಚಾಯಂ ಸೋಮಶ್ಚಮ್ವೋಃ । ದ್ಯಾವಾಪೃಥಿವೀನಾಮೈತತ್ । ಚಮಂತಿ ಭಕ್ಷಯಂತಿ ಮನುಷ್ಯದೇವಾ ಅತ್ರೇತಿ । ತಯೋರುಪಸ್ತಿರ ಉಪಸ್ತರಣಾಯಾಚ್ಛಾದನಾಯ ಬ್ರಹ್ಮ ಬೃಹದುದ್ಯತಂ ತಮಾಂಸಿ ವಿನಾಶಯಂತಂ ಯದ್ವಾ ಪರಿವೃಢಂ ಸೂರ್ಯಂ ದ್ಯುಲೋಕೇ ಕರೋತಿ । ತಥಾ ತಮೇವ ಸೂರ್ಯಂ ನಿರ್ಣಿಜೇ ಪದಾರ್ಥಾನಾಂ ನಿರ್ನೇಜನಾಯ ಪರಿಶೋಧನಾಯ ಚ ಕರೋತಿ । ಆದಿತ್ಯೋ ಹಿ ದ್ಯಾವಾಪೃಥಿವ್ಯೌ ಸ್ವತೇಜಸೋಪಸ್ತೃಣಾತಿ । ಸ ಹಿ ಸ್ವಭಾಸಾ ಸರ್ವಂ ನಿರ್ನೇಕ್ತಿ ಚ ॥

॥ ಪ್ರತಿಪದಾರ್ಥ ॥

ದಕ್ಷಿಣಾ—ದಕ್ಷಿಣೆಯು । ಆ ಸೃಜ್ಯತೇ—ನಮ್ಮಿಂದ ಅರ್ಪಿತವಾಗುತ್ತದೆ । ಶುಷ್ಮೀ— ಶಕ್ತಿಯುತನಾದ ಸೋಮನು । ಆಸದಂ—ದ್ರೋಣಕಲಶವನ್ನು । ವೇತಿ—ಪ್ರವೇಶಿಸುತ್ತಾನೆ । ಜಾಗೃವಿಃ—ಎಚ್ಚರದಿಂದಿರುವ ಸೋಮನು । ದ್ರುಹಃ—ದ್ರೋಹಿಗಳಾದ । ರಕ್ಷಸಃ—ರಾಕ್ಷಸರಿಂದ। ಪಾತಿ—ರಕ್ಷಿಸುತ್ತಾನೆ । ಹರಿಃ—ಪಚ್ಚೆವರ್ಣವುಳ್ಳ ಸೋಮನು । ಓಪಶಂ—ಜಗತ್ತಿಗೆ ಧಾರಕವಾದುದೂ । ನಭಃ—ಆದಿತ್ಯಸಂಬಂಧಿಯೂ ಆದ । ಪಯಃ—ಉದಕವನ್ನು । ಕೃಣುತೇ—ನಿರ್ಮಿಸುತ್ತಾನೆ । ಚಮ್ವೋಃ - ದ್ಯಾವಾಪೃಥಿವಿಗಳನ್ನು । ಉಪಸ್ತಿರೇ—ಹೊದ್ದಿಸಲು ಸಾಧನವಾದ । ಬ್ರಹ್ಮ—ಆದಿತ್ಯನನ್ನು । ನಿರ್ಣಿಜೇ—ಜಗತ್ತಿನ ಶುದ್ಧಿಗಾಗಿ ನಿರ್ಮಿಸುತ್ತಾನೆ.

॥ ಭಾವಾರ್ಥ ॥

ದಕ್ಷಿಣೆಯು ನಮ್ಮಿಂದ ಅರ್ಪಿತವಾಗಿರುತ್ತದೆ. ಶಕ್ತಿಯುತನಾದ ಸೋಮನು ದ್ರೋಣಕಲಶವನ್ನು ಪ್ರವೇಶಿಸುತ್ತಾನೆ. ಎಚ್ಚರದಿಂದಿರುವ ಸೋಮನು ದ್ರೋಹಿಗಳಾದ ಅಸುರರಿಂದ ಯಜಮಾನರನ್ನು ರಕ್ಷಿಸುತ್ತಾನೆ. ಪಚ್ಚೆವರ್ಣವುಳ್ಳ ಸೋಮನು ಜಗತ್ತಿಗೆ ಧಾರಕವಾದುದೂ, ಆದಿತ್ಯಸಂಬಂಧಿಯೂ ಆದ ಉದಕವನ್ನು ನಿರ್ಮಿಸುತ್ತಾನೆ. ದ್ಯಾವಾಪೃಥಿವಿಗಳನ್ನು ಹೊದ್ದಿಸಲು ಸಾಧನವಾದ ಆದಿತ್ಯನನ್ನು ಜಗತ್ತಿನ ಶುದ್ಧಿಗಾಗಿ ನಿರ್ಮಿಸುತ್ತಾನೆ.

English Translation

The donation is given ; the vigorous (Soma) enters his resting-place, and, vigilant, guards (his worshippers) against the malignant Rakshasas ; the green-tinted (Soma) produces the all-sustaining water of the sun ; (he places) the mighty sun to cover the two worlds, to purify (created things).

॥ ಸಂಹಿತಾಪಾಠಃ ॥

ಪ್ರ ಕೃಷ್ಟಿಹೇವ ಶೂಷ ಏತಿ ರೋರುವದಸುರ್ಯಂ೧ ವರ್ಣಂ ನಿ ರಿಣೀತೇ ಅಸ್ಯ ತಂ ।

ಜಹಾತಿ ವವ್ರಿಂ ಪಿತುರೇತಿ ನಿಷ್ಕೃತಮುಪಪ್ರುತಂ ಕೃಣುತೇ ನಿರ್ಣಿಜಂ
ತನಾ ॥ ೧ ॥

॥ ಪದಪಾಠಃ ॥

ಪ್ರ । ಕೃಷ್ಟಿಹಾಽಇವ । ಶೂಷಃ । ಏತಿ । ರೋರುವತ್ । ಅಸುರ್ಯಂ । ವರ್ಣಂ । ನಿ । ರಿಣೀತೇ । ಅಸ್ಯ । ತಂ ।

ಜಹಾತಿ । ವವ್ರಿಂ । ಪಿತುಃ । ಏತಿ । ನಿಃಽಕೃತಂ । ಉಪಽಪ್ರುತಂ । ಕೃಣುತೇ । ನಿಃಽನಿಜಂ । ತನಾ ॥ ೧ ॥

॥ ಸಾಯಣಭಾಷ್ಯಂ ॥

ಶೂಷಃ ಶತ್ರೂಣಾಂ ಶೋಷಕೋ ಬಲವಾನ್ ಸೋಮೋ ರೋರುವದತ್ಯಂತಂ ಶಬ್ದಂ ಕುರ್ವನ್ ಕೃಷ್ಟಿಹೇವ ಮನುಷ್ಯಾಣಾಂ ಹಂತಾ ಯೋದ್ಧೇವ ಪ್ರೈತಿ । ಪ್ರಗಚ್ಛತಿ । ಕಿಂಚಾಸುರ್ಯಮಸುರಾಣಾಂ ಬಾಧಕಸ್ಯಾತ್ಮನೋ ವರ್ಣಂ ಹರಿತಮಾವಾರಕಂ ಬಲಂ ವಾ ನಿ ರಿಣೀತೇ । ನಿರ್ಗಮಯತಿ । ತತಃ ಸ ಸೋಮೋ ವವ್ರಿಂ । ವೃಣೋತಿ ಶರೀರಮಿತಿ ವವ್ರಿರ್ಜರಾ । ಜಹಾತಿ । ತ್ಯಜತಿ । ಕಥಮಿತಿ ಚೇತ್ ತದುಚ್ಯತೇ । ಪಿತುರನ್ನಂ ಸೋಮೋ ನಿಷ್ಕೃತಂ ಸಂಸ್ಕೃತಂ ದ್ರೋಣಕಲಶಂ ದಿವಂ ವೇದಾನೀಮೇತಿ । ಗಚ್ಛತಿ । ಕಿಂಚ ಸೋಮಸ್ತನಾವಿವಾಲೇನ ತತೇ ವಿಸ್ತೃತೇ ದಶಾಪವಿತ್ರೇ ನಿರ್ಣಿಜಂ । ನಿರ್ಣಿಗಿತಿ ರೂಪನಾಮ । ಆತ್ಮೀಯಂ ರೂಪಮುಪಪ್ರುತಮುಪಗಮನಶೀಲಂ ಕೃಣುತೇ । ಕರೋತಿ । ತಸ್ಮಾಜ್ಜರಾಂ ತ್ಯಜತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶೂಷಃ**—ಶತ್ರುಶೋಷಕನಾದ ಸೋಮನು । **ರೋರುವತ್**—ಶಬ್ದಮಾಡುತ್ತ । **ಕೃಷ್ಟಿಹೇವ**—ಮಾನವರ ಹಂತಕನಾದ ಯೋಧನಂತೆ । **ಪ್ರ ಏತಿ**—ಸಂಚರಿಸುತ್ತಾನೆ । **ಅಸುರ್ಯಂ**—ಶತ್ರುನಾಶಕವಾದ । **ಅಸ್ಯ**—ತನ್ನ । **ತಂ ವರ್ಣಂ**—ಪಚ್ಚೆವರ್ಣವನ್ನು । **ನಿ ರಿಣೀತೇ**—ಪ್ರಕಾಶಪಡಿಸುತ್ತಾನೆ । **ವವ್ರಿಂ**—ಜರೆಯನ್ನು । **ಜಹಾತಿ**—ತ್ಯಾಗಮಾಡುತ್ತಾನೆ । **ಪಿತುಃ**—ಅನ್ನರೂಪನಾದ ಸೋಮನು । **ನಿಷ್ಕೃತಂ**—ಸಂಸ್ಕೃತವಾದ ದ್ರೋಣಕಲಶವನ್ನು । **ಏತಿ**—ಪ್ರವೇಶಿಸುತ್ತಾನೆ । **ತನಾ**—ದಶಾಪವಿತ್ರದಲ್ಲಿ ವಿಸ್ತೃತವಾದ । **ನಿರ್ಣಿಜಂ**—ತನ್ನ ರೂಪವನ್ನು । **ಉಪ-ಪ್ರುತಂ**—ಪ್ರಕಾಶಯೋಗ್ಯವನ್ನಾಗಿ । **ಕೃಣುತೇ**—ಮಾಡುತ್ತಾನೆ.

॥ ಭಾವಾರ್ಥ ॥

ಶತ್ರುಶೋಷಕನಾದ ಸೋಮನು ಶಬ್ದಮಾಡುತ್ತ ಮಾನವರ ಹಂತಕನಾದ ಯೋಧನಂತೆ ಸಂಚರಿಸುತ್ತಾನೆ. ಶತ್ರುನಾಶಕವಾದ ತನ್ನ ಪಚ್ಚೆವರ್ಣವನ್ನು ಪ್ರಕಾಶಪಡಿಸುತ್ತಾನೆ. ಜರೆಯನ್ನು ತ್ಯಾಗಮಾಡುತ್ತಾನೆ. ಅನ್ನರೂಪನಾದ

ಸೋಮನು ಸಂಸ್ಕೃತವಾದ ದ್ರೋಣಕಲಶವನ್ನು ಪ್ರವೇಶಿಸುತ್ತಾನೆ. ದಶಾಪವಿತ್ರದಲ್ಲಿ ವಿಸ್ತೃತವಾದ ತನ್ನ ರೂಪವನ್ನು ಪ್ರಕಾಶಯೋಗ್ಯವನ್ನಾಗಿ ಮಾಡುತ್ತಾನೆ.

## English Translation.

The powerful (Soma) advances with a roar like a slayer of **men**; he puts forth that Asura-slaying tint of his; he abandons bodily infirmity; the food goes to the prepared (altar); he assumes a form advancing **to** the outstretched (filter).

|| ಸಂಹಿತಾಪಾಠಃ ||

ಅದ್ರಿಭಿಃ ಸುತಃ ಪವತೇ ಗಭಸ್ತ್ಯೋರ್ವೃಷಾಯತೇ ನಭಸಾ ವೇಪತೇ ಮತೀ।
ಸ ಮೋದತೇ ನಸತೇ ಸಾಧತೇ ಗಿರಾ ನೇನಿಕ್ತೇ ಅಪ್ಸು ಯಜತೇ ಪರೀಮಣಿ ॥

|| ಪದಪಾಠಃ ||

ದ್ರಿಽಭಿಃ । ಸುತಃ । ಪವತೇ । ಗಭಸ್ತ್ಯೋಃ । ವೃಷಽಯತೇ । ನಭಸಾ । ವೇಪತೇ । ಮತೀ ।
। ಮೋದತೇ । ನಸತೇ । ಸಾಧತೇ । ಗಿರಾ । ನೇನಿಕ್ತೇ । ಅಪ್ಽಸು । ಯಜತೇ । ಪರೀಮಣಿ ॥ ೩ ॥

|| ಸಾಯಣಭಾಷ್ಯಂ ||

ಅದ್ರಿಭಿರ್ಗ್ರಾವಭಿರ್ಗಭಸ್ತ್ಯೋರ್ಬಾಹ್ವೋರ್ಬಾಹುಭ್ಯಾಂ ಚ ಸುತೋಽಭಿಷುತಃ ಸ ಸೋಮಃ ಪವತೇ । ಪಾತ್ರಾಣಿ ಪ್ರತಿ ಗಚ್ಛತಿ । ಯಃ ಸೋಮೋ ವೃಷಾಯತೇ ವೃಷವದಾಚರತಿ ಕಿಂಚ ಯೋ ಮತೀ ಸ್ತುತ್ಯಾಭಿಷ್ಟುತಃ ಸನ್ನಭಸಾಂತರಿಕ್ಷೇಣ ವೇಪತೇ ಸರ್ವತ್ರ ಗಚ್ಛತಿ ಸ ಸೋಮೋ ಮೋದತೇ । ಹೃಷ್ಟೋ ಭವತಿ । ತಥಾ ನಸತೇ । ಗೃಹಾದಿಷು ಸಂಶ್ಲಿಷ್ಟೋ ಭವತಿ । ಕಿಂಚ ಗಿರಾ ಸ್ತುತ್ಯಾ ಸ್ತುತಃ ಸನ್ ಸಾಧತೇ । ಸ್ತೋತೄಣಾಂ ಧನಾನ್ನಾದಿಕಂ ಸಾಧಯತಿ । ಅಪಿ ಚಾಪ್ಸು ವಸತೀವರ್ಯಾಖ್ಯಾಸು ನೇನಿಕ್ತೇ । ಶುದ್ಧೋ ಭವತಿ । ತಥಾ ಪರೀಮಣಿ ದೇವೈ ರಕ್ಷ್ಯಮಾಣೇ ಯಜ್ಞೇ ದೇವಾನಾಂ ಹವಿಷ್ಪ್ರದಾನೇನ ಪೋಷಕೇ ವಾ ಯಜ್ಞೇ ಯಜತೇ । ಪೂಜಿತೋ ಭವತಿ ॥

|| ಪ್ರತಿಪದಾರ್ಥ ||

**ಅದ್ರಿಭಿಃ**--ಹಿಂಡುವ ಕಲ್ಲುಗಳಿಂದಲೂ । **ಗಭಸ್ತ್ಯೋಃ**—ತೋಳುಗಳಿಂದಲೂ । **ಸುತಃ**—ಹಿಂಡಲ್ಪಟ್ಟ ಸೋಮನು । **ಪವತೇ**—ದಶಾಪವಿತ್ರಕ್ಕೆ ಪ್ರವೇಶಿಸುತ್ತಾನೆ । (**ಸೋಮಃ**—ಸೋಮನು) **ವೃಷಾಯತೇ**—ವೃಷಭದಂತೆ ಆಚರಿಸುತ್ತಾನೆ । **ಮತೀ**—ಸ್ತುತಿಯಿಂದ ಪ್ರಶಂಸಿತನಾಗಿ । **ನಭಸಾ**—ಅಂತರಿಕ್ಷದಿಂದ । **ವೇಪತೇ**—ಸರ್ವತ್ರ ಸಂಚರಿಸುತ್ತಾನೆ । **ಸಃ**—ಅದೇ ಸೋಮನು । **ಮೋದತೇ**—ಹರ್ಷಗೊಳ್ಳುತ್ತಾನೆ । **ನಸತೇ**—ಗೃಹಾದಿ

ಗಳಲ್ಲಿ ಅಡಕವಾಗುತ್ತಾನೆ | ಗಿರಾ—ಸ್ತುತಿಯಿಂದ ಪ್ರಶಂಸಿತನಾಗಿ | ಸಾಧತೇ—ಸ್ತೋತೃಗಳ ಇಷ್ಟಾರ್ಥಗಳನ್ನು ಸಾಧಿಸುತ್ತಾನೆ | ಅಪ್ಸು—ವಸತೀವರ್‍ಯಾದಿಗಳಲ್ಲಿ | ನೇನಿಕ್ತೇ—ಶುದ್ಧಿಯನ್ನು ಹೊಂದುತ್ತಾನೆ | ಪರೀಮಣಿ—ಯಜ್ಞದಲ್ಲಿ | ಯಜತೇ—ಪೂಜಿಸಲ್ಪಡುತ್ತಾನೆ.

|| ಭಾವಾರ್ಥ ||

ಹಿಂಡುವ ಕಲ್ಲುಗಳಿಂದಲೂ ತೋಳುಗಳಿಂದಲೂ ಹಿಂಡಲ್ಪಟ್ಟ ಸೋಮನು ದಶಾಪವಿತ್ರಕ್ಕೆ ಪ್ರವೇಶಿಸುತ್ತಾನೆ. ವೃಷಭದಂತೆ ಆಚರಿಸುತ್ತಾನೆ. ಸ್ತುತಿಯಿಂದ ಪ್ರಶಂಸಿತನಾಗಿ ಅಂತರಿಕ್ಷದಿಂದ ಸರ್ವತ್ರ ಸಂಚರಿಸುತ್ತಾನೆ. ಅದೇ ಸೋಮನು ಹರ್ಷಗೊಳ್ಳುತ್ತಾನೆ. ಗ್ರಹಾದಿಗಳಲ್ಲಿ (ಪಾತ್ರೆಗಳಲ್ಲಿ) ಅಡಕವಾಗುತ್ತಾನೆ. ಸ್ತುತಿಯಿಂದ ಪ್ರಶಂಸಿತನಾಗಿ ಸ್ತೋತೃಗಳ ಇಷ್ಟಾರ್ಥಗಳನ್ನು ಸಾಧಿಸುತ್ತಾನೆ. ವಸತೀವರ್‍ಯಾದಿಉದಕಗಳಲ್ಲಿ ಶುದ್ಧಿಯನ್ನು ಹೊಂದುತ್ತಾನೆ. ಯಜ್ಞದಲ್ಲಿ ಪೂಜಿಸಲ್ಪಡುತ್ತಾನೆ.

English Translation.

Expressed with the stones by hands (the Soma) flows: he moves like a bull; (worshipped) with praise he wanders through the firmament; he rejoices, he is embraced; (praised) with a hymn he fulfils (the desire of worshippers), he is cleansed in the waters, he is honoured at the (god)-protected (sacrifice).

|| ಸಂಹಿತಾಪಾಠಃ ||

ಪರಿ ದ್ಯುಕ್ಷಂ ಸಹಸಃ ಪರ್ವತಾವೃಧಂ ಮಧ್ವಃ ಸಿಂಚಂತಿ ಹರ್ಮ್ಯಸ್ಯ ಸಕ್ಷಣಿಂ |
ಆ ಯಸ್ಮಿನ್ಗಾವಃ ಸುಹುತಾದ ಊಧನಿ ಮೂರ್ಧಞ್ಛ್ರೀಣಂತ್ಯಗ್ರಿಯಂ ವರೀಮಭಿಃ || ೪ ||

|| ಪದಪಾಠಃ ||

ಪರಿ | ದ್ಯುಕ್ಷಂ | ಸಹಸಃ | ಪರ್ವತऽವೃಧಂ | ಮಧ್ವಃ | ಸಿಂಚಂತಿ | ಹರ್ಮ್ಯಸ್ಯ | ಸಕ್ಷಣಿಂ |
ಆ | ಯಸ್ಮಿನ್ | ಗಾವಃ | ಸುಹುತऽಅದಃ | ಊಧನಿ | ಮೂರ್ಧನ್ | ಶ್ರೀಣಂತಿ | ಅಗ್ರಿಯಂ | ವರೀಮऽಭಿಃ || ೪ ||

॥ ಸಾಯಣಭಾಷ್ಯಂ ॥

ಸಹಸಃ ಸಹಸ್ವಿನೋ ಮಧ್ವೋ ಮದಕರಾಃ ಸೋಮಾ ದ್ಯುಕ್ಷಂ ದೀಪ್ಯಮಾನೇ ದ್ಯುಲೋಕೇ ಕ್ಷಿಯಂತಂ ನಿವಸಂತಂ ಪರ್ವತಾವೃಧಂ ಮೇಘಾನಾಂ ಪರ್ವತಾನಾಂ ವಾ ವರ್ಧಯಿತಾರಂ ಹರ್ಮ್ಯಸ್ಯ ಶತ್ರುಪುರಸ್ಯ ಸಕ್ಷಣಿಮಭಿಭವಿತಾರಮಿಂದ್ರಂ ಪರಿ ಷಿಂಚಂತಿ । ತಥಾ ಸುಹುತಾದಃ ಸುಹುತಾನಾಂ ಹವಿಷಾಂ ಭಕ್ಷಯಿತಾರೋ ಗಾವೋ ಮೂರ್ಧನ್ಮೂರ್ಧನಿ ಸಮುಚ್ಛ್ರಿತೇ ಊಧನಿ ಪಯೋಧಾರಕೇ ಸ್ಥಾನೇ ಸ್ಥಿತಮಗ್ರಿಯಂ ಮುಖ್ಯಂ ಪಯೋ ವರೀಮಭಿರುರುತ್ವೈರ್ಮಹತ್ವೈರ್ಯಸ್ಮಿನ್ಪವಮಾನಗುಣವಿಶಿಷ್ಟ ಇಂದ್ರ ಆ ಶ್ರೀಣಂತಿ । ಆಮಿಶ್ರಯಂತಿ । ದಧ್ನಾ ಪಯಸಾ ಚ ಸೋಮಂ ಶ್ರೀಣಂತಿ ಖಲು । ತದುಚ್ಯತೇ ॥

॥ ಪ್ರತಿಪದಾರ್ಥ ॥

**ಯಸ್ಮಿನ್**—ಯಾವ ಇಂದ್ರನಲ್ಲಿ ॥ **ವರೀಮಭಿಃ**—ಅವನ ಮಾಹಾತ್ಮ್ಯಕ್ಕಾಗಿ । **ಸುಹುತಾದಃ**—ಉತ್ತಮವಾದ ಹವಿಸ್ಸನ್ನು ಭಕ್ಷಿಸುವ । **ಗಾವಃ**—ಗೋವುಗಳು । **ಮೂರ್ಧನ್**— ಉನ್ನತಪ್ರದೇಶದಲ್ಲಿರುವ । **ಊಧನಿ**—ಕೆಚ್ಚಲು ಪ್ರದೇಶದಲ್ಲಿರುವ । **ಅಗ್ರಿಯಂ**—ಉತ್ತಮವಾದ ಹಾಲನ್ನು । **ಆ ಶ್ರೀಣಂತಿ**—ಮಿಶ್ರ ಮಾಡುತ್ತಿವೆಯೋ ಅಂತಹವನೂ । **ದ್ಯುಕ್ಷಂ**— ಪ್ರಕಾಶಮಾನವಾದ ದ್ಯುಲೋಕದಲ್ಲಿ । **ಕ್ಷಿಯಂತಂ**—ವಾಸ ಮಾಡುವವನೂ । **ಪರ್ವತಾವೃಧಂ**—ಮೇಘಗಳನ್ನು ವೃದ್ಧಿಪಡಿಸುವವನೂ । **ಹರ್ಮ್ಯಸ್ಯ**—ಅಸುರರ ಪಟ್ಟಣಗಳನ್ನು । **ಸಕ್ಷಣಿಂ**—ನಾಶಪಡಿಸುವನೂ ಆದ ಇಂದ್ರನನ್ನು । **ಸಹಸಃ**—ಬಲಯುತವಾದವೂ । **ಮಧ್ವಃ**—ಮದಕರವಾದವೂ ಆದ ಸೋಮರಸಗಳು । **ಪರಿ ಷಿಂಚಂತಿ**—ಸುತ್ತಲೂ ಚಿಮುಕಿಸುತ್ತವೆ.

॥ ಭಾವಾರ್ಥ ॥

ಯಾವ ಪವಮಾನರೂಪವಾದ ಇಂದ್ರನಲ್ಲಿ ಅವನ ಮಾಹಾತ್ಮ್ಯದ ಕಾರಣದಿಂದ ಉತ್ತಮವಾದ ಹವಿಸ್ಸನ್ನು ಭಕ್ಷಿಸುವ ಗೋವುಗಳು ಉನ್ನತಪ್ರದೇಶದಲ್ಲಿರುವ ಕೆಚ್ಚಲುಪ್ರದೇಶದ ಉತ್ತಮವಾದ ಹಾಲನ್ನು ಮಿಶ್ರಮಾಡುತ್ತವೆಯೋ, ಅಂತಹವನೂ, ಪ್ರಕಾಶಮಾನವಾದ ದ್ಯುಲೋಕದಲ್ಲಿ ವಾಸಮಾಡುವವನೂ, ಮೇಘಗಳನ್ನು ವೃದ್ಧಿಪಡಿಸುವವನೂ, ಅಸುರರ ಪಟ್ಟಣಗಳನ್ನು ನಾಶಪಡಿಸುವವನೂ ಆದ ಇಂದ್ರನನ್ನು ಬಲಯುತವಾದವೂ, ಮದಕರವಾದವೂ ಆದ ಸೋಮರಸಗಳು ಸುತ್ತಲೂ ಚಿಮುಕಿಸುತ್ತವೆ.

## English Translation.

The powerful exhilarating Soma-juices besprinkle Indra who dwells in heaven, the augmenter of the clouds, the destroyer of the dwelling (of the foe); in whom, on account of his greatnesses, the cows, the eaters of the oblations, mix the best (of their milk contained) in the uplifted udder.

॥ ಸಂಹಿತಾಪಾಠಃ ॥

ಸಮೀಂ ರಥಂ ನ ಭುರಿಜೋರಹೇಷತ ದಶ ಸ್ವಸಾರೋ ಅದಿತೇರುಪಸ್ಥ ಆ ।
ಜಿಗಾದುಪ ಜ್ರಯತಿ ಗೋರಪೀಚ್ಯಂ ಪದಂ ಯದಸ್ಯ ಮತುಥಾ ಅಜೀ-
ಜನನ್ ॥ ೫ ॥

॥ ಪದಪಾಠಃ ॥

ಸಂ । ಈಮಿತಿ । ರಥಂ । ನ । ಭುರಿಜೋಃ । ಅಹೇಷತ । ದಶ । ಸ್ವಸಾರಃ । ಅದಿತೇಃ । ಉಪSಸ್ಥೇ । ಆ ।
ಜಿಗಾತ್ । ಉಪ । ಜ್ರಯತಿ । ಗೋಃ । ಅಪೀಚ್ಯಂ । ಪದಂ । ಯತ್ । ಅಸ್ಯ । ಮತುಥಾಃ । ಅಜೀ-
ಜನನ್ ॥ ೫ ॥

॥ ಸಾಯಣಭಾಷ್ಯಂ ॥

ಭುರಿಜೋಃ । ಬಹುನಾಮ್ನೈತತ್ । ಬಿಭ್ರತಿ ಪದಾರ್ಥಾನಾಭ್ಯಾಮಿತಿ । ತಯೋರ್ಬಾಹ್ವೋರ್ದಶ ದಶಸಂಖ್ಯಾಕಾಃ ಸ್ವಸಾರಃ ಸರ್ವತ್ರ ಸರಣಶೀಲಾ ಅಂಗುಲಯೋSದಿತೇರ್ಭೂಮೇರುಪಸ್ಥೇ ಸಮೀಪೇ ದೇವಯಜನದೇಶ ಈಮೇನಂ ಸೋಮಮಾಭಿಮುಖ್ಯೇನ ಸಮಹೇಷತ । ಸಂಪ್ರೇರಯಂತಿ ॥ ಹಿಂ ವರ್ಧನಗತ್ಯೋಃ । ಲುಙಿ ರೂಪಂ ॥ ಕಥಮಿವ । ರಥಂ ನ ರಥಂ ಯಥಾಂಗುಲಯಃ ಪ್ರೇರಯಂತಿ ತದ್ವತ್ । ಸ ಸೋಮೋ ಜಿಗಾತ್ । ಪಾತ್ರಾಣಿ ಗಚ್ಛತಿ । ಕಿಂಚ ಗೋರ್ಧೇನೋರಪೀಚ್ಯಮಂತರ್ಹಿತಂ ಪಯ ಉಪ ಜ್ರಯತಿ । ತದಾನೀಮುಪಗಚ್ಛತಿ । ಯದ್ಯದಾ ಮತುಥಾ ಮನನೀಯಗಾಥಾವಂತಃ ಸ್ತೋತಾರೋSಸ್ಯ ಸೋಮಸ್ಯ ಪದಂ ಸ್ಥಾನಮಜೀಜನನ್ ಜನಯಂತಿ ತದಾನೀಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಭುರಿಜೋಃ**—ಬಾಹುಗಳ । **ದಶ ಸ್ವಸಾರಃ**—ಹತ್ತು ಅಂಗುಲಿಗಳೂ । **ಅದಿತೇಃ**—ಪೃಥ್ವಿಯ । **ಉಪಸ್ಥೇ**—ಸಮೀಪಪ್ರದೇಶವಾದ ಯಾಗಪ್ರದೇಶದಲ್ಲಿ । **ಈಂ**—ಈ ಸೋಮನನ್ನು । **ರಥಂ ನ**—ರಥದಂತೆ । **ಆ ಸಮಹೇಷತ**—ಸುತ್ತಲೂ ಪ್ರೇರಿಸುತ್ತವೆ । **ಯತ್**—ಯಾವಾಗ । **ಮತುಥಾಃ**—ಪೂಜ್ಯರಾದ ಸ್ತೋತೃಗಳು । **ಅಸ್ಯ**—ಈ ಸೋಮಕ್ಕೆ । **ಪದಂ**—ಸ್ಥಾನವನ್ನು । **ಅಜೀಜನನ್**— ಉತ್ಪನ್ನಮಾಡುವರೋ ಆಗ । **ಜಿಗಾತ್**—ಪಾತ್ರೆಗಳನ್ನು ಪ್ರವೇಶಿಸುತ್ತದೆ । **ಗೋಃ**—ಧೇನುವಿನ । **ಅಪೀಚ್ಯಂ**—ಅಂತರ್ಹಿತವಾದ ಕ್ಷೀರವನ್ನೂ । **ಉಪ ಜ್ರಯತಿ**—ಸಮೀಪಿಸುತ್ತದೆ.

॥ ಭಾವಾರ್ಥ ॥

ಬಾಹುಗಳ ಹತ್ತು ಅಂಗುಲಿಗಳೂ ಪೃಥ್ವಿಯ ಸಮೀಪಪ್ರದೇಶವಾದ ಯಾಗಪ್ರದೇಶದಲ್ಲಿ ಈ ಸೋಮನನ್ನು ರಥದಂತೆ ಸುತ್ತಲೂ ಪ್ರೇರಿಸುತ್ತವೆ. ಯಾವಾಗ ಪೂಜ್ಯರಾದ ಸ್ತೋತೃಗಳು ಈ ಸೋಮಕ್ಕೆ ಸ್ಥಾನವನ್ನು

ಕಲ್ಪಿಸುವರೋ, ಆಗ ಪಾತ್ರೆಗಳನ್ನು ಸೋಮರಸಗಳು ಪ್ರವೇಶಿಸುತ್ತವೆ. ಧೇನುವಿನ ಅಂತರ್ಹಿತವಾದ ಕ್ಷೀರವನ್ನು ಪ್ರವೇಶಿಸುತ್ತವೆ.

## English Translation.

The ten fingers of the arms urge him near to the ground (of the sacrificial altar) like a chariot; he goes (to the vessels), he approaches the concealed (milk) of the cow when the praisers produce his resting-place.

॥ ಸಂಹಿತಾಪಾಠಃ ॥

ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ ಹಿರಣ್ಯಯಮಾಸದಂ ದೇವ ಏಷತಿ ।
ಏ ರಿಣಂತಿ ಬರ್ಹಿಷಿ ಪ್ರಿಯಂ ಗಿರಾಶ್ವೋ ನ ದೇವಾँ ಅಪ್ಯೇತಿ ಯಜ್ಞಿಯಃ ॥

॥ ಪದಪಾಠಃ ॥

ಶ್ಯೇನಃ । ನ । ಯೋನಿಂ । ಸದನಂ । ಧಿಯಾ । ಕೃತಂ । ಹಿರಣ್ಯಯಂ । ಆऽಸದಂ । ದೇವಃ । ಆ । ಈಷತಿ ।
ಆ । ಈಮಿತಿ । ರಿಣಂತಿ । ಬರ್ಹಿಷಿ । ಪ್ರಿಯಂ । ಗಿರಾ । ಅಶ್ವಃ । ನ । ದೇವಾನ್ । ಅಪಿ । ಏತಿ । ಯಜ್ಞಿಯಃ ॥ ೬ ॥

॥ ಸಾಯಣಭಾಷ್ಯಂ ॥

ಅಭಿಷ್ಟವೇ ಶ್ಯೇನೋ ನ ಯೋನಿಮಿತ್ಯೇಷಾ । ಸೂತ್ರಿತಂ ಚ । ಸಂಪ್ರೇಷಿತಃ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ । ಆ. ೪–೭ । ಇತಿ ॥ ಅಗ್ನೀಷೋಮಪ್ರಣಯನೇऽಪ್ಯೇಷಾ । ಸೂತ್ರಿತಂ ಚ । ಅಂತಶ್ಚ ಪ್ರಾಗಾ ಅದಿತಿರ್ಭವಾಸಿ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ । ಆ. ೪–೧೧। ಇತಿ ॥

ದೇವೋ ದ್ಯೋತಮಾನಃ ಪವಮಾನೋ ಧಿಯಾ ಸ್ವಕರ್ಮಣಾ ಕೃತಂ ಸಂಪಾದಿತಂ ಹಿರಣ್ಮಯಂ ಹಿರಣ್ಮಯಮಾಸದಮಾಸಂದ್ಯಭಿಧಾನಮೇಷತಿ । ಅಭಿಮುಖಂ ಗಚ್ಛತಿ ॥ ಈಷತೇರ್ಗತ್ಯರ್ಥಸ್ಯ ವ್ಯತ್ಯಯೇನ ಪರಸ್ಮೈಪದಂ ॥ ತತ್ರ ದೃಷ್ಟಾಂತಃ । ಶ್ಯೇನೋ ನ ಯೋನಿಂ ಕುಲಾಯಂ ಯಥಾ ಶ್ಯೇನಃ ಪಕ್ಷೀ ಪ್ರವಿಶತಿ ತದ್ವತ್ । ತತ ಈಮೇನಂ ಪ್ರಿಯಂ ಪ್ರೀಣಯಿತಾರಂ ಸೋಮಂ ಗಿರಾ ಸ್ತುತ್ಯಾ ಬರ್ಹಿಷಿ ಯಜ್ಞೇ ಆ ರಿಣಂತಿ । ಸ್ತೋತಾರೋऽಭಿಮುಖಂ ಪ್ರೇರಯಂತಿ । ಸ್ತುವಂತೀತ್ಯರ್ಥಃ । ಅನಂತರಂ ಯಜ್ಞಿಯೋ

**ಯಜ್ಞಾರ್ಹೋ ಯಷ್ಟವ್ಯೋಽಯಂ ಸೋಮೋಽಶ್ವೋ ನಾಶ್ವ ಇವ ತ್ವರಯಾ ದೇವಾನಪ್ಯೇತಿ ॥ ಅಭಿಗಚ್ಛತಿ ॥**

॥ ಪ್ರತಿಪದಾರ್ಥ ॥

**ಶ್ಯೇನಃ**—ಶ್ಯೇನಪಕ್ಷಿಯು| **ಯೋನಿಂ ನ**—ತನ್ನ ಗೂಡನ್ನು ಸೇರುವಂತೆ | **ದೇವಃ**—ಪ್ರಕಾಶಮಾನನಾದ ಪವಮಾನನು | **ಧಿಯಾ**—ತನ್ನ ಕರ್ಮದಿಂದ | **ಕೃತಂ**—ಸಂಪಾದಿತವಾದುದೂ | **ಹಿರಣ್ಯಯಂ**—ಸುವರ್ಣ ನಿರ್ಮಿತವಾದುದೂ ಆದ | **ಆಸದಂ**—ಸ್ಥಾನವನ್ನು | **ಏಷತಿ**—ಹೊಂದುತ್ತಾನೆ | **ಪ್ರಿಯಂ**—ಪ್ರೀತಿಪಾತ್ರನಾದ | **ಈಂ**—ಈ ಸೋಮನನ್ನು | **ಗಿರಾ**—ಸ್ತುತಿಗಳಿಂದ | **ಬರ್ಹಿಷಿ**—ಯಜ್ಞಗಳಲ್ಲಿ | **ಆ ರಿಣಂತಿ**—ಸ್ತುತಿಕರ್ತರು ಪ್ರೇರಿಸುತ್ತಾರೆ | **ಯಜ್ಞಿಯಃ**—ಪೂಜಾರ್ಹನಾದ ಸೋಮನು | **ಅಶ್ವೋ ನ**—ಅಶ್ವದಂತೆ | **ದೇವಾನ್**—ದೇವತೆಗಳನ್ನು | **ಅಪ್ಯೇತಿ**—ಸಮಿಾಪಿಸುತ್ತಾನೆ.

॥ ಭಾವಾರ್ಥ ॥

ಶ್ಯೇನಪಕ್ಷಿಯು ತನ್ನ ಗೂಡನ್ನು ಸೇರುವಂತೆ ಪ್ರಕಾಶಮಾನನಾದ ಪವಮಾನನು ತನ್ನ ಕರ್ಮದಿಂದ ಸಂಪಾದಿತವಾದುದೂ, ಸುವರ್ಣನಿರ್ಮಿತವಾದುದೂ ಆದ ಕಲಶವನ್ನು ಸೇರುತ್ತಾನೆ. ಪ್ರೀತಿಪಾತ್ರನಾದ ಈ ಸೋಮನನ್ನು ಸ್ತುತಿಕರ್ತರು ಸ್ತುತಿಗಳಿಂದ ಯಜ್ಞಗಳಲ್ಲಿ ಪ್ರೇರಿಸುತ್ತಾರೆ. ಪೂಜಾರ್ಹನಾದ ಸೋಮನು ಅಶ್ವದಂತೆ ದೇವತೆಗಳನ್ನು ಸಮಿಾಪಿಸುತ್ತಾನೆ.

English Translation

The shining (Soma) approaches the golden seat the station constructed by his holy rites, as a falcon (approaches) his net; (the worshippers) send the well-beloved by their praise to the sacred grass; the adorable Soma proceeds to the gods like a horse.

ವಿಶೇಷ ವಿಷಯಗಳು

ಅಭಿಪ್ಲವೇಷ್ಟಿಯಲ್ಲಿ **ಶ್ಯೇನೋ ನ ಯೋನಿಂ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಸಂಪ್ರೇಷಿತಃ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ** ಎಂಬ ಸೂತ್ರದಿಂದ (ಅ. ೪-೭) ವಿವೃತವಾಗಿರುವುದು. ಅಗ್ನೀಷೋಮಪ್ರಣಯನವೆಂಬ ಯಜ್ಞಾಂಗಕರ್ಮದಲ್ಲಿಯೂ ಸಹ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಂತಶ್ಚ ಪ್ರಾಗಾ ಅದಿತಿರ್ಭವಾಸಿ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ** ಎಂಬ ಸೂತ್ರದಿಂದ (ಅ. ೪-೧೦) ವಿವೃತವಾಗಿರುವುದು.

। ಸಂಹಿತಾಪಾಠಃ ॥

ಪರಾ ವ್ಯಕ್ತೋ ಅರುಷೋ ದಿವಃ ಕವಿರ್ವೃಷಾ ತ್ರಿಪೃಷ್ಠೋ ಅನವಿಷ್ಟ ಗಾ ಅಭಿ ।

ಸಹಸ್ರಣೀತಿರ್ಯತಿಃ ಪರಾಯತೀ ರೇಭೋ ನ ಪೂರ್ವೀರುಷಸೋ ವಿ
ರಾಜತಿ ॥ ೭ ॥

॥ ಪದಪಾಠಃ ॥

ಪರಾ । ವಿಽಅಕ್ತಃ । ಅರುಷಃ । ದಿವಃ । ಕವಿಃ । ವೃಷಾ । ತ್ರಿಽಪೃಷ್ಠಃ । ಅನವಿಷ್ಟ । ಗಾಃ । ಅಭಿ ।
ಸಹಸ್ರಽನೀತಿಃ । ಯತಿಃ । ಪರಾಽಯತಿಃ । ರೇಭಃ । ನ । ಪೂರ್ವೀಃ । ಉಷಸಃ । ವಿ । ರಾಜತಿ ॥ ೭ ॥

॥ ಸಾಯಣಭಾಷ್ಯಂ ॥

ಅರುಷ ಆರೋಚಮಾನಃ ಕವಿಃ ಕ್ರಾಂತಪ್ರಜ್ಞಃ ಸೋಮೋ ವ್ಯಕ್ತೋ ವಿಸ್ಪಷ್ಟಧಾರಾಯುಕ್ತಃ । ಯದ್ವಾ । ವಸತೀವರೀಭಿರ್ವಿಶೇಷೇಣ ಸಿಕ್ತಃ ಸನ್ । ದಿವೋಽಂತರಿಕ್ಷಾತ್ ಪರಾ ಪರಾಙ್ಮುಖಮಾಗಚ್ಛತಿ । ಪವಿತ್ರಾದ್ದ್ರೋಣಕಲಶಂ ಪರಾಗಚ್ಛತೀತ್ಯರ್ಥಃ । ವೃಷಾ ವೃಷಭಸ್ತ್ರಿಪೃಷ್ಠಃ । ತ್ರೀಣಿ ಸವನಾನಿ ಪೃಷ್ಠಾನ್ಯಸ್ಯೇತಿ ತ್ರಿಪೃಷ್ಠಃ ಸೋಮಸ್ಯ ಸರ್ವೇಷು ವಿದ್ಯಮಾನತ್ವಾತ್ತಸ್ಮಾತ್ರಿಪೃಷ್ಠಃ ಸೋಮೋ ಗಾಃ ಸ್ತೋತೃಭಿಃ ಕ್ರಿಯಮಾಣಾಃ ಸ್ತುತೀರಭಿಲಕ್ಷ್ಯಾನವಿಷ್ಟ । ಶಬ್ದಾಯತೇ ॥ ನು ಶಬ್ದೇ ॥ ಕಿಂಚ ಸಹಸ್ರಣೀತಿಃ ಸಹಸ್ರನಯನಃ । ಪ್ರಯೋಗಬಾಹುಲ್ಯಾಪೇಕ್ಷಂ ಗೃಹೇಷು ಚಮಸೇಷು ಚ ಸಹಸ್ರವಿಧನಯನತ್ವಂ । ಅತ ಏವ ಯತಿಃ ಪಾತ್ರಾದೀನಿ ಪ್ರತ್ಯಾಗಂತಾ ಪರಾಯತಿಃ ಕಲಶಾನ್ ಪ್ರತಿ ಪರಾಗಂತಾ ಭವತಿ । ಸೋಽಯಂ ಪೂರ್ವೀರ್ಬಹ್ವೀರುಷಸಃ ॥ ಕಾಲಾಧ್ವನೋರಿತಿ ದ್ವಿತೀಯಾ ॥ ಬಹುಷೂಷಃಕಾಲೇಷು ರೇಭೋ ನ ॥ ರೇಭೃ ಶಬ್ದೇ ॥ ಶಬ್ದಾಯಮಾನಃ ಸ್ತೋತೇವ ವಿ ರಾಜತಿ । ವಿಶೇಷೇಣ ದೀಪ್ಯತೇ । ತೇಷು ಸೋಮಸ್ಯಾಭಿಷೂಯಮಾಣತ್ವಾತ್ ಸ್ತೋತಾ ಖಲು ದೇವಾನಾಂ ಸ್ತುತಿಕರಣೇನ ರಾಜತಿ ॥

॥ ಪ್ರತಿಪದಾರ್ಥ ॥

**ಅರುಷಃ**— ಹೊಂಬಣ್ಣವುಳ್ಳವನೂ । **ಕವಿಃ**— ಮೇಧಾವಿಯೂ ಆದ ಸೋಮನು । **ವ್ಯಕ್ತಃ**— ಬೇರೆ ಬೇರೆಯಾದ ಧಾರೆಗಳಿಂದ । **ದಿವಃ**— ಅಂತರಿಕ್ಷದಿಂದ । **ಪರಾ**— ದ್ರೋಣಕಲಶಾಭಿಮುಖವಾಗಿ ಬರುತ್ತಾನೆ । **ವೃಷಾ**— ಇಷ್ಟಾರ್ಥಪ್ರದನೂ । **ತ್ರಿಪೃಷ್ಠಃ**— ಮೂರು ಸವನಕಾಲದಲ್ಲಿಯೂ ಅರ್ಪಿತನೂ ಆದ ಸೋಮನು । **ಗಾಃ ಅಭಿ**— ಸ್ತುತಿಗೆ ಅನುಕೂಲವಾಗಿ । **ಅನವಿಷ್ಟ**— ಉಪಶ್ರುತಿರೂಪವಾದ ಧ್ವನಿಮಾಡುತ್ತಾನೆ । **ಸಹಸ್ರಣೀತಿಃ**— ಅನೇಕವಾದ ದಿಕ್ಕುಗಳಿಂದ ಒಯ್ಯಲ್ಪಡುವವನೂ । **ಯತಿಃ**— ಪಾತ್ರಾದಿಗಳಿಗೆ ಬರತಕ್ಕವನೂ । **ಪರಾಯತಿಃ**— ಕಲಶಾದಿಗಳಿಗೆ ಪುನಃ ಹೋಗುವವನೂ ಆದ ಸೋಮನು । **ಪೂರ್ವೀಃ**— ಅನೇಕವಾದ । **ಉಷಸಃ**— ಉಷಃಕಾಲಗಳಲ್ಲಿಯೂ । **ರೇಭೋ ನ**— ಸ್ತುತಿಕರ್ತನಂತೆ । **ವಿ ರಾಜತಿ**— ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಹೊಂಬಣ್ಣವುಳ್ಳವನೂ, ಮೇಧಾವಿಯೂ ಆದ ಸೋಮನು ಬೇರೆ ಬೇರೆಯಾದ ಧಾರೆಗಳಿಂದ ಅಂತರಿಕ್ಷದಿಂದ ದ್ರೋಣಕಲಶಾಭಿಮುಖವಾಗಿ ಬರುತ್ತಾನೆ. ಇಷ್ಟಾರ್ಥಪ್ರದನೂ, ಮೂರು ಸವನಕಾಲದಲ್ಲಿಯೂ ಅರ್ಪಿತನೂ ಆದ

ಸೋಮನು ಸ್ತುತಿಗೆ ಅನುಕೂಲವಾಗಿ ಧ್ವನಿಮಾಡುತ್ತಾನೆ. ಅನೇಕ ದಿಕ್ಕುಗಳಿಂದ ಒಯ್ಯಲ್ಪಡುವವನೂ, ಪಾತ್ರಾದಿಗಳಿಗೆ ಬರತಕ್ಕವನೂ, ಕಲಶಾದಿಗಳಿಗೆ ಪುನಃ ಹೋಗುವವನೂ ಆದ ಸೋಮನು ಅನೇಕವಾದ ಉಷಃಕಾಲಗಳಲ್ಲಿಯೂ ಸ್ತುತಿಕರ್ತನಂತೆ ಪ್ರಕಾಶಿಸುತ್ತಾನೆ.

## English Translation.

Radiant, wise, flowing in seperate streams, (the Soma descends) from the firmament; the showerer offered at the three libations responds to the praises (of the worshippers); led in a thousand directions, coming and going, he shines at many a sunrise like one who sings praises (to the gods).

॥ ಸಂಹಿತಾಪಾಠಃ ॥

ತ್ವೇಷಂ ರೂಪಂ ಕೃಣುತೇ ವರ್ಣೋ ಅಸ್ಯ ಸ ಯತ್ರಾಶಯತ್ಸಮೃತಾ
ಸೇಧತಿ ಸ್ರಿಧಃ ।
ಅಪ್ಸಾ ಯಾತಿ ಸ್ವಧಯಾ ದೈವ್ಯಂ ಜನಂ ಸಂ ಸುಷ್ಟುತೀ ನಸತೇ ಸಂ ಗೋಅಗ್ರಯಾ ॥ ೮ ॥

॥ ಪದಪಾಠಃ ॥

ತ್ವೇಷಂ । ರೂಪಂ । ಕೃಣುತೇ । ವರ್ಣಃ । ಅಸ್ಯ । ಸಃ । ಯತ್ರ । ಅಶಯತ್ । ಸಂऽಋತಾ । ಸೇಧತಿ । ಸ್ರಿಧಃ ।
ಅಪ್ಸಾಃ । ಯಾತಿ । ಸ್ವಧಯಾ । ದೈವ್ಯಂ । ಜನಂ । ಸಂ । ಸುऽಸ್ತುತೀ । ನಸತೇ । ಸಂ । ಗೋऽಅಗ್ರಯಾ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಯ ॥ ಅನ್ವಾದೇಶೇऽಶಾದೇಶಃ ॥ ಅಸ್ಯ ಸೋಮಸ್ಯ ಸ್ವಭೂತೋ ವರ್ಣಃ ಶತ್ರೂಣಾಂ ನಿವಾರಕೋ ರಶ್ಮಿಸ್ತ್ವೇಷಂ ದೀಪ್ಯಮಾನಂ ರೂಪಂ ಕೃಣುತೇ । ಕರೋತಿ । ಸ ರಶ್ಮಿರ್ಯತ್ರ ಸಮೃತಾ ॥ ಅರ್ತೇಃ ಕ್ತಿನಿ ರೂಪಂ ॥ ಸಮ್ಯಕ್ ಪ್ರಾಪ್ಯತೇ ಯೋದ್ಧೃಭಿರತ್ರೇತಿ ಸಂಗ್ರಾಮಃ । ಅಸ್ಮಿನ್ ಸಮೃತಾ ಯುದ್ಧೇऽಶಯತ್ ಶೇತೇ ತಿಷ್ಠತಿ ॥ ಶೀಙೋ ಲಙಿ ಬಹುಲಂ ಛಂದಸೀತಿ ಶಪೋ ಲುಗಭಾವಃ ॥ ತತ್ರ ಯುದ್ಧೇ ಸ ರಶ್ಮಿಃ ಸ್ರಿಧಃ ಶೋಷಕಾಞ್ಛತ್ರೂನ್ ಸೇಧತಿ । ನಿಷೇಧತಿ । ಹಿನಸ್ತೀತಿ ಯಾವತ್ ॥ ವಾಕ್ಯ-

**ಭೇದಾದನಿಘಾತಃ ॥ ಕಿಂಚಾಪ್ಸಾಃ ॥ ಸನೋತೇರ್ವಿಟ್ಯಾತ್ಷೇ ಕೃತೇ ರೂಪಂ ॥ ಅಪಾಮುದಕಾನಾಂ ದಾತಾ । ಯದ್ವಾ । ವಸತೀವರ್ಯಾಖ್ಯಾನಾಮಪಾಂ ಸಂಭಕ್ತಾ । ಸೋಽಯಂ ಸ್ವಧಯಾ ಹವೀರೂಪೇಣಾನ್ನೇನ ಸಹ ದೈವ್ಯಂ ದೇವಾನಾಂ ಸಂಬಂಧಿನಂ ಜನಂ ಪ್ರತಿ ಯಾತಿ । ಗಚ್ಛತಿ । ಅಪಿ ಚ ಸೋಽಯಂ ಸುಷ್ಟುತೀ ಸುಸ್ತುತ್ಯಾ ಸಂ । ಸಂಗಚ್ಛತೇ । ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಕಿಂಚ ಸ ಸೋಮೋ ಗೋಅಗ್ರಯಾ ಗವಾದಿಮುಖ್ಯಯಾ ಯಯಾ ವಾಚಾ ಸ್ತೋತಾರಃ ಪಶೂನ್ ಯಾಚಂತೇ ತಯಾ ವಾಚಾ ಸಂ ನಸತೇ । ಸಂಗತೋ ಭವತಿ ॥ ನಸತಿರ್ಗತ್ಯರ್ಥಃ । ಭಿನ್ನವಾಕ್ಯತ್ವಾದನಿಘಾತಃ ॥**

॥ ಪ್ರತಿಪದಾರ್ಥ ॥

**ಅಸ್ಯ**—ಈ ಸೋಮದೇವನ । **ವರ್ಣಃ**—ರಶ್ಮಿಯು । **ತ್ವೇಷಂ**—ಕಾಂತಿಯುತವಾದ । **ರೂಪಂ**—ರೂಪವನ್ನು । **ಕೃಣುತೇ**—ನಿರ್ಮಿಸುತ್ತದೆ । **ಸಃ**—ಅದೇ ರಶ್ಮಿಯು । **ಯತ್ರ ಸಮೃತಾ**—ಯಾವ ಯಾವ ಯುದ್ಧದಲ್ಲಿ । **ಅಶಯತ್**—ವ್ಯಾಪಿಸಿ ನಿಲ್ಲುವುದೋ ಅಲ್ಲೆಲ್ಲ । **ಸ್ರಿಧಃ**—ಹಿಂಸಕರವಾದ ಶತ್ರುಗಳನ್ನು । **ಸೇಧತಿ**—ಪ್ರತಿಭಟಿಸುತ್ತದೆ । **ಅಪ್ಸಾಃ**—ಉದಕವನ್ನು ಕೊಡತಕ್ಕ ಈ ಸೋಮವು । **ಸ್ವಧಯಾ**—ಅನ್ನದೊಡನೆ । **ದೈವ್ಯಂ ಜನಂ**—ದೇವತೆಗಳಲ್ಲಿಗೆ । **ಯಾತಿ**—ಹೋಗುತ್ತದೆ । **ಸುಷ್ಟುತೀ**—ಉತ್ತಮವಾದ ಸ್ತುತಿಯೊಡನೆ । **ಸಂ (ಗಚ್ಛತೇ)**—ಸೇರಿಕೊಳ್ಳುತ್ತದೆ । **ಗೋಅಗ್ರಯಾ**—ಗವಾದಿಗಳನ್ನು ಪ್ರಾರ್ಥಿಸುವುದೇ ಮುಖ್ಯವಾದ ಸ್ತುತಿಗಳೊಡನೆ । **ಸಂ ನಸತೇ**—ಒಂದಾಗುತ್ತದೆ.

॥ ಭಾವಾರ್ಥ ॥

ಈ ಸೋಮದೇವನ ರಶ್ಮಿಯು ಕಾಂತಿಯುತವಾದ ರೂಪವನ್ನು ನಿರ್ಮಿಸುತ್ತದೆ. ಅದೇ ರಶ್ಮಿಯು ಯಾವ ಯಾವ ಯುದ್ಧದಲ್ಲಿ ವ್ಯಾಪಿಸಿ ನಿಲ್ಲುವುದೋ ಅಲ್ಲೆಲ್ಲ ಹಿಂಸಕರವಾದ ಶತ್ರುಗಳನ್ನು ಪ್ರತಿಭಟಿಸುತ್ತದೆ. ಉದಕವನ್ನು ಕೊಡತಕ್ಕ ಈ ಸೋಮವು ಅನ್ನದೊಡನೆ ದೇವತೆಗಳಲ್ಲಿಗೆ ಹೋಗುತ್ತದೆ. ಉತ್ತಮವಾದ ಸ್ತುತಿಯೊಡನೆ ಸೇರಿಕೊಳ್ಳುತ್ತದೆ. ಗವಾದಿಗಳನ್ನು ಪ್ರಾರ್ಥಿಸುವುದೇ ಮುಖ್ಯವಾಗಿ ಉಳ್ಳ ಸ್ತುತಿಗಳೊಡನೆ ಒಂದಾಗುತ್ತದೆ.

## English Translation.

His ray creates a shining form; at whatever battle it is present, it beats down the adversaries; the giver of water goes with the oblation to the divine people, (it meets) with good praise : (Soma) is joined by (a hymn) demanding cow as the chief boon.

॥ ಸಂಹಿತಾಪಾಠಃ ॥

**ಉಕ್ಷೇವ ಯೂಥಾ ಪರಿಯನ್ನರಾವೀದಧಿ ತ್ವಿಷೀರಧಿತ ಸೂರ್ಯಸ್ಯ ।**
**ದಿವ್ಯಃ ಸುಪರ್ಣೋಽವ ಚಕ್ಷತ ಕ್ಷಾಂ ಸೋಮಃ ಪರಿ ಕ್ರತುನಾ ಪಶ್ಯತೇ ಜಾಃ ॥ ೯ ॥**

|| ಪದಪಾಠಃ ||

ಉಕ್ಷಾಽಇವ । ಯೂಥಾ । ಪರಿಽಯನ್ । ಅರಾವೀತ್ । ಅಧಿ । ತ್ವಿಷೀಃ । ಅಧಿತ । ಸೂರ್ಯಸ್ಯ । ದಿವ್ಯಃ । ಸುಽಪರ್ಣಃ । ಅವ । ಚಕ್ಷತ । ಕ್ಷಾಂ । ಸೋಮಃ । ಪರಿ । ಕ್ರತುನಾ । ಪಶ್ಯತೇ । ಜಾಃ ॥ ೯ ॥

|| ಸಾಯಣಭಾಷ್ಯಂ ||

ಉಕ್ಷೇವ ವೃಷಭ ಇವ ಯೂಥಾ ಗೋಯೂಥಾನಿ ಪ್ರತ್ಯಾಗಚ್ಛನ್ಶಬ್ದಂ ಕರೋತಿ ತದ್ವದಯಂ ಸೋಮಃ ಸ್ತುತೀಃ ಪರಿಯನ್ಪರಿಗಚ್ಛನ್ನರಾವೀತ್ । ಶಬ್ದಾಯತೇ । ತತಃ ಸೂರ್ಯಸ್ಯ ಸರ್ವಸ್ಯ ಪ್ರೇರಕಸ್ಯಾದಿತ್ಯಸ್ಯ ತ್ವಿಷೀರ್ದೀಪ್ತೀರಧ್ಯಧಿತ । ಅಧಿದಧಾತಿ । ಸೂರ್ಯಾತ್ಮನಾ ದ್ಯುಲೋಕೇಽವತಿಷ್ಠತ ಇತ್ಯರ್ಥಃ ॥ ದಧಾತೇರ್ಲುಙಿ ಸ್ಥಾಘ್ವೋರಿಚ್ಚೇತೀತ್ವಂಕಿತ್ವೇ ॥ ಕಿಂಚ ದಿವ್ಯೋ ದಿವಿ ಭವಃ ಸುಪರ್ಣಃ ಸುಪತನಃ ಶ್ಯೇನರೂಪಯಾ ಗಾಯತ್ರ್ಯಾಹೃತತ್ವಾಚ್ಛೋಭನಗಮನಃ ಸೋಮಃ ಕ್ಷಾಂ । ಪೃಥಿವೀನಾಮೈತತ್ ಕ್ಷಿಯಂತಿ ನಿವಸಂತ್ಯತ್ರೇತಿ । ಕ್ಷಾಂ ಪೃಥಿವೀಮವ ಚಕ್ಷತ । ಅವಪಶ್ಯತಿ ॥ ಚಷ್ಟೇರ್ಲಙಿ ಬಹುಲಂ ಛಂದಸೀತಿ ಶಪೋ ಲುಗಭಾವಃ ॥ ತತಃ ಸೋಮೋ ಜಾ ಜಾತಾಃ ಪ್ರಜಾಃ ಕ್ರತುನಾ ಪ್ರಜ್ಞಾನೇನ ಪರಿಪಶ್ಯತೇ । ಪರಿತಃ ಪಶ್ಯತಿ ॥ ವ್ಯತ್ಯಯೇನಾತ್ಮನೇಪದಂ ॥

|| ಪ್ರತಿಪದಾರ್ಥ ||

**ಯೂಥಾ**—ಗೋಸಮೂಹವನ್ನು ಸಮೀಪಿಸುವ | **ಉಕ್ಷೇವ**—ಗೂಳಿಯಂತೆ | **ಪರಿಯನ್**—ಸ್ತುತಿಗಳೊಡನೆ ಸೇರುವ ಸೋಮನು | **ಅರಾವೀತ್**—ಶಬ್ದಮಾಡುತ್ತಾನೆ | **ಸೂರ್ಯಸ್ಯ**—ಸೂರ್ಯನ | **ತ್ವಿಷೀಃ**—ಕಾಂತಿಗಳನ್ನು | **ಅಧಿ ಅಧಿತ**—ಐಕ್ಯಮಾಡಿಕೊಳ್ಳುತ್ತಾನೆ | **ದಿವ್ಯಃ**—ದ್ಯುಲೋಕೋತ್ಪನ್ನನೂ | **ಸುಪರ್ಣಃ**—ಶ್ಯೇನರೂಪದ ಪಕ್ಷಿಯಿಂದ ಅಪಹೃತವಾದುದರಿಂದ ಶ್ರೇಷ್ಠವಾದ ಪತನವುಳ್ಳವನೂ ಆದ ಸೋಮನು | **ಕ್ಷಾಂ**—ಪೃಥ್ವಿಯನ್ನು | **ಅವ ಚಕ್ಷತ**—ನೋಡುತ್ತಾನೆ | **ಸೋಮಃ**—ಸೋಮನು | **ಜಾಃ**—ಉತ್ಪನ್ನರಾದ ಪ್ರಜೆಗಳನ್ನೆಲ್ಲ | **ಕ್ರತುನಾ**—ತನ್ನ ಉತ್ತಮಜ್ಞಾನದಿಂದ | **ಪರಿ ಪಶ್ಯತೇ**—ನೋಡುತ್ತಾನೆ.

|| ಭಾವಾರ್ಥ ||

ಗೋಸಮೂಹವನ್ನು ಸಮೀಪಿಸುವ ಗೂಳಿಯಂತೆ ಸ್ತುತಿಗಳೊಡನೆ ಸೇರುವ ಸೋಮನು ಶಬ್ದಮಾಡುತ್ತಾನೆ. ಸೂರ್ಯನ ಕಾಂತಿಗಳೊಡನೆ ಐಕ್ಯನಾಗುತ್ತಾನೆ. ದ್ಯುಲೋಕೋತ್ಪನ್ನನೂ, ಶ್ಯೇನರೂಪದ ಪಕ್ಷಿಯಿಂದ ಅಪಹೃತವಾದುದರಿಂದ ಉತ್ತಮವಾದ ಪತನವುಳ್ಳವನೂ ಆದ ಸೋಮನು ಪೃಥ್ವಿಯನ್ನು ನೋಡುತ್ತಾನೆ. ಉತ್ಪನ್ನರಾದ ಸಕಲ ಪ್ರಜೆಗಳನ್ನೂ ತನ್ನ ಉತ್ತಮವಾದ ಜ್ಞಾನದಿಂದ ನೋಡುತ್ತಾನೆ.

## English Translation.

Like a bull approaching the herds (Soma) roars (as he approaches the praises) : he appropriates the lustre of the sun ; celestial, flying gracefully he looks down upon the earth ; by his wisdom Soma contemplates mankind.

# ಎಪ್ಪತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಹರಿಂ ಮೃಜಂತೀತಿ ನವರ್ಚಂ ಪಂಚಮಂ ಸೂಕ್ತಮಾಂಗಿರಸಸ್ಯ ಹರಿಮಂತಸ್ಯಾರ್ಷಂ ಪವಮಾನ-ಸೋಮದೇವತಾಕಂ । ಜಾಗತಮೂರ್ಧ್ವಂ ಪ್ರಾಗುಶನಸಃ । ಅನು. ಋ. ೯-೭೭ । ಇತಿ ಪರಿಭಾಷಯಾ ಜಾಗತಂ । ತಥಾ ಚಾನುಕ್ರಾಂತಂ । ಹರಿಂ ಮೃಜಂತಿ ಹರಿಮಂತ ಇತಿ ॥ ಗತೋ ವಿನಿಯೋಗಃ ॥**

ಅನುವಾದವು— **ಹರಿಂ ಮೃಜಂತಿ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಗಿರಸಪುತ್ರನಾದ ಹರಿಮಂತನೆಂಬುವನು ಋಷಿಯು; ಪವಮಾನಸೋಮನು ದೇವತೆಯು; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಹರಿಂ ಮೃಜಂತಿ ಹರಿಮಂತಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೭೨

ಮಂಡಲ-೯ ॥ ಅನುವಾಕ-೪ ॥ ಸೂಕ್ತ-೭೨ ॥

ಅಷ್ಟಕ-೭ ॥ ಅಧ್ಯಾಯ-೨ ॥ ವರ್ಗ-೨೭, ೨೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಹರಿಮಂತಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

**ಹರಿಂ ಮೃಜನ್ತ್ಯರುಷೋ ನ ಯುಜ್ಯತೇ ಸಂ ಧೇನುಭಿಃ ಕಲಶೇ ಸೋಮೋ ಅಜ್ಯತೇ ।**
**ಉದ್ವಾಚಮೀರಯತಿ ಹಿನ್ವತೇ ಮತೀ ಪುರುಷ್ಟುತಸ್ಯ ಕತಿ ಚಿತ್ಪರಿಪ್ರಿಯಃ॥**

॥ ಪದಪಾಠಃ ॥

ಹರಿಂ । ಮೃಜಂತಿ । ಅರುಷಃ । ನ । ಯುಜ್ಯತೇ । ಸಂ । ಧೇನುಽಭಿಃ । ಕಲಶೇ । ಸೋಮಃ । ಅಜ್ಯತೇ ।
ಉತ್ । ವಾಚಂ । ಈರಯತಿ । ಹಿನ್ವತೇ । ಮತೀ । ಪುರುಽಸ್ತುತಸ್ಯ । ಕತಿ । ಚಿತ್ । ಪರಿಽಪ್ರಿಯಃ ॥೧॥

|| ಸಾಯಣಭಾಷ್ಯಂ ||

ಹರಿಂ ಹರಿತವರ್ಣಂ ಸೋಮಮೃತ್ವಿಜೋ ಮೃಜಂತಿ । ಮಾರ್ಜಯಂತಿ || ಮೃಜೇರಜಾದೌ ಸಂಕ್ರಮೇ ವಿಭಾಷಾವೃದ್ಧಿರಿಷ್ಯತೇ । ಮ. ೧-೧-೩-೧೦. ಕಾ. ೧-೧-೫ । ಇತಿ ತತ್ರ ವೃದ್ಧೇರಭಾವಃ || ಸೋಽಯಮರುಷಃ || ಅರ್ತೇರುಷಚ್‌ಪ್ರತ್ಯಯಃ || ಗಮನಶೀಲೋಽಶ್ವ ಇವ ಯುಜ್ಯತೇ । ಇಂದ್ರಾದಿಭಿಃ ಸಂಯುಜ್ಯತೇ । ಕಿಂಚ ಕಲಶೇ । ಕಲಶೋ ದ್ರೋಣಾಭಿಧಾನಃ । ಸ್ಥಿತಃ ಸೋಮೋ ಧೇನುಭಿರ್ಗೋವಿಕಾರೈರ್ದಧ್ಯಾದಿಭಿಃ ಸಮಜ್ಯತೇ । ಸಮಕ್ತಃ ಸಿಕ್ತೋ ಭವತಿ । ಅಪಿ ಚ ಸೋಮೋ ಯದಾ ವಾಚಂ ಶಬ್ದಮುದೀರಯತಿ ಉದ್ಗಮಯತಿ । ಶಬ್ದಂ ಕರೋತೀತ್ಯರ್ಥಃ । ತದಾ ಸ್ತೋತಾರಶ್ಚ ಮತೀ || ಸುಪಾಂ ಸುಲುಗಿತಿ ದ್ವಿತೀಯಾಯಾಃ ಪೂರ್ವಸವರ್ಣದೀರ್ಘಃ || ಸ್ತುತಿಂ ಹಿನ್ವತೇ । ಪ್ರೇರಯಂತಿ || ಹಿ ಗತೌ ವೃದ್ಧೌ ಚೇತಿ ಸ್ವಾದಿಃ । ಆತ್ಮನೇಪದೀ || ತತಃ ಸ್ತೋತ್ರಾಭಿಷ್ಟುತಃ ಸ ಪುರುಷ್ಟುತಸ್ಯ ಬಹುಸ್ತೋತ್ರಯುಕ್ತಸ್ಯ ಸ್ತೋತುಃ ಪರಿಪ್ರಿಯಃ || ಪ್ರೀಙ್ ತರ್ಪಣೇ । ಕ್ವಿಪ್ । ಶಸೀಯಙಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ || ಪರಿತಃ ಪ್ರೀಣಯಿತ್ರ್ಯಾಣಿ ಕತಿ ಚಿತ್ ಕಿಯಂತಿ ಧನಾನಿ ಪ್ರಯಚ್ಛತಿ ||

|| ಪ್ರತಿಪದಾರ್ಥ ||

**ಹರಿಂ**—ಪಚ್ಚೆವರ್ಣವುಳ್ಳ ಸೋಮನನ್ನು । **ಮೃಜಂತಿ**—ಋತ್ವಿಕ್ಕುಗಳು ಶೋಧಿಸುತ್ತಾರೆ । **ಅರುಷಃ ನ**—ವೇಗಗಾಮಿಯಾದ ಅಶ್ವವನ್ನು ರಥಕ್ಕೆ ಯೋಜಿಸುವಂತೆ । **ಸಂ ಯುಜ್ಯತೇ**—ಇಂದ್ರಾದಿಗಳೊಡನೆ ಅದು ಯೋಜಿಸಲ್ಪಡುತ್ತದೆ । **ಕಲಶೇ**—ದ್ರೋಣಕಲಶದಲ್ಲಿರುವ । **ಸೋಮಃ**—ಸೋಮನು । **ಧೇನುಭಿಃ**—ಗೋವಿಕಾರಗಳಾದ ಕ್ಷೀರಾದಿಗಳೊಡನೆ । **ಸಮಜ್ಯತೇ**—ಮಿಶ್ರಿತನಾಗುತ್ತಾನೆ । **ವಾಚಂ**—ಶಬ್ದವನ್ನು । **ಉದೀರಯತಿ**—ಉಂಟುಮಾಡುತ್ತಾನೆ । **ಮತೀ**—(ಸ್ತುತಿಕರ್ತರು) ಸ್ತೋತ್ರಗಳನ್ನೂ । **ಹಿನ್ವತೇ**—ಪಠಿಸುವ । **ಪುರುಷ್ಟುತಸ್ಯ**—ಅಧಿಕವಾಗಿ ಪ್ರಶಂಸಿಸುವ ಯಜಮಾನನಿಗೆ । **ಪರಿಪ್ರಿಯಃ**—ಎಲ್ಲಾ ವಿಧದಲ್ಲೂ ಪ್ರೀತಿಕಾರಕನಾದ । **ಕತಿ ಚಿತ್**—ಧನವನ್ನು ಎಷ್ಟು ಪ್ರಮಾಣದಲ್ಲಿ ಸೋಮನು ಕೊಡಬಲ್ಲನು ?

|| ಭಾವಾರ್ಥ ||

ಪಚ್ಚೆವರ್ಣವುಳ್ಳ ಸೋಮನನ್ನು ಋತ್ವಿಕ್ಕುಗಳು ಶೋಧಿಸುತ್ತಾರೆ. ವೇಗಗಾಮಿಯಾದ ಅಶ್ವವನ್ನು ರಥಕ್ಕೆ ಯೋಜಿಸುವಂತೆ ಇಂದ್ರಾದಿಗಳೊಡನೆ ಅದು ಯೋಜಿಸಲ್ಪಡುತ್ತದೆ. ದ್ರೋಣಕಲಶದಲ್ಲಿರುವ ಸೋಮನು ಗೋವಿಕಾರಗಳಾದ ಕ್ಷೀರಾದಿಗಳೊಡನೆ ಮಿಶ್ರಿತನಾಗುತ್ತಾನೆ. ಶಬ್ದವನ್ನು ಉಂಟುಮಾಡಿದೊಡನೆಯೇ, ಅಧಿಕವಾಗಿ ಪ್ರಶಂಸಿಸುವ ಯಜಮಾನನಿಗೆ ಎಲ್ಲ ವಿಧದಲ್ಲೂ ಪ್ರೀತಿಕರವಾದ ಧನವನ್ನು ಎಷ್ಟು ಪ್ರಮಾಣದಲ್ಲಿ ಕೊಡಬಲ್ಲನು.

## English Translation.

They cleanse the green-tinted (Soma): he is harnessed like a swift horse; the Soma is combined in the pitcher with the products of the cows. He utters a sound, (the worshippers) send forth praise; how many (boons) abundantly delighting the utterer of many praises (does Soma bestow).

|| ಸಂಹಿತಾಪಾಠಃ ||

ಸಾಕಂ ವದಂತಿ ಬಹವೋ ಮನೀಷಿಣ ಇಂದ್ರಸ್ಯ ಸೋಮಂ ಜಠರೇ ಯದಾದುಹುಃ |
ಯದೀ ಮೃಜಂತಿ ಸುಗಭಸ್ತಯೋ ನರಃ ಸನೀಳಾಭಿರ್ದಶಭಿಃ ಕಾಮ್ಯಂ ಮಧು || ೨ ||

|| ಪದಪಾಠಃ ||

ಸಾಕಂ | ವದಂತಿ | ಬಹವಃ | ಮನೀಷಿಣಃ | ಇಂದ್ರಸ್ಯ | ಸೋಮಂ | ಜಠರೇ | ಯತ್ | ಆऽದುಹುಃ |
ಯದಿ | ಮೃಜಂತಿ | ಸುऽಗಭಸ್ತಯಃ | ನರಃ | ಸऽನೀಳಾಭಿಃ | ದಶऽಭಿಃ | ಕಾಮ್ಯಂ | ಮಧು || ೨ ||

|| ಸಾಯಣಭಾಷ್ಯಂ ||

ಮನೀಷಿಣೋ ಮನಸ ಈಶಿತಾರಃ ಪ್ರಾಜ್ಞಾ ಬಹವಃ ಸ್ತೋತಾರಃ ಸಾಕಂ ಸಹೈವ ಯುಗಪನ್ಮಂತ್ರಾನ್ವದಂತಿ | ತದಾ ಸ್ತುವಂತಿ | ಯದೇಂದ್ರಸ್ಯ ಜಠರೇ ದ್ರೋಣಕಲಶೇ ಸೋಮಮಾದುಹುಃ ಋತ್ವಿಜೋ ದುದುಹುಃ ತದಾಭಿಷ್ಟುವಂತೀತಿ || ದುಹೇರ್ಲಿಟ್ಯುಸಿ ರೂಪಂ | ದ್ವಿರ್ವಚನಸ್ಯ ಚ್ಛಂದಸಿ ವಿಕಲ್ಪಿತತ್ವಾದತ್ರ ದ್ವಿರ್ವಚನಾಭಾವಃ || ಕಿಂಚ ಯದಿ ಯದಾ ಸುಗಭಸ್ತಯಃ ಶೋಭನಬಾಹುಕಾ ನರಃ ಕರ್ಮನೇತಾರೋ ಮನುಷ್ಯಾಃ ಕಾಮ್ಯಂ ಕಾಮ್ಯಮಾನಂ ಮಧು ಮದಕರಂ ಸೋಮಂ ಸನೀಳಾಭಿರ್ದಶಸಂಖ್ಯಾಕಾಭಿರ್ಮೃಜಂತಿ ಸೋಮಮಭಿಷುಣ್ವಂತಿ ತದಾ ವದಂತೀತ್ಯನ್ವಯಃ ||

|| ಪ್ರತಿಪದಾರ್ಥ ||

**ಯತ್**—ಯಾವಾಗ | **ಇಂದ್ರಸ್ಯ**—ಇಂದ್ರನ | **ಜಠರೇ**—ಜಠರರೂಪವಾದ ದ್ರೋಣಕಲಶದಲ್ಲಿ | **ಸೋಮಂ**—ಸೋಮವನ್ನು | **ಆದದುಃ**—ಋತ್ವಿಕ್ಕುಗಳು ಸುರಿಯುವರೋ | **ಯದಿ**—ಯಾವಾಗ | **ಸುಗಭಸ್ತಯಃ**—ಶ್ರೇಷ್ಠವಾದ ಬಾಹುಗಳುಳ್ಳ | **ನರಃ**—ಮಾನವರು | **ಕಾಮ್ಯಂ**—ಆಕರ್ಷಕವಾದುದೂ | **ಮಧು**—ಮದಕರವಾದುದೂ ಆದ ಸೋಮವನ್ನು | **ದಶಭಿಃ ಸನೀಳಾಭಿಃ**—ಹತ್ತು ಅಂಗುಲಿಗಳಿಂದಲೂ | **ಮೃಜಂತಿ**—ಶುದ್ಧಿಗೊಳಿಸುವರೋ ಆಗ | **ಮನೀಷಿಣಃ**—ಪ್ರಾಜ್ಞರಾದ | **ಬಹವಃ**—ಅನೇಕ ಸ್ತುತಿಕರ್ತರು | **ಸಾಕಂ**—**ವದಂತಿ**—ಒಟ್ಟಾಗಿ ಸ್ತುತಿಯನ್ನು ಪಠಿಸುವರು.

|| ಭಾವಾರ್ಥ ||

ಇಂದ್ರನ ಜಠರರೂಪವಾದ ದ್ರೋಣಕಲಶದಲ್ಲಿ ಯಾವಾಗ ಋತ್ವಿಕ್ಕುಗಳು ಸೋಮವನ್ನು ಸುರಿಯುವರೋ ಮತ್ತು ಯಾವಾಗ ಶ್ರೇಷ್ಠವಾದ ಬಾಹುಗಳುಳ್ಳ ಮಾನವರು ಆಕರ್ಷಕವಾದುದೂ ಮದಕರವಾದುದೂ ಆದ ಸೋಮ

ನನ್ನು ಹತ್ತು ಅಂಗುಲಿಗಳಿಂದಲೂ ಶುದ್ಧಿಗೊಳಿಸುವರೋ ಆಗ ಪ್ರಾಜ್ಞರಾದ ಅನೇಕ ಸ್ತುತಿಕರ್ತರು ಒಟ್ಟಿಗೆ ಸ್ತುತಿಯನ್ನು ಪಠಿಸುವರು.

### English Translation.

Many wise men utter praise together, when they have milked the Soma into Indra's belly, when fair-armed men cleanse the delightful exhilarating juice with their ten united (fingers).

|| ಸಂಹಿತಾಪಾಠಃ ||

ಅರಮಮಾಣೋ ಅತ್ಯೇತಿ ಗಾ ಅಭಿ ಸೂರ್ಯಸ್ಯ ಪ್ರಿಯಂ ದುಹಿತುಸ್ತಿರೋ ರವಂ ।
ಅನ್ವಸ್ಮೈ ಜೋಷಮಭರದ್ವಿನಙ್ಗೃಸಃ ಸಂ ದ್ವಯೀಭಿಃ ಸ್ವಸೃಭಿಃ ಕ್ಷೇತಿ ಜಾಮಿಭಿಃ ॥ ೩ ॥

|| ಪದಪಾಠಃ ||

ಅರಮಮಾಣಃ । ಅತಿ । ಏತಿ । ಗಾಃ । ಅಭಿ । ಸೂರ್ಯಸ್ಯ । ಪ್ರಿಯಂ । ದುಹಿತುಃ । ತಿರಃ । ರವಂ ।
ಅನು । ಅಸ್ಮೈ । ಜೋಷಂ । ಅಭರತ್ । ವಿನಂऽಗೃಸಃ । ಸಂ । ದ್ವಯೀಭಿಃ । ಸ್ವಸೃऽಭಿಃ । ಕ್ಷೇತಿ ।
ಜಾಮಿऽಭಿಃ ॥ ೩ ॥

|| ಸಾಯಣಭಾಷ್ಯಂ ||

ಸ ಸೋಮೋಽರಮಮಾಣೋಽನುಪರತಃ ಸನ್ । ಪುನಃಪುನರ್ದೇವಾನಾಂ ಪ್ರೀಣನಾಯ ಗೃಹಾದೀನಿ ಪ್ರವಿಶನ್ನಿತ್ಯರ್ಥಃ । ಗಾ ಗೋವಿಕಾರಾನಾಶ್ರಯಣಾನಭಿಲಕ್ಷ್ಯಾತ್ಯೇತಿ । ಅತಿಕ್ರಮ್ಯ ಗಚ್ಛತಿ । ತತಃ ಶಬ್ದಾಯಮಾನಃ ಸೋಮಃ ಸೂರ್ಯಸ್ಯಾದಿತ್ಯಸ್ಯ ದುಹಿತುರುಷಸಃ ಪ್ರಿಯಂ ರವಂ ಶಬ್ದಂ ತಿರಃ । ತಿರಸ್ಕರೋತಿ । ತಸ್ಮಿನ್ಕಾಲೇ ಸೋಮಾಭಿಷವಧ್ವನಿರ್ಮಹಾನ್ಭವತೀತ್ಯರ್ಥಃ । ವಿನಂಗೃಸಃ । ವಿನಂ ಕಮನೀಯಂ ಸ್ತೋತ್ರಂ ಗೃಹ್ಣಾತೀತಿ ವಿನಂಗೃಸಃ ಸ್ತೋತಾ । ಜೋಷಂ ॥ ಜುಷೇರ್ಘಞಿ ರೂಪಂ ॥ ಪರ್ಯಾಪ್ತಂ ಸ್ತೋತ್ರಂ ತಸ್ಮೈ ಸೋಮಾಯಾನ್ವಭರತ್ । ಅನುಭರತಿ । ಕರೋತೀತಿ ಯಾವತ್ । ಸೋಽಯಂ ಸೋಮೋ ದ್ವಯೀಭಿರ್ದ್ವಾಭ್ಯಾಂ ಪಾಣಿಭ್ಯಾಮುತ್ಪನ್ನಾಭಿರ್ಜಾಮಿಭಿಃ ಪರಸ್ಪರಂ ಬಂಧುಭಿಃ ಸ್ವಸೃಭಿಃ ಕರ್ಮಕರಣಾರ್ಥಮಿತಸ್ತತೋ ಗಚ್ಛಂತೀಭಿರಂಗುಲೀಭಿಃ ಸಂ ಕ್ಷೇತಿ । ಸಂಗಚ್ಛತೇ ॥ ಕ್ಷಿ ನಿವಾಸಗತ್ಯೋಃ । ಛಾಂದಸೋ ವಿಕರಣಸ್ಯ ಲುಕ್ ॥

|| ಪ್ರತಿಪದಾರ್ಥ ||

**ಸಃ** - ಸೋಮದೇವನು | **ಅರಮಮಾಣಃ**— ವಿಶ್ರಾಂತಿಯಿಲ್ಲದೆ | **ಗಾಃ ಅಭಿ**— ಕ್ಷೀರಾದಿಗಳೊಂದಿಗೆ ಸೇರಲು | **ಅತ್ಯೇತಿ**—ದಾಟಿಹೋಗುತ್ತಾನೆ | **ಸೂರ್ಯಸ್ಯ**—ಸೂರ್ಯನ | **ದುಹಿತುಃ**—ಪುತ್ರಿಯಾದ **ಉಷಸ್ಸಿಗೆ** | **ಪ್ರಿಯಂ**—ಪ್ರೀತಿಕಾರಕವಾದ | **ರವಂ**—ಶಬ್ದವನ್ನು | **ತಿರಃ**—ಉಂಟುಮಾಡುತ್ತಾನೆ | **ವಿನಂಗೃಸಃ**—ಆಕರ್ಷಕವಾದ ಸ್ತುತಿಯನ್ನು ಅರ್ಪಿಸುವ ಸ್ತುತಿಕರ್ತನು | **ಅಸ್ಮೈ**—ಸೋಮನನ್ನುದ್ದೇಶಿಸಿ | **ಜೋಷಂ**—ತೃಪ್ತಿಕರವಾದ ಸ್ತುತಿಯನ್ನು | **ಅನ್ವಭರತ್**—ಅರ್ಪಿಸುತ್ತಾನೆ | **ಜಾಮಿಭಿಃ**—ಬಂಧುರೂಪರಾದ | **ದ್ವೆಯಾಭಿಃ**—ಎರಡು ಕೈಗಳೊಡನೆ | **ಸಂ ಕ್ಷೇತಿ**—ಒಂದಾಗಿ ಸೇರಿಕೊಳ್ಳುತ್ತಾನೆ.

|| ಭಾವಾರ್ಥ ||

ಸೋಮದೇವನು ವಿಶ್ರಾಂತಿಯಿಲ್ಲದೆ ಕ್ಷೀರಾದಿಗಳೊಂದಿಗೆ ಸೇರಲು ದಾಟಿಹೋಗುತ್ತಾನೆ. ಸೂರ್ಯನ ಪುತ್ರಿಯಾದ ಉಷಸ್ಸಿಗೆ ಪ್ರೀತಿಕರವಾದ ಶಬ್ದವನ್ನು ಉಂಟುಮಾಡುತ್ತಾನೆ. ಆಕರ್ಷಕವಾದ ಸ್ತುತಿಯನ್ನು ಅರ್ಪಿಸುವ ಸ್ತುತಿಕರ್ತನು ಸೋಮನನ್ನುದ್ದೇಶಿಸಿ ತೃಪ್ತಿಕರವಾದ ಸ್ತುತಿಯನ್ನು ಅರ್ಪಿಸುತ್ತಾನೆ. ಬಂಧುರೂಪವಾದ ಎರಡು ಕೈಗಳೊಡನೆ ಒಂದಾಗಿ ಸೇರಿಕೊಳ್ಳುತ್ತಾನೆ.

## English Translation.

Unceasing the Soma goes to mix with the products of the cow, he utters a cry to the daughter of the sun. The praiser brings delight to him; he is uuited to the two kindred sisters (the hands).

| ಸಂಹಿತಾಪಾಠಃ ||

ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದು-
ರ್ಋತ್ವಿಯಃ |
ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ
ಇಂದ್ರ ತೇ || ೪ ||

|| ಪದಪಾಠಃ ||

ನೃಽಧೂತಃ | ಅದ್ರಿಽಸುತಃ | ಬರ್ಹಿಷಿ | ಪ್ರಿಯಃ | ಪತಿಃ | ಗವಾಂ | ಪ್ರಽದಿವಃ | ಇಂದುಃ | ಋತ್ವಿಯಃ | ಪುರಂಧಿಽವಾನ್ | ಮನುಷಃ | ಯಜ್ಞಽಸಾಧನಃ | ಶುಚಿಃ | ಧಿಯಾ | ಪವತೇ | ಸೋಮಃ | ಇಂದ್ರ | ತೇ || ೪ ||

|| ಸಾಯಣಭಾಷ್ಯಂ ||

ಹೇ ಇಂದ್ರ ಪವಮಾನಗುಣವಿಶಿಷ್ಟೇಂದ್ರ ತೇ ತ್ವದರ್ಥಂ ಬರ್ಹಿಷಿ ಯಜ್ಞೇಽಯಂ ಸೋಮೋ ಧಿಯಾ ಸ್ವೇನ ಕರ್ಮಣಾ ಧಾರಯಾ ವಾ ಪವತೇ । ಪಾತ್ರೇಷು ಸ್ಯಂದತೇ । ಕೀದೃಶಃ । ನೃಧೂತಃ ಕರ್ಮನೇತೃಭಿರ್ಮನುಷ್ಯೈಃ ಶೋಧಿತಃ ಅದ್ರಿಷುತೋ ಗ್ರಾವಭಿರಭಿಷುತಃ ಪ್ರಿಯೋ ದೇವಾನಾಂ ಪ್ರೀಣಯಿತಾ ಗವಾಂ ಪತಿಃ ಸ್ವಾಮೀ । ಇಂದ್ರೋ ಗಾ ಅಲಭತ ತಸ್ಮಾದ್ಗವಾಂ ಸ್ವಾಮೀ । ಪ್ರದಿವಃ । ಪುರಾಣನಾಮೈತತ್ । ಪುರಾಣಃ ಇಂದುಃ ಪಾತ್ರೇಷು ಕ್ಷರನ್ ಋತ್ವಿಯ ಋತೌ ಜಾತಃ ॥ ಋತೋರಣ್ ಛಂದಸಿ ಘಸ್ । ಪಾ. ೫–೧–೧೦೫, ೧೦೬ । ಇತಿ ಘಸ್ । ಸಿತ್ತ್ವೇನ ಪದಸಂಜ್ಞಾಯಾಂ ಭಸಂಜ್ಞಾನಿಮಿತ್ತ ಓರ್ಗುಣೋ ನ ಭವತಿ ॥ ಪುರಂಧಿವಾನ್ । ಪುರಂಧಿರ್ಬಹುಧೀರಿತಿ ಯಾಸ್ಕಃ । ನಿ. ೬–೧೩ । ಬಹುಕರ್ಮವಾನ್ ಮನುಷೋ ಮನುಷ್ಯಸ್ಯ ಯಜ್ಞಸಾಧನಃ ಶುಚಿರ್ದೀಪ್ಯಮಾನಃ । ಯದ್ವಾ । ದಶಾಪವಿತ್ರೇಣ ಶುದ್ಧಃ । ಏವಂಗುಣಃ ಸೋಮ ಇಂದ್ರಾರ್ಥಂ ಪವತ ಇತಿ ಸಂಬಂಧಃ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । **ನೃಧೂತಃ**—ಮಾನವರಿಂದ ಶೋಧಿತನೂ । **ಅದ್ರಿಷುತಃ**—ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟವನೂ । **ಪ್ರಿಯಃ**—ದೇವತೆಗಳಿಗೆ ಪ್ರೀತಿಕಾರಕನೂ । **ಗವಾಂ ಪತಿಃ**—ಗೋವುಗಳಿಗೆ ಒಡೆಯನೂ । **ಪ್ರದಿವಃ**—ಪುರಾತನನೂ । **ಇಂದುಃ**—ಪ್ರವಹಿಸುವವನೂ । **ಋತ್ವಿಯಃ**—ಸಕಾಲದಲ್ಲಿ ಉತ್ಪನ್ನನೂ । **ಪುರಂಧಿವಾನ್**—ಅನೇಕ ಕರ್ಮಗಳುಳ್ಳವನೂ । **ಮನುಷಃ**—ಮಾನವನಿಗೆ । **ಯಜ್ಞಸಾಧನಃ**-ಯಜ್ಞಕ್ಕೆ ಸಾಧಕನೂ । **ಶುಚಿಃ**—ಪ್ರಕಾಶಮಾನನೂ ಆದ । **ಸೋಮಃ**—ಸೋಮದೇವನು । **ತೇ**—ನಿನ್ನನ್ನುದ್ದೇಶಿಸಿ । **ಬರ್ಹಿಷಿ**—ಯಜ್ಞದಲ್ಲಿ । **ಧಿಯಾ**—ತನ್ನ ಕರ್ಮದಿಂದ । **ಪವತೇ**—ಪ್ರವಿಸುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, ಮಾನವರಿಂದ ಶೋಧಿತನೂ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟವನೂ, ದೇವತೆಗಳಿಗೆ ಪ್ರೀತಿಕಾರಕನೂ, ಗೋವುಗಳಿಗೆ ಒಡೆಯನೂ, ಪುರಾತನನೂ, ಪ್ರವಾಹಾತ್ಮಕನೂ, ಸಕಾಲದಲ್ಲಿ ಉತ್ಪನ್ನನೂ, ಅನೇಕ ಕರ್ಮಗಳುಳ್ಳವನೂ, ಮಾನವನಿಗೆ ಯಜ್ಞಕ್ಕೆ ಸಾಧಕನೂ, ಪ್ರಕಾಶಮಾನನೂ ಆದ ಸೋಮದೇವನು ನಿನ್ನನ್ನುದ್ದೇಶಿಸಿ ಯಜ್ಞದಲ್ಲಿ ತನ್ನ ಕರ್ಮದಿಂದ ಪ್ರವಿಸುತ್ತಾನೆ.

## English Translation.

Shaken by the men, expressed by the stones. the delighter (of the gods), the lord of cattle, ancient, distilling (In the vessels), born in due season, (the Soma is placed) on the sacred grass; intelligent, the material of the sacrifice of man, pure, the Soma flows for you, Indra, of his own accord.

|| ಸಂಹಿತಾಪಾಠಃ ||

ನೃಬಾಹುಭ್ಯಾಂ ಚೋದಿತೋ ಧಾರಯಾ ಸುತೋಽನುಷ್ವಧಂ ಪವತೇ ಸೋಮ ಇಂದ್ರ ತೇ ।
ಆಪ್ರಾಃ ಕ್ರತೂನ್ತ್ಸಮಜೈರಧ್ವರೇ ಮತೀರ್ವೇರ್ನ ದ್ರುಷಚ್ಚ್ವೋಽರಾಸದದ್ಧರಿಃ ॥ ೫ ॥

|| ಪದಪಾಠಃ ||

ನೃಬಾಹುಽಭ್ಯಾಂ । ಚೋದಿತಃ । ಧಾರಯಾ । ಸುತಃ । ಅನುಽಸ್ವಧಂ । ಪವತೇ । ಸೋಮಃ । ಇಂದ್ರ । ತೇ ।
ಆ । ಅಪ್ರಾಃ । ಕ್ರತೂನ್ । ಸಂ । ಅಜೈಃ । ಅಧ್ವರೇ । ಮತೀಃ । ವೇಃ । ನ । ದ್ರುಽಸತ್ । ಚಮ್ವೋಃ ।
ಆ । ಅಸದತ್ । ಹರಿಃ ॥ ೫ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಪವಮಾನಗುಣವಿಶಿಷ್ಟ ನೃಬಾಹುಭ್ಯಾಂ ಕರ್ಮನೇತೄಣಾಮೃತ್ವಿಜಾಂ ಬಾಹುಭ್ಯಾಂ ಚೋದಿತಃ ಪ್ರೇರಿತೋ ಧಾರಯಾ ಸುತೋಽಭಿಷುತಃ । ಯಥಾ ಧಾರಾ ಭವತಿ ತಥಾಭಿಷುತ ಇತ್ಯರ್ಥಃ । ತಾದೃಶಃ ಸೋಮಸ್ತೇ ತವಾನುಷ್ವಧಂ ಬಲಮನು ಬಲಾರ್ಥಂ । ಯದ್ವಾ । ಸ್ವಧೇತ್ಯನ್ನನಾಮ । ಅನ್ನಾರ್ಥಂ ಪವತೇ । ಆಗಚ್ಛತಿ । ತತಃ ಸ ತ್ವಂ ಸೋಮಪಾನೇನ ಕ್ರತೂನ್ ಕರ್ಮಾಣ್ಯಾಪ್ರಾಃ । ಆಪೂರಯಸಿ । ಕಿಂಚಾಧ್ವರೇ ಯಜ್ಞೇ ಮತೀರಭಿಮಾನಾಞ್ಛತ್ರೂನ್ ಸಮಜೈಃ । ಸಮ್ಯಗ್ಜಿತವಾನಸಿ ॥ ಜಿ ಜಯೇ । ಲುಙಿ ಸಿಪಿ ಸಿಚೋ ಬಹುಲಂ ಛಂದಸೀತೀಡಭಾವಃ । ಸಿಚಿ ವೃದ್ಧಿರಿತಿ ವೃದ್ಧಿಃ ॥ ಸೋಽಯಂ ಹರಿರ್ಹರಿತವರ್ಣಃ ಸೋಮಶ್ಚಮ್ವೋರಧಿಷವಣಫಲಕಯೋರಾಸದತ್ । ಆಸೀದತಿ । ತತ್ರ ದೃಷ್ಟಾಂತಃ । ವೇರ್ನ ॥ ವೀ ಗತ್ಯಾದಿಷು । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಸಾರ್ವಧಾತುಕಾರ್ಧಧಾತುಕಯೋರಿತಿ ಗುಣಃ ॥ ಯಥಾ ವೇಃ ಪಕ್ಷೀ ದ್ರುಷತ್ ದ್ರುಮೇ ಸೀದತೀತಿ ತದ್ವತ್ ॥ ದ್ರುಷತ್ । ಪೂರ್ವಪದಾದಿತಿ ಷತ್ವಂ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । **ನೃಬಾಹುಭ್ಯಾಂ**—ಮಾನವರ ಬಾಹುಗಳಿಂದ । **ಧಾರಯಾ**—ಧಾರಾ ರೂಪದಲ್ಲಿ । **ಸುತಃ**—ಹಿಂಡಲ್ಪಟ್ಟವನಾದ । **ಸೋಮಃ**—ಸೋಮನು । **ತೇ**—ನಿನ್ನ । **ಅನುಷ್ವಧಂ**—ಶಕ್ತ್ಯರ್ಥವಾಗಿ । **ಪವತೇ**—ಪ್ರವಹಿಸುತ್ತಾನೆ । (ತ್ವಂ—ನೀನು) । **ಕ್ರತೂನ್**—ಯಜ್ಞಕರ್ಮಗಳನ್ನು । **ಆಪ್ರಾಃ**—ನಿರ್ವಹಿಸುತ್ತೀಯೆ । **ಅಧ್ವರೇ**—ಯಜ್ಞದಲ್ಲಿ । **ಮತೀಃ**—ದುಷ್ಟರಾದ ಶತ್ರುಗಳನ್ನು । **ಸಮಜೈಃ**—

ಜಯಿಸಿದ್ದೀಯೆ | ದ್ರುಷತ್—ವೃಕ್ಷಸ್ಥವಾದ | ವೇಃ ನ—ಪಕ್ಷಿಯಂತೆ | ಹರಿಃ—ಪಚ್ಚೆವರ್ಣವುಳ್ಳ ಸೋಮನು | ಚಮ್ವೋಃ—ಹಿಂಡುವ ಹಲಗೆಗಳಮೇಲೆ | ಆಸದತ್—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, ಮಾನವರ ಬಾಹುಗಳಿಂದ ಪ್ರೇರಿತನೂ, ಧಾರಾರೂಪದಲ್ಲಿ ಹಿಂಡಲ್ಪಟ್ಟವನೂ ಆದ ಸೋಮನು ನಿನ್ನ ಶಕ್ತ್ಯರ್ಥವಾಗಿ ಪ್ರವಹಿಸುತ್ತಾನೆ. ನೀನು ಯಜ್ಞಕರ್ಮಗಳನ್ನು ನಿರ್ವಹಿಸುತ್ತೀಯೆ. ಯಜ್ಞದಲ್ಲಿ ದುಷ್ಟರಾದ ಶತ್ರುಗಳನ್ನು ಜಯಿಸಿದ್ದೀಯೆ. ವೃಕ್ಷಸ್ಥವಾದ ಪಕ್ಷಿಯಂತೆ, ಪಚ್ಚೆವರ್ಣವುಳ್ಳ ಸೋಮನು ಹಿಂಡುವ ಹಲಗೆಗಳಮೇಲೆ ಕುಳಿತುಕೊಳ್ಳುತ್ತಾನೆ.

## English Translation.

Urged by the arms of men, poured forth in a stream the Soma flows for you, Indra, for strength; you accomplished the rites, you overcome enemies at the sacrifice; the green-tinted Soma rests upon the cups like a bird perching on a tree.

|| ಸಂಹಿತಾಪಾಠಃ ||

ಅಂಶುಂ ದುಹಂತಿ ಸ್ತನಯಂತಮಕ್ಷಿತಂ ಕವಿಂ ಕವಯೋಽಪಸೋ ಮನೀಷಿಣಃ |
ಸಮೀ ಗಾವೋ ಮತಯೋ ಯಂತಿ ಸಂಯತ ಋತಸ್ಯ ಯೋನಾ ಸದನೇ ಪುನರ್ಭುವಃ || ೬ ||

|| ಪದಪಾಠಃ ||

ಅಂಶುಂ | ದುಹಂತಿ | ಸ್ತನಯಂತಂ | ಅಕ್ಷಿತಂ | ಕವಿಂ | ಕವಯಃ | ಅಪಸಃ | ಮನೀಷಿಣಃ |
ಸಂ | ಈಮಿತಿ | ಗಾವಃ | ಮತಯಃ | ಯಂತಿ | ಸಂऽಯತಃ | ಋತಸ್ಯ | ಯೋನಾ | ಸದನೇ | ಪುನಃऽಭುವಃ || ೬ ||

|| ಸಾಯಣಭಾಷ್ಯಂ ||

ಕವಯಃ ಕ್ರಾಂತಪ್ರಜ್ಞಾ ಅಪಸಃ ಕರ್ಮವಂತೋ ಮನೀಷಿಣಃ | ಮನಸ ಈಶಾ ಮನೀಷಾ ಬುದ್ಧಿಃ | ತದ್ವಂತ ಋತ್ವಿಜಃ ಸ್ತನಯಂತಂ ಶಬ್ದಾಯಮಾನಮಕ್ಷಿತಮಕ್ಷೀಣಂ ಕವಿಂ ಕ್ರಾಂತದರ್ಶಿನ-

ಮಂಶುಂ ಸೋಮಂ ದುಹಂತಿ । ಅಭಿಷುಣ್ವಂತಿ । ತತಃ ಪುನರ್ಭುವಃ ಪುನರ್ಭವನಶೀಲಾ ಗಾವಃ ಪಶವೋ ಮತಯೋ ಮನನೀಯಾಃ ಸ್ತುತಯಶ್ಚ ಸಂಯತಃ ಪರಸ್ಪರಂ ಸಂಗತಾಃ ಸತ್ಯೇ ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಯೋನಾ ಯೋನೌ ಯೋನಿಸ್ಥಾನೀಯ ಉತ್ಪತ್ತಿಭೂತೇ ಸದನ ಉತ್ತರವೇದ್ಯಾಖ್ಯ ಈಮೇನಂ ಸೋಮಂ ಸಂ ಯಂತಿ । ಗಚ್ಛಂತಿ ॥

॥ ಪ್ರತಿಪದಾರ್ಥ ॥

**ಕವಯಃ**—ಕ್ರಾಂತಪ್ರಜ್ಞೆಯುಳ್ಳವರೂ । **ಅಪಸಃ**—ಕರ್ಮವಂತರೂ । **ಮನೀಷಿಣಃ**—ಮೇಧಾವಿಗಳೂ ಆದ ಋತ್ವಿಕ್ಕುಗಳು । **ಸ್ತನಯಂತಂ**—ಶಬ್ದಮಾಡುವುದೂ । **ಅಕ್ಷಿತಂ**—ಕ್ಷಯರಹಿತವಾದುದೂ । **ಕವಿಂ**—ಕ್ರಾಂತದರ್ಶನವುಳ್ಳದ್ದೂ ಆದ । **ಅಂಶುಂ**—ಸೋಮವನ್ನು । **ದುಹಂತಿ**—ಹಿಂಡುತ್ತಾರೆ । **ಪುನರ್ಭುವಃ**—ಕರ್ಮಕ್ಕಾಗಿ ಪುನಃ ಉತ್ಪನ್ನವಾಗತಕ್ಕ । **ಗಾವಃ**—ಪಶುಗಳೂ । **ಮತಯಃ**—ಸ್ತುತಿಗಳೂ । **ಸಂಯತಃ**—ಒಟ್ಟಿಗೆ ಸೇರಿಕೊಂಡು । **ಋತಸ್ಯ**—ಸತ್ಯಾತ್ಮಕವಾದ ಯಜ್ಞದ । **ಯೋನಾ**—ಉತ್ಪತ್ತಿಸ್ಥಾನವಾದ । **ಸದನೇ**—ಉತ್ತರವೇದಿಸ್ಥಾನದಲ್ಲಿ । **ಈಂ**—ಈ ಸೋಮವನ್ನು । **ಸಂ ಯಂತಿ**—ಸೇರಿಕೊಳ್ಳುತ್ತವೆ.

॥ ಭಾವಾರ್ಥ ॥

ಕ್ರಾಂತಪ್ರಜ್ಞೆಯುಳ್ಳವರೂ, ಕರ್ಮವಂತರೂ, ಮೇಧಾವಿಗಳೂ ಆದ ಋತ್ವಿಕ್ಕುಗಳು, ಶಬ್ದಮಾಡುವುದೂ, ಕ್ಷಯರಹಿತವಾದುದೂ, ಕ್ರಾಂತದರ್ಶನವುಳ್ಳದ್ದೂ ಆದ ಸೋಮವನ್ನು ಹಿಂಡುತ್ತಾರೆ. ಕರ್ಮಕ್ಕಾಗಿ ಪುನಃ ಉತ್ಪನ್ನವಾಗತಕ್ಕ ಪಶುಗಳೂ, ಸ್ತುತಿಗಳೂ ಒಟ್ಟಿಗೆ ಸೇರಿಕೊಂಡು ಸತ್ಯಾತ್ಮಕವಾದ ಯಜ್ಞದ ಉತ್ಪತ್ತಿಸ್ಥಾನವಾದ ಉತ್ತರವೇದಿಯಲ್ಲಿ ಈ ಸೋಮವನ್ನು ಸೇರಿಕೊಳ್ಳುತ್ತವೆ.

## English Translation

The seers, the experienced performers of holy acts, milk forth the seer, the loud-sounding undecaying Soma ; the regenerated cattle and the praises combined repair to him at the place of birth of the sacrifice.

॥ ಸಂಹಿತಾಪಾಠಃ ॥

ನಾಭಾ ಪೃಥಿವ್ಯಾ ಧರುಣೋ ಮಹೋ ದಿವೋ೩ಪಾಮೂರ್ಮೌ ಸಿಂಧು-
ಷ್ವಂತರುಕ್ಷಿತಃ ।
ಇಂದ್ರಸ್ಯ ವಜ್ರೋ ವೃಷಭೋ ವಿಭೂವಸುಃ ಸೋಮೋ ಹೃದೇ ಪವತೇ
ಚಾರು ಮತ್ಸರಃ ॥ ೭ ॥

॥ ಪದಪಾಠಃ ॥

ನಾಭಾ । ಪೃಥಿವ್ಯಾಃ । ಧರುಣಃ । ಮಹಃ । ದಿವಃ । ಅಪಾಂ । ಊರ್ಮೌ । ಸಿಂಧುಷು । ಅಂತಃ । ಉಕ್ಷಿತಃ ।

ಇಂದ್ರಸ್ಯ । ವಜ್ರಃ । ವೃಷಭಃ । ವಿಭುಽವಸುಃ । ಸೋಮಃ । ಹೃದೇ । ಪವತೇ । ಚಾರು । ಮತ್ಸರಃ ॥ ೭ ॥

॥ ಸಾಯಣಭಾಷ್ಯಂ ॥

ಮಹೋ ಮಹತೋ ದಿವೋ ದ್ಯುಲೋಕಸ್ಯ ಧರುಣೋ ಧಾರಕೋಽಯಂ ಸೋಮಃ ಪೃಥಿವ್ಯಾ ವಿಸ್ತೀರ್ಣಾಯಾ ಭೂಮೇರ್ನಾಭಾ ನಾಭೌ ನಾಭಿಸ್ಥಾನೀಯ ಉಚ್ಛ್ರಿತಪ್ರದೇಶೇ ಯದುತ್ತರವೇದೀನಾಭಿಃ । ಐ. ಬ್ರಾ. ೧–೨೮ । ಇತ್ಯಾಮ್ನಾನಾತ್ ಉತ್ತರವೇದಿಸ್ಥಾನ ಋತ್ವಿಗ್ಭಿರ್ನಿಹಿತಃ ಸಿಂಧುಷು ಸ್ಯಂದಮಾನಾಸು ನದೀಷ್ವಪಾಮುದಕಾನಾಮೂರ್ಮೌ ಸಂಘೇಽಂತರ್ಮಧ್ಯ ಉಕ್ಷಿತಃ ಸಿಕ್ತಃ । ಅಂತರಿಕ್ಷಸ್ಥಾನಮಧ್ಯೇ ವರ್ತಮಾನ ಇತ್ಯರ್ಥಃ । ತಾದೃಶ ಇಂದ್ರಸ್ಯ ವಜ್ರೋ ವಜ್ರಸ್ಥಾನೀಯೋ ವೃಷಭಃ ಕಾಮಾನಾಂ ವರ್ಷಿತಾ ಅತ ಏವ ವಿಭೂವಸುರ್ವ್ಯಾಪ್ತಧನಃ ಸೋಮಶ್ಚಾರು ಕಲ್ಯಾಣಂ ಯಥಾ ಭವತಿ ತಥೇಂದ್ರಸ್ಯ ಮತ್ಸರೋ ಮಾದಯಿತಾ ಸಸ್ ಹೃದೇ ಮನಸೇ ಸುಖಾಯ ಪವತೇ । ಆಗಚ್ಛತಿ ॥

॥ ಪ್ರತಿಪದಾರ್ಥ ॥

**ಮಹಃ**—ಮಹತ್ತಾದ । **ದಿವಃ**—ದ್ಯುಲೋಕಕ್ಕೆ । **ಧರುಣಃ**—ಧಾರಕನೂ । **ಪೃಥಿವ್ಯಾಃ**—ಪೃಥ್ವಿಯ । **ನಾಭಾ**—ನಾಭಿಸ್ಥಾನವಾದ ಉತ್ತರವೇದಿಯಲ್ಲಿ ಸ್ಥಾಪಿತನೂ । **ಸಿಂಧುಷು**—ನದಿಗಳಲ್ಲಿ । **ಅಪಾಂ**—ಉದಕಗಳ । **ಊರ್ಮೌ ಅಂತಃ**—ಅಲೆಗಳ ನಡುವೆ । **ಉಕ್ಷಿತಃ**—ಚಿಮುಕಿಸಲ್ಪಟ್ಟವನೂ । **ಇಂದ್ರಸ್ಯ**—ಇಂದ್ರನ । **ವಜ್ರಃ**—ವಜ್ರಾಯುಧರೂಪನೂ । **ವೃಷಭ್ಯ**—ಇಷ್ಟಾರ್ಥಪ್ರದನೂ । **ವಿಭಾವಸುಃ**—ವ್ಯಾಪ್ತವಾದ ಧನವುಳ್ಳವನೂ ಆದ । **ಸೋಮಃ**—ಸೋಮದೇವನು । **ಚಾರು**—ಆಕರ್ಷಕವಾದ । **ಮತ್ಸರಃ**—ಹರ್ಷಕಾರಕನಾಗಿ । **ಹೃದೇ**—ಹೃದಯದ ತೃಪ್ತಿಗಾಗಿ । **ಪವತೇ**—ಪ್ರವಹಿಸಿಬರುತ್ತಾನೆ.

॥ ಭಾವಾರ್ಥ ॥

ಮಹತ್ತಾದ ದ್ಯುಲೋಕಕ್ಕೆ ಧಾರಕನೂ, ಪೃಥ್ವಿಯ ನಾಭಿಸ್ಥಾನವಾದ ಉತ್ತರವೇದಿಯಲ್ಲಿ ಸ್ಥಾಪಿತನೂ, ನದಿಗಳ ಉದಕಗಳ ಅಲೆಗಳ ನಡುವೆ ಚಿಮುಕಿಸಲ್ಪಟ್ಟವನೂ, ಇಂದ್ರನ ವಜ್ರಾಯುಧರೂಪನೂ, ಇಷ್ಟಾರ್ಥಪ್ರದನೂ, ವ್ಯಾಪ್ತವಾದ ಧನವುಳ್ಳವನೂ ಆದ ಸೋಮದೇವನು ಆಕರ್ಷಕವಾದ ಹರ್ಷಕಾರಕನಾಗಿ ಹೃದಯದ ತೃಪ್ತಿಗಾಗಿ ಹರಿದುಬರುತ್ತಾನೆ.

## English Translation

The supporter of vast heaven, (placed) upon the navel of the earth, moistened amongst the rivers in the wave of the waters, the thunderbolt of

Indra, the showerer (of benefits), the possessor of wealth, Soma auspiciously exhilarating distils into (Indra,s) heart.

|| ಸಂಹಿತಾಪಾಠಃ ||

ಸ ತೂ ಪವಸ್ವ ಪರಿ ಪಾರ್ಥಿವಂ ರಜಃ ಸ್ತೋತ್ರೇ ಶಿಕ್ಷನ್ನಾಧೂನ್ವತೇ ಚ ಸುಕ್ರತೋ ।
ಮಾ ನೋ ನಿರ್ಭಾಗ್ವಸುನಃ ಸಾದನಸ್ಪೃಶೋ ರಯಿಂ ಪಿಶಂಗಂ ಬಹುಲಂ ವಸೀಮಹಿ ॥ ೮ ॥

|| ಪದಪಾಠಃ ||

ಸಃ । ತು । ಪವಸ್ವ । ಪರಿ । ಪಾರ್ಥಿವಂ । ರಜಃ । ಸ್ತೋತ್ರೇ । ಶಿಕ್ಷನ್ । ಆಽಧೂನ್ವತೇ । ಚ । ಸುಕ್ರತೋ ಇತಿ ಸುಽಕ್ರತೋ ।
ಮಾ । ನಃ । ನಿಃ । ಭಾಕ್ । ವಸುನಃ । ಸದನ್ಽಸ್ಪೃಶಃ । ರಯಿಂ । ಪಿಶಂಗಂ । ಬಹುಲಂ । ವಸೀಮಹಿ ॥೮॥

|| ಸಾಯಣಭಾಷ್ಯಂ ||

ಹೇ ಸುಕ್ರತೋ ಶೋಭನಕರ್ಮನ್ ಸುಪ್ರಜ್ಞ ವಾ ಸೋಮ ತಾದೃಶಸ್ತ್ವಂ ಪಾರ್ಥಿವಂ ರಜೋ ಲೋಕಂ ಲಕ್ಷೀಕೃತ್ಯ ತು ಕ್ಷಿಪ್ರಂ ಪರಿ ಪವಸ್ವ । ಪರಿತಃ ಸರ್ವತಃ ಕ್ಷರ । ಕಿಂ ಕುರ್ವನ್ । ಆಧೂನ್ವತೇಽ-ದಾಭ್ಯಗ್ರಹೇ ತ್ರಿಭಿರಂಶುಭಿರಾಧಾವನಂ ಕುರ್ವತೇ । ತಥಾ ಭಗವತಾಪಸ್ತಂಬೇನ ಸೂತ್ರಿತಂ । ತ್ರೈರೇನಂ ಚತುರಾಧುನೋತಿ ಪಂಚಕೃತ್ವಃ ಸಪ್ತಕೃತ್ವೋ ವೇತಿ । ತಸ್ಮೈ ಧನಾದಿಕಂ ಶಿಕ್ಷನ್ ಪ್ರಯಚ್ಛನ್ ಪರಿ ಪವಸ್ವೇತಿ ಸಮನ್ವಯಃ । ತತಸ್ತ್ವಂ ನೋಽಸ್ಮಾನ್ವಸುನೋ ಧನಾನ್ಮಾ ನಿರ್ಭಾಕ್ । ಮಾ ನಿರ್ಭಾಂಕ್ಷೀಃ । ಕೀದೃಶಾತ್ । ಸದನಸ್ಪೃಶಃ । ಯೇನ ಭೂತೇನ ವಸುನಾ ಸದನಾನಿ ಗೃಹಾನ್ ಪುತ್ರಾದೀನ್ ಸ್ಪೃಶಂತಿ ತಾದೃಶಾದ್ಗೃಹಾದಿಕಸ್ಯ ಪ್ರದಾತುರ್ಧನಾನ್ಮಾ ವಿಯುಜಃ ॥ ಭಾಕ್ । ಭಜ ಸೇವಾಯಾಂ । ಲುಙಿ ಸಿಪಿ ಸಿಚಿ ಬಹುಲಂ ಛಂದಸೀತೀಡಾಗಮಾಭಾವಃ । ಏಕಾಚ ಇತೀಟ್ಪ್ರತಿಷೇಧಃ । ಹಲಂತಲಕ್ಷಣಾ ವೃದ್ಧಿಃ । ಪಾ. ೭-೨-೩ । ಸಿಪೋ ಲೋಪಃ ॥ ಯಸ್ಮಾದೇವಂ ತಸ್ಮಾದ್ವಯಂ ಪಿಶಂಗಂ ನಾನಾರೂಪಂ ಕನಕಾದಿನಾ ಅತ ಏವ ಬಹುಲಂ ಪ್ರಭೂತಂ ರಯಿಂ ಧನಂ ವಸೀಮಹಿ । ಆಚ್ಛಾದಯೇಮ । ಬಹುಧನವಂತೋ ಭವೇಮೇತ್ಯರ್ಥಃ ॥ ವಸ ಆಚ್ಛಾದನೇ । ಆದಾದಿಕಃ । ಲಿಙಿ ರೂಪಂ ॥

|| ಪ್ರತಿಪದಾರ್ಥ ||

**ಸುಕ್ರತೋ**—ಉತ್ತಮವಾದ ಕರ್ಮವುಳ್ಳ ಎಲೈ ಸೋಮನೇ । **ಆಧೂನ್ವತೇ**—ಹವಿಸ್ಸನ್ನು ಕಲಕಿಸಿ ಅರ್ಪಿಸುವ ಯಜಮಾನನಿಗೂ । **ಸ್ತೋತ್ರೇ**—ಸ್ತುತಿಕರ್ತನಿಗೂ । **ಶಿಕ್ಷನ್**—ಧನವನ್ನು ಕೊಡುತ್ತ । **ತು**—

ಕ್ಷಿಪ್ರವಾಗಿ | **ಪಾರ್ಥಿವಂ ರಜಃ ಪರಿ**—ಪೃಥ್ವೀಲೋಕದ ಸುತ್ತಲೂ | **ಪವಸ್ವ**—ಪ್ರವಹಿಸು | **ಸದನಸ್ಪೃಶಃ**—ನಮ್ಮ ಗೃಹವನ್ನು ಪುಷ್ಟಿಗೊಳಿಸುವ | **ವಸುನಃ**—ಧನದಿಂದ | **ನಃ**—ನಮ್ಮನ್ನು | **ಮಾ ನಿರ್ಭಕ್**—ಬೇರೆ ಮಾಡಬೇಡ | **ಪಿಶಂಗಂ**—ನಾನಾ ರೂಪವುಳ್ಳದ್ದೂ | **ಬಹುಲಂ**—ಪ್ರಭೂತವಾದುದೂ ಆದ | **ರಯಿಂ**—ಧನವನ್ನು | **ವಸೀಮಹಿ**—ನಾವು ಹೊಂದುವಂತಾಗಲಿ.

|| ಭಾವಾರ್ಥ ||

ಉತ್ತಮವಾದ ಕರ್ಮವುಳ್ಳ ಎಲೈ ಸೋಮದೇವನೆ, ಹವಿಸ್ಸನ್ನು ಪಾತ್ರೆಗಳಲ್ಲಿ ಕಲಕಿಸಿ ಅರ್ಪಿಸುವ ಯಜಮಾನನಿಗೂ ಸ್ತುತಿಕರ್ತನಿಗೂ ಧನವನ್ನು ಕೊಡುತ್ತ ಕ್ಷಿಪ್ರವಾಗಿ ಪೃಥ್ವೀಲೋಕದ ಸುತ್ತಲೂ ಪ್ರವಹಿಸು. ನಮ್ಮ ಗೃಹವನ್ನು ಪುಷ್ಟಿಗೊಳಿಸುವ ಧನದಿಂದ ನಮ್ಮನ್ನು ಬೇರೆ ಮಾಡಬೇಡ. ನಾನಾರೂಪವುಳ್ಳದ್ದೂ, ಪ್ರಭೂತವಾದುದೂ ಆದ ಧನವನ್ನು ನಾವು ಹೊಂದುವಂತಾಗಲಿ.

English Translation

Performer of good deeds, flow quickly round the terrestrial region, giving (riches) to the worshipper and the shaker (of the libation); do not deprive us of the wealth that enriches our dwellings; may we be invested with abundant wealth of divers kinds.

|| ಸಂಹಿತಾಪಾಠಃ ||

ಆ ತೂ ನ ಇಂದೋ ಶತದಾತ್ವಶ್ವ್ಯಂ ಸಹಸ್ರದಾತು ಪಶುಮದ್ಧಿರಣ್ಯವತ್ |
ಉಪ ಮಾಸ್ವ ಬೃಹತೀ ರೇವತೀರಿಷೋಽಧಿ ಸ್ತೋತ್ರಸ್ಯ ಪವಮಾನ ನೋ ಗಹಿ || ೯ ||

|| ಪದಪಾಠಃ ||

ಆ | ತು | ನಃ | ಇಂದೋ ಇತಿ | ಶತऽದಾತು | ಅಶ್ವ್ಯಂ | ಸಹಸ್ರऽದಾತು | ಪಶುऽಮತ್ | ಹಿರಣ್ಯऽವತ್ |
ಉಪ | ಮಾಸ್ವ | ಬೃಹತೀಃ | ರೇವತೀಃ | ಇಷಃ | ಅಧಿ | ಸ್ತೋತ್ರಸ್ಯ | ಪವಮಾನ | ನಃ | ಗಹಿ || || ೯ ||

|| ಸಾಯಣಭಾಷ್ಯಂ ||

ಹೇ ಇಂದೋ ಪವಮಾನ ನೋಽಸ್ಮಭ್ಯಂ ತು ಕ್ಷಿಪ್ರಂ ಧನಮಾಯಚ್ಛ | ಕೀದೃಶಂ | ಶತದಾತು | ದಾತು ದಾನಂ | ಬಹುದಾನಂ ಅಶ್ವ್ಯಮಶ್ವಸಹಿತಂ ಸಹಸ್ರದಾತು ಸಹಸ್ರದಾನೋಪೇತಂ ಪಶುಮತ್ಪಶ್ವಾದಿಯುಕ್ತಂ ಹಿರಣ್ಯವದ್ಧಿರಣ್ಯಯುಕ್ತಂ ಚ ಧನಂ ದೇಹಿ | ತಥಾ ಹೇ ಸೋಮ ಬೃಹತೀಃ ಪ್ರಭೂತಾನಿ ರೇವತೀರ್ಧನವಂತಿ | ಯದ್ವಾ | ಪಯಸೋ ದಾತಾರಃ ಪಶವಃ | ತದ್ವಂತೀರಿಷೋಽನ್ನಾನಿ ಚಾಸ್ಮಭ್ಯಮುಪ

ಮಾಸ್ವ | ಉಪನಿರ್ಮಿಮೀಷ್ವ | ಕುರ್ವಿತಿ ಯಾವತ್ | ಕಿಂಚ ಹೇ ಪವಮಾನ ನೋಽಸ್ಮಾಕಮೇವಂಭೂತಸ್ಯ ಸ್ತೋತ್ರಸ್ಯ ಶ್ರವಣಾಯಾಧಿ ಗಹಿ | ಆಗಚ್ಛ || ಕ್ರಿಯಾರ್ಥೋಪಪದಸ್ಯ | ಪಾ. ೨-೩-೧೪ | ಇತಿ ಚತುರ್ಥೀ | ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ ||

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೆ | **ನಃ**—ನಮಗೆ | **ಶತದಾತು**—ನೂರಾರು ದಾನಯುತವಾದುದೂ **ಅಶ್ವ್ಯಂ**—ಅಶ್ವಗಳಿಂದ ಕೂಡಿದುದೂ | **ಪಶುಮತ್**—ಪಶುಯುಕ್ತವಾದುದೂ | **ಹಿರಣ್ಯವತ್**—ಸುವರ್ಣಮಯವಾದುದೂ | **ಸಹಸ್ರದಾತು**—ಸಹಸ್ರಾರು ದಾನಯುತವಾದುದೂ ಆದ ಧನವನ್ನು | **ತು**—ಕ್ಷಿಪ್ರವಾಗಿ | **ಆ**—ಒದಗಿಸು | **ಬೃಹತೀಃ**—ಪ್ರಭೂತವಾದವೂ | **ರೇವತೀಃ**—ಧನಯುತವಾದವೂ ಆದ | **ಇಷಃ**—ಅನ್ನಗಳನ್ನು | **ಉಪ ಮಾಸ್ವ**—ನಮಗೆ ಒದಗಿಸು | **ಪವಮಾನ**—ಶುದ್ಧನಾದ ಸೋಮದೇವನೇ | **ನಃ**—ನಮ್ಮ **ಸ್ತೋತ್ರಸ್ಯ**—ಸ್ತುತಿಯ ಶ್ರವಣಕ್ಕಾಗಿ | **ಅಧಿ ಗಹಿ**—ದಯಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ನಮಗೆ ನೂರಾರು ಸಂಖ್ಯೆಯಲ್ಲಿಯೂ ಸಹಸ್ರಾರು ಸಂಖ್ಯೆಯಲ್ಲಿಯೂ ದಾನಯೋಗ್ಯವಾದುದೂ, ಪಶುಯುಕ್ತವಾದುದೂ, ಸುವರ್ಣಮಯವಾದುದೂ, ಆದ ಧನವನ್ನು ಒದಗಿಸು. ಪ್ರಭೂತವೂ ಧನಯುತವೂ ಆದ ಅನ್ನಗಳನ್ನು ಒದಗಿಸು. ಶುದ್ಧನಾದ ಸೋಮದೇವನೇ, ನಮ್ಮ ಸ್ತುತಿಯ ಶ್ರವಣಕ್ಕಾಗಿ ದಯಮಾಡು.

English Translation.

O Indu, bring us quickly (wealth) with a hundred gifts, with horses, with a thousand gifts, with catlle and with gold; measure unto us abundant riches and food ; come, purified one, to (hear) our praise.

## ಎಪ್ಪತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

ಸ್ರಕ್ವೆ ಇತಿ ನವರ್ಚಂ ಷಷ್ಠಂ ಸೂಕ್ತಮಾಂಗಿರಸಸ್ಯ ಪವಿತ್ರಸ್ಯಾರ್ಷಂ ಜಾಗತಂ ಪವಮಾನಸೋಮದೇವತಾಕಂ | ತಥಾ ಚಾನುಕ್ರಮ್ಯತೇ | ಸ್ರಕ್ವೇ ಪವಿತ್ರ ಇತಿ || ಪ್ರವರ್ಗ್ಯೇಽಭಿಷ್ಟವ ಏತತ್ಸೂಕ್ತಂ | ಸೂತ್ರಿತಂ ಚ | ಸ್ರಕ್ವೇ ದ್ರಪ್ಸಸ್ಯಾಯಂ ವೇನಶ್ಚೋದಯತ್ಪೃಶ್ನಿಗರ್ಭಾಃ | ಆ. ೪-೭ | ಇತಿ ||

ಅನುವಾದವು—**ಸ್ರಕ್ವೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಆಂಗಿರಸಃ ಪವಿತ್ರಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ಜಗತೀಛಂದಸ್ಸು ಅನುಕ್ರಮಣಿಯಲ್ಲಿ—**ಸ್ರಕ್ವೇ ಪವಿತ್ರಃ** ಎಂದು ಹೇಳಿರುವುದು. ಅಭಿಷ್ಟವದಲ್ಲಿ

ಪ್ರವರ್ಗ್ಯಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಸಕ್ವೇ ದ್ರಪ್ಸಸ್ಯಾಯಂ ವೇನಶ್ಚೋದಯತ್ಪೃಶ್ನಿಗರ್ಭಾಃ** ಎಂಬ ಸೂತ್ರದಿಂದ (ಆ. ೪-೬)ವಿವೃತವಾಗಿರುವುದು.

## ಸೂಕ್ತ ೭೩

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೭೩ ॥

ಅಷ್ಟಕ—೭ ॥ ಅಧ್ಯಾಯ—೨ ॥ ವರ್ಗ—೨೯, ೩೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಪವಿತ್ರಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

**ಸ್ರಕ್ವೇ ದ್ರಪ್ಸಸ್ಯ ಧಮತಃ ಸಮಸ್ವರನ್ನೃತಸ್ಯ ಯೋನಾ ಸಮರಂತ ನಾಭಯಃ ।**

**ತ್ರೀನ್ತ್ಸ ಮೂರ್ಧ್ನೋ ಅಸುರಶ್ಚಕ್ರ ಆರಭೇ ಸತ್ಯಸ್ಯ ನಾವಃ ಸುಕೃತಮಪೀಪರನ್ ॥ ೧ ॥**

॥ ಪದಪಾಠಃ ॥

**ಸ್ರಕ್ವೇ । ದ್ರಪ್ಸಸ್ಯ । ಧಮತಃ । ಸಂ । ಅಸ್ವರನ್ । ಋತಸ್ಯ । ಯೋನಾ । ಸಂ । ಅರಂತ । ನಾಭಯಃ । ತ್ರೀನ್ । ಸಃ । ಮೂರ್ಧ್ನಃ । ಅಸುರಃ । ಚಕ್ರೇ । ಆऽರಭೇ । ಸತ್ಯಸ್ಯ । ನಾವಃ । ಸುऽಕೃತಂ । ಅಪೀಪರನ್ ॥ ೧ ॥**

॥ ಸಾಯಣಭಾಷ್ಯಂ ॥

**ಸ್ರಕ್ವೇ ಯಜ್ಞಸ್ಯ ಹನುಸ್ಥಾನೀಯೇ। ಸ್ರಕ್ವೆ ಓಷ್ಠಪ್ರಾಂತೋ ಹನುರುಚ್ಯತೇ । ಅಧಿಷವಣಫಲಕೇ ಧಮತೋऽಭಿಷೂಯಮಾಣಸ್ಯ ದ್ರಪ್ಸಸ್ಯ ಸೋಮಸ್ಯಾಂಶವಃ ಸಮಸ್ವರನ್ । ಸಂಗಚ್ಛಂತೇ । ತದಾಸ್ಯ-ಶಬ್ದಯನ್ವಾ । ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಯೋನಾ ಯೋನಾವುತ್ಪತ್ತಿಸ್ಥಾನೇ ನಾಭಯಃ ಸೋಮರಸಾಃ ಸಮರಂತ । ಸಂಗಚ್ಛಂತೇ ॥ ಅರ್ತೇಃ ಸರ್ತೇಃ ಗಮ್ಯಾತ್ಯಾದಿನಾತ್ಮನೇಪದಂ । ಸರ್ತಿಶಾಸ್ತ್ಯ-ರ್ತಿಭ್ಯಶ್ಚೇತಿ ಚ್ಲೇರಙ್ ॥ ಅಥಾಸುರೋ ಬಲವಾನ್ ಸರ್ವೇಷಾಂ ಪ್ರೀಣನಾತ್ ಪ್ರಾಣದಾತಾ ವಾ ಸ ಸೋಮೋ ಮೂರ್ಧ್ನಃ ಸಮುಚ್ಛ್ರಿತಾಂಸ್ತ್ರೀಲ್ಲೋಕಾನಾರಭ ಆರಂಭಣಾಯ ಮನುಷ್ಯದೇವಾದೀನಾಂ**

**ಸಂಚರಣಾಯ ಕರೋತಿ । ಕಿಂಚ ಸತ್ಯಸ್ಯ ಸತ್ಯಭೂತಸ್ಯ ಸೋಮಸ್ಯ ನಾವೋ ನೌಕಾ ಇವ ಸ್ಥಿತಾಶ್ಚತಸ್ರಃ ಸ್ಥಾಲ್ಯಃ । ಆದಿತ್ಯಾಗ್ರಯಣೋಕ್ಥ್ಯಧ್ರುವಸ್ಥಾಲ್ಯ ಇತಿ । ತಾಃ ಸ್ಥಾಲ್ಯಃ ಸುಕೃತಂ ಸುಷ್ಠು ಕರ್ಮಾಣಿ ಕುರ್ವಂತಂ ಯಜಮಾನಮಪೀಪರನ್ । ಅಭಿಮತದಾನೇನ ಪೂಜಯಂತಿ ವಾ ॥ ಪಾರಯತೇರ್ಲುಙಿ ಚಙಿ ಸನ್ವದ್ಭಾವಾಭ್ಯಾಸೇತ್ವದೀರ್ಘಾಃ ॥**

॥ ಪ್ರತಿಪದಾರ್ಥ ॥

**ಸ್ರಕ್ವೇ**—ಯಜ್ಞಕ್ಕೆ ಕೆನ್ನೆಯಂತಿರುವ ಹಿಂಡುವ ಹಲಗೆಯಲ್ಲಿ । **ಧಮತಃ**—ಹಿಂಡಲ್ಪಡುವ । **ದ್ರಪ್ಸಸ್ಯ**—ಸೋಮದ ರಸಗಳು । **ಸಮಸ್ವರನ್**—ಒಟ್ಟಿಗೆ ಸೇರಿಕೊಳ್ಳುತ್ತವೆ । **ಋತಸ್ಯ**—ಯಜ್ಞದ । **ಯೋನಾ**—ಉತ್ಪತ್ತಿ ಸ್ಥಾನದಲ್ಲಿ । **ನಾಭಯಃ**—ಸೋಮರಸಗಳು । **ಸಮರಂತ**—ಒಂದಾಗಿ ಸೇರಿ ಹರಿಯುತ್ತವೆ । **ಅಸುರಃ**—ಬಲಶಾಲಿಯಾದ । **ಸಃ**—ಸೋಮನು । **ಮೂರ್ಧ್ನಃ**—ಉಚ್ಛ್ರಾಯ ಸ್ಥಿತಿಯಲ್ಲಿರುವ । **ತ್ರೀನ್**—ಮೂರು ಲೋಕಗಳನ್ನೂ । **ಆರಭೇ**—ದೇವಮಾನವಾದಿಗಳ ಸಂಚಾರಕ್ಕಾಗಿ । **ಚಕ್ರೇ**—ನಿರ್ಮಿಸಿದ್ದಾನೆ । **ಸತ್ಯಸ್ಯ**—ಸತ್ಯಾತ್ಮಕನಾದ ಸೋಮನ । **ನಾವಃ**—ನೌಕೆಗಳು । **ಸುಕೃತಂ**—ಉತ್ತಮವಾದ ಕರ್ಮವುಳ್ಳ ಯಜಮಾನನನ್ನು । **ಅಪೀಪರನ್**—ತೃಪ್ತಿಗೊಳಿಸುತ್ತವೆ.

॥ ಭಾವಾರ್ಥ ॥

ಯಜ್ಞಕ್ಕೆ ಕೆನ್ನೆಯಂತಿರುವ ಹಿಂಡುವ ಹಲಗೆಯಲ್ಲಿ ಹಿಂಡಲ್ಪಡುವ ಸೋಮದ ರಸಗಳು ಒಟ್ಟಿಗೆ ಸೇರಿಕೊಳ್ಳುತ್ತವೆ. ಯಜ್ಞದ ಉತ್ಪತ್ತಿ ಸ್ಥಾನದಲ್ಲಿ ಸೋಮರಸಗಳು ಒಂದಾಗಿ ಸೇರಿ ಹರಿಯುತ್ತವೆ. ಬಲಶಾಲಿಯಾದ ಸೋಮನು ಉಚ್ಛ್ರಾಯ ಸ್ಥಿತಿಯಲ್ಲಿರುವ ಮೂರುಲೋಕಗಳನ್ನೂ ದೇವಮಾನವಾದಿಗಳ ಸಂಚಾರಕ್ಕಾಗಿ ನಿರ್ಮಿಸಿದ್ದಾನೆ. ಸತ್ಯಾತ್ಮಕನಾದ ಸೋಮನ ನೌಕೆಗಳು ಉತ್ತಮವಾದ ಕರ್ಮವುಳ್ಳ ಯಜಮಾನನನ್ನು ತೃಪ್ತಿಗೊಳಿಸುತ್ತವೆ.

## English Translation.

(The streams) of the dripping effused (Soma) sound together on the jaw (of the sacrifice), the Soma-juices flow together to the place of sacrifice. The powerful (Soma) has made the three exalted worlds for the use (of men and gods); the ships of the truthful (Soma) satisfy the pious worshipper.

॥ ಸಂಹಿತಾಪಾಠಃ ॥

ಸಮ್ಯಕ್ ಸಮ್ಯಂಚೋ ಮಹಿಷಾ ಅಹೇಷತ ಸಿಂಧೋರೂರ್ಮಾವಧಿ ವೇನಾ
ಅವೀವಿಪನ್ ।
ಮಧೋರ್ಧಾರಾಭಿರ್ಜನಯಂತೋ ಅರ್ಕಮಿತ್ಪ್ರಿಯಾಮಿಂದ್ರಸ್ಯ ತನ್ವಮ-
ವೀವೃಧನ್ ॥ ೨ ॥

**ಗೋಸಂಭಜನಾಯ ರಥವಾನಿತ್ಯರ್ಥಃ । ಇಂದ್ರಸ್ಯ ಶುಷ್ಮಂ ಬಲಮೀರಯನ್ ಪ್ರೇರಯನ್ನಿಂದುಃ ಸೋಮೋ ದೇವೋಽಪಸ್ಯುಭಿಃ । ಕರ್ಮೇಚ್ಛುಭಿರ್ಮನೀಷಿಭಿರ್ಮೇಧಾವಿಭಿರೃತ್ವಿಗ್ಭಿರ್ಹಿನ್ವಾನಃ ಪ್ರೇರ್ಯಮಾಣೋಽಜ್ಯತೇ ಗೋಭಿಃ ॥**

॥ ಪ್ರತಿಪದಾರ್ಥ ॥

(**ಸೋಮಃ**—ಸೋಮದೇವನು) । **ಗಭಸ್ತ್ಯೋಃ**—ತನ್ನ ಹಸ್ತಗಳಲ್ಲಿ । **ಆಯುಧಾ**—ಆಯುಧಗಳನ್ನು । **ಶೂರೋ ನ**—ಶೂರನಂತೆ । **ಧತ್ತೇ**—ಧರಿಸುತ್ತಾನೆ । **ಸ್ವಂ**—ಯಜ್ಞವನ್ನು । **ಸಿಷಾಸನ್**—ಸೇವಿಸಲಿಚ್ಛಿಸಿಯೂ । **ರಥಿರಃ**—ರಥವನ್ನು ಹತ್ತಿದವನಾಗಿಯೂ । **ಗವಿಷ್ಟಿಷು**—ಗೋವುಗಳನ್ನು ಹುಡುಕುವ ಕಾಲದಲ್ಲಿ । **ಇಂದ್ರಸ್ಯ**—ಇಂದ್ರನ । **ಶುಷ್ಮಂ**—ಬಲವನ್ನು । **ಈರಯನ್**—ಪ್ರೇರಿಸುತ್ತ । **ಇಂದುಃ**—ಸೋಮನು । **ಅಪಸ್ಯುಭಿಃ**—ಕರ್ಮೇಚ್ಛುಗಳಾದ । **ಮನೀಷಿಭಿಃ**—ಋತ್ವಿಕ್ಕುಗಳಿಂದ । **ಹಿನ್ವಾನಃ**—ಪ್ರೇರಿತನಾಗಿ । **ಅಜ್ಯತೇ**—ಕ್ಷೀರಗಳೊಂದಿಗೆ ಸೇರಿಸಲ್ಪಡುತ್ತಾನೆ.

॥ ಭಾವಾರ್ಥ ॥

ಸೋಮದೇವನು ಶೂರನಂತೆ ತನ್ನ ಹಸ್ತಗಳಲ್ಲಿ ಆಯುಧಗಳನ್ನು ಧರಿಸುತ್ತಾನೆ. ಯಜ್ಞವನ್ನು ಸೇವಿಸಲಿಚ್ಛಿಸಿಯೂ, ರಥವನ್ನು ಹತ್ತಿದವನಾಗಿಯೂ, ಗೋವುಗಳನ್ನು ಹುಡುಕುವ ಕಾಲದಲ್ಲಿ ಇಂದ್ರನ ಬಲವನ್ನು ಹೆಚ್ಚುಮಾಡುತ್ತ, ಸೋಮನು ಕರ್ಮೇಚ್ಛುಗಳಾದ ಋತ್ವಿಕ್ಕುಗಳಿಂದ ಪ್ರೇರಿತನಾಗಿ ಕ್ಷೀರಗಳೊಂದಿಗೆ ಸೇರಿಸಲ್ಪಡುತ್ತಾನೆ.

## English Translation.

Like a hero he carries weapons in his hands, desirous of enjoing felicity, mounting his chariot in quest of the cattle (of the worshipper), animating the strength of Indra, Indu, urged by the wise performers of pious acts, is anointed (with the milk and curds).

॥ ಸಂಹಿತಾಪಾಠಃ ॥

ಇಂದ್ರಸ್ಯ ಸೋಮ ಪವಮಾನ ಊರ್ಮಿಣಾ ತವಿಷ್ಯಮಾಣೋ ಜಠರೇಷ್ವಾ ವಿಶ ।
ಪ್ರ ಣಃ ಪಿನ್ವ ವಿದ್ಯುದಭ್ರೇವ ರೋದಸೀ ಧಿಯಾ ನ ವಾಜಾँ ಉಪ ಮಾಸಿ ಶಶ್ವತಃ ॥ ೩ ॥

|| ಪದಪಾಠಃ ||

ಇಂದ್ರಸ್ಯ | ಸೋಮ | ಪವಮಾನಃ | ಊರ್ಮಿಣಾ | ತವಿಷ್ಯಮಾಣಃ | ಜಠರೇಷು | ಆ | ವಿಶ |

ಪ್ರ | ನಃ | ಪಿನ್ವ | ವಿಽದ್ಯುತ್ | ಅಭ್ರಾಽಇವ | ರೋದಸೀ ಇತಿ | ಧಿಯಾ | ನ | ವಾಜಾನ್ | ಉಪ |

ಮಾಸಿ | ಶಶ್ವತಃ || ೩ ||

|| ಸಾಯಣಭಾಷ್ಯಂ ||

ಹೇ ಸೋಮ ಪವಮಾನಃ ಪೂಯಮಾನಸ್ತ್ವಂ ತವಿಷ್ಯಮಾಣೋ ವರ್ಧಯಿಷ್ಯಮಾಣಃ ಸನ್ನಿಂದ್ರಸ್ಯ ಜಠರೇಷೂರ್ಮಿಣಾ ಪ್ರಭೂತಯಾ ಧಾರಯಾ ಆ ವಿಶ | ಜಠರಪ್ರದೇಶಸ್ಯ ಬಾಹುಲ್ಯಾದ್ಬಹುವಚನಂ | ನೋಽಸ್ಮದರ್ಥಂ ವಿದ್ಯುದಭ್ರೇವಾಭ್ರಾಣೀವ ಸಾ ಯಥಾ ದೋಗ್ಧ್ಯಭ್ರಾಣಿ ತದ್ವತ್ಪ್ರಪಿನ್ವ ಧುಕ್ಷ್ವ ರೋದಸೀ ದ್ಯಾವಾಪೃಥಿವ್ಯೌ | ಕಿಂಚ ಧಿಯಾ ಕರ್ಮಣಾ ನೇದಾನೀಂ | ನೇತಿ ಸಂಪ್ರತ್ಯರ್ಥೇ | ಶಶ್ವತಃ | ಬಹುನಾಮೈತತ್ | ಬಹೂನ್ವಾಜಾನನ್ನಾನ್ಯುಪ ಸಮೀಪೇ ಮಾಸಿ | ನಿರ್ಮಾಸಿ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ, | **ಪವಮಾನಃ**—ಶುದ್ಧಿಯನ್ನು ಹೊಂದಿದವನಾಗಿಯೂ | **ತವಿಷ್ಯಮಾಣಃ**—ಶಕ್ತಿಯನ್ನು ಅಪೇಕ್ಷಿಸುವವನಾಗಿಯೂ ಆಗಿ | **ಇಂದ್ರಸ್ಯ**—ಇಂದ್ರನ | **ಜಠರೇಷು**—ಜಠರಗಳಲ್ಲಿ | **ಊರ್ಮಿಣಾ**—ಪ್ರಭೂತವಾದ ಧಾರಾರೂಪದಲ್ಲಿ | **ಆ ವಿಶ**—ಪ್ರವೇಶಿಸು | **ವಿದ್ಯುತ್**—ಮಿಂಚು | **ಅಭ್ರೇವ**—ಮೇಘವನ್ನು ಕರೆಯುವಂತೆ | **ನಃ**—ನಮಗಾಗಿ | **ರೋದಸೀ**—ದ್ಯಾವಾಪೃಥಿವಿಗಳಿಂದ | **ಪ್ರ ಪಿನ್ವ**—ಸಾರವನ್ನು ಕರೆ | **ಧಿಯಾ**—ನಿನ್ನ ಕರ್ಮದಿಂದ | **ನ**—ಈಗ | **ಶಶ್ವತಃ**—ಅನೇಕವಾದ | **ವಾಜಾನ್**—ಅನ್ನಗಳನ್ನು | **ಉಪ ಮಾಸಿ**—ನಮಗೆ ನಿರ್ಮಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದವನಾಗಿಯೂ ಶಕ್ತಿಯನ್ನು ಆಪೇಕ್ಷಿಸುವವನಾಗಿಯೂ ಆಗಿ ಇಂದ್ರನ ಜಠರಗಳಲ್ಲಿ ಪ್ರಭೂತವಾದ ಧಾರಾರೂಪದಲ್ಲಿ ಪ್ರವೇಶಿಸು. ಮಿಂಚು ಮೇಘವನ್ನು ಕರೆಯುವಂತೆ, ನಮಗಾಗಿ ದ್ಯಾವಾಪೃಥಿವಿಗಳಿಂದ ಅವುಗಳ ಸಾರವನ್ನು ಕರೆ ನಿನ್ನ ಕರ್ಮದಿಂದ ಈಗ ಅನೇಕವಾದ ಅನ್ನಗಳನ್ನು ನಮಗೆ ನಿರ್ಮಿಸು.

## English Translation.

Soma, who are purified, who desire strength enter Indra's belly in a mighty stream ; milk heaven and earth for us as lightning (milks) the clouds ; now with the rite mete (unto us) abundant food.

॥ ಸಂಹಿತಾಪಾಠಃ ॥

ವಿಶ್ವಸ್ಯ ರಾಜಾ ಪವತೇ ಸ್ವರ್ದೃಶ ಋತಸ್ಯ ಧೀತಿಮೃಷಿಷಾಳವೀವಶತ್ ।
ಯಃ ಸೂರ್ಯಸ್ಯಾಸಿರೇಣ ಮೃಜ್ಯತೇ ಪಿತಾ ಮತೀನಾಮಸಮಷ್ಟಕಾವ್ಯಃ ॥

॥ ಪದಪಾಠಃ ॥

ವಿಶ್ವಸ್ಯ । ರಾಜಾ । ಪವತೇ । ಸ್ವಃಽದೃಶಃ । ಋತಸ್ಯ । ಧೀತಿಂ । ಋಷಿಷಾಟ್ । ಅವೀವಶತ್ ।
ಯಃ । ಸೂರ್ಯಸ್ಯ । ಅಸಿರೇಣ । ಮೃಜ್ಯತೇ । ಪಿತಾ । ಮತೀನಾಂ । ಅಸಮಷ್ಟಽಕಾವ್ಯಃ ॥ ೪ ॥

॥ ಸಾಯಣಭಾಷ್ಯಂ ॥

ವಿಶ್ವಸ್ಯ ಜಗತೋ ರಾಜಾ ಸ್ವಾಮೀ ಸೋಮಃ ಸ್ವರ್ದೃಶಃ ಸ್ವರ್ಗದ್ರಷ್ಟುಃ ಸರ್ವದ್ರಷ್ಟುರ್ವರ್ತಸ್ಯ ಸತ್ಯಭೂತಸ್ಯೇಂದ್ರಸ್ಯ । ಮನುಷ್ಯವಾಚ್ಯನೃತಶಬ್ದಪ್ರತಿಯೋಗಿಕಸ್ಯರ್ತಶಬ್ದಸ್ಯ ದೇವಾರ್ಥಃ । ತತ್ರಾಪ್ಯಾಚಿತ್ಯೇನೇಂದ್ರಃ ಪರಿಗೃಹ್ಯತೇ । ತಸ್ಯ ಧೀತಿಂ ಮತಿಂ ಕರ್ಮ ವರ್ಷಿಷಾಡೃಷೀಣಾಮತೀಂದ್ರಿಯದ್ರಷ್ಟೄಣಾಮಭಿಭವಿತಾ । ಮಹತ್ತ್ವೇನ ಸ್ವಯಮೃಷಿಶ್ರೇಷ್ಠತ್ವಾದಿತಿ ಭಾವಃ । ತಥಾ ಚ ಮಂತ್ರಾಂತರಂ । ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿಃ । ಋ.೯-೯೬-೬ । ಇತಿ । ಈದೃಶಃ ಸೋಮೋಽವೀವಶತ್ । ಅಕಾಮಯತೇಂದ್ರಸ್ಯ ಕರ್ಮ । ಯಃ ಸೋಮಃ ಸೂರ್ಯಸ್ಯ ದೇವಸ್ಯಾಸಿರೇಣ ಕ್ಷೇಪಕೇಣ ರಶ್ಮಿನಾ ಮೃಜ್ಯತೇ । ಅಸಮಷ್ಟಕಾವ್ಯೋಽನ್ಯೈಃ ಕವಿಭಿರವ್ಯಾಪ್ತಕರ್ಮಾ ಸೋಮೋ ಮತೀನಾಮಸ್ಮದೀಯಾನಾಂ ಸ್ತುತೀನಾಂ ಪಿತಾ ಪಾಲಕಃ ಸ್ವಾಮೀ ಭವತೀತಿ ಶೇಷಃ । ಯದ್ವಾ । ಯೋ ಮತೀನಾಂ ಪಿತಾಸಮಷ್ಟಕಾವ್ಯಶ್ಚ ಸನ್ಮೃಜ್ಯತೇ ಸ ಪವತ ಇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ವಿಶ್ವಸ್ಯ**—ಸಕಲ ಜಗತ್ತಿಗೂ । **ರಾಜಾ**—ಪ್ರಭುವಾದ ಸೋಮದೇವನು । **ಪವತೇ**—ಪ್ರವಹಿಸುತ್ತಾನೆ । **ಸ್ವರ್ದೃಶಃ**—ಸಕಲವನ್ನೂ ನೋಡುವ ಸಾಮರ್ಥ್ಯವುಳ್ಳ ಸೋಮನು । **ಋತಸ್ಯ**—ಸತ್ಯಾತ್ಮಕನಾದ ಇಂದ್ರನ । **ಧೀತಿಂ**—ಪೂಜಾಕರ್ಮವನ್ನು । **ಋಷಿಷಾಟ್**—ಋಷಿಗಳಿಗಿಂತಲೂ ಮೀರಿದವನಾಗಿ । **ಅವೀವಶತ್**—ಅಪೇಕ್ಷಿಸುತ್ತಾನೆ । **ಯಃ**—ಯಾವ ಸೋಮದೇವನು । **ಸೂರ್ಯಸ್ಯ**—ಸೂರ್ಯನ । **ಅಸಿರೇಣ**—ರಶ್ಮಿಯಿಂದ । **ಮೃಜ್ಯತೇ**—ಶುದ್ಧಿಗೊಳಿಸಲ್ಪಡುವನೋ ಅದೇ ಸೋಮದೇವನು । **ಅಸಮಷ್ಟಕಾವ್ಯಃ**—ಇತರರಿಂದ ಅನುಕರಿಸಲು ಸಾಧ್ಯವಿಲ್ಲದೇ ಇರುವ ಕರ್ಮವುಳ್ಳವನಾಗಿ । **ಮತೀನಾಂ**—ಸ್ತುತಿಗಳಿಗೆ । **ಪಿತಾ**—ಪಾಲಕನಾಗಿರುತ್ತಾನೆ.

॥ ಭಾವಾರ್ಥ ॥

ಸಕಲ ಜಗತ್ತಿಗೂ ಪ್ರಭುವಾದ ಸೋಮದೇವನು ಪ್ರವಹಿಸುತ್ತಾನೆ. ಸಕಲವನ್ನೂ ನೋಡುವ ಸಾಮರ್ಥ್ಯವುಳ್ಳ ಸೋಮನು ಸತ್ಯಾತ್ಮಕನಾದ ಇಂದ್ರನ ಪೂಜಾಕರ್ಮವನ್ನು ಇತರ ಋಷಿಗಳಿಗಿಂತಲೂ ಮೀರಿ ಅಪೇಕ್ಷಿಸುತ್ತಾನೆ.

ಯಾವ ಸೋಮನು ಸೂರ್ಯನ ರಶ್ಮಿಗಳಿಂದ ಶುದ್ಧನಾಗುವನೋ ಅದೇ ಸೋಮನು ಇತರರಿಂದ ಅನುಕರಿಸಲು ಸಾಧ್ಯವಿಲ್ಲದೇ ಇರುವ ಕರ್ಮವುಳ್ಳವನಾಗಿ ಸ್ತುತಿಗಳಿಗೆ ಪಾಲಕನಾಗಿರುತ್ತಾನೆ.

## English Translation.

(Soma) the sovereign of the universe flows forth; surpassing the Rishis he desired the worship of the all seeing truthful (Indra); he who is cleansed by the ray of the sun, the father of praise, the unequalled sage.

|| ಸಂಹಿತಾಪಾಠಃ ||

ವೃಷೇವ ಯೂಥಾ ಪರಿ ಕೋಶಮರ್ಷಸ್ಯಪಾಮುಪಸ್ಥೇ ವೃಷಭಃ ಕನಿಕ್ರದತ್ ।
ಸ ಇಂದ್ರಾಯ ಪವಸೇ ಮತ್ಸರಿನ್ತಮೋ ಯಥಾ ಜೇಷಾಮ ಸಮಿಥೇ ತ್ವೋತಯಃ ॥ ೫ ॥

|| ಪದಪಾಠಃ ||

ವೃಷಾಽಇವ । ಯೂಥಾ । ಪರಿ । ಕೋಶಂ । ಅರ್ಷಸಿ । ಅಪಾಂ । ಉಪಽಸ್ಥೇ । ವೃಷಭಃ । ಕನಿಕ್ರದತ್ ।
ಸಃ । ಇಂದ್ರಾಯ । ಪವಸೇ । ಮತ್ಸರಿನ್ಽತಮಃ । ಯಥಾ । ಜೇಷಾಮ । ಸಂಽಇಥೇ । ತ್ವಾಽಊತಯಃ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ವೃಷೇವ ಯೂಥಾ ಯೂಥಾನಿ ವೃಷಭ ಇವ ಸ ಯಥಾ ತಾನಿ ಪ್ರವಿಶತಿ ತದ್ವತ್ ಕೋಶಂ ಕೋಶವದ್ರಸಧಾರಕಂ ಕಲಶಂ ಪರ್ಯರ್ಷಸಿ । ಪರಿಗಚ್ಛಸಿ । ಕುತ್ರಸ್ಥಃ ಸನ್ । ಅಪಾಮುಪಸ್ಥೇಽಂತರಿಕ್ಷೇ । ಕೀದೃಶಃ ಸನ್ । ವೃಷಭೋ ವರ್ಷಿತಾ ಕನಿಕ್ರದಚ್ಛಬ್ದಂ ಕುರ್ವನ್ । ಸ ತ್ವಂ ಹೇ ಸೋಮ ಇಂದ್ರಾಯೇಂದ್ರಾರ್ಥಂ ಪವಸೇ । ಪೂಯಸೇ । ಮತ್ಸರಿಂತಮೋ ಮಾದಯಿತೃತಮಸ್ತ್ವಂ । ಯಥಾ ವಯಂ ಜೇಷಾಮ ಜಯೇಮ ಸಮಿಥೇ ಸಂಗ್ರಾಮೇ ತ್ವೋತಯಸ್ತ್ವಯಾ ರಕ್ಷಿತಾಃ ಸಂತಃ ॥

||ಪ್ರತಿಪದಾರ್ಥ||

(ಎಲೈ ಸೋಮದೇವನೇ) ಅಪಾಂ ಉಪಸ್ಥೇ—ಅಂತರಿಕ್ಷದಲ್ಲಿ । ವೃಷಭಃ—ವೃಷ್ಟಿಕಾರಕನಾದ ನೀನು । ಕನಿಕ್ರದತ್—ಶಬ್ದವನ್ನುಂಟುಮಾಡುತ್ತ । ಯೂಥಾ—ಗೋಸಮೂಹಕ್ಕೆ । ವೃಷಾ ಇವ—ಗೂಳಿಯು ನುಗ್ಗಿ ಪ್ರವೇಶಿಸುವಂತೆ । ಕೋಶಂ—ದ್ರೋಣಕಲಶಕ್ಕೆ । ಪರಿ ಅರ್ಷಸಿ—ನೀನು ವೇಗದಿಂದ ಪ್ರವೇಶಿಸುತ್ತೀಯೆ । ಯಥಾ—ಯಾವ ರೀತಿ । ಸಮಿಥೇ—ಯುದ್ಧದಲ್ಲಿ । ತ್ವೋತಯಃ—ನಿನ್ನಿಂದ ರಕ್ಷಿತರಾದ ನಾವು ।

**ಜೇಷಾಮ**—ಜಯವನ್ನು ಹೊಂದುವವೋ ಆರೀತಿ | **ಮತ್ಸರಿಂತಮಃ**—ಅತ್ಯಧಿಕವಾಗಿ ಹರ್ಷವನ್ನುಂಟುಮಾಡುವ | **ಸಃ**—ನೀನು | **ಇಂದ್ರಾಯ**—ಇಂದ್ರನ ಪಾನಕ್ಕಾಗಿ | **ಪವಸೇ**—ಹರಿಯುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಅಂತರಿಕ್ಷದಲ್ಲಿ ವೃಷ್ಟಿಕಾರಕನಾದ ನೀನು ಶಬ್ದವನ್ನುಂಟುಮಾಡುತ್ತ ಗೋ ಸಮೂಹಕ್ಕೆ ಗೂಳಿಯು ನುಗ್ಗಿ ಪ್ರವೇಶಿಸುವಂತೆ ದ್ರೋಣಕಲಶಕ್ಕೆ ವೇಗದಿಂದ ಪ್ರವೇಶಿಸುತ್ತೀಯೆ. ನಿನ್ನಿಂದ ರಕ್ಷಿತ ರಾದ ನಾವು ಯುದ್ಧದಲ್ಲಿ ಯಾವ ರೀತಿ ಜಯವನ್ನು ಪಡೆಯಬಹುದೋ ಈ ರೀತಿ ಅತ್ಯಧಿಕವಾಗಿ ಹರ್ಷವನ್ನುಂಟು ಮಾಡುವ ನೀನು ಇಂದ್ರನ ಪಾನಾರ್ಥವಾಗಿ ಪ್ರವಹಿಸು.

English Translation

As a bull (entering) the herd you rush to the receptacle, on the top of the waters, showering (benefits) crying aloud; you flow for Indra, most exhilarating, so that we may be victorious in battle protected by you.

## ಎಪ್ಪತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

**ಏಷ ಪ್ರ ಕೋಶ ಇತಿ ಪಂಚರ್ಚಂ ದಶಮಂ ಸೂಕ್ತಂ | ಋಷ್ಯಾದ್ಯಾಃ ಪೂರ್ವವತ್ | ಏಷ ಇತ್ಯನುಕ್ರಾಂತಂ || ಗತೋ ವಿನಿಯೋಗಃ ||**

ಅನುವಾದವು—**ಏಷ ಪ್ರ ಕೋಶೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತದ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನು ಕ್ರಮಣಿಕೆಯಲ್ಲಿ ಏಷಃ ಎಂದು ಹೇಳಲಾಗಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೭೭

ಮಂಡಲ-೯ || ಅನುವಾಕ-೪ || ಸೂಕ್ತ-೭೭ ||

ಅಷ್ಟಕ-೭ || ಅಧ್ಯಾಯ- ೩|| ವರ್ಗ-೨ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||

|| ಋಷಿಃ—ಕವಿಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—ಜಗತೀ ||

|| ಸಂಹಿತಾಪಾಠಃ ||

ಏಷ ಪ್ರ ಕೋಶೇ ಮಧುಮಾँ ಅಚಿಕ್ರದದಿಂದ್ರಸ್ಯ ವಜ್ರೋ ವಪುಷೋ ವಪು-
ಷ್ಟರಃ ।
ಅಭೀಮೃತಸ್ಯ ಸುದುಘಾ ಘೃತಶ್ಚುತೋ ವಾಶ್ರಾ ಅರ್ಷಂತಿ ಪಯಸೇವ
ಧೇನವಃ ॥ ೧ ॥

|| ಪದಪಾಠಃ ||

ಏಷಃ । ಪ್ರ । ಕೋಶೇ । ಮಧುಽಮಾನ್ । ಅಚಿಕ್ರದತ್ । ಇಂದ್ರಸ್ಯ । ವಜ್ರಃ । ವಪುಷಃ । ವಪುಃಽತರಃ ।
ಅಭಿ । ಈಂ । ಋತಸ್ಯ । ಸುಽದುಘಾಃ । ಘೃತಽಶ್ಚುತಃ । ವಾಶ್ರಾಃ । ಅರ್ಷಂತಿ । ಪಯಸಾಽಇವ ।
ಧೇನವಃ ॥ ೧ ॥

|| ಸಾಯಣಭಾಷ್ಯಂ ||

ಏಷೋಽಯಂ ಸೋಮೋ ಮಧುಮಾನ್ಮಧುರರಸಃ ಕೋಶೇ ದ್ರೋಣಕಲಶೇ ಪ್ರಾಚಿಕ್ರದತ್ । ಪ್ರಕರ್ಷೇಣ ಶಬ್ದಾಯತೇ । ಕೀದೃಶ ಏಷಃ । ಇಂದ್ರಸ್ಯ ವಜ್ರೋ ವಜ್ರಸ್ಥಾನೀಯಃ । ಬಲಕರತ್ವೇನ ವಜ್ರವತ್ಪ್ರಹರಣಸಾಧನತ್ವಾದ್ವಜ್ರತ್ವೋಪಚಾರಃ । ಏಷ ಏವ ಹಿ ಸೋಮೋ ವಜ್ರ ಇಂದ್ರಸ್ಯ ಸಾಧನೇ । ತಥಾ ವಪುಷೋ ಬೀಜಾನಾಂ ವಪ್ತುರನ್ಯಸ್ಮಾದ್ವಪುಷ್ಟರೋಽತಿಶಯೇನ ವಪ್ತಾ । ಬೀಜಾವಾಪಸ್ಯ ಸೋಮಕರ್ತೃಕತ್ವಾತ್ ಸೋಮೋ ವೈ ರೇತೋಧಾಃ । ತೈ- ಸ. ೨-೧-೧-೬ । ಇತಿ ಶ್ರುತೇಃ । ಈಮಸ್ಯ-ರ್ತಸ್ಯ ಸತ್ಯಫಲಸ್ಯ ಸೋಮಸ್ಯ ಧಾರಾ ಇತಿ ಶೇಷಃ । ತಾ ಅಭ್ಯರ್ಷಂತಿ । ಅಭಿಗಚ್ಛಂತಿ । ಕೀದೃಶ್ಯಸ್ತಾಃ । ಸುದುಘಾಃ ಸುಷ್ಠು ದೋಗ್ಧ್ರ್ಯಃ ಫಲಾನಾಂ ಘೃತಶ್ಚುತ ಉದಕಸ್ಯ ರಸಸ್ಯ ವಾ ಕ್ಷಾರಯಿತ್ರ್ಯೋ ವಾಶ್ರಾಃ ಶಬ್ದಯಂತ್ಯಃ । ಕಿಮಿವ । ಪಯಸಾ ಯುಕ್ತಾ ವಾಶ್ರಾ ಧೇನವ ಇವೇತಿ ॥

|| ಪ್ರತಿಪದಾರ್ಥ ||

**ವಪುಷಃ**—ಸುಂದರವಾದ ರೂಪಕ್ಕಿಂತಲೂ । **ವಪುಷ್ಟರಃ**—ಅಧಿಕವಾದ ಸುಂದರನೂ । **ಇಂದ್ರಸ್ಯ**—ಇಂದ್ರನ । **ವಜ್ರಃ**—ವಜ್ರಾಯುಧದಂತಿರುವವನೂ ಆದ । **ಏಷಃ**—ಈ ಸೋಮದೇವನು । **ಮಧುಮಾನ್**—ಮಧುರವಾದ ರಸದಿಂದ ಕೂಡಿದವನಾಗಿ । **ಕೋಶೇ**—ದ್ರೋಣಕಲಶದಲ್ಲಿ । **ಪ್ರಾಚಿಕ್ರದತ್**—ಶಬ್ದಮಾಡುತ್ತಾನೆ । **ಪಯಸಾ**—ಕ್ಷೀರದಿಂದ ತುಂಬಿದ । **ಧೇನವ ಇವ**—ಗೋವುಗಳಂತೆ । **ಋತಸ್ಯ**—ಸತ್ಯಾತ್ಮಕವಾದ ಫಲವುಳ್ಳ । **ಈಂ**—ಈ ಸೋಮನ । **ಸುದುಘಾಃ**—ಉತ್ತಮವಾದ ಫಲಗಳನ್ನು ಸುರಿಸುವುವೂ । **ಘೃತಶ್ಚುತಃ**—ರಸವನ್ನು ಹಿಂಡುವುವೂ । **ವಾಶ್ರಾಃ**—ಶಬ್ದಮಾಡತಕ್ಕವೂ ಆದ ಧಾರೆಗಳು । **ಅಭ್ಯರ್ಷಂತಿ**—ಸುತ್ತಲೂ ಪ್ರವಹಿಸುತ್ತವೆ.

|| ಭಾವಾರ್ಥ ||

ಸುಂದರವಾದ ರೂಪಕ್ಕಿಂತಲೂ ಅಧಿಕವಾದ ಸುಂದರನೂ ಇಂದ್ರನ ವಜ್ರಾಯುಧ ರೂಪನೂ ಆದ ಈ ಸೋಮದೇವನು ಮಧುರವಾದ ರಸದಿಂದ ಕೂಡಿದವನಾಗಿ ದ್ರೋಣಕಲಶದಲ್ಲಿ ಶಬ್ದಮಾಡುತ್ತಾನೆ. ಕ್ಷೀರದಿಂದ ತುಂಬಿದ ಗೋವುಗಳಂತೆ ಸತ್ಯಾತ್ಮಕವಾದ ಫಲವುಳ್ಳ ಈ ಸೋಮನ ಉತ್ತಮವಾದ ಫಲಗಳನ್ನು ಸುರಿಸುವುವೂ ರಸವನ್ನು ಹಿಂಡುವುವೂ ಶಬ್ದಮಾಡತಕ್ಕವೂ ಆದ ಧಾರೆಗಳು ಸುತ್ತಲೂ ಪ್ರವಹಿಸುತ್ತವೆ.

## English Translation.

The sweet-flavoured beverage sounds in the pitcher, the thunderbolt of Indra, more beautiful than the beautiful : (the strsams) of this veracious (Soma) approach yielding much milk, dropping water, lowing like cow (laden) with milk.

|| ಸಂಹಿತಾಪಾಠಃ ||

ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ ।
ಸ ಮಧ್ವ ಆ ಯುವತೇ ವೇವಿಜಾನ ಇತ್ಕೃಶಾನೋರಸ್ತುರ್ಮನಸಾಹ ಬಿಭ್ಯುಷಾ ॥ ೨ ॥

|| ಪದಪಾಠಃ ||

ಸಃ । ಪೂರ್ವ್ಯಃ । ಪವತೇ । ಯಂ । ದಿವಃ । ಪರಿ । ಶ್ಯೇನಃ । ಮಥಾಯತ್ । ಇಷಿತಃ । ತಿರಃ । ರಜಃ ।
ಸಃ । ಮಧ್ವಃ । ಆ । ಯುವತೇ । ವೇವಿಜಾನಃ । ಇತ್ । ಕೃಶಾನೋಃ । ಅಸ್ತುಃ । ಮನಸಾ । ಅಹ । ಬಿಭ್ಯುಷಾ ॥ ೨ ॥

|| ಸಾಯಣಭಾಷ್ಯಂ ||

ಸ ಸೋಮಃ ಪೂರ್ವ್ಯಃ ಪ್ರತ್ನಃ ಪವತೇ । ಪೂಯತೇ । ಅಭಿಷೂಯತ ಇತ್ಯರ್ಥಃ । ಯಂ ಸೋಮಂ ದಿವೋ ದ್ಯುಲೋಕಾಚ್ಛ್ಯೇನ ಇಷಿತಃ ಸ್ವಮಾತ್ರಾ ಪ್ರೇಷಿತಃ ಸನ್ ಪರಿ ಮಥಾಯತ್ ಪರ್ಯಮಥ್ನಾತ್ ತಿರಸ್ತಿರಃ ತಿರಸ್ಕುರ್ವನ್ । ಕಿಂ । ರಜಸ್ತೃತೀಯಂ ಲೋಕಂ । ಸ ಏವ ಸೋಮೋ

ಮಧ್ವೋ ಮಧುರರಸಂ ಸೋಮಮಾ ಯುವತೇ । ಯೌತಿ । ಪೃಥಕ್ಕರೋತಿ ದ್ಯುಲೋಕಾತ್ । ಸ್ವಯಂ ವೇವಿಜಾನ ಇಚ್ಚಲನ್ನಧೋ ಗಚ್ಛನ್ ಕೃಶಾನೋಃ ಸೋಮಪಾಲಸ್ಯಾಸ್ತುಃ ಶರಕ್ಷೇಪ್ತುಃ ಸಕಾಶಾದ್ಬಿಭ್ಯುಷಾ ಭೀತೇನ ಮನಸಾಹ । ಮಧ್ವ ಆ ಯುವತ ಇತಿ ಸಂಬಂಧಃ । ಕೃಶಾನೋಃ ಸೋಮಪಾಲತ್ವಂ ಬ್ರಾಹ್ಮಣೇ ಸ್ಪಷ್ಟಮುಕ್ತಂ । ಕೃಶಾನುಃ ಸೋಮಪಾಲಃ ಸವ್ಯಸ್ಯ ಪದಃ । ಐ. ಬ್ರಾ- ೩–೨೬ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಸೋಮನನ್ನು । **ದಿವಃ**—ದ್ಯುಲೋಕದಿಂದ । **ಶ್ಯೇನಃ**—ಶ್ಯೇನಪಕ್ಷಿಯು । **ಇಷಿತಃ**—ತನ್ನ ಮಾತ್ಮವಿನಿಂದ ಪ್ರೇರಿತವಾಗಿ । **ರಜಃ**—ಮೂರನೆಯ ಲೋಕವನ್ನು । **ತಿರಃ**—ದಾಟಿ । **ಪರಿಮುಥಾಯತ್**—ಈ ಲೋಕಕ್ಕೆ ತಂದಿತೋ । **ಪೂರ್ವ್ಯಃ ಸಃ**—ಪುರಾತನನಾದ ಅದೇ ಸೋಮವು । **ಪವತೇ**—ಹರಿಯುತ್ತದೆ । **ಸಃ**—ಅದೇ ಸೋಮವು । **ವೇವಿಜಾನ ಇತ್**—ನಡುಗುತ್ತ । **ಕೃಶಾನೋಃ**—ಸೋಮಪಾಲಕವಾದ ಕೃಶಾನುವಿನ । **ಅಸ್ತುಃ**—ಬಾಣಕ್ಕೆ । **ಬಿಭ್ಯುಷಾ**—ಬೆದರಿದ । **ಮನಸಾಹ**—ಮನಸ್ಸಿನೊಡಗೂಡಿ । **ಮಧ್ವಃ**—ಮಧುರರಸವನ್ನು । **ಆಯುವತೇ**—ದ್ಯುಲೋಕದಿಂದ ಬೇರೆಮಾಡಿ ತರುತ್ತದೆ.

॥ ಭಾವಾರ್ಥ ॥

ತನ್ನ ಮಾತ್ಮವಿನಿಂದ ಪ್ರೇರಿತವಾಗಿ ಶ್ಯೇನಪಕ್ಷಿಯು ಯಾವ ಸೋಮನನ್ನು ದ್ಯುಲೋಕದಿಂದ ಈ ಲೋಕಕ್ಕೆ ತಂದಿತೋ, ಪುರಾತನವಾದ ಅದೇ ಸೋಮವು ಹರಿಯುತ್ತದೆ. ಅದೇ ಸೋಮವು ಸೋಮಪಾಲಕನಾದ ಕೃಶಾನುವಿನ ಬಾಣಕ್ಕೆ ಬೆದರಿದ ಮನಸ್ಸಿನಿಂದ ನಡುಗುತ್ತಲೇ, ದ್ಯುಲೋಕದಿಂದ ಮಧುರರಸವನ್ನು ಬೇರೆ ಮಾಡಿ ಈ ಲೋಕದಲ್ಲಿ ತರುತ್ತದೆ.

## English Translation.

That ancient (Soma) flows, which the hawk, despatched (for the purpose), brought down from heaven passing through tke (third) world; he detaches the sweet-flavoured (Soma) flying downwards, with mind full of fear of the archer Krishanu.

॥ ಸಂಹಿತಾಪಾಠಃ ॥

ತೇ ನಃ ಪೂರ್ವಾಸ ಉಪರಾಸ ಇಂದವೋ ಮಹೇ ವಾಜಾಯ ಧನ್ವಂತು ಗೋಮತೇ ।

ಈಕ್ಷೇಣ್ಯಾಸೋ ಅಹ್ಯೋ೩ನ ಚಾರವೋ ಬ್ರಹ್ಮಬ್ರಹ್ಮ ಯೇ ಜುಜುಷುರ್ಹವಿರ್ಹವಿಃ ॥ ೩ ॥

॥ ಪದಪಾಠಃ ॥

ತೇ । ನಃ । ಪೂರ್ವಾಸಃ । ಉಪರಾಸಃ । ಇಂದವಃ । ಮಹೇ । ವಾಜಾಯ । ಧನ್ವಂತು । ಗೋಽಮತೇ ।
ಈಕ್ಷೇಣ್ಯಾಸಃ । ಅಹ್ಯಃ । ನ । ಚಾರವಃ । ಬ್ರಹ್ಮಽಬ್ರಹ್ಮ । ಯೇ । ಜುಜುಷುಃ । ಹವಿಃಽಹವಿಃ ॥ ೩ ॥

॥ ಸಾಯಣಭಾಷ್ಯಂ ॥

ತೇ ವಕ್ಷ್ಯಮಾಣಾಃ ಪೂರ್ವಾಸಃ ಪೂರ್ವ ಉಪರಾಸಃ । ಉಪರತಾ ಅತ್ರೇತ್ಯುಪರಾಃ । ತಾದೃಶಾ ಇಂದವಃ ಸೋಮಾ ಮಹೇ ಮಹತೇ ಗೋಮತೇ ನೋ ಮಹ್ಯಂ ವಾಜಾಯಾನ್ನಾಯಾನ್ನಲಾಭಾರ್ಥಂ ಧನ್ವಂತು । ಗಚ್ಛಂತು । ಪ್ರಾಪ್ನುವಂತು । ಕೀದೃಶಾ ಇಂದವಃ । ಈಕ್ಷೇಣ್ಯಾಸ ಈಕ್ಷಣೀಯಾಃ ಸಂದರ್ಶನೀಯಾ ಅಹ್ಯೋ ನ । ಅಹ್ಯಃ ಸ್ತ್ರಿಯ ಆಹನನಾತ್ । ತಾ ಇವ ಸುವೇಷಾಃ ಸ್ತ್ರಿಯ ಇವ ಚಾರವೋ ರಮಣೀಯಾಃ । ತೆ ಇತ್ಯುಕ್ತಂ ಕ ಇತ್ಯಾಹ । ಯ ಇಂದವೋ ಬ್ರಹ್ಮ ಬ್ರಹ್ಮ ಸರ್ವಮಪಿ ಸ್ತಾವಕಮಂತ್ರಜಾತಂ ಹವಿರ್ಹವಿಃ ಸರ್ವಮಪಿ ಹವಿರ್ಜಾತಂ ಚ ಜುಜುಷುಃ ಸೇವಂತೇ ॥

॥ ಪ್ರತಿಪದಾರ್ಥ ॥

**ಯೇ**—ಯಾವ ಸೋಮರಸಗಳು । **ಬ್ರಹ್ಮಬ್ರಹ್ಮ**—ಪ್ರತಿಯೊಂದು ಸ್ತುತಿಯನ್ನೂ । **ಹವಿರ್ಹವಿಃ**—ಸಕಲ ಹವಿಸ್ಸನ್ನೂ । **ಜುಜುಷುಃ**—ಸೇವಿಸುವುವೋ । **ತೇ**—ಅಂತಹ । **ಪೂರ್ವಾಸಃ**—ಹಿಂದಿನವೂ । **ಉಪರಾಸಃ**—ಈ ಕಾಲಕ್ಕೆ ಸಂಬಂಧಿಸಿದವೂ ಆದ । **ಇಂದವಃ**—ಸೋಮರಸಗಳು । **ಚಾರವಃ**—ಆಕರ್ಷಕವಾದ ರೂಪವುಳ್ಳ । **ಅಹ್ಯೋ ನ**—ಸ್ತ್ರೀಯರಂತೆ । **ಈಕ್ಷೇಣ್ಯಾಸಃ**—ಸುಂದರವಾದ ರೂಪವುಳ್ಳವಾಗಿ । **ನಃ**—ನಮಗೆ । **ಮಹೇ**—ಮಹತ್ತಾದುದೂ । **ಗೋಮತೇ**—ಗೋಯುಕ್ತವಾದುದೂ ಆದ । **ವಾಜಾಯ**—ಅನ್ನ ಲಾಭಕ್ಕಾಗಿ । **ಧನ್ವಂತು**—ನನ್ನನ್ನು ಬಂದು ಸೇರಲಿ.

॥ ಭಾವಾರ್ಥ ॥

ಸಕಲ ಸ್ತುತಿಯನ್ನೂ ಸಕಲ ಹವಿಸ್ಸನ್ನೂ ಸೇವಿಸುವ ಸಕಲ ಸೋಮರಸಗಳೂ ಸಹ ಆಕರ್ಷಕವಾದ ರೂಪವುಳ್ಳ ಸ್ತ್ರೀಯರಂತೆ ಸುಂದರವಾದ ರೂಪವುಳ್ಳವರಾಗಿ ನಮಗೆ ಮಹತ್ತಾದುದೂ ಗೋಯುಕ್ತವಾದುದೂ ಆದ ಅನ್ನ ಲಾಭಕ್ಕಾಗಿ ನಮ್ಮನ್ನು ಬಂದು ಸೇರಲಿ.

## English Translaton

May the former and the later Soma-jnices flow to give us abundant food and milk, pleasing to look upon like beautiful well-adorned (women), which (juices) perform every prayer and every oblation.

|| ಸಂಹಿತಾಪಾಠಃ ||

ಅಯಂ ನೋ ವಿದ್ವಾನ್ವನವದ್ವನುಷ್ಯತ ಇಂದುಃ ಸತ್ರಾಚಾ ಮನಸಾ ಪುರು-ಷ್ಟುತಃ |

ಇನಸ್ಯ ಯಃ ಸದನೇ ಗರ್ಭಮಾದಧೇ ಗವಾಮುರುಬ್ಜಮಭ್ಯರ್ಷತಿ ವ್ರಜಂ ||

|| ಪದಪಾಠಃ ||

ಅಯಂ | ನಃ | ವಿದ್ವಾನ್ | ವನವತ್ | ವನುಷ್ಯತಃ | ಇಂದುಃ | ಸತ್ರಾಚಾ | ಮನಸಾ | ಪುರುऽಸ್ತುತಃ |

ಇನಸ್ಯ | ಯಃ | ಸದನೇ | ಗರ್ಭಂ | ಆऽದಧೇ | ಗವಾಂ | ಉರುಬ್ಜಂ | ಅಭಿ | ಅರ್ಷತಿ | ವ್ರಜಂ || ೪ ||

|| ಸಾಯಣಭಾಷ್ಯಂ ||

ಅಯಮಿಂದುಃ ಸೋಮೋ ನೋಽಸ್ಮಾನ್ವನುಷ್ಯತೋ ಹಂತುಮಿಚ್ಛತಃ ಶತ್ರೂನ್ ವಿದ್ವಾಞ್ಜಾ-ನನ್ಹಂತುಂ ವನವತ್ | ಹಂತು ತಾನ್ | ಕೇನ ಸಾಧನೇನ | ಸತ್ರಾಚಾ ಸಹಾಂಚತಾ ಮನಸಾ | ಕೀದೃಶಃ | ಪುರುಷ್ಟುತೋ ಬಹುಭಿಃ ಸ್ತುತಃ | ಯಃ ಸೋಮ ಇನಸ್ಯೇಶ್ವರಸ್ಯಾಗ್ನೇಃ ಸದನೇ ಸ್ಥಾನೇ ಭೂಮೌ ವೇದ್ಯಾಂ ವಾ ವರ್ತಮಾನೋ ಗರ್ಭಮಾದಧೇ ಧಾರಯತ್ಯೌಷಧೀಷು | ಯಶ್ಚ ಗವಾಮಸ್ಮದೀ-ಯಾನಾಂ ಶತ್ರುಭಿರಪಹೃತಾನಾಮುರುಬ್ಜಂ ಪ್ರಭೂತಾನಾಮಪಾಂ ಪಯಸಾಂ ಜನಕಂ ವ್ರಜಮಭ್ಯರ್ಷತಿ ಗಚ್ಛತಿ | ಸ ವನವದಿತಿ ||

|| ಪ್ರತಿಪದಾರ್ಥ ||

**ಯಃ**—ಯಾವ ಸೋಮವು | **ಇನಸ್ಯ**—ಪ್ರಭುವಾದ ಅಗ್ನಿಯ | **ಸದನೇ**—ಸ್ಥಾನದಲ್ಲಿದ್ದು | **ಗರ್ಭಂ**—ಓಷಧ್ಯಾದಿಗಳಲ್ಲಿ ಗರ್ಭವನ್ನು | **ಆದಧೇ**—ಸ್ಥಾಪಿಸಿದನೋ | (**ಯಶ್ಚ**—ಯಾರು) | **ಗವಾಂ**—ಗೋವುಗಳ | **ಉರುಬ್ಜಂ**—ಪ್ರಭೂತರಾಗಿ ಕ್ಷೀರವನ್ನು ಕೊಡುವ | **ವ್ರಜಂ**—ಕೊಟ್ಟಿಗೆಗೆ | **ಅಭ್ಯರ್ಷತಿ**—ಹೋಗುವನೋ ಅಂತಹ | **ಪುರುಷ್ಟುತಃ**—ಅನೇಕರಿಂದ ಪ್ರಶಂಸಿತನಾದ | **ಅಯಂ ಇಂದುಃ**—ಈ ಸೋಮ ದೇವನು | **ನಃ**—ನಮ್ಮನ್ನು | **ವನುಷ್ಯತಃ**—ಹಿಂಸಿಸುವ ಶತ್ರುಗಳನ್ನು | **ವಿದ್ವಾನ್**—ಅರಿತವನಾಗಿ | **ಸತ್ರಾಚಾ**—ಒಂದುಗೂಡಿದ | **ಮನಸಾ**—ಮನಸ್ಸಿನಿಂದ | **ವನವತ್**—ನಾಶಮಾಡಲಿ.

|| ಭಾವಾರ್ಥ ||

ಯಾವ ಸೋಮನು ಪ್ರಭುವಾದ ಅಗ್ನಿಯ ಸ್ಥಾನದಲ್ಲಿದ್ದು ಓಷಧ್ಯಾದಿಗಳಲ್ಲಿ ಗರ್ಭವನ್ನು ಸ್ಥಾಪಿಸಿದನೋ, ಯಾರು ಪ್ರಭೂತವಾಗಿ ಕ್ಷೀರವನ್ನು ಕೊಡುವ ಗೋವುಗಳ ಕೊಟ್ಟಿಗೆಗೆ ಹೋಗುವನೋ ಅಂತಹ ಅನೇಕರಿಂದ ಪ್ರಶಂಸಿತನಾದ ಈ ಸೋಮದೇವನು ನಮ್ಮನ್ನು ಹಿಂಸಿಸುವ ಶತ್ರುಗಳನ್ನು ಅರಿತವನಾಗಿ ಅವರನ್ನೆಲ್ಲ ಒಟ್ಟಿಗೆ ಒಂದುಗೂಡಿದ ಮನಸ್ಸಿನಿಂದ ನಾಶಮಾಡಲಿ.

## English Translation.

May this Indu, praised of many, knowing those who desire to slay us, slay them with united mind; who being in the dwelling of the lord (Agni) deposits a germ (in the herds) and hastens to (our) milk-giving herd of cattle.

॥ ಸಂಹಿತಾಪಾಠಃ ॥

ಚಕ್ರಿರ್ದಿವಃ ಪವತೇ ಕೃತ್ವ್ಯೋ ರಸೋ ಮಹಾँ ಅದಬ್ಧೋ ವರುಣೋ
ಹುರುಗ್ಯತೇ ।
ಅಸಾವಿ ಮಿತ್ರೋ ವೃಜನೇಷು ಯಜ್ಞಿಯೋಽತ್ಯೋ ನ ಯೂಥೇ ವೃಷಯುಃ
ಕನಿಕ್ರದತ್ ॥ ೫ ॥

॥ ಪದಪಾಠಃ ॥

ಚಕ್ರಿಃ । ದಿವಃ । ಪವತೇ । ಕೃತ್ವ್ಯಃ । ರಸಃ । ಮಹಾನ್ । ಅದಬ್ಧಃ । ವರುಣಃ । ಹುರುಕ್ । ಯತೇ ।
ಅಸಾವಿ । ಮಿತ್ರಃ । ವೃಜನೇಷು । ಯಜ್ಞಿಯಃ । ಅತ್ಯಃ । ನ । ಯೂಥೇ । ವೃಷಯುಃ । ಕನಿಕ್ರದತ್ ॥

॥ ಸಾಯಣಭಾಷ್ಯಂ ॥

ಚಕ್ರಿಃ ಸರ್ವಸ್ಯ ಕರ್ತಾ ಕೃತ್ವ್ಯಃ ಕರ್ಮಣ್ಯೋ ರಸೋ ರಸಾತ್ಮಕೋ ಮಹಾನ್ ಗುಣೈರಧಿಕೋಽದಬ್ಧೋಽಹಿಂಸ್ಯೋ ಹುರುಕ್ ಕುಟಿಲಂ ಯತೇ ಗಚ್ಛತೇ । ಇತಸ್ತತಃ ಪರಿಚರತ ಇತ್ಯರ್ಥಃ । ತದರ್ಥಂ ದಿವಃ ಸಕಾಶಾತ್ಪವತೇ । ಪೂಯತೇ । ಅಂತರಿಕ್ಷಸ್ಥಾದ್ದಶಾಪವಿತ್ರಾದಿತ್ಯರ್ಥಃ । ಕಿಂಚಾಸೌ ಸೋಮೋಽಸಾವಿ । ಸೂಯತೇ । ಕದಾ । ವೃಜಿನೇಷ್ವರಿಷ್ಟೇಷು ಸತ್ಸು । ತತ್ಪರಿಹಾರಾರ್ಥಂ । ಕೀದೃಶಃ ಸಃ । ಮಿತ್ರಃ ಸರ್ವೇಷಾಂ ಮಿತ್ರಭೂತೋ ಯಜ್ಞಿಯೋ ಯಷ್ಟವ್ಯೋಽತ್ಯೋ ನಾಶ್ವ ಇವ ಯೂಥೇ ವಡವಾಯೂಥೇ ಸ ಯಥಾ ವೃಷಯುಃ ಸಶ್ಶಬ್ದಂ ಕರೋತಿ ತದ್ವದಸೌ ವೃಷಭೋ ರಸಸ್ಯ ವರ್ಷಿತಾ ಕನಿಕ್ರದಚ್ಛಬ್ದಂ ಕುರ್ವನ್ ಅಸಾವೀತಿ ॥

॥ ಪ್ರತಿಪದಾರ್ಥ ॥

ಚಕ್ರಿಃ—ಸಕಲವನ್ನು ನಿರ್ಮಿಸುವವನೂ । ಕೃತ್ವ್ಯಃ—ಕರ್ಮಕುಶಲನೂ । ರಸಃ—ರಸಾತ್ಮಕನೂ । ಮಹಾನ್—ಅಧಿಕವಾದ ಗುಣವುಳ್ಳವನೂ । ಅದಬ್ಧಃ—ಅಹಿಂಸಿತನೂ ಆದ ಸೋಮನು । ಹುರುಕ್—ಸಂಭ್ರಮದಿಂದ ಎಲ್ಲಾ ಕಡೆಗೂ । ಚರತೇ—ಸಂಚರಿಸುವ (ಎಂದರೆ ಆದರದಿಂದ ಉಪಚರಿಸುವ ಯಜಮಾನನಿಗಾಗಿ) । ದಿವಃ—ದ್ಯುಲೋಕದಿಂದ । ಪವತೇ—ಹರಿದುಬರುತ್ತಾನೆ । ವೃಜನೇಷು—ಅನಿಷ್ಟಪರಿಹಾರಾರ್ಥವಾಗಿ ।

**ಅಸಾವಿ**—ಹಿಂಡಲ್ಪಡುತ್ತಾನೆ । **ಮಿತ್ರಃ**—ಸಕಲರಿಗೂ ಮಿತ್ರಭೂತನೂ । **ಯಜ್ಞಿಯಃ**—ಪೂಜಾರ್ಹನೂ । **ವೃಷಯುಃ**—ಕಾಮವರ್ಷಕನೂ ಆದ ಸೋಮನು । **ಯೂಥೇ**—ಅಶ್ವಗಳ ಗುಂಪಿನಲ್ಲಿ । **ಅತ್ಯಃ ನ**—ಪುರುಷಾಶ್ವದಂತೆ । **ಕನಿಕ್ರದತ್**—ಶಬ್ದಮಾಡುತ್ತಾನೆ.

॥ ಭಾವಾರ್ಥ ॥

ಸಕಲವನ್ನೂ ನಿರ್ಮಿಸುವವನೂ, ಕರ್ಮಕುಶಲನೂ, ರಸಾತ್ಮಕನೂ, ಅಧಿಕವಾದ ಗುಣವುಳ್ಳವನೂ, ಅಹಿಂಸಿತನೂ ಆದ ಸೋಮದೇವನು ಸಂಭ್ರಮದಿಂದ ಓಡಾಡಿ ಉಪಚರಿಸುವ ಯಜಮಾನನಿಗಾಗಿ ದ್ಯುಲೋಕದಿಂದ ಹರಿದುಬರುತ್ತಾನೆ. ಅನಿಷ್ಟಪರಿಹಾರಾರ್ಥವಾಗಿ ಹಿಂಡಲ್ಪಡುತ್ತಾನೆ. ಸಕಲರಿಗೂ ಮಿತ್ರಭೂತನೂ, ಪೂಜಾರ್ಹನೂ, ಕಾಮವರ್ಷಕನೂ ಆದ ಸೋಮನು ಅಶ್ವಗಳ ಗುಂಪಿನಲ್ಲಿ ಪುರುಷಾಶ್ವದಂತೆ ಶಬ್ದಮಾಡುತ್ತಾನೆ.

English Translation.

The maker of all, clever in work, rhe juice, mighty unassailable Varuna flows from heaven for the sake of him who goes hither and thither; the friend of all the adorable (Soma) is effused in affliction uttering a sound like an ardent horse amidst a herd (of mares).

## ಎಪ್ಪತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರ ರಾಜಾ ವಾಚಮಿತಿ ಪಂಚರ್ಚಮೇಕಾದಶಂ ಸೂಕ್ತಂ ॥ ಋಷ್ಯಾದ್ಯಾಃ ಪೂರ್ವವತ್ । ಪ್ರ ರಾಜೇತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥**

ಅನುವಾದವು—**ಪ್ರ ರಾಜಾ ವಾಚಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೂ ಹಿಂದಿನ ಸೂಕ್ತದಂತೆಯೇ ಋಷಿದೇವತಾಛಂದಸ್ಸುಗಳು. ಅನುಕ್ರಮಣಿಕೆಯಲ್ಲಿ—**ಪ್ರ ರಾಜಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ ೭೮

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೭೮ ॥

ಅಷ್ಟಕ—೭ ॥ ಅಧ್ಯಾಯ—೩ ॥ ವರ್ಗ—೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಕವಿಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಜಗತೀ ॥

|| ಸಂಹಿತಾಪಾಠಃ ||

ಪ್ರ ರಾಜಾ ವಾಚಂ ಜನಯನ್ನಸಿಷ್ಯದದಪೋ ವಸಾನೋ ಅಭಿ ಗಾ ಇಯಕ್ಷತಿ ।
ಗೃಭ್ಣಾತಿ ರಿಪ್ರಮವಿರಸ್ಯ ತಾನ್ವಾ ಶುದ್ಧೋ ದೇವಾನಾಮುಪ ಯಾತಿ ನಿಷ್ಕೃತಂ ॥ ೧ ॥

|| ಪದಪಾಠಃ ||

ಪ್ರ । ರಾಜಾ । ವಾಚಂ । ಜನಯನ್ । ಅಸಿಸ್ಯದತ್ । ಅಪಃ । ವಸಾನಃ । ಅಭಿ । ಗಾಃ । ಇಯಕ್ಷತಿ ।
ಗೃಭ್ಣಾತಿ । ರಿಪ್ರಂ । ಅವಿಃ । ಅಸ್ಯ । ತಾನ್ವಾ । ಶುದ್ಧಃ । ದೇವಾನಾಂ । ಉಪ । ಯಾತಿ । ನಿಃऽಕೃತಂ ॥ ೧ ॥

|| ಸಾಯಣಭಾಷ್ಯಂ ||

ರಾಜಾ ರಾಜಮಾನೋಽಯಂ ಸೋಮೋಽಭಿಷೂಯಮಾಣಃ ಸನ್ ವಾಚಂ ಶಬ್ದಂ ಜನಯನ್ನುತ್ಪಾದಯನ್ನಸಿಷ್ಯದತ್ । ಪ್ರಸ್ಯಂದತೇ । ತಥಾಪೋ ವಸತೀವರೀರ್ವಸಾನ ಆಚ್ಛಾದಯನ್ ಗಾಃ ಸ್ತುತೀರಭೀಯಕ್ಷತಿ । ಅಭಿಗಚ್ಛತಿ । ಇಯಕ್ಷತಿರ್ಗತಿಕರ್ಮಸು ಪಠಿತಃ । ಅಸ್ಯ ಸೋಮಸ್ಯ ರಿಪ್ರಮನುಪಾದೇಯತ್ವೇನ ಪಾಪರೂಪಮಭಿಷುತವಲ್ಲೀಶಕಲಾದಿರೂಪಮವಿರವಿರೋಮನಿರ್ಮಿತಂ ದಶಾಪವಿತ್ರಂ ತಾನ್ವಾ ಸ್ವೀಯೇನ ವಸ್ತ್ರೇಣ ಗೃಭ್ಣಾತಿ । ಗೃಹ್ಣಾತಿ ಶೋಧನಸಮಯೇ । ಪಶ್ಚಾಚ್ಛುದ್ಧೋ ದೇವಾನಾಂ ನಿಷ್ಕೃತಂ ಸಂಸ್ಕೃತಂ ಸ್ಥಾನಮುಪ ಯಾತಿ । ಉಪಗಚ್ಛತಿ ॥

|| ಪ್ರತಿಪದಾರ್ಥ ||

**ರಾಜಾ**—ಪ್ರಭುವಾದ ಸೋಮನು । **ವಾಚಂ**—ಶಬ್ದವನ್ನು । **ಜನಯನ್**—ಉತ್ಪನ್ನಮಾಡುತ್ತ । **ಪ್ರ ಅಸಿಸ್ಯದತ್**—ಹರಿಯುತ್ತಾನೆ । **ಅಪಃ**—ವಸತೀವರೀಸಂಜ್ಞಕವಾದ ಉದಕಗಳನ್ನು । **ವಸಾನಃ**—ಹೊದ್ದಿಸಿಕೊಂಡು । **ಗಾಃ ಅಭಿ**—ಸ್ತುತಿಗಳಿಗಭಿಮುಖನಾಗಿ । **ಇಯಕ್ಷತಿ**—ಹೋಗುತ್ತಾನೆ । **ಅಸ್ಯ**—ಈ ಸೋಮದ । **ರಿಪ್ರಂ**—ಕಲ್ಮಶಗಳನ್ನು । **ಅವಿಃ**—ದಶಾಪವಿತ್ರವು । **ತಾನ್ವಾ**—ತನ್ನ ವಸ್ತ್ರದಿಂದ । **ಗೃಭ್ಣಾತಿ**—ತಡೆದು ಹಿಡಿದುಕೊಳ್ಳುತ್ತದೆ । **ಶುದ್ಧಃ**—ಪರಿಶುದ್ಧನಾದ ಸೋಮನು । **ದೇವಾನಾಂ**—ದೇವತೆಗಳ । **ನಿಷ್ಕೃತಂ**—ಸುಸಂಸ್ಕೃತವಾದ ಸ್ಥಾನವನ್ನು । **ಉಪ ಯಾತಿ**—ಹೋಗಿ ಸೇರುತ್ತಾನೆ.

|| ಭಾವಾರ್ಥ ||

ಪ್ರಭುವಾದ ಸೋಮನು ಶಬ್ದವನ್ನು ಉತ್ಪನ್ನಮಾಡುತ್ತ ಹರಿಯುತ್ತಾನೆ. ವಸತೀವರೀಸಂಜ್ಞಕವಾದ ಉದಕಗಳನ್ನು ಹೊದ್ದಿಸಿಕೊಂಡು ಸ್ತುತಿಗಳಿಗಭಿಮುಖನಾಗಿ ಹೋಗುತ್ತಾನೆ. ಈ ಸೋಮನ ಕಲ್ಮಷಗಳನ್ನು ದಶಾ

ಪವಿತ್ರವು ತನ್ನ ವಸ್ತ್ರದಿಂದ ತಡೆದು ಹಿಡಿದುಕೊಳ್ಳುತ್ತದೆ. ಪರಿಶುದ್ಧನಾದ ಸೋಮನು ದೇವತೆಗಳ ಸುಸಂಸ್ಕೃತವಾದ ಸ್ಥಾನವನ್ನು ಹೋಗಿ ಸೇರುತ್ತಾನೆ.

## English Translation.

This royal (Soma) producing a sound flows forth; clothing himself with the water he advances towards the praiees (of the worshipper); the sheep with its fleece lays hold of the impure form : purtfied he approaches the station of the gods.

॥ ಸಂಹಿತಾಪಾಠಃ ॥

ಇಂದ್ರಾಯ ಸೋಮ ಪರಿ ಷಿಚ್ಯಸೇ ನೃಭಿರ್ನೃಚಕ್ಷಾ ಊರ್ಮಿಃ ಕವಿರಜ್ಯಸೇ
ವನೇ ।
ಪೂರ್ವೀರ್ಹಿ ತೇ ಸ್ರುತಯಃ ಸಂತಿ ಯಾತವೇ ಸಹಸ್ರಮಶ್ವಾ ಹರಯಶ್ಚ-
ಮೂಷದಃ ॥ ೧ ॥

॥ ಪದಪಾಠಃ ॥

ಇಂದ್ರಾಯ । ಸೋಮ । ಪರಿ । ಸಿಚ್ಯಸೇ । ನೃಽಭಿಃ । ನೃಽಚಕ್ಷಾಃ । ಊರ್ಮಿಃ । ಕವಿಃ । ಅಜ್ಯಸೇ ।
ವನೇ ।
ಪೂರ್ವೀಃ । ಹಿ । ತೇ । ಸ್ರುತಯಃ । ಸಂತಿ । ಯಾತವೇ । ಸಹಸ್ರಂ । ಅಶ್ವಾಃ । ಹರಯಃ । ಚಮೂಽ-
ಸದಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ತ್ವಮಿಂದ್ರಾಯೇಂದ್ರಾರ್ಥಂ ನೃಭಿರ್ನೇತೃಭಿರ್ಋತ್ವಿಗ್ಭಿಃ ಪರಿ ಷಿಚ್ಯಸೇ । ಅಭಿಷೂಯಸೇ । ತಥಾ ಹೇ ಸೋಮ ನೃಚಕ್ಷಾ ನೃಣಾಂ ಯಷ್ಟೄಣಾಮನುಗ್ರಹೇಣ ದ್ರಷ್ಟೋರ್ಮಿಃ ಪ್ರೇರ್ಯಮಾಣಃ ಪ್ರವೃದ್ಧೋ ವಾ ಕವಿರ್ಮೇಧಾವೀ ಚ ತ್ವಂ ವನ ಉದಕೇಽಜ್ಯಸೇ । ಪ್ರೇರ್ಯಸೇ । ಪೂರ್ವೀರ್ಬಹ್ವ್ಯೋ ಹಿ ತೇ ಸ್ರುತಯೋ ಮಾರ್ಗಾಶ್ಛಿದ್ರಾಣಿ ಸಂತಿ ಯಾತವೇ ಯಾತುಂ । ಅಲ್ಪಸ್ಯ ಸೋಮಸ್ಯಾಪರಿಮಿತಸ್ರುತಿಗಮನಾಸಂಭವಾತ್ತಸ್ಯ ಬಾಹುಲ್ಯಮಾಹ । ಚಮೂಷದೋಽಭಿಷವಣಫಲಕಯೋಃ ಸೀದತಃ ಸಹಸ್ರಮಪರಿಮಿತಾ ಅಶ್ವಾ ವ್ಯಾಪ್ತಾ ಹರಯೋ ಹರಿತವರ್ಣಾ ಅಂಶವಃ ಸಂತಿ । ಅಥವಾ । ಇಂದ್ರಾಯ ಪರಿಷಿಚ್ಯಸ ಇತ್ಯುಕ್ತತ್ವಾದಿಂದ್ರಪ್ರಾಪ್ತೌ ಮಾರ್ಗಸಾಧನಯೋಃ ಸದ್ಭಾವ ಉತ್ತರಾರ್ಧೇನ ಪ್ರತಿಪಾದಿತಃ ।

ತೇ‌ [ಪುರಾತನ್ಯಃ ಸರಣ್ಯಃ ಸಂತೀಂದ್ರಂ ಪ್ರತಿ ಯಾತುಂ । ತಥಾ ಸಹಸ್ರಸಂಖ್ಯಾಕಾ ಹರಿತವರ್ಣಾ ಅಶ್ವಾಶ್ಚ ಸಂತಿ ಚಮೂಷದಸ್ತ್ವನೇತಿ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ । ಇಂದ್ರಾಯ—ಇಂದ್ರನನ್ನುದ್ದೇಶಿಸಿ / ನೃಭಿಃ—ಋತ್ವಿಕ್ಕು ಗಳಿಂದ । ಪರಿ ಷಿಚ್ಯಸೇ—ನೀನು ಹಿಂಡಲ್ಪಡುತ್ತೀಯೆ । ನೃಚಕ್ಷಾಃ—ಮಾನವರ ವ್ಯವಹಾರಗಳನ್ನು ನೋಡ ತಕ್ಕವನೂ । ಕವಿಃ—ಮೇಧಾವಿಯೂ ಆದ ನೀನು । ಊರ್ಮಿಃ—ಅಲೆಗಳ ರೂಪದಲ್ಲಿ ಪುಷ್ಟನಾಗಿ । ವನೇ—ಉದಕದಲ್ಲಿ । ಅಜ್ಯಸೇ—ಸೇರಿಕೊಳ್ಳುತ್ತೀಯೆ । ತೇ—ನಿನಗೆ । ಯಾತವೇ—ಸಂಚರಿಸಲು । ಸ್ರುತಯಃ—ಪ್ರವಾಹಮಾರ್ಗಗಳು । ಪೂರ್ವೀಃ ಸಂತಿ—ಬಹಳವಾಗಿವೆ । ಚಮೂಷದಃ—ಹಿಂಡುವ ಹಲಗೆಗಳ ಮೇಲೆ ಇರುವ ಸೋಮಗಳು । ಸಹಸ್ರಂ—ಅಪರಿಮಿತವಾಗಿಯೂ । ಅಶ್ವಾಃ—ವ್ಯಾಪಕಗಳಾಗಿಯೂ । ಹರಯಃ—ಪಚ್ಚೆವರ್ಣವುಳ್ಳವಾಗಿಯೂ ಇವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಇಂದ್ರನನ್ನುದ್ದೇಶಿಸಿ ನೀನು ಋತ್ವಿಕ್ಕುಗಳಿಂದ ಹಿಂಡಲ್ಪಡುತ್ತೀಯೆ. ಮಾನವರ ವ್ಯವಹಾರಗಳನ್ನು ನೋಡತಕ್ಕವನೂ ಮೇಧಾವಿಯೂ ಆದ ನೀನು ಅಲೆಗಳ ರೂಪದಲ್ಲಿ ಪುಷ್ಟನಾಗಿ ಉದಕದಲ್ಲಿ ಸೇರಿಕೊಳ್ಳುತ್ತೀಯೆ. ನಿನಗೆ ಸಂಚರಿಸಲು ಪ್ರವಾಹಮಾರ್ಗಗಳು ಹೇರಳವಾಗಿವೆ. ಹಿಂಡುವ ಹಲಗೆಗಳ ಮೇಲಿರುವ ಸೋಮರಸಗಳು ಅಪರಿಮಿತವಾಗಿಯೂ ವ್ಯಾಪಕಗಳಾಗಿಯೂ ಮತ್ತು ಪಚ್ಚೆವರ್ಣವುಳ್ಳವಾಗಿಯೂ ಇವೆ.

English Translation

You are effused by the priests, Soma, for Indra ; you the observer of men, stimulated, intelligent, are immersed in the water ; many are the paths for you to follow, infinite are the spreading green-tinted streams alighting on the cups.

॥ ಸಂಹಿತಾಪಾಠಃ ॥

ಸಮುದ್ರಿಯಾ ಅಪ್ಸರಸೋ ಮನೀಷಿಣಮಾಸೀನಾ ಅಂತರಭಿ ಸೋಮಮಕ್ಷ-
ರನ್ ।
ತಾ ಈಂ ಹಿನ್ವಂತಿ ಹರ್ಮ್ಯಸ್ಯ ಸಕ್ಷಣಿಂ ಯಾಚಂತೇ ಸುಮ್ನಂ ಪವಮಾನ-
ಮಕ್ಷಿತಂ ॥ ೩ ॥

॥ ಪದಪಾಠಃ ॥

ಸಮುದ್ರಿಯಾಃ । ಅಪ್ಸರಸಃ । ಮನೀಷಿಣಂ । ಆಸೀನಾಃ । ಅಂತಃ । ಅಭಿ । ಸೋಮಂ । ಅಕ್ಷರನ್ ।
ತಾಃ । ಈಂ । ಹಿನ್ವಂತಿ । ಹರ್ಮ್ಯಸ್ಯ । ಸಕ್ಷಣಿಂ । ಯಾಚಂತೇ । ಸುಮ್ನಂ । ಪವಮಾನಂ । ಅಕ್ಷಿತಂ ॥ ೩ ॥

|| ಸಾಯಣಭಾಷ್ಯಂ ||

ಸಮುದ್ರಿಯಾಃ । ಸಮುದ್ರಸಾಧನತ್ವಾತ್ಸಮುದ್ರಮಂತರಿಕ್ಷಂ । ತತ್ಸಂಬಂಧಿನ್ಯೋಽಪ್ಸರಸಃ ಕಾಷ್ಠನಾಂತರ್ಯಜ್ಞಮಧ್ಯ ಆಸೀನಾಃ ಪಾತ್ರೇಷು ವರ್ತಮಾನಾ ವಸತೀವರ್ಯೋ ಮನೀಷಿಣಂ ಮೇಧಾವಿನಂ ಸೋಮಮಭ್ಯಕ್ಷರನ್ । ಅಭಿಷೂಯಮಾಣಂ ಸೋಮಮಭಿಕ್ಷರಂತಿ । ತಾ ಈಮೇನಾ ಏವೇಮೇನಂ ಹರ್ಮ್ಯಸ್ಯ ಹರ್ಮ್ಯವತ್ಸುಖಕರಸ್ಯ ಯಾಗಗೃಹಸ್ಯ ಸಕ್ಷಣಿಂ ಸೇಚನಶೀಲಂ ಹಿನ್ವಂತಿ । ವರ್ಧಯಂತಿ । ಪೋಷಯಂತಿ । ತೇ ಏತೇ ಸ್ತೋತಾರೋ ವಾ ಪವಮಾನಂ ಸೋಮಮಕ್ಷಿತಮಕ್ಷೀಣಂ ಸುಮ್ನಂ ಸುಖಂ ಯಾಚಂತೇ । ಪ್ರಾರ್ಥಯಂತೇ । ತತ್ರಾಯಂ ಭಾವಃ । ಕಾಷ್ಠನಾಪ್ಸರಸಃ ಸೋಮಂ ರಾಜಾನಂ ಮನೀಷಿಣಂ ಕಾಮಯಮಾನಾ ದೇವಾನಪಿ ಪರಿತ್ಯಜ್ಯ ಸ್ವರ್ಗಾದಾಗತ್ಯ ರಾಜ್ಞಃ ಸಮೀಪೇ ಸ್ಥಿತ್ವಾ ತಸ್ಯ ರಸಾನಾದದತೇ । ಸ್ವರಸೇನ ವರ್ಧಯಂತಿ ತಂ ಸುಖಂ ಚ ಯಾಚಂತ ಇತಿ ||

|| ಪ್ರತಿಪದಾರ್ಥ ||

**ಸಮುದ್ರಿಯಾಃ**—ಅಂತರಿಕ್ಷಸ್ಥರಾದ । **ಅಪ್ಸರಸಃ**—ಅಪ್ಸರಸ್ತ್ರೀಯರು (ವಸತೀವರಿಗಳು) । **ಅಂತಃ**—ಯಜ್ಞಮಧ್ಯದಲ್ಲಿ । **ಆಸೀನಾಃ**—ಕುಳಿತವರಾಗಿ । **ಮನೀಷಿಣಂ** – ಮೇಧಾವಿಯಾದ । **ಸೋಮಂ ಅಭಿ**—ಸೋಮನಿಗಭಿಮುಖವಾಗಿ । **ಅಕ್ಷರನ್** – ಪ್ರವಿಸುತ್ತಾರೆ । **ಹರ್ಮ್ಯಸ್ಯ**– ಸುಖಕರವಾದ ಯಜ್ಞಗೃಹವನ್ನು । **ಸಕ್ಷಣಿಂ**—ಸೇಕಿಸುವ (ರಸವನ್ನು ಚೆಲ್ಲುವ) । **ಈಂ**—ಈ ಸೋಮನನ್ನು । **ತಾಃ**—ಅದೇ ವಸತೀವರಿಗಳು । **ಹಿನ್ವಂತಿ**—ಪುಷ್ಟಿಗೊಳಿಸುತ್ತವೆ । **ಅಕ್ಷಿತಂ**—ನಾಶರಹಿತನಾದ । **ಪವಮಾನಂ**— ಅದೇ ಸೋಮನಿಂದ । **ಸುಮ್ನಂ**—ಸುಖವನ್ನು । **ಯಾಚಂತೇ**— ಬೇಡುತ್ತಾರೆ.

|| ಭಾವಾರ್ಥ ||

ಅಂತರಿಕ್ಷಸ್ಥರಾದ ವಸತೀವರೀಉದಕಗಳು ಯಜ್ಞಮಧ್ಯದಲ್ಲಿ ಕುಳಿತವರಾಗಿ ಮೇಧಾವಿಯಾದ ಸೋಮನಿಗಭಿಮುಖವಾಗಿ ಪ್ರವಿಸುತ್ತವೆ. ಸುಖಕರವಾದ ಯಜ್ಞಗೃಹದಲ್ಲಿ ರಸವನ್ನು ಚೆಲ್ಲುವ ಈ ಸೋಮನನ್ನು ವಸತೀವರಿಗಳು ಪುಷ್ಟಿಗೊಳಿಸುತ್ತವೆ. ನಾಶರಹಿತನಾದ ಅದೇ ಸೋಮನಿಂದ ಯಜಮಾನರು ಸುಖವನ್ನು ಬೇಡುತ್ತಾರೆ.

## English Translation.

The npmphs of the firmament seated in the midst flow towards the sagacious Soma ; they cherish him the sprinkler of the hall of sacrifice : (the worshippers' solicit Pavamana (the undecaying) for a boon.

|| ಸಂಹಿತಾಪಾಠಃ ||

ಗೋಜಿನ್ನಃ ಸೋಮೋ ರಥಜಿದ್ಧಿರಣ್ಯಜಿತ್ಸ್ವರ್ಜಿದಬ್ಜಿತ್ಪವತೇ ಸಹಸ್ರಜಿತ್ ।
ಯಂ ದೇವಾಸಶ್ಚಕ್ರಿರೇ ಪೀತಯೇ ಮದಂ ಸ್ವಾದಿಷ್ಠಂ ದ್ರಪ್ಸಮರುಣಂ
ಮಯೋಭುವಂ || ೪ ||

॥ ಪದಪಾಠಃ ॥

ಗೋಽಜಿತ್ । ನಃ । ಸೋಮಃ । ರಥಽಜಿತ್ । ಹಿರಣ್ಯಽಜಿತ್ । ಸ್ವಃಽಜಿತ್ । ಅಪ್ಽಜಿತ್ । ಪವತೇ । ಸಹಸ್ರಽಜಿತ್ ।

ಯಂ । ದೇವಾಸಃ । ಚಕ್ರಿರೇ । ಪೀತಯೇ । ಮದಂ । ಸ್ವಾದಿಷ್ಠಂ । ದ್ರಪ್ಸಂ । ಅರುಣಂ । ಮಯಃಽಭುವಂ ॥ ೪ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ಗೋಜಿದ್ಗವಾಂ ಜೇತಾ ತಥಾ ರಥಜಿದ್ರಥಸ್ಯ ಜೇತಾ ಹಿರಣ್ಯಜಿದ್ಧಿರಣ್ಯಸ್ಯ ಜೇತಾ ತಥಾ ಸ್ವರ್ಜಿತ್ಸ್ವರ್ಗಸ್ಯ ಸುಖಸ್ಯ ಜೇತಾಬ್ಜಿದಪಾಂ ಜೇತಾ ಸಹಸ್ರಜಿತ್ಸಹಸ್ರಸಂಖ್ಯಾಕಸ್ಯ ಧನಸ್ಯ ಜೇತಾ ಸೋಮಃ ಪವತೇ । ಪೂಯತೇ । ಯಂ ದೇವಾಸೋ ದೇವಾಶ್ಚಕ್ರಿರೇ ಕೃತವಂತಃ । ಕಿಮರ್ಥಂ । ಪೀತಯೇ ಪಾನಾಯ । ಕೀದೃಶಂ ಸೋಮಂ । ಮದಂ ಮದಕರಂ ಸ್ವಾದಿಷ್ಠಂ ಸ್ವಾದುತಮಂ ದ್ರಪ್ಸಂ ರಸಾತ್ಮಕಮರುಣಮರುಣವರ್ಣಂ ಮಯೋಭುವಂ ಸುಖಸ್ಯ ಭಾವಯಿತಾರಂ ॥

॥ ಪ್ರತಿಪದಾರ್ಥ ॥

**ಮದಂ**—ಹರ್ಷಕಾರಕನೂ । **ಸ್ವಾದಿಷ್ಠಂ**—ರುಚಿಕಾರಕನೂ । **ದ್ರಪ್ಸಂ**—ರಸಾತ್ಮಕನೂ । **ಅರುಣಂ**—ಹೊಂಬಣ್ಣವುಳ್ಳವನೂ । **ಮಯೋಭುವಂ**—ಸುಖಕಾರಕನೂ ಆದ । **ಯಂ**—ಯಾವ ಸೋಮನನ್ನು । **ದೇವಾಸಃ**—ದೇವತೆಗಳು । **ಪೀತಯೇ**—ಪಾನಾರ್ಥವಾಗಿ । **ಚಕ್ರಿರೇ**—ಕಲ್ಪಿಸಿಕೊಂಡರೋ ಅಂತಹ । **ಗೋಜಿತ್**—ಗೋವುಗಳನ್ನು ಜಯಿಸುವವನೂ । **ರಥಜಿತ್**—ರಥಗಳನ್ನು ಜಯಿಸುವವನೂ । **ಹಿರಣ್ಯಜಿತ್**—ಸುವರ್ಣವನ್ನು ಪಡೆಯುವವನೂ । **ಸ್ವರ್ಜಿತ್**—ಸ್ವರ್ಗವನ್ನು ಜಯಿಸುವವನೂ । **ಅಬ್ಜಿತ್**—ಉದಕಗಳನ್ನು ವಶಮಾಡಿಕೊಳ್ಳುವವನೂ । **ಸಹಸ್ರಜಿತ್**—ಅಪರಿಮಿತವಾದ ಧನವನ್ನು ಗಳಿಸುವವನೂ ಆದ । **ಸೋಮಃ**—ಸೋಮದೇವನು । **ನಃ**—ನಮ್ಮ ಹಿತಕ್ಕಾಗಿ । **ಪವತೇ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಹರ್ಷಕಾರಕನೂ, ರುಚಿಕಾರಕನೂ, ರಸಾತ್ಮಕನೂ, ಹೊಂಬಣ್ಣವುಳ್ಳವನೂ, ಸುಖಕಾರಕನೂ ಆದ ಯಾವ ಸೋಮನನ್ನು ದೇವತೆಗಳು ಪಾನಾರ್ಥವಾಗಿ ಕಲ್ಪಿಸಿಕೊಂಡರೋ ಅಂತಹ ಗೋವುಗಳನ್ನು ಜಯಿಸುವವನೂ, ರಥಗಳನ್ನು ಜಯಿಸುವವನೂ, ಸುವರ್ಣವನ್ನು ಪಡೆಯುವವನೂ, ಸ್ವರ್ಗವನ್ನು ಜಯಿಸುವವನೂ, ಉದಕಗಳನ್ನು ವಶಮಾಡಿಕೊಳ್ಳುವವನೂ, ಅಪರಿಮಿತವಾದ ಧನವನ್ನು ಗಳಿಸುವವನೂ ಆದ ಸೋಮದೇವನು ನಮ್ಮ ಹಿತಕ್ಕಾಗಿ ಪ್ರವಹಿಸುತ್ತಾನೆ.

## English Translation.

Soma flows for us, the conqueror of cattle, of chariots, of gold, of heaven. of water, of thousand-fold (wealth), whom the gods have made for

(their) drinking, exhilarating, most sweet-flavoured, dropping, purple, causing happiness.

॥ ಸಂಹಿತಾಪಾಠಃ ॥

ಏತಾನಿ ಸೋಮ ಪವಮಾನೋ ಅಸ್ಮಯುಃ ಸತ್ಯಾನಿ ಕೃಣ್ವನ್ದ್ರವಿಣಾನ್ಯರ್ಷಸಿ ।
ಜಹಿ ಶತ್ರುಮಂತಿಕೇ ದೂರಕೇ ಚ ಯ ಉರ್ವೀಂ ಗವ್ಯೂತಿಮಭಯಂ ಚ ನಸ್ಕೃಧಿ ॥ ೫ ॥

॥ ಪದಪಾಠಃ ॥

ಏತಾನಿ । ಸೋಮ । ಪವಮಾನಃ । ಅಸ್ಮಯುಃ । ಸತ್ಯಾನಿ । ಕೃಣ್ವನ್ । ದ್ರವಿಣಾನಿ । ಅರ್ಷಸಿ ।
ಜಹಿ । ಶತ್ರುಂ । ಅಂತಿಕೇ । ದೂರಕೇ । ಚ । ಯಃ । ಉರ್ವೀಂ । ಗವ್ಯೂತಿಂ । ಅಭಯಂ । ಚ । ನಃ । ಕೃಧಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಏತಾನಿ ಪೂರ್ವಮಂತ್ರೋಕ್ತಾನಿ ಗವಾದೀನಿ ದ್ರವಿಣಾನಿ ಸತ್ಯಾನಿ ಕೃಣ್ವನ್ ಕುರ್ವನ್ ಪವಮಾನಃ ಪೂಯಮಾನೋಽರ್ಷಸಿ । ಪವಸೇ । ಜಹಿ ಚ ಶತ್ರುಂ ಯೋಽಸ್ಮಚ್ಛತ್ರುರಂತಿಕೇ ಸಮೀಪೇ ದೂರಕೇಽತ್ಯಂತಂ ದೂರೇ ದೇಶೇ ಚ ವರ್ತತೇ ತಂ ಜಹಿ । ತಥೋರ್ವೀಂ ಗವ್ಯೂತಿಂ ವಿಸ್ತೀರ್ಣಂ ಮಾರ್ಗಮಭಯಂ ಚ ನೋಽಸ್ಮಾಕಂ ಕೃಧಿ । ಕುರು ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಏತಾನಿ**—ಮೇಲೆ ವರ್ಣಿತವಾದಂತೆ । **ದ್ರವಿಣಾನಿ**—ಧನಗಳನ್ನು । **ಸತ್ಯಾನಿ**—ಸತ್ಯಾತ್ಮಕವಾದವನ್ನಾಗಿ । **ಕೃಣ್ವನ್**—ಮಾಡುತ್ತ । **ಪವಮಾನಃ**—ಪರಿಶುದ್ಧನಾದ ನೀನು । **ಅಸ್ಮಯುಃ**—ನಮ್ಮ ಹಿತವನ್ನಪೇಕ್ಷಿಸಿ । **ಅರ್ಷಸಿ**—ಪ್ರವಹಿಸು । **ಯಃ**—ಯಾವ ನಮ್ಮ ಶತ್ರುವು । **ಅಂತಿಕೇ**—ಸಮೀಪದಲ್ಲಿಯಾಗಲಿ । **ದೂರಕೇ ಚ**—ದೂರದಲ್ಲಿಯಾಗಲಿ ಇರುವನೋ ಅಂತಹ । **ಶತ್ರುಂ**—ಎಲ್ಲ ಶತ್ರುವನ್ನು । **ಜಹಿ**—ನಾಶಪಡಿಸು । **ನಃ**—ನಮಗೆ । **ಉರ್ವೀಂ**—ವಿಸ್ತೃತವಾದ । **ಗವ್ಯೂತಿಂ**—ಮಾರ್ಗವನ್ನು । **ಅಭಯಂ ಚ**—ಅಭಯವನ್ನೂ । **ಕೃಧಿ**—ನಿರ್ಮಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮೇಲೆ ವರ್ಣಿತವಾದಂತೆ ನಾವು ಅಪೇಕ್ಷಿಸಿದ ಎಲ್ಲ ಸಂಪತ್ತುಗಳನ್ನೂ ಸತ್ಯಾತ್ಮಕವಾದವನ್ನಾಗಿ ಮಾಡುತ್ತ ಪರಿಶುದ್ಧನಾದ ನೀನು ನಮ್ಮ ಹಿತವನ್ನಪೇಕ್ಷಿಸಿ ಪ್ರವಹಿಸು. ಯಾವ ನಮ್ಮ ಶತ್ರುವು

ಸಮೀಪದಲ್ಲಿಯಾಗಲಿ, ದೂರದಲ್ಲಿಯಾಗಲಿ ಇರುವನೋ ಅಂತಹ ಎಲ್ಲ ಶತ್ರುವನ್ನೂ ನಾಶಪಡಿಸು. ನಮಗಾಗಿ ವಿಸ್ತೃತವಾದ ಮಾರ್ಗವನ್ನೂ ಅಭಯವನ್ನೂ ನಿರ್ಮಿಸು.

### English Translation.

Bestowing all these true riches, loving us you flow, Soma, purified ; destroy our enemy whether he be far or nigh ; grant us a free road and freedom from danger.

## ಎಪ್ಪತ್ತೊಂಭತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಚೋದಸ ಇತಿ ಪಂಚರ್ಚಂ ದ್ವಾದಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಅಚೋದಸ ಇತ್ಯನುಕ್ರಾಂತಂ || ಗತೋ ವಿನಿಯೋಗಃ ||**

ಅನುವಾದವು— **ಅಚೋದಸಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ **ಸೂಕ್ತವು.** ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ— **ಅಚೋದಸಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ— ೭೯

ಮಂಡಲ—೯ || ಅನುವಾಕ—೪ || ಸೂಕ್ತ—೭೯ ||
ಅಷ್ಟಕ—೭ || ಅಧ್ಯಾಯ—೩ || ವರ್ಗ—೪ ||
|| ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ||
|| ಋಷಿಃ—ಕವಿಃ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ—ಜಗತೀ ||

|| ಸಂಹಿತಾಪಾಠಃ ||

**ಅಚೋದಸೋ ನೋ ಧನ್ವಂತ್ವಿಂದವಃ ಪ್ರ ಸುವಾನಾಸೋ ಬೃಹದ್ದಿವೇಷು ಹರಯಃ ।**
**ವಿ ಚ ನಶನ್ನ ಇಷೋ ಅರಾತಯೋಽರ್ಯೋ ನಶಂತ ಸನಿಷಂತ ನೋ ಧಿಯಃ ॥ ೧ ॥**

|| ಪದಪಾಠಃ ||

ಅಚೋದಸಃ । ನಃ । ಧನ್ವಂತು । ಇಂದವಃ । ಪ್ರ । ಸುವಾನಾಸಃ । ಬೃಹತ್ಽದಿವೇಷು । ಹರಯಃ ।

ವಿ । ಚ । ನಶನ್ । ನಃ । ಇಷಃ । ಅರಾತಯಃ । ಅರ್ಯಃ । ನಶಂತ । ಸನಿಷಂತ । ನಃ । ಧಿಯಃ ॥ ೧ ॥

|| ಸಾಯಣಭಾಷ್ಯಂ ||

ಅಚೋದಸೋಽಚೋದನಾ ಅನನ್ಯಪ್ರೇರಿತಾ ಇಂದವಃ ಸೋಮಾ ನೋಽಸ್ಮಾಕಂ ಪ್ರ ಧನ್ವಂತು । ಪ್ರಗಚ್ಛಂತು । ಧನ್ವತಿರ್ಗತಿಕರ್ಮಾ । ಕುತ್ರ । :ಬೃಹದ್ದಿವೇಷು ಪ್ರಭೂತದೀಪ್ತಿಷು ಯಾಗೇಷು ನಿಮಿತ್ತೇಷು । ಅಥವಾ ಬೃಹದ್ದಿವಕುಲಜೇಷು ಮಧ್ಯೇ । ನ ಇತಿ ಸಂಬಂಧಃ । ಕೀದೃಶಾ ಇಂದವಃ । ಸುವಾನಾಸಃ ಸೂಯಮಾನಾ ಹರಯೋ ಹರಿತವರ್ಣಾಃ । ಕಿಂಚ ನೋಽಸ್ಮಭ್ಯಂ ಯೇ ಚೇಷೋಽನ್ನಸ್ಯಾ-ರಾತಯೋಽದಾತಾರಃ ಸಂತಿ ತೇ ಚ ವಿ ನಶನ್ । ವಿನಶ್ಯಂತು । ತಥಾರ್ಯೋಽರಯೋಽಪಿ ನಶಂತ । ವಿನಶ್ಯಂತು । ಸನಿಷಂತ ಸಂಭಜಂತು ಚ ನೋ ಧಿಯೋಽಸ್ಮದೀಯಾನಿ ಕರ್ಮಾಣಿ ದೇವಾ ಅಸ್ಮತ್ಪ್ರಿಯ-ಭೂತಾ ವಾ ॥

|| ಪ್ರತಿಪದಾರ್ಥ ||

**ಅಚೋದಸಃ**—ಸ್ವಯಂಪ್ರೇರಿತವೂ | **ಸುವಾನಾಸಃ**—ಹಿಂಡಲ್ಪಡತಕ್ಕವೂ | **ಹರಯಃ**—ಪಚ್ಚೆ ವರ್ಣವುಳ್ಳವೂ ಆದ | **ಇಂದವಃ**—ಸೋಮರಸಗಳು | **ಬೃಹದ್ದಿವೇಷು**—ಪ್ರಕಾಶಮಾನವಾದ ಯಾಗದಿವಸಗಳಲ್ಲಿ| **ನಃ**—ನಮಗೆ ಅನುಗ್ರಹಿಸಲು | **ಪ್ರ ಧನ್ವಂತು**—ಪ್ರವಹಿಸಿ ಬರಲಿ | **ನಃ**—ನಮ್ಮ | **ಇಷಃ**—ಅನ್ನಕ್ಕೆ | **ಅರಾತಯಃ**—ವಿಘ್ನಕರ್ತರು (ಕೊಡದಿರುವವರು) | **ವಿ ನಶನ್**—ನಾಶವನ್ನು ಹೊಂದಲಿ | **ಅರ್ಯಃ**—ನಮ್ಮ ಶತ್ರುಗಳೂ ಸಹ | **ನಶಂತ**—ನಾಶವನ್ನು ಹೊಂದಲಿ | (**ದೇವಾಃ**—ದೇವತೆಗಳು) | :**ನಃ**—ನಮ್ಮ | **ಧಿಯಃ**—ಕರ್ಮಗಳನ್ನು | **ಸನಿಷಂತ**—ಸೇವಿಸಲಿ.

|| ಭಾವಾರ್ಥ ||

ಹಿಂಡಲ್ಪಡತಕ್ಕವೂ, ಪಚ್ಚೆವರ್ಣವುಳ್ಳವೂ ಆದ ಸೋಮರಸಗಳು ಸ್ವಯಂಪ್ರೇರಿತವಾಗಿ ಪ್ರಕಾಶಮಾನವಾದ ನಮ್ಮ ಯಾಗದಿವಸಗಳಲ್ಲಿ ನಮಗೆ ಅನುಗ್ರಹಿಸಲು ಪ್ರವಹಿಸಿ ಬರಲಿ. ನಮಗೆ ಅನ್ನವನ್ನು ಕೊಡದಿರುವವರು ನಾಶವನ್ನು ಹೊಂದಲಿ. ನಮ್ಮ ಶತ್ರುಗಳೂ ನಾಶವನ್ನು ಹೊಂದಲಿ. ದೇವತೆಗಳು ನಮ್ಮ ಕರ್ಮಗಳನ್ನು ಸೇವಿಸಲಿ.

## English Translation

May the spantaneous Soma-juices flow to us at the brilliaut (sacrifices) green-tinted, effused ; may they be destroyed who are the withholders of food from us ; may (our) foes be destroyed ; may (the gods) enjoy our pious acts.

॥ ಸಂಹಿತಾಪಾಠಃ ॥

ಪ್ರ ಣೋ ಧನ್ವಂತ್ವಿಂದವೋ ಮದಚ್ಯುತೋ ಧನಾ ವಾ ಯೇಭಿರರ್ವತೋ
ಜುನೀಮಸಿ ।
ತಿರೋ ಮರ್ತಸ್ಯ ಕಸ್ಯ ಚಿತ್ಪರಿಹ್ವೃತಿಂ ವಯಂ ಧನಾನಿ ವಿಶ್ವಧಾ ಭರೇಮಹಿ॥

॥ ಪದಪಾಠಃ ॥

ಪ್ರ । ನಃ । ಧನ್ವಂತು । ಇಂದವಃ । ಮದಽಚ್ಯುತಃ । ಧನಾ । ವಾ । ಯೇಭಿಃ । ಅರ್ವತಃ । ಜುನೀಮಸಿ ।
ತಿರಃ । ಮರ್ತಸ್ಯ । ಕಸ್ಯ । ಚಿತ್ । ಪರಿಽಹ್ವೃತಿಂ । ವಯಂ । ಧನಾನಿ । ವಿಶ್ವಧಾ । ಭರೇಮಹಿ ॥ ೨ ॥

॥ ಸಾಯಣಭಾಷ್ಯಂ ॥

ಪ್ರ ಣೋ ಧನ್ವಂತು ಪ್ರಧನ್ವಂತು ಪ್ರಗಚ್ಛಂತು ನೋಽಸ್ಮಾಕಮಿಂದವಃ ಸೋಮಾ ಮದಚ್ಯುತೋ ಮದಸ್ರಾವಿಣಃ । ವಾಥವಾ । ಕಿಂಚೇತ್ಯರ್ಥಃ । ಧನಾ ಧನಾನ್ಯಪಿ ಪ್ರ ಧನ್ವಂತು । ಯೇಭಿರ್ಯೈಃ ಸೋಮೈರರ್ವತೋ ಬಲವತಃ ಶತ್ರೋಃ ಸಮೀಪಂ ಜುನೀಮಸಿ ಜುನೀಮಃ ಪ್ರಾಪ್ನುಮಃ । ಕಸ್ಯ ಚಿತ್ ಕಸ್ಯಾಪಿ ಮರ್ತಸ್ಯ ಮನುಷ್ಯಸ್ಯ ಪ್ರಬಲಸ್ಯ ಪರಿಹ್ವೃತಿಂ ಪರಿತೋ ಬಾಧಾಂ ತಿರಸ್ತಿರಸ್ಕುರ್ವಂತೋ ವಯಂ ಧನಾನಿ ಗವಾದಿರೂಪಾಣಿ ವಿಶ್ವಧಾ ಸರ್ವದಾ ಭರೇಮಹಿ । ಬಿಭೃಯಾಮ ॥

॥ ಪ್ರತಿಪದಾರ್ಥ ॥

**ಯೇಭಿಃ**—ಯಾವ ಸೋಮರಸಗಳ ಸಹಾಯದಿಂದ । **ಅರ್ವತಃ**—ಶಕ್ತಿಯುತರಾದ ಶತ್ರುಗಳನ್ನೂ । **ಜುನೀಮಸಿ**—ನಾವು ಎದುರಿಸಿ ಪ್ರತಿಭಟಿಸಬಲ್ಲೆವೋ ಅಂತಹ । **ಇಂದವಃ**—ಸೋಮರಸಗಳು । **ನಃ**—ನಮಗಾಗಿ। **ಪ್ರ ಧನ್ವಂತು**—ಪ್ರವಹಿಸಿ ಬರಲಿ । **ಮದಚ್ಯುತಃ**—ಹರ್ಷವನ್ನುಂಟುಮಾಡುವ ಆ ರಸಗಳು । **ಧನಾ**—ನಮಗೆ ಧನಗಳನ್ನೂ ಒದಗಿಸಲಿ । **ಕಸ್ಯ ಚಿತ್**—ಸಕಲವಾದ । **ಮರ್ತಸ್ಯ**—ಮಾನವನ (ಶತ್ರುವಿನ) । **ಪರಿಹ್ವೃತಿಂ**—ಸಕಲವಾದ ಪ್ರತಿಬಂಧಕಗಳನ್ನು । **ತಿರಃ**—ದಾಟುತ್ತ । **ವಯಂ**—ನಾವು । **ಧನಾನಿ**—ಗವಾದಿರೂಪವಾದ ಧನಗಳನ್ನು । **ವಿಶ್ವಧಾ**—ಯಾವಾಗಲೂ । **ಭರೇಮಹಿ**—ಹೊಂದುವಂತಾಗಲಿ.

॥ ಭಾವಾರ್ಥ ॥

ಯಾವ ಸೋಮರಸಗಳ ಸಹಾಯದಿಂದ ಶಕ್ತಿಯುತರಾದ ಶತ್ರುಗಳನ್ನು ನಾವು ಎದುರಿಸಬಲ್ಲೆವೋ ಅಂತಹ ಸೋಮರಸಗಳು ನಮಗಾಗಿ ಪ್ರವಹಿಸಿ ಬರಲಿ. ಹರ್ಷವನ್ನುಂಟುಮಾಡುವ ಆ ರಸಗಳು ನಮಗೆ ಧನಗಳನ್ನು ಒದಗಿಸಲಿ. ಸಕಲವಾದ ಶತ್ರುವಿನ ಪ್ರತಿಬಂಧಕವನ್ನು ದಾಟುತ್ತ ನಾವು ಗವಾದಿರೂಪವಾದ ದನಗಳನ್ನು ಯಾವಾಗಲೂ ಹೊಂದುವಂತಾಗಲಿ.

## English Translation.

May they flow to us, may they bring us riches—the honey-dropping Soma-juices by whose aid we encounter tbe powerful (enemy) ; may we over-coming the opposition of every man always bear off his wealth.

|| ಸಂಹಿತಾಪಾಠಃ ||

ಉತ ಸ್ವಸ್ಯಾ ಅರಾತ್ಯಾ ಅರಿರ್ಹಿ ಷ ಉತಾನ್ಯಸ್ಯಾ ಅರಾತ್ಯಾ ವೃಕೋ ಹಿ ಷಃ।
ಧನ್ವನ್ನ ತೃಷ್ಣಾ ಸಮರೀತ ತಾँ ಅಭಿ ಸೋಮ ಜಹಿ ಪವಮಾನ ದುರಾಧ್ಯಃ ॥೩॥

|| ಪದಪಾಠಃ ||

ಉತ । ಸ್ವಸ್ಯಾಃ । ಅರಾತ್ಯಾಃ । ಅರಿಃ । ಹಿ । ಸಃ । ಉತ । ಅನ್ಯಸ್ಯಾಃ । ಅರಾತ್ಯಾಃ । ವೃಕಃ । ಹಿ । ಸಃ ।
ಧನ್ವನ್ । ನ । ತೃಷ್ಣಾ । ಸಂ । ಅರೀತ । ತಾನ್ । ಅಭಿ । ಸೋಮ । ಜಹಿ । ಪವಮಾನ । ದುಃಽಆಧ್ಯಃ ॥

|| ಸಾಯಣಭಾಷ್ಯಂ ||

ಉತಾಪಿ ಚ ಸ ಸೋಮಃ ಸ್ವಸ್ಯಾ ಅರಾತ್ಯಾಃ ಸ್ವೀಯಸ್ಯ ಶತ್ರೋರರಿರಭಿಗಂತಾ ಹನನಾಯ । ಉತಾಪಿ ಚ ಸ ಸೋಮೋಽನ್ಯಸ್ಯಾ ಅಸ್ಮದೀಯಾಯಾ ಅರಾತ್ಯಾ ಅಸ್ಮಚ್ಛತ್ರೋರ್ವೃಕೋ ಹಿ ಹಿಂಸಕಃ ಖಲು ॥ ಅರಾತಿಶಬ್ದಃ ಸ್ತ್ರೀಲಿಂಗೋಽಪ್ಯಸ್ತಿ ॥ ಅಥ ಪ್ರತ್ಯಕ್ಷಕೃತಃ । ಧನ್ವನ್ನ ತೃಷ್ಣಾ । ಧನ್ವ ನಿರುದಕೋ ದೇಶಃ । ತಸ್ಮಿನ್ಸ್ಥಿತಸ್ಯ ತೃಷ್ಣೇವ ಸಾ ಯಥಾ ತಂ ಸಮರೀತ ಪ್ರಾಪ್ನೋತಿ ತದ್ವತ್ತಾನುಭಯವಿಧಾಞ್ಶತ್ರೂಞ್ಜಹಿ ॥

|| ಪ್ರತಿಪದಾರ್ಥ ||

**ಉತ**—ಮತ್ತು । **ಸಃ**—ಆ ಸೋಮನು । **ಸ್ವಸ್ಯಾಃ**—ತನ್ನ । **ಅರಾತ್ಯಾಃ**—ಶತ್ರುವಿಗೆ । **ಅರಿಃ**—ನಾಶಕನಾಗಿದ್ದಾನೆ । **ಉತ**—ಮತ್ತು । **ಸಃ**—ಅದೇ ಸೋಮನು । **ಅನ್ಯಸ್ಯಾಃ**—ಇತರರ । **ಅರಾತ್ಯಾಃ**—ಶತ್ರುವಿಗೂ । **ವೃಕೋ ಹಿ**—ಹಿಂಸಕನಾಗಿದ್ದಾನೆ । **ಧನ್ವನ್**—ಮರುಭೂಮಿಯಲ್ಲಿ । **ತೃಷ್ಣಾ**—ಬಾಯಾರಿಕೆಯು। **ನ**—ಯಾವ ರೀತಿ । **ಸಮರೀತಿ**—ಆವರಿಸಿ ಹಿಂಸಿಸುವುದೋ ಹಾಗೆ । **ಪವಮಾನ**—ಶುದ್ಧಿಕಾರಕನಾದ । **ಸೋಮ**—ಎಲೈ ಸೋಮನೇ । **ದುರಾಧ್ಯಃ**—ಅಪ್ರತಿಹತನಾದ ನೀನು । **ತಾನ್**—ಅಂತಹ ಶತ್ರುಗಳನ್ನೆಲ್ಲ । **ಜಹಿ**—ನಾಶಪಡಿಸು.

॥ ಭಾವಾರ್ಥ ॥

ಸೋಮದೇವನು ತನ್ನ ಮತ್ತು ತನ್ನ ಭಕ್ತರ ಶತ್ರುಗಳಿಗೆಲ್ಲ ನಾಶಕನಾಗಿದ್ದಾನೆ. ಶುದ್ಧಿಕಾರಕನಾದ ಎಲೈ ಸೋಮನೇ, ಮರುಭೂಮಿಯಲ್ಲಿ ಸಂಚರಿಸುವವನನ್ನು ಬಾಯಾರಿಕೆಯು ಹಿಂಸಿಸುವಂತೆ, ಅಪ್ರತಿಹತನಾದ ನೀನು ಎಲ್ಲ ಶತ್ರುಗಳನ್ನೂ ನಾಶಪಡಿಸು.

## English Translation.

For the (Soma) verily is the foe of his own enemy and the destroyer of the enemy of another ; as thirst overcomes one in a desert, so purified Soma who are irresistible, slay (both) those (adversaries).

|| ಸಂಹಿತಾಪಾಠಃ ||

ದಿವಿ ತೇ ನಾಭಾ ಪರಮೋ ಯ ಆದದೇ ಪೃಥಿವ್ಯಾಸ್ತೇ ರುರುಹುಃ ಸಾನವಿ
ಕ್ಷಿಪಃ ।
ಅದ್ರಯಸ್ತ್ವಾ ಬಪ್ಸತಿ ಗೋರಧಿ ತ್ವಚ್ಯಪ್ಸು ತ್ವಾ ಹಸ್ತೈರ್ದುದುಹು-
ರ್ಮನೀಷಿಣಃ ॥ ೪ ॥

|| ಪದಪಾಠಃ ||

ದಿವಿ । ತೇ । ನಾಭಾ । ಪರಮಃ । ಯಃ । ಆऽದದೇ । ಪೃಥಿವ್ಯಾಃ । ತೇ । ರುರುಹುಃ । ಸಾನವಿ । ಕ್ಷಿಪಃ ।
ಅದ್ರಯಃ । ತ್ವಾ । ಬಪ್ಸತಿ । ಗೋಃ । ಅಧಿ । ತ್ವಚಿ । ಅಪ್ऽಸು । ತ್ವಾ । ಹಸ್ತೈಃ । ದುದುಹುಃ । ಮನೀ-
ಷಿಣಃ ॥ ೪ ॥

|| ಸಾಯಣಭಾಷ್ಯಂ ||

ಹೇ ಸೋಮ ತೇ ತವ ಸ ಪರಮ ಉತ್ತಮೋಽಂಶೋ ದಿವಿ ದಿವೋ ನಾಭಾ ನಾಭೌ ದ್ಯುಲೋಕಸ್ಯ ನಾಭಿಸ್ಥಾನೀಯೇ ದೇಶೇ । ಅಥವಾ ನಾಭೌ ವೃಷ್ಟ್ಯಾದೇರ್ಬಂಧಕೇ ದಿವಿ ದ್ಯುಲೋಕೇ । ವರ್ತತೇ ಯ ಆದದೇ ಆದತ್ತೇ ಹವಿರ್ದೇವತಾರೂಪಃ ಸನ್ । ತೇ ತವ ದ್ಯುಲೋಕಸ್ಥಾಂಶಸ್ಯಾವಯವಾಃ ಪೃಥಿವ್ಯಾಃ ಸಾನವಿ ಸಮುಚ್ಛ್ರಿತೇ ದೇಶೇ ಪರ್ವತಾದಿಪ್ರದೇಶೇ ಕ್ಷಿಪಃ ಕ್ಷಿಪ್ತಾಃ ಸಂತೋ ರುರುಹುಃ । ರೋಹಂತಿ । ತ್ವಾ ತ್ವಾಂ ಸೋಮಾಂಶಭೂತಮದ್ರಯೋ ಗ್ರಾವಾಣೋ ಬಪ್ಸತಿ । ಭಕ್ಷಯಂತಿ । ಬಪ್ಸತಿರತ್ತಿಕರ್ಮಾ । ಕುತ್ರ । ಗೋರಧಿ ತ್ವಚಿ । ಅಧೀತಿ ಸಪ್ತಮ್ಯರ್ಥಾನುವಾದೀ । ಆನಡುಹೇऽಧಿಷವಣಚರ್ಮಣೀತ್ಯರ್ಥಃ । ಯದ್ಯಪೀದಾನೀಂತನಾಃ ಕೃಷ್ಣಾಜಿನೇऽಭಿಷುಣ್ವಂತಿ ನ ಗೋಚರ್ಮಣಿ ತಥಾಪಿ ತಸ್ಮಿನ್ನೋನೋ ಮೀಯತೇ ಕ್ರಯಾರ್ಥಂ । ತಥಾ ಚ ಸತಿ ಯಸ್ಮಿನ್ ಮಿಮೀತೇ ತಸ್ಯಾಧಿಷವಣಚರ್ಮೇತಿ ಸೂತ್ರಾನ್ಮಾನ-ಸಾಧನಸ್ಯೈವ ಗೋಚರ್ಮಣೋऽಧಿಷವಣಚರ್ಮತ್ವಾಭಿಧಾನಾದವಿರೋಧಃ । ತ್ವಾ ತ್ವಾಂ ತಥಾಪ್ಸು ವಸತೀವರೀಷು ದುದುಹುಃ । ದುಹಂತಿ । ಅದ್ಭಿರಾಪ್ಲಾವ್ಯ ದುಹಂತೀತ್ಯರ್ಥಃ । ಯದ್ವಾ । ಅಪ್ಸೂದಕೇಷು ರಸೇಷು ನಿಮಿತ್ತೇಷು ದುದುಹುಃ । ಕೈಃ ಸಾಧನೈಃ । ಹಸ್ತೈಃ । ಹಸ್ತೋ ಹಂತೇರಿತಿ ನಿರುಕ್ತಂ । ೧-೭ । ಕೇ । ಮನೀಷಿಣೋ ಮೇಧಾವಿನೋऽಧ್ವರ್ಯ್ವಾದಯಃ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಯಃ**— ಯಾವ ನಿನ್ನ ದಿವ್ಯಾಂಶವು | **ಆದದೇ**-ಹವಿಸ್ಸನ್ನು ಸ್ವೀಕರಿಸುವುದೋ | **ತೇ**— ನಿನ್ನ | **ಪರಮಃ**— ಅದೇ ಉತ್ಕೃಷ್ಟಾಂಶವು | **ದಿವಿ**— ದ್ಯುಲೋಕದ | **ನಾಭಾ**— ನಾಭಿಪ್ರದೇಶದಲ್ಲಿರುತ್ತದೆ | **ತೇ**— ನಿನ್ನ ಉಳಿದ ಅವಯವಗಳು | **ಪೃಥಿವ್ಯಾಃ**— ಪೃಥ್ವಿಯ | **ಸಾನವಿ**— ಪರ್ವತಪ್ರದೇಶಗಳಲ್ಲಿ | **ಕ್ಷಿಪಃ**— ಎಸೆಯಲ್ಪಟ್ಟು | **ರುರುಹುಃ**— ಬೆಳೆಯುತ್ತವೆ | **ತ್ವಾ**— ನಿನ್ನನ್ನು | **ಅದ್ರಯಃ**— ಹಿಂಡುವ ಕಲ್ಲುಗಳು | **ಗೋಃ ತ್ವಚಿ ಅಧಿ**— ಗೋವಿನ ಚರ್ಮದ ಮೇಲೆ | **ಬಪ್ಸತಿ**— ಭಕ್ಷಿಸುತ್ತವೆ | **ಮನೀಷಿಣಃ**— ಪ್ರಾಜ್ಞರಾದ ಋತ್ವಿಕ್ಕುಗಳು | **ಹಸ್ತೈಃ**— ತಮ್ಮ ಕೈಗಳಿಂದ | **ತ್ವಾ**— ನಿನ್ನನ್ನು | **ಅಪ್ಸು**— ವಸತೀವರ್ಯಾದಿಉದಕಗಳಲ್ಲಿ | **ದುದುಹುಃ**— ಕರೆಯುತ್ತಾರೆ.

|| ಭಾವಾರ್ಥ ||

ಎಲೈ ಸೋಮದೇವನೇ, ಯಾವ ನಿನ್ನ ದಿವ್ಯಾಂಶವು ಹವಿಸ್ಸನ್ನು ಸ್ವೀಕರಿಸುವುದೋ, ನಿನ್ನ ಅದೇ ಉತ್ಕೃಷ್ಟಾಂಶವು ದ್ಯುಲೋಕದ ನಾಭಿಪ್ರದೇಶದಲ್ಲಿರುತ್ತದೆ. ನಿನ್ನ ಉಳಿದ ಅವಯವಗಳು ಪೃಥ್ವಿಯ ಪರ್ವತಪ್ರದೇಶಗಳಲ್ಲಿ ಎಸೆಯಲ್ಪಟ್ಟು ಬೆಳೆಯುತ್ತವೆ. ಹಿಂಡುವ ಕಲ್ಲುಗಳು ನಿನ್ನನ್ನು ಗೋಚರ್ಮದ ಮೇಲೆ ಭಕ್ಷಿಸುತ್ತವೆ. (ಇಡುತ್ತವೆ) ಪ್ರಾಜ್ಞರಾದ ಋತ್ವಿಕ್ಕುಗಳು ತಮ್ಮ ಕೈಗಳಿಂದ ನಿನ್ನನ್ನು ವಸತೀವರ್ಯಾದಿಉದಕಗಳಲ್ಲಿ ಕರೆಯುತ್ತಾರೆ.

English Translation

Your best juice (dwells) in the navel of heaven, that which receives (the oblation) ; your (members) grow up thrown upon the summit of the earths the stones devour you upon the cowhide ; the wise (priests) milk you into the water with their hands.

|| ಸಂಹಿತಾಪಾಠಃ ||

ಏವಾ ತ ಇಂದೋ ಸುಭ್ವಂ ಸುಪೇಶಸಂ ರಸಂ ತುಂಜಂತಿ ಪ್ರಥಮಾ ಅಭಿಶ್ರಿಯಃ |

ನಿದಂನಿದಂ ಪವಮಾನ ನಿ ತಾರಿಷ ಆವಿಸ್ತೇ ಶುಷ್ಮೋ ಭವತು ಪ್ರಿಯೋ ಮದಃ || ೫ ||

|| ಪದಪಾಠಃ ||

ಏವ | ತೇ | ಇಂದೋ ಇತಿ | ಸುಽಭ್ವಂ | ಸುಽಪೇಶಸಂ | ರಸಂ | ತುಂಜಂತಿ | ಪ್ರಥಮಾಃ | ಅಭಿಽಶ್ರಿಯಃ |
ನಿದಂಽನಿದಂ | ಪವಮಾನ | ನಿ | ತಾರಿಷಃ | ಆವಿಃ | ತೇ | ಶುಷ್ಮಃ | ಭವತು | ಪ್ರಿಯಃ | ಮದಃ || ೫ ||

|| ಸಾಯಣಭಾಷ್ಯಂ ||

**ಪೂರ್ವತ್ರಾಪ್ಯಯಸ್ತ್ವಾಂ ಬಪ್ಸತೀತ್ಯುಕ್ತಂ । ತದೇವೋಚ್ಯತೇ । ಹೇ ಇಂದೋ ಸೋಮ ಏವೈವಮಿದಾನೀಂಕ್ರಿಯಮಾಣಪ್ರಕಾರೇಣ ತೇ ತವ ಸುಭ್ವಂ ಶೋಭನಭವನಂ ಸುಪೇಶಸಂ । ಪೇಶ ಇತಿ ರೂಪನಾಮ । ಸುರೂಪಂ ರಸಂ ಪ್ರಥಮಾಃ ಪ್ರಥಮಮೇವ । ಯದ್ವಾ । ಪ್ರಥಮ ಇತಿ ಮುಖ್ಯನಾಮ ಪ್ರಥಮಾ ಮುಖ್ಯಾಃ । ಗ್ರಾವಾಣೋಽಧ್ವರ್ಯವೋ ವಾಭಿಶ್ರಿಯೋಽಭಿಶ್ರಯಂತಃ ಸಂತಸ್ತುಂಜಂತಿ। ಪ್ರೇರಯಂತಿ । ಹೇ ಪವಮಾನ ನಿದಂ ನಿದಮಸ್ಮನ್ನಿಂದಕಂ ಸರ್ವಮಪಿ ಶತ್ರುಂ ನಿ ತಾರಿಷಃ । ವಿನಾಶಯ । ತೇ ತವ ಶುಷ್ಮೋ ಬಲಕರಃ ಪ್ರಿಯಃ ಪ್ರಿಯಭೂತೋ ಮದೋ ಮದಕರೋ ರಸ ಆವಿರ್ಭವತು ||**

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ । **ಪ್ರಥಮಾಃ**—ಮುಖ್ಯರೂ । **ಅಭಿಶ್ರಿಯಃ**—ಕ್ಷೀರಾದಿಗಳೊಡನೆ ಮಿಶ್ರಮಾಡುವವರೂ ಆದ ಋತ್ವಿಕ್ಕುಗಳು । **ಏವ**—ಇದೇ ರೀತಿಯಲ್ಲಿ । **ತೇ**—ನಿನ್ನ । **ಸುಭ್ವಂ**—ಉತ್ತಮವಾದ ನಿವಾಸಸ್ಥಾನವುಳ್ಳದ್ದೂ । **ಸುಪೇಶಸಂ**—ಸುಂದರವಾದ ರೂಪವುಳ್ಳದ್ದೂ ಆದ । **ರಸಂ** - ರಸವನ್ನು । **ತುಂಜಂತಿ**—ಪ್ರೇರಿಸುತ್ತಾರೆ । **ಪವಮಾನ**—ಎಲೈ ಸೋಮದೇವನೇ । **ನಿದಂನಿದಂ**—ನಮ್ಮನ್ನು ದೂಷಿಸುವ ಸಕಲ ಶತ್ರುಗಳನ್ನೂ । **ನಿ ತಾರಿಷಃ**—ನಾಶಮಾಡು । **ತೇ**—ನಿನ್ನ । **ಶುಷ್ಮಃ**—ಬಲಕಾರಿಯಾದುದೂ । **ಪ್ರಿಯಃ**—ಪ್ರೀತಿಕರವಾದುದೂ । **ಮದಃ**—ಹರ್ಷಕರವಾದುದೂ ಆದ ರಸವು । **ಆವಿರ್ಭವತು**—ನಮಗೆ ಪ್ರತ್ಯಕ್ಷವಾಗಲಿ.

|| ಭಾವಾರ್ಥ ||

ಎಲೈ ಸೋಮದೇವನೇ, ಪ್ರಧಾನರೂ, ಕ್ಷೀರಾದಿಗಳೊಡನೆ ಮಿಶ್ರಮಾಡುವವರೂ ಆದ ಋತ್ವಿಕ್ಕುಗಳು ಇದೇ ರೀತಿಯಲ್ಲಿ ನಿನ್ನ ಉತ್ತಮವಾದ ನಿವಾಸಸ್ಥಾನವುಳ್ಳದ್ದೂ, ಸುಂದರವಾದ ರೂಪವುಳ್ಳದ್ದೂ ಆದ ರಸವನ್ನು ಪ್ರೇರಿಸುತ್ತಾರೆ. ಎಲೈ ಸೋಮದೇವನೇ, ನಮ್ಮನ್ನು ದೂಷಿಸುವ ಸಕಲ ಶತ್ರುಗಳನ್ನೂ ನಾಶಮಾಡು. ನಿನ್ನ ಬಲಕಾರಿಯಾದುದೂ, ಪ್ರೀತಿಕರವಾದುದೂ, ಹರ್ಷಕಾರಕವಾದುದೂ ಆದ ರಸವು ನಮಗೆ ಪ್ರತ್ಯಕ್ಷವಾಗಲಿ.

### English Translation.

Thus, Indu, the chief (priests) making the mixture send forth your well-lodged, well-formed juice ; purified Soma, destroy (our) reviler : let your potent, delightful, exhilaratiug (juice) appear.

## ಎಂಭತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

**ಸೋಮಸ್ಯ ಧಾರೇತಿ ಪಂಚರ್ಚಂ ತ್ರಯೋದಶಂ ಸೂಕ್ತಂ ಭಾರದ್ವಾಜಸ್ಯ ವಸುನಾಮ್ನ ಆರ್ಷಂ ಜಾಗತಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಸೋಮಸ್ಯ ವಸುರ್ಭಾರದ್ವಾಜ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಸೋಮಸ್ಯ ಧಾರಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸುರ್ಭಾರದ್ವಾಜಃ ಎಂಬುವನು ಋಷಿಯು. ಪವಮಾನಸೋಮನು ದೇವತೆಯು ; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸೋಮಸ್ಯ ವಸುರ್ಭಾರದ್ವಾಜಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೮೦

ಮಂಡಲ-೯ || ಅನುವಾಕ-೪ || ಸೂಕ್ತ-೮೦ ||

ಅಷ್ಟಕ-೭ || ಅಧ್ಯಾಯ-೩ || ವರ್ಗ-೫ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||

|| ಋಷಿಃ—ವಸುರ್ಭಾರದ್ವಾಜಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—ಜಗತೀ ||

|| ಸಂಹಿತಾಪಾಠಃ ||

**ಸೋಮಸ್ಯ ಧಾರಾ ಪವತೇ ನೃಚಕ್ಷಸ ಋತೇನ ದೇವಾನ್ಹವತೇ ದಿವಸ್ಪರಿ ।**

**ಬೃಹಸ್ಪತೇ ರವಥೇನಾ ವಿ ದಿದ್ಯುತೇ ಸಮುದ್ರಾಸೋ ನ ಸವನಾನಿ ವಿವ್ಯಚುಃ ॥**

| ಪದಪಾಠಃ ||

ಸೋಮಸ್ಯ । ಧಾರಾ । ಪವತೇ । ನೃऽಚಕ್ಷಸಃ । ಋತೇನ । ದೇವಾನ್ । ಹವತೇ । ದಿವಃ । ಪರಿ ।

ಬೃಹಸ್ಪತೇಃ । ರವಥೇನ । ವಿ । ದಿದ್ಯುತೇ । ಸಮುದ್ರಾಸಃ । ನ । ಸವನಾನಿ । ವಿವ್ಯಚುಃ ॥ ೧ ॥

|| ಸಾಯಣಭಾಷ್ಯಂ ||

ಸೋಮಸ್ಯಾಭಿಷೂಯಮಾಣಸ್ಯ ಧಾರಾ ಪವತೇ । ಶ್ಚ್ಯೋತತೇ । ಕೀದೃಶಸ್ಯ ಸೋಮಸ್ಯ । ನೃಚಕ್ಷಸೋ ನೃಣಾಂ ಯಜಮಾನಾನಾಂ ದ್ರಷ್ಟುಃ । ಸ ಚರ್ತೇನ ಯಜ್ಞೇನ ದೇವಾನ್ಸೋಮಭಾಜ ಇಂದ್ರಾದೀನ್ಹವತೇ । ಕುತ್ರ । ದಿವಸ್ಪರಿ ದ್ಯುಲೋಕಸ್ಯೋಪರಿ ವರ್ತಮಾನಾನ್ । ಬೃಹಸ್ಪತೇರ್ಮಂತ್ರಪಾಲಕಸ್ಯ ಸ್ತೋತೃೂ ರವಥೇನ ಶಬ್ದೇನ ಸ್ತೋತ್ರೇಣ ವಿ ದಿದ್ಯುತೇ । ವಿದ್ಯೋತತೇ । ಸಮುದ್ರಾಸೋ ನ ಸಮುದ್ರಾ ಇವ ಪೃಥಿವೀಂ ಸವನಾನಿ ಯಜ್ಞಸಂಬಂಧೀನಿ ವಿವ್ಯಚುಃ । ವ್ಯಾಪ್ನುವಂತಿ ॥

|| ಪ್ರತಿಪದಾರ್ಥ ||

**ನೃಚಕ್ಷಸಃ**—ಮಾನವರನ್ನು ವೀಕ್ಷಿಸಬಲ್ಲ । **ಸೋಮಸ್ಯ**—ಸೋಮನ । **ಧಾರಾ**—ಪ್ರವಾಹವು । **ಪವತೇ**—ಹರಿಯುತ್ತದೆ । **ದಿವಸ್ಪರಿ**—ದೇವಲೋಕದಲ್ಲಿರುವ । **ದೇವಾನ್**—ಇಂದ್ರಾದಿದೇವತೆಗಳನ್ನು ।

**ಋತೇನ**—ಯಜ್ಞದ ಮೂಲಕ । **ಹವತೇ**—ಸೋಮನು ಕರೆಯುತ್ತಾನೆ । **ಬೃಹಸ್ಪತೇಃ**—ಸ್ತುತಿಕರ್ತನ । **ರವಥೇನ**—ಶಬ್ದಕಾರಕವಾದ ಸ್ತುತಿಯಿಂದ । **ವಿ ದಿದ್ಯುತೇ**—ಪ್ರಕಾಶಿಸುತ್ತಾನೆ । **ಸಮುದ್ರಾಸೋ ನ**—ಸಮುದ್ರಗಳು ಪೃಥಿವಿಯನ್ನಾವರಿಸಿರುವಂತೆ । **ಸವನಾನಿ**—ಯಜ್ಞಸಂಬಂಧವಾದ ಸೋಮರಸಗಳು । **ವಿವ್ಯಚುಃ**—ವ್ಯಾಪಿಸುತ್ತವೆ.

॥ ಭಾವಾರ್ಥ ॥

ಮಾನವರನ್ನು ವೀಕ್ಷಿಸಬಲ್ಲ ಸೋಮನ ಪ್ರವಾಹವು ಹರಿಯುತ್ತದೆ ದೇವಲೋಕದಲ್ಲಿರುವ ಇಂದ್ರಾದಿ ದೇವತೆಗಳನ್ನು ಯಜ್ಞದ ಮೂಲಕ ಸೋಮನು ಕರೆಯುತ್ತಾನೆ. ಸ್ತುತಿಕರ್ತನ ಶಬ್ದಕಾರಕವಾದ ಸ್ತುತಿಯಿಂದ ಪ್ರಕಾಶಿಸುತ್ತಾನೆ. ಸಮುದ್ರಗಳು ಪೃಥ್ವಿಯನ್ನು ಆವರಿಸುವಂತೆ ಯಜ್ಞಸಂಬಂಧವಾದ ಸೋಮರಸಗಳು ಸರ್ವತ್ರ ವ್ಯಾಪಿಸುತ್ತವೆ.

English Translation

The stream of the Soma, the contemplator of man, flows forth ; it invites by the sacrifice the gods (who dwell) above the sky ; it shines forth at the voice of the sacrificer ; the libations cover (the earth) like rivers.

॥ ಸಂಹಿತಾಪಾಠಃ ॥

ಯಂ ತ್ವಾ ವಾಜಿನ್ನಘ್ನ್ಯಾ ಅಭ್ಯನೂಷತಾಯೋಹತಂ ಯೋನಿಮಾ
ರೋಹಸಿ ದ್ಯುಮಾನ್ ।
ಮಘೋನಾಮಾಯುಃ ಪ್ರತಿರನ್ಮಹಿ ಶ್ರವ ಇಂದ್ರಾಯ ಸೋಮ ಪವಸೇ
ವೃಷಾಮದಃ ॥ ೨ ॥

॥ ಪದಪಾಠಃ ॥

ಯಂ । ತ್ವಾ । ವಾಜಿನ್ । ಅಘ್ನ್ಯಾಃ । ಅಭಿ । ಅನೂಷತ । ಅಯಃऽಹತಂ । ಯೋನಿಂ । ಆ । ರೋಹಸಿ । ದ್ಯುऽಮಾನ್ ।
ಮಘೋನಾಂ । ಆಯುಃ । ಪ್ರऽತಿರನ್ । ಮಹಿ । ಶ್ರವಃ । ಇಂದ್ರಾಯ । ಸೋಮ । ಪವಸೇ । ವೃಷಾ । ಮದಃ ॥ ೨ ॥

| ಸಾಯಣಭಾಷ್ಯಂ ||

**ಹೇ ವಾಜಿನ್ನನ್ನವನ್ ಸೋಮ ಯಂ ತ್ವಾ ತ್ವಾಮಘ್ನ್ಯಾ ಅಹನನೀಯಾ ಗಾವೋಽಭ್ಯನೂಷತ ಅಭಿಷ್ಟುವಂತಿ । ಆಶಿರಾರ್ಥಂ ಸ್ಥಿತಾಃ ಶಬ್ದಾಯಂತ ಇತ್ಯರ್ಥಃ । ಸ ತ್ವಮಯೋಹತಂ । ಅಯ ಇತಿ ಹಿರಣ್ಯನಾಮ । ತೇನ ತದ್ವಾನ್ಪಾಣಿರ್ಲಕ್ಷ್ಯತೇ । ಹಿರಣ್ಮಯೇನ ಪಾಣಿನಾ ಹತಂ ಸಂಸ್ಕೃತಂ ಯೋನಿಂ ಸ್ಥಾನಮಾ ರೋಹಸಿ । ದ್ಯುಮಾನ್ದೀಪ್ತಃ ಸನ್ । ಅಭಿ ಯೋನಿಮಯೋಹತಂ ।· ಋ. ೯-೧-೨ । ಇತಿ ಹ್ಯುಕ್ತಂ । ಕಿಂಚ ಹೇ ಸೋಮ ಮಘೋನಾಂ ಹವಿಷ್ಮತಾಂ ಯಜಮಾನಾನಾಮಾಯುರಾಯುಷ್ಯಂ ಮಹಿ ಮಹಚ್ಛ್ರವೋಽನ್ನಂ ಯಶೋ ವಾ ಪ್ರತಿರನ್ವರ್ಧಯನ್ನಿಂದ್ರಾಯೇಂದ್ರಾರ್ಥಂ ಪವಸೇ । ಪೂಯಸೇ । ವೃಷಾ ವರ್ಷಕೋ ಮದೋ ಮದಕರಶ್ಚ ತ್ವಂ ||**

|| ಪ್ರತಿಪದಾರ್ಥ ||

**ವಾಜಿನ್**—ಅನ್ನಯುಕ್ತನಾದ ಎಲೈ ಸೋಮದೇವನೇ । **ಯಂ ತ್ವಾ**—ಯಾವ ನಿನ್ನನ್ನು । **ಅಘ್ನ್ಯಾಃ**—ಗೋವುಗಳು । **ಅಭ್ಯನೂಷತ**—ಪ್ರಶಂಸಿಸುತ್ತವೆಯೋ ಅಂತಹ ನೀನು । **ಅಯೋ ಹತಂ**—ಸುವರ್ಣಮಯವಾದ ಹಸ್ತದಿಂದ ಸಂಸ್ಕೃತವಾದ । **ಯೋನಿಂ**—ಸ್ಥಾನವನ್ನು । **ಆರೋಹಸಿ**—ಹತ್ತುತ್ತೀಯೆ । **ಸೋಮ**—ಎಲೈ ಸೋಮದೇವನೇ । **ವೃಷಾ**—ವೃಷ್ಟಿಕಾರಕನೂ । **ಮದಃ**—ಹರ್ಷಕಾರಕನೂ ಆದ ನೀನು । **ದ್ಯುಮಾನ್**—ಕಾಂತಿಯುಕ್ತನಾಗಿ । **ಮಘೋನಾಂ**—ಹವಿರ್ಯುಕ್ತರಾದ ಯಜಮಾನರ । **ಆಯುಃ**—ಆಯುಸ್ಸನ್ನೂ । **ಮಹಿ**—ಮಹತ್ತಾದ । **ಶ್ರವಃ**—ಅನ್ನವನ್ನೂ । **ಪ್ರತಿರನ್**- ವೃದ್ಧಿಪಡಿಸುತ್ತ । **ಇಂದ್ರಾಯ**—ಇಂದ್ರಾರ್ಥವಾಗಿ । **ಪವಸೇ**—ಪ್ರವಹಿಸುತ್ತೀಯೆ.

|| ಭಾವಾರ್ಥ ||

ಅನ್ನಯುಕ್ತನಾದ ಎಲೈ ಸೋಮದೇವನೇ, ಯಾವ ನಿನ್ನನ್ನು ಗೋವುಗಳು ಪ್ರಶಂಸಿಸುತ್ತವೆಯೋ ಅಂತಹ ನೀನು ಸುವರ್ಣಮಯವಾದ ಹಸ್ತದಿಂದ ಸುಸಂಸ್ಕೃತವಾದ ಸ್ಥಾನವನ್ನು ಹತ್ತುತ್ತೀಯೆ. ಎಲೈ ಸೋಮದೇವನೇ, ವೃಷ್ಟಿಕಾರಕನೂ, ಹರ್ಷಕಾರಕನೂ ಆದ ನೀನು ಕಾಂತಿಯುಕ್ತನಾಗಿ, ಹವಿರ್ಯುಕ್ತರಾದ ಯಜಮಾನರ ಆಯುಸ್ಸನ್ನೂ, ಮಹತ್ತಾದ ಅನ್ನವನ್ನೂ ವೃದ್ಧಿಪಡಿಸುತ್ತ ಇಂದ್ರಾರ್ಥವಾಗಿ ಪ್ರವಹಿಸುತ್ತೀಯೆ.

## English Translation.

Giver of food, whom the cows praise, you mount, bright-shining, your station fashioned by golden hands; you, Soma, the health of the worshippers, increasing (their) abundant food flow for Indra, the showerer (of benefits), the giver of exhilaration.

|| ಸಂಹಿತಾಪಾಠಃ ||

ಐಂದ್ರಸ್ಯ ಕುಕ್ಷಾ ಪವತೇ ಮದಿಂತಮ ಊರ್ಜಂ ವಸಾನಃ ಶ್ರವಸೇ ಸುಮಂ-
ಗಲಃ ।
ಪ್ರತ್ಯಙ್ ಸ ವಿಶ್ವಾ ಭುವನಾಭಿ ಪಪ್ರಥೇ ಕ್ರೀಳನ್ಹರಿರತ್ಯಃ ಸ್ಯಂದತೇ ವೃಷಾ ||೩||

|| ಪದಪಾಠಃ ||

ಆ । ಇಂದ್ರಸ್ಯ । ಕುಕ್ಷಾ । ಪವತೇ । ಮದಿನ್ಽತಮಃ । ಊರ್ಜಂ । ವಸಾನಃ । ಶ್ರವಸೇ । ಸುಽಮಂಗಲಃ ।
ಪ್ರತ್ಯಙ್ । ಸಃ । ವಿಶ್ವಾ । ಭುವನಾ । ಅಭಿ । ಪಪ್ರಥೇ । ಕ್ರೀಳನ್ । ಹರಿಃ । ಅತ್ಯಃ । ಸ್ಯಂದತೇ ।
ವೃಷಾ ॥ ೩ ॥

|| ಸಾಯಣಭಾಷ್ಯಂ ||

ಅಯಂ ಸೋಮ ಇಂದ್ರಸ್ಯ ಕುಕ್ಷಾ ಕುಕ್ಷಾವಾ ಪವತೇ । ಆಸಿಚ್ಯತೇ । ಕಿಮರ್ಥಂ । ಶ್ರವಸೇ ತಸ್ಯಾನ್ನಾಯ ಯಷ್ಟುರ್ವಾನ್ನಸಿದ್ಧ್ಯರ್ಥಂ । ಸೋಮೋ ವಿಶೇಷ್ಯತೇ । ಮದಿಂತಮೋ ಮಾದಯಿತೃತಮ ಊರ್ಜಂ ವಸಾನೋ ಬಲಕರಂ ರಸಮಾಚ್ಛಾದಯನ್ । ಅಪೋ ವಸಾನಃ । ಋ. ೯-೭೮-೧ । ಇತಿ ಹ್ಯುಕ್ತಂ । ಸುಮಂಗಲಃ ಶೋಭನಮಂಗಲಪ್ರದಃ । ಸ ಸೋಮಃ ಪ್ರತ್ಯಙ್ ವಿಶ್ವಾ ಭುವನಾ ಸರ್ವಾಣಿ ಭೂತಜಾತಾನ್ಯಭಿ ಪಪ್ರಥೇ । ಅಭಿಪ್ರಥಯತಿ । ದಿವ್ಯುದಿತಃ ಸನ್ ಕ್ರೀಳನ್ ವೇದ್ಯಾಂ ಸ ಕ್ರೀಡಮಾನೋ ಹರಿರ್ಹರಿತವರ್ಣೋಽತ್ಯೋಽಕೆನಕುಶಲೋ ವೃಷಾ ವರ್ಷಕಃ ಸ್ಯಂದತೇ ರಸರೂಪೇಣ ॥

|| ಪ್ರತಿಪದಾರ್ಥ ||

**ಮದಿಂತಮಃ**—ಅತಿಶಯವಾದ ಹರ್ಷಕಾರಕನೂ । **ಊರ್ಜಂ**—ಶಕ್ತಿಯನ್ನು । **ವಸಾನಃ**—ಹೊದ್ದಿರುವವನೂ । **ಸುಮಂಗಲಃ**—ಮಂಗಳಕಾರಕನೂ ಆದ ಸೋಮನು । **ಇಂದ್ರಸ್ಯ**—ಇಂದ್ರನ । **ಕುಕ್ಷಾ**—ಉದರದಲ್ಲಿ । **ಶ್ರವಸೇ**—ಅನ್ನಲಾಭಾರ್ಥವಾಗಿ । **ಆ ಪವತೇ**—ಹರಿಯುತ್ತಾನೆ । **ಸಃ**—ಅದೇ ಸೋಮನು । **ಪ್ರತ್ಯಙ್**—ಸರ್ವತ್ರ । **ವಿಶ್ವಾ ಭುವನಾ**—ಸಕಲ ಲೋಕಗಳಿಗೂ ಅಭಿಮುಖನಾಗಿ । **ಅಭಿ ಪಪ್ರಥೇ**—ಸಂಚರಿಸುತ್ತಾನೆ । **ಹರಿಃ**—ಪಚ್ಚೆವರ್ಣವುಳ್ಳವನೂ । **ಅತ್ಯಃ**—ಸಂಚಾರಶೀಲನೂ । **ವೃಷಾ**— ಇಷ್ಟಾರ್ಥಪ್ರದನೂ ಆದ ಸೋಮನು । **ಕ್ರೀಳನ್**—ಆಟವಾಡುತ್ತ । **ಸ್ಯಂದತೇ**—ಪ್ರವಹಿಸುತ್ತಾನೆ.

|| ಭಾವಾರ್ಥ||

ಅತಿಶಯವಾದ ಹರ್ಷಕಾರಕನೂ, ಶಕ್ತಿಯುತನೂ, ಮಂಗಳಕಾರಕನೂ ಆದ ಸೋಮನು ಇಂದ್ರನ ಉದರದಲ್ಲಿ ಅನ್ನಲಾಭಾರ್ಥವಾಗಿ ಪ್ರವೇಶಿಸುತ್ತಾನೆ. ಸಕಲ ಲೋಕಗಳಲ್ಲಿಯೂ ಸ್ವತಂತ್ರವಾಗಿ ಪ್ರವಹಿಸುತ್ತಾನೆ. ಪಚ್ಚೆವರ್ಣವುಳ್ಳವನೂ, ಸಂಚಾರಶೀಲನೂ, ಇಷ್ಟಾರ್ಥಪ್ರದನೂ ಆದ ಸೋಮನು ಆಟವಾಡುತ್ತ ಪ್ರವಹಿಸುತ್ತಾನೆ.

English Translation

The (Soma) flows to Indra's belly for (his) food, giving extreme exhilaration, clothed with vigour, giving good fortune he spreads forth towards all beings; sporting (on the altar), green-tinted, swift-moving, the showerer of benefits, he flows forth.

॥ ಸಂಹಿತಾಪಾಠಃ ॥

ತಂ ತ್ವಾ ದೇವೇಭ್ಯೋ ಮಧುಮತ್ತಮಂ ನರಃ ಸಹಸ್ರಧಾರಂ ದುಹತೇ ದಶ
ಕ್ಷಿಪಃ ।
ನೃಭಿಃ ಸೋಮ ಪ್ರಚ್ಯುತೋ ಗ್ರಾವಭಿಃ ಸುತೋ ವಿಶ್ವಾನ್ದೇವಾಁ ಆ ಪವಸ್ವಾ
ಸಹಸ್ರಜಿತ್ ॥ ೪ ॥

॥ ಪದಪಾಠಃ ॥

ತಂ । ತ್ವಾ । ದೇವೇಭ್ಯಃ । ಮಧುಮತ್ಽತಮಂ । ನರಃ । ಸಹಸ್ರಽಧಾರಂ । ದುಹತೇ । ದಶ । ಕ್ಷಿಪಃ ।
ನೃಽಭಿಃ । ಸೋಮ । ಪ್ರಽಚ್ಯುತಃ । ಗ್ರಾವಽಭಿಃ । ಸುತಃ । ವಿಶ್ವಾನ್ । ದೇವಾನ್ । ಆ । ಪವಸ್ವ । ಸಹಸ್ರ-
ಽಜಿತ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ತಂ ತಾದೃಶಂ ತ್ವಾ ತ್ವಾಂ ದೇವೇಭ್ಯ ಇಂದ್ರಾದ್ಯರ್ಥಂ ಮಧುಮತ್ತಮಮತಿಶಯೇನ ಮಧುಮಂತಂ ಸಹಸ್ರಧಾರಂ ಬಹುಧಾರಾಯುಕ್ತಂ ದುಹತೇ । ದುಹಂತಿ । ಕೇ । ನರೋ ನೇತಾರ ಋತ್ವಿಜೋ ದಶ ಕ್ಷಿಪಸ್ತೇಷಾಂ ದಶಸಂಖ್ಯಾಕಾ ಅಂಗುಲಯಶ್ಚ । ಹೇ ಸೋಮ ನೃಭಿರ್ಮನುಷ್ಯೈಃ ಪ್ರಚ್ಯುತೋ ಗ್ರಾವಭಿಃ ಸುತೋಽಭಿಷುತಸ್ತ್ವಂ ಸಹಸ್ರಜಿತ್ ಸಹಸ್ರಸಂಖ್ಯಾಕಧನಸ್ಯ ಜೇತಾ ಸನ್ ವಿಶ್ವಾನ್ದೇವಾನಾ ಪವಸ್ವ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ನರಃ— ಋತ್ವಿಕ್ಕುಗಳೂ । ದಶ ಕ್ಷಿಪಃ— ಅವರ ಹತ್ತು ಬೆರಳುಗಳೂ । ಸಹಸ್ರಧಾರಂ— ಅನೇಕಧಾರೆಗಳಿಂದ ಕೂಡಿದವನೂ । ಮಧುಮತ್ತಮಂ— ಮಾಧುರ್ಯೋಪೇತನೂ । ತಂ ತ್ವಾ— ಪ್ರಸಿದ್ಧನೂ ಆದ ನಿನ್ನನ್ನು । ದೇವೇಭ್ಯಃ— ಇಂದ್ರಾದಿದೇವತೆಗಳಿಗಾಗಿ । ದುಹತೇ— ಕರೆಯುತ್ತಾರೆ । ಸೋಮ— ಎಲೈ ಸೋಮನೇ । ನೃಭಿಃ— ಮಾನವರಿಂದ । ಪ್ರಚ್ಯುತಃ— ಪ್ರೇರಿತನೂ । ಗ್ರಾವಭಿಃ— ಹಿಂಡುವ

ಕಲ್ಲುಗಳಿಂದ | **ಸುತಃ**—ಹಿಂಡಲ್ಪಟ್ಟವನೂ ಆಗಿ | **ಸಹಸ್ರಜಿತ್**—ಅಪರಿಮಿತವಾದ ಧನಗಳನ್ನು ಹೊಂದುತ್ತ | **ವಿಶ್ವಾನ್ ದೇವಾನ್**—ಸಕಲ ದೇವತೆಗಳಿಗೂ ಅಭಿಮುಖನಾಗಿ | **ಆ ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಋತ್ವಿಕ್ಕುಗಳೂ, ಅವರ ಹತ್ತು ಅಂಗುಲಿಗಳೂ ಸಹ ಅನೇಕ ಧಾರಾಯುತನೂ, ಮಾಧುರ್ಯೋಪೇತನೂ ಆದ ನಿನ್ನನ್ನು ಇಂದ್ರಾದಿ ದೇವತೆಗಳಿಗಾಗಿ ಕರೆಯುತ್ತಾರೆ. ಮಾನವರಿಂದ ಪ್ರೇರಿತನೂ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟವನೂ ಆಗಿ ಅಪರಿಮಿತವಾದ ಧನಗಳನ್ನು ಹೊಂದುತ್ತ ಸಕಲ ದೇವತೆಗಳಿಗೂ ಅಭಿಮುಖನಾಗಿ ಪ್ರವಹಿಸು.

## English Translation.

The priests. and their ten fingers, milk you forth for the gods, most sweetflavoured, flowing in a thousand streams ; effused by the men, expressed with the stones, do you, Soma; the winner of thousand fold wealth, flow to all the gods.

॥ ಸಂಹಿತಾಪಾಠಃ ॥

ತಂ ತ್ವಾ ಹಸ್ತಿನೋ ಮಧುಮಂತಮದ್ರಿಭಿರ್ದುಹಂತ್ಯಪ್ಸು ವೃಷಭಂ ದಶ
ಕ್ಷಿಪಃ ।
ಇಂದ್ರಂ ಸೋಮ ಮಾದಯನ್ದೈವ್ಯಂ ಜನಂ ಸಿಂಧೋರಿವೋರ್ಮಿಃ ಪವ-
ಮಾನೋ ಅರ್ಷಸಿ ॥ ೫ ॥

॥ ಪದಪಾಠಃ ॥

ತ್ವಂ । ತ್ವಾ । ಹಸ್ತಿನಃ । ಮಧುऽಮಂತಂ । ಅದ್ರಿऽಭಿಃ । ದುಹಂತಿ । ಅಪ್ऽಸು । ವೃಷಭಂ । ದಶ । ಕ್ಷಿಪಃ ।
ಇಂದ್ರಂ । ಸೋಮ । ಮಾದಯನ್ । ದೈವ್ಯಂ । ಜನಂ । ಸಿಂಧೋಃऽಇವ । ಊರ್ಮಿಃ । ಪವಮಾನಃ ।
ಅರ್ಷಸಿ ॥ ೫ ॥

॥ ಸಾಯಣಭಾಷ್ಯಂ ॥

ತಂ ತಾದೃಶಂ ಮಧುಮಂತಂ ಮಧುರರಸಂ ವೃಷಭಂ ಕಾಮಾನಾಂ ವರ್ಷಕಂ ತ್ವಾ ತ್ವಾಂ ಹಸ್ತಿನಃ ಸುಹಸ್ತಸ್ಯ ದಶ ಕ್ಷಿಪೋऽಂಗುಲಯೋऽದ್ರಿಭಿರ್ಗ್ರಾವಭಿರಪ್ಸು ದುಹಂತಿ । ತಾದೃಶ ಹೇ ಸೋಮ ಇಂದ್ರಮನ್ಯಂ ದೈವ್ಯಂ ಜನಂ ದೇವಸಂಬಂಧಿನಂ ಸಂಘಂ ಮಾದಯನ್ ಸಿಂಧೋರೂರ್ಮಿರಿವ ಪವಮಾನಃ ಪೂಯಮಾನಃ ಸನ್ನರ್ಷಸಿ । ಗಚ್ಛಸಿ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಮಧುಮಂತಂ**—ಮಾಧುರ್ಯಯುಕ್ತನೂ | **ವೃಷಭಂ**—ಕಾಮವರ್ಷಕನೂ ಆದ | **ತಂ ತ್ವಾ**—ನಿನ್ನನ್ನು | **ಹಸ್ತಿನಃ**—ಒಳ್ಳೆಯ ಹಸ್ತವುಳ್ಳ | **ದಶ ಕ್ಷಿಪಃ**—ಹತ್ತು ಬೆರಳುಗಳೂ | **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ | **ಅಪ್ಸು**—ಉದಕಗಳಲ್ಲಿ | **ದುಹಂತಿ**—ಹಿಂಡುತ್ತವೆ | **ಸಿಂಧೋರಿವ**—(ಎಲೈ ಸೋಮನೇ) ನದಿಯ | **ಊರ್ಮಿಃ**—ಅಲೆಗಳಂತೆ | **ಪವಮಾನಃ**—ಪ್ರವಹಿಸುವ ನೀನು | **ಇಂದ್ರಂ**—ಇಂದ್ರನನ್ನೂ | **ದೈವ್ಯಂ ಜನಂ**—ಇತರ ದೇವಜನರನ್ನೂ | **ಮಾದಯನ್**—ಹರ್ಷಪಡಿಸುತ್ತ | **ಅರ್ಷಸಿ**—ಪ್ರವಹಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮಾಧುರ್ಯಯುಕ್ತನೂ, ಕಾಮವರ್ಷಕನೂ ಆದ ನಿನ್ನನ್ನು ಉತ್ತಮವಾದ ಹಸ್ತವುಳ್ಳ ಹತ್ತು ಬೆರಳುಗಳೂ ಹಿಂಡುವ ಕಲ್ಲುಗಳಿಂದ ಉದಕಗಳನ್ನು ಹಿಂಡುತ್ತವೆ. ಎಲೈ ಸೋಮನೇ, ನದಿಯ ಅಲೆಗಳಂತೆ ಪ್ರವಹಿಸುವ ನೀನು ಇಂದ್ರನನ್ನೂ, ಇತರ ದೇವಜನರನ್ನೂ ಹರ್ಷಪಡಿಸುತ್ತ ಪ್ರವಹಿಸುತ್ತೀಯೆ.

English Translation.

The ten fingers of the skilful (one) milk (you) forth with the stones into the water most sweet-flavoured, the showerer (of benefits) ; Soma, exhilarating Indra (and) the celestial people you rush forth, when filtered, like the wave of a river.

## ಎಂಭತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

**ಪ್ರ ಸೋಮಸ್ಯೇತಿ ಪಂಚರ್ಚಂ ಚತುರ್ದಶಂ ಸೂಕ್ತಂ | ಋಷಿದೇವತೇ ಪೂರ್ವವತ್ | ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ | ಪ್ರ ಸೋಮಸ್ಯೇತ್ಯನುಕ್ರಾಂತಂ || ಗತೋ ವಿನಿಯೋಗಃ ||**

ಅನುವಾದವು—**ಪ್ರ ಸೋಮಸ್ಯ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪ್ರ ಸೋಮಸ್ಯ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೮೧

ಮಂಡಲ-೯ || ಅನುವಾಕ-೪ || ಸೂಕ್ತ-೮೧ ||
ಅಷ್ಟಕ-೭ || ಅಧ್ಯಾಯ-೩ || ವರ್ಗ-೬ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
ಋಷಿಃ—ವಸುರ್ಭಾರದ್ವಾಜಃ ||
ದೇವತಾ—ಪವಮಾನಃ ಸೋಮಃ ||
ಛಂದಃ—೧—೪ ಜಗತೀ | ೫. ತ್ರಿಷ್ಟುಪ್

|| ಸಂಹಿತಾಪಾಠಃ ||

ಪ್ರ ಸೋಮಸ್ಯ ಪವಮಾನಸ್ಯೋರ್ಮಯ ಇಂದ್ರಸ್ಯ ಯಂತಿ ಜಠರಂ ಸುಪೇ-
ಶಸಃ |
ದಧ್ನಾ ಯದೀಮುನ್ನೀತಾ ಯಶಸಾ ಗವಾಂ ದಾನಾಯ ಶೂರಮುದ-
ಮಂದಿಷುಃ ಸುತಾಃ || ೧ ||

|| ಪದಪಾಠಃ ||

ಪ್ರ | ಸೋಮಸ್ಯ | ಪವಮಾನಸ್ಯ | ಊರ್ಮಯಃ | ಇಂದ್ರಸ್ಯ | ಯಂತಿ | ಜಠರಂ | ಸುऽಪೇಶಸಃ |
ದಧ್ನಾ | ಯತ್ | ಈಂ | ಉತ್ऽನೀತಾಃ | ಯಶಸಾ | ಗವಾಂ | ದಾನಾಯ | ಶೂರಂ | ಉತ್ऽಅಮಂ-
ದಿಷುಃ | ಸುತಾಃ || ೧ ||

|| ಸಾಯಣಭಾಷ್ಯಂ ||

ಪವಮಾನಸ್ಯ ಪೂಯಮಾನಸ್ಯೋರ್ಮಯೋ ರಸಪ್ರವಾಹಾ ಇಂದ್ರಸ್ಯ ಜಠರಂ ಪ್ರ ಯಂತಿ | ಪ್ರಗಚ್ಛಂತಿ | ಸುಪೇಶಸಃ ಸುರೂಪಾ ಊರ್ಮಯ ಇತಿ ಸಂಬಂಧಃ | ಯದ್ಯದೇನೋತೇ ಸುತಾ ಅಭಿಷುತಾಃ ಸೋಮಾ ಗವಾಂ ಯಶಸಾ ಬಲಭೂತೇನ ದಧ್ನಾ ಸಹೋನ್ನೀತಾಃ ಸಂತೋ ದಾನಾಯ ಯಜಮಾನವಿಷಯಾಭಿಮತದಾನಾಯ ಶೂರಂ ವಿಕ್ರಾಂತಮಿಂದ್ರಮುದಮಂದಿಷುಃ ಉನ್ಮಾದಯಂತಿ ತದಾ ಜಠರಂ ಯಂತಿ ||

|| ಪ್ರತಿಪದಾರ್ಥ ||

**ಯತ್**—ಯಾವಾಗ | **ಈಂ**—ಈ ಸೋಮರಸಗಳು | **ಸುತಾಃ**—ಹಿಂಡಲ್ಪಟ್ಟು | **ಗವಾಂ**—ಗೋವುಗಳ | **ಯಶಸಾ**—ಬಲಯುತವಾದ | **ದಧ್ನಾ**—ದಧಿಯೊಂದಿಗೆ | **ಉನ್ನೀತಾಃ**—ಸೇರಿಸಲ್ಪಟ್ಟು | **ದಾನಾಯ**—ಯಜಮಾನನಿಗೆ ಇಷ್ಟಾರ್ಥಪ್ರದಾನಕ್ಕಾಗಿ | **ಶೂರಂ**—ಪರಾಕ್ರಮಿಯಾದ ಇಂದ್ರನನ್ನು | **ಉದಮಂದಿಷುಃ**—ಹರ್ಷಗೊಳಿಸುವುವೋ ಆಗ | **ಪವಮಾನಸ್ಯ**—ಶುದ್ಧಿಕಾರಕನಾದ | **ಸೋಮಸ್ಯ**—ಸೋಮದೇವನ | **ಸುಪೇಶಸಃ**—ಸುಂದರವಾದ ರೂಪವುಳ್ಳ | **ಊರ್ಮಯಃ**—ಅಲೆಗಳಂತಿರುವ ರಸಗಳು | **ಇಂದ್ರಸ್ಯ**—ಇಂದ್ರನ | **ಜಠರಂ**—ಜಠರವನ್ನು | **ಪ್ರ ಯಂತಿ**—ಪ್ರವೇಶಿಸುತ್ತವೆ.

|| ಭಾವಾರ್ಥ ||

ಈ ಸೋಮರಸಗಳು ಹಿಂಡಲ್ಪಟ್ಟು ಗೋವುಗಳ ಶಕ್ತಿಯುತವಾದ ದಧಿಯೊಂದಿಗೆ ಸೇರಿಸಲ್ಪಟ್ಟು ಯಜಮಾನನಿಗೆ ಇಷ್ಟಾರ್ಥಪ್ರದಾನಕ್ಕಾಗಿ ಯಾವಾಗ ಇಂದ್ರನನ್ನು ಹರ್ಷಗೊಳಿಸುವುವೋ ಆಗ ಶುದ್ಧಿಕಾರಕನಾದ ಸೋಮದೇವನ ಸುಂದರವಾದ ರೂಪವುಳ್ಳವೂ. ಅಲೆಗಳಂತಿರುವುವೂ ಆದ ರಸಗಳು ಇಂದ್ರನ ಜಠರವನ್ನು ಪ್ರವೇಶಿಸುತ್ತವೆ.

## English Translation.

The graceful waves of the purified Soma flow into Indra's belly when being effused and drawn forth (together) with the potent curds of the cows, they excite the hero to bestow (gifts to the worshipper).

॥ ಸಂಹಿತಾಪಾಠಃ ॥

ಅಚ್ಛಾ ಹಿ ಸೋಮಃ ಕಲಶಾँ ಅಸಿಷ್ಯದದತ್ಯೋ ನ ವೋಳ್ಹಾ ರಘುವರ್ತನಿ-
ರ್ವೃಷಾ ।
ಅಥಾ ದೇವಾನಾಮುಭಯಸ್ಯ ಜನ್ಮನೋ ವಿದ್ವಾँ ಅಶ್ನೋತ್ಯಮುತ ಇತಶ್ಚ
ಯತ್ ॥ ೨ ॥

॥ ಪದಪಾಠಃ ॥

ಅಚ್ಛ । ಹಿ । ಸೋಮಃ । ಕಲಶಾನ್ । ಅಸಿಸ್ಯದತ್ । ಅತ್ಯಃ । ನ । ವೋಳ್ಹಾ । ರಘುऽವರ್ತನಿಃ । ವೃಷಾ ।
ಅಥ । ದೇವಾನಾಂ । ಉಭಯಸ್ಯ । ಜನ್ಮನಃ । ವಿದ್ವಾನ್ । ಅಶ್ನೋತಿ । ಅಮುತಃ । ಇತಃ । ಚ ।
ಯತ್ ॥ ೨ ॥

॥ ಸಾಯಣಭಾಷ್ಯಂ ॥

ಅಸೌ ಸೋಮಃ ಕಲಶಾನಚ್ಛಾಭಿಮುಖಮಸಿಸ್ಯದತ್ । ಸ್ಯಂದತೇ । ಕ ಇವ । ಅತ್ಯೋ ನ ವೋಳ್ಹಾ ರಥಸ್ಯ ವಾಹಕೋऽಶ್ವ ಇವ ಯಥಾ ಸ್ವಗಂತವ್ಯಮಭಿಗಚ್ಛತಿ ತದ್ವತ್ ॥ ಯದ್ವಾ । ಅಯಮುತ್ತರತ್ರ ದೃಷ್ಟಾಂತಃ । ವೋಳ್ಹಾಶ್ವ ಇವ ರಘುವರ್ತನಿರ್ಲಘುಗಮನೋ ವೃಷಾ ವರ್ಷಕಶ್ಚ । ಅಥಾಪಿ ಚ ದೇವಾನಾಂ ಸೋಮಸಜುಷಾಮುಭಯಸ್ಯೋಭಯವಿಧಂ ಜನ್ಮನೋ ಜಾತಂ ವಿದ್ವಾಞ್ಜಾನನ್ನಸಿಸ್ಯದತ್ಕಲಶಾನ್ । ಕಿಂ ತದುಭಯಂ ಜನ್ಮೇತಿ ಉಚ್ಯತೇ । ಯದ್ದೇವಜಾತಮಮುತೋ ದ್ಯುಲೋಕಾದಿತಶ್ಚಾಸ್ಮಾದ್ಭೂಲೋಕಾಚ್ಚಾಶ್ನೋತಿ ವ್ಯಾಪ್ನೋತಿ ಯಜ್ಞಂ । ತಸ್ಯೋಭಯಸ್ಯ ಜಾತಂ ವಿದ್ವಾನಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಅಮುತಃ**—ದ್ಯುಲೋಕದಿಂದಲೂ । **ಇತಶ್ಚ**—ಈ ಲೋಕದಿಂದಲೂ । **ಅಶ್ನೋತಿ**—ಯಾರುಯಜ್ಞಕ್ಕೆ ಬರುವರೋ ಅಂತಹ । **ಉಭಯಸ್ಯ**—ಎರಡು ವಿಧವಾದ । **ದೇವಾನಾಂ**—ದೇವತೆಗಳ । **ಜನ್ಮನಃ**—ಉತ್ಪತ್ತಿಕ್ರಮವನ್ನು । **ವಿದ್ವಾನ್**—ಅರಿತವನಾಗಿ । **ರಘುವರ್ತನಿಃ**—ಲಘುವಾದ ಗಮನವುಳ್ಳವನೂ । **ವೃಷಾ**—ವೃಷ್ಟಿದಾಯಕನೂ ಆದ । **ಸೋಮಃ**—ಸೋಮದೇವನು । **ಕಲಶಾನ್ ಅಚ್ಛ**—ದ್ರೋಣಕಲಶಗಳಿಗಭಿಮುಖವಾಗಿ । **ವೋಳ್ಹಾ**—ರಥವನ್ನು ವಹಿಸತಕ್ಕ । **ಅತ್ಯೋ ನ**—ಅಶ್ವದಂತೆ । **ಅಸಿಷ್ಯದತ್**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ದ್ಯುಲೋಕದಿಂದಲೂ, ಈ ಲೋಕದಿಂದಲೂ ಯಾರು ಯಜ್ಞಕ್ಕೆ ಬರುವರೋ ಅಂತಹ ಎರಡು ವಿಧವಾದ ದೇವತೆಗಳ ಉತ್ಪತ್ತಿ ಕ್ರಮವನ್ನು ಅರಿತವನಾಗಿ ಲಘುವಾದ ಗಮನವುಳ್ಳವನೂ, ವೃಷ್ಟಿದಾಯಕನೂ ಆದ ಸೋಮ ದೇವನು ದ್ರೋಣಕಲಶಗಳಿಗಭಿಮುಖವಾಗಿ ರಥವನ್ನು ವಹಿಸತಕ್ಕ ಅಶ್ವದಂತೆ ಪ್ರವಹಿಸುತ್ತಾನೆ.

## English Translation.

The Soma flows towards the pitchers, like a draught horse, lightly moving, the showerer; and knowing both races of gods—those who come to (the sacrifice) from the other world and those who (come) from this world.

॥ ಸಂಹಿತಾಪಾಠಃ ॥

ಆ ನಃ ಸೋಮ ಪವಮಾನಃ ಕಿರಾ ವಸ್ವಿಂದೋ ಭವ ಮಘವಾ ರಾಧಸೋ ಮಹಃ ।
ಶಿಕ್ಷಾ ವಯೋಧೋ ವಸವೇ ಸು ಚೇತುನಾ ಮಾ ನೋ ಗಯಮಾರೇ ಅಸ್ಮತ್ಪರಾ ಸಿಚಃ ॥ ೩ ॥

॥ ಪದಪಾಠಃ ॥

ಆ । ನಃ । ಸೋಮ । ಪವಮಾನಃ । ಕಿರ । ವಸು । ಇಂದೋ ಇತಿ । ಭವ । ಮಘಽವಾ । ರಾಧಸಃ । ಮಹಃ ।
ಶಿಕ್ಷ । ವಯಃಽಧಃ । ವಸವೇ । ಸು । ಚೇತುನಾ । ಮಾ । ನಃ । ಗಯಂ । ಆರೇ । ಅಸ್ಮತ್ । ಪರಾ । ಸಿಚಃ ॥ ೩ ॥

॥ ಸಾಯಣಭಾಷ್ಯಂ ॥

ಆ ಕಿರ ಸರ್ವತೋ ವಿಕ್ಷಿಪ ನೋಽಸ್ಮಭ್ಯಂ ಹೇ ಸೋಮ ಪವಮಾನಃ ಪೂಯಮಾನಸ್ತ್ವಂ । ಕಿಂ । ವಸು ವಾಸಕಂ ಧನಂ ಗವಾದಿರೂಪಂ । ಕಿಂಚೇಂದೋ ದೀಪ್ತ ಹೇ ಸೋಮ ಮಘವಾ ಧನವಾಂಸ್ತ್ವಂ ಮಹೋ ಮಹತೋ ರಾಧಸೋ ಧನಸ್ಯ ಭವ ದಾತೇತಿ ಶೇಷಃ । ತಥಾ ಹೇ ವಯೋಧೋಽನ್ನಸ್ಯ ಧಾತಃ ಸೋಮ ವಸವೇ ವಾಸಕಾಯ ಪರಿಚರತೇ ಮಹ್ಯಂ ಚೇತುನಾ ಪ್ರಕೃಷ್ಟೇನ ಪ್ರಜ್ಞಾನೇನ ಸು ಸುಖಂ ಕಲ್ಯಾಣಂ ಶಿಕ್ಷ । ದೇಹಿ । ನೋಽಸ್ಮಭ್ಯಂ ಪ್ರದೇಯಂ ಗಯಂ ಧನಮಸ್ಮದಾರೇಽಸ್ಮತ್ತೋ ದೂರಂ ಮಾ ಪರಾ ಸಿಚಃ । ಮಾ ಪ್ರೇರಯ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಪವಮಾನಃ**—ಶುದ್ಧಿಕಾರಕನಾದ ನೀನು | **ನಃ**—ನಮಗಾಗಿ | **ವಸು**—ಧನವನ್ನು | **ಆಕಿರ**—ಸರ್ವತ್ರ ಪ್ರಸರಿಸುವಂತೆ ದಾನಮಾಡು | **ಇಂದೋ**—ಎಲೈ ಸೋಮದೇವನೇ | **ಮಘವಾ**—ಧನವಂತನಾದ ನೀನು | **ಮಹಃ**—ಮಹತ್ತಾದ | **ರಾಧಸಃ**—ಧನಕ್ಕೆ | **ಭವ**—ದಾತನಾಗು | **ವಯೋಧಃ**—ಅನ್ನದಾತನಾದ ಎಲೈ ಸೋಮದೇವನೆ | **ವಸವೇ**—ನಿನ್ನನ್ನು ಸೇವಿಸುವ ನನಗೆ | **ಚೇತುನಾ**—ಅನುಗ್ರಹ ಬುದ್ಧಿಯಿಂದ | **ಸು**—ಸುಖವನ್ನು | **ಶಿಕ್ಷ**—ಉಂಟುಮಾಡು | **ನಃ**—ನಮಗೆ ಕೊಡಬೇಕಾದ | **ರಯಿಂ**—ಧನವನ್ನು | **ಅಸ್ಮತ್**—ನಮಗಿಂತಲೂ | **ಆರೇ**—ದೂರ ಪ್ರದೇಶಕ್ಕೆ | **ಮಾ ಪರಾ ಸಿಚಃ**—ಕಳುಹಬೇಡ.

|| ಭಾವಾರ್ಥ ||

ಎಲೈ ಸೋಮದೇವನೇ, ಶುದ್ಧಿಕಾರಕನಾದ ನೀನು ನಮಗಾಗಿ ಧನವನ್ನು ಸರ್ವತ್ರ ಪ್ರಸರಿಸುವಂತೆ ಮಾಡು. ಎಲೈ ಸೋಮದೇವನೇ, ಧನವಂತನಾದ ನೀನು ಮಹತ್ತಾದ ಧನಕ್ಕೆ ದಾತನಾಗು. ಅನ್ನದಾತನಾದ ಎಲೈ ಸೋಮ ದೇವನೇ, ನಿನ್ನನ್ನು ಸೇವಿಸುವ ನನಗೆ ಅನುಗ್ರಹಬುದ್ಧಿಯಿಂದ ಸುಖವನ್ನುಂಟುಮಾಡು. ನಮಗೆ ಕೊಡಬೇಕಾದ ಧನವನ್ನು ನಮಗಿಂತಲೂ ದೂರಪ್ರದೇಶಕ್ಕೆ ಕಳುಹಬೇಡ.

English Translation

Soma, when purified, strew upon us wealth ; Indu, who are possessed of affluence, be (the donor) of ample riches ; dispenser of food, grant to Vasu prosperity through (your) intelligence, scatter not our riches far from us.

|| ಸಂಹಿತಾಪಾಠಃ ||

ಆ ನಃ ಪೂಷಾ ಪವಮಾನಃ ಸುರಾತಯೋ ಮಿತ್ರೋ ಗಚ್ಛಂತು ವರುಣಃ ಸಜೋಷಸಃ |
ಬೃಹಸ್ಪತಿರ್ಮರುತೋ ವಾಯುರಶ್ವಿನಾ ತ್ವಷ್ಟಾ ಸವಿತಾ ಸುಯಮಾ ಸರಸ್ವತೀ ||೪||

|| ಪದಪಾಠಃ ||

ಆ | ನಃ | ಪೂಷಾ | ಪವಮಾನಃ | ಸುऽರಾತಯಃ | ಮಿತ್ರಃ | ಗಚ್ಛಂತು | ವರುಣಃ | ಸऽಜೋಷಸಃ | ಬೃಹಸ್ಪತಿಃ | ಮರುತಃ | ವಾಯುಃ | ಅಶ್ವಿನಾ | ತ್ವಷ್ಟಾ | ಸವಿತಾ | ಸುऽಯಮಾ | ಸರಸ್ವತೀ ||೪||

|| ಸಾಯಣಭಾಷ್ಯಂ ||

ಸುರಾತಯಃ ಸುದಾನಾಃ ಸಜೋಷಸಃ ಸಂಗತಾಃ ಪೂಷಾದಯೋ ದೇವಾ ಆ ಗಚ್ಛಂತು ನೋಽಸ್ಮಾನ್ ಅಸ್ಮಾಕಂ ಯಜ್ಞಂ ವಾ । ತಥಾ ಸುಯಮಾ । ಯಮ್ಯತೇ ನಿಯಮ್ಯತ ಇತಿ ಯಮೋ ವಿಗ್ರಹಃ । ಸುವಿಗ್ರಹಾ ಸರಸ್ವತೀ ಚಾಗಚ್ಛತು ||

|| ಪ್ರತಿಪದಾರ್ಥ ||

ಪೂಷಾ—ಪೂಷದೇವನೂ । ಪವಮಾನಃ - ಸೋಮದೇವನೂ । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಬೃಹಸ್ಪತಿಃ—ಬೃಹಸ್ಪತಿಯೂ । ಮರುತಃ—ಮರುತ್ತುಗಳೂ । ವಾಯುಃ—ವಾಯುವೂ । ಅಶ್ವಿನಾ—ಅಶ್ವಿನೀದೇವತೆಗಳೂ । ತ್ವಷ್ಟಾ—ತ್ವಷ್ಟೃವೂ । ಸವಿತಾ—ಸವಿತೃವೂ । ಸುಯಮಾ—ಸುಂದರವಾದ ದೇಹವುಳ್ಳ । ಸರಸ್ವತೀ—ಸರಸ್ವತೀದೇವಿಯೂ । ಸುರಾತಯಃ—ಉತ್ತಮವಾದ ದಾನವುಳ್ಳವರಾಗಿಯೂ । ಸಜೋಷಸಃ—ಒಂದುಗೂಡಿದವರಾಗಿಯೂ । ನಃ—ನಮ್ಮಲ್ಲಿಗೆ । ಆ ಗಚ್ಛಂತು—ಬರಲಿ.

|| ಭಾವಾರ್ಥ ||

ಪೂಷನೂ, ಸೋಮದೇವನೂ, ಮಿತ್ರನೂ, ವರುಣನೂ, ಬೃಹಸ್ಪತಿಯೂ, ಮರುತ್ತುಗಳೂ, ವಾಯುವೂ, ಅಶ್ವಿನೀದೇವತೆಗಳೂ, ತ್ವಷ್ಟೃವೂ, ಸವಿತೃವೂ, ಸುಂದರವಾದ ದೇಹವುಳ್ಳ ಸರಸ್ವತಿಯೂ, ಉತ್ತಮವಾದ ದಾನವುಳ್ಳವರಾಗಿಯೂ ಒಂದುಗೂಡಿದವರಾಗಿಯೂ ನಮ್ಮಲ್ಲಿಗೆ ಬರಲಿ.

English Translation

May the generous (gods) met together come to us—Pushan, Pavamana, Mitra. Varuna, Brihaspati, the Maruts, Vayu, the Ashwins, Twashtri, Savitri, and beautiful Saraswati.

|| ಸಂಹಿತಾಪಾಠಃ ||

ಉಭೇ ದ್ಯಾವಾಪೃಥಿವೀ ವಿಶ್ವಮಿನ್ವೇ ಅರ್ಯಮಾ ದೇವೋ ಅದಿತಿರ್ವಿಧಾತಾ।
ಭಗೋ ನೃಶಂಸ ಉರ್ವಂ೧ತರಿಕ್ಷಂ ವಿಶ್ವೇ ದೇವಾಃ ಪವಮಾನಂ ಜುಷಂತ ||೫||

|| ಪದಪಾಠಃ ||

ಉಭೇ ಇತಿ । ದ್ಯಾವಾಪೃಥಿವೀ ಇತಿ । ವಿಶ್ವಮಿನ್ವೇ ಇತಿ ವಿಶ್ವಂಽಇನ್ವೇ । ಅರ್ಯಮಾ । ದೇವಃ । ಅದಿತಿಃ । ವಿಽಧಾತಾ ।

ಭಗಃ । ನೃಽಶಂಸಃ । ಉರು । ಅಂತರಿಕ್ಷಂ । ವಿಶ್ವೇ । ದೇವಾಃ । ಪವಮಾನಂ । ಜುಷಂತ ||೫||

|| ಸಾಯಣಭಾಷ್ಯಂ ||

**ವಿಶ್ವಮಿನ್ವೇ । ಇನ್ವತಿರ್ವ್ಯಾಪ್ತಿಕರ್ಮಾ । ಸರ್ವವ್ಯಾಪಿನ್ಯಾವುಭೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಅರ್ಯಮಾದಯಸ್ತ್ರಯಶ್ಚ ಭಗಶ್ಚ ನೃಶಂಸೋ ನೃಭಿಃ ಶಂಸನೀಯ ಉರ್ವಂತರಿಕ್ಷಂ ಚ ವಿಶ್ವೇ ದೇವಾಶ್ಚ ಪವಮಾನಂ ಪೂಯಮಾನಂ ಸೋಮಂ ಜುಷಂತೆ । ಸೇವಂತೇ ||**

|| ಪ್ರತಿಪದಾರ್ಥ ||

**ವಿಶ್ವಮಿನ್ವೇ** —ಸರ್ವವ್ಯಾಪಿಗಳಾದ | **ಉಭೇ ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೂ | **ದೇವಃ**—ಪ್ರಕಾಶಮಾನನಾದ | **ಅರ್ಯಮಾ**—ಅರ್ಯಮನೂ | **ಅದಿತಿಃ**—ಅದಿತಿಯೂ| **ವಿಧಾತಾ**—ವಿಧಾತೃವೂ| **ನೃಶಂಸಃ**—ಮಾನವರಿಂದ ಪ್ರಶಂಸಿಸಲ್ಪಡುವ | **ಭಗಃ**—ಭಗನೂ | **ಉರು**—ವಿಸ್ತೃತವಾದ | **ಅಂತರಿಕ್ಷಃ**—ಅಂತರಿಕ್ಷವೂ | **ವಿಶ್ವೇ ದೇವಾಃ**—ಸಕಲ ದೇವತೆಗಳೂ | **ಪವಮಾನಂ**—ಸೋಮವನ್ನು| **ಜುಷಂತೆ**—ಸೇವಿಸುತ್ತಾರೆ.

|| ಭಾವಾರ್ಥ ||

ಸರ್ವವ್ಯಾಪಿಗಳಾದ ದ್ಯಾವಾಪೃಥಿವಿಗಳೂ, ಪ್ರಕಾಶಮಾನನಾದ ಅರ್ಯಮನೂ, ಅದಿತಿಯೂ, ವಿಧಾತೃವೂ, ಮಾನವರಿಂದ ಪ್ರಶಂಸಿಸಲ್ಪಡುವ ಭಗನೂ, ವಿಸ್ತೃತವಾದ ಅಂತರಿಕ್ಷವೂ, ಸಕಲ ದೇವತೆಗಳೂ ಸೋಮವನ್ನು ಸೇವಿಸುತ್ತಾರೆ.

## English Translation.

The all-pervading couple heaven and earth, the divine Aryaman, Aditi. Vidhatri, Bhaga deserving the praise of men, the spacious firmament, all the gods honour the purified (Soma).

# ಎಂಭತ್ತೆರಡನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಸಾವೀತಿ ಪಂಚರ್ಚಂ ಪಂಚದಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಅಸ್ಯಾನುಕ್ರಮಣಿಕಾ । ಅಸಾವೀತಿ ತ್ರಿಷ್ಟುಬಂತೇ ಇತಿ । ಅನೇನ ದ್ವಿವಚನೇನ ಪ್ರಕೃತಯೋಃ ಪ್ರ ಸೋಮಸ್ಯೇತ್ಯಾದಿಕಯೋರ್ದ್ವಯೋರಪಿ ತ್ರಿಷ್ಟುಬಂತತಾ ಪ್ರತಿಪಾದಿತಾ || ಗತೋ ವಿನಿಯೋಗಃ ||**

ಅನುವಾದವು—**ಅಸಾವಿ ಸೋಮಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ಅಸಾವೀತಿ ತ್ರಿಷ್ಟುಬಂತೇ** ಎಂದು ಹೇಳಿರುವುದು. ಇಲ್ಲಿ ತ್ರಿಷ್ಟುಬಂತೇ ಎಂದು ದ್ವಿವಚನಾಂತಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೂ ಇದರ ಹಿಂದಿನ **ಪ್ರ ಸೋಮಸ್ಯ** ಎಂಬ ಸೂಕ್ತಕ್ಕೂ ಋಷಿದೇವತಾಛಂದಸ್ಸುಗಳು ಒಂದೇವಿಧವಾಗಿರುವುದು ಎಂದು ಸೂಚಿತವಾಗುವುದು. ಎಂದರೆ ಈ ಎರಡು ಸೂಕ್ತಗಳಲ್ಲಿಯೂ

ಮೊದಲಿನ ನಾಲ್ಕು ಋಕ್ಕುಗಳು ಜಗತೀಛಂದಸ್ಕವೆಂದೂ, ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವೆಂದೂ ತಿಳಿಯ ಬೇಕು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೮೨

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೮೨ ॥
ಅಷ್ಟಕ—೭ ॥ ಅಧ್ಯಾಯ—೩ ॥ ವರ್ಗ—೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ವಸುರ್ಭಾರದ್ವಾಜಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—೧_೪. ಜಗತೀ ॥ ೫. ತ್ರಿಷ್ಟುಪ್

॥ ಸಂಹಿತಾಪಾಠಃ ॥

ಅಸಾವಿ ಸೋಮೋ ಅರುಷೋ ವೃಷಾ ಹರೀ ರಾಜೇವ ದಸ್ಮೋ ಅಭಿ ಗಾ ಅಚಿಕ್ರದತ್ ।
ಪುನಾನೋ ವಾರಂ ಪರ್ಯೇತ್ಯವ್ಯಯಂ ಶ್ಯೇನೋ ನ ಯೋನಿಂ ಘೃತವಂತಮಾಸದಂ ॥ ೧ ॥

॥ ಪದಪಾಠಃ ॥

ಅಸಾವಿ । ಸೋಮಃ । ಅರುಷಃ । ವೃಷಾ । ಹರಿಃ । ರಾಜಾಽಇವ । ದಸ್ಮಃ । ಅಭಿ । ಗಾಃ । ಅಚಿಕ್ರದತ್ ॥
ಪುನಾನಃ । ವಾರಂ । ಪರಿ । ಏತಿ । ಅವ್ಯಯಂ । ಶ್ಯೇನಃ । ನ । ಯೋನಿಂ । ಘೃತಽವಂತಂ । ಆಽಸದಂ ॥

॥ ಸಾಯಣಭಾಷ್ಯಂ ॥

ಸೋಮೋಽಸಾವಿ । ಅಭಿಷುತೋಽಭೂತ್ । ಕೀದೃಶಃ ಸೋಮಃ । ಅರುಷ ಆರೋಚಮಾನೋ ವೃಷಾ ವರ್ಷಕೋ ಹರಿರ್ಹರಿತವರ್ಣಃ । ಸ ಚ ರಾಜೇವ ದಸ್ಮೋ ದರ್ಶನೀಯಃ ಸನ್ ಗಾ ಉದಕಾನ್ಯಭಿಲಕ್ಷ್ಯಾಚಿಕ್ರದತ್ । ಶಬ್ದಂ ಕರೋತಿ ಸ್ವರಸನಿರ್ಗಮಸಮಯೇ । ಪಶ್ಚಾತ್ಪುನಾನಃ ಪೂಯಮಾನೋಽವ್ಯಯಮವಿಮಯಂ ವಾರಂ ವಾಲಂ ದಶಾಪವಿತ್ರಂ ಪರ್ಯೇತಿ । ತತಃ ಶ್ಯೇನೋ ನ ಶ್ಯೇನ ಇವ ಯೋನಿಂ ಸ್ವಕೀಯಂ ಸ್ಥಾನಂ ಘೃತವಂತಮುದಕವಂತಮಾಸದಮಾಸದನಾಯ ಪವತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

**ಅರುಷಃ**—ಆಕರ್ಷಿತವಾದ ವರ್ಣವುಳ್ಳವನೂ | **ವೃಷಾ**—ವೃಷ್ಟಿಕಾರಕನೂ | **ಹರಿಃ**—ಪಚ್ಚೆವರ್ಣವುಳ್ಳವನೂ ಆದ | **ಸೋಮಃ**—ಸೋಮನು | **ಅಸಾವಿ**—ಹಿಂಡಲ್ಪಟ್ಟಿದ್ದಾನೆ | **ರಾಜೇವ**—ರಾಜನಂತೆ | **ದಸ್ಮಃ**—ಆಕರ್ಷಕವಾದ ರೂಪವುಳ್ಳವನಾಗಿ | **ಗಾಃ ಅಭಿ**—ಉದಕಗಳಿಗಭಿಮುಖವಾಗಿ | **ಅಚಿಕ್ರದತ್**—ಶಬ್ದಮಾಡಿಕೊಂಡು ಹೋಗುತ್ತಾನೆ | **ಪುನಾನಃ**—ಶುದ್ಧಿಯನ್ನು ಹೊಂದುವವನಾಗಿ | **ಅವ್ಯಯಂ**—ಉಣ್ಣೆಯ | **ವಾರಂ**—ದಶಾಪವಿತ್ರದ ನಾರುಗಳನ್ನು | **ಪರ್ಯೇತಿ**—ಸೇರುತ್ತಾನೆ | **ಘೃತವಂತಂ**—ಉದಕಯುಕ್ತವಾದ | **ಯೋನಿಂ**—ತನ್ನ ಸ್ಥಾನಕ್ಕೆ | **ಶ್ಯೇನೋ ನ**—ಶ್ಯೇನಪಕ್ಷಿಯಂತೆ ವೇಗವಾಗಿ | **ಆ ಸದಂ**—ಕುಳಿತುಕೊಳ್ಳಲು ಹೋಗುತ್ತಾನೆ.

॥ ಭಾವಾರ್ಥ ॥

ಆಕರ್ಷಕವಾದ ವರ್ಣವುಳ್ಳವನೂ, ವೃಷ್ಟಿಕಾರಕನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಹಿಂಡಲ್ಪಟ್ಟಿದ್ದಾನೆ. ರಾಜನಂತೆ ಆಕರ್ಷಕವಾದ ರೂಪವುಳ್ಳವನಾಗಿ ಉದಕಗಳಿಗಭಿಮುಖವಾಗಿ ಶಬ್ದಮಾಡಿಕೊಂಡುಹೋಗುತ್ತಾನೆ. ಶುದ್ಧಿಯನ್ನು ಹೊಂದುವವನಾಗಿ ಉಣ್ಣೆಯ ದಶಾಪವಿತ್ರದ ನಾರುಗಳನ್ನು ಸೇರುತ್ತಾನೆ. ಉದಕಯುಕ್ತವಾದ ತನ್ನ ಸ್ಥಾನಕ್ಕೆ ಶ್ಯೇನಪಕ್ಷಿಯಂತೆ ವೇಗವಾಗಿ ಹೋಗಿ ಅಲ್ಲಿ ಕುಳಿತುಕೊಳ್ಳುತ್ತಾನೆ.

English Translation

The Soma has been effused radiant, the showerer, green-tinted; magnificient as a king, he cries aloud when approaching the waters; purified, he passes through the sheep's fleece, to alight on the water-moistened seat like a hawk (on its nest).

। ಸಂಹಿತಾಪಾಠಃ ॥

ಕವಿರ್ವೇಧಸ್ಯಾ ಪರ್ಯೇಷಿ ಮಾಹಿನಮತ್ಯೋ ನ ಮೃಷ್ಟೋ ಅಭಿ ವಾಜಮರ್ಷಸಿ ।
ಅಪಸೇಧನ್ದುರಿತಾ ಸೋಮ ಮೃಳಯ ಘೃತಂ ವಸಾನಃ ಪರಿ ಯಾಸಿ ನಿರ್ಣಿಜಂ ॥ ೨ ॥

॥ ಪದಪಾಠಃ ॥

ಕವಿಃ । ವೇಧಸ್ಯಾ । ಪರಿ । ಏಷಿ । ಮಾಹಿನಂ । ಅತ್ಯಃ । ನ । ಮೃಷ್ಟಃ । ಅಭಿ । ವಾಜಂ । ಅರ್ಷಸಿ ।
ಅಪऽಸೇಧನ್ । ದುಃऽಇತಾ । ಸೋಮ । ಮೃಳಯ । ಘೃತಂ । ವಸಾನಃ । ಪರಿ । ಯಾಸಿ । ನಿಃऽನಿಜಂ॥೨॥

॥ ಸಾಯಣಭಾಷ್ಯಂ ॥

ಹೇ ಸೋಮ ಕವಿಃ ಕ್ರಾಂತದರ್ಶೀ ಸನ್ ವೇಧಸ್ಯಾ ಯಾಗವಿಧಾನೇಚ್ಛಯಾ ಮಾಹಿನಂ ಮಂಹನೀಯಂ ಪವಿತ್ರಂ ಪರ್ಯೇಷಿ । ಪರಿಗಚ್ಛಸಿ । ಪಶ್ಚಾನ್ಮೃಷ್ಟಃ ಪ್ರಕ್ಷಾಲಿತೋಽತ್ಯೋ ನಾಶ್ವ ಇವ ವಾಜಂ ಸಂಗ್ರಾಮಮಭ್ಯರ್ಷಸಿ । ಹೇ ಸೋಮ ದುರಿತಾಸ್ಮಾಕಂ ದುರಿತಾನ್ಯಪಸೇಧನ್ ಪರಿಹರನ್ ಮೃಳಯ । ಸುಖಯ । ಘೃತಮುದಕಂ ವಸಾನ ಆಚ್ಛಾದಯಾನ್ ಪರಿ ಯಾಸಿ । ಅಭಿಗಚ್ಛಸಿ । ಕಿಂ । ನಿರ್ಣಿಜಂ ನಿರ್ಣೇಜಕಂ ಪವಿತ್ರಂ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಕವಿಃ**— ಕ್ರಾಂತದರ್ಶಿಯಾದ ನೀನು। **ವೇಧಸ್ಯಾ**— ಯಜ್ಞವನ್ನು ನೆರವೇರಿಸುವ ಇಚ್ಛೆಯಿಂದ । **ಮಾಹಿನಂ**— ಪೂಜ್ಯವಾದ ದಶಾಪವಿತ್ರವನ್ನು । **ಪರ್ಯೇಷಿ**— ಹೋಗಿ ಸೇರುತ್ತೀಯೆ । **ಮೃಷ್ಟಃ**— ಅಲ್ಲಿ ತೊಳೆಯಲ್ಪಟ್ಟು । **ಅತ್ಯೋ ನ**— ಅಶ್ವದಂತೆ । **ವಾಜಂ**— ಸಂಗ್ರಾಮಕ್ಕೆ । **ಅಭ್ಯರ್ಷಸಿ**— ಹೋಗುತ್ತೀಯೆ । **ಸೋಮ**— ಎಲೈ ಸೋಮದೇವನೇ । **ದುರಿತಾ**— ನಮ್ಮ ಪಾಪಗಳನ್ನು । **ಅಪಸೇಧನ್**— ನಾಶಪಡಿಸುತ್ತ । **ಮೃಳಯ**— ಸುಖಪಡಿಸು । **ಘೃತಂ**— ಉದಕವನ್ನು । **ವಸಾನಃ**— ಹೊದ್ದುಕೊಂಡು । **ನಿರ್ಣಿಜಂ**— ಶುದ್ಧಿಕಾರಕವಾದ ದಶಾಪವಿತ್ರಕ್ಕೆ । **ಪರಿಯಾಸಿ**— ಹೋಗಿ ಸೇರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಕ್ರಾಂತದರ್ಶಿಯಾದ ನೀನು ಯಜ್ಞವನ್ನು ನೆರವೇರಿಸುವ ಇಚ್ಛೆಯಿಂದ ಪೂಜ್ಯವಾದ ದಶಾಪವಿತ್ರವನ್ನು ಹೋಗಿ ಸೇರುತ್ತೀಯೆ. ಎಲೈ ಸೋಮನೇ, ನಮ್ಮ ಪಾಪಗಳನ್ನು ನಾಶಪಡಿಸುತ್ತ ಸುಖಪಡಿಸು. ಉದಕವನ್ನು ಹೊದ್ದುಕೊಂಡು (ಉದಕಯುಕ್ತನಾಗಿ) ಶುದ್ಧಿಕಾರಕವಾದ ದಶಾಪವಿತ್ರಕ್ಕೆ ಹೋಗಿ ಸೇರು.

## English Translation.

You, who are wise, pass through the adorable (filter) with a desire to perform the sacrifice ; being cleansed you rush like a horse to the battle. Driving away misfortunes be gracious (to us), Soma ; clothed in water you proceed to the cleansiug (vessel).

॥ ಸಂಹಿತಾಪಾಠಃ ॥

ಪರ್ಜನ್ಯಃ ಪಿತಾ ಮಹಿಷಸ್ಯ ಪರ್ಣಿನೋ ನಾಭಾ ಪೃಥಿವ್ಯಾ ಗಿರಿಷು ಕ್ಷಯಂ ದಧೇ ।
ಸ್ವಸಾರ ಆಪೋ ಅಭಿ ಗಾ ಉತಾಸರನ್ತ್ಸಂ ಗ್ರಾವಭಿರ್ನಸತೇ ವೀತೇ ಅಧ್ವರೇ ॥ ೩ ॥

|| ಪದಪಾಠಃ ||

ಪರ್ಜನ್ಯಃ । ಪಿತಾ । ಮಹಿಷಸ್ಯ । ಪರ್ಣಿನಃ । ನಾಭಾ । ಪೃಥಿವ್ಯಾಃ । ಗಿರಿಷು । ಕ್ಷಯಂ । ದಧೇ ।

ಸ್ವಸಾರಃ । ಆಪಃ । ಅಭಿ । ಗಾಃ । ಉತ । ಅಸರನ್ । ಸಂ । ಗ್ರಾವಽಭಿಃ । ನಸತೇ । ವೀತೇ । ಅಧ್ವರೇ||೩||

|| ಸಾಯಣಭಾಷ್ಯಂ ||

ಯಸ್ಯ ಮಹಿಷಸ್ಯ ಮಹತಃ ಪರ್ಣಿನಃ ಪರ್ಣವತಃ ಪತನವತೋ ವಾ ಸೋಮಸ್ಯ ಪರ್ಜನ್ಯಃ ಪಿತಾ ಜನಕಃ ಸ ಸೋಮಃ ಪೃಥಿವ್ಯಾ ನಾಭಾ ನಾಭೌ ನಾಭಿಸ್ಥಾನೀಯೇ ಹವಿರ್ಧಾನೇ ಗಿರಿಷು ಗಿರಿಸಂಬಂಧಿಗ್ರಾವಸು ಕ್ಷಯಂ ನಿವಾಸಂ ದಧೇ । ಧಾರಯತ್ಯಭಿಷವಸಮಯೇ । ಉತಾಪಿ ಚ ಸ್ವಸಾರೋಽಂಗುಲಯ ಆಪೋ ವಸತೀವರ್ಯೋ ಗಾ ಆಶಿರಾರ್ಥಾಃ ಸ್ತುತಯೋ ವಾಭ್ಯಸರನ್ । ಅಭಿಸರಂತಿ । ಸಂ ನಸತೇ ಸಂಗಚ್ಛತೇ ಚ ಗ್ರಾವಭಿಃ ಸಾಕಂ । ಕುತ್ರ । ವೀತೇ ಕಾಂತೇಽಧ್ವರೇ ಯಜ್ಞೇ ||

|| ಪ್ರತಿಪದಾರ್ಥ ||

**ಮಹಿಷಸ್ಯ**—ಮಹಾತ್ಮನೂ । **ಪರ್ಣಿನಃ**—ರೆಕ್ಕೆಯುಳ್ಳವನೂ ಆದ ಯಾವ ಸೋಮನಿಗೆ । **ಪರ್ಜನ್ಯಃ**—ಪರ್ಜನ್ಯನು । **ಪಿತಾ**—ತಂದೆಯಾಗಿದ್ದಾನೆಯೋ ಆ ಸೋಮನು । **ಪೃಥಿವ್ಯಾಃ**—ಪೃಥ್ವಿಯ । **ನಾಭಾ**—ನಾಭಿಸ್ಥಾನವಾದ । ಯಜ್ಞದಲ್ಲಿಯೂ । **ಗಿರಿಷು**—ಪರ್ವತಗಳಲ್ಲಿಯೂ। **ಕ್ಷಯಂ**—ತನ್ನ ನಿವಾಸಸ್ಥಾನವನ್ನು । **ದಧೇ**—ಹೊಂದಿದ್ದಾನೆ । **ಸ್ವಸಾರಃ**—ಬೆರಳುಗಳು । **ಆಪಃ**—ಉದಕಗಳನ್ನೂ । **ಗಾಃ**—ಆಶಿರದ್ರವ್ಯಗಳನ್ನೂ । **ಅಭ್ಯಸರನ್**—ಸಮೀಪಿಸುತ್ತವೆ । **ವೀತೇ**—ಕಾಂತಿಯುತವಾದ । **ಅಧ್ವರೇ**—ಯಜ್ಞದಲ್ಲಿ । **ಗ್ರಾವಭಿಃ**—ಹಿಂಡುವ ಕಲ್ಲುಗಳೊಂದಿಗೆ । **ಸಂ ನಸತೇ**—ಸೇರಿಕೊಳ್ಳುತ್ತನೆ.

|| ಭಾವಾರ್ಥ ||

ಮಹಾತ್ಮನೂ, ರೆಕ್ಕೆಯುಳ್ಳವನೂ ಆದ ಯಾವ ಸೋಮನಿಗೆ ಪರ್ಜನ್ಯನು ತಂದೆಯಾಗಿದ್ದಾನೆಯೋ ಆ ಸೋಮನು ಪೃಥ್ವಿಯ ನಾಭಿಸ್ಥಾನವಾದ ಯಜ್ಞದಲ್ಲಿಯೂ, ಪರ್ವತಗಳಲ್ಲಿಯೂ ತನ್ನ ನಿವಾಸಸ್ಥಾನವನ್ನು ಹೊಂದಿದ್ದಾನೆ. ಬೆರಳುಗಳು ಉದಕಗಳನ್ನೂ ಆಶಿರದ್ರವ್ಯಗಳನ್ನೂ ಸಮೀಪಿಸುತ್ತವೆ. ಕಾಂತಿಯುತವಾದ ಯಜ್ಞದಲ್ಲಿ ಹಿಂಡುವ ಕಲ್ಲುಗಳೊಂದಿಗೆ ಸೇರಿಕೊಳ್ಳುತ್ತಾನೆ.

## English Translation.

The mighty winged (Soma) whose father is Parjanya has placed his dwelling on the navel of the earth among the mountains ; the sisters, the waters flow to (the produce of) the cows ; he meets with the stones at the belovod sacrifice.

॥ ಸಂಹಿತಾಪಾಠಃ ॥

ಜಾಯೇವ ಪತ್ಯಾವಧಿ ಶೇವ ಮಂಹಸೇ ಪಜ್ರಾಯಾ ಗರ್ಭ ಶೃಣುಹಿ ಬ್ರವೀಮಿ ತೇ ।
ಅಂತರ್ವಾಣೀಷು ಪ್ರ ಚರಾ ಸು ಜೀವಸೇಽನಿಂದ್ಯೋ ವೃಜನೇ ಸೋಮ ಜಾಗೃಹಿ ॥ ೪ ॥

॥ ಪದಪಾಠಃ ॥

ಜಾಯಾಽಇವ । ಪತ್ಯೌ । ಅಧಿ । ಶೇವ । ಮಂಹಸೇ । ಪಜ್ರಾಯಾಃ । ಗರ್ಭ । ಶೃಣುಹಿ । ಬ್ರವೀಮಿ । ತೇ ।
ಅಂತಃ । ವಾಣೀಷು । ಪ್ರ । ಚರ । ಸು । ಜೀವಸೇ । ಅನಿಂದ್ಯಃ । ವೃಜನೇ । ಸೋಮ । ಜಾಗೃಹಿ ॥ ೪ ॥

॥ ಸಾಯಣಭಾಷ್ಯಂ ॥

ಜಾಯೇವ ಪತ್ಯೌ ಜಾಯಾ ಯಥಾ ಸ್ವಭಾರ್ಯಾ ಭರ್ತರಿ ಸುಖಂ ಪ್ರಯಚ್ಛತಿ ತದ್ವಚ್ಛೇವ ಶೇವಂ ॥ ದ್ವಿತೀಯಾಯಾ ಅಮ್ಭಾವಾಭಾವಶ್ಛಾಂದಸಃ ॥ ಸುಖಂ ಮಂಹಸೇ । ಪ್ರಯಚ್ಛಸಿ ಯಜಮಾನೇ । ಹೇ ಪಜ್ರಾಯಾ ಗರ್ಭ ಸೋಮ ಶೃಣುಹಿ ಶೃಣು ಸ್ತುತೀರ್ಯಾಸ್ತೇ ತುಭ್ಯಂ ಬ್ರವೀಮಿ । ಪಜಿರ್ಗತಿಕರ್ಮಾ । ಪಜ್ರಾ ಪೃಥಿವೀತ್ಯಾಹುಃ । ಅಪಿ ವಾ ಮಾಧ್ಯಮಿಕಾ ವಾಕ್ ಪಜ್ರಾ । ಭೂಮಾವೋಷಧಿರೂಪೇಣ ಜಾತತ್ವಾದ್ಗರ್ಭತ್ವಂ । ಮಾಧ್ಯಮಿಕಾಯಾ ವಾಚೋಽಪಿ ವೃಷ್ಟಿಸಾಧನತ್ವಾತ್ತತ್ಪುತ್ರತ್ವಂ । ಸ ತ್ವಂ ವಾಣೀಷು ವಾಕ್ಷು ಸ್ತುತಿಷ್ವಂತರ್ಮಧ್ಯೇ ಸು ಸುಷ್ಠು ಪ್ರ ಚರ ಜೀವಸೇಽಸ್ಮಾಕಂ ಜೀವನಾಯ । ಹೇ ಸೋಮ ಅನಿಂದ್ಯಃ ಸ್ತುತ್ಯಸ್ತ್ವಂ ವೃಜನೇಽಸ್ಮಾಕಂ ಶತ್ರುಬಲೇ ಜಾಗೃಹಿ । ಪ್ರಬುದ್ಧೋ ಭವ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಪತ್ಯೌ ಅಧಿ**—ಪತಿಗೆ । **ಜಾಯೇವ**—ಪತ್ನಿಯಂತೆ । **ಶೇವ**—ಸುಖವನ್ನು । **ಮಂಹಸೇ**—ಒದಗಿಸು । **ಪಜ್ರಾಯಾಃ**—ಪಜ್ರೆಯೆಂಬುವಳ (ಪೃಥ್ವಿಯ) । **ಗರ್ಭ**—ಪುತ್ರನಾದ ಎಲೈ ಸೋಮನೇ । **ಶೃಣುಹಿ**—ನನ್ನ ಸ್ತುತಿಯನ್ನು ಕೇಳು । **ತೇ**—ನಿನ್ನನ್ನುದ್ದೇಶಿಸಿ । **ಬ್ರವೀಮಿ**—ಪ್ರಶಂಸಿಸುತ್ತೇನೆ । **ಜೀವಸೇ**—ನಮ್ಮ ಜೀವನಾರ್ಥವಾಗಿ । **ವಾಣೀಷು ಅಂತಃ**—ನಮ್ಮ ಸ್ತುತಿಗಳ ನಡುವೆ । **ಸು ಪ್ರಚರ**—ಅತಿಶಯವಾಗಿ ಸಂಚರಿಸು । **ಸೋಮ**—ಎಲೈ ಸೋಮದೇವನೇ । **ಅನಿಂದ್ಯಃ**—(ದೋಷರಹಿತನಾಗಿ) ಸ್ತುತ್ಯನಾದ ನೀನು । **ವೃಜನೇ**—ನಮ್ಮ ಶತ್ರುಗಳ ವಿಷಯದಲ್ಲಿ । **ಜಾಗೃಹಿ** -ಎಚ್ಚರವುಳ್ಳವನಾಗಿರು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪತ್ನಿಯು ಪತಿಗೆ ಸುಖವನ್ನುಂಟುಮಾಡುವಂತೆ ನಮಗೆ ನೀನು ಸುಖವನ್ನೊದಗಿಸು. ಪಜ್ರೆಯೆಂಬುವಳ (ಭೂಮಿಯ) ಪುತ್ರನಾದ ಎಲೈ ಸೋಮನೇ, ನನ್ನ ಸ್ತುತಿಯನ್ನು ಕೇಳು. ನಿನ್ನನ್ನುದ್ದೇಶಿಸಿ ಪ್ರಶಂಸಿ

ಸುತ್ತೇನೆ. ನಮ್ಮ ಜೀವನಾರ್ಥವಾಗಿ ನಮ್ಮ ಸ್ತುತಿಗಳ ನಡುವೆ ಅತಿಶಯವಾಗಿ ಸಂಚರಿಸು. ಎಲೈ ಸೋಮದೇವನೇ, ಸ್ತುತ್ಯನಾದ ನೀನು ದೋಷರಹಿತನಾಗಿ ನಮ್ಮ ಶತ್ರುಗಳ ವಿಷಯದಲ್ಲಿ ಎಚ್ಚರವಾಗಿರು.

English Translation

As a wife to her husband, so you (afford) delight to your worshipper; (Soma), offspring of Pajra, listen (to the praises) I address to you; in the midst of our adorations advance to grant us life; Soma, who are irreproach-able, be vigilant against (our) foe.

|| ಸಂಹಿತಾಪಾಠಃ ||

ಯಥಾ ಪೂರ್ವೇಭ್ಯಃ ಶತಸಾ ಅಮೃಧ್ರಃ ಸಹಸ್ರಸಾಃ ಪರ್ಯಯಾ ವಾಜ-
ಮಿಂದೋ ।
ಏವಾ ಪವಸ್ವ ಸುವಿತಾಯ ನವ್ಯಸೇ ತವ ವ್ರತಮನ್ವಾಪಃ ಸಂಚತೇ ॥ ೫ ॥

|| ಪದಪಾಠಃ ||

ಯಥಾ । ಪೂರ್ವೇಭ್ಯಃ । ಶತऽಸಾಃ । ಅಮೃಧ್ರಃ । ಸಹಸ್ರऽಸಾಃ । ಪರಿऽಅಯಾಃ । ವಾಜಂ । ಇಂದೋ ಇತಿ ।

ಏವ । ಪವಸ್ವ । ಸುऽವಿತಾಯ । ನವ್ಯಸೇ । ತವ । ವ್ರತಂ । ಅನು । ಆಪಃ । ಸಚಂತೇ ॥ ೫ ॥

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಯಥಾ ಪೂರ್ವೇಭ್ಯೋ ಮಹರ್ಷಿಭ್ಯಃ ಸ್ತೋತೃಭ್ಯಃ ಶತಸಾಃ ಶತಸಂಖ್ಯಾಕಸ್ಯ ಧನಸ್ಯ ದಾತಾ ತಥಾ ಸಹಸ್ರಸಾಶ್ಚ ಸನ್ ಪರ್ಯಯಾಃ ಪರಿಗಚ್ಛೇಃ ಏವ್ಮೇವಮಿದಾನೀಮಪಿ ನವ್ಯಸೇ ನವತರಾಯ ಸುವಿತಾಯಾಭ್ಯುದಯಾಯ ಪವಸ್ವ । ಕ್ಷರ । ತವ ವ್ರತಂ ಕರ್ಮಾನ್ವಾಪೋ ವಸತೀವರ್ಯಃ ಸಚಂತೇ । ಅತಃ ಪವಸ್ವ ॥

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ । ಅಮೃಧ್ರಃ—ಅಹಿಂಸಿತನಾದ ನೀನು । ಯಥಾ—ಯಾವ ರೀತಿ । ಪೂರ್ವೇಭ್ಯಃ—ಹಿಂದಿನ ಸ್ತುತಿಕರ್ತರಿಗಾಗಿ । ಶತಸಾಃ—ಶತಸಂಖ್ಯಾಕವಾದ ದಾನವುಳ್ಳವನಾಗಿಯೂ । ಸಹಸ್ರಸಾಃ—ಸಹಸ್ರಸಂಖ್ಯೆಯುಳ್ಳ ದಾನವುಳ್ಳವನಾಗಿಯೂ । ವಾಜಂ—ಶಕ್ತಿದಾತನಾಗಿಯೂ । ಪರ್ಯಯಾಃ—ಸಂಚರಿಸಿದೆಯೋ । ಏವ—ಅದೇ ರೀತಿ । ನವ್ಯಸೇ—ಈಗಿನ ಕಾಲದ ನಮಗೂ । ಸುವಿತಾಯ—ಉತ್ತಮ

ವಾದ ಸಂಪತ್ತಿಗಾಗಿ । **ಪವಸ್ವ**— ಪ್ರವಹಿಸು । **ತವ—** ನಿನ್ನ । **ವ್ರತಂ**— ಕರ್ಮವನ್ನು । **ಆಪಃ**— ವಸತೀ ವರೀಉದಕಗಳು । **ಅನು ಸಚಂತೇ**— ಸೇವಿಸುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಅಹಿಂಸಿತನಾದ ನೀನು ಯಾವ ರೀತಿ ಹಿಂದಿನ ಸ್ತುತಿಕರ್ತರಿಗಾಗಿ ಶತಸಂಖ್ಯಾಕವಾದ ದಾನವುಳ್ಳವನಾಗಿಯೂ, ಸಹಸ್ರಸಂಖ್ಯೆಯುಳ್ಳ ದಾನವುಳ್ಳವನಾಗಿಯೂ, ಶಕ್ತಿದಾತನಾಗಿಯೂ ಸಂಚರಿಸಿದೆಯೋ ಅದೇ ರೀತಿ ಈಗಿನ ಕಾಲದ ನಮಗೂ ಉತ್ತಮವಾದ ಸಂಪತ್ತಿಗಾಗಿ ಪ್ರವಹಿಸು. ನಿನ್ನ ಕರ್ಮಗಳನ್ನು ವಸತೀವರೀಉದಕಗಳು ಸೇವಿಸುತ್ತವೆ.

## English Translation.

As you, Indu, attained strength for the ancieut (rishis), giving them hundred-fold (wealth), invulnerable, giving them thousand-fold (wealth) ; so now flow for (our) modern prosperity ; the waters wait upon your functions.

# ಎಂಭತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪವಿತ್ರಂ ತ ಇತಿ ಪಂಚರ್ಚಂ ಷೋಡಶಂ ಸೂಕ್ತಮಾಂಗಿರಸಸ್ಯ ಪವಿತ್ರಸ್ಯಾರ್ಷಂ ಜಾಗತಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಾಂತಂ । ಪವಿತ್ರಂ ತೇ ಪವಿತ್ರ ಇತಿ ॥ ಅಭಿಪ್ಲವ ಅದ್ಯೇ ಋಚೌ ವಕ್ತವ್ಯೇ । ಸೂತ್ರಿತಂ ಚ । ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತ ಇತಿ ದ್ವೇ ವಿ ಯತ್ಪವಿತ್ರಂ ಧಿಷಣಾ ಅತನ್ವತ । ಆ. ೪-೬ । ಇತಿ ॥**

ಅನುವಾದವು— **ಪವಿತ್ರಂ ತೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಪವಿತ್ರನೆಂಬುವನು ಋಷಿಯು ; ಪವಮಾನ ಸೋಮನು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಪವಿತ್ರಂ ತೇ ಪವಿತ್ರಃ** ಎಂದು ಹೇಳಿರುವುದು. ಅಭಿಪ್ಲವದಲ್ಲಿ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೆ ಇತಿ ದ್ವೇ ವಿ ಯತ್ಪವಿತ್ರಂ ಧಿಷಣಾ ಅತನ್ವತೆ** ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು

## ಸೂಕ್ತ—೮೩

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೮೩ ॥
ಅಷ್ಟಕ—೭ ॥ ಅಧ್ಯಾಯ—೩ ॥ ವರ್ಗ—೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಪವಿತ್ರಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ಜಗತೀ ॥

|| ಸಂಹಿತಾಪಾಠಃ ||

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ|
ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತ ||೧||

|| ಪದಪಾಠಃ ||

ಪವಿತ್ರಂ | ತೇ | ವಿऽತತಂ | ಬ್ರಹ್ಮಣಃ | ಪತೇ | ಪ್ರऽಭುಃ | ಗಾತ್ರಾಣಿ | ಪರಿ | ಏಷಿ | ವಿಶ್ವತಃ |
ಅತಪ್ತऽತನೂಃ | ನ | ತತ್ | ಆಮಃ | ಅಶ್ನುತೇ | ಶೃತಾಸಃ | ಇತ್ | ವಹಂತಃ | ತತ್ | ಸಂ | ಆಶತ||

|| ಸಾಯಣಭಾಷ್ಯಂ ||

ಹೇ ಬ್ರಹ್ಮಣಸ್ಪತೇ ಮಂತ್ರಸ್ಯ ಸ್ವಾಮಿನ್ ಸೋಮ ತೇ ಪವಿತ್ರಂ ಶೋಧಕಮಂಗಂ ವಿತತಂ | ಸರ್ವತ್ರ ವಿಸ್ತೃತಂ | ಸ ಪ್ರಭುಃ ಪ್ರಭವಿತಾ ತ್ವಂ ಗಾತ್ರಾಣಿ ಪಾತುರಂಗಾನಿ ಪರ್ಯೇಷಿ | ಪರಿಗಚ್ಛಸಿ | ವಿಶ್ವತಃ ಸರ್ವತಃ | ತವ ತತ್ಪವಿತ್ರಮತಪ್ತತನೂಃ ಪಯೋವ್ರತಾದಿನಾಸಂತಪ್ತಗಾತ್ರ ಆಮೋऽಪರಿಪಕ್ವೋ ನಾಶ್ನುತೇ | ನ ವ್ಯಾಪ್ನೋತಿ | ಶೃತಾಸ ಇಚ್ಛೃತಾ ಏವ ಪರಿಪಕ್ವಾ ಏವ ವಹಂತೋ ಯಾಗಂ ನಿರ್ವಹಂತ-ಸ್ತತ್ಪವಿತ್ರಂ ಸಮಾಶತೇ | ವ್ಯಾಪ್ನುವಂತಿ ||

|| ಪ್ರತಿಪದಾರ್ಥ ||

ಬ್ರಹ್ಮಣಸ್ಪತೇ—ಮಂತ್ರಗಳಿಗೆ ಪಾಲಕನಾದ ಎಲೈ ಸೋಮದೇವನೇ | ತೇ—ನಿನ್ನ | ಪವಿತ್ರಂ—ಶುದ್ಧಿಕಾರಕವಾದ ಪಾತ್ರೆಯು | ವಿತತಂ—ವಿಸ್ತೃತವಾಗಿದೆ | ಪ್ರಭುಃ—ಒಡೆಯನಾದ ನೀನು | ಗಾತ್ರಾಣಿ—ಅದರ ಅವಯವಗಳನ್ನು | ವಿಶ್ವತಃ—ಎಲ್ಲ ಕಡೆಗಳಿಂದಲೂ | ಪರ್ಯೇಷಿ—ಪ್ರವೇಶಿಸುತ್ತೀಯೆ | ಅತಪ್ತತನೂಃ-ಕುದಿಸಲ್ಪಡದಿರುವುದೂ | ಆಮಃ—ಪಕ್ವವಾಗದಿರುವುದೂ ಆದ ಅಂಶಗಳು | ತತ್—ಆ ಪಾತ್ರೆಯನ್ನು | ನ ಅಶ್ನುತೇ—ಪ್ರವೇಶಿಸುವುದಿಲ್ಲ | ವಹಂತಃ—ಯಾಗವನ್ನು ನಿರ್ವಹಿಸಬಲ್ಲ | ಶೃತಾಸ ಇತ್—ಪರಿಪಕ್ವವನ್ನು ಹೊಂದಿದ ಅಂಶಗಳು ಮಾತ್ರ | ತತ್—ಆ ಪಾತ್ರೆಯನ್ನು | ಸಮಾಶತ—ಪ್ರವೇಶಿಸುತ್ತವೆ.

|| ಭಾವಾರ್ಥ ||

ಮಂತ್ರಗಳಿಗೆ ಪಾಲಕನಾದ ಎಲೈ ಸೋಮದೇವನೇ, ನಿನ್ನ ಶುದ್ಧಿಕಾರಕವಾದ ಪಾತ್ರೆಯು ವಿಸ್ತೃತವಾಗಿರುತ್ತದೆ. ಒಡೆಯನಾದ ನೀನು ಅದರ ಅವಯವಗಳನ್ನು ಎಲ್ಲ ಕಡೆಗಳಿಂದಲೂ ಪ್ರವೇಶಿಸುತ್ತೀಯೆ. ಕುದಿಸಲ್ಪಡದಿರುವುದೂ, ಪಕ್ವವಾಗದಿರುವುದೂ ಆದ ಅಂಶಗಳು ಆ ಪಾತ್ರೆಯನ್ನು ಪ್ರವೇಶಿಸುವುದಿಲ್ಲ. ಯಾಗವನ್ನು ನಿರ್ವಹಿಸಬಲ್ಲವೂ ಪರಿಪಕ್ವವನ್ನು ಹೊಂದಿದವೂ ಆದ ಅಂಶಗಳು ಮಾತ್ರ ಆ ಪಾತ್ರೆಯನ್ನು ಪ್ರವೇಶಿಸುತ್ತವೆ.

## English Translation.

Lord of prayer, your filter is stretched out ; you who are the sovereign, enter its members from all sides ; the raw (liquid) whose mass is not heated

attains not this (filter) ; it is the boiled (liquids) bearing (the sacrifice) which attain it.

॥ ಸಂಹಿತಾಪಾಠಃ ॥

ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿ-
ರನ್ ।
ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥ ೨ ॥

॥ ಪದಪಾಠಃ ॥

ತಪೋಃ । ಪವಿತ್ರಂ । ವಿಽತತಂ । ದಿವಃ । ಪದೇ । ಶೋಚಂತಃ । ಅಸ್ಯ । ತಂತವಃ । ವಿ । ಅಸ್ಥಿರನ್ ।
ಅವಂತಿ । ಅಸ್ಯ । ಪವಿತಾರಂ । ಆಶವಃ । ದಿವಃ । ಪೃಷ್ಠಂ । ಅಧಿ । ತಿಷ್ಠಂತಿ । ಚೇತಸಾ ॥ ೨ ॥

॥ ಸಾಯಣಭಾಷ್ಯಂ ॥

ತಪೋಃ ಶತ್ರೂಣಾಂ ತಾಪಕಸ್ಯ ಸೋಮಸ್ಯ ಪವಿತ್ರಂ ಶೋಧಕಮಂಗಂ ತೇಜೋ ವಾ ದಿವಸ್ಪದೇ ದ್ಯುಲೋಕಸ್ಯೋಚ್ಛ್ರಿತೇ ಸ್ಥಾನೇ ವಿತತಂ । ವಿಸ್ತೃತಂ । ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ । ತೈ. ಬ್ರಾ. ೩-೨-೧-೧ । ಇತಿ ಬ್ರಾಹ್ಮಣಂ । ಅಸ್ಯ ತಂತವೋಽಂಶವಃ ಶೋಚಂತೋ ದೀಪ್ಯಮಾನಾ ವ್ಯಸ್ಥಿರನ್ । ವಿವಿಧಂ ತಿಷ್ಠಂತಿ । ಪೃಥಿವ್ಯಾಂ ಹವಿರ್ಧಾನೇ ವಾ । ಅಸ್ಯ ಸೋಮಸ್ಯಾಶವಃ ಶೀಘ್ರಗಾಮಿನೋ ರಸಾ ಅವಂತಿ । ರಕ್ಷಂತಿ । ಕಂ । ಪವಿತಾರಂ ಪಾವಯಿತಾರಂ । ಯಜಮಾನಮವಂತಿ ರಕ್ಷಂತಿ ಹೋಮದ್ವಾರಾ ಪಶ್ಚಾದುದ್ಧುತಾ ದಿವೋ ದ್ಯುಲೋಕಸ್ಯ ಪೃಷ್ಠಂ ಪೃಷ್ಠಭಾಗಮುನ್ನತದೇಶಂ ಚೇತಸಾ ಬುದ್ಧ್ಯಾ ದೇವಗಮನೇಚ್ಛಾವತ್ಯಾಧಿ ತಿಷ್ಠಂತಿ । ಆಶ್ರಯಂತೇ ॥

॥ ಪ್ರತಿಪದಾರ್ಥ ॥

**ತಪೋಃ**—ಶತ್ರುವನ್ನು ದಹಿಸತಕ್ಕ ಸೋಮನ । **ಪವಿತ್ರಂ**— ಶುದ್ಧಿಕಾರಕವಾದ ಪಾತ್ರೆಯು । **ದಿವಸ್ಪದೇ**—ದ್ಯುಲೋಕದ ಉನ್ನತಸ್ಥಾನದಲ್ಲಿ । **ವಿತತಂ**—ವಿಸ್ತೃತವಾಗಿದೆ । **ಅಸ್ಯ**—ಈ ಸೋಮದೇವನ । **ತಂತವಃ**—ಅಂಶುಗಳು । **ಶೋಚಂತಃ**— ಪ್ರಕಾಶಮಾನವಾಗಿ । **ವ್ಯಸ್ಥಿರನ್**—ವಿಂಗಡವಾಗಿವೆ । **ಅಸ್ಯ**—ಈ ಸೋಮನ । **ಆಶವಃ**—ಶೀಘ್ರಗಾಮಿಗಳಾದ ರಸಗಳು । **ಪವಿತಾರಂ**—ಯಜಮಾನನನ್ನು । **ಅವಂತಿ**—ರಕ್ಷಿಸುತ್ತವೆ । **ಚೇತಸಾ**—ದೇವತೆಗಳನ್ನು ಸಮೀಪಿಸಬೇಕೆಂಬ ಇಚ್ಛೆಯಿಂದ । **ದಿವಃ**—ದ್ಯುಲೋಕದ । **ಪೃಷ್ಠಂ**—ಉನ್ನತಪ್ರದೇಶದಲ್ಲಿ । **ಅಧಿ ತಿಷ್ಠಂತಿ**—ಆಶ್ರಯಿಸಿ ಕುಳಿತಿವೆ.

॥ ಭಾವಾರ್ಥ ॥

ಶತ್ರುಗಳನ್ನು ದಹಿಸತಕ್ಕ ಸೋಮನ ಶುದ್ಧಿಕಾರಕವಾದ ಪಾತ್ರೆಯು ದ್ಯುಲೋಕದ ಉನ್ನತಸ್ಥಾನದಲ್ಲಿ ವಿಸ್ತೃತವಾಗಿದೆ. ಈ ಸೋಮದೇವನ ಅಂಶುಗಳು ಪ್ರಕಾಶಮಾನವಾಗಿ ವಿಂಗಡವಾಗಿವೆ. ಈ ಸೋಮದೇವನ

ಶೀಘ್ರಗಾಮಿಗಳಾದ ರಸಗಳು ಯಜಮಾನನನ್ನು ರಕ್ಷಿಸುತ್ತವೆ. ದೇವತೆಗಳನ್ನು ಸಮೀಪಿಸಬೇಕೆಂಬ ಇಚ್ಛೆಯಿಂದ ದ್ಯುಲೋಕದ ಉನ್ನತಪ್ರದೇಶದಲ್ಲಿ ಆಶ್ರಯಿಸಿ ಕುಳಿತಿವೆ.

## English Translation.

The filter of the foe-scorching (Soma) is spread on the summit of heaven ; his shining filaments are separated ; his swift-flowing (juices) protect the purifier (the worshipper) ; they dwell upon the summit of the sky in their wish (to approach the gods).

॥ ಸಂಹಿತಾಪಾಠಃ ॥

ಅರೂರುಚದುಷಸಃ ಪೃಶ್ನಿರಗ್ರಿಯ ಉಕ್ಷಾ ಬಿಭರ್ತಿ ಭುವನಾನಿ ವಾಜಯುಃ ।
ಮಾಯಾವಿನೋ ಮಮಿರೇ ಅಸ್ಯ ಮಾಯಯಾ ನೃಚಕ್ಷಸಃ ಪಿತರೋ ಗರ್ಭಮಾ ದಧುಃ ॥ ೩ ॥

॥ ಪದಪಾಠಃ ॥

ಅರೂರುಚತ್ । ಉಷಸಃ । ಪೃಶ್ನಿಃ । ಅಗ್ರಿಯಃ । ಉಕ್ಷಾ । ಬಿಭರ್ತಿ । ಭುವನಾನಿ । ವಾಜऽಯುಃ ।
ಮಾಯಾಽವಿನಃ । ಮಮಿರೇ । ಅಸ್ಯ । ಮಾಯಯಾ । ನೃऽಚಕ್ಷಸಃ । ಪಿತರಃ । ಗರ್ಭಂ । ಆ । ದಧುಃ ॥೩॥

॥ ಸಾಯಣಭಾಷ್ಯಂ ॥

ಅಭಿಷ್ಟವೇಽರೂರುಚದಿತ್ಯೇಷಾವಪನೀಯಾ । ಸೂತ್ರಿತಂ ಚ । ಈಳೇ ದ್ಯಾವಾಪೃಥಿವೀ ಇತಿ ಪ್ರಾಗುತ್ತಮಾಯಾ ಅರೂರುಚದುಷಸಃ ಪೃಶ್ನಿರಗ್ರಿಯ ಇತ್ಯಾವಪೇತ । ಆ. ೪-೬ । ಇತಿ ॥

ಉಷಸಃ ಸಂಬಂಧೀ ಪೃಶ್ನಿರಾದಿತ್ಯಃ । ಪೃಶ್ನಿರಾದಿತ್ಯೋ ಭವತಿ ಪ್ರಾಶ್ನುತ ಏನಂ ವರ್ಣ ಇತಿ ನಿರುಕ್ತಂ । ೨-೧೪ । ಅಗ್ರಿಯೋ ಮುಖ್ಯಃ ಸೋಽಯಂ ಸೋಮೋಽರೂರುಚತ್ । ರೋಚಯತಿ । ಸ ಉಕ್ಷಾ ಜಲಸ್ಯ ಸೇಕ್ತಾ ಬಿಭರ್ತಿ ಪುಷ್ಣಾತ್ಯುದಕೇನ ಭುವನಾನಿ ಭೂತಜಾತಾನಿ ವಾಜಯುಸ್ತೇಷಾಮನ್ನಮಿಚ್ಛನ್ । ಮಾಯಾವಿನೋ ಮಾಯಾ ಪ್ರಜ್ಞಾ । ಪ್ರಜ್ಞಾವಂತೋಽಸ್ಯ ಸೋಮಸ್ಯ ಮಾಯಯಾ ಪ್ರಜ್ಞಯಾ ಮಮಿರೇ । ನಿರ್ಮಾಂತಿ । ಸೋಮಸ್ಯೈಕೈಕಾಂಶಪಾನೇನ ಜಾತಬಲಾ ಅಗ್ನ್ಯಾದಯಃ ಸ್ವಸ್ವವ್ಯಾಪಾರೇಣ ಜಗತ್ಸೃಜಂತೀತ್ಯರ್ಥಃ । ತಥಾಸ್ಯ ಮಾಯಯಾ ನೃಚಕ್ಷಸೋ ನೃಣಾಂ ದ್ರಷ್ಟಾರಃ ಪಾಲಕಾ ದೇವಾ ಅಂಗಿರಸಃ ಪಿತರೋ ವಾ ಗರ್ಭಮಾ । ದಧುಃ ಧಾರಯಂತಿ । ಓಷಧೀಷು ವಾತ್ರೆ

ಸೂರ್ಯಾತ್ಮಾ ಸೋಮಃ ಸ್ತೂಯತೇ ಸೂರ್ಯರಶ್ಮ್ಯಸುಗಮಾಧೀನವರ್ಧನಾಚ್ಚೆಂದ್ರಸ್ಯ। ಆಯಮುಷಸಃ ಪೃಶ್ನಿಃ ಸವಿತಾರೂರುಚತ್। ರೋಚಯತಿ ಸರ್ವಂ ರೋಚತೇ ವಾ। ಶಿಷ್ಟಂ ಸಮಾನಂ। ತತ್ಸಂಬಂಧಿನೋ ನೃಚಕ್ಷಸೋ ನೃಣಾಂ ದ್ರಷ್ಟಾರಃ ಪಿತರೋ ಜಗದ್ರಕ್ಷಕಾ ರಶ್ಮಯೋ ಗರ್ಭಮಾದಧುರ್ವೃಷ್ಟ್ಯರ್ಥಂ ॥

॥ ಪ್ರತಿಪದಾರ್ಥ ॥

**ಉಷಸಃ**— ಉಷಸ್ಸಿಗೆ ಸಂಬಂಧಿಸಿದವನೂ | **ಪೃಶ್ನಿಃ**— ಆದಿತ್ಯರೂಪನೂ | **ಅಗ್ರಿಯಃ**-- ಪ್ರಮುಖನೂ ಆದ ಸೋಮದೇವನು | **ಅರೂರುಚತ್**— ಪ್ರಕಾಶಿಸುತ್ತಾನೆ | **ಉಕ್ಷಾ**— ವೃಷ್ಟಿಯನ್ನು ಸುರಿಸತಕ್ಕ ಸೋಮನು | **ವಾಜಯುಃ**— ಅನ್ನವನ್ನು ಕೊಡಲಿಚ್ಛಿಸಿ | **ಭುವನಾನಿ**— ಸಕಲ ಲೋಕಗಳನ್ನೂ | **ಬಿಭರ್ತಿ**— ಪೋಷಿಸುತ್ತಾನೆ | **ಮಾಯಾವಿನಃ**— ಪ್ರಜ್ಞಾವಂತರಾದ ದೇವತೆಗಳು | **ಅಸ್ಯ**— ಈ ಸೋಮನ | **ಮಾಯಯಾ**— ಪ್ರಜ್ಞೆಯಿಂದ | **ಮಮಿರೇ**— ಜಗತ್ತನ್ನು ನಿರ್ಮಿಸುತ್ತಾರೆ | **ನೃಚಕ್ಷಸಃ**— ಮಾನವರನ್ನು ನೋಡಬಲ್ಲ | **ಪಿತರಃ**— ಅಂಗಿರಸಾದಿ ಪಿತೃಗಳು | **ಗರ್ಭಂ**— ಗರ್ಭವನ್ನು | **ಆ ದಧುಃ**— (ಓಷಧ್ಯಾದಿಗಳಲ್ಲಿ) ಸ್ಥಾಪಿಸುತ್ತಾರೆ.

॥ ಭಾವಾರ್ಥ ॥

ಉಷಸ್ಸಿಗೆ ಸಂಬಂಧಿಸಿದವನೂ, ಆದಿತ್ಯರೂಪನೂ, ಪ್ರಮುಖನೂ ಆದ ಸೋಮದೇವನು ಪ್ರಕಾಶಿಸುತ್ತಾನೆ. ವೃಷ್ಟಿಯನ್ನು ಸುರಿಸತಕ್ಕ ಸೋಮನು ಅನ್ನವನ್ನು ಕೊಡಲಿಚ್ಛಿಸಿ ಸಕಲಲೋಕಗಳನ್ನೂ ಪೋಷಿಸುತ್ತಾನೆ. ಪ್ರಜಾವಂತರಾದ ದೇವತೆಗಳು ಈ ಸೋಮನ ಪ್ರಜ್ಞೆಯಿಂದ ಜಗತ್ತನ್ನು ನಿರ್ಮಿಸುತ್ತಾರೆ. ಮಾನವರನ್ನು ನೋಡಬಲ್ಲ ಅಂಗಿರಸಾದಿಪಿತೃಗಳು ಗರ್ಭವನ್ನು ಓಷಧ್ಯಾದಿಗಳಲ್ಲಿ ಸ್ಥಾಪಿಸುತ್ತಾರೆ.

## English Translation

The chief sun of the dawn (the Soma) shines forth ; sprinkler (of water), he nourishes the worlds, wishing (to give them) food : by his intelligence the intelligent build, the pitris, the beholders of men, support the germ (of vegetation).

ವಿಶೇಷವಿಷಯಗಳು

ಅಭಿಪ್ಲವದಲ್ಲಿ **ಅರೂರುಚತ್** ಎಂಬ ಈ ಋಕ್ಕನ್ನು ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಈಳೇ ದ್ಯಾವಾಪೃಥಿವೀ ಇತಿ ಪ್ರಾಗುತ್ತಮಾಯಾ ಅರೂರುಚದುಷಸಃ ಪೃಶ್ನಿರಗ್ರಿಯ ಇತ್ಯಾವಪೇತ** ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಗಂಧರ್ವ ಇತ್ಥಾ ಪದಮಸ್ಯ ರಕ್ಷತಿ ಪಾತಿ ದೇವಾನಾಂ ಜನಿಮಾನ್ಯದ್ಭುತಃ ।
ಗೃಭ್ಣಾತಿ ರಿಪುಂ ನಿಧಯಾ ನಿಧಾಪತಿಃ ಸುಕೃತ್ತಮಾ ಮಧುನೋ ಭಕ್ಷಮಾಶತ ॥ ೪ ॥

॥ ಪದಪಾಠಃ ॥

ಗಂಧರ್ವಃ । ಇತ್ಥಾ । ಪದಂ । ಅಸ್ಯ । ರಕ್ಷತಿ । ಪಾತಿ । ದೇವಾನಾಂ । ಜನಿಮಾನಿ । ಅದ್ಭುತಃ ।

ಗೃಭ್ಣಾತಿ । ರಿಪುಂ । ನಿಽಧಯಾ । ನಿಧಾಽಪತಿಃ । ಸುಕೃತ್ಽತಮಾಃ । ಮಧುನಃ । ಭಕ್ಷಂ । ಆಶತ ॥ ೪ ॥

॥ ಸಾಯಣಭಾಷ್ಯಂ ॥

ಅಭಿಷ್ಟವೇ ಖರಮವೇಕ್ಷಮಾಣೋ ಗಂಧರ್ವ ಇತ್ಥೇತ್ಯೇತಾಂ ಪಠೇತ್ । ಸೂತ್ರಿತಂ ಚ । ಗಂಧರ್ವ ಇತ್ಥಾ ಪದಮಸ್ಯ ರಕ್ಷತೀತಿ ಖರಮವೇಕ್ಷ್ಯ । ಆ. ೪-೭ । ಇತಿ ॥

ಗಂಧರ್ವ ಉದಕಾನಾಂ ಸ್ತುತೀನಾಂ ವಾ ಧಾರಕ ಆದಿತ್ಯೋಽಸ್ಯ ಸೋಮಸ್ಯ ಪದಂ ಸ್ಥಾನಂ ದ್ಯುಸಂಬಂಧೀತ್ಥಾ ಸತ್ಯಂ ರಕ್ಷತಿ । ಸೋಽಯಂ ಸೋಮೋ ದೇವಾನಾಂ ಜನಿಮಾನಿ ।ಜನ್ಮಾನಿ । ದೇವಾನಿತ್ಯರ್ಥಃ । ಪಾತಿ । ರಕ್ಷತಿ । ಅದ್ಭುತೋ ಮಹಾನ್ । ಕಿಂಚಾಯಂ ರಿಪುಮಸ್ಮದ್ವೈರಿಣಂ ನಿಧಯಾ । ನಿಧಾ ಪಾಶ್ಯಾ । ಪಾಶಸಮೂಹೇನ ಗೃಭ್ಣಾತಿ । ಗೃಹ್ಣಾತಿ । ನಿಧಾಪತಿಃ ಪಶುಸಮೂಹಸ್ವಾಮೀ । ತಸ್ಯಾಸ್ಯ ಮಧುನೋ ಮಧುರರಸಸ್ಯ ಭಕ್ಷಂ ಸುಕೃತ್ತಮಾ ಅತಿಶಯೇನ ಸುಕೃತಕರ್ತಾರ ಏವಾಶತ । ಪ್ರಾಪ್ನುವಂತಿ॥

॥ ಪ್ರತಿಪದಾರ್ಥ ॥

**ಗಂಧರ್ವಃ**— ಉದಕಗಳಿಗೆ ಧಾರಕನಾದ ಆದಿತ್ಯನು । **ಅಸ್ಯ**— ಈ ಸೋಮದ । **ಪದಂ**— ಸ್ಥಾನವನ್ನು । **ಇತ್ಥಾ**— ಸತ್ಯವಾಗಿಯೂ । **ರಕ್ಷತಿ**— ರಕ್ಷಿಸುತ್ತಾನೆ । **ದೇವಾನಾಂ**— ದೇವತೆಗಳ । **ಜನಿಮಾನಿ**— ಜನ್ಮಗಳನ್ನು । **ಪಾತಿ**— ರಕ್ಷಿಸುತ್ತಾನೆ । **ನಿಧಾಪತಿಃ**— ಪಾಶಗಳಿಗೆ ಒಡೆಯನೂ । **ಅದ್ಭುತಃ**— ಮಹಾತ್ಮನೂ ಆದ ಆದಿತ್ಯನು । **ರಿಪುಂ**— ನಮ್ಮ ಶತ್ರುಗಳನ್ನು । **ನಿಧಯಾ**— ಪಾಶದಿಂದ । **ಗೃಭ್ಣಾತಿ**— ಹಿಡಿದುಕೊಳ್ಳುತ್ತಾನೆ । **ಸಕೃತ್ತಮಾಃ**— ಸತ್ಕರ್ಮಕರ್ತರು । **ಮಧುನಃ**— ಮಧುರವಾದ ಸೋಮರಸದ । **ಭಕ್ಷಂ**— ಭಕ್ಷಣವನ್ನು । **ಆಶತ**— ಪಡೆಯುತ್ತಾರೆ.

॥ ಭಾವಾರ್ಥ ॥

ಉದಕಗಳಿಗೆ ಧಾರಕನಾದ ಆದಿತ್ಯನು ಈ ಸೋಮದ ಸ್ಥಾನವನ್ನು ಸತ್ಯವಾಗಿಯೂ ರಕ್ಷಿಸುತ್ತಾನೆ. ದೇವತೆಗಳ ಜನ್ಮಗಳನ್ನು ರಕ್ಷಿಸುತ್ತಾನೆ. ಪಾಶಗಳಿಗೆ ಒಡೆಯನೂ, ಮಹಾತ್ಮನೂ ಆದ ಆದಿತ್ಯನು ನಮ್ಮ ಶತ್ರುಗಳನ್ನು ಪಾಶಗಳಿಂದ ಹಿಡಿದುಕೊಳ್ಳುತ್ತಾನೆ. ಸತ್ಕರ್ಮಕರ್ತರು ಮಧುರವಾದ ಸೋಮರಸದ ಭಕ್ಷಣವನ್ನು ಪಡೆಯುತ್ತಾರೆ.

## English Translation.

The Gandharva verily protects this station ; the marvellous (Soma) preserves the races of the gods ; the lord of cattle seizes (our enemy) with a snare ; the doers of good attain the drinking of the sweet-juiced (Soma).

ವಿಶೇಷ ವಿಷಯಗಳು

ಅಭಿಷ್ಟವದಲ್ಲಿ ಖರವನ್ನು ನೋಡಿ ಗಂಧರ್ವ ಇತ್ಥಾ ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಗಂಧರ್ವ ಇತ್ಥಾ ಪದಮಸ್ಯ ರಕ್ಷತೀತಿ ಖರಮವೇಕ್ಷ್ಯ** ಎಂಬ ಸೂತ್ರದಿಂದ (ಆ. ೪–೭) ವಿವೃತ ವಾಗಿರುವುದು.

॥ ಸಂಹಿತಾಪಾಠಃ ॥

**ಹವಿರ್ಹವಿಷ್ಮೋ ಮಹಿ ಸದ್ಮ ದೈವ್ಯಂ ನಭೋ ವಸಾನಃ ಪರಿ ಯಾಸ್ಯಧ್ವರಂ ।**
**ರಾಜಾ ಪವಿತ್ರರಥೋ ವಾಜಮಾರುಹಃ ಸಹಸ್ರಭೃಷ್ಟಿರ್ಜಯಸಿ ಶ್ರವೋ ಬೃಹತ್ ॥ ೫ ॥**

॥ ಪದಪಾಠಃ ॥

ಹವಿಃ । ಹವಿಷ್ಮಃ । ಮಹಿ । ಸದ್ಮ । ದೈವ್ಯಂ । ನಭಃ । ವಸಾನಃ । ಪರಿ । ಯಾಸಿ । ಅಧ್ವರಂ ।
ರಾಜಾ । ಪವಿತ್ರऽರಥಃ । ವಾಜಂ । ಆ । ಅರುಹಃ । ಸಹಸ್ರऽಭೃಷ್ಟಿಃ । ಜಯಸಿ । ಶ್ರವಃ । ಬೃಹತ್ ॥ ೫ ॥

॥ ಸಾಯಣಭಾಷ್ಯಂ ॥

ಅಂತಿಮೇ ಪ್ರವರ್ಗ್ಯೇ ಪರಿಧಾನೀಯಾಯಾಃ ಪೂರ್ವಂ ಹವಿರ್ಹವಿಷ್ಮ ಇತ್ಯೇಷಾವಪನೀಯಾ । ಸೂತ್ರಿತಂ ಚ । ಉತ್ತಮೇ ಪ್ರಾಗುತ್ತಮಾಯಾ ಹವಿರ್ಹವಿಷ್ಮೋ ಮಹಿ ಸದ್ಮ ದೈವ್ಯಮಿತ್ಯಾವಪೇತ । ಆ. ೪–೭ । ಇತಿ ॥

ಹೇ ಹವಿಷ್ಮಃ । ಹವಿರಿತ್ಯುದಕನಾಮ । ಉದಕವನ್ ಸೋಮ ಹವಿರ್ಭೂತಂ ನಭಃ । ಉದಕನಾಮೈತತ್ । ಉದಕರಸಮಿತ್ಯರ್ಥಃ । ವಸಾನ ಆಚ್ಛಾದಯನ್ ಮಹಿ ಮಹದ್ದೈವ್ಯಂ ಸದ್ಮ ಯಾಗಗೃಹಂ ಪರಿ ಯಾಸಿ । ಪರಿಗಚ್ಛಸಿ । ಅಧ್ವರಂ ದಿವ್ರೋಢುಂ । ಕಿಂಚ ಹೇ ಸೋಮ ರಾಜಾ ಪವಿತ್ರರಥಶ್ಚ ವಾಜಂ ಸಂಗ್ರಾಮಮಾರುಹಃ । ಆರೋಹಸಿ । ಯದ್ವಾ । ತತ್ರ ತತ್ರ ಸಂಗ್ರಾಮವಾಚಕೇನ ಶಬ್ದೇನ ಯಜ್ಞವ್ಯವಹಾರದರ್ಶನಾದತ್ರ ವಾಜೋ ಯಜ್ಞಾಖ್ಯಸಂಗ್ರಾಮಃ । ತಮಾರುಹಃ । ಯಥಾ ಕಶ್ಚಿದ್ರಾಜಾ ರಥಮಾರುಹ್ಯ ಸ್ವಸ್ಥಾನಂ ಪ್ರವಿಶತಿ ತದ್ವದಿತಿ ಭಾವಃ । ಕಿಂಚ ಸಹಸ್ರಭೃಷ್ಟಿರ್ಬಹುಭ್ರಂಶಃ । ಅಪರಿಮಿತಗಮನ ಇತ್ಯರ್ಥಃ । ಅಥವಾ ಭೃಷ್ಟಿರಾಯುಧಂ । ಅಸಂಖ್ಯಾತಾಯುಧಃ ಸನ್ । ಬೃಹಚ್ಛ್ರವೋ ಮಹದನ್ನಂ ಜಯಸ್ಯಸ್ಮಾಕಂ ॥

॥ ಪ್ರತಿಪದಾರ್ಥ ॥

**ಹವಿಷ್ಮಃ**—ಉದಕವಂತನಾದ ಎಲೈ ಸೋಮನೇ ನೀನು । **ನಭಃ**—ಉದಕವನ್ನು । **ವಸಾನಃ**—ಹೊದ್ದುಕೊಂಡು । **ಮಹಿ**—ಮಹತ್ತಾದುದೂ । **ದೈವ್ಯಂ**—ಪೂಜ್ಯನಾದುದೂ ಆದ । **ಸದ್ಮ**—ಯಾಗಗೃಹಕ್ಕೆ । **ಅಧ್ವರಂ**—ಯಜ್ಞವನ್ನು ನಿರ್ವಹಿಸಲು । **ಪರಿ ಯಾಸಿ**—ಹೋಗುತ್ತೀಯೆ । **ರಾಜಾ**—ಪ್ರಭುವಾದ ನೀನು ।

**ಪವಿತ್ರರಥಃ**— ಪರಿಶುದ್ಧವಾದ ರಥವನ್ನು ಹತ್ತಿ | **ವಾಜಂ**— ಯುದ್ಧಕ್ಕೆ | **ಆರುಹಃ**— ಹತ್ತಿಹೋಗುತ್ತೀಯೆ | **ಸಹಸ್ರಭೃಷ್ಟಿಃ**— ಅನೇಕವಿಧವಾದ ಆಯುಧಗಳುಳ್ಳವನಾಗಿ | **ಬೃಹತ್**— ಪ್ರಭೂತವಾದ | **ಶ್ರವಃ**— ಅನ್ನವನ್ನು | **ಜಯಸಿ**— ನಮಗೆ ಸಂಪಾದಿಸಿ ಕೊಡುತ್ತೀಯೆ.

॥ ಭಾವಾರ್ಥ ॥

ಉದಕವಂತನಾದ ಎಲೈ ಸೋಮದೇವನೇ, ಉದಕವನ್ನು ಹೊದ್ದುಕೊಂಡು (ಸೇರಿಕೊಂಡು) ಮಹತ್ತಾದುದೂ, ಪೂಜ್ಯವಾದುದೂ ಆದ ಯಾಗ ಗೃಹಕ್ಕೆ ಯಜ್ಞವನ್ನು ನಿರ್ವಹಿಸಲು ನೀನು ಹೋಗುತ್ತೀಯೆ. ಅನೇಕವಿಧವಾದ ಆಯುಧಗಳುಳ್ಳವನಾಗಿ ನಮಗೆ ಪ್ರಭೂತವಾದ ಅನ್ನವನ್ನು ಸಂಪಾದಿಸಿಕೊಡುತ್ತೀಯೆ.

## English Translation.

Possessed of water, you go clothed in the liquid water, to the great celestial abode to (take) the sacrifice; as king you ascend the chariot to go to the battle, mounted on your filter-chariot; armed with a thousand weapons you win (us) abundant food.

॥ ವಿಶೇಷವಿಷಯಗಳು ॥

ಕೊನೆಯ ಪ್ರವರ್ಗ್ಯದಲ್ಲಿ ಸ್ತೋಮವೃದ್ಧಿಗಾಗಿ ಪಠಿಸುವ ಋಕ್ಕುಗಳಲ್ಲಿ ಕೊನೆಯ ಋಕ್ಕನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ **ಹವಿರ್ಹವಿಷ್ಮಃ** ಎಂಬ ಈ ಋಕ್ಕನ್ನು ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ— **ಉತ್ತಮೇಽಪ್ರಾಗುತ್ತಮಾಯಾ ಹವಿರ್ಹವಿಷ್ಮೋ ಮಹಿ ಸದ್ಮ ದೈವ್ಯಮಿತ್ಯಾವಪೇತ** ಎಂಬ ಸೂತ್ರದಿಂದ (ಆ. ೪-೭) ವಿವೃತವಾಗಿರುವುದು.

# ಎಂಭತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪವಸ್ವ ದೇವಮಾದನ ಇತಿ ಪಂಚರ್ಚಂ ಸಪ್ತದಶಂ ಸೂಕ್ತಂ ವಾಚಃ ಪುತ್ರಸ್ಯ ಪ್ರಜಾಪತೇರಾರ್ಷಂ ಜಾಗತಂ ಪವಮಾನಸೋಮದೇವತಾಕಂ | ತಥಾ ಚಾನುಕ್ರಾಂತಂ | ಪವಸ್ವ ವಾಚ್ಯಃ ಪ್ರಜಾಪತಿರಿತಿ || ಗತೋ ವಿನಿಯೋಗಃ ||**

ಅನುವಾದವು— **ಪವಸ್ವ ದೇವಮಾದನಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಪ್ರಜಾಪತಿಯೆಂಬುವನು ಋಷಿಯು ; ಪವಮಾನ ಸೋಮನು ದೇವತೆಯು ; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಪವಸ್ವ ವಾಚ್ಯಃ ಪ್ರಜಾಪತಿಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೮೪

ಮಂಡಲ—೯ ॥ ಅನುವಾಕ—೪ ॥ ಸೂಕ್ತ—೮೪ ॥

ಅಷ್ಟಕ—೭ ॥ ಅಧ್ಯಾಯ—೩ ॥ ವರ್ಗ—೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಪ್ರಜಾಪತಿರ್ವಾಚ್ಯಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಪವಸ್ವ ದೇವಮಾದನೋ ವಿಚರ್ಷಣಿರಪ್ಸಾ ಇಂದ್ರಾಯ ವರುಣಾಯ ವಾಯವೇ ।

ಕೃಧೀ ನೋ ಅದ್ಯ ವರಿವಃ ಸ್ವಸ್ತಿಮದುರುಕ್ಷಿತೌ ಗೃಣೀಹಿ ದೈವ್ಯಂ ಜನಂ ॥೧॥

॥ ಪದಪಾಠಃ ॥

ಪವಸ್ವ । ದೇವಽಮಾದನಃ । ವಿಽಚರ್ಷಣಿಃ । ಅಪ್ಸಾಃ । ಇಂದ್ರಾಯ । ವರುಣಾಯ । ವಾಯವೇ ।

ಕೃಧಿ । ನಃ । ಅದ್ಯ । ವರಿವಃ । ಸ್ವಸ್ತಿಽಮತ್ । ಉರುಽಕ್ಷಿತೌ । ಗೃಣೀಹಿ । ದೈವ್ಯಂ । ಜನಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ದೇವಮಾದನೋ ದೇವಾನಾಂ ಮಾದಯಿತಾ ವಿಚರ್ಷಣಿರ್ವಿದ್ರಷ್ಟಾಪ್ಸಾ ಅಪಾಂ ದಾತಾ ತ್ವಂ ಪವಸ್ವ । ಕ್ಷರ । ಕಸ್ಮೈ । ಇಂದ್ರಾಯ ವರುಣಾಯ ವಾಯವೇ ಚ । ನೋಽಸ್ಮಾಕಂ ವರಿವೋ ಧನಂ ಸ್ವಸ್ತಿಮತ್ । ಸ್ವಸ್ತೀತ್ಯವಿನಾಶನಾಮ । ತದ್ವದ್ಧನಂ ಕೃಧಿ । ಕುರು । ಉರುಕ್ಷಿತೌ ವಿಸ್ತೀರ್ಣಾಯಾಂ ಭೂಮೌ ಯಜ್ಞಸಂಬಂಧಿನ್ಯಾಂ ದೈವ್ಯಂ ಜನಂ ದೇವಸಂಬಂಧಿನಂ ಸಂಘಂ । ಜನಶಬ್ದಃ ಸಂಘವಾಚೀ । ತಂ ಗೃಣೀಹಿ । ಗೃಣಾತಿಃ ಶಬ್ದಕರ್ಮಾ । ಶಬ್ದಯ । ಯಥಾ ತ್ವದೀಯಾಭಿಷವಶಬ್ದಂ ಶ್ರುತ್ವಾ ದೇವಾ ಆಗಚ್ಛಂತಿ ತಥಾ ಗೃಣೀಹೀತ್ಯರ್ಥಃ । ಅಥವಾ ದೈವ್ಯಂ ಜನಮಿತ್ಯೃಷಿಃ ಸ್ವಾತ್ಮಾನಮಾಹ । ದೇವಸಂಬಂಧಿನಂ ಜನಂ ಮಾಂ ಗೃಣೀಹಿ । ಸಾಧು ಸಂಭಕ್ತೇತಿ ಶಬ್ದಯ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ದೇವಮಾದನಃ—ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವವನೂ । ವಿಚರ್ಷಣಿಃ—ಸೂಕ್ಷ್ಮದೃಷ್ಟಿಯುಳ್ಳವನೂ । ಅಪ್ಸಾಃ—ಉದಕಪ್ರದನೂ ಆದ ನೀನು । ಇಂದ್ರಾಯ—ಇಂದ್ರನಿ

ಗಾಗಿಯೂ | **ವರುಣಾಯ**—ವರುಣನಿಗಾಗಿಯೂ | **ವಾಯವೇ**—ವಾಯುವಿಗಾಗಿಯೂ | **ಪವಸ್ವ**—ಪ್ರವಹಿಸು | **ನಃ**—ನಮಗೆ | **ವರಿವಃ**—ಧನವನ್ನು | **ಸ್ವಸ್ತಿಮತ್**—ನಮಗೆ ಕ್ಷೇಮವನ್ನುಂಟುಮಾಡುವಂತೆ | **ಕೃಧಿ**—ಒದಗಿಸು | **ಅದ್ಯ**—ಈಗ | **ಉರುಕ್ಷಿತೌ**—ವಿಸ್ತೃತವಾದ ಯಜ್ಞಭೂಮಿಯಲ್ಲಿ | **ದೈವ್ಯಂ ಜನಂ**—ದೇವಲೋಕದ ದೇವತಾಜನವನ್ನು | **ಗೃಣೀಹಿ**—ಕರೆತಂದು ಸೇರಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವವನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಆದ ನೀನು ಇಂದ್ರನಿಗಾಗಿಯೂ, ವರುಣನಿಗಾಗಿಯೂ, ವಾಯುವಿಗಾಗಿಯೂ ಪ್ರವಹಿಸು. ನಮಗೆ ಕ್ಷೇಮವನ್ನುಂಟುಮಾಡುವಂತೆ ಧನವನ್ನು ಒದಗಿಸು. ವಿಸ್ತೃತವಾದ ಯಜ್ಞಭೂಮಿಯಲ್ಲಿ ದೇವತೆಗಳನ್ನು ಕರೆತಂದು ಸೇರಿಸು.

English Translation

Flow, the exhilarator of the gods, the far-seeing, the giver of water, for Indra, Varuna, and Vayu ; grant us tnis day wealth and health ; call the celestial people on the spacious ground (of the sacrifice).

|| ಸಂಹಿತಾಪಾಠಃ ||

ಆ ಯಸ್ತಸ್ಥೌ ಭುವನಾನ್ಯಮರ್ತ್ಯೋ ವಿಶ್ವಾನಿ ಸೋಮಃ ಪರಿ ತಾನ್ಯರ್ಷತಿ |
ಕೃಣ್ವನ್ತ್ಸಂಚೃತಂ ವಿಚೃತಮಭಿಷ್ಟಯ ಇಂದುಃ ಸಿಷಕ್ತ್ಯುಷಸಂ ನ
ಸೂರ್ಯಃ || ೨ ||

|| ಪದಪಾಠಃ ||

ಆ | ಯಃ | ತಸ್ಥೌ | ಭುವನಾನಿ | ಅಮರ್ತ್ಯಃ | ವಿಶ್ವಾನಿ | ಸೋಮಃ | ಪರಿ | ತಾನಿ | ಅರ್ಷತಿ |
ಕೃಣ್ವನ್ | ಸಂऽಚೃತಂ | ವಿऽಚೃತಂ | ಅಭಿಷ್ಟಯೇ | ಇಂದುಃ | ಸಿಸಕ್ತಿ | ಉಷಸಂ | ನ | ಸೂರ್ಯಃ

|| ಸಾಯಣಭಾಷ್ಯಂ ||

ಯೋऽಮರ್ತ್ಯೋ ದೇವಃ ಸೋಮೋ ಭುವನಾನಿ ಲೋಕಾನಾ ತಸ್ಥೌ ಆಸ್ಥಿತವಾನ್ ತಾನಿ ವಿಶ್ವಾನಿ ಸರ್ವಾಣಿ ಭುವನಾನಿ ಪರ್ಯರ್ಷತಿ ಪರಿತೋ ಗಚ್ಛತಿ | ಪರಿತೋ ರಕ್ಷತೀತ್ಯರ್ಥಃ | ಸೋऽಯಮಿಂದುರ್ಯಜ್ಞಂ ಯಜಮಾನಂ ವಾ ಸಂಚೃತಂ ದೇವೈಃ ಫಲೈರ್ವಾ ಸಂಬದ್ಧಂ ಕೃಣ್ವನ್ ಕುರ್ವನ್ ವಿಚೃತಮಸುರಾದಿಭಿರ್ದುಃಖೈರ್ವಾ ವಿಮುಕ್ತಂ ಕೃಣ್ವನ್ನಭಿತೋ ಯಾಗಾಯ ಸಿಷಕ್ತಿ | ಸೇವತೇ ಯಜ್ಞಂ | ಉಷಸಂ ನ ಸೂರ್ಯಃ ಸೂರ್ಯ ಉಷಸಮಿವ ಯಥಾಭಿಷ್ಟಯೇऽಭಿತೋ ಗಮನಾಯ ಪ್ರಾಣಿನಾಂ ಸಂಚೃತಂ ಪ್ರಕಾಶೈಃ ಸಂಯುಕ್ತಂ ವಿಚೃತಂ ತಮೋಭಿರ್ವಿಮುಕ್ತಂ ಚ ಲೋಕಂ ಕುರ್ವನ್ನುಷಸಂ ಸೇವತೇ ತದ್ವತ್||

|| ಪ್ರತಿಪದಾರ್ಥ ||

**ಯಃ**—ಯಾರು । **ಅಮರ್ತ್ಯಃ**—ಮರಣರಹಿತನೋ ಅಂತಹ । **ಸೋಮಃ**—ಸೋಮನು । **ಭುವನಾನಿ**—ಲೋಕಗಳನ್ನೆಲ್ಲ । **ಆ ತಸ್ಥೌ**—ಆವರಿಸಿ ನಿಂತಿದ್ದಾನೆ । **ವಿಶ್ವಾನಿ ತಾನಿ**—ಆ ಸಕಲ ಲೋಕಗಳನ್ನೂ । **ಪರಿ ಅರ್ಷತಿ**—ಸುತ್ತುವರಿದು ಸಂಚರಿಸುತ್ತಾನೆ । **ಸೂರ್ಯಃ**—ಸೂರ್ಯನು । **ಉಷಸಂ ನ**— ಉಷಸ್ಸನ್ನು ಅನುಸರಿಸುವಂತೆ । **ಇಂದುಃ**—ಸೋಮನು । **ಅಭಿಷ್ಟಯೇ**—ಇಷ್ಟಾರ್ಥಸಾಧನೆಗಾಗಿ । (**ಯಜ್ಞಂ**—ಯಜ್ಞವನ್ನು) । **ಸಂಚೃತಂ**—ಫಲಗಳೊಂದಿಗೆ ಕೂಡಿದುದನ್ನಾಗಿಯೂ । **ವಿ ಚೃತಂ**—ದುಃಖರಹಿತವನ್ನಾಗಿಯೂ । **ಕೃಣ್ವನ್**—ಮಾಡುತ್ತ । **ಸಿಷಕ್ತಿ**—ಸೇವಿಸುತ್ತಾನೆ.

|| ಭಾವಾರ್ಥ ||

ಮರಣರಹಿತನಾದ ಸೋಮದೇವನು ಸಕಲಲೋಕಗಳನ್ನೂ ಆವರಿಸಿ ನಿಂತಿದ್ದಾನೆ. ಮತ್ತು ಆ ಲೋಕಗಳನ್ನೆಲ್ಲ ಸುತ್ತಿ ಸಂಚರಿಸುತ್ತಾನೆ. ಸೂರ್ಯನು ಉಷಸ್ಸನ್ನು ಅನುಸರಿಸುವಂತೆ ಸೋಮನು ಇಷ್ಟಾರ್ಥಸಾಧನೆಗಾಗಿ ಯಜ್ಞವನ್ನು ಫಲಗಳೊಂದಿಗೆ ಕೂಡಿದುದನ್ನಾಗಿಯೂ, ದುಃಖರಹಿತವನ್ನಾಗಿಯೂ ಮಾಡುತ್ತ ಸೇವಿಸುತ್ತಾನೆ.

English Translation

The immortal Soma who is stationed upon the worlds, goes round about them all ; Indu, binding and unloosing accompanies (the sacrifice) for its protection, as the sun the dawn.

|| ಸಂಹಿತಾಪಾಠಃ ||

ಆ ಯೋ ಗೋಭಿಃ ಸೃಜ್ಯತ ಓಷಧೀಷ್ವಾ ದೇವಾನಾಂ ಸುಮ್ನ ಇಷಯನ್ನು-
ಪಾವಸುಃ ।
ಆ ವಿದ್ಯುತಾ ಪವತೇ ಧಾರಯಾ ಸುತ ಇಂದ್ರಂ ಸೋಮೋ ಮಾದಯನ್ದೈ-
ವ್ಯಂ ಜನಂ ॥ ೩ ॥

|| ಪದಪಾಠಃ ||

ಆ । ಯಃ । ಗೋಭಿಃ । ಸೃಜ್ಯತೇ । ಓಷಧೀಷು । ಆ । ದೇವಾನಾಂ । ಸುಮ್ನೇ । ಇಷಯನ್ । ಉಪಽವಸುಃ ।
ಆ । ವಿಽದ್ಯುತಾ । ಪವತೇ । ಧಾರಯಾ । ಸುತಃ । ಇಂದ್ರಂ । ಸೋಮಃ । ಮಾದಯನ್ । ದೈವ್ಯಂ । ಜನಂ ॥ ೩ ॥

|| ಸಾಯಣಭಾಷ್ಯಂ ||

**ಯಃ ಸೋಮೋ ಗೋಭೀ ರಶ್ಮಿಭಿರಾ ಸೃಜ್ಯತೆ ಓಷಧೀಷು । ಯಂ ಸೋಮಂ ಸ್ಥಾಪಯಂತೀತ್ಯರ್ಥಃ । ಕಿಮರ್ಥಂ । ದೇವಾನಾಂ ಸುಮ್ನೇ ಸುಖೇ ನಿಮಿತ್ತೇ ಸತಿ । ಕೀದೃಶೋಽಯಂ । ಇಷಯನ್ ದೇವಾನ್ಪ್ರಾಪ್ತುಮಿಚ್ಛನ್ ॥ ಇಷ ಗತೌ । ಧನಮಿಚ್ಛನ್ವಾ । ತಥೋಪಾವಸುಃ ಶತ್ರುಭ್ಯಃ ಸಕಾಶಾತ್ಪ್ರಾಪ್ತಧನಃ । ಸ ಸೋಮೋ ವಿದ್ಯುತಾ ವಿದ್ಯೋತಮಾನಯಾ ಧಾರಯಾ ಆ ಪವತೇ ಸುತಃ ಸನ್ । ಕಿಂ ಕುರ್ವನ್ । ದೈವ್ಯಂ ದೇವಸ್ವಾಮಿನಮಿಂದ್ರಂ ಮಾದಯನ್ ॥**

|| ಪ್ರತಿಪದಾರ್ಥ ||

**ಯಃ**—ಯಾವ ಸೋಮದೇವನು । **ಗೋಭಿಃ**—ಸೂರ್ಯರಶ್ಮಿಗಳಿಂದ । **ಆ ಸೃಜ್ಯತೇ**—ನಿರ್ಮಿಸಲ್ಪಡುವನೋ । (**ಯಂ**—ಯಾವ ಸೋಮನನ್ನು) । **ದೇವಾನಾಂ**—ದೇವತೆಗಳ । **ಸುಮ್ನೇ**—ಸುಖಕ್ಕಾಗಿ । **ಓಷಧೀಷು**—ಓಷಧಿಗಳಲ್ಲಿ (ಸ್ಥಾಪಿಸುವರೋ) । **ಸುತಃ ಸೋಮಃ**—ಹಿಂಡಲ್ಪಟ್ಟ ಅದೇ ಸೋಮದೇವನು । **ಇಷಯನ್**—ದೇವತೆಗಳನ್ನು ಸಮೀಪಿಸುವ ಇಚ್ಛೆಯಿಂದಲೂ । **ದೈವ್ಯಂ ಜನಂ**—ದೇವತೆಗಳ ಸಮೂಹವನ್ನೂ । **ಇಂದ್ರಂ**—ಇಂದ್ರನನ್ನೂ । **ಮಾದಯನ್**—ಹರ್ಷಗೊಳಿಸುತ್ತಲೂ । **ಉಪಾವಸುಃ**—ಶತ್ರುಗಳ ಧನವನ್ನು ಹೊಂದಿ । **ವಿದ್ಯುತಾ**—ಪ್ರಕಾಶಮಾನವಾದ । **ಧಾರಯಾ**—ಪ್ರವಾಹದಿಂದ । **ಆ ಪವತೇ**—ಪ್ರವಹಿಸುತ್ತಾನೆ

|| ಭಾವಾರ್ಥ ||

ಯಾವ ಸೋಮದೇವನು ಸೂರ್ಯರಶ್ಮಿಗಳಿಂದ ನಿರ್ಮಿಸಲ್ಪಡುವನೋ, ಯಾವ ಸೋಮನನ್ನು ದೇವತೆಗಳ ಸುಖಕ್ಕಾಗಿ ಓಷಧಿಗಳಲ್ಲಿ ಸ್ಥಾಪಿಸುವರೋ, ಅದೇ ಸೋಮನು ಹಿಂಡಲ್ಪಟ್ಟಾಗ ದೇವತೆಗಳನ್ನು ಸಮೀಪಿಸುವ ಇಚ್ಛೆಯಿಂದಲೂ, ದೇವತೆಗಳನ್ನೂ, ಇಂದ್ರನನ್ನೂ ಹರ್ಷಗೊಳಿಸುತ್ತಲೂ, ಶತ್ರುಗಳ ಧನವನ್ನು ಹೊಂದಿ ಪ್ರಕಾಶಮಾನವಾದ ಪ್ರವಾಹದಿಂದ ಪ್ರವಹಿಸುತ್ತಾನೆ.

English Translation

The Soma who is created by the (sun's) rays, (and whom they place) in the herbs for the gratification of the gods, desiring to go (to the gods), taking wealth from (the foe), flows when effused in a brilliant stream, exhilarating Indra (and) the people of heaven.

|| ಸಂಹಿತಾಪಾಠಃ ||

**ಏಷ ಸ್ಯ ಸೋಮಃ ಪವತೇ ಸಹಸ್ರಜಿದ್ಧಿನ್ವಾನೋ ವಾಚಮಿಷಿರಾಮುಷರ್ಬುಧಂ ।**

ಇಂದುಃ ಸಮುದ್ರಮುದಿಯರ್ತಿ ವಾಯುಭಿರೇಂದ್ರಸ್ಯ ಹಾರ್ದಿ ಕಲಶೇಷು
ಸೀದತಿ ॥ ೪ ॥

॥ ಪದಪಾಠಃ ॥

ಏಷಃ । ಸ್ಯಃ । ಸೋಮಃ । ಪವತೇ । ಸಹಸ್ರಽಜಿತ್ । ಹಿನ್ವಾನಃ । ವಾಚಂ । ಇಷಿರಾಂ । ಉಷಃಽಬುಧಂ ॥

ಇಂದುಃ । ಸಮುದ್ರಂ । ಉತ್ । ಇಯರ್ತಿ । ವಾಯುಽಭಿಃ । ಆ । ಇಂದ್ರಸ್ಯ । ಹಾರ್ದಿ । ಕಲಶೇಷು ।
ಸೀದತಿ ॥ ೪ ॥

॥ ಸಾಯಣಭಾಷ್ಯಂ ॥

ಏಷ ಸ್ಯ ಸ ಸೋಮಃ ಪವತೇ । ಪೂಯತೇ । ಕೀದೃಶ ಏಷಃ । ಸಹಸ್ರಜಿತ್ ಸಹಸ್ರಸ್ಯ ಜೇತಾ । ಕಿಂ ಕುರ್ವನ್ । ವಾಚಮೃತ್ವಿಜಾಂ ಸ್ತುತಿರೂಪಾಂ ವಾಚಂ ಹಿನ್ವಾನಃ ಪ್ರೇರಯನ್ । ಕೀದೃಶೀಂ ವಾಚಂ । ಇಷಿರಾಂ ಗಮನಶೀಲಾಂ ಸ್ತುತ್ಯಂ ಪ್ರತಿ ಗಂತ್ರೀಮುಷರ್ಬುಧಮುಷಸಿ ಪ್ರಬುದ್ಧಾಂ । ಸೋಽಯಮಿಂದುಃ ಸೋಮಃ ಸಮುದ್ರಂ ಸಮುದ್ರಿಯಂ ರಸಮುದಿಯರ್ತಿ ಉದ್ಗಮಯತಿ ವಾಯುಭಿರ್ಗಂತೃಭಿರಧ್ವರ್ಯ್ವಾದಿಭಿಃ ವಾಯುಭಿರೇವ ವಾ ಪ್ರೇರ್ಯಮಾಣಃ ಸನ್ । ತಥೇಂದ್ರಸ್ಯ ಹಾರ್ದಿ । ಹಾರ್ದಂ ಪ್ರಿಯಂ । ತದ್ಧಾರ್ದೀಂದ್ರಸ್ಯ ಪ್ರಿಯಂ ಯಥಾ ಭವತಿ ತಥಾ ಕಲಶೇಷು ದ್ರೋಣಕಲಶಪ್ರಭೃತಿಷ್ವಾ ಸೀದತಿ ॥

॥ ಪ್ರತಿಪದಾರ್ಥ ॥

**ಸ್ಯಃ**—ಪ್ರಸಿದ್ಧನಾದ । **ಏಷಃ ಸೋಮಃ**—ಈ ಸೋಮದೇವನು । **ಇಷಿರಾಂ**—ದೇವತೆಗಳನ್ನು ಸಮೀಪಿಸುವುದೂ । **ಉಷರ್ಬುಧಂ**—ಉಷಃಕಾಲದಲ್ಲಿ ಆವಿರ್ಭೂತವಾದುದೂ ಆದ । **ವಾಚಂ**—ಸ್ತುತಿಯನ್ನು । **ಹಿನ್ವಾನಃ**—ಪ್ರೇರಿಸುತ್ತ । **ಸಹಸ್ರಜಿತ್**—ಅನೇಕ ಧನಗಳನ್ನು ಜಯಿಸಿದವನಾಗಿ । **ಪವತೇ**—ಪ್ರವಹಿಸುತ್ತಾನೆ । **ವಾಯುಭಿಃ**—ಅಧ್ವರ್ಯುಗಳಿಂದ ಪ್ರೇರಿತನಾಗಿ । **ಇಂದುಃ**—ಅದೇ ಸೋಮನು । **ಸಮುದ್ರಂ**—ಸಮುದ್ರದಂತಿರುವ ತನ್ನ ರಸವನ್ನು । **ಉದಿಯರ್ತಿ**—ಹೊರಕ್ಕೆ ಪ್ರವಿಸುವಂತೆ ಮಾಡುತ್ತಾನೆ । **ಇಂದ್ರಸ್ಯ**—ಇಂದ್ರನಿಗೆ । **ಹಾರ್ದಿ**—ಪ್ರಿಯಕರವಾದ । **ಕಲಶೇಷು**—ದ್ರೋಣಕಲಶಾದಿಗಳಲ್ಲಿ । **ಆ ಸೀದತಿ**—ಸ್ಥಾಪಿತನಾಗುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧನಾದ ಸೋಮದೇವನು ದೇವತೆಗಳನ್ನು ಸಮೀಪಿಸುವುದೂ, ಉಷಃಕಾಲದಲ್ಲಿ ಆವಿರ್ಭೂತವಾದುದೂ ಆದ ಸ್ತುತಿಯನ್ನು ಪ್ರೇರಿಸುತ್ತ ಅನೇಕ ಧನಗಳನ್ನು ಜಯಿಸಿದವನಾಗಿ ಪ್ರವಹಿಸುತ್ತಾನೆ. ಅಧ್ವರ್ಯುಗಳಿಂದ ಪ್ರೇರಿತನಾಗಿ ಅದೇ ಸೋಮನು ಸಮುದ್ರದಂತಿರುವ ತನ್ನ ರಸವನ್ನು ಹೊರಕ್ಕೆ ಪ್ರವಿಸುವಂತೆ ಮಾಡುತ್ತಾನೆ ಇಂದ್ರನಿಗೆ ಪ್ರಿಯಕರವಾದ ದ್ರೋಣಕಲಶಾದಿಗಳಲ್ಲಿ ಸ್ಥಾಪಿತನಾಗುತ್ತಾನೆ.

English Translation

This is the Soma, the conqueror of thousands, who flows stimulating the rapid voice (of the priests), awaked at dawn ; Indu sends forth his ocean with the winds, and sinks into the pitchers into Indra's heart.

|| ಸಂಹಿತಾಪಾಠಃ ||

ಅಭಿ ತ್ಯಂ ಗಾವಃ ಪಯಸಾ ಪಯೋವೃಧಂ ಸೋಮಂ ಶ್ರೀಣಂತಿ ಮತಿಭಿಃ
ಸ್ವರ್ವಿದಂ |
ಧನಂಜಯಃ ಪವತೇ ಕೃತ್ವ್ಯೋ ರಸೋ ವಿಪ್ರಃ ಕವಿಃ ಕಾವ್ಯೇನಾ
ಸ್ವರ್ಚನಾಃ || ೫ ||

|| ಪದಪಾಠಃ ||

ಅಭಿ | ತ್ಯಂ | ಗಾವಃ | ಪಯಸಾ | ಪಯಃऽವೃಧಂ | ಸೋಮಂ | ಶ್ರೀಣಂತಿ | ಮತಿऽಭಿಃ | ಸ್ವಃऽವಿದಂ |
ಧನಂऽಜಯಃ | ಪವತೇ | ಕೃತ್ವ್ಯಃ | ರಸಃ | ವಿಪ್ರಃ | ಕವಿಃ | ಕಾವ್ಯೇನ | ಸ್ವಃऽಚನಾಃ || ೫ ||

|| ಸಾಯಣಭಾಷ್ಯಂ ||

ತ್ಯಂ ತಂ ಪಯೋವೃಧಂ ಪಯಸೋ ವರ್ಧಕಂ ಸೋಮಂ ಗಾವಃ ಪಯಸಾ ಸ್ವಕೀಯೇನ ಕ್ಷೀರೇಣ ಶ್ರೀಣಂತಿ | ಶ್ರಯಣಂ ಕುರ್ವಂತಿ | ಯೋ ಮತಿಭಿಃ ಸ್ತುತಿಭಿಃ ಸರ್ವಂ ಪ್ರಯಚ್ಛತಿ ತಂ ಸ್ವರ್ವಿದಂ ಸೋಮಂ ಶ್ರೀಣಂತಿ | ಸ ಧನಂಜಯಃ ಶತ್ರುಧನಾನಾಂ ಜೇತಾ ಸೋಮಃ ಕಾವ್ಯೇನ ಕರ್ಮಣಾ ಪವತೇ | ಪೂಯತೇ | ಕೀದೃಶಃ ಸಃ | ಕೃತ್ವ್ಯಃ ಕರ್ಮಣ್ಯೋ ರಸೋ ರಸರೂಪೋ ವಿಪ್ರೋ ಮೇಧಾವೀ ಕವಿಃ ಕ್ರಾಂತಪ್ರಜ್ಞಃ ಸ್ವರ್ಚನಾಃ ಸರ್ವಾನ್ನಃ | ಚನ ಇತ್ಯನ್ನನಾಮ ||

|| ಪ್ರತಿಪದಾರ್ಥ ||

**ಮತಿಭಿಃ**—ಸ್ತುತಿಗಳಿಂದ ಪ್ರೀತನಾದಾಗ | **ಸ್ವರ್ವಿದಂ**—ಸಕಲವನ್ನೂ ಕೊಡತಕ್ಕವನೂ | **ತ್ಯಂ**—ಪ್ರಸಿದ್ಧನೂ | **ಪಯೋವೃಧಂ**—ಕ್ಷೀರವನ್ನು ವೃದ್ಧಿಪಡಿಸುವವನೂ ಆದ | **ಸೋಮಂ**—ಸೋಮನನ್ನು | **ಗಾವಃ**—ಗೋವುಗಳು | **ಪಯಸಾ**—ಕ್ಷೀರಗಳೊಡನೆ | **ಅಭಿ ಶ್ರೀಣಂತಿ**—ಮಿಶ್ರಮಾಡುತ್ತವೆ | **ಕೃತ್ವ್ಯಃ**—ಕರ್ಮಕ್ಕೆ ಯೋಗ್ಯನೂ | **ರಸಃ**—ರಸರೂಪನೂ | **ವಿಪ್ರಃ**—ಮೇಧಾವಿಯೂ | **ಕವಿಃ**—ಕ್ರಾಂತಪ್ರಜ್ಞನೂ | **ಸ್ವರ್ಚನಾಃ**—ಸಕಲವಾದ ಅನ್ನವಂತನೂ | **ಧನಂಜಯಃ**—ಶತ್ರುಧನಗಳನ್ನು ಜಯಿಸುವವನೂ ಆದ ಸೋಮನು | **ಪವತೇ**—ಪ್ರವಹಿಸುತ್ತಾನೆ.

|| ಭಾವಾರ್ಥ ||

ಸ್ತುತಿಗಳಿಂದ ಪ್ರೀತನಾದಾಗ ಸಕಲವನ್ನೂ ಕೊಡತಕ್ಕವನೂ, ಪ್ರಸಿದ್ಧನೂ, ಕ್ಷೀರವನ್ನು ವೃದ್ಧಿಪಡಿಸುವವನೂ ಆದ ಸೋಮನನ್ನು ಗೋವುಗಳು ತಮ್ಮಕ್ಷೀರಗಳೊಡನೆ ಮಿಶ್ರಮಾಡುತ್ತವೆ. ಕರ್ಮಕ್ಕೆ ಯೋಗ್ಯನೂ, ರಸರೂಪನೂ, ಮೇಧಾವಿಯೂ, ಕ್ರಾಂತಪ್ರಜ್ಞನೂ, ಸಕಲವಾದ ಅನ್ನವಂತನೂ, ಶತ್ರುಧನಗಳನ್ನು ಜಯಿಸುವವನೂ ಆದ ಸೋಮನು ಪ್ರವಹಿಸುತ್ತಾನೆ.

## English Translation.

The cows dilute with their milk that milk-augmenting Soma who bestows all things by means of praises ; (the Soma) the winner of (our foes') wealth flows purified by the rite, apt for the rite, wise, experienced, the (giver of) all food.

# ಎಂಭತ್ತೈದನೆಯ ಸೂಕ್ತವು

| ಸಾಯಣಭಾಷ್ಯಂ ||

**ಇಂದ್ರಾಯೇತಿ ದ್ವಾದಶರ್ಚಮಷ್ಟಾದಶಂ ಸೂಕ್ತಂ ಭೃಗುಗೋತ್ರಸ್ಯ ವೇನಸ್ಯಾರ್ಷಂ ಪವಮಾನಸೋಮದೇವತಾಕಂ | ಏಕಾದಶೀದ್ವಾದಶ್ಯೌ ತ್ರಿಷ್ಟುಭೌ ಶಿಷ್ಟಾ ಜಗತ್ಯಃ | ತಥಾ ಚಾನುಕ್ರಾಂತಂ | ಇಂದ್ರಾಯ ದ್ವಾದಶ ವೇನೋ ಭಾರ್ಗವೋ ದ್ವಿತ್ರಿಷ್ಟುಬಂತಮಿತಿ || ಗತೋ ವಿನಿಯೋಗಃ ||**

ಅನುವಾದವು—**ಇಂದ್ರಾಯ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೆಂಟನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಗುಗೋತ್ರದ ವೇನನೆಂಬುವನು ಋಷಿಯು ; ಪವಮಾನಸೋಮನು ದೇವತೆಯು ; ಈ ಸೂಕ್ತದಲ್ಲಿ ಹನ್ನೊಂದು ಮತ್ತು ಹನ್ನೆರಡನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು, ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಇಂದ್ರಾಯ ದ್ವಾದಶ ವೇನೋ ಭಾರ್ಗವೋ ದ್ವಿತ್ರಿಷ್ಟುಬಂತಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೮೫

ಮಂಡಲ—೯ || ಅನುವಾಕ—೪ || ಸೂಕ್ತ—೮೫ ||

ಅಷ್ಟಕ—೭ || ಅಧ್ಯಾಯ—೩ || ವರ್ಗ—೧೦—೧೧ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||

|| ಋಷಿಃ—ವೇನೋ ಭಾರ್ಗವಃ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—೧—೧೦ ಜಗತೀ | ೧೧, ೧೨ ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಇಂದ್ರಾಯ ಸೋಮ ಸುಷುತಃ ಪರಿ ಸ್ರವಾಪಾಮೀವಾ ಭವತು ರಕ್ಷಸಾ ಸಹ ।
ಮಾ ತೇ ರಸಸ್ಯ ಮತ್ಸತ ದ್ವಯಾವಿನೋ ದ್ರವಿಣಸ್ವಂತ ಇಹ ಸಂತ್ವಿಂದವಃ ॥

|| ಪದಪಾಠಃ ||

ಇಂದ್ರಾಯ । ಸೋಮ । ಸುऽಸುತಃ । ಪರಿ । ಸ್ರವ । ಅಪ । ಅಮೀವಾ । ಭವತು । ರಕ್ಷಸಾ । ಸಹ ।
ಮಾ । ತೇ । ರಸಸ್ಯ । ಮತ್ಸತ । ದ್ವಯಾವಿನಃ । ದ್ರವಿಣಸ್ವಂತಃ । ಇಹ । ಸಂತು । ಇಂದವಃ ॥ ೧ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ಸುಷುತಃ ಸುಷ್ಠ್ವಭಿಷುತಃ ಸನ್ನಿಂದ್ರಾರ್ಥಂ ಪರಿ ಸ್ರವ । ಪರಿತಃ ಸ್ರವ । ಗಚ್ಛ । ರಸಂ ಮುಂಚ । ಅಮೀವಾ ರೋಗೋ ರಕ್ಷಸಾ ಸಹಾಪ ಭವತು । ಅಪಗತೋ ವಿಯುಕ್ತೋ ಭವತು । ತೇ ತವ ರಸಸ್ಯ ಸ್ವಾಂಶಂ ರಸಂ ಪೀತ್ವಾ ಮಾ ಮತ್ಸತ । ಮಾ ಮಾದ್ಯಂತು । ಕೇ । ದ್ವಯಾವಿನಃ । ದ್ವಯಂ ಸತ್ಯಾನೃತಂ । ತೇನ ಯುಕ್ತಾಃ । ಪಾಪಿನ ಇತ್ಯರ್ಥಃ । ಕಿಂಚೇಂದವಸ್ತೇ ರಸಾ ಇಹಾಸ್ಮಿನ್ಯಜ್ಞೇ ದ್ರವಿಣಸ್ವಂತೋ ಧನವಂತಃ ಸಂತು । ಭವಂತು ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಸುಷುತಃ**— ಉತ್ತಮವಾಗಿ ಹಿಂಡಲ್ಪಟ್ಟವನಾಗಿ । **ಇಂದ್ರಾಯ**— ಇಂದ್ರನ ಪಾನಾರ್ಥವಾಗಿ । **ಪರಿ ಸ್ರವ**—ಪ್ರವಹಿಸು । **ಅಮೀವಾ**—ರೋಗವು । **ರಕ್ಷಸಾ ಸಹ**—ರಾಕ್ಷಸರೊಡನೆ । **ಅಪ ಭವತು**—ದೂರಕ್ಕೆ ಸರಿಯಲಿ । **ದ್ವಯಾವಿನಃ**—ಪಾಪಿಗಳು । **ತೇ**—ನಿನ್ನ । **ರಸಸ್ಯ**—ರಸಪಾನದಿಂದ ಲಭಿಸುವ । **ಮಾ ಮತ್ಸತ**—ಹರ್ಷವನ್ನು ಹೊಂದದಿರಲಿ । **ಇಂದವಃ**—ನಿನ್ನ ರಸಗಳು । **ಇಹ**—ನಮ್ಮ ಯಜ್ಞದಲ್ಲಿ । **ದ್ರವಿಣಸ್ವಂತಃ**—ಧನವನ್ನು ಹೊಂದಿದವಾಗಿ । **ಸಂತು**—ಇರಲಿ.

|| ಭಾವಾರ್ಥ ||

ಎಲೈ ಸೋಮದೇವನೇ, ನೀನು ಉತ್ತಮವಾಗಿ ಹಿಂಡಲ್ಪಟ್ಟವನಾಗಿ ಇಂದ್ರನ ಪಾನಾರ್ಥವಾಗಿ ಪ್ರವಹಿಸು. ರಾಕ್ಷಸರೊಡನೆ ನಮ್ಮ ರೋಗವೂ ದೂರಕ್ಕೆ ಸರಿಯಲಿ. ನಿನ್ನ ರಸಪಾನದಿಂದ ಲಭಿಸುವ ಹರ್ಷವನ್ನು ಪಾಪಿಗಳು ಹೊಂದದಿರಲಿ. ನಿನ್ನ ರಸಗಳು ನಮ್ಮ ಯಜ್ಞದಲ್ಲಿ ಧನವನ್ನು ಹೊಂದಿದವಾಗಿರಲಿ.

**English Translation.**

Flow forth, Soma, well-effused for Indra; may disease and the Rakshasas be (kept) far off; let not the double-dealers be exhilarated by the liquor; may the Soma-juices be full of wealth at this (sacrifice).

॥ ಸಂಹಿತಾಪಾಠಃ ॥

ಅಸ್ಮಾನ್ತ್ಸಮರ್ಯೇ ಪವಮಾನ ಚೋದಯ ದಕ್ಷೋ ದೇವಾನಾಮಸಿ ಹಿ
ಪ್ರಿಯೋ ಮದಃ ।
ಜಹಿ ಶತ್ರೂಁರಭ್ಯಾ ಭಂದನಾಯತಃ ಪಿಬೇಂದ್ರ ಸೋಮಮವ ನೋ
ಮೃಧೋ ಜಹಿ ॥ ೨ ॥

॥ ಪದಪಾಠಃ ॥

ಅಸ್ಮಾನ್ । ಸಽಮರ್ಯೇ । ಪವಮಾನ । ಚೋದಯ । ದಕ್ಷಃ । ದೇವಾನಾಂ । ಅಸಿ । ಹಿ । ಪ್ರಿಯಃ ।
ಮದಃ ।
ಜಹಿ । ಶತ್ರೂನ್ । ಅಭಿ । ಆ । ಭಂದನಽಯತಃ । ಪಿಬ । ಇಂದ್ರ । ಸೋಮಂ । ಅವ । ನಃ । ಮೃಧಃ ।
ಜಹಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಸೋಮ ಅಸ್ಮಾನ್ಸಮರ್ಯೇ ಸಂಗ್ರಾಮೇ ಚೋದಯ । ಪ್ರೇರಯ । ದಕ್ಷೋ ಹ್ಯಸಿ । ಸಮರ್ಥಃ ಖಲು ಭವಸಿ ದೇವಾನಾಂ ಮಧ್ಯೇ । ಯದ್ವಾ । ದೇವಾನಾಂ ಪ್ರೀಣನಾಯ ದಕ್ಷೋಽಸಿ । ಯದ್ವಾ । ದಕ್ಷಸ್ತ್ವಂ ದೇವಾನಾಂ ಪ್ರಿಯಃ ಪ್ರಿಯಕರೋ ಮದೋ ಮಾದಯಿತಾಸಿ ಹಿ । ಜಹಿ ಚ ಶತ್ರೂನಸ್ಮಾಕಂ । ಅಭ್ಯಾಗಚ್ಛ ಚಾಸ್ಮಾನ್ಪ್ರತಿ ಭಂದನಾಯತಃ । ಭಂದನಾಃ ಸ್ತುತಯಃ । ಭಂದತೇಃ ಸ್ತುತಿಕರ್ಮಣಃ । ತಾ ಇಚ್ಛತಃ । ಪಿಬ ಚೇಂದ್ರಂ ಸೋಮಂ ಅವ ಜಹಿ ಚ ನೋಽಸ್ಮಾಕಂ ಮೃಧಃ ಸಂಗ್ರಾಮಾತ್ ॥

॥ ಪ್ರತಿಪದಾರ್ಥ ॥

ಪವಮಾನ—ಎಲೈ ಸೋಮದೇವನೇ । ಅಸ್ಮಾನ್—ನಮ್ಮನ್ನು । ಸಮರ್ಯೇ—ಯುದ್ಧಕ್ಕಾಗಿ । ಚೋದಯ—ಪ್ರೇರಿಸು । ದೇವಾನಾಂ—ದೇವತೆಗಳಲ್ಲಿ । ದಕ್ಷಃ ಅಸಿ ಹಿ—ನೀನು ಈ ಕೆಲಸಕ್ಕೆ ಸಮರ್ಥನೇ

ಆಗಿದ್ದೀಯೆ | ಪ್ರಿಯಃ—ಪ್ರೀತಿಕಾರಕನೂ | ಮದಃ—ಹರ್ಷಕಾರಕನೂ ಆಗಿದ್ದೀಯೆ | ಶತ್ರೂನ್—ನಮ್ಮ ಶತ್ರುಗಳನ್ನು | ಜಹಿ—ಜಯಿಸು | ಛಂದನಾಯತಃ—ನಿನ್ನನ್ನು ಸ್ತುತಿಸಲಿಚ್ಛಿಸುವ ನಮ್ಮಲ್ಲಿಗೆ | ಅಭಿ ಆ—ದಯಮಾಡು | ಇಂದ್ರ—ಎಲೈ ಇಂದ್ರನೇ | ಸೋಮಂ—ಸೋಮವನ್ನು | ಪಿಬ—ಪಾನಮಾಡು | ನಃ—ನಮ್ಮ | ಮೃಧಃ—ಹಿಂಸಕರಾದ ಶತ್ರುಗಳನ್ನು | ಅವ ಜಹಿ—ಸೋಲಿಸಿ ನಾಶಪಡಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ನಮ್ಮನ್ನು ಯುದ್ಧಕ್ಕಾಗಿ ಪ್ರೇರಿಸು. ದೇವತೆಗಳಲ್ಲೆಲ್ಲ ನೀನು ಈ ಕೆಲಸಕ್ಕೆ ಸಮರ್ಥನಾಗಿದ್ದೀಯೆ. ಪ್ರೀತಿಕಾರಕನೂ ಹರ್ಷಕಾರಕನೂ ಆಗಿದ್ದೀಯೆ. ನಮ್ಮ ಶತ್ರುಗಳನ್ನು ಜಯಿಸು. ನಿನ್ನನ್ನು ಸ್ತುತಿಸಲಿಚ್ಛಿಸುವ ನಮ್ಮಲ್ಲಿಗೆ ದಯಮಾಡು. ಎಲೈ ಇಂದ್ರನೇ, ಸೋಮವನ್ನು ಪಾನಮಾಡು. ನಮ್ಮ ಹಿಂಸಕರಾದ ಶತ್ರುಗಳನ್ನು ಸೋಲಿಸಿ ನಾಶಪಡಿಸು.

English Translaton

Purified (Soma), animate us in battle ; for you are powerful, dear to the gods, the exhilarator. Slay our foes, approach (us) who desire (to propitiate you by) praises ; Indra, drink the Soma, destroy our adversaries.

|| ಸಂಹಿತಾಪಾಠಃ ||

ಅದಬ್ಧ ಇಂದೋ ಪವಸೇ ಮದಿಂತಮ ಆತ್ಮೇಂದ್ರಸ್ಯ ಭವಸಿ ಧಾಸಿರುತ್ತಮಃ |
ಅಭಿ ಸ್ವರಂತಿ ಬಹವೋ ಮನೀಷಿಣೋ ರಾಜಾನಮಸ್ಯ ಭುವನಸ್ಯ ನಿಂಸತೇ || ೩ ||

|| ಪದಪಾಠಃ ||

ಅದಬ್ಧಃ | ಇಂದೋ ಇತಿ | ಪವಸೇ | ಮದಿನ್ऽತಮಃ | ಆತ್ಮಾ | ಇಂದ್ರಸ್ಯ | ಭವಸಿ | ಧಾಸಿಃ | ಉತ್ऽತಮಃ |

ಅಭಿ | ಸ್ವರಂತಿ | ಬಹವಃ | ಮನೀಷಿಣಃ | ರಾಜಾನಂ | ಅಸ್ಯ | ಭುವನಸ್ಯ | ನಿಂಸತೇ || ೩ ||

|| ಸಾಯಣಭಾಷ್ಯಂ ||

ಹೇ ಇಂದೋ ಕ್ಲಿದ್ಯಮಾನ ಸೋಮ ಅದಬ್ಧೋऽಹಿಂಸಿತೋ ಮದಿಂತಮೋ ಮಾದಯಿತೃತಮಸ್ತ್ವಂ ಪವಸೇ | ಪೂಯಸೇ | ಆತ್ಮಾ ಸ್ವಯಮೇವೋತ್ತಮಸ್ತ್ವಮಿಂದ್ರಸ್ಯ ಧಾಸಿರನ್ನಂ ಭವಸಿ | ಅಸ್ಯ ಭುವನಸ್ಯ ರಾಜಾನಂ ಸೋಮಂ ಬಹವೋ ಮನೀಷಿಣಃ ಸ್ತೋತಾರೋऽಭಿ ಸ್ವರಂತಿ | ಅಭಿಷ್ಟುವಂತಿ | ನಿಂಸತೇ | ಗಚ್ಛಂತಿ ಚ ||

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ । **ಅದಬ್ಧಃ**—ಅಹಿಂಸಿತನೂ । **ಮದಿಂತಮಃ**—ಅತ್ಯಂತ ಹರ್ಷಕಾರಕನೂ ಆದ ನೀನು । **ಪವಸೇ**—ಪ್ರವಿಸುತ್ತೀಯೆ । **ಆತ್ಮಾ**—ಸ್ವಯಂಪ್ರೇರಿತನಾಗಿ । **ಇಂದ್ರಸ್ಯ**—ಇಂದ್ರನಿಗೆ । **ಉತ್ತಮಃ**—ಶ್ರೇಷ್ಠವಾದ । **ಧಾಸಿಃ**—ಅನ್ನರೂಪನಾಗಿ । **ಭವಸಿ**—ಆಗಿದ್ದೀಯೆ । **ಅಸ್ಯ ಭುವನಸ್ಯ**—ಈ ಲೋಕಕ್ಕೆಲ್ಲ । **ರಾಜಾನಂ**—ಪ್ರಭುವಾದ ಸೋಮನನ್ನು । **ಬಹವಃ**—ಅನೇಕರಾದ । **ಮನೀಷಿಣಃ**—ಪ್ರಾಜ್ಞರು । **ಅಭಿ ಸ್ವರಂತಿ**—ಪ್ರಶಂಸಿಸುತ್ತಾರೆ । **ನಿಂಸತೇ**—ಆಶ್ರಯಿಸುತ್ತಾರೆ,

|| ಭಾವಾರ್ಥ ||

ಎಲೈ ಸೋಮದೇವನೇ, ಅಹಿಂಸಿತನೂ, ಅತ್ಯಂತ ಹರ್ಷಕಾರಕನೂ ಆದ ನೀನು ಪ್ರವಿಸುತ್ತೀಯೆ. ನೀನು ಸ್ವಯಂಪ್ರೇರಿತನಾಗಿಯೇ ಇಂದ್ರನಿಗೆ ಅನ್ನರೂಪನಾಗಿದ್ದೀಯೆ. ಲೋಕಕ್ಕೆಲ್ಲ ಪ್ರಭುವಾದ ಸೋಮನನ್ನು ಅನೇಕರಾದ ಪ್ರಾಜ್ಞರು ಪ್ರಶಂಸಿಸುತ್ತಾರೆ ಮತ್ತು ಆಶ್ರಯಿಸುತ್ತಾರೆ

English Translation

You flow, Indu, the inviolable, the most exhilarating ; you are 'yourself) the best support of Indra ; many sages approach and glorify you, the ruler of this world.

|| ಸಂಹಿತಾಪಾಠಃ ||

**ಸಹಸ್ರಣೀಥಃ ಶತಧಾರೋ ಅದ್ಭುತ ಇಂದ್ರಾಯೇಂದುಃ ಪವತೇ ಕಾಮ್ಯಂ ಮಧು ।**
**ಜಯನ್‌ಕ್ಷೇತ್ರಮಭ್ಯರ್ಷಾ ಜಯನ್ನಪ ಉರುಂ ನೋ ಗಾತುಂ ಕೃಣು ಸೋಮ ಮೀಢ್ವಃ ॥ ೪ ॥**

|| ಪದಪಾಠಃ ||

ಸಹಸ್ರऽನೀಥಃ । ಶತऽಧಾರಃ । ಅದ್ಭುತಃ । ಇಂದ್ರಾಯ । ಇಂದುಃ । ಪವತೇ । ಕಾಮ್ಯಂ । ಮಧು । ಜಯನ್ । ಕ್ಷೇತ್ರಂ । ಅಭಿ । ಅರ್ಷ । ಜಯನ್ । ಅಪಃ । ಉರುಂ । ನಃ । ಗಾತುಂ । ಕೃಣು । ಸೋಮ । ಮೀಢ್ವಃ ॥ ೪ ॥

। ಸಾಯಣಭಾಷ್ಯಂ ॥

ಸಹಸ್ರನೀಥೋ ಬಹುಪ್ರಕಾರನಯನಃ ಶತಧಾರೋಽಪರಿಮಿತಧಾರೋಪೇತೋಽದ್ಭುತ ಆಶ್ಚರ್ಯಕರೋ ಮಹಾನಿಂದುರಿಂದ್ರಾಯ ಕಾಮ್ಯಂ ಮಧು ಪವತೇ । ಕಿಂ ಚ ಕ್ಷೇತ್ರಮಸ್ಮಭ್ಯಮಪಶ್ಚ ಜಯನ್ನಭ್ಯರ್ಷ । ಅಭಿಗಚ್ಛ ಪವಿತ್ರಂ । ಹೇ ಸೋಮ ಮೀಢ್ವಃ ಸೇಕ್ತಃ ಗಾತುಂ ಮಾರ್ಗಂ ನೋಽಸ್ಮಾಕಮುರುಂ ವಿಸ್ತೀರ್ಣಂ ಕೃಣು । ಕುರು ॥

॥ಪ್ರತಿಪದಾರ್ಥ॥

**ಸಹಸ್ರನೀಥಃ**—ಅನೇಕರಿಗೆ ಮಾರ್ಗದರ್ಶಕನೂ । **ಶತಧಾರಃ**—ಅನೇಕವಿಧವಾದ ಪ್ರವಾಹವುಳ್ಳವನೂ । **ಅದ್ಭುತಃ**—ಆಶ್ಚರ್ಯಕರನೂ ಆದ । **ಇಂದುಃ**—ಸೋಮನು । **ಇಂದ್ರಾಯ**—ಇಂದ್ರನಿಗಾಗಿ । **ಕಾಮ್ಯಂ**—ಆಕರ್ಷಕನಾಗಿಯೂ । **ಮಧು**—ರುಚಿಕರನಾಗಿಯೂ । **ಪವತೇ**—ಸ್ರವಿಸುತ್ತಾನೆ । **ಸೋಮ**—ಎಲೈ ಸೋಮದೇವನೇ । **ಕ್ಷೇತ್ರಂ**—ಫಲವತ್ತಾದ ಭೂಮಿಯನ್ನೂ । **ಅಪಃ**—ಉದಕವನ್ನೂ । **ಜಯನ್**—ನಮಗೆ ಸಂಪಾದಿಸಿ ಕೊಡುತ್ತ । **ಅಭ್ಯರ್ಷ**—ನಮ್ಮನ್ನು ಸಮೀಪಿಸು । **ಮೀಢ್ವಃ**—ಕಾಮವರ್ಷಕನಾದ ನೀನು । **ನಃ**—ನಮ್ಮ । **ಗಾತುಂ**—ಮಾರ್ಗವನ್ನು । **ಉರು**—ವಿಸ್ತೃತವಾಗಿ । **ಕೃಣು**—ಮಾಡು.

॥ ಭಾವಾರ್ಥ ॥

ಅನೇಕರಿಗೆ ಮಾರ್ಗದರ್ಶಕನೂ, ಅನೇಕ ವಿಧವಾದ ಪ್ರವಾಹವುಳ್ಳವನೂ, ಆಶ್ಚರ್ಯಕರನೂ ಆದ ಸೋಮನು ಇಂದ್ರನಿಗಾಗಿ ಆಕರ್ಷಕನಾಗಿಯೂ, ರುಚಿಕರನಾಗಿಯೂ ಸ್ರವಿಸುತ್ತಾನೆ. ಎಲೈ ಸೋಮದೇವನೇ, ಫಲವತ್ತಾದ ಭೂಮಿಯನ್ನೂ ಉದಕವನ್ನೂ ನಮಗೆ ಸಂಪಾದಿಸಿಕೊಡುತ್ತ ನಮ್ಮನ್ನು ಸಮೀಪಿಸು. ಕಾಮವರ್ಷಕನಾದ ನೀನು ನಮ್ಮ ಮಾರ್ಗವನ್ನು ವಿಸ್ತೃತವಾಗಿ ಮಾಡು.

## English Translation.

The guide of thousands, flowing in a hundred streams, marvellous, Indu fiows forth for Indra, (his) beloved beverage; approach (the filter) winning (us) land winning water, O Soma, sprinkler, make our path broad.

॥ ಸಂಹಿತಾಪಾಠಃ ॥

ಕನಿಕ್ರದತ್ಕಲಶೇ ಗೋಭಿರಜ್ಯಸೇ ವ್ಯ೧ ವ್ಯಯಂ ಸಮಯಾ ವಾರಮರ್ಷಸಿ ।
ಮರ್ಮೃಜ್ಯಮಾನೋ ಅತ್ಯೋ ನ ಸಾನಸಿರಿಂದ್ರಸ್ಯ ಸೋಮ ಜಠರೇ
ಸಮಕ್ಷರಃ ॥ ೫ ॥

॥ ಪದಪಾಠಃ ॥

ಕನಿಕ್ರದತ್ । ಕಲಶೇ । ಗೋಭಿಃ । ಅಜ್ಯಸೇ । ವಿ । ಅವ್ಯಯಂ । ಸಮಯಾ । ವಾರಂ । ಅರ್ಷಸಿ ।
ಮರ್ಮೃಜ್ಯಮಾನಃ । ಅತ್ಯಃ । ನ । ಸಾನಸಿಃ । ಇಂದ್ರಸ್ಯ । ಸೋಮ । ಜಠರೇ । ಸಂ । ಅಕ್ಷರಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಕನಿಕ್ರದಚ್ಛಬ್ದಂ ಕುರ್ವನ್ ಕಲಶೇ ವರ್ತಮಾನೋ ಗೋಭಿಃ ಪಯೋಭಿರಜ್ಯಸೇ ಸಿಕ್ತೋ ಭವಸಿ । ಅವ್ಯಯಮವಿಮಯಂ ವಾರಂ ವಾಲಂ ದಶಾಪವಿತ್ರಂ ಸಮಯಾ ತತ್ಸಮೀಪೇ ವ್ಯರ್ಷಸಿ ವಿವಿಧಂ ಗಚ್ಛಸಿ। ಮರ್ಮೃಜ್ಯಮಾನಃ ಶೋಧ್ಯಮಾನೋಽತ್ಯೋ ನಾಶ್ವ ಇವ ಸಾನಸಿಃ ಸಂಭಜನಶೀಲಸ್ತ್ವಂ ಹೇ ಸೋಮ ಇಂದ್ರಸ್ಯ ಜಠರೇ ಸಮಕ್ಷರಃ । ಸಮ್ಯಕ್ ಕ್ಷರಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಕನಿಕ್ರದತ್**—ಶಬ್ದವಮಾಡುತ್ತ । **ಕಲಶೇ**—ದ್ರೋಣಕಲಶದಲ್ಲಿರುವ ನೀನು । **ಗೋಭಿಃ**—ಹಾಲುಗಳೊಡನೆ । **ಅಜ್ಯಸೇ**—ಮಿಶ್ರಿತನಾಗುತ್ತೀಯೆ । **ಅವ್ಯಯಂ** ಉಣ್ಣೆಯಿಂದ ನಿರ್ಮಿತವಾದ । **ವಾರಂ**—ದಶಾಪವಿತ್ರದ ನೂಲುಗಳ । **ಸಮಯಾ**—ಮಧ್ಯಭಾಗದಲ್ಲಿ । **ವ್ಯರ್ಷಸಿ**—ಅನೇಕವಿಧವಾಗಿ ಪ್ರವಿಸುತ್ತೀಯೆ । **ಸೋಮ**—ಎಲೈ ಸೋಮದೇವನೇ । **ಸಾನಸಿಃ**—ಪೂಜ್ಯನಾದ ನೀನು । **ಮರ್ಮೃಜ್ಯಮಾನಃ**—ಶುದ್ಧಿಯನ್ನು ಹೊಂದಿದವನಾಗಿ । **ಅತ್ಯೋ ನ**—ಅಶ್ವದಂತೆ । **ಇಂದ್ರಸ್ಯ**—ಇಂದ್ರನ । **ಜಠರೇ**—ಉದರದಲ್ಲಿ । **ಸಮಕ್ಷರಃ**—ಪ್ರವೇಶಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಶಬ್ದವಮಾಡುತ್ತ ದ್ರೋಣಕಲಶದಲ್ಲಿ ಹಾಲುಗಳೊಡನೆ ಮಿಶ್ರಿತನಾಗುತ್ತೀಯೆ. ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನೂಲುಗಳ ಮಧ್ಯಭಾಗದಲ್ಲಿ ಅನೇಕವಿಧವಾಗಿ ಪ್ರವಿಸುತ್ತೀಯೆ. ಎಲೈ ಸೋಮದೇವನೇ, ಪೂಜ್ಯನಾದ ನೀನು ಶುದ್ಧಿಯನ್ನು ಹೊಂದಿದವನಾಗಿ ಅಶ್ವದಂತೆ ಇಂದ್ರನ ಜಠರದಲ್ಲಿ ಪ್ರವೇಶಿಸಿದ್ದೀಯೆ.

## English Translation.

Crying aloud you are blended in the pitcher with curds and milk, you pass through the woollen fleece in the midst; being cleansed like a horse, distributing (gifts), you flow, Soma, into Indra's belly.

॥ ಸಂಹಿತಾಪಾಠಃ ॥

ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು-
ನಾಮ್ನೇ ।

ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾँ-
ಅದಾಭ್ಯಃ ॥ ೬ ॥

॥ ಪದಪಾಠಃ ॥

ಸ್ವಾದುಃ । ಪವಸ್ವ । ದಿವ್ಯಾಯ । ಜನ್ಮನೇ । ಸ್ವಾದುಃ । ಇಂದ್ರಾಯ । ಸುಹವೀತುऽನಾಮ್ನೇ ।
ಸ್ವಾದುಃ । ಮಿತ್ರಾಯ । ವರುಣಾಯ । ವಾಯವೇ । ಬೃಹಸ್ಪತಯೇ । ಮಧುऽಮಾನ್ । ಅದಾಭ್ಯಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಸ್ವಾದುಸ್ತ್ವಂ ದಿವ್ಯಾಯ ಜನ್ಮನೇ ದೇವಗಣಾಯ ಪವಸ್ವ । ತಥಾ ಸುಹವೀತುನಾಮ್ನೇ ಶೋಭನಾಹ್ವಾನನಾಮಧೇಯಾಯೇಂದ್ರಾಯ ಸ್ವಾದುಸ್ತ್ವಂ ಪವಸ್ವ । ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಚ ಪವಸ್ವ ಮಧುಮಾನ್ಮಧುರರಸೋऽದಾಭ್ಯೋऽನ್ಯೈರಹಿಂಸ್ಯಸ್ತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಸ್ವಾದುಃ**—ರುಚಿಕರನಾದ ನೀನು । **ದಿವ್ಯಾಯ ಜನ್ಮನೇ**—ದೇವಲೋಕದಲ್ಲಿ ಉತ್ಪನ್ನರಾದ ದೇವಸಮೂಹಕ್ಕಾಗಿ । **ಪವಸ್ವ**—ಪ್ರವಹಿಸು । **ಸುಹವೀತುನಾಮ್ನೇ**—ಉತ್ತಮವಾದ ಆಹ್ವಾನಕ್ಕೆ ಯೋಗ್ಯವಾದ ಹೆಸರುಳ್ಳ । **ಇಂದ್ರಾಯ**—ಇಂದ್ರನಿಗಾಗಿಯೂ । **ಸ್ವಾದುಃ**—ರುಚಿಕರನಾಗಿ ಪ್ರವಹಿಸು । **ಮಧುಮಾನ್**—ರುಚಿಯುಳ್ಳವನಾಗಿಯೂ । **ಅದಾಭ್ಯಃ**—ಅಹಿಂಸತನೂ ಆದ ನೀನು । **ಮಿತ್ರಾಯ**—ಮಿತ್ರನಿಗಾಗಿಯೂ । **ವರುಣಾಯ**—ವರುಣನಿಗಾಗಿಯೂ । **ವಾಯವೇ**—ವಾಯುವಿಗಾಗಿಯೂ । **ಬೃಹಸ್ಪತಯೇ**—ಬೃಹಸ್ಪತಿಗಾಗಿಯೂ । **ಸ್ವಾದುಃ**—ರುಚಿಕರನಾಗಿ ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ರುಚಿಕರನಾದ ನೀನು ದೇವಲೋಕದಲ್ಲಿ ಉತ್ಪನ್ನರಾದ ದೇವಸಮೂಹಕ್ಕಾಗಿ ಪ್ರವಹಿಸು. ಉತ್ತಮವಾದ ಆಹ್ವಾನಕ್ಕೆ ಯೋಗ್ಯವಾದ ಹೆಸರುಳ್ಳ ಇಂದ್ರನಿಗಾಗಿಯೂ, ರುಚಿಕರನಾಗಿ ಪ್ರವಹಿಸು. ಮಾಧುರ್ಯೋಪೇತನೂ, ಅಹಿಂಸತನೂ ಆದ ನೀನು ಮಿತ್ರನಿಗಾಗಿಯೂ, ವರುಣನಿಗಾಗಿಯೂ, ವಾಯುವಿಗಾಗಿಯೂ, ಬೃಹಸ್ಪತಿಗಾಗಿಯೂ ರುಚಿಕರನಾಗಿ ಪ್ರವಹಿಸು;

## English Translation.

Flow sweet for the celestial people, flow sweet for Indra, whose name is worthily invoked ; sweet for Mitra, Varuna, Vayu, Brihaspati, you who are sweet-flavoured, inviolable.

|| ಸಂಹಿತಾಪಾಠಃ ||

ಅತ್ಯಂ ಮೃಜಂತಿ ಕಲಶೇ ದಶ ಕ್ಷಿಪಃ ಪ್ರ ವಿಪ್ರಾಣಾಂ ಮತಯೋ ವಾಚ ಈರತೇ |
ಪವಮಾನಾ ಅಭ್ಯರ್ಷಂತಿ ಸುಷ್ಟುತಿಮೇಂದ್ರಂ ವಿಶಂತಿ ಮದಿರಾಸ ಇಂದವಃ||

| ಪದಪಾಠಃ ||

ಅತ್ಯಂ | ಮೃಜಂತಿ | ಕಲಶೇ | ದಶ | ಕ್ಷಿಪಃ | ಪ್ರ | ವಿಪ್ರಾಣಾಂ | ಮತಯಃ | ವಾಚಃ | ಈರತೇ |
ಪವಮಾನಾಃ | ಅಭಿ | ಅರ್ಷಂತಿ | ಸುऽಸ್ತುತಿಂ | ಆ | ಇಂದ್ರಂ | ವಿಶಂತಿ | ಮದಿರಾಸಃ | ಇಂದವಃ || ೭ ||

|| ಸಾಯಣಭಾಷ್ಯಂ ||

ಅತ್ಯಮತನವಂತಮಶ್ವಸ್ಥಾನೀಯಂ ವಾ ಸೋಮಂ ಕಲಶೇ ದಶ ಕ್ಷಿಪೋ ದಶಾಂಗುಲಯೋऽಧ್ವರ್ಯೋರ್ಸಂಬಂಧಿನ್ಯೋ ಮೃಜಂತಿ | ಶೋಧಯಂತಿ | ತಥಾ ವಿಪ್ರಾಣಾಂ ಮಧ್ಯೇ ಮತಯಃ ಸ್ತೋತಾರೋ ವಾಚಃ ಸ್ತುತೀರೀರತೇ | ಪ್ರೇರಯಂತಿ | ಪವಮಾನಾಃ ಸೋಮಾ ಅಭ್ಯರ್ಷಂತಿ ಅಭಿಗಚ್ಛಂತಿ ಸುಷ್ಟುತಿಂ ಶೋಭನಸ್ತುತಿಂ | ಇಂದ್ರಂ ಮದಿರಾಸೋ ಮದಕರಾ ಇಂದವಃ ಸೋಮಾ ಆ ವಿಶಂತಿ | ಪ್ರವಿಶಂತಿ ||

|| ಪ್ರತಿಪದಾರ್ಥ ||

**ದಶ ಕ್ಷಿಪಃ**—ಹತ್ತು ಬೆರಳುಗಳೂ | **ಅತ್ಯಂ**—ಸಂಚಾರಶೀಲನಾದ ಸೋಮನನ್ನು | **ಕಲಶೇ**—ದ್ರೋಣಕಲಶದಲ್ಲಿ | **ಮೃಜಂತಿ**—ಶೋಧಿಸುತ್ತವೆ | **ವಿಪ್ರಾಣಾಂ**—ಮೇಧಾವಿಗಳ ನಡುವೆ | **ಮತಯಃ**—ಸ್ತುತಿಕರ್ತರು | **ವಾಚಃ**—ಸ್ತುತಿಗಳನ್ನು | **ಪ್ರ ಈರತೇ**—ಪ್ರೇರಿಸುತ್ತಾರೆ | **ಪವಮಾನಾಃ**—ಸೋಮರಸಗಳು | **ಅಭ್ಯರ್ಷಂತಿ**—ಸ್ರವಿಸಿ ಪ್ರವಹಿಸುತ್ತವೆ | **ಮದಿರಾಸಃ**—ಹರ್ಷಕಾರಕಗಳಾದ | **ಇಂದವಃ**—ಸೋಮರಸಗಳು | **ಸುಷ್ಟುತಿಂ**—ಉತ್ತಮವಾದ ಸ್ತುತಿಗೆ ಪಾತ್ರನಾದ | **ಇಂದ್ರಂ**—ಇಂದ್ರನನ್ನು | **ಆ ವಿಶಂತಿ**—ಪ್ರವೇಶಿಸುತ್ತವೆ.

|| ಭಾವಾರ್ಥ ||

ಹತ್ತು ಬೆರಳುಗಳೂ ಸಂಚಾರಶೀಲನಾದ ಸೋಮನನ್ನು ದ್ರೋಣಕಲಶದಲ್ಲಿ ಶೋಧಿಸುತ್ತವೆ. ಮೇಧಾವಿಗಳ ನಡುವೆ ಸ್ತುತಿಕರ್ತರು ಸ್ತುತಿಗಳನ್ನು ಪ್ರೇರಿಸುತ್ತಾರೆ. (ಪಠಿಸುತ್ತಾರೆ) ಸೋಮರಸಗಳು ಸ್ರವಿಸಿ ಪ್ರವಹಿಸುತ್ತವೆ. ಹರ್ಷಕಾರಕಗಳಾದ ಸೋಮರಸಗಳು ಉತ್ತಮವಾದ ಸ್ತುತಿಗೆ ಪಾತ್ರನಾದ ಇಂದ್ರನನ್ನು ಪ್ರವೇಶಿಸುತ್ತವೆ.

## English Translation.

The ten fingers clean the horse in the pitcher ; among the Vipras the worshippers send forth praises ; the filtered (juices) hasten to the fair praise, the exhilarating Soma juices enter Indra.

॥ ಸಂಹಿತಾಪಾಠಃ ॥

ಪವಮಾನೋ ಅಭ್ಯರ್ಷಾ ಸುವೀರ್ಯಮುರ್ವೀಂ ಗವ್ಯೂತಿಂ ಮಹಿ ಶರ್ಮ ಸಪ್ರಥಃ ।
ಮಾಕಿರ್ನೋ ಅಸ್ಯ ಪರಿಷೂತಿರೀಶತೇಂದೋ ಜಯೇಮ ತ್ವಯಾ ಧನಂಧನಂ ॥ ೮ ॥

॥ ಪದಪಾಠಃ ॥

ಪವಮಾನಃ । ಅಭಿ । ಅರ್ಷ । ಸುಽವೀರ್ಯಂ । ಉರ್ವೀಂ । ಗವ್ಯೂತಿಂ । ಮಹಿ । ಶರ್ಮ । ಸಽಪ್ರಥಃ ।
ಮಾಕಿಃ । ನಃ । ಅಸ್ಯ । ಪರಿಽಸೂತಿಃ । ಈಶತ । ಇಂದೋ ಇತಿ । ಜಯೇಮ । ತ್ವಯಾ । ಧನಂಽಧನಂ ॥೮॥

॥ ಸಾಯಣಭಾಷ್ಯಂ ॥

**ಹೇ ಸೋಮ ಪವಮಾನಃ ಪೂಯಮಾನಸ್ತ್ವಂ ಸುವೀರ್ಯಮುರ್ವೀಂ ಮಹತೀಂ ಗವ್ಯೂತಿಂ ಗೋಮಾರ್ಗಂ ಚ ಮಹಿ ಮಹತ್ ಸಪ್ರಥಃ ಸರ್ವತಃ ಪೃಥು ಶರ್ಮ ಗೃಹಂ ಸುಖಂ ವಾಭ್ಯರ್ಷ । ಅಧಿಗಮಯ । ನೋಽಸ್ಮಾಕಮಸ್ಯ ಕರ್ಮಣಃ ಪರಿಷೂತಿರ್ಹಿಂಸಾಯಾಃ ಪರಿಪ್ರೇರಕೋ ದ್ವೇಷೀ ಮಾಕಿರೀಶತ । ಮೇಶ್ವರೋ ಭವತು । ಹೇ ಇಂದೋ ಸೋಮ ತ್ವಯಾ ಸಾಧನೇನ ಧನಂ ಧನಂ ಸರ್ವಮಪಿ ಧನಂ ಜಯೇಮ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಪವಮಾನಃ**—ಶುದ್ಧಿಕಾರಕನಾದ ನೀನು । **ಸುವೀರ್ಯಂ**—ವೀರಪುತ್ರರನ್ನೂ । **ಉರ್ವೀಂ**—ವಿಸ್ತೃತವಾದ । **ಗವ್ಯೂತಿಂ**—ಗೋಮಾರ್ಗವನ್ನೂ । **ಮಹಿ**—ಮಹತ್ತಾದುದೂ । **ಸಪ್ರಥಃ**—ವಿಸ್ತಾರವಾದುದೂ ಆದ । **ಶರ್ಮ**—ಗೃಹವನ್ನು । **ಅಭ್ಯರ್ಷ**—ಒದಗಿಸು । **ನಃ**—ನಮ್ಮ । **ಅಸ್ಯ**—ಈ ಕರ್ಮಕ್ಕೆ । **ಪರಿಷೂತಿಃ**—ಹಿಂಸೆಯನ್ನುಂಟುಮಾಡಲು । **ಮಾಕಿಃ ಈಶತ**—ಯಾರೂ ಶಕ್ತರಾಗದಿರಲಿ । **ಇಂದೋ**—ಎಲೈ ಸೋಮದೇವನೇ । **ತ್ವಯಾ**—ನಿನ್ನ ಸಹಾಯದಿಂದ । **ಧನಂ ಧನಂ**—ಸಕಲ ಧನವನ್ನೂ । **ಜಯೇಮ**—ನಾವು ಪಡೆಯುವಂತಾಗಲಿ

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಕಾರಕನಾದ ನೀನು ವೀರಪುತ್ರರನ್ನೂ ವಿಸ್ತೃತವಾದ ಗೋಮಾರ್ಗವನ್ನೂ, ಮಹತ್ತಾದುದೂ, ವಿಸ್ತೃತವಾದುದೂ ಆದ ಗೃಹವನ್ನೂ ನಮಗೆ ಒದಗಿಸು. ನಮ್ಮ ಈ ಕರ್ಮಕ್ಕೆ ಹಿಂಸೆಯನ್ನುಂಟು ಮಾಡಲು ಯಾರೂ ಶಕ್ತರಾಗದಿರಲಿ. ಎಲೈ ಸೋಮನೇ, ನಿನ್ನ ಸಹಾಯದಿಂದ ನಾವು ಸಕಲ ಧನವನ್ನೂ ಪಡೆಯುವಂತಾಗಲಿ.

English Translation

(Soma), when filtered, bring us male progeny, extensive pastures, a large and spacious mansion ; let no hinderer of this (rite) be lord over us ; Indu, through you may we win all wealth.

॥ ಸಂಹಿತಾಪಾಠಃ ॥

ಅಧಿ ದ್ಯಾಮಸ್ಥಾದ್ವೃಷಭೋ ವಿಚಕ್ಷಣೋಽರೂರುಚದ್ವಿ ದಿವೋ ರೋಚನಾ ಕವಿಃ ।

ರಾಜಾ ಪವಿತ್ರಮತ್ಯೇತಿ ರೋರುವದ್ದಿವಃ ಪೀಯೂಷಂ ದುಹತೇ ನೃಚಕ್ಷಸಃ ॥ ೯ ॥

॥ ಪದಪಾಠಃ ॥

ಅಧಿ । ದ್ಯಾಂ । ಅಸ್ಥಾತ್ । ವೃಷಭಃ । ವಿಽಚಕ್ಷಣಃ । ಅರೂರುಚತ್ । ವಿ । ದಿವಃ । ರೋಚನಾ । ಕವಿಃ ।

ರಾಜಾ । ಪವಿತ್ರಂ । ಅತಿ । ಏತಿ । ರೋರುವತ್ । ದಿವಃ । ಪೀಯೂಷಂ । ದುಹತೇ । ನೃಽಚಕ್ಷಸಃ ॥ ೯ ॥

॥ ಸಾಯಣಭಾಷ್ಯಂ ॥

ಅಧ್ಯಸ್ಥಾದ್ದ್ಯಾಂ ದ್ಯುಲೋಕಂ ವೃಷಭೋ ವರ್ಷಿತಾ ವಿಚಕ್ಷಣೋ ವಿದ್ರಷ್ಟಾಯಂ ಸೋಮಃ । ತಥಾ ಕೃತ್ವಾ ದಿವೋ ದ್ಯುಲೋಕಸಂಬಂಧೀನಿ ರೋಚನಾ ರೋಚಮಾನಾನಿ ನಕ್ಷತ್ರಾದೀನಿ ವ್ಯರೂರುಚತ್। ವಿವಿಧಂ ರೋಚಯತಿ । ಕವಿಃ ಕ್ರಾಂತಪ್ರಜ್ಞಃ ಸನ್ರಾಜಾ ಸೋಮಃ ಪವಿತ್ರಂ ದಶಾಪವಿತ್ರಮತ್ಯೇತಿ । ಅತಿಕ್ರಮ್ಯ ಗಚ್ಛತಿ । ರೋರುವಚ್ಛಬ್ದಂ ಕುರ್ವನ್ । ದಿವೋ ದ್ಯುಲೋಕಸ್ಯ ಪೀಯೂಷಂ ಸಾರಂ ರಸಂ ನೃಚಕ್ಷಸೋ ನೃಣಾಂ ದ್ರಷ್ಟಾರಃ ಸೋಮಾ ದುಹತೇ । ಸ್ರವಂತಿ । ಸ್ವಕೀಯಂ ರಸಮಾಂತರಿಕ್ಷ್ಯಮುದಕಂ ವಾ ದುಹಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃಷಭಃ— ಇಷ್ಟಾರ್ಥಪ್ರದನೂ । ವಿಚಕ್ಷಣಃ— ಸೂಕ್ಷ್ಮದೃಷ್ಟಿಯುಳ್ಳವನೂ ಆದ ಸೋಮನು । ದ್ಯಾಂ- ದ್ಯುಲೋಕದಲ್ಲಿ । ಅಧ್ಯಸ್ಥಾತ್— ಸ್ಥಾಪಿತನಾಗಿದ್ದಾನೆ । ದಿವಃ— ದ್ಯುಲೋಕದಲ್ಲಿರುವ । ರೋಚನಾ— ಪ್ರಕಾಶಮಾನವಾದ ನಕ್ಷತ್ರಗಳನ್ನು । ವ್ಯರೂರುಚತ್— ತೇಜೋಮಯವಾಗಿರುವಂತೆ ಮಾಡುತ್ತಾನೆ । ಕವಿಃ— ಮೇಧಾವಿಯೂ । ರಾಜಾ— ಪ್ರಭುವೂ ಆದ ಸೋಮನು । ಪವಿತ್ರಂ— ದಶಾಪವಿತ್ರವನ್ನು । ರೋರುವತ್— ಶಬ್ದಮಾಡುತ್ತ । ಅತ್ಯೇತಿ— ದಾಟಿಹೋಗುತ್ತಾನೆ । ನೃಚಕ್ಷಸಃ— ಮಾನವರನ್ನು ನೋಡಬಲ್ಲ ಸೋಮರಸಗಳು । ದಿವಃ— ದ್ಯುಲೋಕದ । ಪೀಯೂಷಂ— ಸಾರವಾದ ಅಮೃತವನ್ನು । ದುಹತೇ— ಕರೆಯುತ್ತವೆ.

|| ಭಾವಾರ್ಥ ||

ಇಷ್ಟಾರ್ಥಪ್ರದನೂ, ಸೂಕ್ಷ್ಮದೃಷ್ಟಿಯುಳ್ಳವನೂ ಆದ ಸೋಮನು ದ್ಯುಲೋಕದಲ್ಲಿ ಸ್ಥಾಪಿತನಾಗಿದ್ದಾನೆ. ದ್ಯುಲೋಕದಲ್ಲಿರುವ ಪ್ರಕಾಶಮಾನವಾದ ನಕ್ಷತ್ರಗಳನ್ನು ತೇಜೋಯುತವಾಗುವಂತೆ ಮಾಡುತ್ತಾನೆ. ಮೇಧಾವಿಯೂ, ಪ್ರಭುವೂ ಆದ ಸೋಮನು ಶಬ್ದಮಾಡುತ್ತ ದಶಾಪವಿತ್ರವನ್ನು ದಾಟಿಹೋಗುತ್ತಾನೆ. ಮಾನವರನ್ನು ನೋಡಬಲ್ಲ ಸೋಮಗಳು ದ್ಯುಲೋಕದ ಸಾರವಾದ ಅಮೃತವನ್ನು ಕರೆಯುತ್ತವೆ.

English Translation.

The showerer, the beholder, has taken his station upon heaven, the seer has illumined the luminaries of heaven ; the king passes through the filter with a shout ; (the Soma juices) the beholders of men milk forth the ambrosia of heaven.

|| ಸಂಹಿತಾಪಾಠಃ ||

ದಿವೋ ನಾಕೇ ಮಧುಜಿಹ್ವಾ ಅಸಶ್ಚತೋ ವೇನಾ ದುಹಂತ್ಯುಕ್ಷಣಂ
ಗಿರಿಷ್ಠಾಂ |
ಅಪ್ಸು ದ್ರಪ್ಸಂ ವಾವೃಧಾನಂ ಸಮುದ್ರ ಆ ಸಿಂಧೋರೂರ್ಮಾ ಮಧುಮಂತಂ
ಪವಿತ್ರ ಆ || ೧೦ ||

|| ಪದಪಾಠಃ ||

ದಿವಃ | ನಾಕೇ | ಮಧುऽಜಿಹ್ವಾಃ | ಅಸಶ್ಚತಃ | ವೇನಾಃ | ದುಹಂತಿ | ಉಕ್ಷಣಂ | ಗಿರಿऽಸ್ಥಾಂ |
ಅಪ್ऽಸು | ದ್ರಪ್ಸಂ | ವವೃಧಾನಂ | ಸಮುದ್ರೇ | ಆ | ಸಿಂಧೋಃ | ಊರ್ಮಾ | ಮಧುऽಮಂತಂ |
ಪವಿತ್ರೇ | ಆ || ೧೦ ||

|| ಸಾಯಣಭಾಷ್ಯಂ ||

ದಿವೋ ದ್ಯೋತಮಾನಸ್ಯ ಯಜ್ಞಸ್ಯ ಸಂಬಂಧಿನಿ ನಾಕೇ ದುಃಖರಹಿತೇ ಹವಿರ್ಧಾನಾಖ್ಯೇ ಸ್ಥಾನೇ ಮಧುಜಿಹ್ವಾ ಮಧುರವಾಚೋಽಸಶ್ಚತೋಽಸಂಸಕ್ತಾಃ | ಪೃಥಕ್ಪೃಥಗಿತ್ಯರ್ಥಃ | ಯದ್ವಾ ಚಿರಮಕೃತ್ವಾ ಶೀಘ್ರಮಭಿಷುಣ್ವಂತೋ ವೇನಾ ಏತನ್ನಾಮಕಾ ಮಹರ್ಷಯೋ ದುಹಂತಿ | ಅಭಿಷುಣ್ವಂತಿ| ಯದ್ವಾ | ದ್ಯುಲೋಕ ಏವ ವೇನಾಃ ಕಾಂತಾ ದೇವಾ ದುಹಂತಿ | ತಂ ಸೋಮಮುಕ್ಷಣಂ ಸೇಕ್ತಾರಂ ಗಿರಿಷ್ಠಾಂ ಗಿರಾವುನ್ನತೇ ದೇಶೇ ವರ್ತಮಾನಮಪ್ಸೂದಕೇಷು ವಸತೀವರೀಷ್ವಂತರ್ವಾವೃಧಾನಂ ವರ್ಧ-

**ಮಾನಂ ದ್ರಪ್ಸಂ ರಸರೂಪಂ ಸಮುದ್ರೇ ಸಮುದ್ರವತ್ಪ್ರವೃದ್ಧೇ ದ್ರೋಣಕಲಶೇ ಸಿಂಧೋರುದಕಸ್ಯೋರ್ಮೌ ಪೂರ ಆ ಸಿಂಚಂತೀತಿ ಶೇಷಃ । ತದರ್ಥಂ ಮಧುಮಂತಂ ಮಾಧುರ್ಯೋಪೇತಂ ರಸಂ ಪವಿತ್ರೇ ದಶಾಪವಿತ್ರೇ ಆ ಸಿಂಚಂತೀತಿ ಶೇಷಃ ॥**

॥ ಪ್ರತಿಪದಾರ್ಥ ॥

**ದಿವಃ**— ಪ್ರಕಾಶಮಾನವಾದ ಯಜ್ಞದ । **ನಾಕೇ**— ದುಃಖರಹಿತವಾದ ಸ್ಥಾನದಲ್ಲಿ । **ಮಧುಜಿಹ್ವಾಃ**— ಮಧುರವಾದ ಸ್ತುತಿವಾಕ್ಕುಳ್ಳವರೂ । **ಅಸಶ್ಚತಃ**— ಬೇರೆಬೇರೆ ಕಾರ್ಯಗಳಲ್ಲಿ ನಿರತರೂ ಆದ । **ವೇನಾಃ**—ವೇನ ಸಂಜ್ಞಕರಾದ ಋಷಿಗಳು । **ಉಕ್ಷಣಂ**— ಕಾಮವರ್ಷಕನೂ । **ಗಿರಿಷ್ಠಾಂ**— ಪರ್ವತವನ್ನು ಆಶ್ರಯಿಸಿರುವವನೂ ಆದ ಸೋಮನನ್ನು । **ದುಹಂತಿ**— ಕರೆಯುತ್ತಾರೆ । **ಅಪ್ಸು**— ಉದಕಗಳಲ್ಲಿ । **ವವೃಧಾನಂ**— ವೃದ್ಧಿಯನ್ನು ಹೊಂದುವವನೂ । **ದ್ರಪ್ಸಂ**—ರಸರೂಪನೂ ಆದ ಸೋಮನನ್ನು । **ಸಮುದ್ರೇ**— ದ್ರೋಣಕಲಶದಲ್ಲಿರುವ । **ಸಿಂಧೋಃ**— ಉದಕದ । **ಊರ್ಮಾ**— ಅಲೆಗಳೊಂದಿಗೆ । **ಆ (ಸಿಂಚಂತಿ)**— ಒಟ್ಟಿಗೆ ಸೇರುವಂತೆ ಮಾಡುತ್ತಾರೆ । **ಮಧುಮಂತಂ**— ಮಾಧುರ್ಯವುಳ್ಳ ಸೋಮವನ್ನು । **ಪವಿತ್ರೇ**— ದಶಾಪವಿತ್ರದಲ್ಲಿ । **ಆ**— ಸುರಿಸುತ್ತಾರೆ.

॥ ಭಾವಾರ್ಥ ॥

ಪ್ರಕಾಶಮಾನವೂ, ದುಃಖರಹಿತವೂ, ಆದ ಯಜ್ಞದ ಸ್ಥಾನದಲ್ಲಿ ಮಧುರವಾದ ಸ್ತುತಿವಾಕ್ಕುಳ್ಳವರೂ, ಬೇರೆ ಬೇರೆ ಕಾರ್ಯಗಳಲ್ಲಿ ನಿರತರೂ ಆದ ವೇನಸಂಜ್ಞಕರಾದ ಋಷಿಗಳು ಕಾಮವರ್ಷಕನೂ ಪರ್ವತದಲ್ಲಿ ಬೆಳೆದಿರುವವನೂ ಆದ ಸೋಮನನ್ನು ಕರೆಯುತ್ತಾರೆ. (ಹಿಂಡಿ ರಸವನ್ನು ತೆಗೆಯುತ್ತಾರೆ). ಉದಕಗಳಲ್ಲಿ ವೃದ್ಧಿಯನ್ನು ಹೊಂದುವವನೂ ರಸರೂಪನೂ ಆದ ಸೋಮನನ್ನು ದ್ರೋಣಕಲಶದಲ್ಲಿರುವ ಉದಕದ ಅಲೆಗಳೊಂದಿಗೆ ಒಟ್ಟಿಗೆ ಸೇರುವಂತೆ ಮಾಡುತ್ತಾರೆ. ಮಾಧುರ್ಯವುಳ್ಳ ಸೋಮನನ್ನು ದಶಾಪವಿತ್ರದಲ್ಲಿ ಸುರಿಯುತ್ತಾರೆ.

English Translation

In the heaven of the bright (sacrifice) the sweet-voiced Venas severally milk forth the sprinkler, the mountain-haunting (Soma) ; (they sprinkle him) nourished in the waters, juicy, in the ocean ( like pitcher), in the wave of the river ; (they sprinkle him) sweet-flavoured, in the filter.

॥ ಸಂಹಿತಾಪಾಠಃ ॥

ನಾಕೇ ಸುಪರ್ಣಮುಪಪಪ್ತಿವಾಂಸಂ ಗಿರೋ ವೇನಾನಾಮಕೃಪಂತ
ಪೂರ್ವೀಃ ।
ಶಿಶುಂ ರಿಹಂತಿ ಮತಯಃ ಪನಿಪ್ನತಂ ಹಿರಣ್ಯಯಂ ಶಕುನಂ ಕ್ಷಾಮಣಿ
ಸ್ಥಾಂ ॥ ೧೧ ॥

|| ಪದಪಾಠಃ ||

ನಾಕೇ | ಸುऽಪರ್ಣಂ | ಉಪಪಪ್ತಿऽವಾಂಸಂ | ಗಿರಃ | ವೇನಾನಾಂ | ಅಕೃಪಂತ | ಪೂರ್ವೀಃ |

ಶಿಶುಂ | ರಿಹಂತಿ | ಮತಯಃ | ಪನಿಪ್ನತಂ | ಹಿರಣ್ಯಯಂ | ಶಕುನಂ | ಕ್ಷಾಮಣಿ | ಸ್ಥಾಂ || ೧೧ ||

|| ಸಾಯಣಭಾಷ್ಯಂ ||

ನಾಕೇ ದ್ಯುಲೋಕೇ ವರ್ತಮಾನಂ ಪಶ್ಚಾದುತ್ಪತಂತಂ ಪತೆಯಂತಂ ಸೋಮಂ ವೇನಾನಾಮಸ್ಮಾಕಂ ಸಂಬಂಧಿನ್ಯಃ ಪೂರ್ವೀರ್ಬಹ್ವ್ಯೋ ಗಿರಃ ಸ್ತುತಯ ಉಪಾಕೃಪಂತ | ಉಪಕಲ್ಪಂತೇ | ಅಭಿಷ್ಟುವಂತೀತ್ಯರ್ಥಃ | ತಂ ಶಿಶುಂ ಶಿಶುವತ್ಸಂಸ್ಕರ್ತವ್ಯಂ ಸೋಮಂ ಮತಯಃ ಸ್ತುತಯೋ ರಿಹಂತಿ | ಲಿಹಂತಿ | ಸಂಸ್ಪೃಶಂತಿ | ಪ್ರಾಪ್ನುವಂತೀತ್ಯರ್ಥಃ | ಕೀದೃಶಂ ಶಿಶುಂ | ಪನಿಪ್ನತಂ ಶಬ್ದಾಯಂತಂ || ಪನತೇರ್ಯಙ್‌ಲುಗಂತಾಚ್ಛತರ್ಯಭ್ಯಾಸಸ್ಯ ನಿಗಾಗಮ ಉಪಧಾಲೋಪಶ್ಚ || ಹಿರಣ್ಯಯಂ ಹಿರಣ್ಮಯಂ ಶಕುನಂ ಪಕ್ಷಿಣಂ ಕ್ಷಾಮಣಿ ಕ್ಷಮಾಯಾಂ ಸ್ಥಾಂ ಹವಿರ್ಧಾನೇ ಸ್ಥಾಂ ವರ್ತಮಾನಂ ||

|| ಪ್ರತಿಪದಾರ್ಥ ||

**ನಾಕೇ**—ದ್ಯುಲೋಕದಲ್ಲಿ | **ಉಪಪಪ್ತಿವಾಂಸಂ**—ವಾಸಿಸುತ್ತಿದ್ದವನೂ (ಅನಂತರ) | **ಸುಪರ್ಣಂ**—ಉತ್ತಮವಾದ ಗಮನವುಳ್ಳವನೂ ಆದ ಸೋಮನನ್ನು | **ವೇನಾನಾಂ**—ವೇನಸಂಜ್ಞಕರಾದ ನಮ್ಮ | **ಪೂರ್ವೀಃ**—ಅನೇಕವಿಧವಾದ | **ಗಿರಃ**—ಸ್ತುತಿಗಳು | **ಅಕೃಪಂತ**—ಪ್ರಶಂಸಿಸುತ್ತವೆ | **ಪನಿಪ್ನತಂ**—ಶಬ್ದಮಾಡುವವನೂ | **ಹಿರಣ್ಯಯಂ**—ಸುವರ್ಣನಿರ್ಮಿತವಾದ | **ಶಕುನಂ**—ಪಕ್ಷಿರೂಪನೂ | **ಕ್ಷಾಮಣಿ ಸ್ಥಾಂ**—ಪೃಥ್ವಿಯಲ್ಲಿ ಸ್ಥಾಪಿತನೂ ಆದ | **ಶಿಶುಂ**—ಶಿಶುರೂಪನಾದ ಸೋಮನನ್ನು | **ಮತಯಃ**—ಸ್ತುತಿಗಳು | **ರಿಹಂತಿ**—ಸಂಸ್ಕರಿಸುತ್ತವೆ.

|| ಭಾವಾರ್ಥ ||

ದ್ಯುಲೋಕದಲ್ಲಿದ್ದವನೂ, ಉತ್ತಮವಾದ ಗಮನವುಳ್ಳವನೂ ಆದ ಸೋಮನನ್ನು ವೇನಸಂಜ್ಞಕರಾದ ನಮ್ಮ ಅನೇಕವಿಧವಾದ ಸುತಿಗಳು ಪ್ರಶಂಸಿಸುತ್ತವೆ. ಶಬ್ದಮಾಡುವವನೂ, ಸುವರ್ಣನಿರ್ಮಿತವಾದ ಪಕ್ಷಿರೂಪನೂ, ಪೃಥ್ವಿಯಲ್ಲಿ ಸ್ಥಾಪಿತನೂ, ಶಿಶುರೂಪನೂ ಆದ ಸೋಮನನ್ನು ಸ್ತುತಿಗಳು ಸಂಸ್ಕರಿಸುತ್ತವೆ.

## English Translation.

The many voices of the Venas praise (the Soma who dwells) in heaven, well-winged, falling (to earth); praises soothe the crying infant, the golden bird, reposing on the earth.

|| ಸಂಹಿತಾಪಾಠಃ ||

ಊರ್ಧ್ವೋ ಗಂಧರ್ವೋ ಅಧಿ ನಾಕೇ ಅಸ್ಥಾದ್ವಿಶ್ವಾ ರೂಪಾ ಪ್ರತಿಚಕ್ಷಾಣೋ ಅಸ್ಯ |

ಭಾನುಃ ಶುಕ್ರೇಣ ಶೋಚಿಷಾ ವ್ಯದ್ಯೌತ್ಪ್ರಾರೂರುಚದ್ರೋದಸೀ ಮಾತರಾ

ಶುಚಿಃ ॥ ೧೨ ॥

॥ ಪದಪಾಠಃ ॥

ಊರ್ಧ್ವಃ । ಗಂಧರ್ವಃ । ಅಧಿ । ನಾಕೇ । ಅಸ್ಥಾತ್ । ವಿಶ್ವಾ । ರೂಪಾ । ಪ್ರತಿಽಚಕ್ಷಾಣಃ । ಅಸ್ಯ ।

ಭಾನುಃ । ಶುಕ್ರೇಣ । ಶೋಚಿಷಾ । ವಿ । ಅದ್ಯೌತ್ । ಪ್ರ । ಅರೂರುಚತ್ । ರೋದಸೀ ಇತಿ । ಮಾತರಾ ।

ಶುಚಿಃ ॥ ೧೨ ॥

॥ ಸಾಯಣಭಾಷ್ಯಂ ॥

ಊರ್ಧ್ವ ಉನ್ನತೋ ಗಂಧರ್ವೋ ರಶ್ಮೀನಾಂ ಧಾರಕಃ ಸೋಮೋ ನಾಕ ಆದಿತ್ಯೇಽಧ್ಯಸ್ಥಾತ್ । ಅಧಿತಿಷ್ಠತಿ । ಕಿಂ ಕುರ್ವನ್ । ಅಸ್ಯಾದಿತ್ಯಸ್ಯ ವಿಶ್ವಾ ವಿಶ್ವಾನಿ ರೂಪಾಣಿ ಪ್ರತಿಚಕ್ಷಾಣಃ ಪ್ರತಿಪಶ್ಯನ್ । ಭಾನುರಾದಿತ್ಯಃ ಸೋಮಾಧಿಷ್ಠಿತಃ ಸಞ್ಛುಕ್ರೇಣ ದೀಪ್ತೇನ ಶೋಚಿಷಾ ತೇಜಸಾ ವ್ಯದ್ಯೌತ್ । ವಿದ್ಯೋತತೇ । ನ ಕೇವಲಂ ಸ್ವಯಮೇವ ಅಪಿತು ಮಾತರಾ ನಿರ್ಮಾತ್ರ್ಯೌ ರೋದಸೀ ದ್ಯಾವಾಪೃಥಿವ್ಯೌ ಪ್ರಾರೂರುಚತ್ । ಪ್ರರೋಚಯತಿ । ಶುಚಿರ್ದೀಪ್ತಃ ಸೂರ್ಯಃ ॥

॥ ಪ್ರತಿಪದಾರ್ಥ ॥

**ಊರ್ಧ್ವಃ**—ಉನ್ನತಸ್ಥಾನದಲ್ಲಿರುವವನೂ । **ಗಂಧರ್ವಃ**—ರಶ್ಮಿಗಳನ್ನು ಧರಿಸಿರುವವನೂ ಆದ ಸೋಮನು । **ಅಸ್ಯ**—ಆದಿತ್ಯನ । **ವಿಶ್ವಾ**—ಸಕಲವಾದ । **ರೂಪಾ**—ರೂಪಗಳನ್ನೂ । **ಪ್ರತಿಚಕ್ಷಾಣಃ**—ವೀಕ್ಷಿಸುತ್ತ । **ನಾಕೇ**—ಆದಿತ್ಯಲೋಕದಲ್ಲಿ । **ಅಧ್ಯಸ್ಥಾತ್**—ಸ್ಥಾಪಿತನಾಗಿದ್ದಾನೆ । **ಭಾನುಃ**—ಆದಿತ್ಯನು । **ಶುಕ್ರೇಣ**—ಪ್ರಕಾಶಮಾನವಾದ । **ಶೋಚಿಷಾ**—ತೇಜಸ್ಸಿನಿಂದ । **ವ್ಯದ್ಯೌತ್**—ಪ್ರಕಾಶಿಸುತ್ತಾನೆ । **ಶುಚಿಃ**—ಪ್ರಕಾಶಮಾನನಾದ ಸೂರ್ಯನು । **ಮಾತರಾ**—ಜಗನ್ನಿರ್ಮಾಪಕಿಯರಾದ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಪ್ರಾರೂರುಚತ್**—ಪ್ರಕಾಶಪಡಿಸುತ್ತಾನೆ.

॥ ಭಾವಾರ್ಥ ॥

ಉನ್ನತಸ್ಥಾನದಲ್ಲಿರುವವನೂ, ರಶ್ಮಿಗಳನ್ನು ಧರಿಸಿರುವವನೂ ಆದ ಸೋಮನು ಆದಿತ್ಯನ ಸಕಲವಾದ ರೂಪಗಳನ್ನು ವೀಕ್ಷಿಸುತ್ತ ಆದಿತ್ಯಲೋಕದಲ್ಲಿ ಸ್ಥಾಪಿತನಾಗಿದ್ದಾನೆ. ಆದಿತ್ಯನು ಪ್ರಕಾಶಮಾನನಾದ ತೇಜಸ್ಸಿನಿಂದ ಪ್ರಕಾಶಿಸುತ್ತಾನೆ. ಪ್ರಕಾಶಮಾನನಾದ ಸೂರ್ಯನು ಜಗನ್ನಿರ್ಮಾಪಕಿಯರಾದ ದ್ಯಾವಾಪೃಥಿವಿಗಳನ್ನು ಪ್ರಕಾಶಪಡಿಸುತ್ತಾನೆ.

## English Translation.

The elevated Gandharva abides above the sun contemplating all its forms; the sun shines with white light, radiant he illumines the creative heaven and earth.

# ಎಂಭತ್ತಾರನೆಯ ಸೂಕ್ತವು

---

|| ಸಾಯಣಭಾಷ್ಯಂ ||

ಅಥ ಪಂಚಮೇ ಚಾನುವಾಕ ಏಕಾದಶ ಸೂಕ್ತಾನಿ। ತತ್ರ ಪ್ರ ತ ಇತ್ಯೇಷ್ಟಾಚತ್ವಾರಿಂಶದೃಚಂ ಪ್ರಥಮಂ ಸೂಕ್ತಂ। ಪ್ರಥಮದಶರ್ಚಸ್ಯಾಕೃಷ್ಟಾ ಇತಿ ಮಾಷಾ ಇತಿ ಚ ದ್ವಿನಾಮಾನ ಋಷಿಗಣಾ ದ್ರಷ್ಟಾರಃ। ದ್ವಿತೀಯಸ್ಯ ದಶರ್ಚಸ್ಯ ಸಿಕತಾ ಇತಿ ನೀವಾವರೀ ಇತಿ ದ್ವಿನಾಮಾನ ಋಷಿಗಣಾಃ। ತೃತೀಯಸ್ಯ ದಶರ್ಚಸ್ಯ ಪೃಶ್ನಯ ಇತ್ಯಜಾ ಇತಿ ಚ ನಾಮದ್ವಯೋಪೇತಾ ಋಷಿಗಣಾಃ। ಅದೃಷ್ಟಾರ್ಥಮೇಷಾಂ ದ್ವಿನಾಮತ್ವಮವಗಂತವ್ಯಂ। ಚತುರ್ಥಸ್ಯ ದಶರ್ಚಸ್ಯಾಕೃಷ್ಟಾ ಮಾಷಾ ಇತ್ಯಾದಿದ್ವಿನಾಮಾನಸ್ತ್ರಯೋ ಗಣಾ ದ್ರಷ್ಟಾರಃ। ಏವಂ ಚತ್ವಾರಿಂಶದ್ಗತಾಃ। ಅಥ ಪಂಚಾನಾಂ ಭೌಮೋಽತ್ರಿರ್ಋಷಿಃ। ತತಸ್ತಿಸೃಣಾಂ ಗೃತ್ಸಮದಃ। ಜಗತೀ ಛಂದಃ। ಪವಮಾನಃ ಸೋಮೋ ದೇವತಾ। ತಥಾ ಚಾನುಕ್ರಾಂತಂ। ಪ್ರ ತೇಽಷ್ಟಾಚತ್ವಾರಿಂಶದೃಷಿಗಣಾ ದಶರ್ಚಾ ಆಕೃಷ್ಟಾ ಮಾಷಾಃ ಪ್ರಥಮೇ ಸಿಕತಾ ನಿವಾವರೀ ದ್ವಿತೀಯೇ ಪೃಶ್ನಯೋಽಜಾಸ್ತೃತೀಯೇ ತ್ರಯಶ್ಚತುರ್ಥೇಽತ್ರಿಃ ಪಂಚಾಂತ್ಯಾಸ್ತಿಸ್ರೋ ಗೃತ್ಸಮದ ಇತಿ॥ ಗತೋ ವಿನಿಯೋಗಃ॥

ಅನುವಾದವು—ಋಗ್ವೇದಸಂಹಿತೆಯ ಒಂಭತ್ತನೆಯ ಮಂಡಲದ ಐದನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವುವು. ಅವುಗಳಲ್ಲಿ ಪ್ರ ತೇ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ನಲವತ್ತೆಂಟು ಋಕ್ಕುಗಳಿರುವುವು. ಈ ಸೂಕ್ತದಲ್ಲಿ ಮೊದಲನೆಯ ಹತ್ತು ಋಕ್ಕುಗಳಿಗೆ (೧-೧೦) ಆಕೃಷ್ಟಾ ಮತ್ತು ಮಾಷಾ ಎಂಬ ಎರಡು ವಿಧವಾದ ಹೆಸರಿರುವ ಋಷಿಗಳೇ ಋಷಿಯು; ಇಲ್ಲಿಂದ ಮುಂದಿನ ಹತ್ತು ಋಕ್ಕುಗಳಿಗೆ (೧೧-೨೦) ಸಿಕತಾ ಮತ್ತು ನೀವಾವರೀ ಎಂಬ ಹೆಸರಿನ ಋಷಿಗಣಗಳು ಋಷಿಯು; ಅಲ್ಲಿಂದ ಮುಂದಿನ ಹತ್ತು ಋಕ್ಕುಗಳಿಗೆ (೨೧-೩೦) ಪೃಶ್ನಯಃ ಮತ್ತು ಅಜಾಃ ಎಂಬ ಹೆಸರಿನ ಋಷಿಗಣಗಳು ಋಷಿಯು; ಅಲ್ಲಿಂದ ಮುಂದಿನ ಹತ್ತು ಋಕ್ಕುಗಳಿಗೆ (೩೧-೪೦) ಹಿಂದೆ ಹೇಳಿದ ಆಕೃಷ್ಟಾ ಮತ್ತು ಮಾಷಾ ಎಂಬ ಹೆಸರಿನ ಮತ್ತು ಸಿಕತಾ, ನೀವಾರೀ ಎಂಬ ಹೆಸರಿನ ಮತ್ತು ಪ್ರಶ್ನಯಃ ಅಜಾಃ ಎಂಬ ಹೆಸರಿನ ಋಷಿಗಣಗಳು ಒಟ್ಟು ಮೂರು ಋಷಿಗಣಗಳು ಋಷಿಯು. ಈ ರೀತಿ ನಲವತ್ತು ಋಕ್ಕುಗಳು ಕಳೆದ ಮೇಲೆ ನಲವತ್ತೊಂದರಿಂದ ಮುಂದಿನ ಐದು ಋಕ್ಕುಗಳಿಗೆ (೪೦-೪೫) ಅತ್ರಿಯ ಋಷಿಯು. ಅಲ್ಲಿಂದ ಮುಂದಿನ ಮೂರು ಋಕ್ಕುಗಳಿಗೆ (೪೬-೪೮) ಗೃತ್ಸಮದನು ಋಷಿಯು; ಪವಮಾನಸೋಮನು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರ ತೇಽಷ್ಟಾಚತ್ವಾರಿಂಶದೃಷಿಗಣಾ ದಶರ್ಚಾ ಆಕೃಷ್ಟಾ ಮಾಷಾಃ ಪ್ರಥಮೇ ಸಿಕತಾ ನೀವಾವರೀ ದ್ವಿತೀಯೇ ಪೃಶ್ನಯೋಽಜಾಸ್ತೃತೀಯೇ ತ್ರಯಶ್ಚತುರ್ಥೇಽತ್ರಿಃ ಪಂಚಾಂತ್ಯಾಸ್ತಿಸ್ರೋ ಗೃತ್ಸಮದಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ

---

## ಸೂಕ್ತ—೮೬

ಮಂಡಲ-೯ ॥ ಅನುವಾಕ-೫ ॥ ಸೂಕ್ತ-೮೬ ॥

ಅಷ್ಟಕ-೭ ॥ ಅಧ್ಯಾಯ-೩ ॥ ವರ್ಗ-೧೨,೧೩,೧೪,೧೫,೧೬,೧೭,೧೮,೧೯,೨೦,೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪೮ ॥

॥ ಋಷಿಃ—೧-೧೦. ಅಕೃಷ್ಟಾ ಮಾಷಾಃ । ೧೧-೨೦. ಸಿಕತಾ ನಿವಾವರೀ । ೨೧-೩೦. ಪೃಶ್ನಯೋಽಜಾಃ । ೩೧-೪೦. ತ್ರಯ ಋಷಿಗಣಾಃ । ೪೧-೪೫. ಅತ್ರಿಃ । ೪೬-೪೮. ಗೃತ್ಸಮದಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಪ್ರ ತ ಆಶವಃ ಪವಮಾನ ಧೀಜವೋ ಮದಾ ಅರ್ಷಂತಿ ರಘುಜಾ ಇವ ತ್ಮನಾ ।
ದಿವ್ಯಾಃ ಸುಪರ್ಣಾ ಮಧುಮಂತ ಇಂದವೋ ಮದಿಂತಮಾಸಃ ಪರಿ ಕೋಶಮಾಸತೇ ॥ ೧ ॥

॥ ಪದಪಾಠಃ ॥

ಪ್ರ । ತೇ । ಆಶವಃ । ಪವಮಾನ । ಧೀಽಜವಃ । ಮದಾಃ । ಅರ್ಷಂತಿ । ರಘುಜಾಃಽಇವ । ತ್ಮನಾ ।
ದಿವ್ಯಾಃ । ಸುಽಪರ್ಣಾಃ । ಮಧುಽಮಂತಃ । ಇಂದವಃ । ಮದಿನ್ಽತಮಾಸಃ । ಪರಿ । ಕೋಶಂ । ಆಸತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ತೇ ತವಾಶವೋ ವ್ಯಾಪ್ತಾ ಧೀಜವೋ ಮನೋವೇಗಾ ಮದಾ ಮದಕರಾ ರಸಾ ಅರ್ಷಂತಿ । ಗಚ್ಛಂತಿ । ತ್ಮನಾತ್ಮನೈವ । ಅನಾಯಾಸೇನೇತ್ಯರ್ಥಃ । ಕ ಇವ । ರಘುಜಾ ಇವ । ರಘುಃ ಶೀಘ್ರಗಾ ವಡವಾ । ತತ್ರ ಜಾತಾ ರಘುಜಾಃ । ತ ಇವ ನಿರ್ಗತಾಸ್ತೇ ದಿವ್ಯಾ ದಿವಿ ಭವಾಃ । ಅಂತರಿಕ್ಷೇ ದಶಾಪವಿತ್ರೇ ಧಾರ್ಯಮಾಣಾ ಇತ್ಯರ್ಥಃ । ಸುಪರ್ಣಾಃ ಸುಪತನಾ ಮಧುಮಂತೋ ಮಾಧುರ್ಯೋಪೇತಾ ಮದಿಂತಮಾಸೋಽತಿಶಯೇನ ಮಾದಯಿತೃತಮಾ ಇಂದವೋ ದೀಪ್ತಾ ರಸಾಃ ಕೋಶಂ ದ್ರೋಣಕಲಶಂ ಪರ್ಯಾಸತೇ । ಪರ್ಯುಪವಿಶಂತಿ ॥

॥ ಪ್ರತಿಪದಾರ್ಥ ॥

ಪವಮಾನ—ಎಲೈ ಸೋಮದೇವನೇ । ತೇ—ನಿನ್ನ । ಆಶವಃ—ಸರ್ವತ್ರ ವ್ಯಾಪಿಸುವುವೂ । ಧೀಜವಃ—ಮನೋವೇಗವುಳ್ಳವೂ । ಮದಾಃ—ಹರ್ಷಕಾರಕಗಳೂ ಆದ ರಸಗಳು । ರಘುಜಾ ಇವ—ಶೀಘ್ರಗಾಮಿಗಳಾದ

ಅಶ್ವಗಳ ಮರಿಗಳಂತೆ | **ತ್ಮನಾ**—ಸ್ವಯಂಪ್ರೇರಿತವಾಗಿಯೇ | **ಪ್ರಾರ್ಷಂತಿ**—ಅತಿಶಯವಾಗಿ ಪ್ರಸಿಸುತ್ತವೆ | **ದಿವ್ಯಾಃ**—ದ್ಯುಲೋಕೋತ್ಪನ್ನವೂ | **ಸುಪರ್ಣಾಃ**—ಉತ್ತಮವಾದ ಪತನವುಳ್ಳವೂ | **ಮಧುಮಂತಃ**—ಮಾಧುರ್ಯದಿಂದ ಕೂಡಿದವೂ ಆದ | **ಇಂದವಃ**—ಸೋಮರಸಗಳು | **ಮದಿಂತಮಾಸಃ**—ಅತಿಶಯವಾದ ರುಚಿಕಾರಕಗಳಾಗಿ | **ಕೋಶಂಪರಿ** – ದ್ರೋಣಕಲಶದ ಸುತ್ತಲೂ | **ಆಸತೇ** – ಸ್ಥಾಪಿತವಾಗುತ್ತವೆ.

|| ಭಾವಾರ್ಥ ||

ಎಲೈ ಸೋಮದೇವನೇ, ಸರ್ವತ್ರ ವ್ಯಾಪಿಸುವುವೂ, ಮನೋವೇಗವುಳ್ಳವೂ, ಹರ್ಷಕಾರಕಗಳೂ, ಆದ ರಸಗಳು ಶೀಘ್ರಗಾಮಿಗಳಾದ ಅಶ್ವಗಳ ಮರಿಗಳಂತೆ ಸ್ವಯಂಪ್ರೇರಿತವಾಗಿಯೇ ಅತಿಶಯವಾಗಿ ಪ್ರವಿಸುತ್ತವೆ. ದ್ಯುಲೋಕೋತ್ಪನ್ನವೂ, ಉತ್ತಮವಾದ ಪತನವುಳ್ಳವೂ, ಮಾಧುರ್ಯದಿಂದ ಕೂಡಿದವೂ ಆದ ಸೋಮರಸಗಳು ಅತಿಶಯವಾದ ರುಚಿಕಾರಕಗಳಾಗಿ ದ್ರೋಣಕಲಶದ ಸುತ್ತಲೂ (ಒಳಗೆ) ಸ್ಥಾಪಿತವಾಗುತ್ತವೆ.

## English Translation.

Your (juices), purified (Soma), all pervading, quick as thought, go of themselves like the offspring of swift (mares) ; the celestial well-winged sweet-flavoured juices, great exciters of exhilaration, alight upon the receptacle.

|| ಸಂಹಿತಾಪಾಠಃ ||

ಪ್ರ ತೇ ಮದಾಸೋ ಮದಿರಾಸ ಆಶವೋಽಸೃಕ್ಷತ ರಥ್ಯಾಸೋ ಯಥಾ ಪೃಥಕ್ |
ಧೇನುರ್ನ ವತ್ಸಂ ಪಯಸಾಭಿ ವಜ್ರಿಣಮಿಂದ್ರಮಿಂದವೋ ಮಧುಮಂತ ಊರ್ಮಯಃ || ೨ ||

|| ಪದಪಾಠಃ ||

ಪ್ರ | ತೇ | ಮದಾಸಃ | ಮದಿರಾಸಃ | ಆಶವಃ | ಅಸೃಕ್ಷತ | ರಥ್ಯಾಸಃ | ಯಥಾ | ಪೃಥಕ್ |
ಧೇನುಃ | ನ | ವತ್ಸಂ | ಪಯಸಾ | ಅಭಿ | ವಜ್ರಿಣಂ | ಇಂದ್ರಂ | ಇಂದವಃ | ಮಧುಽಮಂತಃ | ಊರ್ಮಯಃ || ೨ ||

॥ ಸಾಯಣಭಾಷ್ಯಂ ॥

ಪ್ರಾಸೃಕ್ಷತ ಪ್ರಸೃಜ್ಯಂತೇ ತೇ ತವ ಮದಿರಾಸೋ ಮದಕರಾ ಆಶವೋ ವ್ಯಾಪ್ತಾ ಮದಾಸೋ ಮದಾ ರಸಾಃ । ಕ ಇವ । ರಥ್ಯಾಸೋ ರಥ್ಯಾ ಅಶ್ವಾಃ ತೇ ಯಥಾ ತಥಾ ಪೃಥಕ್ ಪ್ರಸೃಜ್ಯಂತೇ । ತೇ ಮಧುಮಂತೋ ಮಾಧುರ್ಯೋಽಪೇತಾ ಊರ್ಮಯಃ ಪ್ರವೃದ್ಧರಸಾಃ ಇಂದವಃ ಸೋಮಾ ಧೇನುಃ ಪಯಸಾ ವತ್ಸಮಿವ ಸ್ವರಸೇನ ವಜ್ರಿಣಮಿಂದ್ರಮಭಿಗಚ್ಛಂತಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ತೇ**—ನಿನ್ನ । **ಮದಾಸಃ**—ಹರ್ಷಕಾರಕವೂ । **ಮದಿರಾಸಃ**—ರುಚಿಯುಳ್ಳವೂ **ಆಶವಃ**—ವೇಗಗಾಮಿಗಳೂ ಆದ ಸೋಮರಸಗಳು । **ರಥ್ಯಾಸಃ ಯಥಾ**—ರಥಕ್ಕೆ ಕಟ್ಟಿರುವ ಅಶ್ವಗಳಂತೆ । **ಪೃಥಕ್**—ಪ್ರತ್ಯೇಕವಾಗಿ । **ಪ್ರ ಅಸೃಕ್ಷತ**—ಬಿಡಲ್ಪಟ್ಟಿವೆ । **ಮಧುಮಂತಃ**—ರುಚಿಕರವೂ । **ಊರ್ಮಯಃ**—ಅಲೆಗಳಂತಿರುವುವೂ ಆದ । **ಇಂದವಃ**—ಸೋಮರಸಗಳು । **ಧೇನುಃ**—ಧೇನುವು । **ಪಯಸಾ**—ಕ್ಷೀರದೊಂದಿಗೆ । **ವತ್ಸಂ ನ**—ತನ್ನ ಕರುವಿನಲ್ಲಿಗೆ ಆದರದಿಂದ ಓಡಿಹೋಗುವಂತೆ । **ವಜ್ರಿಣಂ**—ವಜ್ರಾಯುಧಧಾರಿಯಾದ । **ಇಂದ್ರಂ ಅಭಿ**—ಇಂದ್ರನಿಗಭಿಮುಖವಾಗಿ ಹೋಗುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನ ಹರ್ಷಕಾರಕವೂ, ರುಚಿಯುಳ್ಳವೂ, ವೇಗಗಾಮಿಗಳೂ ಆದ ಸೋಮರಸಗಳು ರಥಕ್ಕೆ ಕಟ್ಟಿರುವ ಅಶ್ವಗಳಂತೆ ಪ್ರತ್ಯೇಕವಾಗಿ ಬಿಡಲ್ಪಟ್ಟಿವೆ. ರುಚಿಕರವೂ, ಅಲೆಗಳಂತಿರುವುವೂ ಆದ ಸೋಮರಸಗಳು ಧೇನುವು ಕ್ಷೀರದೊಂದಿಗೆ ತನ್ನ ಕರುವಿನಲ್ಲಿಗೆ ಆದರದಿಂದ ಹೋಗಿ ಸೇರುವಂತೆ, ವಜ್ರಾಯುಧಧಾರಿಯಾದ ಇಂದ್ರನಿಗಭಿಮುಖವಾಗಿ ಹೋಗುತ್ತವೆ.

## English Translation.

Your exhilarating all-pervading juices are let loose separately like chariot-horses ; the sweet-flavoured (Soma) waves (go) to Indra the wielder of the thunderbolt as a cow with her milk to the calf.

॥ ಸಂಹಿತಾಪಾಠಃ ॥

ಅತ್ಯೋ ನ ಹಿಯಾನೋ ಅಭಿ ವಾಜಮರ್ಷ ಸ್ವರ್ವಿತ್ಕೋಶಂ ದಿವೋ
ಅದ್ರಿಮಾತರಂ ।
ವೃಷಾ ಪವಿತ್ರೇ ಅಧಿ ಸಾನೋ ಅವ್ಯಯೇ ಸೋಮಃ ಪುನಾನ ಇಂದ್ರಿಯಾಯ
ಧಾಯಸೇ ॥ ೩ ॥

|| ಪದಪಾಠಃ ||

ಅತ್ಯಃ । ನ । ಹಿಯಾನಃ । ಅಭಿ । ವಾಜಂ । ಅರ್ಷ । ಸ್ವಃऽವಿತ್ । ಕೋಶಂ । ದಿವಃ । ಅದ್ರಿऽಮಾತರಂ ।
ವೃಷಾ । ಪವಿತ್ರೇ । ಅಧಿ । ಸಾನೌ । ಅವ್ಯಯೇ । ಸೋಮಃ । ಪುನಾನಃ । ಇಂದ್ರಿಯಾಯ । ಧಾಯಸೇ॥೩॥

|| ಸಾಯಣಭಾಷ್ಯಂ ||

ಅತ್ಯೋ ನಾಶ್ವ ಇವ ಹಿಯಾನಃ ಪ್ರೇರ್ಯಮಾಣೋ ವಾಜಂ ಸಂಗ್ರಾಮಮಭ್ಯರ್ಷ । ಅಭಿಗಚ್ಛ। ತಥಾ ಸ್ವರ್ವಿತ್ ಸರ್ವವಿತ್ ಕೋಶಂ ದ್ರೋಣಕಲಶಂ ದಿವೋ ದ್ಯುಲೋಕಾದದ್ರಿಮಾತರಂ । ಅದ್ರಿ-ರ್ಮೇಘಃ । ತೇನ ತಜ್ಜನ್ಯಮುದಕಂ ಲಕ್ಷ್ಯತೇ । ತಸ್ಯ ನಿರ್ಮಾತಾರಮಭ್ಯರ್ಷ । ಅಥ ಪ್ರತ್ಯಕ್ಷಕೃತಃ। ವೃಷಾ ವರ್ಷಕಃ ಸೋಮೋऽವ್ಯಯೇऽವಿಮಯೇऽಧಿ ಸಾನೌ । ಅಧೀತಿ ಸಪ್ತಮ್ಯರ್ಥಾನುವಾದೀ । ಸಮುಚ್ಛ್ರಿತೇ ತಸ್ಮಿನ್ ಪುನಾನಃ ಪೂಯಮಾನೋ ಭವತಿ । ಕಿಮರ್ಥಂ । ಧಾಯಸೇ ಧಾರಕಾಯೇಂ-ದ್ರಿಯಾಯ ತದರ್ಥಂ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಅತ್ಯಃ ನ**—ಅಶ್ವದಂತೆ | **ಹಿಯಾನಃ**—ಪ್ರೇರಿತನಾಗಿ | **ವಾಜಂ**—ಯುದ್ಧಕ್ಕೆ| **ಅಭ್ಯರ್ಷ**—ಹೋಗಿ ಸೇರು | **ಸ್ವರ್ವಿತ್**—ಸ್ವರ್ಗಪ್ರಾಪಕನಾದ ನೀನು | **ಅದ್ರಿಮಾತರಂ**—ಉದಕಸಂಘಕ್ಕೆ ಮೂಲವಾದ | **ಕೋಶಂ**—ದ್ರೋಣಕಲಶಕ್ಕೆ ಅಭಿಮುಖವಾಗಿ | **ದಿವಃ**—ದ್ಯುಲೋಕದಿಂದ ಬಂದು ಸೇರು | **ಅವ್ಯಯೇ**—ಉಣ್ಣೆಯಿಂದ ನಿರ್ಮಿತವಾದ | **ಪವಿತ್ರೇ**—ದಶಾಪವಿತ್ರವಾದ | **ಸಾನೌ ಅಧಿ**—ಉನ್ನತವಾದ ಪ್ರದೇಶದಲ್ಲಿ | **ಪುನಾನಃ**—ಶುದ್ಧಿಗೊಳ್ಳುವವನೂ | **ವೃಷಾ**—ಇಷ್ಟಾರ್ಥಪ್ರದನೂ ಆದ ಸೋಮದೇವನು | **ಧಾಯಸೇ**—ಜಗದ್ಧಾರಕವಾದ | **ಇಂದ್ರಿಯಾಯ**—ಇಂದ್ರನಿಗೆ ಶಕ್ತಿಕಾರಣನಾಗಿ ಪ್ರವಹಿಸುತ್ತಾನೆ.

|| ಭಾವಾರ್ಥ ||

ಎಲೈ ಸೋಮದೇವನೇ, ನೀನು ಅಶ್ವದಂತೆ ಪ್ರೇರಿತನಾಗಿ ಯುದ್ಧಕ್ಕೆ ಹೋಗಿ ಸೇರು. ಸ್ವರ್ಗಪ್ರಾಪಕನಾದ ನೀನು ಉದಕಕ್ಕೆ ಮಾತೃಭೂತವಾದ ದ್ರೋಣಕಲಶಕ್ಕೆ ಅಭಿಮುಖನಾಗಿ ದ್ಯುಲೋಕದಿಂದ ಬಂದು ಸೇರು. ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ಉನ್ನತವಾದ ಪ್ರದೇಶದಲ್ಲಿ ಶುದ್ಧಿಗೊಳ್ಳುವವನೂ, ಇಷ್ಟಾರ್ಥಪ್ರದನೂ ಆದ ಸೋಮದೇವನು ಜಗದ್ಧಾರಕವಾದ ಇಂದ್ರನ ಶಕ್ತ್ಯರ್ಥವಾಗಿ ಪ್ರವಹಿಸುತ್ತಾನೆ.

## English Translation.

Like a horse urged on to battle, do you who are all-knowing rush from heaven to the receptacle whose mother is the cloud ; Soma the showerer (of benefits) is being purified at the top upon the woollen filter for Indra's strength which supports (the world).

॥ ಸಂಹಿತಾಪಾಠಃ ॥

ಪ್ರ ತ ಆಶ್ವಿನೀಃ ಪವಮಾನ ಧೀಜುವೋ ದಿವ್ಯಾ ಅಸೃಗ್ರನ್ಪಯಸಾ ಧರೀಮಣಿ।
ಪ್ರಾಂತರ್ಋಷಯಃ ಸ್ಥಾವಿರೀರಸೃಕ್ಷತ ಯೇ ತ್ವಾ ಮೃಜಂತ್ಯೃಷಿಷಾಣ
ವೇಧಸಃ ॥ ೪ ॥

॥ ಪದಪಾಠಃ ॥

ಪ್ರ । ತೇ । ಆಶ್ವಿನೀಃ । ಪವಮಾನ । ಧೀಽಜುವಃ । ದಿವ್ಯಾಃ । ಅಸೃಗ್ರನ್ । ಪಯಸಾ । ಧರೀಮಣಿ ।
ಪ್ರ । ಅಂತಃ । ಋಷಯಃ । ಸ್ಥಾವಿರೀಃ । ಅಸೃಕ್ಷತ । ಯೇ । ತ್ವಾ । ಮೃಜಂತಿ । ಋಷಿಽಸಾನ । ವೇಧಸಃ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಸೋಮ ತೇ ತವಾಶ್ವಿನೀರ್ವ್ಯಾಪ್ತಾಃ ॥ ಅಶೂ ವ್ಯಾಪ್ತಾವಿತ್ಯಸ್ಮಾದೌಣಾದಿಕೋ ವಿನಿಃ । ತತೋಽಣ್ । ವ್ಯತ್ಯಯೇನಾದ್ಯುದಾತ್ತಃ ॥ ಧೀಜುವೋ ಮನೋವೇಗಾ ದಿವ್ಯಾ ದಿವಿ ಭವಾ ದಿವಃ ಪತಂತ್ಯೋ ಧಾರಾಃ ಪಯಸಾ ಯುಕ್ತಾ ಧರೀಮಣಿ ಧಾರಕೇ ದ್ರೋಣಕಲಶೇ ಪ್ರಾಸೃಗ್ರನ್। ಗಚ್ಛಂತಿ । ಯೇ ವೇಧಸೋ ವಿಧಾತಾರ ಋಷಯೋ ಹೇ ಸೋಮರ್ಷಿಷಾಣರ್ಷಿಭಿಃ ಸಂಭಕ್ತ ತ್ವಾ ತ್ವಾಂ ಮೃಜಂತಿ ಅಭಿಷುಣ್ವಂತಿ ತ ಋಷಯಃ ಸ್ಥಾವಿರೀಃ ಸ್ಥವಿರಾ ಧಾರಾ ಅಂತರ್ಮಧ್ಯೇ ಪಾತ್ರಸ್ಯಾಂತಃ ಪ್ರಾಸೃಕ್ಷತ । ಪ್ರಸೃಜಂತಿ ॥

॥ ಪ್ರತಿಪದಾರ್ಥ ॥

**ಪವಮಾನ**—ಎಲೈ ಸೋಮದೇವನೇ । **ತೇ**—ನಿನ್ನ । **ಆಶ್ವಿನೀಃ**—ವ್ಯಾಪಕವಾದವೂ । **ಧೀಜುವಃ**—ಮನೋವೇಗವುಳ್ಳವೂ । **ದಿವ್ಯಾಃ**—ದ್ಯುಲೋಕೋತ್ಪನ್ನವಾದವೂ ಆದ ಧಾರೆಗಳು । **ಪಯಸಾ**—ಉದಕದೊಂದಿಗೆ ಸೇರಿಕೊಂಡು । **ಧರೀಮಣಿ**—ಧಾರಕವಾದ ದ್ರೋಣಕಲಶದೊಳಗೆ । **ಪ್ರ ಅಸೃಗ್ರನ್**—ಹೋಗಿ ಸೇರಿಕೊಳ್ಳುತ್ತವೆ । **ಋಷಿಸಾನ**—ಋಷಿಗಳಿಂದ ಸ್ತುತನಾದ ಎಲೈ ಸೋಮದೇವನೇ । **ವೇಧಸಃ**—ಯಜ್ಞನಿರ್ವಾಪಕರಾದ । **ಯೇ**—ಯಾರು । **ತ್ವಾ**—ನಿನ್ನನ್ನು । **ಮೃಜಂತಿ**—ಶುದ್ಧಿಗೊಳಿಸುವರೋ ಅಂತಹ । **ಋಷಯಃ**—ಋಷಿಗಳು । **ಸ್ಥಾವರೀಃ**—ನಿನ್ನ ಸ್ಥಿರವಾದ ಧಾರೆಗಳನ್ನು । **ಅಂತಃ**—ದ್ರೋಣಕಲಶದೊಳಕ್ಕೆ **ಪ್ರ ಅಸೃಕ್ಷತ**—ಸುರಿಯುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನ ವ್ಯಾಪಕವಾದವೂ, ಮನೋವೇಗವುಳ್ಳವೂ, ದ್ಯುಲೋಕೋತ್ಪನ್ನವಾದವೂ ಆದ ಧಾರೆಗಳು ಉದಕದೊಂದಿಗೆ ಸೇರಿಕೊಂಡು ಸ್ವಧಾರಕವಾದ ದ್ರೋಣಕಲಶದೊಳಕ್ಕೆ ಹೋಗಿ ಸೇರಿಕೊಳ್ಳುತ್ತವೆ. ಋಷಿಗಳಿಂದ ಸ್ತುತನಾಗುವ ಎಲೈ ಸೋಮದೇವನೇ, ಯಜ್ಞನಿರ್ವಾಪಕರಾದ ಯಾರು ನಿನ್ನನ್ನು ಶುದ್ಧಿಗೊಳಿಸುವರೋ ಅಂತಹ ಋಷಿಗಳು ನಿನ್ನ ಸ್ಥಿರವಾದ ಧಾರೆಗಳನ್ನು ದ್ರೋಣಕಲಶದೊಳಕ್ಕೆ ಸುರಿಯುತ್ತಾರೆ.

## English Translation.

Purified (Soma), your celestial steed-like (streams) as quick as thought are poured along with the milk into the receptacle ; the rishis, the ordainers (of sacrifice), who cleanse you, O rishi-enjoyed (Soma), pour your continnous (streams) into the midst (of the vessel)

॥ ಸಂಹಿತಾಪಾಠಃ ॥

ವಿಶ್ವಾ ಧಾಮಾನಿ ವಿಶ್ವಚಕ್ಷ ಋಭ್ವಸಃ ಪ್ರಭೋಸ್ತೇ ಸತಃ ಪರಿ ಯಂತಿ ಕೇತವಃ ।

ವ್ಯಾನಶಿಃ ಪವಸೇ ಸೋಮ ಧರ್ಮಭಿಃ ಪತಿರ್ವಿಶ್ವಸ್ಯ ಭುವನಸ್ಯ ರಾಜಸಿ ॥೫॥

॥ ಪದಪಾಠಃ ॥

ವಿಶ್ವಾ । ಧಾಮಾನಿ । ವಿಶ್ವऽಚಕ್ಷಃ । ಋಭ್ವಸಃ । ಪ್ರऽಭೋಃ । ತೇ । ಸತಃ । ಪರಿ । ಯಂತಿ । ಕೇತವಃ ।

ವಿऽಆನಶಿಃ । ಪವಸೇ । ಸೋಮ । ಧರ್ಮऽಭಿಃ । ಪತಿಃ । ವಿಶ್ವಸ್ಯ । ಭುವನಸ್ಯ । ರಾಜಸಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಿಶ್ವಚಕ್ಷಃ ಸರ್ವಸ್ಯ ದ್ರಷ್ಟಃ ಸೋಮ ಪ್ರಭೋಃ ಪರಿವೃಢಸ್ಯ ಸತಸ್ತೇ ತವಭ್ವಸಃ । ಋಭ್ವಾ ಇತಿ ಮಹನ್ನಾಮ । ಮಹಾಂತೋ ಕೇತವೋ ರಶ್ಮಯೋ ವಿಶ್ವಾ ಸರ್ವಾಣಿ ಧಾಮಾನಿ ತೇಜಃ ಸ್ಥಾನಾನಿ ದೇವಶರೀರಾಣಿ ಪರಿ ಯಂತಿ । ಪರಿಗಚ್ಛಂತಿ । ಪ್ರಕಾಶಯಂತೀತ್ಯರ್ಥಃ । ಹೇ ಸೋಮ ವ್ಯಾನಶಿರ್ವ್ಯಾಪನಶೀಲಶ್ಚ ತ್ವಂ ಧರ್ಮಭಿರ್ಧಾರಕೈ ರಸನಿಸ್ಯಂದೈಃ ಪವಸೇ । ಪೂಯಸೇ । ವಿಶ್ವಸ್ಯ ಭುವನಸ್ಯ ಚ ಪತಿಃ ಸ್ವಾಮೀ ತ್ವಂ ರಾಜಸಿ । ಈಶ್ವರೋ ಭವಸಿ ॥

॥ ಪ್ರತಿಪದಾರ್ಥ ॥

ವಿಶ್ವಚಕ್ಷಃ—ಸಕಲವನ್ನೂ ನೋಡುವ ಶಕ್ತಿಯುಳ್ಳ । **ಸೋಮ**—ಎಲೈ ಸೋಮದೇವನೇ । **ಪ್ರಭೋಃ ಸತಃ**—ಜಗತ್ತಿಗೆಲ್ಲ ಒಡೆಯನಾಗಿರುವ । **ತೇ**—ನಿನ್ನ । **ಋಭ್ವಸಃ**—ಮಹತ್ತಾದ । **ಕೇತವಃ**—ರಶ್ಮಿಗಳು । **ವಿಶ್ವಾ ಧಾಮಾನಿ**—ಸಕಲ ಜಗತ್ತುಗಳನ್ನೂ । **ಪರಿ ಯಂತಿ**—ವ್ಯಾಪಿಸಿ ಪ್ರಕಾಶಪಡಿಸುತ್ತವೆ । **ವ್ಯಾನಶಿಃ**—ಸರ್ವವ್ಯಾಪಕನಾದ ನೀನು । **ಧರ್ಮಭಿಃ**—ನಿನ್ನ ಧಾರೆಗಳೊಡನೆ । **ಪವಸೇ**—ಪ್ರವಹಿಸುತ್ತೀಯೆ । **ವಿಶ್ವಸ್ಯ ಭುವನಸ್ಯ**—ಸಕಲ ಲೋಕಕ್ಕೂ । **ಪತಿಃ**—ಒಡೆಯನಾದ ನೀನು । **ರಾಜಸಿ**—ಪ್ರಕಾಶಿಸುತ್ತೀಯೆ.

॥ ಭಾವಾರ್ಥ ॥

ಸಕಲ ಲೋಕವನ್ನೂ ನೋಡುವ ಶಕ್ತಿಯುಳ್ಳ ಎಲೈ ಸೋಮದೇವನೇ, ಜಗತ್ತಿಗೆಲ್ಲ ಒಡೆಯನಾಗಿರುವ ನಿನ್ನ ಮಹತ್ತಾದ ರಶ್ಮಿಗಳು ಸಕಲ ಜಗತ್ತುಗಳನ್ನೂ ವ್ಯಾಪಿಸಿ ಪ್ರಕಾಶಪಡಿಸುತ್ತವೆ. ಸರ್ವವ್ಯಾಪಕನಾದ ನೀನು ನಿನ್ನ ಧಾರೆಗಳೊಡನೆ ಪ್ರವಹಿಸುತ್ತೀಯೆ. ಸಕಲ ಲೋಕಕ್ಕೂ ಒಡೆಯನಾದ ನೀನು ಪ್ರಕಾಶಿಸುತ್ತೀಯೆ.

English Translation.

All-seeing (Soma), the mighty rays of you, who who are the lord, encompass all the sphere ; pervading (all things) you flow, Soma, through your functions) ; you rule, lord of the whole world.

॥ ಸಂಹಿತಾಪಾಠಃ ॥

ಉಭಯತಃ ಪವಮಾನಸ್ಯ ರಶ್ಮಯೋ ಧ್ರುವಸ್ಯ ಸತಃ ಪರಿ ಯಂತಿ ಕೇತವಃ।
ಯದೀ ಪವಿತ್ರೇ ಅಧಿ ಮೃಜ್ಯತೇ ಹರಿಃ ಸತ್ತಾ ನಿ ಯೋನಾ ಕಲಶೇಷು ಸೀದತಿ ॥ ೬ ॥

॥ ಪದಪಾಠಃ ॥

ಉಭಯತಃ । ಪವಮಾನಸ್ಯ । ರಶ್ಮಯಃ । ಧ್ರುವಸ್ಯ । ಸತಃ । ಪರಿ । ಯಂತಿ । ಕೇತವಃ ।
ಯದಿ । ಪವಿತ್ರೇ । ಅಧಿ । ಮೃಜ್ಯತೇ । ಹರಿಃ । ಸತ್ತಾ । ನಿ । ಯೋನಾ । ಕಲಶೇಷು । ಸೀದತಿ ॥ ೬ ॥

॥ ಸಾಯಣಭಾಷ್ಯಂ ॥

ಪವಮಾನಸ್ಯ ಪೂಯಮಾನಸ್ಯ ಧ್ರುವಸ್ಯ ಸ್ಥಿರಸ್ಯಾವಿಚಲಿತಸ್ಯ ಸತೋ ವಿದ್ಯಮಾನಸ್ಯ ಸೋಮಸ್ಯ ಕೇತವಃ ಪ್ರಜ್ಞಾಪಕಾ ರಶ್ಮಯ ಉಭಯತ ಇತಶ್ಚಾಮುತಶ್ಚ ಪರಿ ಯಂತಿ । ಪರಿಗಚ್ಛಂತಿ । ಅಭಿಷವಸಮಯ ಏವಂ ಭವತಿ । ಯದಿ ಯದಾ ಪವಿತ್ರೇ ದಶಾಪವಿತ್ರೇ ಹರಿರ್ಹರಿತವರ್ಣೋಽಯಮಧಿ ಮೃಜ್ಯತೇ ತದಾನೀಂ ಸತ್ತಾ ಸದನಶೀಲೋಽಯಂ ಯೋನೌ ಸ್ವೀಯೇ ಸ್ಥಾನೇ ಕಲಶೇಷು ದ್ರೋಣಕಲಶಾದಿಷು ನಿ ಷೀದತಿ ॥

॥ ಪ್ರತಿಪದಾರ್ಥ ॥

ಧ್ರುವಸ್ಯ ಸತಃ—ಶಾಶ್ವತವಾದ ಸ್ಥಿತಿಯುಳ್ಳ । ಪವಮಾನಸ್ಯ—ಸೋಮದೇವನ । ಕೇತವಃ—ಧ್ವಜದಂತಿರುವ । ರಶ್ಮಯಃ—ರಶ್ಮಿಗಳು । ಉಭಯತಃ—ಎರಡು ಲೋಕಗಳಲ್ಲಿಯೂ । ಪರಿ ಯಂತಿ—ಸಂಚಾರವನ್ನು ಹೊಂದುತ್ತವೆ । ಯದಿ—ಯಾವಾಗ । ಹರಿಃ—ಪಚ್ಚೆವರ್ಣವುಳ್ಳ ಸೋಮನು । ಪವಿತ್ರೇ

ಅಧಿ—ದಶಾಪವಿತ್ರದಲ್ಲಿ | ಮೃಜ್ಯತೇ—ಶುದ್ಧಿಯನ್ನು ಹೊಂದುವನೋ ಆಗ | ಸತ್ತಾ—ಸ್ವಸ್ಥಾನವನ್ನಾಶ್ರಯಿಸುವ ಸೋಮನು | ಯೋನಾ—ತನ್ನ ಸ್ಥಾನವಾದ | ಕಲಶೇಷು—ದ್ರೋಣಕಲಶಗಳಲ್ಲಿ | ನಿ ಸೀದತಿ—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಶಾಶ್ವತವಾದ ಸ್ಥಿತಿಯುಳ್ಳ ಸೋಮದೇವನ ಧ್ವಜದಂತಿರುವ ರಶ್ಮಿಗಳು ಎರಡು ಲೋಕಗಳಲ್ಲಿಯೂ ಸಂಚಾರವನ್ನು ಹೊಂದುತ್ತವೆ. ಹಚ್ಚಿವರ್ಣವುಳ್ಳ ಸೋಮನು ಯಾವಾಗ ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದುವನೋ, ಆಗ ಸ್ವಸ್ಥಾನವನ್ನಾಶ್ರಯಿಸುವ ಸೋಮನು ತನ್ನ ಸ್ಥಾನವಾದ ದ್ರೋಣಕಲಶಗಳಲ್ಲಿ ಕುಳಿತುಕೊಳ್ಳುತ್ತಾನೆ.

## English Translation.

The rays, the tokens of the extant, steady, purified Soma, circulate from both worlds ; when the green-tinted juice is cleansed upon the filter, reposing it alights upon its station, the pitchers.

|| ಸಂಹಿತಾಪಾಠಃ ||

ಯಜ್ಞಸ್ಯ ಕೇತುಃ ಪವತೇ ಸ್ವಧ್ವರಃ ಸೋಮೋ ದೇವಾನಾಮುಪ ಯಾತಿ ನಿಷ್ಕೃತಂ |
ಸಹಸ್ರಧಾರಃ ಪರಿ ಕೋಶಮರ್ಷತಿ ವೃಷಾ ಪವಿತ್ರಮತ್ಯೇತಿ ರೋರುವತ್ ||

|| ಪದಪಾಠಃ ||

ಯಜ್ಞಸ್ಯ | ಕೇತುಃ | ಪವತೇ | ಸುऽಅಧ್ವರಃ | ಸೋಮಃ | ದೇವಾನಾಂ | ಉಪ | ಯಾತಿ | ನಿಃऽಕೃತಂ |
ಸಹಸ್ರऽಧಾರಃ | ಪರಿ | ಕೋಶಂ | ಅರ್ಷತಿ | ವೃಷಾ | ಪವಿತ್ರಂ | ಅತಿ | ಏತಿ | ರೋರುವತ್ || ೭ ||

|| ಸಾಯಣಭಾಷ್ಯಂ ||

ಯಜ್ಞಸ್ಯ ಕೇತುಃ ಪ್ರಜ್ಞಾಪಕಃ ಸ್ವಧ್ವರಃ ಶೋಭನಯಾಗಃ ಸೋಮಃ ಪವತೇ | ಪೂಯತೇ | ಅಭಿಷೂಯತೇ | ತಾದೃಶಃ ಸೋಮೋ ದೇವಾನಾಂ ನಿಷ್ಕೃತಂ ಸಂಸ್ಕೃತಂ ಸ್ಥಾನಮುಪ ಯಾತಿ | ಉಪಗಚ್ಛತಿ | ತದರ್ಥಂ ಸಹಸ್ರಧಾರಃ ಕೋಶಂ ದ್ರೋಣಕಲಶಂ ಪರ್ಯರ್ಷತಿ | ತತೋ ತದರ್ಥಂ ವೃಷಾ ಸೇಕ್ತಾಯಂ ರೋರುವಚ್ಛಬ್ದಯನ್ ಪವಿತ್ರಮತಿಕ್ರಮ್ಯ ಗಚ್ಛತ್ಯಧೋದೇಶಂ ||

|| ಪ್ರತಿಪದಾರ್ಥ ||

ಯಜ್ಞಸ್ಯ—ಯಜ್ಞಕ್ಕೆ | ಕೇತುಃ—ಧ್ವಜದಂತಿರುವವನೂ | ಸ್ವಧ್ವರಃ—ಉತ್ತಮವಾದ ಯಾಗವುಳ್ಳವನೂ ಆದ | ಸೋಮಃ—ಸೋಮದೇವನು | ಪವತೇ—ಪ್ರವಹಿಸುತ್ತಾನೆ | ದೇವಾನಾಂ—ದೇವತೆಗಳ |

ನಿಷ್ಕೃತಂ ಉಪ—ಸುಸಂಸ್ಕೃತವಾದ ಸ್ಥಾನಕ್ಕೆ । ಉಪ ಯಾತಿ—ಹೋಗಿ ಸೇರುತ್ತಾನೆ । ಸಹಸ್ರಧಾರಃ—ಅನೇಕ ಧಾರೆಗಳುಳ್ಳವನಾಗಿ । ಕೋಶಂ ಪರಿ—ದ್ರೋಣಕಲಶದಲ್ಲಿ ಸುತ್ತಲೂ । ಅರ್ಷತಿ—ಸಂಚರಿಸುತ್ತಾನೆ । ವೃಷಾ—ಇಷ್ಟಾರ್ಥಪ್ರದನಾದ ಸೋಮನು । ರೋರುವತ್—ಶಬ್ದಮಾಡುತ್ತ । ಪವಿತ್ರಂ—ದಶಾಪವಿತ್ರವನ್ನು । ಅತ್ಯೇತಿ—ದಾಟಿಹೋಗುತ್ತಾನೆ.

॥ ಭಾವಾರ್ಥ ॥

ಯಜ್ಞಕ್ಕೆ ಧ್ವಜದಂತಿರುವವನೂ, ಉತ್ತಮವಾದ ಯಾಗವುಳ್ಳವನೂ ಆದ ಸೋಮದೇವನು ಪ್ರವಹಿಸುತ್ತಾನೆ. ದೇವತೆಗಳ ಸುಸಂಸ್ಕೃತವಾದ ಸ್ಥಾನಕ್ಕೆ ಹೋಗಿ ಸೇರುತ್ತಾನೆ. ಅನೇಕ ಧಾರೆಗಳುಳ್ಳವನಾಗಿ ದ್ರೋಣಕಲಶದ ಸುತ್ತಲೂ ಸಂಚರಿಸುತ್ತಾನೆ. ಇಷ್ಟಾರ್ಥಪ್ರದನಾದ ಸೋಮನು ಶಬ್ದಮಾಡುತ್ತ ದಶಾಪವಿತ್ರವನ್ನು ದಾಟಿ ಹೋಗುತ್ತಾನೆ.

## English Translation.

Soma, the signal of sacrifice, the object of pious worship, flows filtered; it approaches the abode of the gods; the thousand-streamed rushes to the receptacle, the showerer passes roaring through the filter.

॥ ಸಂಹಿತಾಪಾಠಃ ॥

ರಾಜಾ ಸಮುದ್ರಂ ನದ್ಯೋ೩ ವಿ ಗಾಹತೇಽಪಾಮೂರ್ಮಿಂ ಸಚತೇ ಸಿಂಧುಷು ಶ್ರಿತಃ ।
ಅಧ್ಯಸ್ಥಾತ್ಸಾನು ಪವಮಾನೋ ಅವ್ಯಯಂ ನಾಭಾ ಪೃಥಿವ್ಯಾ ಧರುಣೋ ಮಹೋ ದಿವಃ ॥ ೮ ॥

॥ ಪದಪಾಠಃ ॥

ರಾಜಾ । ಸಮುದ್ರಂ । ನದ್ಯಃ । ವಿ । ಗಾಹತೇ । ಅಪಾಂ । ಊರ್ಮಿಂ । ಸಚತೇ । ಸಿಂಧುಷು । ಶ್ರಿತಃ ।
ಅಧಿ । ಅಸ್ಥಾತ್ । ಸಾನು । ಪವಮಾನಃ । ಅವ್ಯಯಂ । ನಾಭಾ । ಪೃಥಿವ್ಯಾಃ । ಧರುಣಃ । ಮಹಃ । ದಿವಃ ॥ ೮ ॥

॥ ಸಾಯಣಭಾಷ್ಯಂ ॥

ಅಯಂ ಸೋಮೋ ರಾಜಾ ಸಮುದ್ರಮಂತರಿಕ್ಷಂ ನದ್ಯಸ್ಸೃತ್ರತ್ಯಾ ಅಪಶ್ಚ ವಿ ಗಾಹತೇ । ವಿಗಾಹ್ಯ ಚಾಪಾಮೂರ್ಮಿಂ ಸಚತೇ । ಉದಕಪೂರಂ ಸ್ರವತಿ । ಸಿಂಧುಷೂದಕೇಷು ಗ್ರಹೇಷು ವಾ ಶ್ರಿತಃ ಸನ್ ।

ಹೂಯಮಾನಃ ಸನ್ರಶ್ಮಿದ್ವಾರಾ ಸೂರ್ಯಂ ಪ್ರಾಪ್ಯಾಂತರಿಕ್ಷೇ ಮೇಘೇಷು ವರ್ತತ ಇತ್ಯರ್ಥಃ । ಅಸ್ಯೈವ ವೃಷ್ಟಿಸಾಧನತ್ವಾತ್। ಯದ್ವಾ। ಲುಪ್ತೋಪಮಮೇತತ್। ಸಮುದ್ರಂ ನದ್ಯ ಇವ ಸಿಂಧುಷು ವಸತೀವರೀಷು ಶ್ರಿತ ಆಶ್ರಿತಃ ಸನ್ ಸಮುದ್ರಮಭಿಷುತಸೋಮರಸಾಧಾರಪಾತ್ರಂ ವಿ ಗಾಹತೇಽಭಿಷವಾತ್ಪೂರ್ವಂ । ಪಶ್ಚಾತ್ಪವಮಾನಃ ಪೂಯಮಾನೋಽವ್ಯಯಂ ಸಾನು ಸಮುಚ್ಛ್ರಿತಂ ದಶಾಪವಿತ್ರಮಧ್ಯಸ್ಥಾತ್ । ಅಧಿತಿಷ್ಠತಿ । ಕುತ್ರ ದೇಶೇ । ನಾಭಾ ಪೃಥಿವ್ಯಾ ನಾಭಿಸ್ಥಾನೀಯೇ ಯಜ್ಞೇ । ತತ್ಸಂಬಂಧಿನಿ ಹವಿರ್ಧಾನ ಇತ್ಯರ್ಥಃ । ಯಜ್ಞಮಾಹುರ್ಭುವನಸ್ಯ ನಾಭಿಮಿತಿ ಶ್ರುತೇಃ । ಕೀದೃಶಃ । ಮಹೋ ದಿವೋ ದ್ಯುಲೋಕಸ್ಯ ಧರುಣೋ ಧರ್ತಾ ॥

॥ ಪ್ರತಿಪದಾರ್ಥ ॥

ರಾಜಾ—ಸೋಮರಾಜನು । **ಸಮುದ್ರಂ**—ಸಮುದ್ರವನ್ನೂ । **ನದ್ಯಃ**—ನದಿಗಳನ್ನೂ । **ವಿ ಗಾಹತೇ**—ಪ್ರವೇಶಿಸುತ್ತಾನೆ । **ಅಪಾಂ**—ಉದಕಗಳ । **ಊರ್ಮಿಂ**—ತರಂಗಗಳನ್ನೂ । **ಸಚೇತೇ**—ಸೇರಿಕೊಳ್ಳುತ್ತಾನೆ । **ಸಿಂಧುಷು**—ವಸತೀವರಿಉದಕಗಳಲ್ಲಿ । **ಶ್ರಿತಃ**—ಆಶ್ರಯವನ್ನು ಪಡೆಯುತ್ತಾನೆ । **ಮಹಃ**—ಮಹತ್ತಾದ । **ದಿವಃ**—ದ್ಯುಲೋಕಕ್ಕೆ । **ಧರುಣಃ**—ಧಾರಕನೂ । **ಪವಮಾನಃ**—ಶುದ್ಧಿಕಾರಕನೂ ಆದ ಸೋಮನು । **ಪೃಥಿವ್ಯಾಃ**—ಪೃಥ್ವಿಯ । **ನಾಭಾ**—ಮಧ್ಯಸ್ಥಾನವಾದ ಯಜ್ಞಪ್ರದೇಶದಲ್ಲಿ । **ಅವ್ಯಯಂ ಸಾನು**—ದಶಾಪವಿತ್ರದ ಮೇಲ್ಭಾಗದಲ್ಲಿ । **ಅಧ್ಯಸ್ಥಾತ್**—ಆಶ್ರಯಿಸಿ ಕುಳಿತಿದ್ದಾನೆ.

॥ ಭಾವಾರ್ಥ ॥

ಸೋಮರಾಜನು ಸಮುದ್ರವನ್ನೂ ನದಿಗಳನ್ನೂ ಪ್ರವೇಶಿಸುತ್ತಾನೆ. ಉದಕಗಳ ತರಂಗವನ್ನು ಸೇರಿಕೊಳ್ಳುತ್ತಾನೆ. ವಸತೀವರಿಉದಕಗಳಲ್ಲಿ ಆಶ್ರಯವನ್ನು ಪಡೆಯುತ್ತಾನೆ. ಮಹತ್ತಾದ ದ್ಯುಲೋಕಕ್ಕೆ ಧಾರಕನೂ, ಶುದ್ಧಿಕಾರಕನೂ ಆದ ಸೋಮನು ಪೃಥ್ವಿಯ ಮಧ್ಯಸ್ಥಾನವಾದ ಯಜ್ಞಪ್ರದೇಶದಲ್ಲಿ ದಶಾಪವಿತ್ರದ ಮೇಲ್ಭಾಗದಲ್ಲಿ ಆಶ್ರಯಿಸಿ ಕುಳಿತಿದ್ದಾನೆ.

## English Translation.

The royal (Soma) plunges into the firmament, (and) the rivers (thereof) mixed with the streams, he associates with the wave of the waters; being filtered he stands upon the uplifted woollen (filter) on the navel of the earth, the upholder of the vast heaven.

॥ ಸಂಹಿತಾಪಾಠಃ ॥

ದಿವೋ ನ ಸಾನು ಸ್ತನಯನ್ನಚಿಕ್ರದದ್ದ್ಯೌಶ್ಚ ಯಸ್ಯ ಪೃಥಿವೀ ಚ ಧರ್ಮಭಿಃ ।
ಇಂದ್ರಸ್ಯ ಸಖ್ಯಂ ಪವತೇ ವಿವೇವಿದತ್ಸೋಮಃ ಪುನಾನಃ ಕಲಶೇಷು
ಸೀದತಿ ॥ ೯ ॥

॥ ಪದಪಾಠಃ ॥

ದಿವಃ । ನ । ಸಾನು । ಸ್ತನಯನ್ । ಅಚಿಕ್ರದತ್ । ದ್ಯೌಃ । ಚ । ಯಸ್ಯ । ಪೃಥಿವೀ । ಚ । ಧರ್ಮಽಭಿಃ ।
ಇಂದ್ರಸ್ಯ । ಸಖ್ಯಂ । ಪವತೇ । ವಿಽವೇವಿದತ್ । ಸೋಮಃ । ಪುನಾನಃ । ಕಲಶೇಷು । ಸೀದತಿ ॥ ೯ ॥

॥ ಸಾಯಣಭಾಷ್ಯಂ ॥

ದಿವೋ ನ ಸಾನು ಸ್ತನಯನ್ ದ್ಯುಲೋಕಸ್ಯ ಸಮುಚ್ಛ್ರಿತಂ ಸ್ಥಾನಂ ಶಬ್ದಯನ್ನಿವಾಚಿಕ್ರದತ್। ಕ್ರಂದತೇ। ಯಸ್ಯ ಸೋಮಸ್ಯ ಧರ್ಮಭಿರ್ಧಾರಣೈರ್ದ್ಯೌಶ್ಚ ಪೃಥಿವೀ ಚ ಧೃತೇ ಸ್ಯಾತಾಂ। ವೃಷ್ಟಿಪ್ರದಾನ-ದ್ವಾರೌಷಧ್ಯಾದ್ಯುತ್ಪಾದನೇನ ದೇವಾನಾಂ ಹವಿರ್ಭಾವೇನ ಚೋಭಯಧಾರಕತ್ವಂ ಪ್ರಸಿದ್ಧಂ। ತಾದೃಶಃ ಸೋಮೋ ಮಹಾನುಭಾವಃ ಸೋಮಃ ಪುನಾನಃ ಪೂಯಮಾನ ಇಂದ್ರಸ್ಯ ಸಖ್ಯಂ ವಿವೇವಿದತ್ಪವತೇ। ಪೂಯತೇ ಪವಿತ್ರೇ। ಸ ಪುನಾನಃ ಸೋಮಃ ಕಲಶೇಷು ಸೀದತಿ। ನಿವಸತಿ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಸೋಮದೇವನ। **ಧರ್ಮಭಿಃ**—ಧಾರಕವಾದ ಶಕ್ತಿಗಳಿಂದ। **ದ್ಯೌಃ**—ದ್ಯುಲೋಕವೂ। **ಪೃಥಿವೀ ಚ**—ಪೃಥ್ವಿಯೂ ಧೃತವಾಗಿವೆಯೋ ಅಂತಹ ಸೋಮನು। **ದಿವಃ ಸಾನುಃ**—ಅಂತರಿಕ್ಷದ ಉನ್ನತ ಪ್ರದೇಶವು। **ಸ್ತನಯನ್ ನ**—ಗರ್ಜನೆ ಮಾಡುವಂತೆ। **ಅಚಿಕ್ರದತ್**—ಶಬ್ದಮಾಡುತ್ತಾನೆ। **ಇಂದ್ರಸ್ಯ**—ಇಂದ್ರನೊಡನಿರುವ। **ಸಖ್ಯಂ**—ಮಿತ್ರತ್ವವನ್ನು। **ವಿವೇವಿದತ್**—ಅರಿತುಕೊಂಡು। **ಪವತೇ**—ಪ್ರವಹಿಸುತ್ತಾನೆ। **ಪುನಾನಃ**—ಶುದ್ಧಿಯನ್ನು ಹೊಂದಿದ। **ಸೋಮಃ**—ಸೋಮನು। **ಕಲಶೇಷು**—ದ್ರೋಣಕಲಶಗಳಲ್ಲಿ। **ಸೀದತಿ**—ಕುಳಿತುಕೊಳ್ಳುತ್ತಾನೆ.

॥ ಭಾವಾರ್ಥ ॥

ಯಾವ ಸೋಮದೇವನ ಧಾರಕವಾದ ಶಕ್ತಿಗಳಿಂದ ದ್ಯುಲೋಕವೂ, ಪೃಥ್ವಿಯೂ ಧೃತವಾಗಿವೆಯೋ, ಅಂತಹ ಸೋಮನು ಅಂತರಿಕ್ಷದ ಉನ್ನತಪ್ರದೇಶವು ಗರ್ಜಿಸುವಂತೆ ಶಬ್ದಮಾಡುತ್ತಾನೆ. ಇಂದ್ರನ ಮಿತ್ರತ್ವವನ್ನರಿತುಕೊಂಡು ಪ್ರವಹಿಸುತ್ತಾನೆ. ಶುದ್ಧಿಯನ್ನು ಹೊಂದಿದ ಸೋಮನು ದ್ರೋಣಕಲಶಗಳಲ್ಲಿ ಕುಳಿತುಕೊಳ್ಳುತ್ತಾನೆ.

## English Translation.

Thundering like the summit of the sky (the Soma) roars, by whose support both heaven and earth (are upheld) ; the Soma flows acquiring Indra's friendship, purified he alights upon the pitchers.

|| ಸಂಹಿತಾಪಾಠಃ ||

ಜ್ಯೋತಿರ್ಯಜ್ಞಸ್ಯ ಪವತೇ ಮಧು ಪ್ರಿಯಂ ಪಿತಾ ದೇವಾನಾಂ ಜನಿತಾ ವಿಭೂವಸುಃ |

ದಧಾತಿ ರತ್ನಂ ಸ್ವಧಯೋರಪೀಚ್ಯಂ ಮದಿಂತಮೋ ಮತ್ಸರ ಇಂದ್ರಿಯೋ ರಸಃ || ೧೦ ||

|| ಪದಪಾಠಃ ||

ಜ್ಯೋತಿಃ | ಯಜ್ಞಸ್ಯ | ಪವತೇ | ಮಧು | ಪ್ರಿಯಂ | ಪಿತಾ | ದೇವಾನಾಂ | ಜನಿತಾ | ವಿಭುಽವಸುಃ |

ದಧಾತಿ | ರತ್ನಂ | ಸ್ವಧಯೋಃ | ಅಪೀಚ್ಯಂ | ಮದಿನ್ಽತಮಃ | ಮತ್ಸರಃ | ಇಂದ್ರಿಯಃ | ರಸಃ || ೧೦ ||

|| ಸಾಯಣಭಾಷ್ಯಂ ||

ಯಜ್ಞಸ್ಯ ಜ್ಯೋತಿಃ ಪ್ರಕಾಶಕಃ ಸೋಮಃ ಪ್ರಿಯಂ ದೇವಾನಾಂ ಮಧು ಮಧುರಂ ರಸಂ ಪವತೇ | ಕ್ಷರತಿ | ಯದ್ವಾ | ಜ್ಯೋತಿರ್ಯಜ್ಞಸ್ಯೇತ್ಯೇತದಪಿ ಮಧುವಿಶೇಷಣಂ | ತಥಾ ಸತ್ಯುಕ್ತಲಕ್ಷಣಂ ಮಧು ಪವತೇ ಪ್ರಾಯತ ಇತ್ಯರ್ಥಃ | ಸೋಮರಸೋ ವಿಶೇಷ್ಯತೇ | ಪಿತಾ ರಕ್ಷಿತಾ ದೇವಾನಾಂ ಜನಿತೋತ್ಪಾದಯಿತಾ ಸರ್ವಸ್ಯ ವಿಭೂವಸುಃ ಪ್ರಭೂತಧನಃ| ಈದೃಶಃ ಸ ಸ್ವಧಯೋರ್ದ್ಯಾವಾಪೃಥಿವ್ಯೋಃ| ಸ್ವಧೇ ಪುರಂಧೀ ಇತಿ ದ್ಯಾವಾಪೃಥಿವೀನಾಮಸು ಪಠಿತಃ | ತಯೋರಪೀಚ್ಯಮಂತರ್ಹಿತಂ ರತ್ನಂ ರಮಣೀಯಂ ಧನಂ ದಧಾತಿ | ಸ್ಥಾಪಯತಿ ಸ್ತೋತೃಷು | ಪುನಃ ಸ ಏವ ವಿಶೇಷ್ಯತೇ | ಮದಿಂತಮೋ ಮಾದಯಿತೃತಮೋ ಮತ್ಸರಃ ಸೋಮ ಇಂದ್ರಿಯ ಇಂದ್ರೇಣ ಜುಷ್ಟ ಇಂದ್ರಸ್ಯ ವರ್ಧಕೋ ವಾ ರಸೋ ರಸರೂಪಃ ||

|| ಪ್ರತಿಪದಾರ್ಥ ||

**ಯಜ್ಞಸ್ಯ**—ಯಜ್ಞಕ್ಕೆ | **ಜ್ಯೋತಿಃ**—ಪ್ರಕಾಶವನ್ನುಂಟುಮಾಡುವ ಸೋಮನು | (**ದೇವಾನಾಂ**—ದೇವತೆಗಳಿಗೆ) | **ಪ್ರಿಯಂ**—ಪ್ರೀತಿಕಾರಕವೂ |. **ಮಧು**—ಮಧುರವಾದುದೂ ಆದ ರಸವನ್ನು | **ಪವತೇ**—ಹರಿಯುವಂತೆ ಮಾಡುತ್ತಾನೆ | **ಮದಿಂತಮಃ**—ಹರ್ಷಕಾರಕನೂ | **ಮತ್ಸರಃ**—ಆನಂದದಾಯಕನೂ | **ಇಂದ್ರಿಯಃ**—ಇಂದ್ರನಿಗೆ ಶಕ್ತಿದಾಯಕನೂ | **ರಸಃ**—ರಸರೂಪನೂ | **ಪಿತಾ**—ಸರ್ವರಿಗೂ ಪಾಲಕನೂ | **ದೇವಾನಾಂ**—ದೇವತೆಗಳಿಗೆ | **ಜನಿತಾ**—ಉತ್ಪಾದಕನೂ | **ವಿಭೂವಸುಃ**—ಅತ್ಯಧಿಕವಾದ ಧನವುಳ್ಳವನೂ ಆದ ಸೋಮದೇವನು | **ಸ್ವಧಯೋಃ**—ದ್ಯಾವಾಪೃಥಿವಿಗಳ ನಡುವೆ | **ಅಪೀಚ್ಯಂ**—ಅಡಗಿರುವ | **ರತ್ನಂ**—ರಮಣೀಯವಾದ ಧನವನ್ನು | **ದಧಾತಿ**—ಸ್ಥಾಪಿಸುತ್ತಾನೆ.

|| ಭಾವಾರ್ಥ ||

ಯಜ್ಞಕ್ಕೆ ಪ್ರಕಾಶವನ್ನುಂಟುಮಾಡುವ ಸೋಮನು ದೇವತೆಗಳಿಗೆ ಪ್ರೀತಿಕಾರಕವೂ, ಮಧುಕರವೂ ಆದ ರಸವನ್ನು ಹರಿಯುವಂತೆ ಮಾಡುತ್ತಾನೆ. ಹರ್ಷಕಾರಕನೂ ಆನಂದದಾಯಕನೂ, ಇಂದ್ರನಿಗೆ ಶಕ್ತಿದಾಯಕನೂ ರಸರೂಪನೂ, ಸರ್ವರಿಗೂ ಪಾಲಕನೂ, ದೇವತೆಗಳಿಗೆ ಉತ್ಪಾದಕನೂ, ಅತ್ಯಧಿಕವಾದ ಧನವುಳ್ಳವನೂ ಆದ ಸೋಮದೇವನು ದ್ಯಾವಾಪೃಥಿವಿಗಳ ನಡುವೆ ಅಡಗಿರುವ ಧನವನ್ನು ಸ್ಥಾಪಿಸುತ್ತಾನೆ.

English Translation.

The light of the sacrifice, he distils sweet (juice) delightful (to the gods), the parent of the gods, the generator (of all), possessed of ample wealth ; he supports the hidden wealth of heaven and earth, the most exhilarating, the exciting (Soma), the nourisher of (Indra), the juice.

|| ಸಂಹಿತಾಪಾಠಃ ||

ಅಭಿಕ್ರಂದನ್ಕಲಶಂ ವಾಜ್ಯರ್ಷತಿ ಪತಿರ್ದಿವಃ ಶತಧಾರೋ ವಿಚಕ್ಷಣಃ ।
ಹರಿರ್ಮಿತ್ರಸ್ಯ ಸದನೇಷು ಸೀದತಿ ಮರ್ಮೃಜಾನೋಽವಿಭಿಃ ಸಿಂಧುಭಿ-
ರ್ವೃಷಾ ॥ ೧೧ ॥

|| ಪದಪಾಠಃ ||

ಅಭಿಽಕ್ರಂದನ್ । ಕಲಶಂ । ವಾಜೀ । ಅರ್ಷತಿ । ಪತಿಃ । ದಿವಃ । ಶತಽಧಾರಃ । ವಿಽಚಕ್ಷಣಃ ।
ಹರಿಃ । ಮಿತ್ರಸ್ಯ । ಸದನೇಷು । ಸೀದತಿ । ಮರ್ಮೃಜಾನಃ । ಅವಿಽಭಿಃ । ಸಿಂಧುಽಭಿಃ । ವೃಷಾ ॥ ೧೧ ॥

|| ಸಾಯಣಭಾಷ್ಯಂ ||

ವಾಜೀ ವೇಜನವಾನ್ ಗಮನವಾನಶ್ವಸದೃಶೋ ವಾ ಸೋಮೋಽಭಿಕ್ರಂದಚ್ಛಬ್ದಂ ಕುರ್ವನ್ ಕಲಶಮಭ್ಯರ್ಷತಿ । ಗಚ್ಛತಿ । ಕೀದೃಶೋ ವಾಜೀ । ದಿವಃ ಪತಿರ್ದ್ಯುಲೋಕಸ್ಯ ಸ್ವಾಮೀ ಶತಧಾರಃ ಶತಸಂಖ್ಯಾಕಧಾರೋ ವಿಚಕ್ಷಣೋ ವಿದ್ರಷ್ಟಾ । ಹರಿರ್ಹರಿತವರ್ಣೋ ರಸಾತ್ಮಕಃ ಸೋಮೋ ಮಿತ್ರಸ್ಯ ದೇವಾನಾಂ ಮಿತ್ರಭೂತಸ್ಯ ಯಜ್ಞಸ್ಯ ವಾ ಸದನೇಷು ಸ್ಥಾನೇಷು ಸೀದತಿ ಪಾತ್ರೇಷು ಧೃತಃ ಸನ್ । ಕೀದೃಶೋ ಹರಿಃ । ಸಿಂಧುಭಿಃ ಸ್ಯಂದನಸಾಧನೈರವಿಭಿರ್ದಶಾಪವಿತ್ರೈಶ್ಚಿದ್ರೈರ್ಮರ್ಮೃಜಾನಃ ಶೋಧ್ಯಮಾನೋ ವೃಷಾ ವರ್ಷಕಃ ॥

|| ಪ್ರತಿಪದಾರ್ಥ ||

**ದಿವಃ**—ದ್ಯುಲೋಕಕ್ಕೆ | **ಪತಿಃ**—ಒಡೆಯನೂ | **ಶತಧಾರಃ**—ಅನೇಕಧಾರಾರೂಪನೂ | **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ | **ವಾಜೀ**—ಶಕ್ತಿಯುತನೂ ಆದ ಸೋಮನು | **ಅಭಿಕ್ರಂದನ್**—ಶಬ್ದಮಾಡುತ್ತ | **ಕಲಶಂ**—ದ್ರೋಣಕಲಶಕ್ಕೆ | **ಅರ್ಷತಿ**—ಹೋಗುತ್ತಾನೆ | **ಸಿಂಧುಭಿಃ**—ಪ್ರವಹಿಸಲು ಸಾಧನವಾದ | **ಅವಿಭಿಃ**—ದಶಾಪವಿತ್ರದ ದ್ವಾರಗಳಿಂದ | **ಮರ್ಮೃಜಾನಃ**—ಶುದ್ಧಿಗೊಳಿಸಲ್ಪಟ್ಟು | **ವೃಷಾ**—ಇಷ್ಟಾರ್ಥಪ್ರದನಾದವನೂ | **ಹರಿಃ**—ಪಚ್ಚೆವರ್ಣವುಳ್ಳವನೂ ಆದ ಸೋಮನು | **ಮಿತ್ರಸ್ಯ**—ದೇವತೆಗಳಿಗೆ ಪ್ರಿಯವಾದ ಯಜ್ಞದ | **ಸದನೇಷು**—ಸ್ಥಾನಗಳಲ್ಲಿ | **ಸೀದತಿ**—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ದ್ಯುಲೋಕಕ್ಕೆ ಒಡೆಯನೂ, ಅನೇಕಧಾರಾರೂಪನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಶಕ್ತಿಯುತನೂ ಆದ ಸೋಮನು ಶಬ್ದಮಾಡತಕ್ಕ ದ್ರೋಣಕಲಶಕ್ಕೆ ಹೋಗುತ್ತಾನೆ. ಪ್ರವಹಿಸಲು ಸಾಧನವಾದ ದಶಾಪವಿತ್ರದ ದ್ವಾರಗಳಿಂದ ಶುದ್ಧಿಗೊಳಿಸಲ್ಪಟ್ಟು ಇಷ್ಟಾರ್ಥಪ್ರದನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಯಜ್ಞಸ್ಥಾನಗಳಲ್ಲಿ ಕುಳಿತುಕೊಳ್ಳುತ್ತಾನೆ.

English Translation

The rapid (Soma) the lord of heaven, the thousand-streamed, the beholder (of all), rushes crying aloud to the pitcher; the green-tinted one alights upon Mitra's dwelling-place, cleansed by the sheep's hairs and the waters, the showerer.

|| ಸಂಹಿತಾಪಾಠಃ ||

ಅಗ್ರೇ ಸಿಂಧೂನಾಂ ಪವಮಾನೋ ಅರ್ಷತ್ಯಗ್ರೇ ವಾಚೋ ಅಗ್ರಿಯೋ
ಗೋಷು ಗಚ್ಛತಿ |
ಅಗ್ರೇ ವಾಜಸ್ಯ ಭಜತೇ ಮಹಾಧನಂ ಸ್ವಾಯುಧಃ ಸೋತೃಭಿಃ ಪೂಯತೇ
ವೃಷಾ || ೧೨ ||

|| ಪದಪಾಠಃ ||

ಅಗ್ರೇ | ಸಿಂಧೂನಾಂ | ಪವಮಾನಃ | ಅರ್ಷತಿ | ಅಗ್ರೇ | ವಾಚಃ | ಅಗ್ರಿಯಃ | ಗೋಷು | ಗಚ್ಛತಿ |
ಅಗ್ರೇ | ವಾಜಸ್ಯ | ಭಜತೇ | ಮಹಾಽಧನಂ | ಸುಽಆಯುಧಃ | ಸೋತೃಽಭಿಃ | ಪೂಯತೇ | ವೃಷಾ||೧೨||

॥ ಸಾಯಣಭಾಷ್ಯಂ ॥

ಯಃ ಸೋಮಃ ಪವಮಾನಃ ಸಿಂಧೂನಾಂ ಸ್ಯಂದಮಾನಾನಾಮುದಕಾನಾಮಗ್ರೇಽರ್ಷತಿ ಗಚ್ಛತಿ । ತಥಾಗ್ರಿಯೋಽಗ್ರಾರ್ಹಃ ಶ್ರೇಷ್ಠೋಽಗ್ರೇ ವಾಚೋ ಮಾಧ್ಯಮಿಕಾಯಾ ಅಗ್ರೇಽರ್ಷತಿ । ತಥಾ ಗೋಷು ರಶ್ಮಿಷು ಗಚ್ಛತಿ । ತಥಾ ವಾಜಸ್ಯಾನ್ನಸ್ಯ ಬಲಸ್ಯ ವಾ ಲಾಭಾಯ ಮಹಾಧನಂ ಸಂಗ್ರಾಮಂ ಭಜತೇ । ಸ ಸ್ವಾಯುಧೋ ವೃಷಾ ವರ್ಷಕಃ ಸೋಮಃ ಸೋತೃಭಿರಭಿಷವಕರ್ತೃಭಿಃ ಪೂಯತೇ ॥

॥ ಪ್ರತಿಪದಾರ್ಥ ॥

**ಯಃ ಪವಮಾನಃ**— ಪವಮಾನಸಂಜ್ಞಕನಾದ ಯಾವ ಸೋಮದೇವನು । **ಸಿಂಧೂನಾಂ**— ಉದಕಗಳ । **ಅಗ್ರೇ**—ಮುಂಭಾಗದಲ್ಲಿ । **ಅರ್ಷತಿ**—ಪ್ರವಹಿಸುವನೋ । **ಅಗ್ರಿಯಃ**—ಶ್ರೇಷ್ಠನಾದ ಯಾರು । **ವಾಚಃ ಅಗ್ರೇ**—ಮಾಧ್ಯಮಿಕಾವಾಕ್ಕಿನ ಮುಂದೆ ಇರುವ । **ಗೋಷು**—ರಶ್ಮಿಗಳಲ್ಲಿ । **ಗಚ್ಛತಿ**—ಹೋಗಿ ಸೇರುವನೋ । **ವಾಜಸ್ಯ**—ಅನ್ನಲಾಭಕ್ಕಾಗಿ । **ಮಹಾಧನಂ**—ಅತ್ಯಧಿಕವಾದ ಧನವನ್ನು । **ಭಜತೇ**—ಯಾರು ಸೇವಿಸುವನೋ ಅಂತಹ । **ಸ್ವಾಯುಧಃ**—ಉತ್ತಮವಾದ ಆಯುಧವುಳ್ಳವನೂ । **ವೃಷಾ**— ಇಷ್ಟಾರ್ಥಪ್ರದನೂ ಆದ ಸೋಮನು । **ಸೋತೃಭಿಃ**—ಹಿಂಡುವವರಿಂದ । **ಪೂಯತೇ**—ಶುದ್ಧಿಗೊಳಿಸಲ್ಪಡುತ್ತಾನೆ.

॥ ಭಾವಾರ್ಥ ॥

ಪವಮಾನಸಂಜ್ಞನಾದ ಯಾವ ಸೋಮದೇವನು ಉದಕಗಳ ಮುಂಭಾಗದಲ್ಲಿ ಪ್ರವಹಿಸುವನೋ, ಶ್ರೇಷ್ಠನಾದ ಯಾರು ಮಾಧ್ಯಮಿಕಾವಾಕ್ಕಿನ ಮುಂದಿರುವ ರಶ್ಮಿಗಳಲ್ಲಿ ಹೋಗಿ ಸೇರುವನೋ, ಯಾರು ಅನ್ನಲಾಭಕ್ಕಾಗಿ ಅಧಿಕವಾದ ಧನವನ್ನು ಹೊಂದಿರುವನೋ ಅಂತಹ ಉತ್ತಮವಾದ ಆಯುಧವುಳ್ಳವನೂ, ಇಷ್ಟಾರ್ಥಪ್ರದನೂ ಆದ ಸೋಮನು ಹಿಂಡುವವರಿಂದ ಶುದ್ಧಿಗೊಳಿಸಲ್ಪಡುತ್ತಾನೆ.

## English Translation

In the front of the waters rushes the filtered (Soma), foremost (he rushes) in the front of the voice, he goes amongst the rays ; in the front he engages in battle (to win) food ; well-armed, the showerer (of benefits), he is purified by the offerers of the oblation.

॥ ಸಂಹಿತಾಪಾಠಃ ॥

ಅಯಂ ಮತವಾಞ್ಛಕುನೋ ಯಥಾ ಹಿತೋಽವ್ಯೇ ಸಸಾರ ಪವಮಾನ
ಊರ್ಮಿಣಾ ।
ತವ ಕ್ರತ್ವಾ ರೋದಸೀ ಅಂತರಾ ಕವೇ ಶುಚಿರ್ಧಿಯಾ ಪವತೇ ಸೋಮ
ಇಂದ್ರ ತೇ ॥ ೧೩ ॥

|| ಪದಪಾಠಃ ||

ಅಯಂ । ಮತ್ಸವಾನ್ । ಶಕುನಃ । ಯಥಾ । ಹಿತಃ । ಅವ್ಯೇ । ಸಸಾರ । ಪವಮಾನಃ । ಊರ್ಮಿಣಾ । ತವ । ಕ್ರತ್ವಾ । ರೋದಸೀ ಇತಿ । ಅಂತರಾ । ಕವೇ । ಶುಚಿಃ । ಧಿಯಾ । ಪವತೇ । ಸೋಮಃ । ಇಂದ್ರ । ತೇ ॥ ೧೩ ॥

|| ಸಾಯಣಭಾಷ್ಯಂ ||

ಅಯಂ ಸೋಮೋ ಮತವಾನ್ । ಮತಂ ಸಂಮತಂ ಪ್ರಿಯಂ ಸ್ತೋತ್ರಂ । ತದ್ವಾನ್ ಪವಮಾನಃ ಪೂಯಮಾನಃ ಸೂಯಮಾನಃ ಶೋಧ್ಯಮಾನಶ್ಚ ಸನ್ ಹಿತಃ ಪ್ರೇರಿತಃ ಶಕುನಃ ಪಕ್ಷೀ ಯಥಾ ಶೀಘ್ರಂ ಗಚ್ಛತಿ ತಥಾವ್ಯೇ ಪವಿತ್ರೇ ಊರ್ಮಿಣಾ ರಸೇನ ಸಸಾರ । ಗಚ್ಛತಿ । ಹೇ ಕವೇ ಕ್ರಾಂತಪ್ರಜ್ಞ । ಅನೂಚಾನ ವಾ ಯೇ ವಾ ಅನೂಚಾನಾಸ್ತೇ ಕವಯಃ । ಐ. ಬ್ರಾ. ೨-೩೮ । ಇತಿ ಶ್ರುತೇಃ । ತಾದೃಶ ಯಜಮಾನ ಯದ್ವೋಕ್ತಲಕ್ಷಣೇಂದ್ರ ತೇ ತವ ಕ್ರತ್ವಾ ಕರ್ಮಣಾ ಧಿಯಾ ಪ್ರಜ್ಞಯಾ ಚ । ಯದ್ವಾ । ವಿಶೇಷಣ-ವಿಶೇಷ್ಯಭಾವಃ । ಧಿಯಾ ಧಾರಕೇಣ ಕ್ರತ್ವಾ ಕರ್ಮಣಾ । ರೋದಸೀ ಅಂತರಾ ರೋದಸ್ಯೋರ್ದ್ಯಾವಾ-ಪೃಥಿವ್ಯೋರಂತರಾ ಶುಚಿಃ ಸೋಮಃ ಪವತೇ । ಪೂಯತೇ ॥

|| ಪ್ರತಿಪದಾರ್ಥ ||

**ಅಯಂ**—ಈ ಸೋಮದೇವನು । **ಮತವಾನ್**—ಸ್ತುತಿಯಿಂದ ಕೂಡಿಯೂ । **ಪವಮಾನಃ**—ಶುದ್ಧಿಯನ್ನು ಹೊಂದಿಯೂ । **ಹಿತಃ**—ಪ್ರೇರಿತನಾಗಿಯೂ । **ಶಕುನಃ ಯಥಾ**—ಪಕ್ಷಿಯು ಓಡುವಂತೆ । **ಅವ್ಯೇ**—ದಶಾಪವಿತ್ರದಲ್ಲಿ । **ಊರ್ಮಿಣಾ**—ರಸಸಹಿತನಾಗಿ । **ಸಸಾರ**—ಪ್ರವಿಸುತ್ತಾನೆ । **ಕವೇ**—ಕ್ರಾಂತಪ್ರಜ್ಞನಾದ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಕ್ರತ್ವಾ**—ಕರ್ಮದಿಂದಲೂ । **ಧಿಯಾ**—ಪ್ರಜ್ಞೆಯಿಂದಲೂ । **ರೋದಸೀ ಅಂತರಾ**—ದ್ಯಾವಾಪೃಥಿವಿಗಳ ನಡುವೆಯಲ್ಲಿ । **ಶುಚಿಃ**—ಶುಭ್ರನಾದ । **ಸೋಮಃ**—ಸೋಮನು । **ಪವತೇ**—ಪ್ರವಹಿಸುತ್ತಾನೆ.

|| ಭಾವಾರ್ಥ ||

ಈ ಸೋಮದೇವನು ಸ್ತುತಿಯಿಂದ ಕೂಡಿಯೂ, ಶುದ್ಧಿಯನ್ನು ಹೊಂದಿಯೂ, ಋತ್ವಿಕ್ಕುಗಳಿಂದ ಪ್ರೇರಿತನಾಗಿಯೂ, ಪಕ್ಷಿಯು ಓಡುವಂತೆ ವೇಗವಾಗಿ ದಶಾಪವಿತ್ರದಲ್ಲಿ ರಸರೂಪದಲ್ಲಿ ಪ್ರವಿಸುತ್ತಾನೆ. ಕ್ರಾಂತಪ್ರಜ್ಞನಾದ ಎಲೈ ಇಂದ್ರನೇ, ನಿನ್ನ ಕರ್ಮದಿಂದಲೂ, ಪ್ರಜ್ಞೆಯಿಂದಲೂ ಈ ದ್ಯಾವಾಪೃಥಿವಿಗಳ ನಡುವೆಯಲ್ಲಿ, ಶುಭ್ರನಾದ ಸೋಮನು ಪ್ರವಹಿಸುತ್ತಾನೆ.

## English Translation.

This (Soma) possessed of agreeable (praise), filtered, and sent forth, (quick) as a bird, goes with a stream (of juice) through the fleece; by your sustainig act, by your intelligence, sage Indra, the pure Soma flows purified through both heaven and earth.

|| ಸಂಹಿತಾಪಾಠಃ ||

ದ್ರಾಪಿಂ ವಸಾನೋ ಯಜತೋ ದಿವಿಸ್ಪೃಶಮಂತರಿಕ್ಷಪ್ರಾ ಭುವನೇಷ್ವ-
ರ್ಪಿತಃ ।
ಸ್ವರ್ಜಜ್ಞಾನೋ ನಭಸಾಭ್ಯಕ್ರಮೀತ್ಪ್ರತ್ನಮಸ್ಯ ಪಿತರಮಾ ವಿವಾಸತಿ || ೧೪ ||

|| ಪದಪಾಠಃ ||

ದ್ರಾಪಿಂ । ವಸಾನಃ । ಯಜತಃ । ದಿವಿऽಸ್ಪೃಶಂ । ಅಂತರಿಕ್ಷಽಪ್ರಾಃ । ಭುವನೇಷು । ಅರ್ಪಿತಃ ।
ಸ್ವಃ । ಜಜ್ಞಾನಃ । ನಭಸಾ । ಅಭಿ । ಅಕ್ರಮೀತ್ । ಪ್ರತ್ನಂ । ಅಸ್ಯ । ಪಿತರಂ । ಆ । ವಿವಾಸತಿ || ೧೪ ||

|| ಸಾಯಣಭಾಷ್ಯಂ ||

ದಿವಿಸ್ಪೃಶಂ ದೇವಸ್ಪೃಷ್ಟಾರಂ ದ್ರಾಪಿಂ ಕವಚಂ ತೇಜೋರೂಪಂ ವಸಾನ ಆಚ್ಛಾದಯನ್ ಯಜತೋ ಯಷ್ಟವ್ಯೋಽಂತರಿಕ್ಷಪ್ರಾ ಅಂತರಿಕ್ಷಸ್ಯ ಪೂರಕ ಉದಕೇನ ತಾದೃಶಃ ಸೋಮೋ ಭುವನೇಷೂದಕೇಷ್ವರ್ಪಿತಃ ಸ್ವಃ ಸರ್ವಂ ಸ್ವೇನ ಪಾಯಯಿತವ್ಯಂ ದೇವಂಸಘಂ ಸ್ವರ್ಗಂ ವಾ ಜಜ್ಞಾನೋ ಜನಯನ್ । ಅಥವಾ । ಸ್ವರುದಕಂ । ತಜ್ಜನಯನ್ । ನಭಸೋದಕೇನಾಭ್ಯಕ್ರಮೀತ್ । ಅಭಿಕ್ರಾಮತಿ । ಅಸ್ಯೋದಕಸ್ಯ ಪಿತರಂ ಪಾಲಕಂ ಪ್ರತ್ನಂ ಪುರಾಣಮಿಂದ್ರಮಾ ವಿವಾಸತಿ । ಪರಿಚರತಿ ||

|| ಪ್ರತಿಪದಾರ್ಥ ||

ದಿವಿಸ್ಪೃಶಂ— ಅಂತರಿಕ್ಷವನ್ನು ಮುಟ್ಟತಕ್ಕ । ದ್ರಾಪಿಂ— ಕವಚವನ್ನು । ವಸಾನಃ— ಧರಿಸಿಯೂ । ಯಜತಃ— ಪೂಜ್ಯನೂ । ಅಂತರಿಕ್ಷಪ್ರಾಃ— ಉದಕದಿಂದ ಅಂತರಿಕ್ಷವನ್ನು ತುಂಬುವವನೂ ಆದ ಸೋಮನು । ಭುವನೇಷು— ಉದಕಗಳಲ್ಲಿ । ಅರ್ಪಿತಃ— ಅರ್ಪಿತನಾಗಿ । ಸ್ವಃ— ಸ್ವರ್ಗವನ್ನು । ಜಜ್ಞಾನಃ— ಉತ್ಪನ್ನ ಮಾಡುತ್ತ । ನಭಸಾ— ಉದಕದೊಂದಿಗೆ । ಅಭ್ಯಕ್ರಮೀತ್— ಹೊಂದಿಕೊಳ್ಳುತ್ತಾನೆ । ಅಸ್ಯ— ಉದಕಕ್ಕೆ । ಪಿತರಂ— ಪಾಲಕನಾದವನೂ । ಪ್ರತ್ನಂ— ಪುರಾತನನೂ ಆದ ಇಂದ್ರನನ್ನು । ಆ ವಿವಾಸತಿ— ಉಪಚರಿಸುತ್ತಾನೆ.

|| ಭಾವಾರ್ಥ ||

ಅಂತರಿಕ್ಷವನ್ನು ಮುಟ್ಟತಕ್ಕ ಕವಚವನ್ನು ಧರಿಸಿಯೂ, ಪೂಜ್ಯನೂ, ಉದಕದಿಂದ ಅಂತರಿಕ್ಷವನ್ನು ತುಂಬುವವನೂ ಆದ ಸೋಮನು ಉದಕಗಳಲ್ಲಿ ಅರ್ಪಿತನಾಗಿ ಸ್ವರ್ಗವನ್ನು ಉತ್ಪನ್ನಮಾಡುತ್ತ ಉದಕದೊಂದಿಗೆ ಹೊಂದಿಕೊಳ್ಳುತ್ತಾನೆ. ಉದಕಕ್ಕೆ ಪಾಲಕನೂ, ಪುರಾತನನೂ ಆದ ಇಂದ್ರನನ್ನು ಉಪಚರಿಸುತ್ತಾನೆ.

English Translation

Wearing a coat of mail reaching to heaven, the adorable Soma, who fills the firmament (with rain), placed in the waters, generating heaven, passes with the water, (and) worships its ancient parent (Indra).

|| ಸಂಹಿತಾಪಾಠಃ ||

ಸೋ ಅಸ್ಯ ವಿಶೇ ಮಹಿ ಶರ್ಮ ಯಚ್ಛತಿ ಯೋ ಅಸ್ಯ ಧಾಮ ಪ್ರಥಮಂ ವ್ಯಾನಶೇ |

ಪದಂ ಯದಸ್ಯ ಪರಮೇ ವ್ಯೋಮನ್ಯತೋ ವಿಶ್ವಾ ಅಭಿ ಸಂ ಯಾತಿ ಸಂಯತಃ || ೧೫ ||

|| ಪದಪಾಠಃ ||

ಸಃ | ಅಸ್ಯ | ವಿಶೇ | ಮಹಿ | ಶರ್ಮ | ಯಚ್ಛತಿ | ಯಃ | ಅಸ್ಯ | ಧಾಮ | ಪ್ರಥಮಂ | ವಿಽಆನಶೇ |

ಪದಂ | ಯತ್ | ಅಸ್ಯ | ಪರಮೇ | ವಿಽಓಮನಿ | ಅತಃ | ವಿಶ್ವಾಃ | ಅಭಿ | ಸಂ | ಯಾತಿ | ಸಂಽಯತಃ ||

|| ಸಾಯಣಭಾಷ್ಯಂ ||

ಸ ಸೋಮೋಽಸ್ಯೇಂದ್ರಸ್ಯ ವಿಶೇ ಪ್ರವೇಶನಾಯ ಮಹಿ ಮಹಚ್ಛರ್ಮ ಸುಖಂ ಯಚ್ಛತಿ | ಯಃ ಸೋಮೋಽಸ್ಯೇಂದ್ರಸ್ಯ ಧಾಮ ತೇಜೋಯುಕ್ತಂ ಶರೀರಂ ಪ್ರಥಮಮಿತರದೇವಪ್ರಾಪ್ತೇಃ ಪೂರ್ವಂ ವ್ಯಾನಶೇ ಪ್ರಾಪ್ತವಾನ್ | ಯದ್ಯಸ್ಯಾಸ್ಯ ಸೋಮಸ್ಯ ಪರಮೇ ಮಹತ್ಯುತ್ಕೃಷ್ಟೇ ವ್ಯೋಮನಿ ವಿಶೇಷೇಣ ರಕ್ಷಕೇ ದ್ಯುಲೋಕೇ ವೇದ್ಯಾಂ ವಾ ಪದಂ ಭವತಿ | ಅತೋ ಯಸ್ಮಾತ್ಸೋಮಾತ್ತೃಪ್ತ ಇಂದ್ರಃ ಸೋಮಃ ಸ್ವಯಂ ವಾ ವಿಶ್ವಾಃ ಸಂಯತಃ ಸರ್ವಾನ್ ಸಂಗ್ರಾಮಾನಭಿ ಯಾತಿ ಸಮ್ಯಗಭಿಗಚ್ಛತಿ | ಸ ಸೋಮೋ ಮಹಿ ಶರ್ಮ ಯಚ್ಛತೀತಿ ಸಂಬಂಧಃ ||

|| ಪ್ರತಿಪದಾರ್ಥ ||

ಯಃ — ಯಾವ ಸೋಮನು | ಅಸ್ಯ — ಇಂದ್ರನ | ಧಾಮ — ತೇಜೋಯುತವಾದ ಶರೀರವನ್ನು | ಪ್ರಥಮಂ — ಎಲ್ಲರಿಗಿಂತಲೂ ಮೊದಲು | ವ್ಯಾನಶೇ — ಪ್ರವೇಶಿಸಿದನೋ ಅಂತಹವನೂ | ಯತ್ — ಯಾವ | ಅಸ್ಯ — ಈ ಸೋಮನಿಗೆ | ಪರಮೇ — ಉತ್ಕೃಷ್ಟವಾದ ದ್ಯುಲೋಕದಲ್ಲಿ | ಪದಂ — ಸ್ಥಾನವಿರುವುದೋ | ಯತಃ — ಯಾರ ಸಹಾಯದಿಂದ | ವಿಶ್ವಾಃ — ಸಮಸ್ತವಾದ | ಸಂಯತಃ — ಸಂಗ್ರಾಮಗಳನ್ನೂ | ಅಭಿ ಸಂ ಯಾತಿ —

ಇಂದ್ರನು ಜಯಿಸುವನೋ ಅಂತಹವನೂ ಆದ। **ಸಃ**—ಅದೇ ಸೋಮನು। **ಅಸ್ಯ**—ಇಂದ್ರನ। **ವಿಶೇ**—ಪ್ರವೇಶಕ್ಕಾಗಿ। **ಮಹಿ**—ಮಹತ್ತಾದ। **ಶರ್ಮ**—ಸುಖವನ್ನು। **ಯಚ್ಛತಿ**—ಕೊಡುತ್ತಾನೆ.

॥ ಭಾವಾರ್ಥ ॥

ಯಾವ ಸೋಮನು ಇಂದ್ರನ ತೇಜೋಯುತವಾದ ಶರೀವನ್ನು ಎಲ್ಲರಿಗಿಂತಲೂ ಮೊದಲು ಪ್ರವೇಶಿಸಿದನೋ, ಯಾವ ಈ ಸೋಮನಿಗೆ ಉತ್ಕೃಷ್ಟವಾದ ದ್ಯುಲೋಕದಲ್ಲಿ ಸ್ಥಾನವಿರುವುದೋ ಯಾರ ಸಹಾಯದಿಂದ ಸಮಸ್ತವಾದ ಸಂಗ್ರಾಮಗಳನ್ನೂ ಇಂದ್ರನು ಜಯಿಸುವನೋ ಅದೇ ಸೋಮನು ಇಂದ್ರನ ಪ್ರವೇಶಕ್ಕಾಗಿ ಮಹತ್ತಾದ ಸುಖವನ್ನು ಕೊಡುತ್ತಾನೆ.

English Translation

(Soma), who first reached Indra's glorious body, gives great happiness to the entrance of Indra ; (that Soma), whose station is in the highest heaven, and through whom (Indra) triumphs) in all contests.

॥ ಸಂಹಿತಾಪಾಠಃ ॥

ಪ್ರೋ ಅಯಾಸೀದಿಂದುರಿಂದ್ರಸ್ಯ ನಿಷ್ಕೃತಂ ಸಖಾ ಸಖ್ಯುರ್ನ ಪ್ರ ಮಿನಾತಿ ಸಂಗಿರಂ।
ಮರ್ಯ ಇವ ಯುವತಿಭಿಃ ಸಮರ್ಷತಿ ಸೋಮಃ ಕಲಶೇ ಶತಯಾಮ್ನಾ ಪಥಾ ॥ ೧೬ ॥

॥ ಪದಪಾಠಃ ॥

ಪ್ರೋ ಇತಿ। ಅಯಾಸೀತ್। ಇಂದುಃ। ಇಂದ್ರಸ್ಯ। ನಿಃऽಕೃತಂ। ಸಖಾ। ಸಖ್ಯುಃ। ನ। ಪ್ರ। ಮಿನಾತಿ। ಸಂऽಗಿರಂ।
ಮರ್ಯಃऽಇವ। ಯುವತಿऽಭಿಃ। ಸಂ। ಅರ್ಷತಿ। ಸೋಮಃ। ಕಲಶೇ। ಶತऽಯಾಮ್ನಾ। ಪಥಾ ॥ ೧೬ ॥

॥ ಸಾಯಣಭಾಷ್ಯಂ ॥

ಇಂದುಃ ಸೋಮ ಇಂದ್ರಸ್ಯ ನಿಷ್ಕೃತಂ ಸ್ಥಾನಮುದರಂ ಪ್ರೋ ಅಯಾಸೀತ್। ಪ್ರೈವ ಗಚ್ಛತಿ। ಗತ್ವಾ ಚ ಸಖಾ ಸಖಿಭೂತಃ ಸೋಮಃ ಸಖ್ಯುರಿಂದ್ರಸ್ಯ ಸಂಗಿರಂ ಸಮ್ಯಗ್ಗಿರಣಾಧಾರಭೂತಮುದರಂ ನ ಪ್ರ ಮಿನಾತಿ। ನ ಹಿನಸ್ತಿ। ಕಿಂಚ ಮರ್ಯ ಇವ ಯುವತಿಭಿರ್ಮರ್ತ್ಯೋ ಯಥಾ ಯುವತಿಭಿಃ ಸಹ

ಸಂಗತೋ ಭವತಿ ತದ್ವದಯಮಪಿ ಸೋಮೋ ಯುವತಿಭಿರ್ಮಿಶ್ರಣಶೀಲಾಭಿರ್ವಸತೀವರೀಭಿರದ್ಭಿಃ ಸಹ ಸಮರ್ಷತಿ । ಸಂಗಚ್ಛತೇಽಭಿಷವಕಾಲೇ । ಪಶ್ಚಾತ್ಸೋಮಃ ಶತಯಾಮ್ನಾನೇಕಯಾನಸಾಧನಚ್ಛಿದ್ರೋಪೇತೇನ ಪಥಾ ಮಾರ್ಗೇಣ ದಶಾಪವಿತ್ರಸಂಬಂಧಿನಿ ಕಲಶೇ ದ್ರೋಣಕಲಶೇ ಗಚ್ಛತೀತಿ ಶೇಷಃ । ಯದ್ವಾ । ಏಕಮೇವ ವಾಕ್ಯಂ । ಯಥಾಮರ್ಯೋ ಯುವತಿಭಿಃ ಸಹ ಸಂಗಚ್ಛತೇ ಏವಂ ಕಲಶೇ ಶತಯಾಮ್ನಾ ಪಥಾ ಸಂಗಚ್ಛತೇಽದ್ಭಿಃ ॥

॥ ಪ್ರತಿಪದಾರ್ಥ ॥

ಇಂದುಃ—ಸೋಮನು । ಇಂದ್ರಸ್ಯ—ಇಂದ್ರನ । ನಿಷ್ಕೃತಂ—ಸ್ಥಾನವನ್ನು । ಪ್ರೋ ಅಯಾಸೀತ್—ಹೋಗಿ ಸೇರುತ್ತಾನೆ । ಸಖಾ—ಅವನಿಗೆ ಮಿತ್ರನಾದ ಸೋಮನು । ಸಖ್ಯುಃ—ಇಂದ್ರನ । ಸಂಗಿರಂ—ಉದರವನ್ನು । ನ ಪ್ರ ಮಿನಾತಿ—ತ್ಯಜಿಸುವುದಿಲ್ಲ । ಮರ್ಯಃ—ಮಾನವನು । ಯುವತಿಭಿಃ ಇವ—ಯುವತಿಯರೊಡನೆ ಸೇರಿಕೊಳ್ಳುವಂತೆ । ಸೋಮಃ—ಸೋಮನು । ಶತಯಾಮ್ನಾ—ಅನೇಕ ವಿಧದಲ್ಲಿರುವ । ಪಥಾ—ಮಾರ್ಗದಿಂದ । ಕಲಶೇ—ದ್ರೋಣಕಲಶಕ್ಕೆ । ಸಂ ಅರ್ಷತಿ—ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಸೋಮನು ಇಂದ್ರನ ಸ್ಥಾನವನ್ನು(ಉದರವನ್ನು)ಹೋಗಿ ಸೇರುತ್ತಾನೆ. ಸೋಮನು ತನ್ನ ಮಿತ್ರನಾದ ಇಂದ್ರನ ಉದರವನ್ನು ತ್ಯಜಿಸುವುದಿಲ್ಲ. ಪುರುಷನು ಯುವತಿಯರೊಡನೆ ಸೇರಿಕೊಳ್ಳುವಂತೆ ಸೋಮನು ಅನೇಕವಿಧವಾದ ಮಾರ್ಗದಿಂದ ದ್ರೋಣಕಲಶಕ್ಕೆ ಹೋಗಿ ಸೇರುತ್ತಾನೆ.

English Translation.

Indu goes to Indra's abode, the friend leaves not the stomach of his friend ; as a young man meets maidens, so the Soma (meets) the pitcher by a hundred paths.

॥ ಸಂಹಿತಾಪಾಠಃ ॥

ಪ್ರ ವೋ ಧಿಯೋ ಮಂದ್ರಯುವೋ ವಿಪನ್ಯುವಃ ಪನಸ್ಯುವಃ ಸಂವಸನೇಷ್ವಕ್ರಮುಃ ।
ಸೋಮಂ ಮನೀಷಾ ಅಭ್ಯನೂಷತ ಸ್ತುಭೋಽಭಿ ಧೇನವಃ ಪಯಸೇಮಶಿಶ್ರಯುಃ ॥ ೧೭ ॥

॥ ಪದಪಾಠಃ ॥

ಪ್ರ । ವಃ । ಧಿಯಃ । ಮಂದ್ರಽಯುವಃ । ವಿಪನ್ಯುವಃ । ಪನಸ್ಯುವಃ । ಸಂಽವಸನೇಷು । ಅಕ್ರಮುಃ ।
ಸೋಮಂ । ಮನೀಷಾಃ । ಅಭಿ । ಅನೂಷತ । ಸ್ತುಭಃ । ಅಭಿ । ಧೇನವಃ । ಪಯಸಾ । ಈಂ । ಅಶಿಶ್ರಯುಃ ॥

॥ ಸಾಯಣಭಾಷ್ಯಂ ॥

ಹೇ ಸೋಮ ವೋ ಯುಷ್ಮಾಕಂ ಧಿಯೋ ಧ್ಯಾತಾರೋ ಮಂದ್ರಯುವೋ ಮದಕರಂ ಶಬ್ದಂ ಕಾಮಯಮಾನಾಃ ಪನಸ್ಯುವಃ ಸ್ತುತಿಂ ಕಾಮಯಮಾನಾ ವಿಪನ್ಯುವಃ । ಸ್ತೋತ್ರೈನಾಮ್ನೈತತ್ । ಸ್ತೋತಾರಃ ಸಂವಸನೇಷು ಸಂವಾಸಯೋಗ್ಯೇಷು ಯಾಗಗೃಹೇಷು ಪ್ರಾಕ್ರಮುಃ । ಪ್ರಕ್ರಮಂತೇ । ತದೇವಾಹ । ಸೋಮಂ ಮನೀಷಾ ಮನಸ ಈಶ್ವರಾಃ ಸ್ತುಭಿಃ ಸ್ತೋತಾರೋಽಭ್ಯನೂಷತ। ಅಭಿಷ್ಟುವಂತಿ। ಧೇನವೋಽಪಿ ಪಯಸಾ ಕ್ಷೀರೇಣೇನಮೇನಂ ಸೋಮಮಭ್ಯಶಿಶ್ರಯುಃ । ಅಭಿಶ್ರೀಣಂತಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮನೇ) ವಃ—ನಿನ್ನನ್ನು । ಧಿಯಃ—ಧ್ಯಾನಿಸುವವರೂ । ಮಂದ್ರಯುವಃ—ಹಿತಕರವಾದ ಶಬ್ದಮಾಡುವವರೂ ಆದ । ಪನಸ್ಯುವಃ—ಸ್ತುತಿಯನ್ನು ಪಠಿಸಲು ಇಚ್ಛಿಸುತ್ತಿರುವ । ವಿಪನ್ಯುವಃ—ಸ್ತುತಿಕರ್ತರು ಸಂವಸನೇಷು—ಯಾಗಗೃಹಗಳಲ್ಲಿ । ಪ್ರಾಕ್ರಮುಃ—ಬಂದು ಸೇರುತ್ತಾರೆ । ಮನೀಷಾಃ—ವಿವೇಕಿಗಳಾದ । ಸ್ತುಭಿಃ—ಸ್ತೋತೃಗಳು । ಸೋಮಂ—ಸೋಮನನ್ನು । ಅಭ್ಯನೂಷತ—ಸ್ತುತಿಸುತ್ತಾರೆ । ಧೇನವಃ—ಧೇನುಗಳೂ । ಪಯಸಾ—ತಮ್ಮ ಕ್ಷೀರದಿಂದ । ಈಂ—ಈ ಸೋಮನನ್ನು । ಅಭಿ ಅಶಿಶ್ರಯುಃ—ಮಿಶ್ರ ಮಾಡುತ್ತವೆ.

॥ ಭಾವಾರ್ಥ ॥

ಎಲೈ ಸೋಮನೇ, ನಿನ್ನನ್ನು ಧ್ಯಾನಿಸುವವರೂ, ಹಿತಕರವಾದ ಶಬ್ದಮಾಡುವವರೂ ಸ್ತುತಿಯನ್ನಿಚ್ಛಿಸುವವರೂ ಆದ ಸ್ತುತಿಕರ್ತರು ಯಾಗಗೃಹಗಳಲ್ಲಿ ಬಂದು ಸೇರುತ್ತಾರೆ. ವಿವೇಕಿಗಳಾದ ಸ್ತೋತೃಗಳು ಸೋಮನನ್ನು ಸ್ತುತಿಸುತ್ತಾರೆ. ಧೇನುಗಳೂ ಸಹ ತಮ್ಮ ಕ್ಷೀರದಿಂದ ಸೋಮನನ್ನು ಮಿಶ್ರಮಾಡುತ್ತವೆ.

## English Translation.

Your thoughtful worshippers (Soma), desiring an exhilarating sound, purposing praise, advance into the halls of sacrifice ; the praisers the lords of intellect praise Soma, the milch cows approach him with their milk.

॥ ಸಂಹಿತಾಪಾಠಃ ॥

ಆ ನಃ ಸೋಮ ಸಂಯತಂ ಪಿಪ್ಯುಷೀಮಿಷಮಿಂದೋ ಪವಸ್ವ ಪವಮಾನೋ ಅಸ್ರಿಧಂ ।

ಯೋ ನೋ ದೋಹತೇ ತ್ರಿರಹನ್ನಸಶ್ಚುಷೀ ಕ್ಷುಮದ್ವಾಜವನ್ಮಧುಮತ್ಸು- ವೀರ್ಯಂ ॥ ೧೮ ॥

|| ಪದಪಾಠಃ ||

ಆ । ನಃ । ಸೋಮ । ಸಂऽಯತಂ । ಪಿಪ್ಯುಷೀಂ । ಇಷಂ । ಇಂದೋ ಇತಿ । ಪವಸ್ವ । ಪವಮಾನಃ ।
ಅಸ್ರಿಧಂ ।

ಯಾ । ನಃ । ದೋಹತೇ । ತ್ರಿಃ । ಅಹನ್ । ಅಸಶ್ಚುಷೀ । ಕ್ಷುಽಮತ್ । ವಾಜಽವತ್ । ಮಧುಽಮತ್ ।
ಸುऽವೀರ್ಯಂ || ೧೮ ||

|| ಸಾಯಣಭಾಷ್ಯಂ ||

ಹೇ ಇಂದೋ ದೀಪ್ತ ಸೋಮ ಪವಮಾನಸ್ತ್ವಂ ನೋऽಸ್ಮಾಕಂ ಸಂಯತಂ ಸಂಗೃಹೀತಂ ಪಿಪ್ಯುಷೀಂ ಪ್ರವೃದ್ಧಮಿಷಮನ್ನಮಸ್ರಿಧಮಕ್ಷೀಣಂ ಪವಸ್ವ । ಪ್ರಯಚ್ಛೇತ್ಯರ್ಥಃ । ಯಾ ಯಾದೃಶೀ ನೋऽಸ್ಮಾಕಮಹನ್ನಹನ್ಯಹ್ನಿ ತ್ರಿಸ್ತ್ರಿಷು ಸವನೇಷ್ವಸಶ್ಚುಷ್ಯಪ್ರತಿಬಂಧಾ ದೋಹತೇ ಕ್ಷರತಿ । ಕಿಂ । ಕ್ಷುಮಚ್ಛಬ್ದೋಪೇತಂ ಸರ್ವತ್ರ ಶ್ರೂಯಮಾಣಂ ವಾಜವನ್ಮಧುಮದ್ಮಾಧುರ್ಯೋಪೇತಂ ಸುವೀರ್ಯಂ ಶೋಭನಸಾಮರ್ಥ್ಯಂ ಪುತ್ರಂ ದೋಹತೇ । ತಾಮಿಷಂ ಪವಸ್ವೇತಿ ಸಮನ್ವಯಃ ||

|| ಪ್ರತಿಪದಾರ್ಥ ||

**ಇಂದೋ**—ಪ್ರವಾಹಾತ್ಮಕನಾದ । **ಸೋಮ**—ಎಲೈ ಸೋಮನೇ । **ಯಾ**—ಯಾವುದು । **ನಃ**—ನಮಗೆ । **ಅಹನ್**—ಅಹಸ್ಸಿನಲ್ಲಿಯೂ । **ತ್ರಿಃ**—ಸವನತ್ರಯಕಾಲಗಳಲ್ಲೂ । **ಅಸಶ್ಚುಷೀ**—ತಡೆಯಿಲ್ಲದೆ । **ಕ್ಷುಮತ್**—ಶಬ್ದಯುತವಾದುದೂ । **ವಾಜವತ್**—ಅನ್ನೋಪೇತವಾದುದೂ । **ಮಧುಮತ್**—ಮಾಧುರ್ಯದಿಂದ ಕೂಡಿದುದೂ । **ಸುವೀರ್ಯಂ**—ಉತ್ತಮವಾದ ಪುತ್ರೋಪೇತವಾದುದೂ । **ಸಂಯತಂ**—ಒಟ್ಟುಗೂಡಿದುದೂ । **ಪಿಪ್ಯುಷೀಂ**—ಪುಷ್ಟಿಕರವಾದುದೂ ಆಗಿರುವುದೋ ಅಂತಹ । **ಇಷಂ**—ಅನ್ನವನ್ನು । **ಪವಮಾನಃ**—ಶುದ್ಧಿಕಾರಕನಾದ ನೀನು । **ಅಸ್ರಿಧಂ**—ನ್ಯೂನವಿಲ್ಲದೇ । **ಪವಸ್ವ**—ಸುರಿಸು.

|| ಭಾವಾರ್ಥ ||

ಪ್ರವಾಹಾತ್ಮಕನಾದ ಎಲೈ ಸೋಮನೇ, ಯಾವುದು ನಮಗೆ ಅಹಸ್ಸಿನಲ್ಲಿಯೂ, ಸವನತ್ರಯಕಾಲಗಳಲ್ಲೂ ತಡೆಯಿಲ್ಲದೆ ಶಬ್ದಯುತವಾದುದೂ, ಅನ್ನೋಪೇತವಾದುದೂ ಮಾಧುರ್ಯದಿಂದ ಕೂಡಿದದೂ, ಉತ್ತಮವಾದ ಪುತ್ರೋಪೇತವಾದುದೂ, ಒಟ್ಟುಗೂಡಿದುದೂ, ಪುಷ್ಟಿಕರವಾದುದೂ ಆಗಿರುವುದೋ ಅಂತಹ ಅನ್ನವನ್ನು ಶುದ್ಧಿಕಾರಕನಾದ ನೀನು ಅವಿಚ್ಛಿನ್ನವಾಗಿ ಸುರಿಸು.

## English Translation.

Radiant Soma, when filtered, pour upon us accumulated unwasting nutritious food, which is milked for us three times a day, without hindrance, giving forth a sound, yielding strength and madhu and fair male offspring.

॥ ಸಂಹಿತಾಪಾಠಃ ॥

ವೃಷಾ ಮತೀನಾಂ ಪವತೇ ವಿಚಕ್ಷಣಃ ಸೋಮೋ ಅಹ್ನಃ ಪ್ರತರೀತೋಷಸೋ ದಿವಃ ।

ಕ್ರಾಣಾ ಸಿಂಧೂನಾಂ ಕಲಶಾ ಅವೀವಶದಿಂದ್ರಸ್ಯ ಹಾರ್ದ್ಯಾವಿಶನ್ಮನೀಷಿಭಿಃ ॥

॥ ಪದಪಾಠಃ ॥

ವೃಷಾ । ಮತೀನಾಂ । ಪವತೇ । ವಿऽಚಕ್ಷಣಃ । ಸೋಮಃ । ಅಹ್ನಃ । ಪ್ರऽತರೀತಾ । ಉಷಸಃ । ದಿವಃ ।

ಕ್ರಾಣಾ । ಸಿಂಧೂನಾಂ । ಕಲಶಾನ್ । ಅವೀವಶತ್ । ಇಂದ್ರಸ್ಯ । ಹಾರ್ದಿ । ಆऽವಿಶನ್ । ಮನೀಷಿऽಭಿಃ ॥

॥ ಸಾಯಣಭಾಷ್ಯಂ ॥

ಅಯಂ ಸೋಮಃ ಪವತೇ । ಅಭಿಷೂಯತೇ । ಕೀದೃಶಃ ಸೋಮಃ । ಮತೀನಾಂ । ಮತಯಃ ಸ್ತೋತಾರಃ । ತೇಷಾಂ ವೃಷಾ ವರ್ಷಕಃ ಕಾಮಾನಾಂ ವಿಚಕ್ಷಣೋ ವಿದ್ರಷ್ಟಾ ಅಹ್ನ ಉಷಸೋ ದಿವೋ ದ್ಯುಲೋಕಸ್ಯಾದಿತ್ಯಸ್ಯ ವಾ ಪ್ರತರೀತಾ ಪ್ರವರ್ಧಯಿತಾ । ಕಿಂಚ ಸಿಂಧೂನಾಂ ಸ್ಯಂದಮಾನಾನಾಮುದಕಾನಾಂ ಕ್ರಾಣಾ ಕರ್ತಾ ॥ ಕರೋತೇಃ ಶಾನಚಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಸುಃ । ಸುಪಾಂ ಸುಲುಗಿತ್ಯಾಕಾರಃ ॥ ಕಲಶಾನವೀವಶತ್ । ಕಾಮಯತೇ ಪ್ರವೇಷ್ಟುಂ । ಕಿಂ ಕುರ್ವನ್ । ಇಂದ್ರಸ್ಯ ಹಾರ್ದಿ ಹೃದಯಮಾವಿಶನ್ ಪ್ರವಿಶನ್ ಮನೀಷಿಭಿಃ ಸ್ತುತ ಇತಿ ಶೇಷಃ । ಯದ್ವಾ । ವ್ಯವಹಿತಮಪಿ ಮನೀಷಿಭಿರಿತ್ಯೇತತ್ಪವತ ಇತ್ಯನೇನ ಸಂಬಧ್ಯತೇ ॥

॥ ಪ್ರತಿಪದಾರ್ಥ ॥

**ಮತೀನಾಂ**—ಸ್ತುತಿಕರ್ತರಿಗೆ । **ವೃಷಾ**—ಕಾಮವರ್ಷಕನೂ । **ವಿಚಕ್ಷಣಃ**—ಸೂಕ್ಷ್ಮವಾದ ದೃಷ್ಟಿಯುಳ್ಳವನೂ । **ಅಹ್ನಃ**—ಅಹಸ್ಸಿಗೂ । **ಉಷಸಃ**—ಉಷಸ್ಸಿಗೂ । **ದಿವಃ**—ಆದಿತ್ಯನಿಗೂ । **ಪ್ರತರೀತಾ**—ವೃದ್ಧಿಕಾರಕನೂ । **ಸಿಂಧೂನಾಂ**—ಉದಕಗಳಿಗೆ । **ಕ್ರಾಣಾ**—ನಿರ್ಮಾಪಕನೂ ಆದ । **ಸೋಮಃ**—ಸೋಮನು । **ಪವತೇ**—ಹರಿಯುತ್ತಾನೆ । **ಇಂದ್ರಸ್ಯ**—ಇಂದ್ರನ । **ಹಾರ್ದಿ**—ಹೃದಯವನ್ನು । **ಆವಿಶನ್**—ಪ್ರವೇಶಿಸುತ್ತಲೂ । **ಮನೀಷಿಭಿಃ**—ಸ್ತುತಿಕರ್ತರಿಂದ ಸ್ತುತಿಸಲ್ಪಡುತ್ತಲೂ । **ಕಲಶಾನ್**—ದ್ರೋಣಕಲಶಗಳಿಗೆ । **ಅವೀವಶತ್**—ಪ್ರವೇಶಿಸಲಿಚ್ಛಿಸುತ್ತಾನೆ.

॥ ಭಾವಾರ್ಥ ॥

ಸ್ತುತಿಕರ್ತರಿಗೆ ಇಷ್ಟಾರ್ಥಪ್ರದನೂ, ಸೂಕ್ಷ್ಮದೃಷ್ಟಿಯುಳ್ಳವನೂ, ಅಹಸ್ಸಿಗೂ, ಉಷಸ್ಸಿಗೂ, ಆದಿತ್ಯನಿಗೂ ವೃದ್ಧಿಕಾರಕನೂ, ಉದಕಗಳಿಗೆ ನಿರ್ಮಾಪಕನೂ ಆದ ಸೋಮನು ಹರಿಯುತ್ತಾನೆ. ಇಂದ್ರನ ಹೃದಯವನ್ನು ಪ್ರವೇಶಿಸುತ್ತಲೂ, ಸ್ತುತಿಕರ್ತರಿಂದ ಸ್ತುತಿಸಲ್ಪಡುತ್ತಲೂ, ದ್ರೋಣಕಲಶಗಳಿಗೆ ಪ್ರವೇಶಿಸಲಿಚ್ಛಿಸುತ್ತಾನೆ.

English Translation

The all-observant Soma the showerer (of the desires) of his eulogists, the increaser of the day, the dawn, the sun ; maker of rivers he desires to enter the pitchers, penetrating to Indra's heart, (praised) by the wise.

|| ಸಂಹಿತಾಪಾಠಃ ||

ಮನೀಷಿಭಿಃ ಪವತೇ ಪೂರ್ವ್ಯಃ ಕವಿರ್ನೃಭಿರ್ಯತಃ ಪರಿ ಕೋಶಾँ ಅಚಿಕ್ರ-
ದತ್ ।
ತ್ರಿತಸ್ಯ ನಾಮ ಜನಯನ್ಮಧು ಕ್ಷರದಿಂದ್ರಸ್ಯ ವಾಯೋಃ ಸಖ್ಯಾಯ ಕರ್ತವೇ ||

| ಪದಪಾಠಃ ||

ಮನೀಷಿಽಭಿಃ । ಪವತೇ । ಪೂರ್ವ್ಯಃ । ಕವಿಃ । ನೃಽಭಿಃ । ಯತಃ । ಪರಿ । ಕೋಶಾನ್ । ಅಚಿಕ್ರದತ್ ।
ತ್ರಿತಸ್ಯ । ನಾಮ । ಜನಯನ್ । ಮಧು । ಕ್ಷರತ್ । ಇಂದ್ರಸ್ಯ । ವಾಯೋಃ । ಸಖ್ಯಾಯ । ಕರ್ತವೇ ||೨೦||

|| ಸಾಯಣಭಾಷ್ಯಂ ||

ಅಯಂ ಸೋಮೋ ಮನೀಷಿಭಿರ್ಮೇಧಾವಿಭಿರಧ್ವರ್ಯ್ವಾದಿಭಿಃ ಪವತೇ । ಪೂಯತೇ । ಯದ್ವಾ। ಅಯಂ ಮನೀಷಿಭಿರ್ಮನೀಷಿಣೀಭಿರ್ಧಾರಾಭಿಃ ಪವತೇ । ಕ್ಷರತಿ । ಕೀದೃಶೋಽಯಂ । ಪೂರ್ವ್ಯಃ ಪುರಾಣಃ ಕವಿರ್ಮೇಧಾವೀ ನೃಭಿರ್ನೇತೃಭಿರಧ್ವರ್ಯ್ವಾದಿಭಿರ್ಯತೋ ನಿಯಮಿತಃ ಸನ್ ಕೋಶಾನ್। ಕಲಶಾನ್ಪ್ರಾಪ್ತುಂ ಪರ್ಯಚಿಕ್ರದತ್ । ಪರಿಕ್ರಂದತೇ । ಶಬ್ದಂ ಕರೋತಿ । ತ್ರಿತಸ್ಯ ತ್ರಿಷು ಸ್ಥಾನೇಷು ವಿಸ್ತೃತಸ್ಯೇಂದ್ರಸ್ಯ ಸಂಬಂಧಿ ನಾಮ ನಾಮಕಮುದಕಂ ಜನಯನ್ನುತ್ಪಾದಯನ್ ಮಧು ಮಧುರಂ ರಸಂ ಕ್ಷರತ್ । ಕ್ಷರತಿ । ಕಿಮರ್ಥಂ । ಇಂದ್ರಸ್ಯ ವಾಯೋಶ್ಚ ಸಖ್ಯಾಯ ಕರ್ತವೇ ಸಖ್ಯಂ ಕರ್ತುಂ ||

|| ಪ್ರತಿಪದಾರ್ಥ ||

**ಪೂರ್ವ್ಯಃ**—ಪುರಾತನನೂ । **ಕವಿಃ**—ಮೇಧಾವಿಯೂ ಆದ ಸೋಮನು । **ಮನೀಷಿಭಿಃ**—ಅಧ್ವರ್ಯುಗಳಿಂದ । **ಪವತೇ**—ಶುದ್ಧಿಗೊಳ್ಳುತ್ತಾನೆ । **ನೃಭಿಃ**—ಅಧ್ವರ್ಯುಗಳಿಂದ । **ಯತಃ**—ನಿಯಮಿತನಾಗಿ । **ಕೋಶಾನ್**—ದ್ರೋಣಕಲಶಗಳನ್ನು ಪ್ರವೇಶಿಸಲು । **ಪರಿ ಅಚಿಕ್ರದತ್**—ಶಬ್ದಮಾಡುತ್ತಾನೆ । **ತ್ರಿತಸ್ಯ**—ಮೂರು ಸ್ಥಾನಗಳಲ್ಲೂ ವಿಸ್ತೃತನಾದ ಇಂದ್ರನಿಗೆ ಸೇರಿದ । **ನಾಮ**—ಉದಕವನ್ನು । **ಜನಯನ್**—ಉತ್ಪನ್ನಮಾಡುತ್ತ । **ಇಂದ್ರಸ್ಯ**—ಇಂದ್ರನ (ಮತ್ತು) । **ವಾಯೋಃ**—ವಾಯುವಿನ । **ಸಖ್ಯಾಯ**—ಸಖಿತ್ವವನ್ನು । **ಕರ್ತವೇ**—ಉಂಟುಮಾಡಿಕೊಳ್ಳಲು । **ಮಧು**—ರುಚಿಕರವಾಗಿ । **ಕ್ಷರತ್**—ಸ್ರವಿಸುತ್ತಾನೆ.

|| ಭಾವಾರ್ಥ ||

ಪುರಾತನನೂ, ಮೇಧಾವಿಯೂ, ಆದ ಸೋಮನು ಅಧ್ವರ್ಯುಗಳಿಂದ ಶುದ್ಧಿಯನ್ನು ಹೊಂದುತ್ತಾನೆ. ಅಧ್ವರ್ಯುಗಳಿಂದ ನಿಯಮಿತನಾಗಿ ದ್ರೋಣಕಲಶಗಳನ್ನು ಪ್ರವೇಶಿಸಲು ಶಬ್ದಮಾಡುತ್ತಾನೆ. ಮೂರುಸ್ಥಾನಗಳಲ್ಲೂ ವಿಸ್ತೃತನಾದ ಇಂದ್ರನಿಗೆ ಸೇರಿದ ಉದಕವನ್ನು ಉತ್ಪನ್ನಮಾಡುತ್ತ ಇಂದ್ರನ ಮತ್ತು ವಾಯುವಿನ ಮಿತ್ರತ್ವವನ್ನು ಸಂಪಾದಿಸಲು ರುಚಿಕರನಾಗಿ ಸ್ರವಿಸುತ್ತಾನೆ.

## English Translation.

The ancient sage (Soma) is purified by the wise, guided by the priests he roars into the receptacles ; generating the water of the threefold (Indra), he distils sweet juice to gain Indra's and Vayu's friendship.

|| ಸಂಹಿತಾಪಾಠಃ ||

ಅಯಂ ಪುನಾನ ಉಷಸೋ ವಿ ರೋಚಯದಯಂ ಸಿಂಧುಭ್ಯೋ ಅಭವದು ಲೋಕಕೃತ್ ।
ಅಯಂ ತ್ರಿಃ ಸಪ್ತ ದುದುಹಾನ ಆಶಿರಂ ಸೋಮೋ ಹೃದೇ ಪವತೇ ಚಾರು ಮತ್ಸರಃ ॥ ೨೧ ॥

|| ಪದಪಾಠಃ ||

ಅಯಂ । ಪುನಾನಃ । ಉಷಸಃ । ವಿ । ರೋಚಯತ್ । ಅಯಂ । ಸಿಂಧುಽಭ್ಯಃ । ಅಭವತ್ । ಊಂ ಇತಿ । ಲೋಕಽಕೃತ್ ।

ಅಯಂ । ತ್ರಿಃ । ಸಪ್ತ । ದುದುಹಾನಃ । ಆಽಶಿರಂ । ಸೋಮಃ । ಹೃದೇ । ಪವತೇ । ಚಾರು । ಮತ್ಸರಃ ॥ ೨೧ ॥

|| ಸಾಯಣಭಾಷ್ಯಂ ||

ಅಯಂ ಸೋಮಃ ಪುನಾನಃ ಪೂಯಮಾನ ಉಷಸೋ ವಿ ರೋಚಯತ್ । ವಿವಿಧಂ ರೋಚಯತ್ । ಅಯಂ ಸಿಂಧುಭ್ಯಃ ಸ್ಯಂದಮಾನಾಭ್ಯೋಽದ್ಭ್ಯೋ ವಸತೀವರೀಭ್ಯೋಽಭವತ್ । ಸಮೃದ್ಧೋ ಭವತಿ । ಉ ಇತಿ ಪೂರಣಃ । ಕೀದೃಶೋಽಯಂ । ಲೋಕಕೃಲ್ಲೋಕಾನಾಂ ಕರ್ತಾ । ವರ್ಷಕತ್ವಾದ್ರೇತೋಧಾರಕತ್ವಾಚ್ಚಾಸ್ಯ ಲೋಕಕೃತ್ತ್ವಂ । ಅಯಂ ಸೋಮಸ್ತ್ರಿಃ ಸಪ್ತೈಕವಿಂಶತಿಂ ಗಾ ಋತ್ವಿಜ್ಭಿಃ ಖೇನಾಶಿರಂ ದುದುಹಾನೋ ದುಹಾನಃ । ದೋಹಸ್ಯ ಪ್ರಯೋಜಕತ್ವಾತ್ಕರ್ತೃಕಪೆ ಚಾರಃ ।

ಮತ್ಸರೋ ಮದಕರಶ್ಚಾರು ರಮಣೀಯಂ ಪವತೇ । ಕ್ಷರತಿ । ಕಿಮರ್ಥಂ । ಹೃದೇ ಹೃದಯಾಯ ಹೃದಯಗಮನಾಯ ॥

॥ ಪ್ರತಿಪದಾರ್ಥ ॥

**ಲೋಕಕೃತ್**— ಲೋಕನಿರ್ಮಾಪಕನಾದ । **ಅಯಂ**— ಈ ಸೋಮನು । **ಪುನಾನಃ**— ಶುದ್ಧಿಯನ್ನು ಹೊಂದಿ । **ಉಷಸಃ**— ಉಷಸ್ಸುಗಳನ್ನು । **ವಿ ರೋಚಯತ್**— ಪ್ರಕಾಶಗೊಳಿಸುತ್ತಾನೆ । **ಅಯಂ**— ಇದೇ ಸೋಮನು । **ಸಿಂಧುಭ್ಯಃ**— ವಸತೀವರೀಉದಕಗಳಿಗಾಗಿ । **ಅಭವತ್**— ಪುಷ್ಟನಾಗುತ್ತಾನೆ । **ಅಯಂ ಸೋಮಃ**— ಈ ಸೋಮನು । **ತ್ರಿಃ ಸಪ್ತ**— ಇಪ್ಪತ್ತೊಂದು ಸಂಖ್ಯೆಯುಳ್ಳ ಋತ್ವಿಕ್ಕುಗಳಿಂದ । **ಆಶಿರಂ**— ಕ್ಷೀರಾದ್ಯಾಶ್ರಯಣ ದ್ರವ್ಯಗಳನ್ನು । **ದುದುಹಾನಃ**— ಕರೆಯುತ್ತಾ । **ಹೃದೇ**— ಇಂದ್ರನ ಹೃದಯವನ್ನು ಪ್ರವೇಶಿಸಲು । **ಮತ್ಸರಃ**— ಹರ್ಷಕಾರಕನಾಗಿಯೂ । **ಚಾರು**— ಆಕರ್ಷಕನಾಗಿಯೂ । **ಪವತೇ**— ಹರಿಯುತ್ತಾನೆ.

॥ ಭಾವಾರ್ಥ ॥

ಲೋಕನಿರ್ಮಾಪಕನಾದ ಈ ಸೋಮನು ಶುದ್ಧಿಯನ್ನು ಹೊಂದಿ ಉಷಸ್ಸುಗಳನ್ನು ಪ್ರಕಾಶಗೊಳಿಸುತ್ತಾನೆ. ಇದೇ ಸೋಮನು ವಸತೀವರೀಉದಕಗಳಿಗಾಗಿ ಪುಷ್ಟನಾಗುತ್ತಾನೆ. ಈ ಸೋಮನು ಇಪ್ಪತ್ತೊಂದು ಸಂಖ್ಯೆಯುಳ್ಳ ಋತ್ವಿಕ್ಕುಗಳಿಂದ ಕ್ಷೀರಾದ್ಯಾಶ್ರಯಣದ್ರವ್ಯಗಳನ್ನು ಕರೆಯುತ್ತಾ ಇಂದ್ರನ ಹೃದಯವನ್ನು ಪ್ರವೇಶಿಸಲು ಹರ್ಷಕಾರಕನಾಗಿಯೂ, ಆಕರ್ಷಕನಾಗಿಯೂ ಹರಿಯುತ್ತಾನೆ.

## English Translation.

(It is) he (who), when purified, illumines the dawn; he the maker of the world is (prosperous) for the rivers; this Soma, having milked the thrice seven (cows) of their curds and milk, exhilarating, flows pleasently to (go to) the heart.

॥ ಸಂಹಿತಾಪಾಠಃ ॥

ಪವಸ್ವ ಸೋಮ ದಿವ್ಯೇಷು ಧಾಮಸು ಸೃಜಾನ ಇಂದೋ ಕಲಶೇ ಪವಿತ್ರ ಆ ।
ಸೀದನ್ನಿಂದ್ರಸ್ಯ ಜಠರೇ ಕನಿಕ್ರದನ್ನೃಭಿರ್ಯತಃ ಸೂರ್ಯಮಾರೋಹಯೋ ದಿವಿ ॥ ೨೨ ॥

॥ ಪದಪಾಠಃ ॥

ಪವಸ್ವ । ಸೋಮ । ದಿವ್ಯೇಷು । ಧಾಮಽಸು । ಸೃಜಾನಃ । ಇಂದೋ ಇತಿ । ಕಲಶೇ । ಪವಿತ್ರೇ । ಆ ।
ಸೀದನ್ । ಇಂದ್ರಸ್ಯ । ಜಠರೇ । ಕನಿಕ್ರದತ್ । ನೃಽಭಿಃ । ಯತಃ । ಸೂರ್ಯಂ । ಆ । ಅರೋಹಯಃ । ದಿವಿ ॥ ೨೨ ॥

|| ಸಾಯಣಭಾಷ್ಯಂ ||

**ಹೇ ಸೋಮ ದಿವ್ಯೇಷು ಧಾಮಸು ಸ್ಥಾನೇಷು । ದೇವಾನಾಂ ಸಂಬಂಧಿಷೂದರೇಷ್ವಿತ್ಯರ್ಥಃ । ತೇಷು ಪವಸ್ವ । ಕ್ಷರ । ಕೀದೃಶಃ ಸನ್ । ಹೇ ಇಂದೋ ದೀಪ್ತ ಸೋಮ ಕಲಶೇ ಪವಿತ್ರ ಆ ದಶಾಪವಿತ್ರೇ ಚ । ಆ ಇತಿ ಚಾರ್ಥೇ । ಸೃಜಾನಃ ಸೃಜ್ಯಮಾನಃ । ಅತ್ರಾಗ್ನಿಹೋತ್ರಂ ಜುಹೋತಿ ಯವಾಗೂಂ ಪಚತೀತಿವದಾರ್ಥಿಕಃ ಕ್ರಮೋಽವಗಂತವ್ಯಃ । ಕಿಂಚೇಂದ್ರಸ್ಯ ಜಠರೇ ಸೀದಞ್ಜಠರಂ ಗಚ್ಛನ್ ಕನಿಕ್ರದಚ್ಛಬ್ದಂ ಕುರ್ವನ್ ನೃಭಿರ್ನೇತೃಭಿರೃತ್ವಿಗ್ಭಿರ್ಯತಃ ಪರಿಗೃಹೀತಃ । ಹುತ ಇತ್ಯರ್ಥಃ । ತಥಾಭೂತಃ ಸನ್ ದಿವಿ ಸೂರ್ಯಮಾರೋಹಯಃ । ಪ್ರಾದುರ್ಭೂತಮಕರೋಃ ||**

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ದಿವ್ಯೇಷು**—ಪವಿತ್ರವಾದ । **ಧಾಮಸು**—ದಿವ್ಯ ಸ್ಥಾನಗಳಲ್ಲಿ । **ಪವಸ್ವ**—ಸ್ರವಿಸು । **ಇಂದೋ**—ಎಲೈ ಸೋಮನೇ । **ಕಲಶೇ**—ದ್ರೋಣಕಲಶದಲ್ಲಿಯೂ । **ಪವಿತ್ರೇ ಆ**—ದಶಾಪವಿತ್ರದಲ್ಲಿಯೂ ಪ್ರವಹಿಸು । **ಸೃಜಾನಃ**—ತದರ್ಥವಾಗಿ ನಿರ್ಮಿತನಾಗಿಯೂ । **ಇಂದ್ರಸ್ಯ**—ಇಂದ್ರನ । **ಜಠರೇ ಸೀದನ್**—ಉದರದಲ್ಲಿ ಪ್ರವೇಶಿಸುತ್ತಲೂ । **ಕನಿಕ್ರದತ್**—ಶಬ್ದಮಾಡುತ್ತಲೂ । **ನೃಭಿಃ**—ಋತ್ವಿಕ್ಕುಗಳಿಂದ । **ಯತಃ**—ನಿಯಮಿತನಾಗಿಯೂ । **ದಿವಿ**—ಅಂತರಿಕ್ಷದಲ್ಲಿ । **ಸೂರ್ಯಂ**—ಸೂರ್ಯನನ್ನು **ಆರೋಹಯಃ**—ಹತ್ತುವಂತೆ ಮಾಡು,

|| ಭಾವಾರ್ಥ ||

ಎಲೈ ಸೋಮದೇವನೇ, ಪವಿತ್ರವಾದ ದಿವ್ಯಸ್ಥಾನದಲ್ಲಿ ಪ್ರವಹಿಸು. ದ್ರೋಣಕಲಶದಲ್ಲಿಯೂ, ದಶಾಪವಿತ್ರದಲ್ಲಿಯೂ ಪ್ರವಹಿಸು. ಇಂದ್ರಾರ್ಥವಾಗಿ ನಿರ್ಮಿತನಾಗಿಯೂ, ಇಂದ್ರನ ಉದರದಲ್ಲಿ ಪ್ರವೇಶಿಸುತ್ತಲೂ ಶಬ್ದಮಾಡುತ್ತಲೂ, ಋತ್ವಿಕ್ಕುಗಳಿಂದ ನಿಯಮಿತನಾಗಿಯೂ, ಅಂತರಿಕ್ಷದಲ್ಲಿ ಸೂರ್ಯನು ಆವಿರ್ಭವಿಸುವಂತೆ ಮಾಡು.

## English Translation.

Flow, Soma, to the heavenly abodes ; let forth, O Indu, (proceed) to the pitcher, to the filter ; alighting upon Indra's belly with a noise, guided by the priests, make the sun ascend the sky.

|| ಸಂಹಿತಾಪಾಠಃ ||

**ಅದ್ರಿಭಿಃ ಸುತಃ ಪವಸೇ ಪವಿತ್ರ ಆँ ಇಂದವಿಂದ್ರಸ್ಯ ಜಠರೇಷ್ವಾವಿಶನ್ ।**
**ತ್ವಂ ನೃಚಕ್ಷಾ ಅಭವೋ ವಿಚಕ್ಷಣ ಸೋಮ ಗೋತ್ರಮಂಗಿರೋ-**
**ಭ್ಯೋಽವೃಣೋರಪ || ೨೩ ||**

|| ಪದಪಾಠಃ ||

ಅದ್ರಿऽಭಿಃ । ಸುತಃ । ಪವಸೇ । ಪವಿತ್ರೇ । ಆ । ಇಂದೋ ಇತಿ । ಇಂದ್ರಸ್ಯ । ಜಠರೇಷು । ಆऽವಿಶನ್ ।
ತ್ವಂ । ನೃऽಚಕ್ಷಾಃ । ಅಭವಃ । ವಿऽಚಕ್ಷಣ । ಸೋಮ । ಗೋತ್ರಂ । ಅಂಗಿರಃऽಭ್ಯಃ । ಅವೃಣೋಃ ।
ಅಪ || ೨೩ ||

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಅದ್ರಿಭಿರ್ಗ್ರಾವಭಿಃ ಸುತೋಽಭಿಷುತಸ್ತ್ವಂ ಪವಸೇ । ಕ್ಷರಸಿ । ಪೂಯಸೇ ವಾ । ಪವಿತ್ರ ಆ ದಶಾಪವಿತ್ರೇ । ಆ ಇತಿ ಪೂರಣಃ । ಯದ್ವಾ । ಅಭಿಷುತೋ ಭವಸಿ ಪವಸೇ ಚೇತಿ ಚಾರ್ಥ ಆಕಾರಃ । ಕಿಂ ಕುರ್ವನ್ । ಇಂದ್ರಸ್ಯ ಜಠರೇಷು ಜಠರಪ್ರದೇಶೇಷ್ವಾವಿಶನ್ । ಜಠರಪ್ರವೇಶಾಯೇತ್ಯರ್ಥಃ । ಕಿಂಚ ಹೇ ವಿಚಕ್ಷಣ ವಿದ್ರಷ್ಟಃ ಸೋಮ ತ್ವಂ ನೃಚಕ್ಷಾ ಅಭವಃ । ನೃಣಾಂ ಮನುಷ್ಯಾಣಾಮನುಗ್ರಹೇಣ ದ್ರಷ್ಟಾ ಭವಸಿ । ಕಿಂಚ ಹೇ ಸೋಮ ತ್ವಮಂಗಿರೋಭ್ಯೋ ಗೋತ್ರಂ ಮೇಘಮುದಕಂ ಕ್ಷಾರಯಿತುಂ ಪಣಿಭಿರಪಹೃತಾನಾಂ ಗವಾಮಾವರಕಂ ಪರ್ವತಂ ವಾಪಾವೃಣೋಃ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ । ಅದ್ರಿಭಿಃ—ಹಿಂಡುವ ಕಲ್ಲುಗಳಿಂದ । ಸುತಃ—ಹಿಂಡಲ್ಪಟ್ಟು । ಇಂದ್ರಸ್ಯ—ಇಂದ್ರನ । ಜಠರೇಷು—ಉದರಗಳಲ್ಲಿ । ಆವಿಶನ್—ಪ್ರವೇಶಿಸುತ್ತಾ । ಪವಿತ್ರ ಆ—ದಶಾ ಪವಿತ್ರದಲ್ಲಿ । ಪವಸೇ—ಹರಿಯುತ್ತೀಯೆ । ವಿಚಕ್ಷಣ—ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮನೇ । ತ್ವಂ—ನೀನು । ನೃಚಕ್ಷಾಃ—ಮಾನವರ ವ್ಯವಹಾರಗಳನ್ನು ನೋಡಬಲ್ಲವನಾಗಿ । ಅಭವಃ—ಆಗಿದ್ದೀಯೆ । ಸೋಮ—ಎಲೈ ಸೋಮನೇ । ಅಂಗಿರೋಭ್ಯಃ—ಅಂಗಿರಸ್ಸುಗಳಿಗೆ । ಗೋತ್ರಂ—ಉದಕವನ್ನು । ಅಪ ಅವೃಣೋಃ—ಮೇಘದಿಂದ ಹರಿಯುವಂತೆ ಮಾಡಿದೆ.

|| ಭಾವಾರ್ಥ ||

ಎಲೈ ಸೋಮದೇವನೇ, ನೀನು ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟು ಇಂದ್ರನ ಉದರದಲ್ಲಿ ಪ್ರವೇಶಿಸುತ್ತ ದಶಾಪವಿತ್ರದಲ್ಲಿ ಹರಿಯುತ್ತೀಯೆ. ಸೂಕ್ಷ್ಮದೃಷ್ಟಿಯುಳ್ಳ ಎಲೈ ಸೋಮನೇ, ನೀನು ಮಾನವರ ವ್ಯವಹಾರಗಳನ್ನು ನೋಡಬಲ್ಲವನಾಗಿ ಆಗಿದ್ದೀಯೆ. ನೀನು ಅಂಗಿರಸ್ಸುಗಳಿಗಾಗಿ ಮೇಘದಿಂದ ಉದಕವನ್ನು ಪ್ರವಹಿಸುವಂತೆ ಮಾಡಿದೆ.

## English Translation

Effused with the stones, you flow, Indu, into the filter entering the belly of Indra ; Soma, the contemplator, you look upon man (with affection) ; you opened the cloud for the Angirasas.

|| ಸಂಹಿತಾಪಾಠಃ ||

ತ್ವಾಂ ಸೋಮ ಪವಮಾನಂ ಸ್ವಾಧ್ಯೋಽನು ವಿಪ್ರಾಸೋ ಅಮದನ್ನವಸ್ಯವಃ ।
ತ್ವಾಂ ಸುಪರ್ಣ ಆಭರದ್ದಿವಸ್ಪರೀಂದೋ ವಿಶ್ವಾಭಿರ್ಮತಿಭಿಃ ಪರಿ-
ಷ್ಕೃತಂ || ೨೪ ||

|| ಪದಪಾಠಃ ||

ತ್ವಾಂ । ಸೋಮ । ಪವಮಾನಂ । ಸುऽಆಧ್ಯಃ । ಅನು । ವಿಪ್ರಾಸಃ । ಅಮದನ್ । ಅವಸ್ಯವಃ ।
ತ್ವಾಂ । ಸುऽಪರ್ಣಃ । ಆ । ಅಭರತ್ । ದಿವಃ । ಪರಿ । ಇಂದೋ ಇತಿ । ವಿಶ್ವಾಭಿಃ । ಮತಿऽಭಿಃ ।
ಪರಿऽಕೃತಂ || ೨೪ ||

|| ಸಾಯಣಭಾಷ್ಯಂ ||

ಹೇ ಸೋಮ ಪವಮಾನಂ ತ್ವಾಂ ಸ್ವಾಧ್ಯಃ ಸುಮತಯಃ ಸುಕರ್ಮಾಣೋ ವಾ ವಿಪ್ರಾಸೋ ವಿಪ್ರಾ ಮೇಧಾವಿನಃ ಸ್ತೋತಾರೋಽವಸ್ಯವೋ ರಕ್ಷಾಕಾಮಾ ಅನ್ವಮದನ್ । ಅನುಷ್ಟುವಂತಿ । ಹೇ ಇಂದೋ ತ್ವಾಂ ಸುಪರ್ಣಃ ಶ್ಯೇನ ಆಭರತ್ । ಆಹರತ್ । ದಿವಸ್ಪರಿ ದ್ಯುಲೋಕಸ್ಯೋಪರಿ । ದ್ಯುಲೋ-ಕಾದಿತ್ಯರ್ಥಃ । ಕೀದೃಶಂ ತ್ವಾಂ । ವಿಶ್ವಾಭಿರ್ಮತಿಭಿಃ ಸರ್ವಾಭಿಃ ಸ್ತುತಿಭಿಃ ಪರಿಷ್ಕೃತಮಲಂಕೃತಂ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ. । **ಪವಮಾನಂ**—ಶುದ್ಧಿಕಾರಕನಾದ । **ತ್ವಾಂ**—ನಿನ್ನನ್ನು । **ಸ್ವಾಧ್ಯಃ**—ಉತ್ತಮವಾದ ಕರ್ಮವುಳ್ಳವರೂ । **ವಿಪ್ರಾಸಃ**—ಮೇಧಾವಿಗಳೂ ಆದ ಸ್ತುತಿಕರ್ತರು । **ಅವಸ್ಯವಃ**—ರಕ್ಷೆಯನ್ನು ಬಯಸುವವರಾಗಿ । **ಅನು ಅಮದನ್**—ಪ್ರಶಂಸಿಸುತ್ತಾರೆ । **ಇಂದೋ**—ಎಲೈ ಸೋಮನೇ । **ವಿಶ್ವಾಭಿಃ**—ಸಮಸ್ತವಾದ । **ಮತಿಭಿಃ**—ಸ್ತುತಿಗಳಿಂದಲೂ । **ಪರಿಷ್ಕೃತಂ**—ಸುಸಂಸ್ಕೃತನಾದ । **ತ್ವಾಂ**—ನಿನ್ನನ್ನು । **ಸುಪರ್ಣಃ**—ಶ್ಯೇನ ಪಕ್ಷಿಯು । **ದಿವಸ್ಪರಿ**—ದ್ಯುಲೋಕದಿಂದ । **ಆ ಅಭರತ್**—ತಂದಿದೆ.

|| ಭಾವಾರ್ಥ ||

ಎಲೈ ಸೋಮದೇವನೇ, ಶುದ್ಧಿಕಾರಕನಾದ ನಿನ್ನನ್ನು ಉತ್ತಮವಾದ ಕರ್ಮವುಳ್ಳವರೂ, ಮೇಧಾವಿಗಳೂ ಆದ ಸ್ತುತಿಕರ್ತರು ರಕ್ಷಣೆಯನ್ನಿಚ್ಛಿಸುತ್ತಾ ಪ್ರಶಂಸಿಸುತ್ತಾರೆ. ಎಲೈ ಸೋಮನೇ, ಸಕಲ ಸ್ತುತಿಗಳಿಂದಲೂ ಸುಸಂಸ್ಕೃತನಾದ ನಿನ್ನನ್ನು ಶ್ಯೇನಪಕ್ಷಿಯು ದ್ಯುಲೋಕದಿಂದ ತಂದಿದೆ.

## English Translation.

The pious worshippers desirous of preservation have glorified you, Soma, when being purified; the hawk brought you from heaven, Indu, adorned with all praises.

॥ ಸಂಹಿತಾಪಾಠಃ ॥

ಅವ್ಯೇ ಪುನಾನಂ ಪರಿ ವಾರ ಊರ್ಮಿಣಾ ಹರಿಂ ನವಂತೇ ಅಭಿ ಸಪ್ತ ಧೇನವಃ ।

ಅಪಾಮುಪಸ್ಥೇ ಅಧ್ಯಾಯವಃ ಕವಿಮೃತಸ್ಯ ಯೋನಾ ಮಹಿಷಾ ಅಹೇಷತ ॥ ೨೫ ॥

॥ ಪದಪಾಠಃ ॥

ಅವ್ಯೇ । ಪುನಾನಂ । ಪರಿ । ವಾರೇ । ಊರ್ಮಿಣಾ । ಹರಿಂ । ನವಂತೇ । ಅಭಿ । ಸಪ್ತ । ಧೇನವಃ ।

ಅಪಾಂ । ಉಪಽಸ್ಥೇ । ಅಧಿ । ಆಯವಃ । ಕವಿಂ । ಋತಸ್ಯ । ಯೋನಾ । ಮಹಿಷಾಃ । ಅಹೇಷತ ॥ ೨೫ ।

॥ ಸಾಯಣಭಾಷ್ಯಂ ॥

ಅವ್ಯೇಽವಿಮಯೇ ವಾರೇ ವಾಲೇ ದಶಾಪವಿತ್ರೆ ಊರ್ಮಿಣಾ ರಸೇನ ಪರಿ ಪರಿತಃ ಪುನಾನಂ ಪವಮಾನಂ ಹರಿಂ ಹರಿತವರ್ಣಂ ಸೋಮಮಭಿ ನವಂತೇ ಅಭಿಗಚ್ಛಂತಿ ಸಪ್ತ ಧೇನವಃ ಪ್ರೀಣಯಿತ್ರ್ಯಃ ಸಪ್ತ ಗಾಯತ್ರ್ಯಾದ್ಯಾಃ ಸಪ್ತ ಗಂಗಾದ್ಯಾ ನದ್ಯೋ ವಾ । ನವತೇ ಕ್ಷೋದತೆ ಇತಿ ಗತಿಕರ್ಮಸ್ವಯಂ ಪಠಿತಃ । ಕಿಂಚ ಕವಿಂ ತ್ವಾಮಪಾಮುಪಸ್ಥೇಽಂತರಿಕ್ಷಸ್ಯೋತ್ಸಂಗ ಋತಸ್ಯ ಯೋನೌ । ಉದಕಸ್ಯಾನ್ಯೈತತ್ । ಋತಂ ಯೋನಿರ್ಋತಸ್ಯ ಯೋನಿರಿತಿ ತನ್ನಾಮಸು ಪಾಠಾತ್ । ಉದಕೇ ಮಹಿಷಾ ಮಹಾಂತ ಆಯವೋ ಮನುಷ್ಯಾ ಅಧ್ಯಹೇಷತ । ಅಧಿಕಂ ಪ್ರೇರಯಂತಿ ॥

॥ ಪ್ರತಿಪದಾರ್ಥ ॥

**ಅವ್ಯೇ**—ಉಣ್ಣೆಯಿಂದ ನಿರ್ಮಿತವಾದ । **ವಾರೇ**—ದಶಾಪವಿತ್ರದ ನೂಲುಗಳಲ್ಲಿ । **ಊರ್ಮಿಣಾ**—ರಸದೊಡನೆ । **ಪರಿ**—ಸುತ್ತಲೂ । **ಪುನಾನಂ**—ಶುದ್ಧಿಯನ್ನು ಹೊಂದುವ । **ಹರಿಂ**—ಸೋಮನನ್ನು । **ಸಪ್ತ ಧೇನವಃ**—ಗಾಯತ್ರ್ಯಾದಿ ಸಪ್ತ ಛಂದಸ್ಸುಗಳೂ । **ಅಭಿ ನವಂತೇ**—ಎದುರುಗೊಳ್ಳುತ್ತವೆ । **ಮಹಿಷಾಃ**—(ಎಲೈ ಸೋಮನೇ) ಮಹಾತ್ಮರಾದ । **ಆಯವಃ**—ಮಾನವರು । **ಕವಿಂ** – ಪೂಜ್ಯನಾದ ನಿನ್ನನ್ನು । **ಅಪಾಂ**—ಉದಕಗಳ । **ಉಪಸ್ಥೇ**—ಉತ್ಸಂಗಪ್ರದೇಶದಲ್ಲಿ (ತೊಡೆಯ ಮೇಲೆ) । **ಋತಸ್ಯ**—ಯಜ್ಞದ । **ಯೋನೌ**—ಸ್ಥಾನದಲ್ಲಿ । **ಅಧ್ಯಹೇಷತ**—ಅಧಿಕವಾಗಿ ಪ್ರೇರಿಸುತ್ತಾರೆ.

॥ ಭಾವಾರ್ಥ ॥

ಉಣ್ಣೆಯಿಂದ ನಿರ್ಮಿತವಾದ ದಶಾಪವಿತ್ರದ ನೂಲುಗಳಲ್ಲಿ ತನ್ನ ರಸದೊಡನೆ ಸುತ್ತಲೂ ಶುದ್ಧಿಯನ್ನು ಹೊಂದುವ ಸೋಮನನ್ನು ಗಾಯತ್ರ್ಯಾದಿ ಸಪ್ತ ಛಂದಸ್ಸುಗಳೂ ಎದುರುಗೊಳ್ಳುತ್ತವೆ. ಎಲೈ ಸೋಮನೇ, ಮಹಾತ್ಮರಾದ ಮಾನವರು ಪೂಜ್ಯನಾದ ನಿನ್ನನ್ನು ಯಜ್ಞಸ್ಥಾನದಲ್ಲಿ ಉದಕಗಳ ಮೇಲೆ ಪ್ರೇರಿಸುತ್ತಾರೆ.

## English Translation.

The seven milch cows approach the green-tinted (Soma) who flows purified in a stream through the woollen fleece, mighty men urge (you) the sage on the lap of the waters to the place of sacrifice.

॥ ಸಂಹಿತಾಪಾಠಃ ॥

ಇಂದುಃ ಪುನಾನೋ ಅತಿ ಗಾಹತೇ ಮೃಧೋ ವಿಶ್ವಾನಿ ಕೃಣ್ವನ್ತ್ಸುಪಥಾನಿ
ಯಜ್ಯವೇ ।
ಗಾಃ ಕೃಣ್ವಾನೋ ನಿರ್ಣಿಜಂ ಹರ್ಯತಃ ಕವಿರತ್ಯೋ ನ ಕ್ರೀಳನ್ಪರಿ ವಾರ-
ಮರ್ಷತಿ ॥ ೨೬ ॥

॥ ಪದಪಾಠಃ ॥

ಇಂದುಃ । ಪುನಾನಃ । ಅತಿ । ಗಾಹತೇ । ಮೃಧಃ । ವಿಶ್ವಾನಿ । ಕೃಣ್ವನ್ । ಸುಽಪಥಾನಿ । ಯಜ್ಯವೇ ।
ಗಾಃ । ಕೃಣ್ವಾನಃ । ನಿಃಽನಿಜಂ । ಹರ್ಯತಃ । ಕವಿಃ । ಅತ್ಯಃ । ನ । ಕ್ರೀಳನ್ । ಪರಿ । ವಾರಂ । ಅರ್ಷತಿ ॥ ೨೬ ॥

॥ ಸಾಯಣಭಾಷ್ಯಂ ॥

ಅಯಮಿಂದುರ್ದೀಪ್ತಃ ಸೋಮಃ ಪುನಾನಃ ಪೂಯಮಾನೋಽತಿ ಗಾಹತೇ ಅತಿಕ್ರಮ್ಯ ಗಚ್ಛತಿ ಮೃಧಃ ಶತ್ರೂನ್। ಕಿಂ ಕುರ್ವನ್। ವಿಶ್ವಾನಿ ಗಂತವ್ಯಾನಿ ಸುವರ್ತ್ಮಾನಿ ವೈದಿಕಾನಿ ಲೌಕಿಕಾನಿ ಚ ಸುಪಥಾನಿ ಕೃಣ್ವನ್ ಕುರ್ವನ್ । ಕಸ್ಮೈ । ಯಜ್ಯವೇ ಯಾಗಕರ್ತ್ರೇ । ಯಜಮಾನಾಯ ಶತ್ರೂನ್ಪರಿಹರನ್ ಮಾರ್ಗಾನ್ಸುಪಥಾನ್ಕುರ್ವನ್ ಕಲಶಂ ಪ್ರವಿಶತೀತ್ಯರ್ಥಃ । ಕಿಂಚ ನಿರ್ಣಿಜಮಾತ್ಮೀಯಂ ರೂಪಂ ಗಾಃ ಕೃಣ್ವಾನಃ । ರಸಮಯಾನ್ಕುರ್ವಾಣ ಇತ್ಯರ್ಥಃ । ಹರ್ಯತಃ ಕಾಂತಃ ॥ ಹರ್ಯ ಗತಿಕಾಂತ್ಯೋಃ । ಔಣಾದಿಕೋಽತಚ್ ॥ ಕವಿಃ ಕ್ರಾಂತಪ್ರಜ್ಞಃ ಏವಂಭೂತಃ ಸೋಮೋಽತ್ಯೋ ನಾಶ್ವ ಇವ ಕ್ರೀಳನ್ ವಾರಂ ದಶಾಪವಿತ್ರಂ ಪರ್ಯರ್ಷತಿ । ಪರಿಗಚ್ಛತಿ ॥

॥ ಪ್ರತಿಪದಾರ್ಥ ॥

ಪುನಾನಃ—ಶುದ್ಧಿಯನ್ನು ಹೊಂದಿದ । ಇಂದುಃ—ಸೋಮನು । ಯಜ್ಯವೇ—ಯಜ್ಞಕರ್ತನಿಗಾಗಿ । ವಿಶ್ವಾನಿ—ಸಕಲ ಮಾರ್ಗಗಳನ್ನೂ । ಸುಪಥಾನಿ-ಉತ್ತಮವಾದ ಸಂಚಾರಕ್ಕೆ ಯೋಗ್ಯವಾದವನ್ನಾಗಿ । ಕೃಣ್ವನ್—ಮಾಡುತ್ತ । ಮೃಧಃ—ಶತ್ರುಗಳ ನಾಶಕ್ಕಾಗಿ । ಅತಿಗಾಹತೇ—ಮುನ್ನುಗ್ಗುತ್ತಾನೆ । ನಿರ್ಣಿಜಂ—ತನ್ನ

ರೂಪವನ್ನು | ಗಾಃ—ರಸಮಯವನ್ನಾಗಿ | ಕೃಣ್ವಾನಃ—ಮಾಡಿಕೊಂಡು | ಹರ್ಯತಃ—ಕಾಂತಿಯುತನೂ | ಕವಿಃ—ಮೇಧಾವಿಯೂ ಆದ ಸೋಮನು | ಅತ್ಯೋ ನ—ಅಶ್ವದಂತೆ | ಕ್ರೀಳನ್—ಆಟವಾಡುತ್ತ | ವಾರಂ—ದಶಾಪವಿತ್ರದೊಳಗೆ | ಪರ್ಯರ್ಷತಿ—ಬಿದ್ದು ಸುತ್ತಲೂ ಸಂಚರಿಸುತ್ತಾನೆ.

|| ಭಾವಾರ್ಥ ||

ಶುದ್ಧಿಯನ್ನು ಹೊಂದಿದ ಸೋಮನು ಯಜ್ಞಕರ್ತನಿಗಾಗಿ ಸಕಲ ಮಾರ್ಗಗಳನ್ನೂ ಉತ್ತಮವಾದ ಸಂಚಾರಕ್ಕೆ ಯೋಗ್ಯವಾದವನ್ನಾಗಿ ಮಾಡುತ್ತ ಶತ್ರುಗಳ ನಾಶಕ್ಕಾಗಿ ಮುನ್ನುಗ್ಗುತ್ತಾನೆ. ತನ್ನ ರೂಪವನ್ನು ರಸಮಯವನ್ನಾಗಿ ಮಾಡಿಕೊಂಡು ಕಾಂತಿಯುತನೂ, ಮೇಧಾವಿಯೂ ಆದ ಸೋಮನು ಅಶ್ವದಂತೆ ಆಟವಾಡುತ್ತ ದಶಾಪವಿತ್ರದೊಳಗೆ ಬೀಳುತ್ತಾ ಸುತ್ತಲೂ ಸಂಚರಿಸುತ್ತಾನೆ.

## English Translation.

Indu, purified, plunges through his foes making all things easy of access to the worshipper ; making his body liquid, lovable and wise, he rushes through the filter sporting like a horse.

|| ಸಂಹಿತಾಪಾಠಃ ||

ಅಸಶ್ಚತಃ ಶತಧಾರಾ ಅಭಿಶ್ರಿಯೋ ಹರಿಂ ನವಂತೇಽವ ತಾ ಉದನ್ಯುವಃ |
ಕ್ಷಿಪೋ ಮೃಜಂತಿ ಪರಿ ಗೋಭಿರಾವೃತಂ ತೃತೀಯೇ ಪೃಷ್ಠೇ ಅಧಿ ರೋಚನೇ ದಿವಃ || ೨೭ ||

|| ಪದಪಾಠಃ ||

ಅಸಶ್ಚತಃ | ಶತಽಧಾರಾಃ | ಅಭಿಽಶ್ರಿಯಃ | ಹರಿಂ | ನವಂತೇ | ಅವ | ತಾಃ | ಉದನ್ಯುವಃ |
ಕ್ಷಿಪಃ | ಮೃಜಂತಿ | ಪರಿ | ಗೋಭಿಃ | ಆಽವೃತಂ | ತೃತೀಯೇ | ಪೃಷ್ಠೇ | ಅಧಿ | ರೋಚನೇ | ದಿವಃ ||೨೭||

|| ಸಾಯಣಭಾಷ್ಯಂ ||

ಅಸಶ್ಚತಃ ಪರಸ್ಪರಮಸಂಗತಾಃ ಶತಧಾರಾ ಅಭಿಶ್ರಿಯೋಽಭಿತಃ ಸೋಮಂ ಶ್ರಯಂತ್ಯಸ್ತಾಃ ಪ್ರಸಿದ್ಧಾಃ ಸೂರ್ಯಸ್ಯ ರಶ್ಮಯೋ ಹರಿಮುವ ನವಂತೇ | ಗಚ್ಛಂತಿ | ಉದನ್ಯುವ ಉದಕೇಚ್ಛಾವತ್ಯಃ ಸತ್ಯಃ | ಯದ್ವಾ | ಧಾರಾಶಬ್ದೇನಾತ್ರ ಸೋಮಧಾರಾ ಅಭಿಪ್ರೇತಾಃ | ಅಸಶ್ಚತೋಽಸಂಬದ್ಧಾ ಅಭಿಶ್ರಿಯೋಽಭಿತೋ ಗಾಃ ಶ್ರಯಂತ್ಯೋ ಗೋಭಿಃ ಶ್ರಿತಾಸ್ತಾಃ ಪ್ರಸಿದ್ಧಾ ಉದನ್ಯುವ ಇಂದ್ರಸಂಬಂಧಿವೃಷ್ಟಿಕಾಮಾ ಹರಿಮಿಂದ್ರಮವ ನವಂತೇ | ಸಂಗಚ್ಛಂತೇ | ಕ್ಷಿಪೋಽಂಗುಲಯೋಽಪಿ ಗೋಭಿರ್ದೀಪ್ತಿಪಕ್ಷೇ

ಗೋಭೀ ರಶ್ಮಿಭಿರಾವೃತಂ ಸೋಮಧಾರಾಪಕ್ಷೇ ಗೋಭಿಃ ಪರ್ಯಾವೃತಂ ವ್ಯಾಪ್ತಂ ಸೋಮಂ ಮೃಜಂತಿ। ಅವಶೋಧಯಂತಿ। ದಿವ ಆದಿತ್ಯಾದ್ರೋಚನೇ ರೋಚಮಾನೇ ಯಮಾದಿತ್ಯೋ ರೋಚಯತಿ ತಸ್ಮಿಂಸ್ತೃತೀಯೇ ಕ್ಷಿತ್ಯಪೇಕ್ಷಾಯಾಂ ತೃತೀಯಭೂತೇ ದ್ಯುಲೋಕೇಽಧಿ ವಸಂತಂ ಸೋಮಂ ಮೃಜಂತಿ॥

॥ ಪ್ರತಿಪದಾರ್ಥ ॥

**ಅಸಶ್ಚತಃ**—ಬೇರೆಬೇರೆಯಾಗಿರತಕ್ಕವೂ। **ಶತಧಾರಾಃ**—ಅನೇಕವಿಧವಾದ ಪ್ರಸರಣವುಳ್ಳವೂ। **ಅಭಿಶ್ರಿಯಃ**—ಸೋಮನನ್ನು ಸೇರತಕ್ಕವೂ। **ತಾಃ**—ಪ್ರಸಿದ್ಧವೂ ಆದ ಸೂರ್ಯರಶ್ಮಿಗಳು। **ಉದನ್ಯವಃ**—ಉದಕಗಳನ್ನು ಅಪೇಕ್ಷಿಸುತ್ತಾ। **ಹರಿಂ**—ಸೋಮವನ್ನು। **ಅವ ನವಂತೇ**—ಹೋಗಿ ಸೇರುತ್ತವೆ। **ದಿವಃ**—ಆದಿತ್ಯನ। **ರೋಚನೇ**—ಪ್ರಕಾಶಮಾನವಾದ। **ತೃತೀಯೇ ಅಧಿ**—ಮೂರನೆಯ ಲೋಕದಲ್ಲಿರುವುದೂ। **ಗೋಭಿಃ**—ರಶ್ಮಿಗಳಿಂದ। **ಪರಿ**—ಸುತ್ತಲೂ। **ಆವೃತಂ**—ಸುತ್ತಲ್ಪಟ್ಟಿರುವವನೂ ಆದ ಸೋಮವನ್ನು। **ಕ್ಷಿಪಃ**—ಬೆರಳುಗಳು। **ಮೃಜಂತಿ**—ಶುದ್ಧಿಗೊಳಿಸುತ್ತವೆ.

॥ ಭಾವಾರ್ಥ ॥

ಬೇರೆಬೇರೆಯಾಗಿರತಕ್ಕವೂ, ಅನೇಕ ವಿಧವಾದ ಪ್ರಸರಣವುಳ್ಳವೂ, ಸೋಮನನ್ನು ಸೇರತಕ್ಕವೂ, ಪ್ರಸಿದ್ಧವೂ ಆದ ಸೂರ್ಯರಶ್ಮಿಗಳು ಉದಕಗಳನ್ನು ಅಪೇಕ್ಷಿಸುತ್ತಾ ಸೋಮವನ್ನು ಹೋಗಿ ಸೇರುತ್ತವೆ. ಆದಿತ್ಯನ ಪ್ರಕಾಶಮಾನವಾದ ಮೂರನೆಯ ಲೋಕದಲ್ಲಿರುವುದೂ, ರಶ್ಮಿಗಳಿಂದ ಸುತ್ತಲೂ ವ್ಯಾಪೃತವೂ ಆದ ಸೋಮವನ್ನು ಬೆರಳುಗಳು ಶುದ್ಧಿಗೊಳಿಸುತ್ತವೆ.

## English Translation.

Seperate, hundred-streamed, commingling (with the Soma), water-desiring, (the sun's rays) approach the green-tinted (Soma) ; the fingers cleanse him pervaded by rays, in the third sphere illumined by the sun.

॥ ಸಂಹಿತಾಪಾಠಃ ॥

ತವೇಮಾಃ ಪ್ರಜಾ ದಿವ್ಯಸ್ಯ ರೇತಸಸ್ತ್ವಂ ವಿಶ್ವಸ್ಯ ಭುವನಸ್ಯ ರಾಜಸಿ।
ಅಥೇದಂ ವಿಶ್ವಂ ಪವಮಾನ ತೇ ವಶೇ ತ್ವಮಿಂದೋ ಪ್ರಥಮೋ ಧಾಮಧಾ
ಅಸಿ ॥ ೨೮ ॥

॥ ಪದಪಾಠಃ ॥

ತವ। ಇಮಾಃ। ಪ್ರಽಜಾಃ। ದಿವ್ಯಸ್ಯ। ರೇತಸಃ। ತ್ವಂ। ವಿಶ್ವಸ್ಯ। ಭುವನಸ್ಯ। ರಾಜಸಿ।
ಅಥ। ಇದಂ। ವಿಶ್ವಂ। ಪವಮಾನ। ತೇ। ವಶೇ। ತ್ವಂ। ಇಂದೋ ಇತಿ। ಪ್ರಥಮಃ। ಧಾಮಽಧಾಃ।
ಅಸಿ ॥ ೨೮ ॥

॥ ಸಾಯಣಭಾಷ್ಯಂ ॥

ತವ ದಿವ್ಯಸ್ಯ ರೇತಸಃ ಸಕಾಶಾದಿಮಾಃ ಪ್ರಜಾ ಉತ್ಪದ್ಯಮಾನಾಃ ಪ್ರಾಣಿನ ಉತ್ಪನ್ನಾಃ । ಸೋಮೋ ವೈ ರೇತೋಧಾಃ । ತೈ ಸಂ. ೨-೧-೧-೬ । ಇತಿ ಶ್ರುತೇಃ । ತಂ ವಿಶ್ವಸ್ಯ ಭುವನಸ್ಯ ರಾಜಸಿ । ಈಶ್ವರೋ ಭವಸಿ । ಅಥಾಪಿ ಚೇದಂ ವಿಶ್ವಂ ಹೇ ಪವಮಾನ ತೇ ವಶೇ ತ್ವದಧೀನಂ ವರ್ತತೇ । ಹೇ ಇಂದೋ ಪ್ರಥಮೋ ಮುಖ್ಯಸ್ತ್ವಂ ಧಾಮಧಾ ಧಾಮ್ನೋ ಧರ್ತಾಸಿ । ಭವಸಿ ॥

॥ ಪ್ರತಿಪದಾರ್ಥ ॥

**ಪವಮಾನ**—ಶುದ್ಧಿಕಾರಕನಾದ | **ಇಂದೋ**—ಎಲೈ ಸೋಮದೇವನೇ | **ದಿವ್ಯಸ್ಯ**—ದೇವತಾತ್ಮನಾದ | **ತವ**—ನಿನ್ನ | **ರೇತಸಃ**—ಸತ್ವದಿಂದಲೇ | **ಇಮಾಃ ಪ್ರಜಾಃ**—ಈ ಸಕಲ ಪ್ರಜೆಗಳೂ ಉತ್ಪನ್ನರಾಗಿದ್ದಾರೆ | **ತ್ವಂ**—ನೀನು | **ವಿಶ್ವಸ್ಯ ಭುವನಸ್ಯ**—ಸಕಲ ಲೋಕಗಳಿಗೂ | **ರಾಜಸಿ**—ಪ್ರಭುವಾಗಿದ್ದೀಯೆ | **ಅಥ**—ಮತ್ತು | **ಇದಂ ವಿಶ್ವಂ**—ಈ ಸಕಲ ಲೋಕವೂ | **ತೇ ವಶೇ**—ನಿನ್ನ ಅಧೀನದಲ್ಲಿರುತ್ತದೆ | **ತ್ವಂ**—ನೀನು | **ಪ್ರಥಮಃ**—ಅತಿ ಮುಖ್ಯನಾದ | **ಧಾಮಧಾಃ**—ಗೃಹಗಳಿಗೆ ಧಾರಕನಾಗಿ | **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಸೋಮದೇವನೇ, ದೇವತಾತ್ಮನಾದ ನಿನ್ನ ಸತ್ವದಿಂದಲೇ ಸಕಲ ಪ್ರಜೆಗಳೂ ಉತ್ಪನ್ನರಾಗಿದ್ದಾರೆ. ನೀನು ಸಕಲ ಲೋಕಗಳಿಗೂ ಪ್ರಭುವಾಗಿದ್ದೀಯೆ. ಸಕಲ ಲೋಕವೂ ನಿನ್ನ ಅಧೀನದಲ್ಲಿರುತ್ತದೆ. ಗೃಹಗಳಿಗೆಲ್ಲ ನೀನು ಮುಖ್ಯವಾದ ಧಾರಕನಾಗಿದ್ದೀಯೆ.

## English Translation.

All these are the offspring of your celestial effluence ; you are the ruler of the whole world ; so, purified (Soma), this universe is in subjection to you ; you, Indu, are the foremost, the supporter of the house.

॥ ಸಂಹಿತಾಪಾಠಃ ॥

ತ್ವಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ ।
ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ॥ ೨೯ ॥

॥ ಪದಪಾಠಃ ॥

ತ್ವಂ । ಸಮುದ್ರಃ । ಅಸಿ । ವಿಶ್ವಽವಿತ್ । ಕವೇ । ತವ । ಇಮಾಃ । ಪಂಚ । ಪ್ರಽದಿಶಃ । ವಿಽಧರ್ಮಣಿ ।
ತ್ವಂ । ದ್ಯಾಂ । ಚ । ಪೃಥಿವೀಂ । ಚ । ಅತಿ । ಜಭ್ರಿಷೇ । ತವ । ಜ್ಯೋತೀಂಷಿ । ಪವಮಾನ ।
ಸೂರ್ಯಃ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಕವೇ ಕ್ರಾಂತಪ್ರಜ್ಞ ತ್ವಂ ಯಸ್ಮಾತ್ಸಮುದ್ರೋ ವರ್ಷಸಾಧನೋಽಪಾಂ ಅತೋ ವಿಶ್ವವಿದಸಿ । ಯದ್ವಾ । ಸಮುದ್ರೋ ದ್ರವಾತ್ಮಕೋಽಸಿ ವಿಶ್ವವಿಚ್ಚಾಸಿ । ಕಿಂಚ ತವ ವಿಧರ್ಮಣಿ ವಿಧಾರಣೇ ಪಂಚ ಪ್ರದಿಶಃ ಪ್ರಕೃಷ್ಟಾ ದಿಶೋ ಭವಂತೀತಿ ಶೇಷಃ । ತ್ವಂ ದ್ಯಾಂ ಚ ದಿವಂ ಚ ಪೃಥಿವೀಂ ಚಾತಿ ಜಭ್ರಿಷೇ । ಬಿಭರ್ಷಿ । ಹೇ ಪವಮಾನ ಸೂರ್ಯೋ ದೇವಸ್ತವ ಜ್ಯೋತೀಂಷ್ಯಾಪ್ಯಾಯಯತಿ ॥

॥ ಪ್ರತಿಪದಾರ್ಥ ॥

ಕವೇ—ಮೇಧಾವಿಯಾದ । ಪವಮಾನ—ಎಲೈ ಸೋಮದೇವನೇ । ತ್ವಂ—ನೀನು । ಸಮುದ್ರಂ—ದ್ರವಾತ್ಮಕವಾದ ಸಮುದ್ರದಂತಿದ್ದೀಯೆ । ವಿಶ್ವವಿತ್—ಆದುದರಿಂದಲೇ ಪ್ರಾಜ್ಞನಾಗಿ । ಅಸಿ—ಆಗಿದ್ದೀಯೆ । ತವ—ನಿನ್ನ । ವಿಧರ್ಮಣಿ—ಆಜ್ಞಾರೂಪವಾದ ವ್ರತದಲ್ಲಿ । ಪಂಚ ಪ್ರದಿಶಃ—ಐದು ದಿಕ್ಕುಗಳೂ ಅಧೀನವಾಗಿರುತ್ತವೆ । ತ್ವಂ—ನೀನು । ದ್ಯಾಂ—ದ್ಯುಲೋಕವನ್ನೂ । ದಿವಂ ಚ—ಅಂತರಿಕ್ಷವನ್ನೂ । ಪೃಥಿವೀಂ ಚ—ಪೃಥ್ವಿಯನ್ನೂ । ಅತಿ ಜಭ್ರಿಷೇ—ಭರಣಮಾಡಿದ್ದೀಯೆ । ಸೂರ್ಯಃ—ಸೂರ್ಯನು । ತವ—ನಿನ್ನ । ಜ್ಯೋತೀಂಷಿ—ತೇಜಸ್ಸುಗಳನ್ನು ಪುಷ್ಟಿಗೊಳಿಸುತ್ತಾನೆ.

॥ ಭಾವಾರ್ಥ ॥

ಮೇಧಾವಿಯಾದ ಎಲೈ ಸೋಮದೇವನೇ, ನೀನು ಉದಕಕ್ಕೆ ಆಶ್ರಯವಾದ ಅಂತರಿಕ್ಷ (ಅಥವಾ ಸಮುದ್ರ) ರೂಪನಾಗಿದ್ದೀಯೆ. ಆದುದರಿಂದಲೇ ಪ್ರಾಜ್ಞನಾಗಿದ್ದೀಯೆ. ನಿನ್ನ ಆಜ್ಞೆಗೆ ಐದು ದಿಕ್ಕುಗಳೂ ಅಧೀನವಾಗಿರುತ್ತವೆ. ನೀನು ದ್ಯುಲೋಕವನ್ನೂ ಭರಣಮಾಡಿದ್ದೀಯೆ. ಸೂರ್ಯನು ನಿನ್ನ ತೇಜಸ್ಸುಗಳನ್ನು ಪುಷ್ಟಿಗೊಳಿಸುತ್ತಾನೆ.

English Translation

You, O sage, are the ocean, you are omniscient ; these five regions (rest) on your support ; you sustain both heaven and earth ; the sun, O Pavamana, (nourishes) your luminaries.

॥ ಸಂಹಿತಾಪಾಠಃ ॥

ತ್ವಂ ಪವಿತ್ರೇ ರಜಸೋ ವಿಧರ್ಮಣಿ ದೇವೇಭ್ಯಃ ಸೋಮ ಪವಮಾನ
ಪೂಯಸೇ ।

ತ್ವಾಮುಶಿಜಃ ಪ್ರಥಮಾ ಅಗೃಭ್ಣತ ತುಭ್ಯೇಮಾ ವಿಶ್ವಾ ಭುವನಾನಿ ಯೇಮಿರೇ ‖ ೩೦ ‖

‖ ಪದಪಾಠಃ ‖

ತ್ವಂ । ಪವಿತ್ರೇ । ರಜಸಃ । ವಿऽಧರ್ಮಣಿ । ದೇವೇಭ್ಯಃ । ಸೋಮ । ಪವಮಾನ । ಪೂಯಸೇ ।

ತ್ವಾಂ । ಉಶಿಜಃ । ಪ್ರಥಮಾಃ । ಅಗೃಭ್ಣತ । ತುಭ್ಯ । ಇಮಾ । ವಿಶ್ವಾ । ಭುವನಾನಿ । ಯೇಮಿರೇ ‖ ೩೦ ‖

‖ ಸಾಯಣಭಾಷ್ಯಂ ‖

ಹೇ ಸೋಮ ಪವಮಾನ ತ್ವಂ ರಜಸೋ ಲೋಕಸ್ಯ ರಸಸ್ಯ ವಾ ವಿಧರ್ಮಣಿ ವಿಧಾರಕೇ ದಶಾಪವಿತ್ರೇ ದೇವೇಭ್ಯೋ ದೇವಾರ್ಥಂ ಪೂಯಸೇ । ತ್ವಾಮುಶಿಜಃ ಕಾಮಯಮಾನಾ ಋತ್ವಿಜಃ ಪ್ರಥಮಾಃ ಪ್ರತಮಾ ಮುಖ್ಯಾ ಅಗೃಭ್ಣತ । ಗೃಹ್ಣಂತಿ । ತುಭ್ಯ ತುಭ್ಯಮಿಮೇಮಾನಿ ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನಿ ಯೇಮಿರೇ । ಯಚ್ಛಂತ್ಯಾತ್ಮಾನಂ ‖

‖ ಪ್ರತಿಪದಾರ್ಥ ‖

**ಪವಮಾನ**— ಪವಮಾನಸಂಜ್ಞಕನಾದ । **ಸೋಮ**— ಎಲೈ ಸೋಮದೇವನೇ । **ತ್ವಂ**— ನೀನು । **ರಜಸಃ**— ಲೋಕಕ್ಕೆಲ್ಲ । **ವಿಧರ್ಮಣಿ**— ಧಾರಕವಾದ । **ಪವಿತ್ರೇ**— ದಶಾಪವಿತ್ರದಲ್ಲಿ । **ದೇವೇಭ್ಯಃ**— ದೇವತೆಗಳಿಗಾಗಿ । **ಪೂಯಸೇ**— ಶುದ್ಧನಾಗುತ್ತೀಯೆ । **ತ್ವಾಂ**— ನಿನ್ನನ್ನು । **ಉಶಿಜಃ**— ಅಪೇಕ್ಷಿಸತಕ್ಕ ಋತ್ವಿಕ್ಕುಗಳು । **ಪ್ರಥಮಾಃ**— ಮೊದಲನೆಯವರಾಗಿ । **ಅಗೃಭ್ಣತ**— ಸ್ವೀಕರಿಸುತ್ತಾರೆ । **ತುಭ್ಯ**— ನಿನಗೆ । **ವಿಶ್ವಾ** — ಸಕಲವಾದ । **ಇಮಾ ಭುವನಾನಿ**— ಈ ಲೋಕಗಳೆಲ್ಲವೂ । **ಯೇಮಿರೇ**— ಆಜ್ಞಾವರ್ತಿಗಳಾಗಿವೆ.

‖ ಭಾವಾರ್ಥ ‖

ಪವಮಾನಸಂಜ್ಞಕನಾದ ಎಲೈ ಸೋಮದೇವನೇ, ನೀನು ಲೋಕಕ್ಕೆಲ್ಲ ಧಾರಕವಾದ ದಶಾಪವಿತ್ರದಲ್ಲಿ ದೇವತೆಗಳಿಗಾಗಿ ಶುದ್ಧನಾಗುತ್ತೀಯೆ. ನಿನ್ನನ್ನು ಅಪೇಕ್ಷಿಸುವ ಋತ್ವಿಕ್ಕುಗಳು ನಿನ್ನನ್ನು ಪ್ರಥಮತಃ ಸ್ವೀಕರಿಸುತ್ತಾರೆ. ಸಕಲ ಲೋಕಗಳೂ ನಿನ್ನ ಆಜ್ಞಾವರ್ತಿಗಳಾಗಿವೆ.

## English Translation.

Purified Soma, you are purified for the gods in the filter the supporter of the world ; the chief (priests) desiring (you) lay hold of you, all these worlds offer themselves to you.

॥ ಸಂಹಿತಾಪಾಠಃ ॥

ಪ್ರ ರೇಭ ಏತ್ಯತಿ ವಾರಮವ್ಯಯಂ ವೃಷಾ ವನೇಷ್ವವ ಚಕ್ರದದ್ಧರಿಃ ।
ಸಂ ಧೀತಯೋ ವಾವಶಾನಾ ಅನೂಷತ ಶಿಶುಂ ರಿಹಂತಿ ಮತಯಃ
ಪನಿಪ್ನತಂ ॥ ೩೧ ॥

॥ ಪದಪಾಠಃ ॥

ಪ್ರ । ರೇಭಃ । ಏತಿ । ಅತಿ । ವಾರಂ । ಅವ್ಯಯಂ । ವೃಷಾ । ವನೇಷು । ಅವ । ಚಕ್ರದತ್ । ಹರಿಃ ।
ಸಂ । ಧೀತಯಃ । ವಾವಶಾನಾಃ । ಅನೂಷತ । ಶಿಶುಂ । ರಿಹಂತಿ । ಮತಯಃ । ಪನಿಪ್ನತಂ ॥ ೩೧ ॥

॥ ಸಾಯಣಭಾಷ್ಯಂ ॥

ರೇಭಃ ಶಬ್ದಯಿತಾ ॥ ರೇಭೃ ಶಬ್ದೇ ॥ ಸೋಮೋ ವಾರಮವ್ಯಯಮವಿಮಯಂ ವಾಲಂ ಪ್ರಾತ್ಯೇತಿ । ಪ್ರಕರ್ಷೇಣಾತಿಗಚ್ಛತಿ । ವೃಷಾ ಸೇಕ್ತಾ ಸೋಮೋ ವನೇಷೂದಕೇಷ್ವವ ಚಕ್ರದದವಕ್ರಂದನ್ ಹರಿರ್ಹರಿತವರ್ಣಃ ಸೋಮಃ । ಸಮನೂಷತ । ಸಂಸ್ತುವಂತಿ । ಕೇ । ಧೀತಯೋ ಧ್ಯಾತಾರೋ ವಾವಶಾನಾ ಯಾಗಂ ಸೋಮಂ ವಾ ಕಾಮಯಮಾನಾಃ । ಶಿಶುಂ ಶಿಶುವತ್ಸಂಸ್ಕರ್ತವ್ಯಂ ಸೋಮಂ ಮತಯಃ ಸ್ತುತಯೋ ರಿಹಂತಿ । ಲಿಹಂತಿ । ಸ್ಪೃಶಂತಿ । ಸ್ವವಿಷಯೀಕುರ್ವಂತೀತ್ಯರ್ಥಃ । ಕೀದೃಶಂ । ಪನಿಪ್ನತಂ ಶಬ್ದಯಂತಂ ॥

॥ಪ್ರತಿಪದಾರ್ಥ॥

**ರೇಭಃ**—ಶಬ್ದಮಾಡುವ ಸೋಮನು । **ಅವ್ಯಯಂ**—ಉಣ್ಣೆಯ । **ವಾರಂ**—ನೂಲುಗಳಲ್ಲಿ । **ಪ್ರ ಅತ್ಯೇತಿ**—ಪ್ರವೇಶಿಸುತ್ತಾನೆ । **ವೃಷಾ**—ಇಷ್ಟಾರ್ಥಪ್ರದನಾದ । **ಹರಿಃ**—ಸೋಮನು । **ವನೇಷು**—ಉದಕಗಳಲ್ಲಿ । **ಅವ ಚಕ್ರದತ್**—ಶಬ್ದಮಾಡುತ್ತಾನೆ । **ವಾವಶಾನಾಃ**—ಯಜ್ಞಾಪೇಕ್ಷಿಗಳಾದ । **ಧೀತಯಃ**—ಆರಾಧಕರು । **ಸಮನೂಷತ**—ಸ್ತುತಿಸುತ್ತಾರೆ । **ಮತಯಃ**—ಸ್ತುತಿಗಳು । **ಪನಿಪ್ನತಂ**—ಶಬ್ದಮಾಡುವುದೂ । **ಶಿಶುಂ**—ಶಿಶುವಿನಂತೆ ಸಂಸ್ಕಾರಕ್ಕೆ ಯೋಗ್ಯವೂ ಆದ ಸೋಮವನ್ನು । **ರಿಹಂತಿ**—ಸ್ಪರ್ಶಿಸುತ್ತವೆ.

॥ ಭಾವಾರ್ಥ ॥

ಶಬ್ದಮಾಡುವ ಸೋಮನು ಉಣ್ಣೆಯ ನೂಲುಗಳಲ್ಲಿ ಪ್ರವೇಶಿಸುತ್ತಾನೆ. ಇಷ್ಟಾರ್ಥಪ್ರದನಾದ ಸೋಮನು ಉದಕಗಳಲ್ಲಿ ಶಬ್ದಮಾಡುತ್ತಾನೆ. ಯಜ್ಞಾಪೇಕ್ಷಿಗಳಾದ ಆರಾಧಕರು ಇವನನ್ನು ಸ್ತುತಿಸುತ್ತಾರೆ. ಶಬ್ದಮಾಡುವುದೂ, ಶಿಶುವಿನಂತೆ ಸಂಸ್ಕಾರಕ್ಕೆ ಯೋಗ್ಯವೂ ಆದ ಸೋಮವನ್ನು ಸ್ತುತಿಗಳು ಸ್ಪರ್ಶಿಸುತ್ತವೆ.

English Translaton

The sounding (Soma) passes through the woollen fleece; the green-tinted showerer cries in the waters; the worshipper desiring (the Soma) praise him together, the laudations soothe the infant as he cries.

|| ಸಂಹಿತಾಪಾಠಃ ||

**ಸ ಸೂರ್ಯಸ್ಯ ರಶ್ಮಿಭಿಃ ಪರಿ ವ್ಯತ ತಂತುಂ ತನ್ವಾನಸ್ತ್ರಿವೃತಂ ಯಥಾ ವಿದೇ ।**

**ನಯನ್ನೃತಸ್ಯ ಪ್ರಶಿಷೋ ನವೀಯಸೀಃ ಪತಿರ್ಜನೀನಾಮುಪ ಯಾತಿ ನಿಷ್ಕೃತಂ ॥ ೩೨ ॥**

|| ಪದಪಾಠಃ ||

ಸಃ । ಸೂರ್ಯಸ್ಯ । ರಶ್ಮಿऽಭಿಃ । ಪರಿ । ವ್ಯತ । ತಂತುಂ । ತನ್ವಾನಃ । ತ್ರಿऽವೃತಂ । ಯಥಾ । ವಿದೇ ।

ನಯನ್ । ಋತಸ್ಯ । ಪ್ರऽಶಿಷಃ । ನವೀಯಸೀಃ । ಪತಿಃ । ಜನೀನಾಂ । ಉಪ । ಯಾತಿ । ನಿಃऽಕೃತಂ ॥ ೩೨ ॥

|| ಸಾಯಣಭಾಷ್ಯಂ ||

**ಸ ಸೋಮಃ ಸೂರ್ಯಸ್ಯ ರಶ್ಮಿಭಿಃ ಪರಿ ವ್ಯತ । ಪರಿವೇಷ್ಟಯತ್ಯಾತ್ಮಾನಂ । ಕಿಂ ಕುರ್ವನ್ । ತ್ರಿವೃತಂ ಸವನೈರ್ದೇವೈರ್ವಾ ತ್ರಿವೃತಂ ತಂತುಂ ಯಜ್ಞಂ ತನ್ವಾನೋ ವಿಸ್ತಾರಯನ್ ಯಥಾ ವಿದೇ ಜಾನಾತಿ । ಯೇನ ಪ್ರಕಾರೇಣ ಸಂಪೂರ್ಣಮವಗಚ್ಛತಿ ತಥಾ ತನ್ವಾನಃ । ಋತಸ್ಯ ಸತ್ಯಭೂತಸ್ಯ ಯಜಮಾನಸ್ಯ ನವೀಯಸೀರ್ನವತರಾಃ ಪ್ರಶಿಷಃ ಪ್ರಶಂಸನಾ ಅಭಿಮತಾನಿ ನಯನ್ ಪ್ರಾಪಯನ್ । ತಸ್ಮಾ ಏವ ಜನೀನಾಂ ಪತಿಃ ಪಾಲಕಃ ಸ್ವಾಮೀ ನಿಷ್ಕೃತಂ ಸಂಸ್ಕೃತಂ ಪಾತ್ರಮುಪ ಯಾತಿ । ಗಚ್ಛತಿ ॥**

|| ಪ್ರತಿಪದಾರ್ಥ ||

**ಸಃ**—ಸೋಮನು । **ತ್ರಿವೃತಂ**—ಮೂರು ಸವನಪ್ರಕಾರಗಳುಳ್ಳ । **ತಂತುಂ**—ಯಜ್ಞವನ್ನು । **ಯಥಾ ವಿದೇ**—ತನ್ನ ಜ್ಞಾನಕ್ಕೆ ಅನುಸಾರವಾಗಿ । **ತನ್ವಾನಃ**—ವಿಸ್ತರಿಸುತ್ತಾ । **ಸೂರ್ಯಸ್ಯ**—ಸೂರ್ಯನ । **ರಶ್ಮಿಭಿಃ**—ರಶ್ಮಿಗಳಿಂದ । **ಪರಿ ವ್ಯತ**—ಸುತ್ತುವರಿಯಲ್ಪಡುತ್ತಾನೆ । **ಜನೀನಾಂ**—ಯಜಮಾನಪತ್ನಿಯರಿಗೆ । **ಪತಿಃ**—ಪಾಲಕನಾದ ಸೋಮನು । **ಋತಸ್ಯ**—ಯಜಮಾನನ । **ನವೀಯಸೀಃ**—ನೂತನಗಳಾದ । **ಪ್ರಶಿಷಃ**—ಇಚ್ಛೆಗಳನ್ನು । **ನಯನ್**—ಒದಗಿಸಿಕೊಡುತ್ತ । **ನಿಷ್ಕೃತಂ**—ಸಂಸ್ಕೃತವಾದ ಪಾತ್ರೆಯನ್ನು । **ಉಪಯಾತಿ**—ಹೋಗಿ ಸೇರುತ್ತಾನೆ.

॥ ಭಾವಾರ್ಥ ॥

ಸೋಮನು ಸವನತ್ರಯಾತ್ಮಕವಾದ ಯಜ್ಞವನ್ನು ತನ್ನ ಜ್ಞಾನಕ್ಕೆ ಅನುಸಾರವಾಗಿ ವಿಸ್ತರಿಸುತ್ತ ಸೂರ್ಯನ ರಶ್ಮಿಗಳಿಂದ ಸುತ್ತುವರಿಯಲ್ಪಡುತ್ತಾನೆ. ಯಜಮಾನಪತ್ನಿಯರಿಗೆ ಪಾಲಕನಾದ ಸೋಮನು ಯಜಮಾನನ ನೂತನಗಳಾದ ಇಚ್ಛೆಗಳನ್ನು ಒದಗಿಸಿಕೊಡುತ್ತ ಸಂಸ್ಕೃತವಾದ ಪಾತ್ರೆಯನ್ನು ಹೋಗಿ ಸೇರುತ್ತಾನೆ.

**English Translation.**

He invests himself with the rays of the sun stretching out the triple thread in the way he knows; guiding the recent adorations of the truthful (worshipper), the protector of women passes to the consecrated (vessel).

॥ ಸಂಹಿತಾಪಾಠಃ ॥

ರಾಜಾ ಸಿಂಧೂನಾಂ ಪವತೇ ಪತಿರ್ದಿವ ಋತಸ್ಯ ಯಾತಿ ಪಥಿಭಿಃ ಕನಿಕ್ರದತ್ ।
ಸಹಸ್ರಧಾರಃ ಪರಿ ಷಿಚ್ಯತೇ ಹರಿಃ ಪುನಾನೋ ವಾಚಂ ಜನಯನ್ನುಪಾವಸುಃ ॥ ೩೩ ॥

॥ ಪದಪಾಠಃ ॥

ರಾಜಾ । ಸಿಂಧೂನಾಂ । ಪವತೇ । ಪತಿಃ । ದಿವಃ । ಋತಸ್ಯ । ಯಾತಿ । ಪಥಿऽಭಿಃ । ಕನಿಕ್ರದತ್ ।
ಸಹಸ್ರऽಧಾರಃ । ಪರಿ । ಸಿಚ್ಯತೇ । ಹರಿಃ । ಪುನಾನಃ । ವಾಚಂ । ಜನಯನ್ । ಉಪಃऽವಸುಃ ॥ ೩೩ ॥

॥ ಸಾಯಣಭಾಷ್ಯಂ ॥

ಸಿಂಧೂನಾಂ ನದೀನಾಮುದಕಾನಾಂ ರಾಜೇಶ್ವರೋ ದಿವಃ ಪತಿರ್ದ್ಯುಲೋಕಸ್ಯ ಸ್ವಾಮ್ಯೃತಸ್ಯ ಯಜ್ಞಸ್ಯ ಪಥಿಭಿರ್ಮಾರ್ಗೈಃ ಕನಿಕ್ರದಚ್ಛಬ್ದಂ ಕುರ್ವನ್ಯಾತಿ । ಸಹಸ್ರಧಾರೋ ಬಹುಧಾರಾಯುಕ್ತಃ ಸೋಮೋ ನೃಭಿರ್ನೇತೃಭಿರ್ಋತ್ವಿಗ್ಭಿಃ ಪರಿ ಸಿಚ್ಯತೇ ಪಾತ್ರೇಷು । ಪುನಾನಃ ಪೂಯಮಾನೋ ವಾಚಂ ಶಬ್ದಂ ಜನಯನ್ನುತ್ಪಾದಯನ್ನುಪಾವಸುರುಪಾಗಚ್ಛದ್ಧನಃ । ಪರಿ ಸಿಚ್ಯತ ಇತಿ ಸಮನ್ವಯಃ ॥

॥ ಪ್ರತಿಪದಾರ್ಥ ॥

ಸಿಂಧೂನಾಂ— ಪ್ರವಹಿಸುವ ಉದಕಗಳಿಗೆ । ರಾಜಾ— ಈಶ್ವರನೂ । ದಿವಃ— ದ್ಯುಲೋಕಕ್ಕೆ । ಪತಿಃ— ಒಡೆಯನೂ ಆದ ಸೋಮನು । ಪವತೇ— ಪ್ರವಹಿಸುತ್ತಾನೆ । ಋತಸ್ಯ— ಯಜ್ಞದ । ಪಥಿಭಿಃ—

ಮಾರ್ಗಗಳಿಂದ | **ಕನಿಕ್ರದತ್**—ಶಬ್ದಮಾಡುತ್ತ | **ಯಾತಿ**—ಹೋಗುತ್ತಾನೆ | **ಸಹಸ್ರಧಾರಃ**—ಅನೇಕ ಧಾರೆಯಿಂದ ಕೂಡಿದವನೂ | **ಪುನಾನಃ**—ಶುದ್ಧಿಯನ್ನು ಹೊಂದುವವನೂ | **ಉಪೆವಸುಃ**—ಧನವನ್ನು ಒದಗಿಸುವವನೂ ಆದ | **ಹರಿಃ**—ಸೋಮನು | **ವಾಚಂ**—ಶಬ್ದವನ್ನು | **ಜನಯನ್**—ಉತ್ಪನ್ನಮಾಡುತ್ತ | **ಪರಿಷಿಚ್ಯತೇ**—ಪಾತ್ರೆಯಲ್ಲಿ ಸುರಿಯಲ್ಪಡುತ್ತಾನೆ.

|| ಭಾವಾರ್ಥ ||

ಪ್ರವಹಿಸುವ ಉದಕಗಳಿಗೆ ಈಶ್ವರನೂ, ದ್ಯುಲೋಕಕ್ಕೆ ಒಡೆಯನೂ ಆದ ಸೋಮನು ಪ್ರವಹಿಸುತ್ತಾನೆ. ಯಜ್ಞದ ಮಾರ್ಗಗಳಿಂದ ಶಬ್ದಮಾಡುತ್ತಾ ಹೋಗುತ್ತಾನೆ. ಅನೇಕ ಧಾರೆಯಿಂದ ಕೂಡಿದವನೂ, ಶುದ್ಧಿಯನ್ನು ಹೊಂದುವವನೂ, ಧನವನ್ನು ಒದಗಿಸುವವನೂ ಆದ ಸೋಮನು ಶಬ್ದವನ್ನು ಮಾಡುತ್ತ ಪಾತ್ರೆಯಲ್ಲಿ ಸುರಿಯಲ್ಪಡುತ್ತಾನೆ.

## English Translation.

The sovereign of rivers flows pure, the lord of heaven goes with a shout by the paths of the sacrifice ; the thousand-streamed green-tinted (Soma) is poured out, uttering a sound while being filtered, the beinger of wealth.

|| ಸಂಹಿತಾಪಾಠಃ ||

ಪವಮಾನ ಮಹ್ಯರ್ಣೋ ವಿ ಧಾವಸಿ ಸೂರೋ ನ ಚಿತ್ರೋ ಅವ್ಯಯಾನಿ ಪವ್ಯಯಾ |
ಗಭಸ್ತಿಪೂತೋ ನೃಭಿರದ್ರಿಭಿಃ ಸುತೋ ಮಹೇ ವಾಜಾಯ ಧನ್ಯಾಯ ಧನ್ವಸಿ || ೩೪ ||

|| ಪದಪಾಠಃ ||

ಪವಮಾನ | ಮಹಿ | ಅರ್ಣಃ | ವಿ | ಧಾವಸಿ | ಸೂರಃ | ನ | ಚಿತ್ರಃ | ಅವ್ಯಯಾನಿ | ಪವ್ಯಯಾ |
ಗಭಸ್ತಿऽಪೂತಃ | ನೃऽಭಿಃ | ಅದ್ರಿऽಭಿಃ | ಸುತಃ | ಮಹೇ | ವಾಜಾಯ | ಧನ್ಯಾಯ | ಧನ್ವಸಿ || ೩೪ ||

|| ಸಾಯಣಭಾಷ್ಯಂ ||

ಹೇ ಪವಮಾನ ಸೋಮ ಮಹ್ಯರ್ಣೋ ಬಹೂದಕಂ | ಅರ್ಣ ಇತ್ಯುದಕನಾಮ | ರಸಂ ವಾ ವಿ ಧಾವಸಿ | ಗಮಯಸಿ || ಧಾವು ಗತಿಶುದ್ಧ್ಯೋಃ || ಕಿಂಚ ಸೂರೋ ನ ಚಿತ್ರಃ ಸೂರ್ಯ ಇವ ಚಿತ್ರಶ್ಚಾಯನೀಯಃ ಪೂಜ್ಯಃ ಸನ್ನವ್ಯಯಾನ್ಯವಿಮಯಾನಿ ಪವ್ಯಯಾ ಪಾತ್ರಾಣಿ ಗಚ್ಛಸಿ | ಕಿಂಚ ಗಭಸ್ತಿಪೂತೋ

ಬಾಹುಭಿರಭಿಶೋಧಿತೋ ನೃಭಿರ್ಋತ್ವಿಗ್ಭಿರ್ಗ್ರಾವಭಿಶ್ಚ ಸುತೋಽಭಿಷುತೋ ಮಹೇ ಮಹತೇ ವಾಜಾಯ ಸಂಗ್ರಾಮಾಯ ಧನ್ಯಾಯ ಧನೇಭ್ಯೋ ಹಿತಾಯ ಧನ್ವಸಿ । ಗಚ್ಛಸಿ । ಧನ್ವತಿರ್ಗತಿಕರ್ಮಾ ॥

॥ ಪ್ರತಿಪದಾರ್ಥ ॥

**ಪವಮಾನ**—ಎಲೈ. ಸೋಮದೇವನೇ । **ಮಹ್ಯರ್ಣಃ**—ಪ್ರಭೂತವಾದ ಉದಕವನ್ನು । **ವಿ ಧಾವಸಿ**—ಸುರಿಸುತ್ತೀಯೆ । **ಸೂರೋ ನ**—ಸೂರ್ಯನಂತೆ । **ಚಿತ್ರಃ**—ಆಕರ್ಷಕನಾಗಿ । **ಅವ್ಯಯಾ**—ಉಣ್ಣೆಯಿಂದ ನಿರ್ಮಿತವಾದ । **ಪವ್ಯಯಾ**—ಪಾತ್ರೆಗೆ ಹೋಗುತ್ತೀಯೆ । **ಗಭಸ್ತಿಪೂತಃ**—ಬಾಹುಗಳಿಂದ ಶುದ್ಧನಾಗಿಯೂ । **ನೃಭಿಃ**—ಋತ್ವಿಕ್ಕುಗಳಿಂದ । **ಅದ್ರಿಭಿಃ**—ಕಲ್ಲುಗಳಿಂದ । **ಸುತಃ**—ಹಿಂಡಲ್ಪಟ್ಟವನಾಗಿಯೂ । **ಮಹೇ**—ಮಹತ್ತಾದ । **ವಾಜಾಯ**—ಸಂಗ್ರಾಮಕ್ಕೆ । **ಧನ್ಯಾಯ**—ಧನಲಾಭಕ್ಕಾಗಿ । **ಧನ್ವಸಿ**—ಹೋಗುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಪ್ರಭೂತವಾದ ಉದಕವನ್ನು ಸುರಿಸುತ್ತೀಯೆ. ಸೂರ್ಯನಂತೆ ಆಕರ್ಷಿತನಾಗಿ ಉಣ್ಣೆಯಿಂದ ನಿರ್ಮಿತವಾದ ಶೋಧಿಸುವ ಪಾತ್ರೆಗೆ ಹೋಗುತ್ತೀಯೆ. ಬಾಹುಗಳಿಂದ ಶುದ್ಧನಾಗಿಯೂ, ಋತ್ವಿಕ್ಕುಗಳಿಂದ (ಕಲ್ಲುಗಳಿಂದ) ಹಿಂಡಲ್ಪಟ್ಟವನಾಗಿಯೂ ಮಹತ್ತಾದ ಸಂಗ್ರಾಮಕ್ಕೆ ಧನಕ್ಕಾಗಿ ಹೋಗುತ್ತೀಯೆ.

## English Translation.

Purified (Soma), you pour forth abundant juice ; like the wonderful sun (you approach) the fleecy filters ; purified by the hands of the priests, expressed with the stones you flow for a mighty wealth-yielding conflict.

॥ ಸಂಹಿತಾಪಾಠಃ ॥

ಇಷಮೂರ್ಜಂ ಪವಮಾನಾಭ್ಯರ್ಷಸಿ ಶ್ಯೇನೋ ನ ವಂಸು ಕಲಶೇಷು ಸೀದತಿ ।
ಇಂದ್ರಾಯ ಮದ್ವಾ ಮದ್ಯೋ ಮದಃ ಸುತೋ ದಿವೋ ವಿಷ್ಟಂಭ ಉಪಮೋ ವಿಚಕ್ಷಣಃ ॥ ೩೫ ॥

॥ ಪದಪಾಠಃ ॥

ಇಷಂ । ಊರ್ಜಂ । ಪವಮಾನ । ಅಭಿ । ಅರ್ಷಸಿ । ಶ್ಯೇನಃ । ನ । ವಂಸು । ಕಲಶೇಷು । ಸೀದಸಿ ।
ಇಂದ್ರಾಯ । ಮದ್ವಾ । ಮದ್ಯಃ । ಮದಃ । ಸುತಃ । ದಿವಃ । ವಿಷ್ಟಂಭಃ । ಉಪऽಮಃ । ವಿऽಚಕ್ಷಣಃ ॥

|| ಸಾಯಣಭಾಷ್ಯಂ ||

ಹೇ ಪವಮಾನ ಪೂಯಮಾನ ಸೋಮ ಇಷಮನ್ನಮೂರ್ಜಂ ಬಲಂ ಚಾಭ್ಯರ್ಷಸಿ । ಶ್ಯೇನೋ ನ ಶ್ಯೇನ ಇವ ವಂಸು ವನನೀಯೇಷು ಕುಲಾಯೇಷು ಕಲಶೇಷು ಸೀದಸಿ । ನಿಷಣ್ಣೋ ಭವಸಿ । ಅಥ ಪರೋಕ್ಷಕೃತಃ । ಇಂದ್ರಾಯ ಮದ್ವಾ ಮದಕರೋ ಮದ್ಯೋ ಮದಹೇತುರ್ಮದೋ ರಸಃ ಸುತೋಽಭಿಷುತಃ । ಕೀದೃಶಃ । ದಿವೋ ದ್ಯುಲೋಕಸ್ಯೋಪಮ ಉಪಮೀಯಮಾನೋ ವಿಷ್ಟಂಭೋ ವಿಶೇಷೇಣ ಸ್ತಂಭಯಿತಾ । ಸ್ಥೂಣಾ ಯಥಾ ಗೃಹಂ ತಥಾ । ವಿಚಕ್ಷಣೋ ವಿದ್ರಷ್ಟಾ । ಸ್ಥೂಣೇವ ಜನಾँ ಉಪಮಿತ್। ಋ. ೧–೫೯–೧ । ಇತ್ಯುಕ್ತಂ ||

|| ಪ್ರತಿಪದಾರ್ಥ ||

**ಪವಮಾನ**– ಎಲೈ ಸೋಮನೇ । **ಇಷಂ**—ಅನ್ನವನ್ನೂ । **ಊರ್ಜಂ**—ಬಲವನ್ನೂ । **ಅರ್ಭರ್ಷಸಿ**—ಒದಗಿಸುತ್ತೀಯೆ । **ವಂಸು**—ಗೂಡುಗಳಲ್ಲಿ । **ಶ್ಯೇನೋ ನ**—ಶ್ಯೇನಪಕ್ಷಿಯು ಕುಳಿತಿರುವಂತೆ । **ಕಲಶೇಷು**—ಕಲಶಪಾತ್ರೆಗಳಲ್ಲಿ । **ಸೀದಸಿ**—ಕುಳಿತುಕೊಳ್ಳುತ್ತೀಯೆ । **ದಿವಃ**–ದ್ಯುಲೋಕಕ್ಕೆ । **ಉಪಮಃ**—ಮಾದರಿಯಾದ । **ವಿಷ್ಟಂಭಃ**—ಆಧಾರಸ್ಥಂಭನೂ । **ವಿಚಕ್ಷಣಃ**—ಸೂಕ್ಷ್ಮದೃಷ್ಟಿಯುಳ್ಳವನೂ ಆದ ಸೋಮನು । **ಇಂದ್ರಾಯ**—ಇಂದ್ರನಿಗಾಗಿ । **ಮದ್ವಾ**—ಮದಕರವೂ । **ಮದ್ಯಃ**—ಮದಹೇತುವೂ । **ಮದಃ**—ರಸಾತ್ಮಕವೂ ಆಗಿ । **ಸುತಃ**—ಹಿಂಡಲ್ಪಡುತ್ತಾನೆ.

|| ಭಾವಾರ್ಥ ||

ಎಲೈ ಸೋಮನೇ, ನೀನು ಅನ್ನವನ್ನೂ, ಬಲವನ್ನೂ ಒದಗಿಸುತ್ತೀಯೆ ಗೂಡುಗಳಲ್ಲಿ ಶ್ಯೇನಪಕ್ಷಿಯು ಕುಳಿತಿರುವಂತೆ ನೀನು ಕಲಶಪಾತ್ರೆಗಳಲ್ಲಿ ಕುಳಿತುಕೊಳ್ಳುತ್ತೀಯೆ. ದ್ಯುಲೋಕಕ್ಕೆ ಮಾದರಿಯಾದ ಆಧಾರಸ್ತಂಭನೂ ಸೂಕ್ಷ್ಮದೃಷ್ಟಿಯುಳ್ಳವನೂ ಆದ ಸೋಮನು ಇಂದ್ರನಿಗೆ ಹರ್ಷಕಾರಕನಾದ ರಸರೂಪದಲ್ಲಿ ಹಿಂಡಲ್ಪಡುತ್ತಾನೆ.

## English Translation

You rush, Pavamana, to (bring) food and strength; you alight on the pitchers like a falcon on its nest ; (you) the exhilarating effused juice giving exhilaration to Indra, resembling the support of heaven, beholding (all things).

|| ಸಂಹಿತಾಪಾಠಃ ||

**ಸಪ್ತ ಸ್ವಸಾರೋ ಅಭಿ ಮಾತರಃ ಶಿಶುಂ ನವಂ ಜಜ್ಞಾನಂ ಜೇನ್ಯಂ ವಿಪಶ್ಚಿತಂ ।**

**ಅಪಾಂ ಗಂಧರ್ವಂ ದಿವ್ಯಂ ನೃಚಕ್ಷಸಂ ಸೋಮಂ ವಿಶ್ವಸ್ಯ ಭುವನಸ್ಯ ರಾಜಸೇ ॥ ೩೬ ॥**

॥ ಪದಪಾಠಃ ॥

ಸಪ್ತ । ಸ್ವಸಾರಃ । ಅಭಿ । ಮಾತರಃ । ಶಿಶುಂ । ನವಂ । ಜಜ್ಞಾನಂ । ಜೇನ್ಯಂ । ವಿಪಃऽಚಿತಂ ।

ಅಪಾಂ । ಗಂಧರ್ವಂ । ದಿವ್ಯಂ । ನೃऽಚಕ್ಷಸಂ । ಸೋಮಂ । ವಿಶ್ವಸ್ಯ । ಭುವನಸ್ಯ । ರಾಜಸೇ ॥ ೩೬ ॥

॥ ಸಾಯಣಭಾಷ್ಯಂ ॥

ಸಪ್ತ ಸರ್ಪಣಸ್ವಭಾವಾಃ ಸಪ್ತಸಂಖ್ಯಾಕಾ ವಾ ಮಾತರೋ ಮಾತೃಸ್ಥಾನೀಯಾ ಗಂಗಾಯಮುನಾದ್ಯಾಃ ಶಿಶುಂ ಶಿಶುಸ್ಥಾನೀಯಮಭಿ ಗಚ್ಛಂತೀತಿ ಶೇಷಃ । ಸ್ವಕೀಯೈಃ ಪಯೋಭಿರಾಪ್ಯಾಯಯಂತೀತಿ ಶೇಷಃ । ಕೀದೃಶಂ ಶಿಶುಂ । ನವಂ ಜಜ್ಞಾನಂ ಜಾಯಮಾನಂ ಜೇನ್ಯಂ ಜಯಶೀಲಂ ವಿಪಶ್ಚಿತಂ ವಿದ್ವಾಂಸಂ ಅಪಾಂ ಜನಕಂ ತೇಷಾಂ ಮಧ್ಯೇ ವರ್ತಮಾನಂ ವಾ ಗಂಧರ್ವಮುದಕಸ್ಯ ಧಾತಾರಂ ದಿವ್ಯಂ ದಿವಿ ಭವಂ ನೃಚಕ್ಷಸಂ ನೃಣಾಂ ಪ್ರಷ್ಟಾರಂ ಸೋಮಂ । ಅಭಿಗಚ್ಛಂತಿ ಕಿಮರ್ಥಂ । ವಿಶ್ವಸ್ಯ ಭುವನಸ್ಯ ವಿರಾಜಸೇ ವಿರಾಜನಾರ್ಥಂ ॥

॥ ಪ್ರತಿಪದಾರ್ಥ ॥

**ಸ್ವಸಾರಃ**—ಸಹೋದರಿರೂಪರಾದ । **ಸಪ್ತ ಮಾತರಃ**—ಗಂಗಾದಿ ಸಪ್ತ ನದಿಗಳೂ । **ಶಿಶುಂ**—ಶಿಶುರೂಪನೂ । **ನವಂ**—ನೂತನವಾಗಿ । **ಜಜ್ಞಾನಂ**—ಉತ್ಪನ್ನನೂ । **ಜೇನ್ಯಂ**—ಜಯಶೀಲನೂ । **ವಿಪಶ್ಚಿತಂ**—ಪ್ರಾಜ್ಞನೂ । **ಅಪಾಂ**—ಉದಕಗಳ ಮಧ್ಯವರ್ತಿಯೂ । **ಗಂಧರ್ವಂ**—ಉದಕಗಳ ಧಾರಕನೂ । **ದಿವ್ಯಂ**—ದ್ಯುಲೋಕ ಸಂಬಂಧಿಯೂ । **ನೃಚಕ್ಷಸಂ**—ಮಾನವರನ್ನು ನೋಡಬಲ್ಲವನೂ ಆದ । **ಸೋಮಂ**—ಸೋಮನನ್ನು । **ವಿಶ್ವಸ್ಯ ಭುವನಸ್ಯ**—ಸಕಲಲೋಕಗಳಿಗೂ । **ರಾಜಸೇ**—ಪ್ರಭುವಾಗುವ ನಿಮಿತ್ತ । **ಅಭಿ (ಗಚ್ಛಂತಿ)** ಸಮೀಪಿಸುತ್ತಾರೆ.

॥ ಭಾವಾರ್ಥ ॥

ಸಹೋದರೀರೂಪರಾದ ಗಂಗಾದಿಸಪ್ತನದಿಗಳೂ ಸಹ ಶಿಶುರೂಪನೂ, ನೂತನವಾಗಿ ಉತ್ಪನ್ನನೂ, ಜಯಶೀಲನೂ, ಪ್ರಾಜ್ಞನೂ, ಉದಕಗಳ ಮಧ್ಯವರ್ತಿಯೂ, ಉದಕಗಳ ಧಾರಕನೂ, ದ್ಯುಲೋಕಸಂಬಂಧಿಯೂ, ಮಾನವರನ್ನು ನೋಡಬಲ್ಲವನೂ ಆದ ಸೋಮನನ್ನು ಅವನು ಸಕಲಲೋಕಗಳಿಗೂ ಪ್ರಭುವಾಗುವ ನಿಮಿತ್ತ ಸಮೀಪಿಸುತ್ತಾರೆ.

## English Translation.

The seven sister mothers approach the new-born, victorious sagacious infant, Soma, abiding amidst the waters, supporter of water, divine, the contemplator of men, to make him the ruler of the whole world.

॥ ಸಂಹಿತಾಪಾಠಃ ॥

ಇಮಾ ಭುವನಾನಿ ವೀಯಸೇ ಯುಜಾನ ಇಂದೋ ಹರಿತಃ

ಸುಪರ್ಣ್ಯಃ ।

ತಾಸ್ತೇ ಕ್ಷರಂತು ಮಧುಮದ್ಘೃತಂ ಪಯಸ್ತವ ವ್ರತೇ ಸೋಮ ತಿಷ್ಠಂತು

ಕೃಷ್ಟಯಃ ॥ ೩೭ ॥

॥ ಪದಪಾಠಃ ॥

ಈಶಾನಃ । ಇಮಾ । ಭುವನಾನಿ । ವಿ । ಈಯಸೇ । ಯುಜಾನಃ । ಇಂದೋ ಇತಿ । ಹರಿತಃ । ಸುऽಪರ್ಣ್ಯಃ ।

ತಾಃ । ತೇ । ಕ್ಷರಂತು । ಮಧುऽಮತ್ । ಘೃತಂ । ಪಯಃ । ತವ । ವ್ರತೇ । ಸೋಮ । ತಿಷ್ಠಂತು ।

ಕೃಷ್ಟಯಃ ॥ ೩೭ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ಈಶಾನಃ ಸರ್ವಸ್ಯ ಸ್ವಾಮೀ ತ್ವಮಿಮೇಮಾನಿ ಭುವನಾನಿ ಭೂತಜಾತಾನಿ ವೀಯಸೇ । ಗಚ್ಛಸಿ ॥ ವೀ ಗತ್ಯಾದಿಷು ॥ ಕಿಂ ಕುರ್ವನ್ । ಹರಿತೋ ಹರಿತವರ್ಣಾಃ ಸುಪರ್ಣ್ಯಃ ಸುಪತನಾಶ್ಚಾಶ್ವಾ ರಥೇ ಯುಜಾನೋ ಯೋಜಯನ್ । ತಾಃ ಸುಪರ್ಣ್ಯಸ್ತೇ ತವ ಸಂಬಂಧಿನ್ಯೋ ಮಧುಮನ್ಮಾಧುರ್ಯೋಪೇತಂ ಘೃತಂ ದೀಪ್ತಂ ಪಯ ಉದಕಂ ಕ್ಷರಂತು । ಹೇ ಸೋಮ ತವ ವ್ರತೇ ಕರ್ಮಣಿ ತಿಷ್ಠಂತು ಕೃಷ್ಟಯೋ ಮನುಷ್ಯಾಃ ಸರ್ವೇ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮನೇ । **ಈಶಾನಃ**—ಪ್ರಭುವಾದ ನೀನು । **ಹರಿತಃ**—ಪಚ್ಚೆವರ್ಣವುಳ್ಳವೂ । **ಸುಪರ್ಣ್ಯಃ**—ವೇಗವಾದ ಗಮನವುಳ್ಳವೂ ಆದ ಅಶ್ವಗಳನ್ನು । **ಯುಜಾನಃ**—ರಥಕ್ಕೆ ಸೇರಿಸಿಕೊಂಡು । **ಇಮಾ ಭುವನಾನಿ**—ಈ ಸಕಲ ಲೋಕಗಳಲ್ಲಿಯೂ । **ವೀಯಸೇ**—ಸಂಚರಿಸುತ್ತೀಯೆ । **ತಾಃ**—ಅದೇ ಅಶ್ವಗಳು । **ತೇ**—ನಿನ್ನ । **ಮಧುಮತ್**—ಮಾಧುರ್ಯಯುಕ್ತವೂ । **ಘೃತಂ**—ಪ್ರಕಾಶಕವೂ ಆದ । **ಪಯಃ**—ಉದಕವನ್ನು । **ಕ್ಷರಂತು**—ಪ್ರವಹಿಸುವಂತೆ ಮಾಡಲಿ । **ಸೋಮ**—ಎಲೈ ಸೋಮದೇವನೇ । **ಕೃಷ್ಟಯಃ**—ಸಕಲ ಮಾನವರೂ । **ತವ ವ್ರತೇ**—ನಿನ್ನ ಪೂಜಾಕರ್ಮದಲ್ಲಿ । **ತಿಷ್ಠಂತು**—ನಿರತರಾಗಲಿ.

॥ ಭಾವಾರ್ಥ ॥

ಎಲೈ ಸೋಮನೇ, ಪ್ರಭುವಾದ ನೀನು ಪಚ್ಚೆವರ್ಣವುಳ್ಳವೂ, ವೇಗವಾದ ಗಮನವುಳ್ಳವೂ ಆದ ಅಶ್ವಗಳನ್ನು ರಥಕ್ಕೆ ಸೇರಿಸಿಕೊಂಡು ಈ ಸಕಲಲೋಕಗಳಲ್ಲಿಯೂ ಸಂಚರಿಸುತ್ತೀಯೆ. ಅದೇ ಅಶ್ವಗಳು ನಿನ್ನ ಮಾಧುರ್ಯಯುಕ್ತವೂ, ಪ್ರಕಾಶಕವೂ ಆದ ಉದಕವನ್ನು (ರಸವನ್ನು) ಪ್ರವಹಿಸುವಂತೆ ಮಾಡಲಿ. ಎಲೈ ಸೋಮದೇವನೇ, ಸಕಲಮಾನವರೂ ನಿನ್ನ ಪೂಜಾಕರ್ಮದಲ್ಲಿ ನಿರತರಾಗಲಿ.

## English Translation

Iudu, who are the lord, you go (through) these worlds, harnessing (to your car) your swift-moving steeds ; let them dispense the sweet-flavoured shining liquor, may all men be present, Soma, at your worship.

|| ಸಂಹಿತಾಪಾಠಃ ||

**ತ್ವಂ ನೃಚಕ್ಷಾ ಅಸಿ ಸೋಮ ವಿಶ್ವತಃ ಪವಮಾನ ವೃಷಭ ತಾ ವಿ ಧಾವಸಿ ।**
**ಸ ನಃ ಪವಸ್ವ ವಸುಮದ್ಧಿರಣ್ಯವದ್ವಯಂ ಸ್ಯಾಮ ಭುವನೇಷು ಜೀವಸೇ ॥**

|| ಪದಪಾಠಃ ||

ತ್ವಂ । ನೃಽಚಕ್ಷಾಃ । ಅಸಿ । ಸೋಮ । ವಿಶ್ವತಃ । ಪವಮಾನ । ವೃಷಭ । ತಾ । ವಿ । ಧಾವಸಿ ।
ಸಃ । ನಃ । ಪವಸ್ವ । ವಸುಽಮತ್ । ಹಿರಣ್ಯಽವತ್ । ವಯಂ । ಸ್ಯಾಮ । ಭುವನೇಷು । ಜೀವಸೇ ॥ ೩೮ ॥

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ವಿಶ್ವತಃ ಸರ್ವತಃ ಸರ್ವೇಷು ಭುವನೇಷು ನೃಚಕ್ಷಾ ನೃಣಾಂ ದ್ರಷ್ಟಾಸಿ । ಭವಸಿ । ಹೇ ಪವಮಾನ ವೃಷಭಾಪಾಂ ವರ್ಷಕ ತಾ ಅಪೋ ವಿ ಧಾವಸಿ । ವಿವಿಧಂ ಗಚ್ಛಸಿ । ಸ ತ್ವಂ ನೋಽಸ್ಮಾಕಂ ಪವಸ್ವ । ಕ್ಷರ । ಕಿಂ । ವಸುಮದ್ಬಹುಭಿರ್ವಸುಭಿರ್ವಾಸಕೈರ್ಗವಾದಿದ್ರವ್ಯೈರ್ಯುಕ್ತಂ ತಥಾ ಹಿರಣ್ಯವದ್ಬಹುಭಿರ್ಹಿರಣ್ಯೈರ್ಯುಕ್ತಂ ಧನಂ । ವಯಂ ಚ ವಸುಭಿರ್ಹಿರಣ್ಯೈರ್ಯುಕ್ತಾ ಭುವನೇಷು ಲೋಕೇಷು ಜೀವಸೇ ಜೀವಿತುಂ ಪ್ರಭವಃ ಸ್ಯಾಮ । ಭವೇಮ ॥

|| ಪ್ರತಿಪದಾರ್ಥ ||

**ವೃಷಭ**—ವೃಷ್ಟಿಕಾರಕನಾದ । **ಸೋಮ**—ಎಲೈ ಸೋಮದೇವನೇ । **ತ್ವಂ**—ನೀನು । **ವಿಶ್ವತಃ**—ಸಕಲಪ್ರದೇಶಗಳಿಂದಲೂ । **ನೃಚಕ್ಷಾಃ**—ಮಾನವರನ್ನು ನೋಡಬಲ್ಲವನಾಗಿ । **ಅಸಿ**—ಆಗಿದ್ದೀಯೆ । **ಪವಮಾನ**—ಪವಮಾನ ಸಂಜ್ಞಕನಾದ ಎಲೈ ಸೋಮನೇ । **ತಾಃ**—ಆ ಉದಕಗಳನ್ನು । **ವಿ ಧಾವಸಿ**—ನೀನು ಅನೇಕ ವಿಧಗಳಲ್ಲಿ ಪ್ರವಹಿಸುವಂತೆ ಮಾಡುತ್ತೀಯೆ । **ಸಃ**—ನೀನು । **ನಃ**—ನಮಗೆ । **ವಸುಮತ್**—ಗವಾದಿಸಂಪದ್ಯುಕ್ತವೂ । **ಹಿರಣ್ಯವತ್**—ಸುವರ್ಣಮಯವೂ ಆದ ಧನವನ್ನು । **ಪವಸ್ವ**—ಒದಗಿಸು । **ವಯಂ**—ನಾವು । **ಭುವನೇಷು**—ಲೋಕಗಳಲ್ಲಿ । **ಜೀವಸೇ**—ಜೀವಿಸಲು । **ಸ್ಯಾಮ**—ಶಕ್ತರಾಗೋಣ.

|| ಭಾವಾರ್ಥ ||

ವೃಷ್ಟಿಕಾರಕನಾದ ಎಲೈ ಸೋಮದೇವನೇ, ನೀನು ಸಕಲಪ್ರದೇಶಗಳಿಂದಲೂ ಮಾನವರನ್ನು ನೋಡಬಲ್ಲವನಾಗಿದ್ದೀಯೆ. ಪವಮಾನಸಂಜ್ಞಕನಾದ ಎಲೈ ಸೋಮನೇ, ಉದಕಗಳನ್ನು ನೀನು ಅನೇಕವಿಧದಲ್ಲಿ ಪ್ರವಹಿಸು

ವಂತೆ ಮಾಡುತ್ತೀಯೆ. ನಮಗೆ ಗವಾದಿಗಳಿಂದ ಕೂಡಿದುದೂ, ಹಿರಣ್ಯಮಯವೂ ಆದ ಧನವನ್ನು ಒದಗಿಸು. ನಾವು ಲೋಕದಲ್ಲಿ ದೀರ್ಘಕಾಲ ಜೀವಿಸುವಂತೆ ಅನುಗ್ರಹಿಸು.

## English Translation.

You, Soma, are everywhere; the contemplator of men; you, Pavamana, the showerer, hasten to these (waters); pour forth upon us (wealth), comprising various treasures and gold ; may we be (able) to live in the worlds.

|| ಸಂಹಿತಾಪಾಠಃ ||

ಗೋವಿತ್ಪವಸ್ವ ವಸುವಿದ್ಧಿರಣ್ಯವಿದ್ರೇತೋಧಾ ಇಂದೋ ಭುವನೇಷ್ವರ್ಪಿತಃ |
ತ್ವಂ ಸುವೀರೋ ಅಸಿ ಸೋಮ ವಿಶ್ವವಿತ್ತಂ ತ್ವಾ ವಿಪ್ರಾ ಉಪ ಗಿರೇಮ
ಆಸತೇ || ೩೯ ||

|| ಪದಪಾಠಃ ||

ಗೋऽವಿತ್ । ಪವಸ್ವ । ವಸುऽವಿತ್ । ಹಿರಣ್ಯऽವಿತ್ । ರೇತಃऽಧಾಃ । ಇಂದೋ ಇತಿ । ಭುವನೇಷು । ಅರ್ಪಿತಃ ।
ತ್ವಂ । ಸುऽವೀರಃ । ಅಸಿ । ಸೋಮ । ವಿಶ್ವऽವಿತ್ । ತಂ । ತ್ವಾ । ವಿಪ್ರಾಃ । ಉಪ । ಗಿರಾ । ಇಮೇ । ಆಸತೇ || ೩೯ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ಪವಸ್ವ । ಕ್ಷರ । ಕೀದೃಶಃ । ಗೋವಿದ್ಗವಾಂ ಲಂಭಕಃ ವಸುವಿದ್ಧನಸ್ಯ ಲಂಭಕಃ ಹಿರಣ್ಯವಿದ್ಧಿರಣ್ಯಸ್ಯ ಲಂಭಕಃ ರೇತೋಧಾಃ । ರೇತ ಉದಕಂ । ತಸ್ಯ ಧಾತೌಷಧೀನಾಂ । ಯದ್ವಾ । ರೇತಃ ಪ್ರಜನನಸಾಮರ್ಥ್ಯಂ । ತಸ್ಯ ಧಾರಯಿತಾ । ಭುವನೇಷೂದಕೇಷ್ವರ್ಪಿತಃ । ಹೇ ಇಂದೋ ಸೋಮ ತ್ವಂ ಸುವೀರಃ ಸುವೀರ್ಯೋऽಸಿ । ಭವಸಿ । ವಿಶ್ವವಿತ್ಸರ್ವಸ್ಯ ವೇತ್ತಾ । ತಂ ತ್ವಾ ತ್ವಾಮಿಮೇ ವಿಪ್ರಾ ಗಿರಾ ಸ್ತುತ್ಯೋಪಾಸತೇ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮನೇ । ಗೋವಿತ್—ಗೋವುಗಳನ್ನು ಹೊಂದಿಸುವವನೂ । ವಸುವಿತ್—ಧನಪ್ರಾಪಕನೂ । ಹಿರಣ್ಯವಿತ್— ಸುವರ್ಣವನ್ನು ತುಂಬುವವನೂ । ರೇತೋಧಾಃ—ಉದಕವನ್ನು ಕೊಡು

ವವನೂ ಆದ ನೀನು । ಪವಸ್ವ—ಸ್ರವಿಸು । ಭುವನೇಷು—ಉದಕಗಳಲ್ಲಿ । ಅರ್ಪಿತಃ— ಅರ್ಪಿತನಾದ ನೀನು । ಸುವೀರಃ—ಉತ್ತಮವಾದ ಶಕ್ತಿಯುಳ್ಳವನಾಗಿ । ಅಸಿ—ಆಗಿದ್ದೀಯೆ । ವಿಶ್ವವಿತ್—ನೀನು ಸಕಲವನ್ನೂ ತಿಳಿದವನಾಗಿದ್ದೀಯೆ । ತಂ—ಅಂತಹ । ತ್ವಾ—ನಿನ್ನನ್ನು । ಇಮೇ ವಿಪ್ರಾಃ—ಈ ಮೇಧಾವಿಗಳು । ಗಿರಾ—ಸ್ತುತಿಯಿಂದ । ಉಪ ಆಸತೇ— ಪೂಜಿಸುತ್ತಾರೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಗೋವುಗಳನ್ನೂ, ಹಿರಣ್ಯಾದಿ ಸಂಪತ್ತನ್ನೂ ಒದಗಿಸುವ ನೀನು ಪ್ರವಾಹರೂಪದಲ್ಲಿ ಹರಿ. ಉದಕಗಳಲ್ಲಿ ಅರ್ಪಿತನಾದ ನೀನು ಉತ್ತಮವಾದ ಶಕ್ತಿಯುಳ್ಳವನಾಗಿದ್ದೀಯೆ. ನೀನು ಸರ್ವಜ್ಞನು. ನಿನ್ನನ್ನು ಸ್ತುತಿಕರ್ತರು ಸ್ತುತಿಯಿಂದ ಪೂಜಿಸುತ್ತಾರೆ.

English Translation

Flow, Indu, who are the winner of cattle, wealth, and gold, the fructifier, placed upon the waters ; you, Soma, are a hero, omniscient ; you, these sages approach with praise.

॥ ಸಂಹಿತಾಪಾಠಃ ॥

ಉನ್ಮಧ್ವ ಊರ್ಮಿರ್ವನನಾ ಅತಿಷ್ಠಿಪದಪೋ ವಸಾನೋ ಮಹಿಷೋ ವಿ ಗಾಹತೇ ।
ರಾಜಾ ಪವಿತ್ರರಥೋ ವಾಜಮಾರುಹತ್ಸಹಸ್ರಭೃಷ್ಟಿರ್ಜಯತಿ ಶ್ರವೋ ಬೃಹತ್ ॥ ೪೦ ॥

॥ ಪದಪಾಠಃ ॥

ಉತ್ । ಮಧ್ವಃ । ಊರ್ಮಿಃ । ವನನಾಃ । ಅತಿಷ್ಠಿಪತ್ । ಅಪಃ । ವಸಾನಃ । ಮಹಿಷಃ । ವಿ । ಗಾಹತೇ ।
ರಾಜಾ । ಪವಿತ್ರ್ಽರಥಃ । ವಾಜಂ । ಆ । ಅರುಹತ್ । ಸಹಸ್ರ್ಽಭೃಷ್ಟಿಃ । ಜಯತಿ । ಶ್ರವಃ । ಬೃಹತ್ ॥

॥ ಸಾಯಣಭಾಷ್ಯಂ ॥

ಮಧ್ವೋ ಮಧುರಸ್ಯೋರ್ಮಿರ್ ರಸೋ ವನನಾ ವನನೀಯಾ ವಾಚ ಉದತಿಷ್ಠಿಪತ್ । ಉತ್ಥಾಪಯತಿ । ಸೋಮಾಭಿಷವಕಾಲೇ ಸ್ತುತಿವಾಚಃ ಪ್ರವೃತ್ತೇಃ । ಅಪೋ ವಸಾನ ಆಚ್ಛಾದಯನ್ ಮಹಿಷೋ ಮಹಾನ್ ವಿ ಗಾಹತೇ । ಪ್ರವಿಶತಿ ಕಲಶಂ । ರಾಜಾ ಸೋಮಃ ಪವಿತ್ರರಥಃ । ದಶಾಪವಿತ್ರ-

**ನೇವ ರಥೋ ಯಸ್ಯ ಸ ತಥೋಕ್ತಃ । ತಾದೃಶಃ ಸೋಮೋ ವಾಜಂ ಸಂಗ್ರಾಮಮಾರುಹತ್ । ಆರೋಹತಿ । ಸಹಸ್ರಭೃಷ್ಟಿರ್ಬಹುಭ್ರಂಶೋಽಪರಿಮಿತಗಮನೋ ಬೃಹಚ್ಛ್ರವೋ ಮಹದನ್ನಂ ಜಯತ್ಯಸ್ಮದರ್ಥಂ ॥**

॥ ಪ್ರತಿಪದಾರ್ಥ ॥

**ಮಧ್ವಃ**— ಮಧುರವಾದ ಸೋಮದ । **ಊರ್ಮಿಃ**—ಅಲೆಯರೂಪದ ರಸವು । **ವನನಾಃ**— ಆಕರ್ಷಕವಾದ ಶಬ್ದವನ್ನು । **ಉದತಿಷ್ಠಿಪತ್**—ಉತ್ಪನ್ನ ಮಾಡುತ್ತದೆ । **ಅಪಃ**— ಉದಕಗಳನ್ನು । **ವಸಾನಃ**—ಧರಿಸಿಕೊಂಡು । **ಮಹಿಷಃ**—ಮಹಾತ್ಮನಾದ ಸೋಮನು । **ವಿ ಗಾಹತೇ**— ಕಲಶದೊಳಕ್ಕೆ ಪ್ರವೇಶಿಸುತ್ತಾನೆ । **ಪವಿತ್ರರಥಃ**— ಉತ್ತಮವಾದ ರಥವುಳ್ಳವನೂ । **ರಾಜಾ**— ಪ್ರಭುವೂ ಆದ ಸೋಮನು । **ವಾಜಂ**—ಸಂಗ್ರಾಮಭೂಮಿಯನ್ನು । **ಆರುಹತ್**—ಹತ್ತುತ್ತಾನೆ । **ಸಹಸ್ರಭೃಷ್ಟಿಃ**—ಅನೇಕ ಆಯುಧಗಳುಳ್ಳವನಾಗಿ । **ಬೃಹತ್**— ಅಧಿಕವಾದ । **ಶ್ರವಃ**— ಅನ್ನವನ್ನು । **ಜಯತಿ**—ನಮಗಾಗಿ ಒದಗಿಸಿಕೊಡುತ್ತಾನೆ.

॥ ಭಾವಾರ್ಥ ॥

ಮಧುರವಾದ ಸೋಮದ ಅಲೆಯರೂಪದ ರಸವು ಆಕರ್ಷಕವಾದ ಶಬ್ದವನ್ನು ಉತ್ಪನ್ನಮಾಡುತ್ತದೆ. ಉದಕಗಳನ್ನು ಧರಿಸಿಕೊಂಡು ಮಹಾತ್ಮನಾದ ಸೋಮನು ಕಲಶದೊಳಕ್ಕೆ ಪ್ರವೇಶಿಸುತ್ತಾನೆ. ಉತ್ತಮವಾದ ರಥವುಳ್ಳವನೂ, ಪ್ರಭುವೂ ಆದ ಸೋಮನು ಸಂಗ್ರಾಮಭೂಮಿಯನ್ನು ಹತ್ತುತ್ತಾನೆ. ಅನೇಕ ಆಯುಧಗಳುಳ್ಳವನಾಗಿ ನಮಗಾಗಿ ಅಧಿಕವಾದ ಅನ್ನವನ್ನು ಒದಗಿಸಿಕೊಡುತ್ತಾನೆ.

English Translation

The wave of the sweet-flavoured (Soma) excites voices (of praise); clothed in water the mighty one plunges (into the pitcher): the king whose chariot is the filter mounts for the conflict, and, armed with a thousand weapons, wins ample sustenance (for us).

। ಸಂಹಿತಾಪಾಠಃ ॥

**ಸ ಭಂದನಾ ಉದಿಯರ್ತಿ ಪ್ರಜಾವತೀರ್ವಿಶ್ವಾಯುರ್ವಿಶ್ವಾಃ ಸುಭರಾ ಅಹರ್ದಿವಿ ।**

**ಬ್ರಹ್ಮ ಪ್ರಜಾವದ್ರಯಿಮಶ್ವಪಸ್ತ್ಯಂ ಪೀತ ಇಂದವಿಂದ್ರಮಸ್ಮಭ್ಯಂ ಯಾಚತಾತ್ ॥ ೪೧ ॥**

|| ಪದಪಾಠಃ ||

ಸಃ । ಭಂದನಾಃ । ಉತ್ । ಇಯರ್ತಿ । ಪ್ರಜಾಽವತೀಃ । ವಿಶ್ವಽಆಯುಃ । ವಿಶ್ವಾಃ । ಸುಽಭರಾಃ । ಅಹಃಽದಿವಿ । ಬ್ರಹ್ಮ । ಪ್ರಜಾಽವತ್ । ರಯಿಂ । ಅಶ್ವಽಪಸ್ತ್ಯಂ । ಪೀತಃ । ಇಂದೋ ಇತಿ । ಇಂದ್ರಂ । ಅಸ್ಮಭ್ಯಂ । ಯಾಚತಾತ್ ॥ ೪೧ ॥

|| ಸಾಯಣಭಾಷ್ಯಂ ||

**ಸ ಸೋಮೋ ವಿಶ್ವಾಯುಃ ಸರ್ವಸ್ಯ ಗಂತಾ ಸೋಮಃ ಪ್ರಜಾವತೀಃ ಪ್ರಜಾರೂಪಫಲದಾತ್ರೀಃ ಸುಭರಾಃ ಸುಷ್ಠು ಹ್ರಿಯಮಾಣಾ ವಿಶ್ವಾಃ ಸರ್ವಾ ಭಂದನಾಃ ಸ್ತುತೀರುದಿಯರ್ತಿ । ಉತ್ಕೃಷ್ಟಂ ಪ್ರೇರಯತಿ । ಕಸ್ಮಿನ್ಕಾಲೇ ಉಚ್ಯತೇ । ಅಹರ್ದಿವ್ಯಹೋರಾತ್ರಯೋಃಶ್ಚ । ಅಥ ಪ್ರತ್ಯಕ್ಷಕೃತಃ । ಬ್ರಹ್ಮ ಪರಿವೃಢಂ ಕರ್ಮ ಪ್ರಜಾವತ್ ಪ್ರಜಾಭಿರ್ಯುಕ್ತಂ । ಪ್ರಜಾಫಲಕಮಿತ್ಯರ್ಥಃ । ಯದ್ವಾ । ಅನ್ನಂ ತಚ್ಚ ಪ್ರಜಾವತ್ ಪ್ರಜಾದ್ಯುಪೇತಂ । ತಥಾ ರಯಿಂ ಧನಂ । ಕೀದೃಶಂ । ಅಶ್ವಪಸ್ತ್ಯಂ ವ್ಯಾಪ್ತಗೃಹಂ । ತದುಭಯಂ ಹೇ ಇಂದೋ ದೀಪ್ತ ಸೋಮ ಪೀತ ಇಂದ್ರೇಣ ಪೀತಸ್ತ್ವಂ ತಮೇವೇಂದ್ರಮಸ್ಮಭ್ಯಂ ಯಾಚತಾತ್ । ಯಾಚಸ್ವ ॥**

|| ಪ್ರತಿಪದಾರ್ಥ ||

**ವಿಶ್ವಾಯುಃ**—ಸರ್ವಗಾಮಿಯಾದ । **ಸಃ**—ಸೋಮದೇವನು । **ಅಹರ್ದಿವಿ**—ಅಹೋರಾತ್ರಿಗಳಲ್ಲೆಲ್ಲ । **ಪ್ರಜಾವತೀಃ**—ಪುತ್ರಾದಿ ಫಲಗಳನ್ನು ಕೊಡುವುದೂ । **ಸುಭರಾಃ**—ಉತ್ತಮವಾಗಿ ಅರ್ಪಿತವಾಗುವುವೂ ಆದ । **ವಿಶ್ವಾಃ ಭಂದನಾಃ**—ಸಕಲ ಸ್ತುತಿಗಳನ್ನೂ । **ಉದಿಯರ್ತಿ**—ಪ್ರೇರಿಸುತ್ತಾನೆ । **ಇಂದೋ**—ಎಲೈ ಸೋಮ ದೇವನೇ । **ಪೀತಃ**—ಇಂದ್ರನಿಂದ ಪಾನಮಾಡಲ್ಪಟ್ಟ ನೀನು । **ಅಸ್ಮಭ್ಯಂ**—ನಮಗೆ । **ಇಂದ್ರಂ**—ಇಂದ್ರನಿಂದ । **ಪ್ರಜಾವತ್**—ಪ್ರಜಾಯುಕ್ತವೂ । **ಬ್ರಹ್ಮ**—ಪ್ರಭೂತವೂ ಆದ ಅನ್ನವನ್ನೂ । **ಅಶ್ವಪಸ್ತ್ಯಂ**—ವಿಸ್ತೃತವಾದ ಗೃಹವುಳ್ಳ । **ರಯಿಂ**—ಧನವನ್ನೂ । **ಯಾಚತಾಂ**—ಯಾಚಿಸು.

|| ಭಾವಾರ್ಥ ||

ಸರ್ವಗಾಮಿಯಾದ ಸೋಮದೇವನು ಅಹೋರಾತ್ರಿಗಳಲ್ಲೆಲ್ಲ ಪುತ್ರಾದಿಫಲಗಳನ್ನು ಪಡೆಯುವುದೂ, ಉತ್ತಮವಾಗಿ ಅರ್ಪಿತವಾಗುವುದೂ ಆದ ಸಕಲ ಸ್ತುತಿಗಳನ್ನೂ ಪ್ರೇರಿಸುತ್ತಾನೆ. ಎಲೈ ಸೋಮದೇವನೇ, ಇಂದ್ರನಿಂದ ಪಾನಮಾಡಲ್ಪಟ್ಟ ನೀನು ನಮಗಾಗಿ ಪ್ರಜಾಯುಕ್ತವೂ, ಪ್ರಭೂತವೂ ಇದ ಅನ್ನವನ್ನೂ, ವಿಸ್ತೃತವಾದ ಗೃಹವುಳ್ಳ ಧನವನ್ನೂ ಇಂದ್ರನಿಂದ ಯಾಚಿಸು.

## English Translation.

The all pervading (Soma) excites both day and night all praises easily borne, productive of prosperity ; Indu, when drunk, solicit Indra (to give) us food productive of progency and riches filling our homes.

ವಿಶೇಷ ವಿಷಯಗಳು

**ಭಂದನಾಃ**–**ಸ್ತುತೀಃ** । ಸ್ತುತಿಗಳನ್ನು ; ಯಾಸ್ಕರು **ಭಂದನಾ ಭಂದತೇಃ ಸ್ತುತಿಕರ್ಮಣಃ** ಎಂದು ಹೇಳಿದ್ದಾರೆ. ಸ್ತುತಿಸು ಎಂಬ ಅರ್ಥವುಳ್ಳ **ಭಂದತಿ** ಧಾತುವಿನಿಂದ **ಭಂದನಾಃ** ಎಂಬ ಶಬ್ದವು ನಿಷ್ಪನ್ನವಾಗಿದೆ. **ಭಂದನಾಃ** ಎಂದರೆ ಸ್ತುತಿಗಳು ಎಂದರ್ಥವು (ನಿ. ೫–೨).

॥ ಸಂಹಿತಾಪಾಠಃ ॥

**ಸೋ ಅಗ್ರೇ ಅಹ್ನಾಂ ಹರಿರ್ಹರ್ಯತೋ ಮದಃ ಪ್ರ ಚೇತಸಾ ಚೇತಯತೇ**
**ಅನು ದ್ಯುಭಿಃ ।**
**ದ್ವಾ ಜನಾ ಯಾತಯನ್ನಂತರೀಯತೇ ನರಾ ಚ ಶಂಸಂ ದೈವ್ಯಂ ಚ ಧರ್ತರಿ ॥**

॥ ಪದಪಾಠಃ ॥

ಸಃ । ಅಗ್ರೇ । ಅಹ್ನಾಂ । ಹರಿಃ । ಹರ್ಯತಃ । ಮದಃ । ಪ್ರ । ಚೇತಸಾ । ಚೇತಯತೇ । ಅನು । ದ್ಯುಽಭಿಃ ।

ದ್ವಾ । ಜನಾ । ಯಾತಯನ್ । ಅಂತಃ । ಈಯತೇ । ನರಾಶಂಸಂ । ಚ । ದೈವ್ಯಂ । ಚ । ಧರ್ತರಿ ॥ ೪೨ ॥

॥ ಸಾಯಣಭಾಷ್ಯಂ ॥

ಸ ಸೋಮೋಗ್ರೇ ಸರ್ವೇಷಾಂ ಸಂಮುಖಂ ಚೇತಸಾ ಪ್ರಾಣಿನಾಂ ಚೇತನೇನ ಸಹಾಹ್ನಾಂ ದ್ಯುಭಿರ್ದೀಪ್ತಿಭಿರನು ಪ್ರ ಚೇತಯತೇ । ಅನುಪ್ರಜ್ಞಾಯತೇ । ಯದ್ವಾ । ಅಹ್ನಾಮಗ್ರೇಽಗ್ರಭಾಗೇ । ಪ್ರಾತರಿತ್ಯರ್ಥಃ । ಸ್ತೋತ್ರೄಣಾಂ ಚೇತಸಾ ಪ್ರಜ್ಞಾನೇನ ದ್ಯುಭಿರ್ದೀಪ್ತಾಭಿಃ ಸ್ತುತಿಭಿಶ್ಚಾನು ಪ್ರ ಚೇತಯತೇ । ಕೀದೃಶಃ ಸಃ । ಹರಿರ್ಹರಿತವರ್ಣೋ ಹರ್ಯತಃ ಕಾಂತೋ ಮದೋ ಮದಕರಃ । ಕಿಂಚ ದ್ವಾ ಜನಾ ದ್ವೌ ಜನೌ ಸ್ತೋತಾರಂ ಯಷ್ಟಾರಂ ಚ ಯಾತಯನ್ ಪ್ರಾಪಯನ್ ಸ್ವವಿಹಿತೇನ ಕರ್ಮಣಾ । ಲೌಕಿಕವೈದಿಕೌ ದ್ವೌ ಜನೌ ದ್ರಷ್ಟವ್ಯೌ । ಏವಂ ಕುರ್ವನ್ನಂತರ್ದ್ಯಾವಾಪೃಥಿವ್ಯೋರ್ಮಧ್ಯ ಈಯತೇ । ಗಚ್ಛತಿ ॥ ಈಙ್ ಗತೌ ॥ ಕಿಂ ಕುರ್ವನ್ । ನರಾಶಂಸಂ ನೃಭಿಃ ಶಂಸನೀಯಂ । ಮಾನುಷಮಿತ್ಯರ್ಥಃ । ದೈವ್ಯಂ ಚ ದಿವಿ ಭವಮುಭಯವಿಧಂ ಧನಂ ಧರ್ತರಿ ಧಾರಕೇ ಯಜಮಾನೇ ಪ್ರೇರಯನ್ನಿತಿ ಶೇಷಃ ॥

॥ ಪ್ರತಿಪದಾರ್ಥ ॥

**ಸಃ**—ಸೋಮದೇವನು । **ಅಗ್ರೇ**—ಎಲ್ಲರಿಗೂ ಗೋಚರವಾಗುನಂತೆ । **ಚೇತಸಾ** – ತನ್ನ ಉತ್ತಮವಾದ ಜ್ಞಾನದೊಂದಿಗೆ । **ಅಹ್ನಾಂ**—ಅಹಸ್ಸುಗಳ । **ದ್ಯುಭಿಃ**—ಕಾಂತಿಗಳೊಂದಿಗೆ । **ಅನು ಪ್ರ ಚೇತಯತೇ**—ತಿಳಿಯಲ್ಪಡುತ್ತಾನೆ. । **ಹರಿಃ**—ಹಚ್ಚಿವರ್ಣವುಳ್ಳವನೂ । **ಹರ್ಯತಃ** - ಆಕರ್ಷಕನೂ । **ಮದಃ**— ಹರ್ಷಕಾರಕನೂ ಆದ ಸೋಮನು । **ದ್ವಾ ಜನಾ**— ಯಜಮಾನ ಮತ್ತು ಹೋತೃಗಳನ್ನು । **ಯಾತಯನ್**—ಕರ್ಮ

ಫಲವನ್ನು ಹೊಂದುವಂತೆ ಮಾಡುತ್ತಲೂ । **ನರಾಶಂಸಂ**— ಮಾನವರಿಗೆ ಹಿತಕರವಾದ ಧನವನ್ನೂ । **ದೈವ್ಯಂ ಚ**— ದ್ಯುಲೋಕದ ಧನವನ್ನೂ । **ಧರ್ತರಿ**— ಯಜಮಾನನಲ್ಲಿ ಸ್ಥಾಪಿಸುತ್ತಲೂ । **ಅಂತಃ**— ದ್ಯಾವಾಪೃಥಿವಿಗಳೆರಡರ ನಡುವೆಯೂ । **ಈಯತೇ**— ಸಂಚರಿಸುತ್ತಾನೆ.

॥ ಭಾವಾರ್ಥ ॥

ಸೋಮದೇವನು ಎಲ್ಲರಿಗೂ ಗೋಚರವಾಗುವಂತೆ ತನ್ನ ಉತ್ತಮವಾದ ಜ್ಞಾನದೊಂದಿಗೆ ಅಹಸ್ಸುಗಳ ಕಾಂತಿಗಳೊಂದಿಗೆ ತಿಳಿಯಲ್ಪಡುತ್ತಾನೆ. ಪಚ್ಚೆವರ್ಣವುಳ್ಳವನೂ, ಆಕರ್ಷಕನೂ, ಹರ್ಷಕಾರಕನೂ ಆದ ಸೋಮನು ಯಜಮಾನ ಮತ್ತು ಹೋತೃಗಳಿಗೆ ಕರ್ಮಫಲವನ್ನೊದಗಿಸುತ್ತಲೂ, ಯಜಮಾನನಲ್ಲಿ ಪಾರ್ಥಿವ ಮತ್ತು ದ್ಯುಲೋಕದ ಸಂಪತ್ತುಗಳನ್ನು ಸ್ಥಾಪಿಸುತ್ತಲೂ ದ್ಯಾವಾಪೃಥಿವಿಗಳೆರಡರ ನಡುವೆಯೂ ಸಂಚರಿಸುತ್ತಾನೆ.

## English Translation

At the beginning of the day the green-tinted delightful exhilarating (Soma) is recognized by the intelligence (of the praisers and by their praises); approaching the two men he passes in the midst (of heaven and earth, bestowing) upon the upholder (of the rite) both human and divine (riches).

॥ ಸಂಹಿತಾಪಾಠಃ ॥

ಅಂಜತೇ ವ್ಯಂಜತೇ ಸಮಂಜತೇ ಕ್ರತುಂ ರಿಹಂತಿ ಮಧುನಾಭ್ಯಂಜತೇ ।
ಸಿಂಧೋರುಚ್ಛ್ವಾಸೇ ಪತಯಂತಮುಕ್ಷಣಂ ಹಿರಣ್ಯಪಾವಾಃ ಪಶುಮಾಸು
ಗೃಭ್ಣತೇ ॥ ೪೩ ॥

॥ ಪದಪಾಠಃ ॥

ಅಂಜತೇ । ವಿ । ಅಂಜತೇ । ಸಂ । ಅಂಜತೇ । ಕ್ರತುಂ । ರಿಹಂತಿ । ಮಧುನಾ । ಅಭಿ । ಅಂಜತೇ ।
ಸಿಂಧೋಃ । ಉತ್ಽಶ್ವಾಸೇ । ಪತಯಂತಂ । ಉಕ್ಷಣಂ । ಹಿರಣ್ಯಽಪಾವಾಃ । ಪಶುಂ । ಆಸು । ಗೃಭ್ಣತೇ ॥

॥ ಸಾಯಣಭಾಷ್ಯಂ ॥

ಸೋಮಮೃತ್ವಿಜೋಽಂಜತೇ ಗೋಭಿಃ । ತಥಾ ವ್ಯಂಜತೇ । ವಿವಿಧಮಂಜಂತಿ । ಸಮಂಜತೇ । ಸಮ್ಯಗಂಜಂತಿ । ಸ್ತುತ್ಯರ್ಥತ್ವಾದಪುನರುಕ್ತಿಃ । ತಥಾ ಕ್ರತುಂ ಬಲಕರ್ತಾರಂ ರಿಹಂತಿ । ಲಿಹಂತಿ । ಆಸ್ವಾದಯಂತಿ ದೇವಾಃ । ತಥಾಪುನರ್ಮಧುನಾ ಗವ್ಯೇನಾಭ್ಯಂಜತೇ । ತಮೇವ ಸೋಮಂ ಸಿಂಧೋರುದಕಸ್ಯ ರಸಸ್ಯಾಧಾರಭೂತ ಉಚ್ಛ್ವಾಸ ಉಚ್ಛ್ರಿತೇ ದೇಶೇ ಪತಯಂತಂ ಗಚ್ಛಂತಂ ॥ ಪತ್ಲೃ ಗತಾವಿತ್ಯಸ್ಮಾತ್ಸ್ವಾರ್ಥೇ ಣಿಚಿ ವೃದ್ಧ್ಯಭಾವಶ್ಛಾಂದಸಃ ॥ ಉಕ್ಷಣಂ ಸೇಕ್ತಾರಂ ಹಿರಣ್ಯಪಾವಾ

ಹಿರಣ್ಯೇನ ಪುನಂತಃ ಪೇಶುಂ ಪ್ರಷ್ಟಾರಂ । ಪೇಶುಃ ಪೇಶ್ಯತೇರಿತಿ ನಿರುಕ್ತಂ । ೩-೧೬ । ಆಸು ವಸತೀ-ವರೀಷು ಗೃಭ್ಣತೇ । ಗೃಹ್ಣಂತಿ ॥

॥ ಪ್ರತಿಪದಾರ್ಥ ॥

**ಅಂಜತೇ**— ಋತ್ವಿಕ್ಕುಗಳು ಸೋಮವನ್ನು ಕ್ಷೀರಗಳೊಡನೆ ಸೇರಿಸುತ್ತಾರೆ । **ವ್ಯಂಜತೇ**— ಅಲಂಕರಿಸುತ್ತಾರೆ । **ಸಮಂಜತೇ**—ಸಂಸ್ಕರಿಸುತ್ತಾರೆ । **ಕ್ರತುಂ**—ಶಕ್ತಿಯುತನಾದ ಸೋಮನನ್ನು । **ರಿಹಂತಿ**—ದೇವತೆಗಳು ಪಾನಮಾಡುತ್ತಾರೆ । **ಮಧುನಾ**—ಮಧುರವಾದ ಕ್ಷೀರದಿಂದ । **ಅಭಿವ್ಯಂಜತೇ**—ಒಂದಾಗಿ ಸೇರಿಸುತ್ತಾರೆ । **ಸಿಂಧೋಃ**—ರಸಕ್ಕೆ ಆಧಾರಭೂತವಾದ ಉದಕದ । **ಉಚ್ಛ್ವಾಸೇ**—ಉನ್ನತ ಪ್ರದೇಶದಲ್ಲಿ । **ಪತಯಂತಂ**—ಬೀಳುತ್ತಿರುವುದೂ । **ಉಕ್ಷಣಂ**—ಕಾಮವರ್ಷಕವಾದುದೂ । **ಪೇಶುಂ**—ದರ್ಶನಸಾಮರ್ಥ್ಯವುಳ್ಳದ್ದೂ ಆದ ಸೋಮರಸವನ್ನು । **ಹಿರಣ್ಯಪಾವಾಃ**—ಸುವರ್ಣದಿಂದ ಶುದ್ಧಿಪಡಿಸುವ ಋತ್ವಿಕ್ಕುಗಳು । **ಆಸು**—ವಸತೀವರಿ ಉದಕಗಳೊಡನೆ । **ಗೃಭ್ಣತೇ**—ಸೇರಿಸಲು ಹಿಡಿಯುತ್ತಾರೆ.

॥ ಭಾವಾರ್ಥ ॥

ಋತ್ವಿಕ್ಕುಗಳು ಸೋಮವನ್ನು ಕ್ಷೀರಗಳೊಡನೆ ಸೇರಿಸುತ್ತಾರೆ. ಅಲಂಕರಿಸಿ ಸಂಸ್ಕರಿಸುತ್ತಾರೆ. ಶಕ್ತಿಯುತನಾದ ಸೋಮನನ್ನು ದೇವತೆಗಳು ಪಾನಮಾಡುತ್ತಾರೆ. ಮಧುರವಾದ ಕ್ಷೀರದೊಡನೆ ಸೇರಿಸುತ್ತಾರೆ. ರಸಕ್ಕೆ ಆಧಾರಭೂತವಾದ ಉದಕದ ಉನ್ನತಪ್ರದೇಶದಲ್ಲಿ ಬೀಳುತ್ತಿರುವುದೂ, ಕಾಮವರ್ಷಕವಾದುದೂ, ದರ್ಶನಸಾಮರ್ಥ್ಯವುಳ್ಳದ್ದೂ ಆದ ಸೋಮರಸವನ್ನು ಸುವರ್ಣದಿಂದ ಶುದ್ಧಿಪಡಿಸುವ ಋತ್ವಿಕ್ಕುಗಳು ವಸತೀವರಿ ಉದಕಗಳೊಡನೆ ಸೇರಿಸಲು ಹಿಡಿಯುತ್ತಾರೆ.

## English Translation.

(The priests) smear and grease and anoint (the Soma with milk); (the gods) taste the invigorating (juice); they smear it o'er with sweet (milk). Purifying it with gold, they plunge it into those (waters), the sprinkler, the beholder, falling into the seething torrent.

॥ ಸಂಹಿತಾಪಾಠಃ ॥

ವಿಪಶ್ಚಿತೇ ಪವಮಾನಾಯ ಗಾಯತ ಮಹೀ ನ ಧಾರಾತ್ಯಂಧೋ ಅರ್ಷತಿ ।
ಅಹಿರ್ನ ಜೂರ್ಣಾಮತಿ ಸರ್ಪತಿ ತ್ವಚಮತ್ಯೋ ನ ಕ್ರೀಳನ್ನಸರದ್ವೃಷಾ
ಹರಿಃ ॥ ೪೪ ॥

॥ ಪದಪಾಠಃ ॥

ವಿಪಃऽಚಿತೇ । ಪವಮಾನಾಯ । ಗಾಯತ । ಮಹೀ । ನ । ಧಾರಾ । ಅತಿ । ಅಂಧಃ । ಅರ್ಷತಿ ।
ಅಹಿಃ । ನ । ಜೂರ್ಣಾಂ । ಅತಿ । ಸರ್ಪತಿ । ತ್ವಚಂ । ಅತ್ಯಃ । ನ । ಕ್ರೀಳನ್ । ಅಸರತ್ । ವೃಷಾ । ಹರಿಃ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ವಿಪಶ್ಚಿತೇ ಮೇಧಾವಿನೇ ಪವಮಾನಾಯ ಪೂಯಮಾನಾಯ ಗಾಯತ । ಸ್ತುತಿಂ ಕುರುತ । ಸ ಚ ವಿಪಶ್ಚಿತ್ಸೋಮೋ ಮಹೀ ನ ಧಾರಾ ಮಹತೀ ವರ್ಷಧಾರೇವಾಂಧೋಽನ್ನಂ ರಸಾತ್ಮಕಮತ್ಯರ್ಷತಿ । ಅಹಿರ್ನಾಹಿರಿವ ಜೂರ್ಣಾಂ ಜೀರ್ಣಾಂ ತ್ವಚಮತಿ ಸರ್ಪತಿ । ಅತಿಮುಂಚತಿ । ಅಭಿಷವಾದಿಕರ್ಮಣಾ ತ್ವಚಂ ಮುಂಚತೀತ್ಯರ್ಥಃ । ತದ್ವದತಿಸರ್ಪತಿ ಧಾರಾ ದಶಾಪವಿತ್ರಾತ್ । ಅತ್ಯೋ ನಾಶ್ವ ಇವ ಕ್ರೀಳನ್ನಸರತ್ । ಸರತಿ । ಗಚ್ಛತಿ ದ್ರೋಣಕಲಶಂ । ವೃಷಾ ವರ್ಷಕಃ ಕಾಮಾನಾಂ ಹರಿರ್ಹರಿತವರ್ಣೋ ರಸಃ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ವಿಪಶ್ಚಿತೇ**—ಪ್ರಜ್ಞಾಯುತನೂ । **ಪವಮಾನಾಯ** – ಶುದ್ಧಿಕಾರಕನೂ ಆದ ಸೋಮನನ್ನು । **ಗಾಯತ**—ಪ್ರಶಂಸಿಸಿರಿ । **ಮಹೀ**—ಮಹತ್ತಾದ । **ಧಾರಾ ನ**— ವೃಷ್ಟಿಧಾರೆಯಂತೆ । **ಅಂಧಃ**—ರಸಾತ್ಮಕವಾದ ಅನ್ನವನ್ನು । **ಅತ್ಯರ್ಷತಿ** —ಸೋಮನು ಒದಗಿಸುತ್ತಾನೆ । **ಅಹಿರ್ನ**—ಸರ್ಪದಂತೆ । **ಜೂರ್ಣಾಂ ತ್ವಚಂ**—ಹಳೆಯ ಚರ್ಮವನ್ನು । **ಅತಿಸರ್ಪತಿ** – ದಾಟಿಹೋಗುತ್ತಾನೆ । **ವೃಷಾ**—ಇಷ್ಟಾರ್ಥಪ್ರದನೂ । **ಹರಿಃ**— ಪಚ್ಚೆವರ್ಣವುಳ್ಳವನೂ ಆದ ಸೋಮನು । **ಅತ್ಯೋ ನ**—ಅಶ್ವದಂತೆ । **ಕ್ರೀಳನ್**— ಕ್ರೀಡಿಸುತ್ತ । **ಅಸರತ್**—ನಲಿಯುತ್ತಾನೆ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಪ್ರಜ್ಞಾಯುತನೂ, ಶುದ್ಧಿಕಾರಕನೂ ಆದ ಸೋಮನನ್ನು ಪ್ರಶಂಸಿಸಿರಿ. ಮಹತ್ತಾದ ವೃಷ್ಟಿಧಾರೆಯಂತೆ ರಸಾತ್ಮಕವಾದ ಅನ್ನವನ್ನು ಸೋಮನು ಒದಗಿಸುತ್ತಾನೆ. ಸರ್ಪದಂತೆ ಹಳೆಯ ಚರ್ಮವನ್ನು ದಾಟಿಹೋಗುತ್ತಾನೆ- ಇಷ್ಟಾರ್ಥಪ್ರದನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಅಶ್ವದಂತೆ ಕ್ರೀಡಿಸುತ್ತ ನಲಿಯುತ್ತಾನೆ.

English Translation

Sing (you priests) to the intelligent Pavamana; like a mighty shower he sends forth food ; like a snake he glides out of his old skin, sporting like a horse he hastens forth, the showerer, green–tinted.

॥ ಸಂಹಿತಾಪಾಠಃ ॥

ಅಗ್ರೇಗೋ ರಾಜಾಪ್ಯಸ್ತವಿಷ್ಯತೇ ವಿಮಾನೋ ಅಹ್ನಾಂ ಭುವನೇಷ್ವರ್ಪಿತಃ ।
ಹರಿರ್ಘೃತಸ್ನುಃ ಸುದೃಶೀಕೋ ಅರ್ಣವೋ ಜ್ಯೋತೀರಥಃ ಪವತೇ ರಾಯ
ಓಕ್ಯಃ ॥ ೪೫ ॥

॥ ಪದಪಾಠಃ ॥

ಅಗ್ರೇऽಗಃ । ರಾಜಾ । ಅಪ್ಯಃ । ತವಿಷ್ಯತೇ । ವಿऽಮಾನಃ । ಅಹ್ನಾಂ । ಭುವನೇಷು । ಅರ್ಪಿತಃ ।

ಹರಿಃ । ಘೃತऽಸ್ನುಃ । ಸುऽದೃಶೀಕಃ । ಅರ್ಣವಃ । ಜ್ಯೋತಿಃऽರಥಃ । ಪವತೇ । ರಾಯೇ । ಓಕ್ಯಃ ॥ ೪೫ ॥

॥ ಸಾಯಣಭಾಷ್ಯಂ ॥

ಅಗ್ರೇಗೋऽಗ್ರೇ ಗಂತಾ ರಾಜಾ ರಾಜಮಾನೋऽಪ್ಯೋऽಪ್ಸು ಸಂಸ್ಕೃತಃ ಸೋಮಸ್ತವಿಷ್ಯತೇ । ಸ್ತೂಯತೇ । ಯೋऽಹ್ನಾಂ ದಿನಾನಾಂ ವಿಮಾನೋ ನಿರ್ಮಾತಾ ಚಂದ್ರಕಲಾಹ್ರಾಸವೃದ್ಧ್ಯಧೀನತ್ವಾದಹರ್ವ್ಯವಹಾರಸ್ಯ । ಭುವನೇಷೂದಕೇಷು ವಸತೀವರೀಸಂಬಂಧಿಷ್ವರ್ಪಿತಃ ಸ್ಥಾಪಿತಃ ಸ ರಾಜಾ ತವಿಷ್ಯತೇ । ಕಿಂಚ ಹರಿರ್ಹರಿತವರ್ಣೋ ಘೃತಸ್ನುಃ ಪ್ರಸ್ರುತೋದಕಃ ಸುದೃಶೀಕಃ ಶೋಭನದರ್ಶನೋऽರ್ಣವ ಉದಕವಾನ್ । ಅರ್ಣ ಇತ್ಯುದಕನಾಮ । ಜ್ಯೋತೀರಥೋ ಜ್ಯೋತಿರ್ಮಯರಥೋ ರಾಯೇ ಧನಸ್ಯ ಪ್ರಾಪಯಿತಾ । ಓಕ್ಯಃ । ಓಕ ಇತಿ ನಿವಾಸನಾಮ । ತಸ್ಯ ಹಿತಃ ॥

॥ ಪ್ರತಿಪದಾರ್ಥ ॥

**ಅಗ್ರೇಗಃ**—ಸಕಲರಿಗಿಂತಲೂ ಮುಂದಾಗಿ ಹೋಗುವವನೂ । **ರಾಜಾ**—ಪ್ರಕಾಶಮಾನನೂ । **ಅಪ್ಯಃ**—ಉದಕದಿಂದ ಸಂಸ್ಕೃತನಾದವನೂ । **ಅಹ್ನಾಂ**-ಅಹಸ್ಸುಗಳಿಗೆ । **ವಿಮಾನಃ**—ನಿರ್ಮಾಪಕನೂ । **ಭುವನೇಷು**-ಉದಕಗಳಲ್ಲಿ । **ಅರ್ಪಿತಃ**—ಸ್ಥಾಪಿತನೂ ಆದ ಸೋಮನು । **ತವಿಷ್ಯತೇ**-ಸ್ತುತಿಸಲ್ಪಡುತ್ತಾನೆ । **ಹರಿಃ**-ಪಚ್ಚೆವರ್ಣವುಳ್ಳವನೂ । **ಘೃತಸ್ನುಃ**-ಉದಕವನ್ನು ಸುರಿಸುವವನೂ । **ಸುದೃಶೀಕಃ**—ಶ್ರೇಷ್ಠವಾದ ದರ್ಶನವುಳ್ಳವನೂ । **ಅರ್ಣವಃ**—ಉದಕವಂತನೂ । **ಜ್ಯೋತೀರಥಃ**—ಜ್ಯೋತೀರೂಪವಾದ ರಥವುಳ್ಳವನೂ ಆದ ಸೋಮದೇವನು । **ರಾಯೇ**—ಧನಲಾಭಾರ್ಥವಾಗಿ । **ಓಕ್ಯಃ**—ಗೃಹದಲ್ಲಿ ಸ್ಥಾಪಿತನಾಗಿ । **ಪವತೇ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಸಕಲರಿಗಿಂತಲೂ ಮುಂದಾಗಿ ಹೋಗತಕ್ಕವನೂ, ಪ್ರಕಾಶಮಾನನೂ, ಉದಕದಿಂದ ಸಂಸ್ಕೃತನೂ, ಅಹಸ್ಸುಗಳಿಗೆ ನಿರ್ಮಾಪಕನೂ, ಉದಕಗಳಲ್ಲಿ ಸ್ಥಾಪಿತನೂ ಆದ ಸೋಮನು ಸ್ತುತಿಸಲ್ಪಡುತ್ತಾನೆ. ಪಚ್ಚೆವರ್ಣವುಳ್ಳವನೂ, ಉದಕವನ್ನು ಸುರಿಸುವವನೂ, ಶ್ರೇಷ್ಠವಾದ ದರ್ಶನವುಳ್ಳವನೂ, ಉದಕವಂತನೂ, ಜ್ಯೋತೀರೂಪವಾದ ರಥವುಳ್ಳವನೂ ಆದ ಸೋಮನು ಧನಲಾಭಾರ್ಥವಾಗಿ ಗೃಹದಲ್ಲಿ ಸ್ಥಾಪಿತನಾಗಿ ಪ್ರವಹಿಸುತ್ತಾನೆ.

## English Translation

(Soma) going foremost, radiant, sanctified by water, placed in the firmament as the measurer of days is glorified ; green-tinted, shedding water, of goodly aspect, the source of moisture, borne in a chariot of light he flows giving wealth, friendly to the house.

॥ ಸಂಹಿತಾಪಾಠ ॥

ಅಸರ್ಜಿ ಸ್ಕಂಭೋ ದಿವ ಉದ್ಯತೋ ಮದಃ ಪರಿ ತ್ರಿಧಾತುರ್ಭುವನಾನ್ಯ-
ರ್ಷತಿ ।
ಅಂಶುಂ ರಿಹಂತಿ ಮತಯಃ ಪನಿಪ್ನತಂ ಗಿರಾ ಯದಿ ನಿರ್ಣಿಜಮೃಗ್ಮಿಣೋ
ಯಯುಃ ॥ ೪೬ ॥

॥ ಪದಪಾಠಃ ॥

ಅಸರ್ಜಿ । ಸ್ಕಂಭಃ । ದಿವಃ । ಉತ್ಽಯತಃ । ಮದಃ । ಪರಿ । ತ್ರಿಽಧಾತುಃ । ಭುವನಾನಿ । ಅರ್ಷತಿ ।
ಅಂಶುಂ । ರಿಹಂತಿ । ಮತಯಃ । ಪನಿಪ್ನತಂ । ಗಿರಾ । ಯದಿ । ನಿಃಽನಿಜಂ । ಋಗ್ಮಿಣಃ । ಯಯುಃ ॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಸ್ಯ ಸ್ಕಂಭಃ ಸ್ಕಂಭಯಿತಾ ಧಾರಕ ಉದ್ಯತಃ ಸೋಮೋಽಸರ್ಜಿ । ಸೃಜ್ಯತೇ । ಅಭಿಷೂಯತ ಇತ್ಯರ್ಥಃ । ಕಿಂಚ ತ್ರಿಧಾತುಃ । ದ್ರೋಣಕಲಶಾಧವನೀಯಪೂತಭೃದಾಖ್ಯಾಸ್ತ್ರಯೋ ಧಾತವೋ ಯಸ್ಯ ಸ ತಥೋಕ್ತಃ । ತಾದೃಶೋ ಭುವನಾನ್ಯುದಕಾನ್ಯರ್ಷತಿ । ಗಚ್ಛತಿ । ಅಂಶುಂ ಸೋಮಂ ಪನಿಪ್ನತಂ ಶಬ್ದಾಯಮಾನಂ ಮತಯಃ ಪೂಜಕಾ ರಿಹಂತಿ । ಲಿಹಂತಿ । ಆಸ್ವಾದಯಂತಿ । ಕದಾ । ಯದಿ ನಿರ್ಣಿಜಂ ನಿರ್ಣಿಕ್ತಂ । ಯದ್ವಾ । ನಿರ್ಣಿಗಿತಿ ರೂಪನಾಮ । ರೂಪವಂತಮಿತ್ಯರ್ಥಃ । ತಮೃಗ್ಮಿಣಃ ಸ್ತೋತಾರೋ ಗಿರಾ ಸ್ತುತ್ಯಾ ಯಯುಃ ಗಚ್ಛಂತಿ ತದಾ ॥

॥ ಪ್ರತಿಪದಾರ್ಥ ॥

**ಮದಃ**—ಹರ್ಷಕಾರಕನೂ । **ದಿವಃ**—ದ್ಯುಲೋಕಕ್ಕೆ । **ಸ್ಕಂಭಃ**—ಧಾರಕನೂ । **ಉದ್ಯತಃ**—ಯಾಗಾರ್ಥವಾಗಿ ನಿಯಮಿತನೂ ಆದ ಸೋಮನು । **ಅಸರ್ಜಿ**— ಹಿಂಡಲ್ಪಡುತ್ತಾನೆ । **ತ್ರಿಧಾತುಃ**—ದ್ರೋಣ ಕಲಶಾದಿ ಪಾತ್ರತ್ರಯವುಳ್ಳ ಸೋಮನು । **ಭುವನಾನಿ**—ಉದಕಗಳನ್ನು । **ಪರಿ ಅರ್ಷತಿ**—ಪ್ರವೇಶಿಸುತ್ತಾನೆ । **ಯದಿ**—ಯಾವಾಗ । **ನಿರ್ಣಿಜಂ**—ರೂಪವಂತನಾದ ಸೋಮನನ್ನು । **ಋಗ್ಮಿಣಃ**—ಸ್ತುತಿಕರ್ತರು । **ಗಿರಾ**—ಸ್ತುತಿಯೊಡನೆ । **ಯಯುಃ**—ಸಮೀಪಿಸುವರೋ ಆಗ । **ಮತಯಃ**—ಸ್ತುತಿಪಾಠಕರು । **ಪನಿಪ್ನತಂ**—ಶಬ್ದಮಾಡುವ । **ಅಂಶುಂ**—ಸೋಮವನ್ನು । **ರಿಹಂತಿ**—ಪಾನಮಾಡುತ್ತಾರೆ.

॥ ಭಾವಾರ್ಥ ॥

ಹರ್ಷಕಾರಕನೂ, ದ್ಯುಲೋಕಕ್ಕೆ ಧಾರಕನೂ, ಯಾಗಾರ್ಥವಾಗಿ ನಿಯಮಿತನೂ ಆದ ಸೋಮನು ಹಿಂಡಲ್ಪಡುತ್ತಾನೆ. ದ್ರೋಣಕಲಶಾದಿಪಾತ್ರತ್ರಯವುಳ್ಳ ಸೋಮನು ಉದಕಗಳನ್ನು ಪ್ರವೇಶಿಸುತ್ತಾನೆ ರೂಪವಂತನಾದ ಸೋಮನನ್ನು ಯಾವಾಗ ಸ್ತುತಿಕರ್ತರು ಸ್ತುತಿಯೊಡನೆ ಸಮೀಪಿಸುವರೋ ಆಗ ಸ್ತುತಿಪಾಠಕರು ಶಬ್ದಮಾಡುವ ಸೋಮವನ್ನು ಪಾನಮಾಡುತ್ತಾರೆ.

English Translation.

The supporter of heaven the prepared exhilarating (Soma) is let loose, the triple (liquor) rushes to the waters; the worshippers taste the sounding Soma juice, when the reciters of holy texts approach the embodied (beverage) with praise.

॥ ಸಂಹಿತಾಪಾಠಃ ॥

ಪ್ರ ತೇ ಧಾರಾ ಅತ್ಯಣ್ವಾನಿ ಮೇಷ್ಯಃ ಪುನಾನಸ್ಯ ಸಂಯತೋ ಯಂತಿ ರಂಹಯಃ ।
ಯದ್ಗೋಭಿರಿಂದೋ ಚಮ್ವೋಃ ಸಮಜ್ಯಸ ಆ ಸುವಾನಃ ಸೋಮ ಕಲಶೇಷು ಸೀದಸಿ ॥ ೪೭ ॥

॥ ಪದಪಾಠಃ ॥

ಪ್ರ । ತೇ । ಧಾರಾಃ । ಅತಿ । ಅಣ್ವಾನಿ । ಮೇಷ್ಯಃ । ಪುನಾನಸ್ಯ । ಸಂऽಯತಃ । ಯಂತಿ । ರಂಹಯಃ ।
ಯತ್ । ಗೋಭಿಃ । ಇಂದೋ ಇತಿ । ಚಮ್ವೋಃ । ಸಂऽಅಜ್ಯಸೇ । ಆ । ಸುವಾನಃ । ಸೋಮ । ಕಲಶೇಷು । ಸೀದಸಿ ॥ ೪೭ ॥

॥ ಸಾಯಣಭಾಷ್ಯಂ ॥

ಪುನಾನಸ್ಯ ಪೂಯಮಾನಸ್ಯ ಸಂಯತಃ ಸಂಗೃಹ್ಯಮಾಣಾ ರಂಹಯೋ ರಂಹಣಸ್ವಭಾವಾ ಧಾರಾ ಮೇಷ್ಯೋಽಣ್ವಾನ್ಯಣೂನಿ ಲೋಮಾನ್ಯತಿ ಯಂತಿ । ಅತಿಕ್ರಮ್ಯ ಗಚ್ಛಂತಿ । ಹೇ ಇಂದೋ ಸೋಮ ಯದ್ಯದಾ ಗೋಭಿರುದಕೈಶ್ಚಮ್ವೋರಧಿಷವಣಫಲಕಯೋರುಪರಿ ಸಮಜ್ಯಸೇ ತದಾನೀಂ ಹೇ ಸೋಮ ಸುವಾನಃ ಸೂಯಮಾನಸ್ತ್ವಂ ಕಲಶೇಷ್ವಾ ಸೀದತಿ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಪುನಾನಸ್ಯ**—ಶುದ್ಧಿಯನ್ನು ಹೊಂದುವ ನಿನ್ನ । **ಸಂಯತಃ**—ಒಟ್ಟಿಗೆ ಸೇರಿಸಲ್ಪಟ್ಟಿರುವುವೂ । **ರಂಹಯಃ**—ಪ್ರವಾಹಾತ್ಮಕವೂ ಆದ । **ಧಾರಾಃ**—ಧಾರೆಗಳು । **ಮೇಷ್ಯಃ**—ಉಣ್ಣೆಯ । **ಅಣ್ವಾನಿ**—ನೂಲುಗಳನ್ನು । **ಅತಿ ಯಂತಿ**—ದಾಟಿಹೋಗುತ್ತವೆ. । **ಯತ್**—ಯಾವಾಗ । **ಗೋಭಿಃ**—ಉದಕಗಳೊಡನೆ । **ಚಮ್ವೋಃ**—ಸೌಟುಗಳಲ್ಲಿ । **ಸಮಜ್ಯಸೇ**—ಒಟ್ಟಿಗೆ ಸೇರಿಸಲ್ಪಡುವೆಯೋ ಆಗ । **ಸೋಮ**—ಎಲೈ ಸೋಮದೇವನೇ, । **ಸುವಾನಃ**—ಹಿಂಡಲ್ಪಡುವ ನೀನು । **ಕಲಶೇಷು**—ಕಲಶಪಾತ್ರೆಗಳಲ್ಲಿ । **ಆ ಸೀದಸಿ**—ಸ್ಥಾಪಿತನಾಗುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದುವ ಒಟ್ಟಿಗೆ ಸೇರಿಸಲ್ಪಟ್ಟಿರುವುವೂ, ಪ್ರವಾಹಾತ್ಮಕವೂ ಆದ ನಿನ್ನ ಧಾರೆಗಳು ಉಣ್ಣೆಯ ನೂಲುಗಳನ್ನು ದಾಟಿಹೋಗುತ್ತವೆ. ಯಾವಾಗ ನೀನು ಉದಕಗಳೊಡನೆ ಸೌಟುಗಳಲ್ಲಿ ಒಟ್ಟಿಗೆ ಸೇರಿಸಲ್ಪಡುವೆಯೋ, ಆಗ ಹಿಂಡಲ್ಪಡುವ ನೀನು ಕಲಶಪಾತ್ರೆಗಳಲ್ಲಿ ಸ್ಥಾಪಿತನಾಗುತ್ತೀಯೆ.

English Translation.

The rapid streams of you when you are purified, being collected together pass through the interstices of the fleece; when yon are mixed with water in the ladles, you, Soma, on being effused alight on the pitchers.

|| ಸಂಹಿತಾಪಾಠಃ ||

ಪವಸ್ವ ಸೋಮ ಕ್ರತುವಿನ್ನ ಉಕ್ಥ್ಯೋಽವ್ಯೋ ವಾರೇ ಪರಿ ಧಾವ ಮಧು ಪ್ರಿಯಂ ।
ಜಹಿ ವಿಶ್ವಾನ್ರಕ್ಷಸ ಇಂದೋ ಅತ್ರಿಣೋ ಬೃಹದ್ವದೇಮ ವಿದಥೇ ಸುವೀರಾಃ ||

|| ಪದಪಾಠಃ ||

ಪವಸ್ವ । ಸೋಮ । ಕ್ರತುಽವಿತ್ । ನಃ । ಉಕ್ಥ್ಯಃ । ಅವ್ಯಃ । ವಾರೇ । ಪರಿ । ಧಾವ । ಮಧು । ಪ್ರಿಯಂ ।
ಜಹಿ । ವಿಶ್ವಾನ್ । ರಕ್ಷಸಃ । ಇಂದೋ ಇತಿ । ಅತ್ರಿಣಃ । ಬೃಹತ್ । ವದೇಮ । ವಿದಥೇ । ಸುಽವೀರಾಃ ||

|| ಸಾಯಣಭಾಷ್ಯಂ ||

ಹೇ ಸೋಮ ನೋಽಸ್ಮಾಕಂ ಕ್ರತುವಿತ್ ಕರ್ಮಜ್ಞಃ । ಸ್ತುತಿಜ್ಞ ಇತ್ಯರ್ಥಃ । ಉಕ್ಥ್ಯಃ ಸ್ತುತ್ಯಃ । ಯತಃ ಸ್ತುತ್ಯಃ ಅತಃ ಕ್ರತುವಿದಿತ್ಯಭಿಪ್ರಾಯಃ । ಈದೃಶಸ್ತ್ವಂ ನೋಽಸ್ಮಾಕಂ ಯಾಗಾಯ ಪವಸ್ವ । ಸ್ರವ ರಸಂ । ಅವ್ಯೋ ವಾರೇ ದಶಾಪವಿತ್ರೇ ಪ್ರಿಯಂ ಮಧು ಪರಿ ಧಾವ । ಪರಿಕ್ಷರ । ಹೇ ಇಂದೋ ದೀಪ್ತ ಸೋಮ ಅತ್ರಿಣೋ ಭಕ್ಷಕಾನ್ವಿಶ್ವಾನ್ರಕ್ಷಸೋ ಜಹಿ । ಸುವೀರಾಃ ಸುಪುತ್ರಾಃ ವಯಂ ವಿದಥೇ ಯಜ್ಞೇ ಬೃಹನ್ಮಹದ್ಧನಂ ವದೇಮ । ಉಚ್ಚಾರಯೇಮ । ಯಾಚೇಮೇತ್ಯರ್ಥಃ । ಯದ್ವಾ । ಪ್ರಭೂತಂ ಸ್ತೋತ್ರಂ ವದೇಮ ||

|| ಪ್ರತಿಪದಾರ್ಥ ||

ಸೋಮ— ಎಲೈ ಸೋಮದೇವನೇ । ನಃ— ನಮ್ಮ । ಕ್ರತುವಿತ್— ಕರ್ಮವನ್ನು ಅರಿತವನೂ । ಉಕ್ಥ್ಯಃ — ಪ್ರಶಂಸಾರ್ಹನೂ ಆದ ನೀನು । ಪವಸ್ವ— ಪ್ರವಹಿಸು । ಅವ್ಯಃ ವಾರೇ— ದಶಾಪವಿತ್ರದ ಉಣ್ಣೆಯ

ನೂಲುಗಳಲ್ಲಿ | **ಪ್ರಿಯಂ**—ಪ್ರೀತಿಕರವೂ | **ಮಧು**—ರುಚಿಕರವೂ ಆದ ರಸವನ್ನು | **ಪರಿ ಧಾವ**—ಹರಿಯುವಂತೆ ಮಾಡು | **ಇಂದೋ**—ಎಲೈ ಸೋಮದೇವನೇ | **ಅತ್ರಿಣಃ**—ಸರ್ವಭಕ್ಷಕರಾದ | **ವಿಶ್ವಾನ್ ರಕ್ಷಸಃ**—ಸಕಲ ರಾಕ್ಷಸರನ್ನೂ | **ಜಹಿ**—ನಾಶಪಡಿಸು | **ಸುವೀರಾಃ**—ಉತ್ತಮವಾದ ವೀರಪುತ್ರರುಳ್ಳ ನಾವು | **ವಿದಥೇ**—ಯಜ್ಞಗೃಹದಲ್ಲಿ | **ಬೃಹತ್**—ಪ್ರಭೂತವಾದ ಸ್ತುತಿಯನ್ನು | **ವದೇಮ**—ಪಠಿಸುತ್ತೇವೆ.

|| ಭಾವಾರ್ಥ ||

ಎಲೈ ಸೋಮದೇವನೇ, ನಮ್ಮ ಕರ್ಮವನ್ನು ಅರಿತವನೂ, ಪ್ರಶಂಸಾರ್ಹನೂ ಆದ ನೀನು ಪ್ರವಹಿಸು. ದಶಾಪವಿತ್ರದ ಉಣ್ಣೆಯ ನೂಲುಗಳಲ್ಲಿ ಪ್ರೀತಿಕರವೂ, ರುಚಿಕರವೂ ಆದ ರಸವನ್ನು ಹರಿಯುವಂತೆ ಮಾಡು. ಎಲೈ ಸೋಮದೇವನೇ, ಸರ್ವಭಕ್ಷಕರಾದ ಸಕಲ ರಾಕ್ಷಸರನ್ನೂ ನಾಶಪಡಿಸು ಉತ್ತಮವಾದ ವೀರಪುತ್ರರುಳ್ಳ ನಾವು ಯಜ್ಞಗೃಹದಲ್ಲಿ ಪ್ರಭೂತವಾದ ಸ್ತುತಿಯನ್ನು ಪಠಿಸುತ್ತೇವೆ.

### English Translation.

Flow for us, Soma, cognizant of (our) worship and deserving praise; pour (your) beloved sweet-flavoured (juice) upon the woollen fleece; slay, Indu, all the voracious Rakshasas; blessed with excellent male offspring may we offer ample (praises) at the sacrifice.

## ಎಂಭತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

**ಪ್ರ ತು ದ್ರವೇತಿ ನವರ್ಚಂ ದ್ವಿತೀಯಂ ಸೂಕ್ತಂ ಕಾವ್ಯಸ್ಯೋಶನಸ ಆರ್ಷಂ | ಅನಾದೇಶಪರಿಭಾಷಯಾ ತ್ರೈಷ್ಟುಭಂ ಪವಮಾನಸೋಮದೇವತಾಕಂ | ತಥಾ ಚಾನುಕ್ರಾಂತಂ | ಪ್ರ ತು ನವೋಶನಾ ಇತಿ | ಜಾಗತಮೂರ್ಧ್ವಂ ಪ್ರಾಗುಶನಸಃ | ಅನು. ೯–೬೭ | ಇತಿ ವಚನಾಜ್ಜಗತ್ಯಧಿಕಾರೋ ನಿವೃತ್ತಃ || ಗತೋ ವಿನಿಯೋಗಃ ||**

ಅನುವಾದವು—**ಪ್ರ ತು ದ್ರವ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕವಿಪುತ್ರನಾದ ಉಶನಾಃ ಎಂಬುವನು ಋಷಿಯು; ಪವಮಾನ ಸೋಮನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ತು ನವೋಶನಾ** ಎಂದು ಹೇಳಿರುವುದು. **ಜಾಗತಮೂರ್ಧ್ವಂ ಪ್ರಾಗುಶನಸಃ** (ಅನು. ೯–೬೭) ಎಂದು ಹೇಳಿರುವುದರಿಂದ ಇಲ್ಲಿಂದ ಮುಂದಕ್ಕೆ ಜಗತೀಛಂದಸ್ಸಿನ ಮಂತ್ರಗಳಿಲ್ಲ, ತ್ರಿಷ್ಟುಪ್‌ಛಂದಸ್ಸು ಮಾತ್ರ. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೮೭

ಮಂಡಲ—೯ ॥ ಅನುವಾಕ—೫ ॥ ಸೂಕ್ತ—೮೭ ॥

ಅಷ್ಟಕ—೭ ॥ ಅಧ್ಯಾಯ—೩ ॥ ವರ್ಗ—೧೧, ೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಉಶನಾಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ತು ದ್ರವ ಪರಿ ಕೋಶಂ ನಿ ಷೀದ ನೃಭಿಃ ಪುನಾನೋ ಅಭಿ ವಾಜಮರ್ಷ ।
ಅಶ್ವಂ ನ ತ್ವಾ ವಾಜಿನಂ ಮರ್ಜಯಂತೋಽಚ್ಛಾ ಬರ್ಹೀ ರಶನಾಭಿರ್ನಯಂತಿ ॥ ೧ ॥

॥ ಪದಪಾಠಃ ॥

ಪ್ರ । ತು । ದ್ರವ । ಪರಿ । ಕೋಶಂ । ನಿ । ಸೀದ । ನೃಽಭಿಃ । ಪುನಾನಃ । ಅಭಿ । ವಾಜಂ । ಅರ್ಷ ।
ಅಶ್ವಂ । ನ । ತ್ವಾ । ವಾಜಿನಂ । ಮರ್ಜಯಂತಃ । ಅಚ್ಛ । ಬರ್ಹಿಃ । ರಶನಾಭಿಃ । ನಯಂತಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸೋಮ ತು ಕ್ಷಿಪ್ರಂ ಪ್ರ ದ್ರವ। ಪ್ರಗಚ್ಛ। ಗತ್ವಾ ಚ ಕೋಶಂ ದ್ರೋಣಕಲಶಂ ಪರಿ ನಿ ಷೀದ। ನಿಷಣ್ಣೋ ಭವ। ನೃಭಿರ್ನೇತೃಭಿಃ ಪುನಾನಃ ಪೂಯಮಾನೋ ವಾಜಮನ್ನಂ ಯಜಮಾನಾರ್ಥಮುದ್ದಿಶ್ಯಾಭ್ಯರ್ಷ। ಅಭಿಗಚ್ಛ। ವಾಜಿನಂ ಬಲವಂತಮಶ್ವಂ ನಾಶ್ವಮಿವ ತಂ ಯಥಾ ಮಾರ್ಜಯಂತಿ ತದ್ವದ್ವಾಜಿನಂ ತ್ವಾಂ ಮಾರ್ಜಯಂತಃ ಶೋಧಯಂತೋ ಬರ್ಹಿರ್ಯಜ್ಞಮಚ್ಛ ಪ್ರತಿ ರಶನಾಭೀ ರಶನಾವದಾಯತಾಭಿರಂಗುಲೀಭಿರ್ನಯಂತ್ಯಧ್ವರ್ಯುಪ್ರಮುಖಾಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ತು—ಕ್ಷಿಪ್ರವಾಗಿ। ಪ್ರ ದ್ರವ—ಪ್ರವಹಿಸು। ಕೋಶಂ—ದ್ರೋಣಕಲಶದಲ್ಲಿ। ಪರಿ ನಿ ಷೀದ—ಕುಳಿತುಕೋ। ನೃಭಿಃ—ಋತ್ವಿಕ್ಕುಗಳಿಂದ। ಪುನಾನಃ—ಶುದ್ಧಿಮಾಡಲ್ಪಟ್ಟವನಾಗಿ। ವಾಜಂ—ಯಜಮಾನನಿಗೆ ಅನ್ನವನ್ನು। ಅಭ್ಯರ್ಷ—ಸಂಪಾದಿಸಿಕೊಡು। ವಾಜಿನಂ ತ್ವಾ—ಶಕ್ತಿಯುತನಾದ ನಿನ್ನನ್ನು। ಅಶ್ವಂ ನ—ಅಶ್ವವನ್ನು ತೊಳೆಯುವಂತೆ। ಮಾರ್ಜಯಂತಃ—(ಅಧ್ವರ್ಯುಗಳು) ಶುದ್ಧಿಗೊಳಿಸುತ್ತ। ರಶನಾಭಿಃ—ತಮ್ಮ ಬೆರಳುಗಳಿಂದ। ಬರ್ಹಿಃ ಅಚ್ಛ—ಯಜ್ಞಾಭಿಮುಖವಾಗಿ। ನಯಂತಿ—ಒಯ್ಯುತ್ತಾರೆ.

|| ಭಾವಾರ್ಥ ||

ಎಲೈ ಸೋಮದೇವನೇ, ಕ್ಷಿಪ್ರವಾಗಿ ಪ್ರವಹಿಸು. ದ್ರೋಣಕಲಶದಲ್ಲಿ ಕುಳಿತುಕೋ. ಋತ್ವಿಕ್ಕುಗಳಿಂದ ಶುದ್ಧಿಮಾಡಲ್ಪಟ್ಟವನಾಗಿ ಯಜಮಾನನ ಅನ್ನವನ್ನು ಸಂಪಾದಿಸಿಕೊಡು. ಶಕ್ತಿಯುತನಾದ ನಿನ್ನನ್ನು ಅಶ್ವವನ್ನು ತೊಳೆಯುವಂತೆ ಅಧ್ವರ್ಯುಗಳು ಶುದ್ಧಿಗೊಳಿಸುತ್ತ ತಮ್ಮ ಬೆರಳುಗಳಿಂದ ಯಜ್ಞಾಭಿಮುಖವಾಗಿ ಒಯ್ಯುತ್ತಾರೆ.

## English Translation.

Flow fast (Soma), sit down on the receptacle, purified by the priests hasten (showing) food (to the sacrificer); cleansing you like a strong horse, they guide you with (their fingers for) reins to the sacred grass.

|| ಸಂಹಿತಾಪಾಠಃ ||

**ಸ್ವಾಯುಧಃ ಪವತೇ ದೇವ ಇಂದುರಶಸ್ತಿಹಾ ವೃಜನಂ ರಕ್ಷಮಾಣಃ ।**
**ಪಿತಾ ದೇವಾನಾಂ ಜನಿತಾ ಸುದಕ್ಷೋ ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾಃ ॥ ೨ ॥**

|| ಪದಪಾಠಃ ||

ಸುಽಆಯುಧಃ । ಪವತೇ । ದೇವಃ । ಇಂದುಃ । ಅಶಸ್ತಿಽಹಾ । ವೃಜನಂ । ರಕ್ಷಮಾಣಃ ।
ಪಿತಾ । ದೇವಾನಾಂ । ಜನಿತಾ । ಸುಽದಕ್ಷಃ । ವಿಷ್ಟಂಭಃ । ದಿವಃ । ಧರುಣಃ । ಪೃಥಿವ್ಯಾಃ ॥ ೨ ॥

|| ಸಾಯಣಭಾಷ್ಯಂ ||

ಸ್ವಾಯುಧಃ ಶೋಭನಾಯುಧ ಇಂದುಃ ಸೋಮೋ ದೇವಃ ಪವತೇ । ಸ ಚ ದೇವೋಽಶಸ್ತಿಹಾ ರಕ್ಷೋಹಾ ವೃಜನಮುಪದ್ರವಂ ರಕ್ಷಮಾಣಃ ಪಿತಾ ಪಾಲಕೋ ದೇವಾನಾಂ ತಥಾ ಜನಿತೋತ್ಪಾದಕಃ ಸುದಕ್ಷಃ ಸುಬಲೋ ದಿವೋ ವಿಷ್ಟಂಭೋ ವಿಶೇಷೇಣ ಸ್ತಂಭಯಿತಾ ಪೃಥಿವ್ಯಾಶ್ಚ ಧರುಣೋ ಧಾರಕಃ । ಏವಂಮಹಾನುಭಾವಃ ಪವತೇ ॥

|| ಪ್ರತಿಪದಾರ್ಥ ||

**ದೇವಃ**—ದೇವತಾತ್ಮನೂ । **ಸ್ವಾಯುಧಃ**—ಉತ್ತಮವಾದ ಆಯುಧವುಳ್ಳವನೂ । **ಅಶಸ್ತಿಹಾ**—ಕೆಡುಕರ ನಾಶಕನೂ । **ವೃಜನಂ**—ವಿಘ್ನದಿಂದ । **ರಕ್ಷಮಾಣಃ**—ರಕ್ಷಿಸುವವನೂ । **ಪಿತಾ**—ಜಗತ್ಪಾಲಕನೂ । **ದೇವಾನಾಂ ಜನಿತಾ**—ದೇವತೆಗಳ ಉತ್ಪಾದಕನೂ । **ಸುದಕ್ಷಃ**—ಶ್ರೇಷ್ಠವಾದ ಶಕ್ತಿಯುಳ್ಳವನೂ । **ದಿವಃ**—ದ್ಯುಲೋಕಕ್ಕೆ । **ವಿಷ್ಟಂಭಃ**—ಧಾರಕನೂ । **ಪೃಥಿವ್ಯಾಃ**—ಪೃಥ್ವಿಗೆ । **ಧರುಣಃ**—ಆಧಾರಭೂತನೂ ಆದ । **ಇಂದುಃ**—ಸೋಮದೇವನು । **ಪವತೇ**—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ದೇವತಾತ್ಮನೂ, ಉತ್ತಮವಾದ ಆಯುಧವುಳ್ಳವನೂ, ಕೆಡುಕರ ನಾಶಕನೂ, ವಿಘ್ನದಿಂದ ರಕ್ಷಿಸುವವನೂ, ಜಗತ್ಪಾಲಕನೂ, ದೇವತೆಗಳ ಉತ್ಪಾದಕನೂ, ಶ್ರೇಷ್ಠವಾದ ಶಕ್ತಿಯುಳ್ಳವನೂ, ದ್ಯುಲೋಕಕ್ಕೂ ಪೃಥ್ವಿಗೂ ಧಾರಕನೂ ಆದ ಸೋಮದೇವನು ಪ್ರವಹಿಸುತ್ತಾನೆ.

## English Translation.

The divine Indu well-armed flows forth, the destroyer of Rakshasas, averting calamity, the protector of the gods, the progenitor, the powerfur one, the prop of heaven, the support of the earth.

॥ ಸಂಹಿತಾಪಾಠಃ ॥

ಋಷಿರ್ವಿಪ್ರಃ ಪುರಏತಾ ಜನಾನಾಮೃಭುರ್ಧೀರ ಉಶನಾ ಕಾವ್ಯೇನ ।

ಸ ಚಿದ್ವಿವೇದ ನಿಹಿತಂ ಯದಾಸಾಮಪೀಚ್ಯಂ೧ ಗುಹ್ಯಂ ನಾಮ ಗೋನಾಂ ॥

॥ ಪದಪಾಠಃ ॥

ಋಷಿಃ । ವಿಪ್ರಃ । ಪುರಃऽಏತಾ । ಜನಾನಾಂ । ಋಭುಃ । ಧೀರಃ । ಉಶನಾ । ಕಾವ್ಯೇನ ।

ಸಃ । ಚಿತ್ । ವಿವೇದ । ನಿऽಹಿತಂ । ಯತ್ । ಆಸಾಂ । ಅಪೀಚ್ಯಂ । ಗುಹ್ಯಂ । ನಾಮ । ಗೋನಾಂ ॥೩॥

॥ ಸಾಯಣಭಾಷ್ಯಂ ॥

**ಋಷಿರತೀಂದ್ರಿಯದ್ರಷ್ಟಾ ವಿಪ್ರೋ ಮೇಧಾವೀ ಪುರಏತಾ ಪುರತೋ ಗಂತಾ ಜನಾನಾಂ ಮನುಷ್ಯಾಣಾಮೃಭುರುರು ಭಾಸಮಾನೋ ಧೀರೋ ಧೀಮಾನುಶನ್ನೈತನ್ನಾಮರ್ಷಿರ್ಯಃ ಸ ಚಿತ್ ಸ ಏವ ಕಾವ್ಯೇನ ಕವಿತ್ವೇನ ಸ್ತೋತ್ರೇಣ ವಿವೇದ । ಲಭತೇ । ಕಿಂ । ಯದಾಸಾಂ ಗೋನಾಂ ಗವಾಮ. ಪೀಚ್ಯಂ । ಅಂತರ್ಹಿತನಾಮೈತತ್ । ಅಂತರ್ಹಿತಂ ಗುಹ್ಯಂ ಗೋಪನೀಯಂ ನಾಮ ನಾಮಕಮುದಕಂ ಪಯೋಲಕ್ಷಣಂ ॥**

॥ ಪ್ರತಿಪದಾರ್ಥ ॥

**ಋಷಿಃ**—ಅತೀಂದ್ರಿಯ ದೃಷ್ಟಿಯುಳ್ಳವನೂ । **ವಿಪ್ರಃ**—ಮೇಧಾವಿಯೂ । **ಜನಾನಾಂ ಪುರಏತಾ**—ಮಾನವರಿಗೆ ಮಾರ್ಗದರ್ಶಕನೂ । **ಋಭುಃ**—ಪ್ರಕಾಶಮಾನನನೂ । **ಧೀರಃ**—ಪ್ರಾಜ್ಞನೂ । **ಉಶನಾ**—ಉಶನಸ್ ಎಂಬ ಹೆಸರುಳ್ಳವನೂ ಆದ । **ಸ ಚಿತ್**—ಅದೇ ಋಷಿಯು । **ಆಸಾಂ ಗೋನಾಂ**—ಈ ಗೋವುಗಳ । **ಅಪೀಚ್ಯಃ**—ಮುಚ್ಚಲ್ಪಟ್ಟುದೂ । **ಗುಹ್ಯಂ**—ರಹಸ್ಯವಾಗಿಡಲ್ಪಟ್ಟುದೂ ಆದ । **ನಾಮ**—ಪಯೋರೂಪವಾದ ಉದಕವನ್ನು । **ಕಾವ್ಯೇನ**—ಕವಿತ್ವಯುಕ್ತವಾದ ತನ್ನ ಮಹಿಮೆಯಿಂದ । **ವಿವೇದ**—ಪಡೆದನು.

|| ಭಾವಾರ್ಥ ||

ಅತೀಂದ್ರಿಯದೃಷ್ಟಿಯುಳ್ಳವನೂ, ಮೇಧಾವಿಯೂ, ಮಾನವರಿಗೆ ಮಾರ್ಗದರ್ಶಕನೂ, ಪ್ರಕಾಶಮಾನನೂ, ಪ್ರಾಜ್ಞನೂ, ಉಶನಸ್ ಎಂಬ ಹೆಸರುಳ್ಳವನೂ ಆದ ಋಷಿಯು ಗೋವುಗಳ ಮುಚ್ಚಲ್ಪಟ್ಟದ್ದೂ, ರಹಸ್ಯವಾಗಿಡಲ್ಪಟ್ಟದ್ದೂ ಆದ ಪಯೋರೂಪವಾದ ಉದಕವನ್ನು ಕವಿತ್ವಯುಕ್ತವಾದ ತನ್ನ ಮಹಿಮೆಯಿಂದ ಪಡೆದನು.

English Translation.

The rishi, the sage, the foremost of men, the farshining intelligent Ushanas—he verily by his poetic gift discovered the secret milk of those cows which was hidden and concealed.

|| ಸಂಹಿತಾಪಾಠಃ ||

ಏಷ ಸ್ಯ ತೇ ಮಧುಮಾँ ಇಂದ್ರ ಸೋಮೋ ವೃಷಾ ವೃಷ್ಣೇ ಪರಿ ಪವಿತ್ರೇ ಅಕ್ಷಾಃ ।
ಸಹಸ್ರಸಾಃ ಶತಸಾ ಭೂರಿದಾವಾ ಶಶ್ವತ್ತಮಂ ಬರ್ಹಿರಾ ವಾಜ್ಯಸ್ಥಾತ್ ||೪||

|| ಪದಪಾಠಃ ||

ಏಷಃ । ಸ್ಯಃ । ತೇ । ಮಧುಽಮಾನ್ । ಇಂದ್ರ । ಸೋಮಃ । ವೃಷಾ । ವೃಷ್ಣೇ । ಪರಿ । ಪವಿತ್ರೇ । ಅಕ್ಷಾರಿತಿ ।
ಸಹಸ್ರಽಸಾಃ । ಶತಽಸಾಃ । ಭೂರಿಽದಾವಾ । ಶಶ್ವತ್ಽತಮಂ । ಬರ್ಹಿಃ । ಆ । ವಾಜೀ । ಅಸ್ಥಾತ್ || ೪ ||

|| ಸಾಯಣಭಾಷ್ಯಂ ||

ಹೇ ಇಂದ್ರ ವೃಷ್ಣೇ ವರ್ಷಕಾಯ ತೇ ತುಭ್ಯಮೇಷ ಸ್ಯ ಸ ಸೋಮೋ ಮಧುಮಾನ್ ಮಾಧುರ್ಯೋಪೇತೋ ವೃಷಾ ವರ್ಷಕಃ ಪವಿತ್ರೇ ಪರ್ಯಕ್ಷಾಃ । ಪರಿಕ್ಷರತಿ || ಕ್ಷರತೇರ್ಲುಙಿ ರೂಪಂ || ಸ ಏವ ಸಹಸ್ರಸಾಃ ಸಹಸ್ರಸಂಖ್ಯಾಕಧನಸ್ಯ ದಾತಾ ಶತಸಾಃ ಶತಸಂಖ್ಯಾಕಸ್ಯ ದಾತಾ ಭೂರಿದಾವಾ ತತೋಽಪಿ ಭೂರೇರ್ದಾತಾ ವಾಜೀ ಬಲವಾಞ್ಶಶ್ವತ್ತಮಂ ನಿತ್ಯಂ ಬರ್ಹಿರ್ಯಜ್ಞಮಾಸ್ಥಾತ್ । ಆತಿಷ್ಠತಿ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ | ವೃಷ್ಣೇ—ಇಷ್ಟಾರ್ಥಪ್ರದನಾದ | ತೇ—ನಿನಗಾಗಿ | ಮಧುಮಾನ್—ಮಾಧುರ್ಯೋಪೇತವಾದುದೂ | ವೃಷಾ—ಇಷ್ಟಾರ್ಥಪ್ರದವಾದುದೂ ಆದ | ಏಷಃ ಸ್ಯಃ ಸೋಮಃ—

ಈ ಸೋಮವು । **ಪವಿತ್ರೇ**—ದಶಾಪವಿತ್ರದಲ್ಲಿ । **ಪರ್ಯಕ್ಷಾಃ**—ಪ್ರವಹಿಸುತ್ತದೆ । **ಸಹಸ್ರಸಾಃ**—ಸಹಸ್ರ ಸಂಖ್ಯೆಯಲ್ಲಿ ಧನವನ್ನು ದಾನಮಾಡುವವನೂ । **ಶತಸಾಃ**—ಅನೇಕ ರೂಪಗಳಲ್ಲಿ ಕೊಡತಕ್ಕವನೂ । **ಭೂರಿದಾವಾ**—ಪ್ರಭೂತವಾಗಿ ಕೊಡುವವನೂ । **ವಾಜೀ**—ಶಕ್ತಿಯುತನೂ ಆದ ಇಂದ್ರನು । **ಶಶ್ವತ್ತಮಂ**—ಯಾವಾಗಲೂ । **ಬರ್ಹಿಃ**—ಯಜ್ಞದಲ್ಲಿ । **ಅಸ್ಥಾತ್**—ಕುಳಿತಿರುತ್ತಾನೆ.

। ಭಾವಾರ್ಥ ॥

ಎಲೈ ಇಂದ್ರನೇ, ಇಷ್ಟಾರ್ಥಪ್ರದನಾದ ನಿನಗಾಗಿ ಮಾಧುರ್ಯೋಪೇತವಾದುದೂ ಇಷ್ಟಾರ್ಥಪ್ರದವಾದುದೂ ಆದ ಈ ಸೋಮವು ದಶಾಪವಿತ್ರದಲ್ಲಿ ಪ್ರವಹಿಸುತ್ತದೆ. ಸಹಸ್ರಸಂಖ್ಯೆಯಲ್ಲಿಯೂ, ನಾನಾರೂಪದಲ್ಲಿಯೂ, ಪ್ರಭೂತವಾಗಿಯೂ, ಧನ ದಾನಮಾಡುವವನೂ, ಶಕ್ತಿಯುತನೂ ಆದ ಇಂದ್ರನು ಯಾವಾಗಲೂ ಯಜ್ಞದಲ್ಲಿ ಕುಳಿತಿರುತ್ತಾನೆ.

## English Translation

For you Indra, the showerer, this sweet flavoured Soma the showerer, has been poured into the filter ; the giver of thousand-fold wealth, the giver of hundredfold wealth, the giver of abundant wealth, the powerful is present at the eternal sacrifice.

॥ ಸಂಹಿತಾಪಾಠಃ ॥

ಏತೇ ಸೋಮಾ ಅಭಿ ಗವ್ಯಾ ಸಹಸ್ರಾ ಮಹೇ ವಾಜಾಯಾಮೃತಾಯ ಶ್ರವಾಂಸಿ ।
ಪವಿತ್ರೇಭಿಃ ಪವಮಾನಾ ಅಸೃಗ್ರಞ್ಛ್ರವಸ್ಯವೋ ನ ಪೃತನಾಜೋ ಅತ್ಯಾಃ ॥ ೫ ॥

॥ ಪದಪಾಠಃ ॥

ಏತೇ । ಸೋಮಾಃ । ಅಭಿ । ಗವ್ಯಾ । ಸಹಸ್ರಾ । ಮಹೇ । ವಾಜಾಯ । ಅಮೃತಾಯ । ಶ್ರವಾಂಸಿ ।
ಪವಿತ್ರೇಭಿಃ । ಪವಮಾನಾಃ । ಅಸೃಗ್ರನ್ । ಶ್ರವಸ್ಯವಃ । ನ । ಪೃತನಾಜಃ । ಅತ್ಯಾಃ ॥ ೫ ॥

॥ ಸಾಯಣಭಾಷ್ಯಂ ॥

ಏತೇ ಸೋಮಾ ಗವ್ಯಾ ಗವ್ಯಾನಿ ಸಹಸ್ರಾ ಸಹಸ್ರಾಣಿ ಶ್ರವಾಂಸ್ಯನ್ನಾನ್ಯಾಶಿರಲಕ್ಷಣಾನಿ ಲಕ್ಷೀಕೃತ್ಯ ಪವಿತ್ರೇಭಿಃ ಪವಿತ್ರಚ್ಛಿದ್ರೈಃ ಪವಮಾನಾಃ ಪೂಯಮಾನಾ ಮಹೇ ಮಹತೇ ವಾಜಾಯಾನ್ನಾಯಾಮೃತಾ-

ಯಾಮೃತತ್ವಾಯಾಭ್ಯಸೃಗ್ರನ್ । ಸೃಜ್ಯಂತೇ । ಕಿಮಿಚ್ಛವಃ । ಶ್ರವಸ್ಯವೋಽನ್ನೇಚ್ಛವಃ ಪೃತನಾಜಃ ಸೇನಾ-ಜೇತಾರೋಽತ್ಯಾ ನಾಶ್ವಾ ಇವ ॥

॥ ಪ್ರತಿಪದಾರ್ಥ ॥

ಏತೇ ಸೋಮಾಃ—ಈ ಸೋಮರಸಗಳು । ಗವ್ಯಾ—ಗೋವುಗಳಿಂದ ಸಂಪಾದಿತವಾದ । ಸಹಸ್ರಾಶ್ರವಾಂಸಿ—ಅನೇಕವಿಧವಾದ ಅನ್ನಗಳನ್ನು ದ್ದೇಶಿಸಿಯೂ । ಪವಿತ್ರೇಭಿಃ—ದಶಾಪವಿತ್ರಗಳಿಂದ । ಪವಮಾನಾಃ—ಶುದ್ಧಿಗೊಳಿಸಲ್ಪಟ್ಟವನಾಗಿಯೂ । ಮಹೇ—ಮಹತ್ತಾದ । ವಾಜಾಯ-ಅನ್ನಾರ್ಥವಾಗಿಯೂ । ಅಮೃತಾಯ-ಅಮೃತತ್ವ ಸಂಪಾದನೆಗಾಗಿಯೂ । ಶ್ರವಸ್ಯವಃ—ಅನ್ನೇಚ್ಛುಗಳೂ । ಪೃತನಾಜಃ—ಯುದ್ಧವನ್ನು ಜಯಿಸಿದವೂ ಆದ । ಅತ್ಯಾಃ ನ—ಅಶ್ವಗಳಂತೆ । ಅಭ್ಯಸೃಗ್ರನ್—ಸ್ವತಂತ್ರವಾಗಿ ಬಿಡಲ್ಪಡುತ್ತವೆ.

॥ ಭಾವಾರ್ಥ ॥

ಈ ಸೋಮರಸಗಳು ಗೋವುಗಳಿಂದ ಸಂಪಾದಿತವಾದ ಅನೇಕವಿಧವಾದ ಅನ್ನಾಭಿಮುಖವಾಗಿಯೂ, ದಶಾಪವಿತ್ರಗಳಿಂದ ಶುದ್ಧಿಗೊಳಿಸಲ್ಪಟ್ಟವಾಗಿಯೂ, ಮಹತ್ತಾದ ಅನ್ನಾರ್ಥವಾಗಿಯೂ, ಅಮೃತತ್ವ ಸಂಪಾದನೆಗಾಗಿಯೂ ಸಹ ಯುದ್ಧವನ್ನು ಜಯಿಸಿದವೂ, ಅನ್ನೇಚ್ಛುಗಳೂ ಆದ ಅಶ್ವಗಳಂತೆ ಸ್ವತಂತ್ರವಾಗಿ ಬಿಡಲ್ಪಡುತ್ತವೆ.

## English Translation.

These Soma-juices, (going towards) the thousand viands produced by cows, purified by the filters, are let loose for ample food and ambrosia, desiring food like horses victorius over a host.

॥ ಸಂಹಿತಾಪಾಠಃ ॥

ಪರಿ ಹಿ ಷ್ಮಾ ಪುರುಹೂತೋ ಜನಾನಾಂ ವಿಶ್ವಾಸರದ್ಭೋಜನಾ ಪೂಯಮಾನಃ ।

ಅಥಾ ಭರ ಶ್ಯೇನಭೃತ ಪ್ರಯಾಂಸಿ ರಯಿಂ ತುಂಜಾನೋ ಅಭಿ ವಾಜಮರ್ಷ ॥ ೬ ॥

॥ ಪದಪಾಠಃ ॥

ಪರಿ । ಹಿ । ಸ್ಮ । ಪುರುಽಹೂತಃ । ಜನಾನಾಂ । ವಿಶ್ವಾ । ಅಸರತ್ । ಭೋಜನಾ । ಪೂಯಮಾನಃ ।

ಅಥ । ಆ । ಭರ । ಶ್ಯೇನಽಭೃತ । ಪ್ರಯಾಂಸಿ । ರಯಿಂ । ತುಂಜಾನಃ । ಅಭಿ । ವಾಜಂ । ಅರ್ಷ ॥ ೬ ॥

॥ ಸಾಯಣಭಾಷ್ಯಂ ॥

**ಅಯಂ ಪರ್ಯಸರತ್ ಪರಿಸರತಿ ಜನಾನಾಮರ್ಥಾಯ ವಿಶ್ವಾ ಸರ್ವಾಣಿ ಭೋಜನಾ ಭೋಜನಾನ್ಯನ್ನಾನಿ ಧನಾನಿ ವಾ । ಕೀದೃಶಃ । ಪುರುಹೂತೋ ಬಹುಭಿರಾಹೂತಃ ಪೂಯಮಾನಃ ಶೋಧ್ಯಮಾನಃ । ಅಥ ಪ್ರತ್ಯಕ್ಷಕೃತಃ । ಅಥೇದಾನೀಂ ಹೇ ಶ್ಯೇನಭೃತ ಶ್ಯೇನೇನಾಹೃತ ಸೋಮ ತ್ವಂ ಪ್ರಯಾಂಸ್ಯನ್ನಾನ್ಯಾ ಭರ । ಆಹರ । ರಯಿಂ ಧನಂ ತುಂಜಾನೋ ದದಾನೋ ವಾಜಮನ್ನಂ ರಸಮಭ್ಯರ್ಷ । ಅಭಿಗಚ್ಛ ॥**

॥ ಪ್ರತಿಪದಾರ್ಥ ॥

**ಪುರುಹೂತಃ**—ಅನೇಕರ ಆಹ್ವಾನಕ್ಕೆ ಪಾತ್ರನೂ । **ಪೂಯಮಾನಃ**—ಶುದ್ಧಿಗೊಳಿಸಲ್ಪಟ್ಟವನೂ ಆದ ಸೋಮದೇವನು । **ಜನಾನಾಂ**—ಮಾನವರ ಹಿತಕ್ಕಾಗಿ । **ವಿಶ್ವಾ ಭೋಜನಾ**—ಭೋಗಾರ್ಹವಾದ ಸಕಲ ಧನವನ್ನೂ । **ಪರ್ಯಸರತ್**—ಹರಡಿ ಹಂಚುತ್ತಾನೆ । **ಶ್ಯೇನಭೃತ** - ಶ್ಯೇನಪಕ್ಷಿಯಿಂದ ವಹಿಸಲ್ಪಟ್ಟ ಎಲೈ ಸೋಮದೇವನೇ । **ಪ್ರಯಾಂಸಿ**—ಅನ್ನಗಳನ್ನು । **ಆ ಭರ**—ಒದಗಿಸು । **ರಯಿಂ**—ಧನವನ್ನು । **ತುಂಜಾನಃ**—ಒದಗಿಸುತ್ತ । **ವಾಜಂ**—ರಸರೂಪವಾದ ಅನ್ನವನ್ನು । **ಅಭ್ಯರ್ಷ**—ಹರಿಸು.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನೂ, ಶುದ್ಧಿಗೊಳಿಸಲ್ಪಟ್ಟವನೂ ಆದ ಸೋಮದೇವನು ಮಾನವರ ಹಿತಕ್ಕಾಗಿ ಭೋಗಾರ್ಹವಾದ ಸಕಲ ಧನವನ್ನೂ ಹರಡಿ ಹಂಚುತ್ತಾನೆ. ಶ್ಯೇನಪಕ್ಷಿಯಿಂದ ವಹಿಸಲ್ಪಟ್ಟ ಎಲೈ ಸೋಮದೇವನೇ, ನಮಗೆ ಅನ್ನಗಳನ್ನು ಒದಗಿಸು. ನಮಗೆ ಧನವನ್ನು ಒದಗಿಸುತ್ತ, ರಸರೂಪವಾದ ಅನ್ನವನ್ನು ಹರಿಸು.

## English Translation.

Invoked by many, the Soma, undergoing purification, pours forth all food (for the sake of men) ; falcon-borne, bring us food, conveying wealth, send forth your juice.

॥ ಸಂಹಿತಾಪಾಠಃ ॥

**ನಿಷ ಸುವಾನಃ ಪರಿ ಸೋಮಃ ಪವಿತ್ರೇ ಸರ್ಗೋ ನ ಸೃಷ್ಟೋ ಅದಧಾವದರ್ವಾ ।**

**ತಿಗ್ಮೇ ಶಿಶಾನೋ ಮಹಿಷೋ ನ ಶೃಂಗೇ ಗಾ ಗವ್ಯನ್ನಭಿ ಶೂರೋ ನ ಸತ್ವಾ ॥ ೭ ॥**

|| ಪದಪಾಠಃ ||

ಏಷಃ । ಸುವಾನಃ । ಪರಿ । ಸೋಮಃ । ಪವಿತ್ರೇ । ಸರ್ಗಃ । ನ । ಸೃಷ್ಟಃ । ಅದಧಾವತ್ । ಅರ್ವಾ ।
ತಿಗ್ಮೇ ಇತಿ । ಶಿಶಾನಃ । ಮಹಿಷಃ । ನ । ಶೃಂಗೇ ಇತಿ । ಗಾಃ । ಗವ್ಯನ್ । ಅಭಿ । ಶೂರಃ । ನ ।
ಸತ್ವಾ || ೭ ||

|| ಸಾಯಣಭಾಷ್ಯಂ ||

ಏಷ ಸುವಾನಃ ಸೂಯಮಾನೋಽರ್ವಾರಣಕುಶಲಃ ಸೋಮಃ ಸರ್ಗೋ ನ ಸೃಷ್ಟೋ ವಿಸೃಷ್ಟೋಽಶ್ವ ಇವ ಪವಿತ್ರೇ ಪರ್ಯದಧಾವತ್ । ಪರಿಧಾವತಿ । ಕಿಂಚ ತಿಗ್ಮೇ ತೀಕ್ಷ್ಣೇ ಶೃಂಗೇ ಶಿಶಾನಸ್ತೀಕ್ಷ್ಣೀಕುರ್ವನ್ ಮಹಿಷೋ ನ ಮಹಾನ್ ಮಹಿಷಾಖ್ಯೋ ಮೃಗ ಇವ । ತಥಾನ್ಯದೃಷ್ಟಾಂತಃ । ಗಾ ಗವ್ಯನ್ ಪ್ರಭೂತಾ ಗಾ ಇಚ್ಛನ್ನುಸ್ರೋ ನ ಶೂರ ಇವ । ಏತೌ ಮಹಿಷಶೂರೌ ಯಥಾ ಪ್ರತಿಬುದ್ಧಾ ಶೀಘ್ರಂ ಧಾವತಃ ತದ್ವತ್ ಸತ್ವಾ ಸದನಶೀಲೋಽಯಂ ಗಚ್ಛತೀತಿ ಶೇಷಃ ||

|| ಪ್ರತಿಪದಾರ್ಥ ||

**ಸುವಾನಃ**—ಹಿಂಡಲ್ಪಟ್ಟಾಗ । **ಅರ್ವಾ**—ಶೀಘ್ರಗಾಮಿಯಾದ । **ಏಷಃ ಸೋಮಃ**—ಈ ಸೋಮನು । **ಸೃಷ್ಟಃ**—ಸ್ವತಂತ್ರವಾಗಿ ಬಿಡಲ್ಪಟ್ಟ । **ಸರ್ಗಃ ನ**—ಅಶ್ವದಂತೆ । **ಪವಿತ್ರೇ**—ದಶಾಪವಿತ್ರದಲ್ಲಿ । **ಪರ್ಯದಧಾವತ್**—ಓಡುತ್ತಾನೆ । **ತಿಗ್ಮೇ**—ತೀಕ್ಷ್ಣಗಳಾದ । **ಶೃಂಗೇ**—ಕೊಂಬುಗಳನ್ನು । **ಶಿಶಾನಃ**—ಹರಿತಮಾಡಿರುವ । **ಮಹಿಷೋ ನ**—ಮಹಿಷದಂತೆಯೂ । **ಗಾ ಗವ್ಯನ್**—ಪ್ರಭೂತವಾದ ಗೋವುಗಳನ್ನು ಇಚ್ಛಿಸುವ । **ಶೂರೋ ನ**—ಶೂರನಂತೆಯೂ । **ಸತ್ವಾ**—ಸ್ಥಿತಿಯನ್ನು ಹೊಂದಿದ ಸೋಮನು ಕಾಣುತ್ತಾನೆ.

|| ಭಾವಾರ್ಥ ||

ಶೀಘ್ರಗಾಮಿಯಾದ ಸೋಮನು ಹಿಂಡಲ್ಪಟ್ಟಾಗ ಸ್ವತಂತ್ರವಾಗಿ ಬಿಡಲ್ಪಟ್ಟ ಅಶ್ವದಂತೆ ದಶಾಪವಿತ್ರದಲ್ಲಿ ಓಡಿಹೋಗಿ ಸೇರುತ್ತಾನೆ. ತಾನು ಸ್ಥಿತಿಯನ್ನು ಹೊಂದಿದಾಗ, ತೀಕ್ಷ್ಣವಾದ ಕೊಂಬುಗಳನ್ನು ಹರಿತಮಾಡಿರುವ ಮಹಿಷದಂತೆಯೂ, ಪ್ರಭೂತವಾದ ಗೋವುಗಳನ್ನು ಇಚ್ಛಿಸುವ ಶೂರನಂತೆಯೂ ಕಾಣುತ್ತಾನೆ

## English Translation

When effused, this quick-flowing Soma hastens to the filter like a steed let loose ; whilst alighting (he moves) like a buffalo sharpening his pointed horns, like a warrior on a foray for cattle.

## English Translation.

Demolish the strong dwellings of the Rakshasa ; Indu, when purified put on his strength; cut to pieces with your destructive weapon (the Rakshasas) who come from above, from nigh. or from afar and their leader.

॥ ಸಂಹಿತಾಪಾಠಃ ॥

ಸ ಪ್ರತ್ನವನ್ನವ್ಯಸೇ ವಿಶ್ವವಾರ ಸೂಕ್ತಾಯ ಪಥಃ ಕೃಣುಹಿ ಪ್ರಾಚಃ ।
ಯೇ ದುಃಷಹಾಸೋ ವನುಷಾ ಬೃಹಂತಸ್ತಾಂಸ್ತೇ ಅಶ್ಯಾಮ ಪುರುಕೃತ್ಪು-
ರುಕ್ಷೋ ॥ ೫ ॥

॥ ಪದಪಾಠಃ ॥

ಸಃ । ಪ್ರತ್ನऽವತ್ । ನವ್ಯಸೇ । ವಿಶ್ವऽವಾರ । ಸುऽಉಕ್ತಾಯ । ಪಥಃ । ಕೃಣುಹಿ । ಪ್ರಾಚಃ ।
ಯೇ । ದುಃऽಸಹಾಸಃ । ವನುಷಾ । ಬೃಹಂತಃ । ತಾನ್ । ತೇ । ಅಶ್ಯಾಮ । ಪುರುऽಕೃತ್ । ಪುರುಕ್ಷೋ
ಇತಿ ಪುರುऽಕ್ಷೋ ॥ ೫ ॥

॥ ಸಾಯಣಭಾಷ್ಯಂ ॥

ಹೇ ವಿಶ್ವವಾರ ವಿಶ್ವೈಃ ಸರ್ವೈರ್ವರಣೀಯ ಹೇ ಸೋಮ ಸ ತಾದೃಶಸ್ತ್ವಂ ಪ್ರತ್ನವತ್ ಪುರಾಣ ಇವ ಸ್ಥಿತಸ್ತ್ವಂ ನವ್ಯಸೇ ನವೀಯಸೇ ನವತರಾಯ ॥ ನವಶಬ್ದಾದೀಯಸುನೀಕಾರಲೋಪಶ್ಛಾಂದಸಃ ॥ ತಸ್ಮೈ ಸೂಕ್ತಾಯ ಶೋಭನಸ್ತುತಿಕಾಯ ಮಹ್ಯಂ ಪಥೋ ಮಾರ್ಗಾನ್ ಪ್ರಾಚಃ ಪ್ರಾಚೀನಾನ್ ಕೃಣುಹಿ । ಕುರು । ಸರ್ವತ್ರ ಗಮನಂ ಪ್ರಯಚ್ಛೇತ್ಯರ್ಥಃ ॥ ಕೃವಿ ಹಿಂಸಾಕರಣಯೋಃ । ಧಿನ್ವಿಕೃಣ್ವ್ಯೋ-ರಚ್ಚೇತ್ಯುಪ್ರತ್ಯಯಃ ॥ ಹೇ ಪುರುಕೃದ್ಬಹುಕರ್ಮನ್ ಹೇ ಪುರುಕ್ಷೋ ॥ ಟುಕ್ಷು ಶಬ್ದೇ । ಮಿತದ್ರ್ವಾ-ದಿತ್ವಾಡ್ಡುಪ್ರತ್ಯಯಃ । ಪಾ. ೩-೨-೧೮೦-೧ ॥ ಬಹುವಿಧಂ ಶಬ್ದಾಯಮಾನ ಹೇ ಸೋಮ ದುಃಸಹಾಸೋ ರಕ್ಷೋಭಿಃ ಸೋಢುಮಶಕ್ಯಾಃ ಅತ ಏವ ವನುಷಾ । ವನತಿರ್ಹಿಂಸಾರ್ಥಃ । ಹಿಂಸಯಾ ಯುಕ್ತಾ ಬೃಹಂತೋ ಮಹಾಂತೋ ಯೇ ತ್ವದೀಯಾಃ ಅಂಶಾಃ ಸಂತಿ ತಾಂಸ್ತೇ ತವ ಸ್ವಭೂತಾನಂಶಾನ್ವಯಂ ಯಜ್ಞೇऽಶ್ಯಾಮ । ಪ್ರಾಪ್ನುಯಾಮ ॥

॥ ಪ್ರತಿಪದಾರ್ಥ ॥

ವಿಶ್ವವಾರ—ಸಕಲರ ಪೂಜೆಗೂ ಪಾತ್ರನಾದ ಎಲೈ ಸೋಮದೇವನೇ । ಸಃ—ಪ್ರಸಿದ್ಧನಾದ ನೀನು । ಪ್ರತ್ನವತ್—ಪುರಾತನನಾಗಿದ್ದು । ನವ್ಯಸೇ—ಈಗಿನವನೂ । ಸೂಕ್ತಾಯ—ಉತ್ತಮವಾದ ಸ್ತುತಿಕರ್ತನೂ ಆದ ನನಗೆ । ಪಥಃ—ಉತ್ತಮವಾದ ಮಾರ್ಗಗಳನ್ನು । ಪ್ರಾಚಃ—ನನ್ನ ಅಭಿಮುಖವಾಗುವಂತೆ । ಕೃಣುಹಿ—

ಮಾಡು | **ಪುರುಕೃತ್**—ಅನೇಕಕರ್ಮಗಳನ್ನು ಮಾಡತಕ್ಕವನೂ | **ಪುರುಕ್ಷ್ಣೋ**—ಅಧಿಕವಾಗಿ ಶಬ್ದಮಾಡ ತಕ್ಕವನೂ ಆದ ಎಲೈ ಸೋಮನೇ | **ದುಃಸಹಾಸಃ**—ಶತ್ರುಗಳು ಎದುರಿಸಲಾಗದುದೂ | **ವನುಷಾ**—ಶತ್ರು ಹಿಂಸಕವೂ | **ಬೃಹಂತಃ**—ಮಹತ್ಸ್ವರೂಪವುಳ್ಳವೂ ಆದ | **ಯೇ**—ಯಾವ ನಿನ್ನ ಸತ್ವಗಳಿವೆಯೋ | **ತಾನ್**—ಅವುಗಳನ್ನು | **ತೇ**—ನಾವು | **ಅಶ್ಯಾಮ**—ಹೊಂದುವಂತಾಗಲಿ.

| ಭಾವಾರ್ಥ ||

ಸಕಲರ ಪೂಜೆಗೂ ಪಾತ್ರನಾದ ಎಲೈ ಸೋಮದೇವನೇ, ಪ್ರಸಿದ್ಧನಾದ ನೀನು ಪುರಾತನನಾಗಿದ್ದು, ಈಗಿನವನೂ, ಉತ್ತಮವಾದ ಸ್ತುತಿಕರ್ತನೂ ಆದ ನನಗೆ ಉತ್ತಮವಾದ ಮಾರ್ಗಗಳನ್ನು ತಿಳಿಸು. ಅನೇಕ ಕರ್ಮ ಕಾರಕನೂ, ಅಧಿಕವಾಗಿ ಶಬ್ದಮಾಡುವವನೂ ಆದ ಎಲೈ ಸೋಮನೇ, ಶತ್ರುಗಳಿಂದ ಅಪ್ರತಿಹತವಾದುದೂ, ಶತ್ರುಹಿಂಸಕವೂ ಮಹತ್ಸ್ವರೂಪವುಳ್ಳವೂ ಆದ ಯಾವ ನಿನ್ನ ಸತ್ವಗಳಿವೆಯೋ ಅವುಗಳನ್ನು ನಾವು ಹೊಂದುವಂತಾಗಲಿ.

## English Translation.

Adorable (Soma), you as of old grant the ancient paths to your new worshipper ; doer of many acts, utterer of many sounds, may we obtain those (portions) of you which are difficult to defeat, inflicting injury (on foes) and mighty.

|| ಸಂಹಿತಾಪಾಠಃ ||

**ಏವಾ ಪುನಾನೋ ಅಪಃ ಸ್ವರ್ಗಾ ಅಸ್ಮಭ್ಯಂ ತೋಕಾ ತನಯಾನಿ ಭೂರಿ |**
**ಶಂ ನಃ ಕ್ಷೇತ್ರಮುರು ಜ್ಯೋತೀಂಷಿ ಸೋಮ ಜ್ಯೋಙ್ನಃ ಸೂರ್ಯಂ**
**ದೃಶಯೇ ರಿರೀಹಿ || ೬ ||**

|| ಪದಪಾಠಃ ||

ಏವ | ಪುನಾನಃ | ಅಪಃ | ಸ್ವಃ | ಗಾಃ | ಅಸ್ಮಭ್ಯಂ | ತೋಕಾ | ತನಯಾನಿ | ಭೂರಿ |
ಶಂ | ನಃ | ಕ್ಷೇತ್ರಂ | ಉರು | ಜ್ಯೋತೀಂಷಿ | ಸೋಮ | ಜ್ಯೋಕ್ | ನಃ | ಸೂರ್ಯಂ | ದೃಶಯೇ |
ರಿರೀಹಿ || ೬ ||

|| ಸಾಯಣಭಾಷ್ಯಂ ||

ಹೇ ಸೋಮ ಏವ್ಮೇವಂ ಪುನಾನಃ ಪೂಯಮಾನಃ ಪವಿತ್ರಾದಿಭಿರಸ್ಮಭ್ಯಂ ರಿರೀಹಿ | ಪ್ರಾಪಯ | ಪ್ರಯಚ್ಛ | ಕಿಂ ತತ್ | ಅಪಃ | ಅಪ ಇತ್ಯಂತರಿಕ್ಷ ನಾಮ | ಆಪ್ನೋತಿ ಸರ್ವಮಪಿ | ಅಂತರಿಕ್ಷಂ ಸ್ವಃ

ಸ್ವರ್ಗಂ ದ್ಯುಲೋಕಂ ಗಾಃ । ಸರ್ವೈರ್ಗಮ್ಯತೇಽತ್ರೇತಿ ಗಾವಃ ಪೃಥಿವ್ಯಃ । ತಾಃ ಪೃಥಿವೀಶ್ಚ ಭೂರಿ ॥ ಸುಪಾಂ ಸುಲುಗಿತಿ ದ್ವಿತೀಯಾಯಾ ಲುಕ್ ॥ ಬಹೂಂಸ್ತೋಕಾ ಪುತ್ರಾಂಸ್ತನಯಾನಿ । ತನ್ವಂತಿ ಕುಲಮಿತಿ ತನಯಾಃ ಪೌತ್ರಾಃ । ತಾಂಶ್ಚ ತಥಾ ನೋಽಸ್ಮಭ್ಯಂ ಕ್ಷೇತ್ರಂ ಶಂ ಸುಖಕರಂ ಕುರು । ಹೇ ಸೋಮ ಜೋತೀಂಷಿ ನಕ್ಷತ್ರಾಣ್ಯುರೂರೂಣ್ಯಂತರಿಕ್ಷೇ ವಿಸ್ತೀರ್ಣಾನಿ ಕುರು ತಥಾ ನೋಽಸ್ಮಭ್ಯಂ ಸೂರ್ಯಮಾದಿತ್ಯಂ ಜ್ಯೋಕ್ । ಚಿರನಾಮೈತತ್ । ಚಿರಕಾಲಂ ದೃಶಯೇ ದ್ರಷ್ಟುಂ ಕುರು ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) । **ಏವ**— ಈ ರೀತಿ । **ಪುನಾನಃ**—ಶುದ್ಧಿಯನ್ನು ಹೊಂದಿದ ನೀನು । **ಅಸ್ಮಭ್ಯಂ**—ನಮಗೆ । **ಅಪಃ**—ಅಂತರಿಕ್ಷವನ್ನೂ । **ಸ್ವಃ**—ದ್ಯುಲೋಕವನ್ನೂ । **ಗಾಃ**—ಭೂಮಿಗಳನ್ನೂ । **ಭೂರಿ**—ಅಧಿಕವಾಗಿ । **ತೋಕಾ**—ಪುತ್ರರನ್ನೂ । **ತನಯಾನಿ**—ಪೌತ್ರರನ್ನೂ । **ರಿರೀಹಿ**—ಒದಗಿಸು । **ನಃ**—ನಮಗೆ । **ಕ್ಷೇತ್ರಂ**—ಕ್ಷೇತ್ರವನ್ನು । **ಶಂ**—ಸುಖಕರವನ್ನಾಗಿ ಮಾಡು । **ಸೋಮ**—ಎಲೈ ಸೋಮನೇ । **ಜ್ಯೋತೀಂಷಿ**—ನಕ್ಷತ್ರಗಳನ್ನು । **ಉರು**—ವಿಸ್ತೃತವಾದ ಅಂತರಿಕ್ಷದಲ್ಲಿ ಪ್ರಕಾಶಿಸುವಂತೆ ಮಾಡು । **ನಃ**—ನಮಗೆ । **ಸೂರ್ಯಂ**—ಆದಿತ್ಯನನ್ನು । **ಜ್ಯೋಕ್**—ಅನೇಕಕಾಲ । **ದೃಶಯೇ**—ಗೋಚರನಾಗುವಂತೆ ಮಾಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನೀನು ನಮಗೆ ಅಂತರಿಕ್ಷವನ್ನೂ, ದ್ಯುಲೋಕವನ್ನೂ, ಪೃಥಿವಿಗಳನ್ನೂ, ಅಧಿಕವಾಗಿ ಪುತ್ರರನ್ನೂ, ಪೌತ್ರರನ್ನೂ ಒದಗಿಸು. ನಮ್ಮ ಕ್ಷೇತ್ರವನ್ನು ಸುಖಕರವನ್ನಾಗಿ ಮಾಡು. ಅಂತರಿಕ್ಷದಲ್ಲಿ ನಕ್ಷತ್ರಗಳು ಪ್ರಕಾಶಿಸುವಂತೆ ಮಾಡು ನಾವು ಅನೇಕಕಾಲ ಆದಿತ್ಯನನ್ನು ನೋಡುವಂತಾಗಲಿ.

English Translaton

Thus, being purified. bestow upon us the firmament and heaven and earth and many sons and grandsons ; make our land prosper, diffuse the luminaries widely (in the firmament) and grant us long life to see the sun·

## ತೊಂಭತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪರಿ ಸುವಾನ ಇತಿ ಷಡೃಚಂ ಸಪ್ತಮಂ ಸೂಕ್ತಂ ಮಾರೀಚಸ್ಯ ಕಶ್ಯಪಸ್ಯಾರ್ಷಂ ತ್ರೈಷ್ಟುಭಂ ಪವಮಾನಸೋಮದೇವತಾಕಂ ॥ ಪರಿ ಸುವಾನ ಇತ್ಯನುಕ್ರಾಂತಂ ॥ ಗತೋ ವಿನಿಯೋಗಃ ॥

ಅನುವಾದವು—**ಪರಿ ಸುವಾನಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಮರೀಚಪುತ್ರನಾದ ಕಶ್ಯಪನು ಋಷಿಯು; ಪವಮಾನ

ಸೋಮನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಪರಿ ಸುವಾನಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೨

ಮಂಡಲ—೯ ‖ ಅನುವಾಕ—೫ ‖ ಸೂಕ್ತ—೯೨ ‖

ಅಷ್ಟಕ—೭ ‖ ಅಧ್ಯಾಯ—೪ ‖ ವರ್ಗ—೨ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ‖

‖ ಋಷಿಃ—ಕಶ್ಯಪಃ ‖

‖ ದೇವತಾ—ಪವಮಾನಃ ಸೋಮಃ ‖

‖ ಛಂದಃ—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಪರಿ ಸುವಾನೋ ಹರಿರಂಶುಃ ಪವಿತ್ರೇ ರಥೋ ನ ಸರ್ಜಿ ಸನಯೇ ಹಿಯಾನಃ ।
ಆಪಚ್ಛ್ಲೋಕಮಿಂದ್ರಿಯಂ ಪೂಯಮಾನಃ ಪ್ರತಿ ದೇವಾँ ಅಜುಷತ ಪ್ರಯೋಭಿಃ ‖ ೧ ‖

‖ ಪದಪಾಠಃ ‖

ಪರಿ । ಸುವಾನಃ । ಹರಿಃ । ಅಂಶುಃ । ಪವಿತ್ರೇ । ರಥಃ । ನ । ಸರ್ಜಿ । ಸನಯೇ । ಹಿಯಾನಃ ।
ಆಪತ್ । ಶ್ಲೋಕಂ । ಇಂದ್ರಿಯಂ । ಪೂಯಮಾನಃ । ಪ್ರತಿ । ದೇವಾನ್ । ಅಜುಷತ । ಪ್ರಯಃಽಭಿಃ ‖೧‖

‖ ಸಾಯಣಭಾಷ್ಯಂ ‖

ಸುವಾನೋಽಭಿಷೂಯಮಾಣೋ ಹಿಯಾನ ಋತ್ವಿಗ್ಭಿಃ ಪ್ರೇರ್ಯಮಾಣೋ ಹರಿರ್ಹರಿತವರ್ಣೋಽಂಶುಃ ಸೋಮಃ ಪವಿತ್ರೇಽವಿವಾಲೇನ ಕೃತೇ ದಶಾಪವಿತ್ರೇ ಪರಿ ಸರ್ಜಿ । ಪರಿಸೃಜ್ಯತೇ ಕಿಮರ್ಥಂ । ಸನಯೇ ಧನಲಾಭಾಯ ದೇವಾನಾಂ ಸಂಭಜನಾಯ ವಾ । ತತ್ರ ದೃಷ್ಟಾಂತಃ । ರಥೋ ನ ರಥೋ ಯಥಾ ಯುದ್ಧೇ ಶತ್ರುವಧಾರ್ಥಂ ಶತ್ರುಧನಹರಣಾರ್ಥಂ ವಾ ಸೃಜ್ಯತೇ ತದ್ವತ್ । ಕಿಂಚ ಪೂಯಮಾನಃ ಪವಿತ್ರೇಣ ಸೋಽಯಂ ಸೋಮ ಇಂದ್ರಿಯಮಿಂದ್ರಲಿಂಗಮಿಂದ್ರಸ್ಯ ಪರ್ಯಾಪ್ತಂ ವಾ ಶ್ಲೋಕಂ ಸ್ತೋತ್ರಮಾಪತ್ । ಆಪ್ನೋತಿ ‖ ಆಪ್ಲೃ ವ್ಯಾಪ್ತೌ । ಲೇಟ್ಯಡಾಗಮಃ । ತಥಾ ಸ ಸೋಮಃ ಪ್ರಯೋಭಿಃ ಪ್ರೀಣಯಿತೃಭಿರ್ಹವೀರೂಪೈರನ್ನೈರ್ದೇವಾನ್ಪ್ರತ್ಯಜುಷತ । ಪ್ರತಿಸೇವತೇ ‖ ಜುಷೀ ಪ್ರೀತಿಸೇವನಯೋಃ ‖

॥ ಪ್ರತಿಪದಾರ್ಥ ॥

**ಸುವಾನಃ**—ಹಿಂಡಲ್ಪಟ್ಟುದೂ | **ಹಿಯಾನಃ**—ಋತ್ವಿಕ್ಕುಗಳಿಂದ ಪ್ರೇರಿತವಾದುದೂ | **ಹರಿಃ**—ಪಚ್ಚೆವರ್ಣವುಳ್ಳದ್ದೂ ಆದ | **ಅಂಶುಃ**—ಸೋಮವು | **ರಥೋ ನ**—ರಥದಂತೆ | **ಪವಿತ್ರೇ**—ದಶಾಪವಿತ್ರದಲ್ಲಿ | **ಸನಯೇ**—ಧನಲಾಭಾರ್ಥವಾಗಿ | **ಪರಿಸರ್ಜಿ**—ಬಿಡಲ್ಪಡುತ್ತದೆ. | **ಪೂಯಮಾನಃ**—ಶುದ್ಧಿಯನ್ನು ಹೊಂದಿ | **ಇಂದ್ರಿಯಂ**—ಇಂದ್ರನಿಗೆ ತೃಪ್ತಿದಾಯಕವಾಗಿದ್ದು | **ಶ್ಲೋಕಂ**—ಸ್ತುತಿಯನ್ನು | **ಆಪತ್**—ಹೊಂದುತ್ತದೆ. | **ಪ್ರಯೋಭಿಃ**—ಪ್ರೀತಿಕಾರಕವಾದ ಹವಿಸ್ಸುಗಳೊಡನೆ | **ದೇವಾನ್**—ದೇತವಗಳನ್ನು | **ಪ್ರತ್ಯಜುಷತ**—ಸೇವಿಸುತ್ತದೆ

॥ ಭಾವಾರ್ಥ ॥

ಹಿಂಡಲ್ಪಟ್ಟುದೂ, ಋತ್ವಿಕ್ಕುಗಳಿಂದ ಪ್ರೇರಿತವಾದುದೂ, ಪಚ್ಚೆವರ್ಣವುಳ್ಳದ್ದೂ ಆದ ಸೋಮವು ರಥದಂತೆ ದಶಾಪವಿತ್ರದಲ್ಲಿ ಧನಲಾಭಾರ್ಥವಾಗಿ ಬಿಡಲ್ಪಡುತ್ತದೆ. ಶುದ್ಧಿಯನ್ನು ಹೊಂದಿ ಇಂದ್ರನಿಗೆ ತೃಪ್ತಿದಾಯಕವಾಗಿರುವುದರಿಂದ ಸ್ತುತಿಸಲ್ಪಡುತ್ತದೆ. ಪ್ರೀತಿಕಾರಕವಾದ ಹವಿಸ್ಸುಗಳೊಡನೆ ದೇವತೆಗಳನ್ನು ಸೇವಿಸುತ್ತದೆ.

## English Translation.

The green-tinted Soma effused and sent forth (by the priests) is let loose, like a chariot upon the filter, for the acquisition (of riches); being filtered he acquires (Indra's) praise, he gratifies the gods with conciliatory (oblations).

॥ ವಿಶೇಷವಿಷಯಗಳು ॥

**ಅಂಶು ಸನಯೇ ರಥೋ ನ ಸರ್ಜಿ—ಅಯಂ ಸೋಮಃ ಧನಲಾಭಾಯ ದೇವಾನಾಂ ಸಂಭಜನಾಯ ವಾ ಪರಿಸೃಜ್ಯತೇ । ತತ್ರ ದೃಷ್ಟಾಂತಃ । ಯಥಾ ರಥಃ ಯುದ್ಧೇ ಶತ್ರುವಧಾರ್ಥಂ ಶತ್ರುಧನಹರಣಾರ್ಥಂ ವಾ ಸೃಜ್ಯತೇ ತದ್ವತ್ ।** ಇಲ್ಲಿ ಜಜ್ಜಲ್ಪಡುವ ಸೋಮಲತೆಗಳಿಂದ ಹೊರಸೂಸುವ ಸೋಮರಸವನ್ನು ಯುದ್ಧಾರ್ಥವಾಗಿ ಹೊರಡುವ ರಥಕ್ಕೆ ಹೋಲಿಸಿದೆ. ಯುದ್ಧಾರ್ಥವಾಗಿ ಹೊರಡುವ ರಥವು ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಲು ಸಹಾಯಕವಾಗುವುದಲ್ಲದೆ, ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದನಂತರ ಅವರಲ್ಲಿದ್ದ ಧನಾದಿಗಳನ್ನು ತರುವುದಕ್ಕಾಗಿಯೂ ಸಹಾಯಮಾಡುವುದು. ಅದರಂತೆ ಹಿಂಡಲ್ಪಡುವ ಸೋಮರಸವು ಧನಲಾಭಾರ್ಥವಾಗಿಯೂ, ಇಂದ್ರನಿಗೆ ಪ್ರೀತ್ಯರ್ಥವಾಗಿಯೂ, ಶಕ್ತಿಸಾಮರ್ಥ್ಯಗಳ ಪ್ರಾಪ್ತಿಗಾಗಿಯೂ ಮಾಡಲ್ಪಡುವ ಯಜ್ಞಾದಿ ಕರ್ಮಗಳಲ್ಲಿ ಉಪಯೋಗಿಸಲ್ಪಡುವುದು. ಸೋಮಪರವಾದ ಅರ್ಥದಲ್ಲಿ **ಸನಯೇ** ಎಂಬ ಪದಕ್ಕೆ ಧನಲಾಭಾರ್ಥವಾಗಿ ಅಥವಾ ದೇವತೆಗಳು ಯಜ್ಞಕ್ಕೆ ಬರುವುದಕ್ಕಾಗಿ ಎಂಬಭಿಪ್ರಾಯವನ್ನು ಸೂಚಿಸುವುದು. ಹಾಗೆಯೇ **ಇಂದ್ರಿಯಂ** ಎಂಬ ಶಬ್ದವು ವೀರ್ಯ, ಶಕ್ತಿ ಎಂಬರ್ಥವನ್ನೂ ಅಥವಾ ಇಂದ್ರನನ್ನುದ್ದೇಶಿಸಿ ಪಠಿಸುವ ಸ್ತೋತ್ರವನ್ನು ಎಂಬರ್ಥವನ್ನೂ ಸೂಚಿಸುವುದು.

॥ ಸಂಹಿತಾಪಾಠಃ ॥

ಅಚ್ಛಾ ನೃಚಕ್ಷಾ ಅಸರತ್ಪವಿತ್ರೇ ನಾಮ ದಧಾನಃ ಕವಿರಸ್ಯ ಯೋನೌ ।
ಸೀದನ್ಹೋತೇವ ಸದನೇ ಚಮೂಷೂಪೇಮಗ್ಮನ್ನೃಷಯಃ ಸಪ್ತ ವಿಪ್ರಾಃ ॥

॥ ಪದಪಾಠಃ ॥

ಅಚ್ಛ । ನೃಽಚಕ್ಷಾಃ । ಅಸರತ್ । ಪವಿತ್ರೇ । ನಾಮ । ದಧಾನಃ । ಕವಿಃ । ಅಸ್ಯ । ಯೋನೌ ।
ಸೀದನ್ । ಹೋತಾಽಇವ । ಸದನೇ । ಚಮೂಷು । ಉಪ । ಈಂ । ಅಗ್ಮನ್ । ಋಷಯಃ । ಸಪ್ತ ।
ವಿಪ್ರಾಃ ॥ ೨ ॥

॥ ಸಾಯಣಭಾಷ್ಯಂ ॥

ನೃಚಕ್ಷಾ ನೃಣಾಂ ದ್ರಷ್ಟಾ ಕವಿಃ ಕ್ರಾಂತಪ್ರಜ್ಞಃ ಸೋಮೋ ನಾಮ ವಸತೀವರ್ಯಾಖ್ಯಮುದಕಂ ದಧಾನೋ ಧಾರಯನ್ನಸ್ಯೈತಾದೃಶಸ್ಯಾತ್ಮನೋ ಯೋನೌ ಸ್ಥಾನೇ ಪವಿತ್ರೇಽಚ್ಛಾಸರತ್ । ಅಭಿತಃ ಸರತಿ । ತತಃ ಸದನೇ । ಸೀದಂತ್ಯತ್ರೇತಿ ಸದನೋ ಯಜ್ಞಃ । ತಸ್ಮಿನ್ ಹೋತೇವ ಹೋತಾ ಯಥಾ ದೇವಾನ್ ಸ್ತೋತುಮುಪವಿಶತಿ ತದ್ವದ್ದೇವಾನಾಗಂತುಮುಪವಿಶನ್ ಸೋಮಶ್ಚಮೂಷು । ಚಮಂತಿ ಚಮ್ವೋ ಗ್ರಹಾದಯಃ । ತೇಷ್ವಭಿಸರತಿ । ಅನಂತರಂ ಸಪ್ತಸಂಖ್ಯಾಕಾ ವಿಪ್ರಾ ಮೇಧಾವಿನಃ ಭರದ್ವಾಜಃ ಕಶ್ಯಪೋ ಗೋತಮೋಽತ್ರಿರ್ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠ ಇತ್ಯೇತ ಋಷಯ ಈಮೇನಂ ಸೋಮಮುಪಾಗ್ಮನ್ । ಸ್ತೋತ್ರೈರುಪಗಚ್ಛಂತಿ ॥

॥ ಪ್ರತಿಪದಾರ್ಥ ॥

ನೃಚಕ್ಷಾಃ—ಮಾನವರನ್ನು ನೋಡಬಲ್ಲವನೂ । **ಕವಿಃ**—ಕ್ರಾಂತಪ್ರಜ್ಞನೂ ಆದ ಸೋಮನು । **ನಾಮ**—ಉದಕವನ್ನು । **ದಧಾನಃ**—ಧರಿಸಿಕೊಂಡು । **ಅಸ್ಯ ಯೋನೌ**—ತನ್ನ ಸ್ಥಾನವಾದ । **ಪವಿತ್ರೇ**—ದಶಾಪವಿತ್ರದಲ್ಲಿ । **ಅಚ್ಛ**—ಸರ್ವತ್ರ । **ಅಸರತ್**—ಪ್ರವಿಸುತ್ತಾನೆ । **ಸದನೇ ಸೀದನ್**—ಯಜ್ಞದಲ್ಲಿ ಕುಳಿತು । **ಹೋತೇವ**—ದೇವತೆಗಳನ್ನು ಸ್ತುತಿಸುವ ಹೋತೃವಿನಂತೆ । **ಚಮೂಷು**—ಚಮೂ ಪಾತ್ರೆಗಳಲ್ಲಿ ಸೋಮನು ದೇವತೆಗಳನ್ನು ಸೇವಿಸಲು ಸೇರುತ್ತಾನೆ । **ವಿಪ್ರಾಃ**—ಮೇಧಾವಿಗಳಾದ । **ಸಪ್ತ ಋಷಯಃ**—ಭರದ್ವಾಜಾದಿ ಏಳು ಜನ ಋಷಿಗಳೂ । **ಈಂ**—ಈ ಸೋಮನನ್ನು । **ಉಪಾಗ್ಮನ್**—ಸಮೀಪಿಸುತ್ತಾರೆ.

॥ ಭಾವಾರ್ಥ ॥

ಮಾನವರನ್ನು ನೋಡಬಲ್ಲವನೂ, ಕ್ರಾಂತಪ್ರಜ್ಞನೂ ಆದ ಸೋಮನು ಉದಕಮಿಶ್ರಿತನಾಗಿ ತನ್ನ ಸ್ಥಾನವಾದ ದಶಾಪವಿತ್ರದಲ್ಲಿ ಸರ್ವತ್ರ ಪ್ರವಿಸುತ್ತಾನೆ. ಯಜ್ಞದಲ್ಲಿ ಕುಳಿತು ದೇವತೆಗಳನ್ನು ಸ್ತುತಿಸುವ ಹೋತೃವಿನಂತೆ ಸೋಮನು ದೇವತೆಗಳನ್ನು ಸೇವಿಸಲು ಚಮೂಪಾತ್ರೆಗಳನ್ನು ಪ್ರವೇಶಿಸುತ್ತಾನೆ. ಮೇಧಾವಿಗಳಾದ ಭರದ್ವಾಜಾದಿ ಏಳು ಜನ ಋಷಿಗಳೂ ಈ ಸೋಮನನ್ನು ಸಮೀಪಿಸುತ್ತಾರೆ.

## English Translation.

The sage, the observer of men, retaining tfie water proceeds to his place on the filter; like a ministrant priest sitting at the sacrifice (the Soma flows) into the cups; the seven wise rishis approach him with praise.

### ವಿಶೇಷ ವಿಷಯಗಳು

**ನಾಮ ದಧಾನಃ—ವಸತೀವರ್ಯಾಖ್ಯಮುದಕಂ ಧಾರಯನ್ ।** ಇಲ್ಲಿ ನಾಮ ಶಬ್ದಕ್ಕೆ ಉದಕವೆಂದರ್ಥವು. (ನಿ.೨-೨೪) ಹಿಂಡಲ್ಪಟ್ಟ ಸೋಮರಸವನ್ನು ಸಂಸ್ಕಾರಮಾಡುವಾಗ ಅದಕ್ಕೆ ವಸತೀವರೀ ಎಂಬ ಪಾತ್ರೆಗಳಲ್ಲಿರುವ ನೀರನ್ನು ಮಿಶ್ರಮಾಡುವುದು ವಿಧಿಯು. ಆದ್ದರಿಂದ ಅಂತಹ ವಸತೀವರೀಉದಕಗಳಿಂದ ಮಿಶ್ರಿತವಾದ ಸೋಮರಸವು ಎಂದು **ನಾಮ ದಧಾನಃ** ಎಂಬ ಶಬ್ದಗಳಿಗೆ ಅರ್ಥವು.

**ಯೋನೌ—ಸ್ವಸ್ಥಾನೇ ಪವಿತ್ರೇ** । ಯೋನಿ ಎಂದರೆ ಸ್ಥಾನವು. ಸೋಮವನ್ನು ದಶಾಪವಿತ್ರವೆಂಬ ಶೋಧನಮಾಡುವ ಪಾತ್ರೆಯಲ್ಲಿ ಸುರಿದು ಶೋಧಿಸುವುದರಿಂದ ಆ ಶೋಧನಪಾತ್ರೆಯಾದ ಪವಿತ್ರವೇ ಇಲ್ಲಿ ಯೋನಿ ಶಬ್ದದಿಂದ ಸೂಚಿತವಾಗಿರುವುದು.

**ಸೀದನ್ ಹೋತೇವ ಚಮೂಷು—ಹೋತಾ ಯಥಾ ಯಜ್ಞೇ ದೇವಾನ್ ಸ್ತೋತುಮುಪವಿಶತಿ ತಥಾ ಸೋಮಃ ಗ್ರಹಾದಿಚಮಸಪಾತ್ರೇಷು ಉಪವಿಶತಿ** ಯಜ್ಞವೇದಿಯಲ್ಲಿ ಹೋತೃವೆಂಬ ಋತ್ವಿಜನು ದೇವತೆಗಳನ್ನು ಸ್ತುತಿಸುವುದಕ್ಕಾಗಿ ಯಾವ ರೀತಿ ತನ್ನ ಸ್ಥಾನದಲ್ಲಿ ಕುಳಿತುಕೊಳ್ಳುವನೋ ಅದರಂತೆ ಸೋಮರಸವು ಅದಕ್ಕಾಗಿ ಸಿದ್ಧವಾಗಿರುವ ಚಮಸಾದಿಗ್ರಹಪಾತ್ರೆಗಳಲ್ಲಿ ಸ್ಥಾಪಿತವಾಗುವುದು ಎಂದಭಿಪ್ರಾಯವು.

**ಹೋತಾ—ಹೋಮನಿಷ್ಪಾದಕೋ ಅಯಮಗ್ನಿಃ** । ಹೋತೃಶಬ್ದವು ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ದೇವತೆಗಳನ್ನು ಆಹ್ವಾನಮಾಡುವ ಋತ್ವಿಜನನ್ನು ನಿರ್ದೇಶಿಸುವುದಾದರೂ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸುಗಳನ್ನು ದೇವತೆಗಳಿಗೆ ತಲುಪಿಸುವುದಕ್ಕಾಗಿ ದೇವತೆಗಳನ್ನು ಕರೆದುಕೊಂಡು ಬಂದು ಅವರಿಗೆ ಹವಿಸ್ಸನ್ನು ಅರ್ಪಿಸಿ ಯಾಗವನ್ನು ನಿರ್ವಹಿಸುವ ಅಗ್ನಿಗೂ ಅನ್ವಯಿಸುವುದು ಎಂಬ ಅರ್ಥವನ್ನು ವಿವರಿಸಿದೆ. ಈ ವಿಧವಾದ ಅರ್ಥವು ಅಗ್ನಿಯ ವಿಷಯದಲ್ಲಿ ವಿಶೇಷವಾಗಿ ಪ್ರಯೋಗಿಸಲ್ಪಡುವುದು.

ಅಲ್ಲದೇ **ಹೋಮನಿಷ್ಪಾದಕಂ ಆಹ್ವಾತಾರಂ ವಾ** । ಹವಿರಾದ್ಯರ್ಪಣೆಗಳಿಂದ ಹೋಮಸಂಪಾದಕನು ಅಥವಾ ದೇವತೆಗಳಿಗೆ ಆಹ್ವಾನವನ್ನು ಕೂಡತಕ್ಕವನು ಎಂದು ಹೋತೃವಿಗೆ ಎರಡು ವಿಧವಾದ ಕ್ರಿಯೆಗಳುಂಟೆಂದು ಹೋತೃ ಶಬ್ದಕ್ಕೆ ಅರ್ಥವನ್ನು ಹೇಳಿದೆ. ಇದೇ ಅಭಿಪ್ರಾಯವನ್ನು ಐತರೇಯ ಬ್ರಾಹ್ಮಣದಲ್ಲಿ ವಿವರಿಸುತ್ತಾ ಚರ್ಚಾರೂಪದಲ್ಲಿ ಈ ರೀತಿ ಹೇಳಿದೆ. ಅದು ಯಜ್ಞದಲ್ಲಿ ಹೋತೃವಿನಸ್ಥಾನವನ್ನು ತಿಳಿಸುತ್ತದೆ.

> **ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಮಿಷ್ಟಿಭಿಃ ಪ್ರೈಷಮೈಚ್ಛನ್ಯದಿಷ್ಟಿಭಿಃ ಪ್ರೈಷಮೈಚ್ಛಂಸ್ತದಿಷ್ಟೀನಾಮಿಷ್ಟಿತ್ವಂ ತಮನ್ವವಿಂದನ್ । ಅನುವಿತ್ತಯಜ್ಞೋ ರಾಧ್ನೋತಿ ಯ ಏವಂ ವೇದ । ಆಹುತಯೋ ವೈ ನಾಮೈತಾ ಯದಾಹುತಯ ಏತಾಭಿರ್ವೈ ದೇವಾನ್ಯಜಮಾನೋ ಹ್ವಯತಿ ತದಾಹುತೀನಾಮಾಹುತಿತ್ವಂ । ಊತಯಃ ಖಲು ವೈ ತಾ ನಾಮ ಯಾಭಿರ್ದೇವಾ**

**ಯಜಮಾನಸ್ಯ ಹ್ಯವಮಾಯಂತ್ಯಯೇ ವೈ ಪಂಥಾನೋ ಯಾಃ ಸ್ರುತಯಸ್ತಾ ವಾ ಊತಯಸ್ತಾ ಉ ಏವೈತತ್ಸ್ವರ್ಗಯಾಣಾ ಯಜಮಾನಸ್ಯ ಭವಂತಿ ||**

(ಐ. ಬ್ರಾ. ೧–೨)

ಒಂದು ಸಲ ಯಜ್ಞವು ದೇವತೆಗಳಿಂದ ದೂರವಾಯಿತು. ಆಗ ಅವರು ಆಹುತಿಯನ್ನರ್ಪಿಸುವುದರಿಂದ ಅದನ್ನು ಪುನಃ ಪಡೆದರು. ಆಹುತಿಯೆಂದರೆ ದೇವತೆಯ ಹೆಸರನ್ನುದ್ದೇಶಿಸಿ ಆಹ್ವಾನಮಾಡುವುದರ ಮೂಲಕ ಮಾಡತಕ್ಕ ಅರ್ಪಣೆ. ಇಂತಹ ಆಹುತಿಯನ್ನರ್ಪಿಸುವವನಿಗೆ ಹೋತೃವೆಂದು ಹೆಸರು ಎಂದು ಹೇಳಿದರೆ ಆಗ ಇನ್ನೊಂದು ಪ್ರಶ್ನೆಯು ಏಳುತ್ತದೆ.

**ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ। ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ। ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ||** (ಐ. ಬ್ರಾ. ೧–೨)

ಆಹುತಿಯನ್ನರ್ಪಿಸುವವನೇ ಬೇರೆ ಆಹುತ್ಯರ್ಪಣಕ್ಕೆ ಆಹ್ವಾನವನ್ನು ಕೊಟ್ಟು ಮಂತ್ರವನ್ನುಚ್ಚರಿಸುವವನೇ ಬೇರೆ ಯಾದರೂ ಸಹ ಅರ್ಪಣಮಂತ್ರವನ್ನುಚ್ಚರಿಸುವವನಿಗೆ ಹೇಗೆ ಹೋತೃವೆಂಬ ಹೆಸರು ಉಚಿತವಾಗುತ್ತದೆಂಬ ಪ್ರಶ್ನೆಗೆ ಈ ಮಂತ್ರವನ್ನು ಪಠಿಸತಕ್ಕವನು ಆಯಾ ಅರ್ಪಣಾಪರಿಮಾಣಕ್ಕನುಗುಣವಾಗಿ ಆಯಾ ದೇವತೆಗಳನ್ನು ಕರೆಯುವುದರಿಂದ ಅವನಿಗೂ ಹೋತೃವೆಂಬ ಹೆಸರು ಸರಿಯಾಗಿದೆಯೆಂದು ತಿಳಿಸಿ ಅನಂತರ,

**ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ ।**

(ಐ ಬ್ರಾ. ೬–೫)

ಎಂಬ ವಾಕ್ಯದಿಂದ ಮಂತ್ರವನ್ನು ಪಠಿಸುವ ವಾಕ್ಕಿಗೂ ಹೋತೃವಿಗೂ ತಾದಾತ್ಮ್ಯವನ್ನು ಹೇಳಿದೆ. ಮತ್ತು,

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀ ನಾಭಿಃ......................ನಿ ಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀ ನಾಭಿಃ ||**

(ಐ. ಬ್ರಾ. ೫–೨)

ಇತ್ಯಾದಿ ವಾಕ್ಯಗಳು ಹೋಮನಿಷ್ಪಾದಕನಾದ ಅಗ್ನಿಯನ್ನು ಹೋತೃವೆಂದು ಸಂಬೋಧಿಸುತ್ತದೆ ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಹೋತಾರಂ** ಎಂಬ ಪದಕ್ಕೆ **ಹೋಮನಿಷ್ಪಾದಕಂ ಆಹ್ವಾತಾರಂ ವಾ** ಎಂದು ಎರಡು ವಿಧವಾದ ಅರ್ಥ ಮಾಡಬಹುದು.

**ಋಷಯಃ ಸಪ್ತ ವಿಪ್ರಾ ಅಗ್ಮನ್—ಸಪ್ತ ಋಷಯ ಏನಂ ಸೋಮಂ ಸ್ತೋತ್ರೈರುಪಗಚ್ಛಂತಿ ।** ಮೇಧಾವಿಗಳಾದ ಏಳು ಜನ ಋಷಿಗಳು ಸ್ತೋತ್ರಮಂತ್ರಗಳನ್ನು ಪಠಿಸುತ್ತಾ ಸೋಮನನ್ನು ಸಮೀಪಿಸುವರು. ಇಲ್ಲಿ—ಭರದ್ವಾಜ, ಕಶ್ಯಪ, ಗೋತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ ಎಂಬುವರೇ ಸಪ್ತರ್ಷಿಗಳೆಂದು ಹೇಳಲ್ಪಡುವರು.

**ಋಯಷಃ— ಋಷಿಃ ಅತೀಂದ್ರಿಯದ್ರಷ್ಟಾ** । ಇತರ ಸಾಮಾನ್ಯ ಜನರಿಗೆ ತಿಳಿಯಲು ಸಾಧ್ಯವಿಲ್ಲದ ಭೂತ ಭವಿಷ್ಯದ್ವರ್ತಮಾನಗಳನ್ನೂ, ಬ್ರಹ್ಮ ಸ್ವರೂಪವನ್ನೂ ತನ್ನ ತಪಶ್ಶಕ್ತಿಯಿಂದ ತಿಳಿಯಬಲ್ಲವನಿಗೆ ಋಷಿ ಯೆಂದು ಹೆಸರು.

ಋಷಿಶಬ್ದದ ನಿರ್ವಚನವನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ಹೇಳಿದೆ. ಜೊತೆಯಲ್ಲಿಯೇ ಸೃಷ್ಟಿಗೂ, ಋಷಿಗೂ ಇರತಕ್ಕ ಸಂಬಂಧವನ್ನೂ ಸಹ ತಿಳಿಸಿದೆ.

**“ ಅಸದ್ವಾ ಇದಮಗ್ರ ಆಸೀತ್ । ತದಾಹುಃ ಕಿಂ ತದಸದಾಸೀದಿತ್ಯೃಷಯೋ ವಾವ ತೇಽಗ್ರೇಽಸದಾಸೀತ್ತದಾಹುಃ ಕೇ ತ ಋಷಯ ಇತಿ ಪ್ರಾಣಾ ವಾ ಋಷಯಸ್ತೇ ಯತ್ಪುರಾಸ್ಮಾತ್ಸರ್ವ-ಸ್ಮಾದಿದಮಿಚ್ಛಂತಃ ಶ್ರಮೇಣ ತಪಸಾರಿಷಂಸ್ತಸ್ಮಾದೃಷಯಃ ”**

(ಶ. ಬ್ರಾ. ೬-೧-೧-೧)

ಸೃಷ್ಟಿಗೆ ಪೂರ್ವದಲ್ಲಿ ಅಸತ್ತು ಮಾತ್ರವಿದ್ದಿತು. ಈ ಋಷಿಗಳೇ ಆ ರೂಪದಲ್ಲಿದ್ದರು. ಋಷಿಗಳಾರೆಂದರೆ ಅವರೇ ಮುಖ್ಯಪ್ರಾಣರು. ಸೃಷ್ಟಿಗೆ ಪೂರ್ವದಲ್ಲಿ ಜಗತ್ಸೃಷ್ಟಿಯನ್ನಿಚ್ಛಿಸಿ ಅದಕ್ಕಾಗಿ ತಪಸ್ಸನ್ನಾಚರಿಸಿ ಶ್ರಮಿಸಿದರು. ಆದುದರಿಂದ ಅವರಿಗೆ ಋಷಿಗಳೆಂದು ಹೆಸರು ಎಂದು ಋಷಿಶಬ್ದದ ನಿರ್ವಚನವನ್ನು ಹೇಳಿದೆ (ತಪಸಾರಿಷಂಸ್ತ-ಸ್ಮಾದೃಷಯಃ) ಮತ್ತು,

**“..........ಶ್ವಯಿ ತಂತುಮೇತಮಿತಿ ಯೋಽಸಾವೃಷಿಭಿಸ್ತಂತುಸ್ತತಸ್ತಮೇತದಾಹ ”**

(ಶ. ಬ್ರಾ. ೮-೬ ೩-೨೨)

ವಿಶ್ವಾತ್ಮಕವಾದ ಯಜ್ಞತಂತುವನ್ನು ನೂತರು; ಜಗತ್ತಿನ ವಿಸ್ತೃತಿಗೆ ಕಾರಣರಾದರು ಎಂದು ಋಷಿಶಕ್ತಿಯನ್ನು ಪ್ರಶಂಸಿಸಿದೆ. ಆದುದರಿಂದಲೇ ಸೃಷ್ಟಿಮೂಲನಾದ ಬ್ರಹ್ಮಸ್ವರೂಪರೆಂದೂ ಹೇಳಿದೆ.

**“ ಪ್ರಾಣಾ ವಾ ಋಷಯಃ ಪ್ರಥಮಜಾಸ್ತದ್ಧಿ ಬ್ರಹ್ಮ ಪ್ರಥಮಜಂ ”**

(ಶ. ಬ್ರಾ. ೮-೬-೧-೫)

ಎಂದು ಋಷಿಗಳಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ತೋರಿಸಿದೆ. ಇದೊಂದು ವಿಧವಾದ ನಿರ್ವಚನವಾದರೆ, ಇದಕ್ಕೆ ಪ್ರತಿಯಾಗಿ ಇನ್ನೊಂದು ನಿರ್ವಚನವೂ ಸಾಧ್ಯವಾಗುತ್ತದೆ. ವಾಚಸ್ಪತ್ಯದಲ್ಲಿ ಹೇಳಿರುವಂತೆ,

**“ ಋಷತಿ ಜ್ಞಾನೇನ ಸಂಸಾರಪಾರಂ ”**

ಸಂಸಾರಪಾರವನ್ನು ಜ್ಞಾನದ ಮೂಲಕ ದಾಟುವುದರಿಂದ **ಋಷ್** ಧಾತುವಿನಿಂದ ನಿಷ್ಪನ್ನವಾದ ಋಷಿಶಬ್ದಕ್ಕೆ ಜ್ಞಾನಿಗಳೆಂದರ್ಥವಾಗುತ್ತದೆ. ಹೀಗೆ ಒಂದು ನಿರ್ವಚನದ ಪ್ರಕಾರ ಜಗತ್ಸೃಷ್ಟಿಗೆ ಋಷಿಗಳು ಮೂಲಕಾರಣರೆಂದೂ, ಇನ್ನೊಂದು ನಿರ್ವಚನದ ಪ್ರಕಾರ ಸಂಸಾರನಿವೃತ್ತಿಗೆ ಕಾರಣರೆಂದೂ ಅರ್ಥವಾಗುತ್ತದೆ. ಋಷಿಗಳಲ್ಲಿ ಈ ಎರಡು ಶಕ್ತಿಗಳೂ ಇದ್ದವೆಂದು ಪ್ರಕೃತವಾದ ಋಕ್ಕಿನ ವರ್ಣನೆಯಿರುತ್ತದೆ. **“ ಉಭೌ ವರ್ಣೌ ಪುಪೋಷ ”** ಎಂಬಲ್ಲಿ ಕಾಮಸಂತೃಪ್ತಿಯನ್ನು ಪಡೆದುದರಿಂದ ಸೃಷ್ಟಿಸಾಮರ್ಥ್ಯವೂ, ಆಧ್ಯಾತ್ಮಿಕವಾದ ಜ್ಞಾನವನ್ನು ಪಡೆದುದರಿಂದ ಸಂಸಾರ ನಿವೃತ್ತಿಗೆ ಸಾಧನವಾದ ಶಕ್ತಿಯೂ ವರ್ಣಿತವಾಗಿದೆ.

**ಋಷೀ (ಋಷ್) ಗತೌ ।** ಎಂಬ ಗತ್ಯರ್ಥಕವಾದ ಧಾತುವಿನಿಂದ ಋಷಿಶಬ್ದವು ನಿಷ್ಪನ್ನವಾಗಿದೆಯೆಂದು ಮೇಲೆ ಹೇಳಿದ ನಿರ್ವಚನವು ತಿಳಿಸುತ್ತದೆ. ಅಲ್ಲದೇ **ದೃಶ್** ಧಾತುವಿನಿಂದಲೂ ಋಷಿಶಬ್ದವು ನಿಷ್ಪನ್ನವಾಗಿರಲು ಸಾಧ್ಯವೆಂದು Monier Williams ಎಂಬ ಪಂಡಿತನು ತನ್ನ Sanskrit-English Dictionary ಯಲ್ಲಿ ತಿಳಿಸಿ **ಋಷಿಕೃತ್** ಎಂಬ ಶಬ್ದಕ್ಕೆ ಅರ್ಥವನ್ನು ಹೇಳುವಾಗ ಎರಡು ಆಧಾರಗಳನ್ನು ತೋರಿಸಿ, Causing to see, enlightening ಎಂಬ ಅರ್ಥವನ್ನು ಹೇಳಿದ್ದಾನೆ. ಈ ಉದಾಹರಣೆಯಲ್ಲಿ ಮೊದಲನೆಯದಾಗಿ,

**ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ ಯಮಗಾಮ ದೂರಾತ್ ।**
**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ॥**

( ಋ. ಸಂ. ೧-೩೧-೧೬)

ಎಂಬ ಋಕ್ಕಿನಲ್ಲಿ **ಋಷಿಕೃತ್** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ. ಸಾಯಣರು ಈ ಪದಕ್ಕೆ **ದರ್ಶನಕಾರೀ** ಎಂಬರ್ಥವನ್ನು ಹೇಳಿದ್ದಾರೆ. ಇದರಂತೆಯೇ,

**ಋಷಿಮನಾ ಯ ಋಷಿಕೃತ್ಸ್ವರ್ಷಾಃ ಸಹಸ್ರಣೀಥಃ ಪದವೀಃ ಕವೀನಾಂ ।**
**ತೃತೀಯಂ ಧಾಮ ಮಹಿಷಃ ಸಿಷಾಸನ್ತ್ಸೋಮೋ ವಿರಾಜಮನು ರಾಜತಿ ಷ್ಟುಪ್ ॥**

(ಋ. ಸಂ. ೯-೯೬-೧೮)

ಎಂಬ ಋಕ್ಕಿನಲ್ಲಿಯೂ ಸಹ **ಋಷಿಮನಾಃ** ಎಂಬ ಪದಕ್ಕೆ **ಸರ್ವದರ್ಶನಶೀಲ ಮನಸ್ಕಃ** ಎಂದೂ, **ಋಷಿಕೃತ್** ಎಂಬುದಕ್ಕೆ **ಸರ್ವಸ್ಯ ದರ್ಶನಕರ್ತಾ** ಎಂದೂ ಅರ್ಥಮಾಡಿದೆ. ಲೌಕಿಕವಾಗಿಯೂ ಸಹ ತತ್ತ್ವಜ್ಞಾನಕ್ಕೆ ದರ್ಶನವೆಂಬ ಪರ್ಯಾಯಪದವು ಈ ಅಭಿಪ್ರಾಯಗಳನ್ನು ತಿಳಿಸುತ್ತದೆ.

॥ ಸಂಹಿತಾಪಾಠಃ ॥

**ಪ್ರ ಸುಮೇಧಾ ಗಾತುವಿದ್ವಿಶ್ವದೇವಃ ಸೋಮಃ ಪುನಾನಃ ಸದ ಏತಿ ನಿತ್ಯಂ ।**
**ಭುವದ್ವಿಶ್ವೇಷು ಕಾವ್ಯೇಷು ರಂತಾನು ಜನಾನ್ಯತತೇ ಪಂಚ ಧೀರಃ ॥ ೩ ॥**

। ಪದಪಾಠಃ ।

**ಪ್ರ । ಸುಽಮೇಧಾಃ । ಗಾತುಽವಿತ್ । ವಿಶ್ವಽದೇವಃ । ಸೋಮಃ । ಪುನಾನಃ । ಸದಃ । ಏತಿ । ನಿತ್ಯಂ ।**
**ಭುವತ್ । ವಿಶ್ವೇಷು । ಕಾವ್ಯೇಷು । ರಂತಾ । ಅನು । ಜನಾನ್ । ಯತತೇ । ಪಂಚ । ಧೀರಃ ॥ ೩ ॥**

॥ ಸಾಯಣಭಾಷ್ಯಂ ॥

**ಸುಮೇಧಾಃ ॥** ನಿತ್ಯಮಸಿಚ್ ಪ್ರಜಾಮೇಧಯೋಃ । ಪಾ. ೫-೪-೧೨೨ । ಇತ್ಯಸಿಚ್‌ಸಮಾಸಾಂತಃ ॥ ಶೋಭನಪ್ರಜ್ಞೋ ಗಾತುವಿನ್ಮಾರ್ಗಸ್ಯ ವೇತ್ತಾ । ಯದ್ವಾ । ಗಾತವಃ ಸ್ತೋತಾರಃ । ತೇಷಾಂ

ಧನಸ್ಯ ಲಂಭಯಿತಾ । ವಿಶ್ವದೇವಃ ಸರ್ವದೇವೋಪೇತಃ । ಯದ್ವಾ । ದೇವೋ ದೇವನಂ ದೀಪ್ತಿಃ । ವ್ಯಾಪಕದೀಪ್ತಿಯುಕ್ತಃ । ಏತಾದೃಶಃ ಸೋಮಃ ಪುನಾನಃ ಪೂಯಮಾನಃ ಸನ್ನಿತ್ಯಮವಿನಶ್ವರಂ ಸದಃ ಸ್ಥಾನಂ ದ್ರೋಣಕಲಶಂ ಪ್ರೈತಿ । ಪ್ರಗಚ್ಛತಿ । ತತೋ ವಿಶ್ವೇಷು ಸರ್ವೇಷು ಕಾವ್ಯೇಷು ಕವಿಕರ್ಮಸು ಸ್ತೋತ್ರೇಷು ರಂತಾ ಭುವತ್ । ರಮಣಶೀಲೋ ಭವತಿ ॥ ರಮೇಸ್ತಾಚ್ಛೀಲಿಕಸ್ತೃನ್ ॥ ತಥಾ ಧೀರಃ ಪ್ರಾಜ್ಞಃ ಸೋಽಯಂ ಪಂಚ ಜನಾನ್ನಿಷಾದಪಂಚಮಾಂಶ್ಚತುರೋ ವರ್ಣಾನನು ಯತತೇ । ಅನುಗಂತುಂ ಪ್ರಯತ್ನಂ ಕರೋತಿ । ಅನುಗಚ್ಛತೀತಿ ಯಾವತ್ ॥

॥ ಪ್ರತಿಪದಾರ್ಥ ॥

**ಸುಮೇಧಾಃ**–ಉತ್ತಮವಾದ ಪ್ರಜ್ಞೆಯುಳ್ಳವನೂ । **ಗಾತುವಿತ್**–ಸನ್ಮಾರ್ಗವನ್ನರಿತವನೂ । **ವಿಶ್ವದೇವಃ**–ಸಕಲ ದೇವತೆಗಳೊಡನೆ ಕೂಡಿದವನೂ ಆದ । **ಸೋಮಃ**—ಸೋಮದೇವನು । **ಪುನಾನಃ**—ಶುದ್ಧಿಯನ್ನು ಹೊಂದಿ । **ನಿತ್ಯಂ**—ನಿತ್ಯವಾದ (ನಾಶರಹಿತವಾದ) । **ಸದಃ**—ದ್ರೋಣಕಲಶವನ್ನು । **ಪ್ರ ಏತಿ**—ಪ್ರವೇಶಿಸುತ್ತಾನೆ । **ವಿಶ್ವೇಷು ಕಾವ್ಯೇಷು**—ಸಕಲವಾದ ಸ್ತುತಿಕರ್ಮಗಳಲ್ಲಿಯೂ । **ರಂತಾ ಭುವತ್**—ಹರ್ಷವನ್ನು ಹೊಂದುತ್ತಾನೆ । **ಧೀರಃ**—ಪ್ರಾಜ್ಞನಾದ ಸೋಮನು । **ಪಂಚ ಜನಾನ್**—ನಿಷಾದಾದಿ ಪಂಚಜನರನ್ನೂ । **ಅನು ಯತತೇ**—ಸಮೀಪಿಸಲು ಪ್ರಯತ್ನಿಸುತ್ತಾನೆ.

॥ ಭಾವಾರ್ಥ ॥

ಉತ್ತಮವಾದ ಪ್ರಜ್ಞೆಯುಳ್ಳವನೂ, ಸನ್ಮಾರ್ಗವನ್ನರಿತವನೂ, ಸಕಲ ದೇವತೆಗಳೊಡನೆ ಕೂಡಿದವನೂ ಆದ ಸೋಮದೇವನು ಶುದ್ಧಿಯನ್ನು ಹೊಂದಿ ನಾಶರಹಿತವಾದ ದ್ರೋಣಕಲಶವನ್ನು ಪ್ರವೇಶಿಸುತ್ತಾನೆ. ಸಕಲವಾದ ಸ್ತುತಿಕರ್ಮಗಳಲ್ಲಿಯೂ ಹರ್ಷವನ್ನು ಹೊಂದುತ್ತಾನೆ. ಪ್ರಾಜ್ಞನಾದ ಸೋಮನು ನಿಷಾದಾದಿ ಪಂಚಜನರನ್ನೂ ಸಮೀಪಿಸಲು ಪ್ರಯತ್ನಿಸುತ್ತಾನೆ.

## English Translation.

Soma, the intelligent, the knower of the right path, accompanied by all the gods, undergoing purification goes to his constant abode ; he is one who delights in all sacred praises ; the sage endeavours to approach the five classes of beings.

### ವಿಶೇಷವಿಷಯಗಳು

**ಪಂಚ ಜನಾನ್**—ಋಗ್ವೇದದಲ್ಲಿ **ಪಂಚ** ಜನಾಃ ಮತ್ತು **ಪಂಚ ಕ್ಷಿತಯಃ** ಎಂಬ ಶಬ್ದಗಳು ಅಲ್ಲಲ್ಲಿ ಉಪಯೋಗಿಸಿರುವುದು ಕಂಡುಬರುತ್ತದೆ. ಈ ಎರಡುವಿಧವಾದ ಶಬ್ದಗಳಿಗೂ ಒಂದೇ ಅರ್ಥವು. ಆದ್ದರಿಂದ **ಪಂಚಜನಾಃ** ಅಥವಾ **ಪಂಚಕ್ಷಿತಯಃ** ಎಂದರೆ ಇವರು ಯಾರು ಎಂಬ ವಿಷಯದಲ್ಲಿ

ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ,

೧. **ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ** । ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು ಮತ್ತು ಪಕ್ಷಿಗಳು ಎಂಬ ಐದು ವಿಧವೆಂದೂ, ಎರಡನೆಯದಾಗಿ,

೨. **ಚತ್ವಾರೋ ವರ್ಣಾಃ ನಿಷಾದಪಂಚಮಾಃ ಪಂಚ ಜನಾ ಇತ್ಯನ್ಯೇ**—ನಿಷಾದರೊಡಗೂಡಿದ ನಾಲ್ಕು ವರ್ಣದ ಜನರೆಂದು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಎರಡು ಅರ್ಥಗಳಿಗೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು. ಮೊದಲು ಕ್ಷಿತಿ ಶಬ್ದದ ನಿರ್ವಚನವನ್ನು ಪರಿಶೀಲಿಸಿ, ಅನಂತರ **ಪಂಚಕ್ಷಿತಿ** ಯೆಂಬುದಕ್ಕೆ ಪ್ರಕೃತದಲ್ಲಿ ಯಾವ ಅರ್ಥವನ್ನು ಹೇಳಬಹುದೆಂದು ಅನಂತರ ವಿಮರ್ಶಿಸಬಹುದು.

**ಕ್ಷಿತೀನಾಂ— ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ ಕ್ಷಿತಯೋ ಮನುಷ್ಯಾಃ** । ವಾಸಿಸುತ್ತಾರೆ ಅಥವಾ ಸಂಚರಿಸುತ್ತಾರೆ ಆದ್ದರಿಂದ ಮಾನವರಿಗೆ ಈ ವಿಶೇಷಣವಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಕ್ಷಿತಿ ಶಬ್ದವನ್ನು **ನರಃ** ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೭)

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।**
**ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ॥**
(ಋ. ಸಂ. ೩-೨೦-೪)

ಇತ್ಯಾದಿ ಋಕ್ಕುಗಳಲ್ಲಿ ಮಾನವರಿಗೂ, ದೇವಸಂಬಂಧಿಗಳಾದ ಪ್ರಜೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿ ಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಪಾರ್ಥಿವವಾದ ಮಾನವರೇ ಎಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಏಕೆಂದರೆ ಇಂದ್ರನ ಐಶ್ವರ್ಯವು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿರುತ್ತದೆ.

**ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ ।**
**ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ॥**
(ಋ. ಸಂ. ೧-೧೦೦-೧೫)

ಇತ್ಯಾದಿ ಋಕ್ಕುಗಳಲ್ಲಿ ದಾನಾದಿಗುಣಗಳಿಂದ ಕೂಡಿ ದೇವತಾತ್ಮಕನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲರ ಶಕ್ತಿಗಿಂತಲೂ ಮೀರಿದುದೆಂದೂ, ಅದರ ಅಂತವನ್ನು ದೇವತೆಗಳಾಗಲಿ ಮಾನವರಾಗಲಿ ಪಡೆಯಲಾಗಲಿಲ್ಲವೆಂದೂ, ಮತ್ತು ಇಂದ್ರನು ಶತ್ರುನಾಶಕವಾದುದೂ ಪ್ರಭಾವಯುತವಾದುದೂ ಆದ ತನ್ನ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗ ಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆಂದೂ ವರ್ಣಿಸಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂದ್ರನ ಐಶ್ವರ್ಯವು ಸರ್ವವ್ಯಾಪಿಯೆಂದು ವರ್ಣಿತವಾಗಿರುವುದರಿಂದಲೂ ಸಹ **ಪಂಚಕ್ಷಿತೀನಾಂ** ಎನ್ನುವುದಕ್ಕೆ ಕೇವಲ ನಿಷಾದಪಂಚಮರಿಂದ ಕೂಡಿದ ವರ್ಗಚತುಷ್ಟಯವೆಂದು ಹೇಳಲಾಗುವುದಿಲ್ಲ. ಈ ವಿಷಯದಲ್ಲಿ ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೆ ಇತರರ ಅಭಿಪ್ರಾಯಗಳನ್ನು ಮಾತ್ರ ತಿಳಿಸಿರುವರು.

**ಪಂಚಜನಾ "ಮಮ ಹೋತ್ರಂ ಜುಷಧ್ವಂ" ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ॥**
(ನಿ. ೩-೮)

ಗಂಧರ್ವರು, ಪಿತೃಗಳು, ದೇವತೆಗಳು ಅಸುರರು, ರಾಕ್ಷಸರು ಎಂದು ಐದು ವಿಧವಾದ ಗುಂಪುಗಳೆಂದು ಕೆಲವರೂ, ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ **ಪಂಚಜನರೆಂದು** ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**

(ಋ. ಸಂ. ೧೦-೫೩-೪)

**ಪಂಚಜನ**ರೂ ಸೇರಿ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾಕಾರರು ಉದಹರಿಸಿ **ಪಂಚಜನರು** ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥**

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನ**ಶಬ್ದವನ್ನು ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

(ಬೃ. ದೇ. ೭-೬೭)

ಎಂದರೆ, ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ, ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದು ವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯವಹಾರವಾಗಿದೆ. ಈ ಮತವಲ್ಲದೇ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ **ಉರಗರಾಕ್ಷಸರು** ಒಂದು ಗುಂಪು; ಎರಡನೆಯ ಅಭಿಪ್ರಾಯದಂತೆ ಯಕ್ಷರಾಕ್ಷಸರು ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದೆಯೇ ಹೊರತು ಯಾಸ್ಕರು ತಮ್ಮ ಮತವನ್ನು ನಿಷ್ಕೃಷ್ಟವಾಗಿ ತಿಳಿಸಿಲ್ಲ, ಪ್ರಾಯಶಃ ಅದನ್ನೇ ಅವರು ಅಂಗೀಕರಿಸಿರಬಹುದು.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**

(ಬೃ. ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯವರ ಮತವಾಗಿದೆ.

**ಚಕ್ಷುಃಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ॥**
**ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥**
**ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥**

(ಬೃ. ದೇ. ೭-೭೧,೭೨)

ಚಕ್ಷಸ್ಸು, ಶ್ರೋತ್ರ, ಮನಸ್ಸು ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನ**ರೆಂದು ಅಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ (ಐ. ಬ್ರಾ. ೩-೩೧-೫). ಇಂತಹ ಪಚಜನರೂ ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯ ಭೇದಗಳು ತಿಳಿಸಲ್ಪಟ್ಟಿವೆ.

**ಪಂಚ ಕ್ಷಿತೀನಾಂ ವಿಶ್ವಾನಿ ವಸು ಇಂದ್ರಸ್ಯ ಹಸ್ತಯೋಃ ।** ಎಂದು ೧-೧೭೬-೩ ನೇ ಋಕ್ಕಿನಲ್ಲಿ ವರ್ಣಿತವಾಗಿದೆ. ಸಕಲ ಲೋಕವೂ ಇಂದ್ರನ ರಕ್ಷಣೆಗೇ ಒಳಪಟ್ಟಿದುದರಿಂದ **ಪಂಚ ಕ್ಷಿತೀನಾಂ** ಎಂಬುದಕ್ಕೆ ಮೇಲಿನ ಅಭಿಪ್ರಾಯಗಳೆಲ್ಲವೂ ಹೊಂದಿಕೊಳ್ಳುತ್ತವೆ.

॥ ಸಂಹಿತಾಪಾಠಃ ॥

ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।
ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ॥

॥ ಪದಪಾಠಃ ॥

ತವ । ತ್ಯೇ । ಸೋಮ । ಪವಮಾನ । ನಿಣ್ಯೇ । ವಿಶ್ವೇ । ದೇವಾಃ । ತ್ರಯಃ । ಏಕಾದಶಾಸಃ ।
ದಶ । ಸ್ವಧಾಭಿಃ । ಅಧಿ । ಸಾನೌ । ಅವ್ಯೇ । ಮೃಜಂತಿ । ತ್ವಾ । ನದ್ಯಃ । ಸಪ್ತ । ಯಹ್ವೀಃ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಪವಮಾನ ಪೂಯಮಾನ ಹೇ ಸೋಮ ತವ ಸ್ವಭೂತಾಸ್ತ್ಯೇ ತೇ ಪ್ರಸಿದ್ಧಾಸ್ತ್ರಯ ಏಕಾದಶಾಸಃ ॥ ಪೂರಣಾರ್ಥೇ ಡಟ್ಪ್ರತ್ಯಯಃ ॥ ತ್ರಯಸ್ತ್ರಿಂಶತ್ಸಂಖ್ಯಾಕಾ ವಿಶ್ವೇ ಸರ್ವೇ ದೇವಾ ನಿಣ್ಯೇ । ಅಂತರ್ಹಿತನಾಮೈತತ್ । ಅಂತರ್ಹಿತೇ ಸ್ಥಾನೇ ದ್ಯುಲೋಕೇ ವರ್ತಂತೇ । ತಾದೃಶಂ ತ್ವಾಂ ದಶಸಂಖ್ಯಾಕಾ ಅಂಗುಲಯೋಽಧಿ ಸಾನಾವಧಿಕಂ ಸಮುಚ್ಛ್ರಿತೇಽವ್ಯೇಽವಿಮಯೇ ಪವಿತ್ರೇ ಸ್ವಧಾಭಿರುದಕೈರ್ಮೃಜಂತಿ । ಶೋಧಯಂತಿ । ಕಿಂಚ ಯಹ್ವೀಃ ॥ ವಾ ಛಂದಸೀತಿ ಪೂರ್ವಸವರ್ಣದೀರ್ಘಃ ॥**

ಯೇಹ್ವ್ಯೋ ಮಹತ್ಯಃ ಸಪ್ತಸಂಖ್ಯಾಕಾ ಗಂಗಾದ್ಯಾ ನದ್ಯಸ್ತ್ವಾ ತ್ವಾಂ ಮೃಜಂತಿ । ವಸತೀವರ್ಯಾತ್ಮೈಕೈರೇಕಧನಾತ್ಮಕೈಶ್ಚ ಸ್ವೀಯೈರುದಕೈಸ್ತ್ವಾಂ ಮಾರ್ಜಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪವಮಾನ**—ಪವಮಾನಸಂಜ್ಞಕನಾದ । **ಸೋಮ**—ಎಲೈ ಸೋಮದೇವನೇ । **ತವ**—ನಿನಗೆ ಸಂಬಂಧಿಸಿದವರೂ । **ತ್ಯೇ**—ಪ್ರಸಿದ್ಧರೂ । **ತ್ರಯ ಏಕಾದಶಾಸಃ**—ಮೂವತ್ತುಮೂರು ಸಂಖ್ಯೆಯುಳ್ಳವರೂ ಆದ । **ವಿಶ್ವೇ ದೇವಾಃ**—ಸಕಲ ದೇವತೆಗಳಿಗೂ । **ನಿಣ್ಯೇ**—ಗೂಢವಾದ ದ್ಯುಲೋಕದಲ್ಲಿದ್ದಾರೆ । **ದಶ**—ಹತ್ತು ಬೆರಳುಗಳೂ । **ಅಧಿ ಸಾನೌ**—ಉಚ್ಛ್ರಿತಪ್ರದೇಶದಲ್ಲಿರುವ । **ಅವ್ಯೇ**—ದಶಾಪವಿತ್ರದಲ್ಲಿ । **ಸ್ವಧಾಭಿಃ**—ಉದಕಗಳಿಂದ । **ಮೃಜಂತಿ**—ನಿನ್ನನ್ನು ಶೋಧಿಸುತ್ತವೆ । **ಯಹ್ವೀಃ**—ಮಹತ್ಸ್ವರೂಪಗಳುಳ್ಳ । **ಸಪ್ತ ನದ್ಯಃ**—ಏಳು ನದಿಗಳೂ । **ತ್ವಾ**—ನಿನ್ನನ್ನು । **ಮೃಜಂತಿ**—ಶುದ್ಧಿಗೊಳಿಸುತ್ತವೆ.

॥ ಭಾವಾರ್ಥ ॥

ಪವಮಾನ ಸಂಜ್ಞಕನಾದ ಎಲೈ ಸೋಮದೇವನೇ, ನಿನಗೆ ಸಂಬಂಧಿಸಿದವರೂ, ಪ್ರಸಿದ್ಧರೂ, ಮೂವತ್ತುಮೂರು ಸಂಖ್ಯೆಯುಳ್ಳವರೂ ಆದ ಸಕಲ ದೇವತೆಗಳೂ ಗೂಢವಾದ ದ್ಯುಲೋಕದಲ್ಲಿದ್ದಾರೆ. ಉಚ್ಛ್ರಿತಪ್ರದೇಶದಲ್ಲಿರುವ ದಶಾಪವಿತ್ರದಲ್ಲಿ ಅಧ್ವರ್ಯ್ವಾದಿ ಋತ್ವಿಗ್ಜನರ ಹತ್ತು ಬೆರಳುಗಳೂ ನಿನ್ನನ್ನು ಶೋಧಿಸುತ್ತವೆ. ಮಹತ್ಸ್ವರೂಪಗಳುಳ್ಳ ಏಳು ನದಿಗಳೂ ನಿನ್ನನ್ನು ಶುದ್ಧಿಗೊಳಿಸುತ್ತವೆ.

## English Translation.

O Soma Pavamana, your are the thrice eleven universal gods abiding in the secret (heaven); the ten (fingers) cleanse you with the waters upon the elevated fleece, the seven great rivers (cleanse you).

॥ ವಿಶೇಷವಿಷಯಗಳು ॥

**ತ್ರಯ ಏಕಾದಶಾಸಃ ವಿಶ್ವೇ ದೇವಾಃ**—ಮೂವತ್ತುಮೂರು ಮಂದಿ ದೇವತೆಗಳು ಎಂದರ್ಥವು. **ಯೇ ದೇವಾಸೋ ದಿವ್ಯೇಕಾದಶಸ್ಥ** ಎಂಬ ಋಕ್ಕಿನಲ್ಲಿ ಮೂವತ್ತಮೂರು ದೇವತೆಗಳು ಯಾರು ಎಂಬುದನ್ನು ತಿಳಿಸಿದೆ.

ಸಕಲ ದೇವತೆಗಳೂ ಆದ ನೀವು ನಮ್ಮ ಈ ಯಜ್ಞವನ್ನು ಸೇವಿಸಿ ಎಂದು ಮೂರು ಲೋಕಗಳ ದೇವತೆಗಳನ್ನೂ ಉದ್ದೇಶಿಸಿದೆ. **ದಿವಿ ಏಕಾದಶ, ಪೃಥಿವ್ಯಾಂ ಏಕಾದಶ, ಅಪ್ಸುಕ್ಷಿತೋ ಏಕಾದಶ** ಎಂದು ಮೂರು ಲೋಕಗಳಿಂದಲೂ ಒಟ್ಟು ದೇವತೆಗಳ ಸಂಖ್ಯೆಯು ಮೂವತ್ತುಮೂರೆಂದು ಹೇಳಿದೆ. ಸಾಯಣರು **ಯದ್ಯಪಿ ತಿಸ್ರ ಏವ ದೇವತಾಃ** (ನಿ. ೭-೫) ಎಂಬ ನಿರುಕ್ತವಚನವನ್ನುದಹರಿಸಿ **ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತಿಸ್ರ ಏವ ತಥಾಪಿ ಮಹಿತಾ ಮಹತ್ತ್ವೇನ ಸ್ವಸ್ವವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾತಾ ಭವಂತಿ । ತತ್ತತ್ಸ್ಥಾನಾ ಅನ್ಯಾಸ್ತದ್ವಿಭೂತಯ ಇತ್ಯುಕ್ತತ್ವಾತ್ ।** ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಾಭಿಮಾನಿದೇವತೆಗಳ ಸಂಖ್ಯೆಯು ಮೂರೇ ಆದರೂ ಸಹ ಅವರು ಅವರವರ ಮಹಿಮೆಯಿಂದ ೩೩ ಸಂಖ್ಯೆಯುಳ್ಳವರಾಗಿ ಕಾಣುತ್ತಾರೆ. ಆಯಾ ಲೋಕಗಳಲ್ಲಿರುವ ಉಳಿದ ದೇವತೆಗಳೆಲ್ಲಾ ಇವರ ವಿಭೂತಿಗಳು ಎಂದು ವಿವರಿಸಿದ್ದಾರೆ. ನಿರುಕ್ತಕಾರರೂ ಸಹ—

**ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾತ್ । (ನಿ. ೭-೫)**

ನೈರುಕ್ತಕಾರರ ಮತದಂತೆ, **ಅಗ್ನಿ, ವಾಯು** ಅಥವಾ **ಇಂದ್ರ** ಮತ್ತು **ಸೂರ್ಯ** ಈ ಮೂರು ದೇವತೆಗಳೂ ಸಹ ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳ ಅಧಿದೇವತೆಗಳು. ಈ ದೇವತೆಗಳಿಗೇ ಅವರವರ ಮಹತ್ತ್ವಕ್ಕನುಗುಣವಾಗಿಯಾಗಲಿ, ಕ್ರಿಯಾವೈವಿಧ್ಯಗಳ ದೆಸೆಯಿಂದಾಗಲೀ ಅನೇಕವಿಧವಾದ ನಾಮಧೇಯಗಳಿರುತ್ತವೆಯೆಂದು ಹೇಳಿ, **ಅಥಾತೋಽನುಕ್ರಮಿಷ್ಯಾಮ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ।** ಎಂದು ನಿ. ೭-೧೪ ರಿಂದ ೯-೪೩ ನೇ ಖಂಡದವರೆಗೆ ಪೃಥಿವೀಸ್ಥರಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ।** ಎಂದು ೧೦-೧ ರಿಂದ ೧೧-೫೦ ನೇ ಖಂಡದವರೆಗೆ ಮಧ್ಯಮಸ್ಥಾನವಾದ ಅಂತರಿಕ್ಷಸ್ಥದೇವತೆಗಳ ಸ್ವರೂಪವನ್ನೂ, **ಅಥಾತೋ ದ್ಯುಸ್ಥಾನಾ ದೇವತಾಃ** ಎಂದು ೧೨-೧ ರಿಂದ ಅಧ್ಯಾಯದ ಕೊನೆಯವರೆಗೆ ದ್ಯುಲೋಕಸ್ಥರಾದ ದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿವೆಯಾದರೂ ಋಕ್ಸಂಹಿತೆಯ ಅನೇಕ ಕಡೆಗಳಲ್ಲಿ ಒಂದೇವಿಧವಾದ ಅಭಿಪ್ರಾಯವು ಕಂಡುಬರುತ್ತದೆ.

**ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।**
**ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥**

(ಋ. ಸಂ. ೧೩೪-೧೧)

(೧೧-೩) ಮೂವತ್ತುಮೂರು ದೇವತೆಗಳೊಂದಿಗೂ ಮಧುಪಾನವನ್ನಪೇಕ್ಷಿಸಿ ಇಲ್ಲಿಗೆ ಬನ್ನಿರಿ ಎಂದು ಅಶ್ವಿನೀದೇವತೆಗಳನ್ನೂ,

**ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।**
**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥**

(ಋ. ಸಂ. ೧-೪೫-೨)

ಮೂವತ್ತುಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನೂ ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿರುವಂತೆಯೇ ಪ್ರಾರ್ಥಿಸಿದೆ.

**ಐಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।**
**ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ॥**

(ಋ. ಸಂ. ೩-೬-೯)

**ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ ।**
**ಮನೋರ್ದೇವಾ ಯಜ್ಞಿಯಾಸಃ ॥**

(ಋ. ಸಂ. ೮-೩೦-೨)

**ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।**

(ಋ ಸಂ. ೮-೩೫-೩)

ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।
ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ।

(ಋ. ಸಂ ೯-೯೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂಬುದು ಸ್ಪಷ್ಟವಾಗಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ,

ಅಷ್ಟೌ ವಸವಃ । ಏಕಾದಶ ರುದ್ರಾಃ । ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ।

(ಶ. ಬ್ರಾ. ೪-೫-೭-೨)

ಎಂಟು ವಸುಗಳೂ, ಹನ್ನೊಂದು ರುದ್ರರೂ, ಹನ್ನೆರಡು ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸೇರಿ ಮೂವತ್ತು ಮೂರು ದೇವತೆಗಳು. **ಪ್ರಜಾಪತಿಯು** ಇವರಲ್ಲದೇ ಮೂವತ್ತನಾಲ್ಕನೆಯವನು, ಎಂದು ಒಂದುಕಡೆ ಹೇಳಿದೆ. ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮೂವತ್ತಮೂರು ಸಂಖ್ಯೆಯಿದ್ದರೂ ಸಹ ದ್ಯಾವಾಪೃಥಿವಿಗಳಿಗೆ ಬದಲಾಗಿ ಇಂದ್ರನನ್ನೂ ಪ್ರಜಾಪತಿಯನ್ನೂ ಸೇರಿಸಿದೆ.

ತೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ।

(ಶ. ಬ್ರಾ. ೧೧-೬-೩-೫)

ಐತರೇಯ ಬ್ರಾಹ್ಮಣದಲ್ಲೂ ಸಹ,

ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ।

(ಐ. ಬಾ. ೨-೧೮)

ಸೋಮಪಾನವನ್ನು ಮಾಡತಕ್ಕವರು ಮೂವತ್ತಮೂರು ದೇವತೆಗಳು. ಅವರು ಅಷ್ಟವಸುಗಳು, ಏಕಾದಶ ರುದ್ರರು ಮತ್ತು ಧ್ವಾದಶಾದಿತ್ಯರು. ಇವರೊಂದಿಗೆ ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।
ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥

(ಋ. ಸಂ. ೩-೯-೯.)

ಎಂಬ ಋಕ್ಕಿನಲ್ಲಿಯೂ ಇದರಂತೆಯೇ ಋ. ಸಂ. ೧೦-೫೨-೬ ನೇ ಋಕ್ಕಿನಲ್ಲಿಯೂ ಸಹ ಮೂರುಸಾವಿರದ ಮುನ್ನೂರ ಮೂವತ್ತ ಒಂಭತ್ತು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯಸಂಹಿತೆಯಲ್ಲಿಯೂ (೩೩-೭) ಇದೇ ಆನುಪೂರ್ವಿಯಿದೆ. ಇದೂ ಅಲ್ಲದೆ,

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ।
ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ॥

(ಋ. ಸಂ. ೧-೨೭-೧೩)

ಅತ್ಯಧಿಕವಾದ ಗುಣವುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ ವೃದ್ಧರೂ ಆದ ಸಕಲ ವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ. ಈ ಋಕ್ಕನ್ನೇ ಐತರೇಯ ಬ್ರಾಹ್ಮಣದಲ್ಲೂ ಸಹ (೭-೧೬) ಶುನಶ್ಶೇಪೋಪಾಖ್ಯಾನದಲ್ಲಿ ವಿಶ್ವೇದೇವಪ್ರಾರ್ಥನಾಸಂದರ್ಭದಲ್ಲಿ ಪಠಿಸಿದೆ. ಆದರೆ,

**ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋಮಹಾಂತ ಇತ್ ॥**

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯೆ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆಯಿದೆ.

**ನದ್ಯಃ ಸಪ್ತ ಯಹ್ವೀಃ**—ಇಲ್ಲಿ ಏಳು ದೊಡ್ಡ ನದಿಗಳೆಂದು ಹೇಳಿದೆ. ಈ ಏಳು ದೊಡ್ಡ ನದಿಗಳು ಯಾವುವು ? ಅವುಗಳ ಹೆಸರೇನು ? ಇತ್ಯಾದಿ ವಿಷಯಗಳ ವಿಮರ್ಶೆಯನ್ನು ನಾವು ಹತ್ತನೆಯ ಮಂಡಲದ ೭೫ ನೆಯ ಸೂಕ್ತದ ಪೀಠಿಕೆಯಲ್ಲಿ ಮಾಡುವೆವು. ಅದೇ ಸೂಕ್ತದ ೫ ನೆಯ ಋಕ್ಕಿನಲ್ಲಿ ಈ ಮುಖ್ಯನದಿಗಳ ಹೆಸರುಗಳು ಈ ರೀತಿ ಉಕ್ತವಾಗಿವೆ—

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।**
**ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥**

(ಋ. ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ಗಂಗೆ, ಯಮುನೇ, ಸರಸ್ವತಿ, ಶುತುದ್ರಿ, ಪರುಷ್ಣೀ, ಅಸಿಕ್ನೀ, ಮರುದ್ವೃಧೇ, ವಿತಸ್ತಿ, ಆರ್ಜೀಕೀ ಸುಷೋಮಾ ಎಂಬ ಹತ್ತು ಮುಖ್ಯ ನದಿಗಳ ಹೆಸರುಗಳಿವೆ. ಇವುಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿಲ್ಲದ ವಿತಸ್ತಿ, ಅಸಿಕ್ನೀ, ಆರ್ಜೀಕಿ ಎಂಬ ಮೂರು ನದಿಗಳನ್ನು ಬಿಟ್ಟರೆ ಉಳಿದ ಏಳು ನದಿಗಳೂ ದೊಡ್ಡ ನದಿಗಳೆಂದು ಪ್ರಸಿದ್ಧವಾಗಿವೆ ಮತ್ತು ಈ ಸಪ್ತನದಿಗಳ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುತ್ತದೆ. ಮೇಲಿನ ಋಕ್ಕಿಗೆ ಯಾಸ್ಕರು ಬರೆದಿರುವ ನಿರುಕ್ತದಲ್ಲಿ ಈ ನದಿಗಳಿಗೆ ಈ ಹೆಸರುಗಳು ಹೇಗೆ ಬಂದವೆಂಬ ವಿವರಣೆ ಇರುವುದರಿಂದ ಅದನ್ನೇ ಇಲ್ಲಿ ನಾವು ವಿವರಿಸಿದ್ದೇವೆ.

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಪರುಷ್ಣಿ ಸ್ತೋಮಮಾಸೇವಧ್ವಮಸಿಕ್ನ್ಯಾ ಚ ಸಹ ಮರುದ್ವೃಧೇ ವಿತಸ್ತಯಾ ಚಾರ್ಜೀಕೀಯ ಆಶೃಣುಹಿ ಸುಸೋಮಯಾ ಚೇತಿ ಸಮಸ್ತಾರ್ಥಃ ॥**

**ಅಥೈಕಪದನಿರುಕ್ತಂ—ಗಂಗಾ ಗಮನಾತ್ ॥**
**ಯಮುನಾ ಪ್ರಯುವತೀ ಗಚ್ಛತೀತಿ ವಾ ಪ್ರವಿಯುತಂ ಗಚ್ಛತೀತಿ ವಾ ॥**
**ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ ॥**
**ಶುತುದ್ರೀಶುದ್ರಾವಿಣೀ ಕ್ಷಿಪ್ರದ್ರಾವಿಣ್ಯಾಶು ತುನ್ನೇವ ದ್ರವತೀತಿ ವಾ ॥**
**ಇರಾವತೀಂ ಪರುಷ್ಣೀತ್ಯಾಹುಃ—ಪರ್ವವತೀ ಭಾಸ್ವತೀ ಕುಟಿಲಗಾಮಿನೀ ॥**
**ಅಸಿಕ್ನ್ಯಶುಕ್ಲಾ ಶಿತಾ—ಸಿತಮಿತಿ ವರ್ಣನಾಮ ತತ್ಪ್ರತಿಷೇಧೋಽಸಿತಂ ॥**

ಮರುದ್ವೃಧಾಃ ಸರ್ವಾ ನದ್ಯೋ ಮರುತ ಏನಾ ವರ್ಧಯಂತಿ ವಿತಸ್ತಾ ವಿದಗ್ಧಾ ವಿವೃದ್ಧಾ ಮಹಾಕೂಲಾ ||

ಆರ್ಜೀಕೀಯಾಂ ವಿಪಾಡಿತ್ಯಾಹುಃ | ಋಜೀಕಪ್ರಭವಾ ವರ್ಜುಗಾಮಿನೀ ವಾ ವಿಪಾಡ್ವಿಪಾಟ-ನಾದ್ವಾ ವಿಪ್ರಾಶನಾದ್ವಾ ವಿಪ್ರಾಪಣಾದ್ವಾ ಪಾಶಾ ಅಸ್ಯಾಂ ವ್ಯಪಾಶ್ಯಂತ ವಸಿಷ್ಠಸ್ಯ ಮುಮೂ-ರ್ಷತಸ್ತಸ್ಮಾದ್ವಿಪಾಡುಚ್ಯತೇ || ಪೂರ್ವಮಾಸೀದುರುಂಜಿರಾ ||

ಸುಷೋಮಾ ಸಿಂಧುರ್ಯದೇನಾಮಭಿಪ್ರಸುವಂತಿ ನದ್ಯಃ ||
ಸಿಂಧುಃ ಸ್ಯಂದನಾತ್ ||

(ನಿ. ೯–೨೬)

ಎಲೈ ಗಂಗೆ, ಯಮುನೇ, ಸರಸ್ವತಿ, ಪರುಷ್ಣಿಯಿಂದ ಕೂಡಿರುವ ಶುತುದ್ರಿ, ಅಸಿಕ್ನಿಯೊಡನಿರುವ ಮರುದ್ವೃಧೆ, ವಿತಸ್ತೆಯೊಡನಿರುವ ಆರ್ಜೀಕೀಯೇ, ನೀವೆಲ್ಲರೂ ನಾನು ಪಠಿಸುತ್ತಿರುವ ಈ ಸ್ತೋತ್ರವನ್ನು ಕೇಳಿ ಎಂದು ಈ ಋಕ್ಕಿನ ಒಟ್ಟರ್ಥವು. ಈ ಗಂಗಾದಿಪ್ರತಿಶಬ್ದಕ್ಕೂ ನಿರುಕ್ತವನ್ನು ಎಂದರೆ ಅವಯವಾರ್ಥವನ್ನು ಹೇಳಲಾಗುವುದು—

**ಗಂಗಾ**— ಹೋಗು (ಪ್ರವಹಿಸು) ಎಂಬರ್ಥವಿರುವ ಗಮ್ಲೃಧಾತುವಿನಿಂದ ನಿಷ್ಪನ್ನವಾದ ಗಮನಾರ್ಥವಾಚಕ ಶಬ್ದದಿಂದ ಗಂಗಾ ಎಂಬ ಶಬ್ದವು ನಿಷ್ಪನ್ನವಾಗಿದೆ.

**ಯಮುನಾ**—ಇತರ ನದಿಗಳೊಡನೆ ಮಿಶ್ರಿತವಾಗಿ (ಸೇರಿ) ಹರಿಯುವುದರಿಂದ ಅಥವಾ ನಿಧಾನವಾಗಿ ಅಥವಾ ಶಬ್ದರಹಿತವಾಗಿ ಹರಿಯುವುದರಿಂದ ಈ ನದಿಗೆ ಯಮುನಾ ಎಂದು ಹೆಸರು.

**ಸರಸ್ವತಿ**— **ಸರಃ** ಎಂದರೆ ಉದಕವು. ಉದಕವುಳ್ಳ ಎಂದರೆ ಹೆಚ್ಚಾಗಿ ನೀರಿರುವುದರಿಂದ ಅಥವಾ ನಿಲ್ಲದೆ ಸರಿಯುತ್ತಿರುವುದರಿಂದ (ಪ್ರವಹಿಸುತ್ತಿರುವುದರಿಂದ) ಈ ನದಿಗೆ ಸರಸ್ವತಿಯೆಂದು ಹೆಸರು.

**ಶುತುದ್ರಿ**—ವೇಗವಾಗಿ ಓಡಿಹೋಗುವುದರಿಂದ ಅಥವಾ ವೇಗವಾಗಿ ಪ್ರವಹಿಸುವುದರಿಂದ ಅಥವಾ ಇತರರ ಪ್ರೇರಣೆಯಿಂದ ಓಡುವವರಂತೆ ವೇಗವಾಗಿ ಪ್ರವಹಿಸುತ್ತಿರುವುದರಿಂದ ಈ ನದಿಗೆ ಶುತುದ್ರಿ ಎಂದು ಹೆಸರು.

**ಪರುಷ್ಣೀ**— ಇರಾವತೀನದಿಯನ್ನೇ ಪರುಷ್ಣೀನದಿಯೆಂದು ಕರೆಯುವರು. ಪರುಷ್ಣೀ ಎಂದರೆ ಪರ್ವ ಅಥವಾ ಗಿಣ್ಣು (ಗಂಟು) ಗಳುಳ್ಳದ್ದು ಎಂದರ್ಥವು. ಈ ನದಿಯು ಡೊಂಕುಡೊಂಕಾಗಿ ಹರಿಯುತ್ತಿರುವುದರಿಂದ ಈ ನದಿಗೆ ಪರುಷ್ಣೀ ಎಂಬ ಹೆಸರು ಬಂದಿದೆ.

**ಅಸಿಕ್ನೀ**— ಬೆಳ್ಳಗಿಲ್ಲದಿರುವುದು, ಕಪ್ಪಾಗಿರುವುದು ಎಂದರ್ಥವು. **ಸಿತಂ** ಎಂದರೆ ಬೆಳ್ಳಗಿರುವುದು. **ಅಸಿತ**ವೆಂದರೆ ಬೆಳ್ಳಗಿಲ್ಲದಿರುವುದು, ಕಪ್ಪಾಗಿರುವುದು ಎಂದರ್ಥವು. ಈ ನದಿಯ ನೀರು ಶುಭ್ರವಾಗಿಲ್ಲದೆ ಸ್ವಲ್ಪ ಕಪ್ಪುಛಾಯೆಯುಳ್ಳದ್ದಾಗಿರುವುದರಿಂದ ಈ ನದಿಗೆ **ಅಸಿಕ್ನೀ** ಎಂಬ ಹೆಸರು ಬಂದಿರುವುದು.

**ಮರುದ್ವೃಧೇ**— ಇತರ ಎಲ್ಲಾ (ಇದರ ಉಪನದಿಗಳು) ನದಿಗಳಿಂದಲೂ ಗಾಳಿಯಿಂದಲೂ ಈ ನದಿಯು ವೃದ್ಧಿಯನ್ನು ಹೊಂದಿ ಉಕ್ಕಿ ಹರಿಯುತ್ತಿರುವುದರಿಂದ ಇದಕ್ಕೆ ಮರುದ್ವೃಧೆಯೆಂದು ಹೆಸರು.

**ವಿತಸ್ತಾ**—ಸುಟ್ಟಿಲ್ಲದ ಎಂದರೆ ಹಸಿಯ ಜಿಗುಟುಮಣ್ಣಿನಿಂದ ಕೂಡಿದ ಎತ್ತರವಾದ ದಡಗಳುಳ್ಳ ನದಿ ಎಂದರ್ಥವು.

**ಆರ್ಜೀಕೀಯಾ**—ಇದಕ್ಕೆ **ವಿಪಾಡ್** ಎಂದೂ ಹೆಸರು. ಈ ನದಿಯು ಋಜುಕ ಎಂಬ ದೇಶದಲ್ಲಿ ಹುಟ್ಟಿ ಹರಿಯುತ್ತಿರುವುದರಿಂದಲೂ ಅಥವಾ ಡೊಂಕು (ತಿರುವು) ಗಳಿಲ್ಲದೆ ನೇರವಾಗಿ ಹರಿಯುತ್ತಿರುವುದರಿಂದಲೂ ಈ ನದಿಗೆ **ಆರ್ಜೀಕೀಯಾ** ಎಂದು ಹೆಸರು.

**ವಿಪಾಟ್**—ಈ ನದಿಯು ಹರಿಯುವಾಗ ತನ್ನ ದಡಗಳನ್ನು ಅತಿಕ್ರಮಿಸಿ ಹರಿಯುವುದರಿಂದಲೂ ಅಥವಾ ತನ್ನನ್ನು ಬಂಧಿಸಿರುವ ಎರಡು ದಡಗಳನ್ನು ಮೀರಿ ಹರಿಯುವುದರಿಂದಲೂ ಅಥವಾ ದಡಗಳಿಂದಾಚೆಗೆ ವಿಸ್ತಾರವಾಗಿ ಹಬ್ಬಿ ಹರಿಯುವುದರಿಂದಲೂ ಈ ನದಿಗೆ **ವಿಪಾಡ್** ಎಂದು ಹೆಸರು. ಪೂರ್ವದಲ್ಲಿ ವಸಿಷ್ಠಋಷಿಯ ಪುತ್ರರು ಮೃತರಾಗಲು ಪುತ್ರಶೋಕವನ್ನು ಸಹಿಸಲಾರದೆ ಆ ಋಷಿಯು ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಬಯಸಿ ತನ್ನನ್ನು ಪಾಶ (ಹಗ್ಗ)ಗಳಿಂದ ಕೈಕಾಲುಗಳನ್ನು ಕಟ್ಟಿಕೊಂಡು ಈ ವಿಪಾಟ್ ನದಿಯಲ್ಲಿ ಮುಳುಗಿದನು. ಆದರೆ ಆ ನದಿಯು ಇವನನ್ನು ಕೊಲ್ಲಲಿಚ್ಛಿಸದೆ ಅವನ ಪಾಶಗಳನ್ನು ಕಿತ್ತುಹಾಕಿ ಬದುಕಿಸಿತು. ಈ ರೀತಿ ಪಾಶಗಳನ್ನು ಕಿತ್ತುಹಾಕಿದುದರಿಂದ ಈ ನದಿಗೆ **ವಿಪಾಟ್** ಎಂಬ ಹೆಸರು ಬಂದಿತು. ಪೂರ್ವದಲ್ಲಿ ಈ ನದಿಗೆ **ಉರುಂಜಿರಾ**—ಬಹಳವಾದ ನೀರುಳ್ಳ ನದಿ ಎಂಬ ಹೆಸರಿದ್ದಿತು.

**ಸುಷೋಮಾ**—ಈ ನದಿಗೇ ಸಿಂಧೂನದಿಯೆಂದೂ ಹೆಸರು ಏಕೆಂದರೆ ಎಲ್ಲಾ ನದಿಗಳೂ (ಇದರ ಉಪನದಿಗಳೂ) ಇದರೊಡನೆ ಸೇರುವುದಕ್ಕಾಗಿ (ಸಂಗಮಕ್ಕಾಗಿ) ಇದರ ಬಳಿಗೆ ಹರಿದು ಹೋಗುವವು. **ಸಿಂಧು** ಶಬ್ದಕ್ಕೆ ಹರಿಯುವುದು ಎಂದರ್ಥವು. ಕೆಲವರು ಈ ನದಿಯ ದಡದಲ್ಲಿ ಉತ್ತಮವಾದ ಸೋಮಲತೆಗಳು ಬೆಳೆಯುತ್ತಿದ್ದುದರಿಂದ ಈ ನದಿಗೆ **ಸುಷೋಮಾ** (ಸು+ಸೋಮ) ಎಂಬ ಹೆಸರು ಬಂದಿರಬಹುದೆಂದು ಅಭಿಪ್ರಾಯಪಡುತ್ತಾರೆ.

|| ಸಂಹಿತಾಪಾಠಃ ||

**ತನ್ನು ಸತ್ಯಂ ಪವಮಾನಸ್ಯಾಸ್ತು ಯತ್ರ ವಿಶ್ವೇ ಕಾರವಃ ಸಂನಸಂತ ।**
**ಜ್ಯೋತಿರ್ಯದಹ್ನೇ ಅಕೃಣೋದು ಲೋಕಂ ಪ್ರಾವನ್ಮನುಂ ದಸ್ಯವೇ**
**ಕರಭೀಕಂ ॥ ೫ ॥**

॥ ಪದಪಾಠಃ ॥

ತತ್ । ನು । ಸತ್ಯಂ । ಪವಮಾನಸ್ಯ । ಅಸ್ತು । ಯತ್ರ । ವಿಶ್ವೇ । ಕಾರವಃ । ಸಂऽನಸಂತೆ ।
ಜ್ಯೋತಿಃ । ಯತ್ । ಅಹ್ನೇ । ಅಕೃಣೋತ್ । ಊಂ ಇತಿ । ಲೋಕಂ । ಪ್ರ । ಆವತ್ । ಮನುಂ ।
ದಸ್ಯವೇ । ಕಃ । ಅಭೀಕಂ ॥ ೫ ॥

॥ ಸಾಯಣಭಾಷ್ಯಂ ॥

ಸತ್ಯಂ ಸತ್ಯಭೂತಂ ತತ್ರ ಸಿದ್ಧಸ್ಯ ಪವಮಾನಸ್ಯ ಸೋಮಸ್ಯ ಸ್ಥಾನಂ ನು ಕ್ಷಿಪ್ರಮಸ್ಮಾಕಮಸ್ತು। ಯತ್ರ ಯಸ್ಮಿನ್ ಸ್ಥಾನೇ ವಿಶ್ವೇ ಸರ್ವೇ ಕಾರವಃ ಸ್ತೋತಾರಃ ಸಂನಸಂತ ಸ್ತೋತುಂ ಸಂಗಚ್ಛಂತೇ ತತ್ ಸ್ಥಾನಮಸ್ತು । ಅಸ್ಯ ಸೋಮಸ್ಯ ಯಜ್ಜ್ಯೋತಿರಹ್ನೇ ದಿವಸಾಯ ಲೋಕಮಾಲೋಕಂ ಪ್ರಕಾಶಮಕೃಣೋತ್ ಕರೋತಿ । ಉ ಇತ್ಯವಧಾರಣೇ । ತಜ್ಜ್ಯೋತಿರ್ಮನುಮೇತನ್ನಾಮಾನಂ ರಾಜರ್ಷಿಂ ಪ್ರಾವತ್। ಪ್ರಕರ್ಷೇಣಾರಕ್ಷತ್ । ತಥಾ ಸೋಮಃ ಸ್ವೀಯಂ ತೇಜೋ ದಸ್ಯವೇ ಸರ್ವಸ್ಯೋಪಕ್ಷಪಯಿತ್ರೇಽಸುರಾಯಾಭೀಕಮಭಿಗಮನಶೀಲಂ ಕಃ । ಅಕಾರ್ಷೀತ್ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಸೋಮನ ದಿವ್ಯಸ್ಥಾನದಲ್ಲಿ । **ವಿಶ್ವೇ ಕಾರವಃ**—ಸಕಲ ಸ್ತುತಿಕರ್ತರೂ । **ಸಂನಸಂತ**–ಒಂದುಗೂಡಿರುವರೋ ಅಂತಹ । **ಪವಮಾನಸ್ಯ**—ಸೋಮದೇವನ । **ತತ್**—ಪ್ರಸಿದ್ಧವೂ । **ಸತ್ಯಂ**—ಸತ್ಯಾತ್ಮಕವೂ ಆದ ಸ್ಥಾನವು । **ನು**—ಕ್ಷಿಪ್ರವಾಗಿ । **ಅಸ್ತು**—ನಮಗೆ ಸೇರಿದುದಾಗಲಿ । **ಯತ್ ಜ್ಯೋತಿಃ**—ಯಾವ ಸೋಮನ ಜ್ಯೋತಿಯು । **ಅಹ್ನೇ**—ದಿವಸಕ್ಕೆ । **ಲೋಕಂ**—ಪ್ರಕಾಶವನ್ನು । **ಅಕೃಣೋತ್**—ಉಂಟುಮಾಡುತ್ತದೆಯೋ ಆ ಜ್ಯೋತಿಯು । **ಮನುಂ**—ಮನುವೆಂಬ ರಾಜರ್ಷಿಯನ್ನು। **ಪ್ರಾವತ್**—ರಕ್ಷಿಸಿತು (ಅದೇ ತೇಜಸ್ಸನ್ನು) । **ದಸ್ಯವೇ**—ಅಸುರನನ್ನು । **ಅಭೀಕಂ**—ಎದುರಿಸಿ ಸೋಲಿಸುವಂತೆ । **ಕಃ**—ಸೋಮನು ಮಾಡಿದನು.

॥ ಭಾವಾರ್ಥ ॥

ಯಾವ ಸೋಮನ ದಿವ್ಯಸ್ಥಾನದಲ್ಲಿ ಸಕಲ ಸ್ತುತಿಕರ್ತರೂ ಒಂದುಗೂಡಿರುವರೋ ಅಂತಹ ಸೋಮದೇವನ ಪ್ರಸಿದ್ಧವೂ ಸತ್ಯಾತ್ಮಕವೂ ಆದ ಸ್ಥಾನವು ಕ್ಷಿಪ್ರವಾಗಿ ನಮಗೆ ಸೇರಿದುದಾಗಲಿ. ಯಾವ ಸೋಮನ ಜ್ಯೋತಿಯು ದಿವಸಕ್ಕೆ ಪ್ರಕಾಶವನ್ನುಂಟುಮಾಡುತ್ತದೆಯೋ, ಆ ಜ್ಯೋತಿಯು ಮನುವೆಂಬ ರಾಜರ್ಷಿಯನ್ನು ರಕ್ಷಿಸಿತು. ಸೋಮನು ಅದೇ ತೇಜಸ್ಸನ್ನು ಅಸುರನನ್ನು ಎದುರಿಸಿ ಸೋಲಿಸುವಂತೆ ಮಾಡಿದನು.

## English Translation.

May that place of the truthful Pavamana be quickly ours, where all the worshippers assemble (to praise him) ; the light (of the Soma) which gave manifestation to the day protected Manu—Soma made it truimphant over the Dasyu.

॥ ವಿಶೇಷವಿಷಯಗಳು ॥

**ಮನುಂ**—ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ. ಮನುವು ಮಾನವಕುಲಕ್ಕೆ ಮೂಲಪುರುಷನೆಂದೂ, ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿಯಬಹುದು. ಅನೇಕ ಸಂದರ್ಭಗಳಲ್ಲಿ ಮನುವು ಮಾಡಿದಂತೆ (ಮನುಷ್ವತ್) ಎಂದು ಮನುವು ಮಾಡಿದ ಕಾರ್ಯದ ಪ್ರಶಂಸೆಯನ್ನೂ ಮಾಡಲಾಗಿದೆ. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿ

ಕೊಡುವಾಗ ಇವನ ಕಿರಿಯಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಇವನು ತಂದೆಯ ಬಳಿಯಿರಲಿಲ್ಲ. ಇವನು ತಂದೆಯು ಆ ಕಾಲದಲ್ಲಿ ತನ್ನ ಬಳಿಯಿದ್ದ ಇತರ ಮಕ್ಕಳಿಗೆಲ್ಲಾ ತನ್ನ ಆಸ್ತಿಯನ್ನು ವಿಭಾಗಮಾಡಿಕೊಟ್ಟನು. ನಾಭಾನೇದಿಷ್ಠನಿಗೆ ಯಾವ ದಾಯಭಾಗವೂ ದೊರಕಲಿಲ್ಲ. ಇವನು ತನ್ನ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ತಂದೆಯ ಬಳಿಗೆ ಬಂದು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಆಗ ಮನುವು ನಡೆದ ವೃತ್ತಾಂತವೆಲ್ಲವನ್ನೂ ಇವನಿಗೆ ತಿಳಿಸಿ ತನ್ನಲ್ಲಿ ಈಗ ಏನೂ ಇಲ್ಲವೆಂದೂ ಆದರೂ ಧನವನ್ನು ಪಡೆಯುವ ಯುಕ್ತಿಯನ್ನು ಇವನಿಗೆ ಉಪದೇಶಿಸಿದನು. ಎಲೈ ಪುತ್ರನೇ, ನೀನು ಧನಕ್ಕಾಗಿ ಯೋಚಿಸಬೇಡ. ಈಗ ಅಂಗಿರಾಋಷಿಗಳು ಯಜ್ಞಮಾಡುತ್ತಿರುವರು. ನೀನು ಆ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರ ಯಜ್ಞವು ಸಾಂಗವಾಗಿ ನಡೆದು ಅವರು ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು ಹೇಳಿಕಳುಹಿಸಿದನು. ನಾಭಾನೇದಿಷ್ಠನು ತಂದೆಯ ಮಾತಿನಂತೆ ಅಂಗಿರಾಋಷಿಗಳ ಯಜ್ಞಭೂಮಿಗೆ ಹೋಗಿ ಅವರಿಗೆ ಮಂತ್ರೋಪದೇಶವನ್ನು ಮಾಡಿ ಅವರಿಂದ ಯಥೇಚ್ಛವಾಗಿ ಧನವನ್ನು ಪಡೆದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದ ತೈತ್ತಿರೀಯಸಂಹಿತೆಯಲ್ಲಿಯೂ ವಿಸ್ತಾರವಾಗಿ ವಿವರಿಸಿರುವುದು. ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (ತೈ. ಸಂ. ೩-೧-೯-೪, ೫) ಇತ್ಯಾದಿ ಸ್ಥಳಗಳಲ್ಲಿ ಹೇಳಿದೆ

**ಮನುಃ**— ಮನು ಅಥವಾ ಮನುಗಳು ಎಂಬುದಾಗಿ ಮನುಷ್ಯ ಸಾಮಾನ್ಯರು ಉದ್ದಿಷ್ಟರಾದಾಗಲೂ ಪ್ರಯೋಗವಿರುವುದರಿಂದ, ಯಾವಾಗ ಮನುಷ್ಯರು ಉದ್ದಿಷ್ಟರು ಅಥವಾ ಯಾವಾಗ ಮನು ಎಂಬುವನು ಎಂದು ತಿಳಿಯುವುದು ಕಷ್ಟಸಾಧ್ಯ. ಎರಡನೆಯ ಅರ್ಥದಲ್ಲಿ, ಮನು ಎಂಬುದಾಗಿ ಏಕವಚನದಲ್ಲಿ ಸುಮಾರು ೨೦ ಸಲವೂ, ಬಹುವಚನದಲ್ಲಿಯೂ ಸುಮಾರು ಅಷ್ಟೇಸಲವೂ ಪ್ರಯೋಗವಿದೆ ಮನುವನ್ನು ಐದುಸಲ ತಂದೆ ಎಂತಲೂ, ಅವುಗಳಲ್ಲಿ ಎರಡುಕಡೆ, ಇನ್ನೂ ಸ್ಪಷ್ಟವಾಗಿ ನಮ್ಮ ತಂದೆ (೨-೩೩-೧೩. ಇತ್ಯಾದಿ) ಎಂತಲೂ ಕರೆದಿದೆ. (ವಿಶೇ ೪-೩೭-೧;) ಮನುವಿನ ಸಂತತಿಯಲ್ಲಿ ಅಗ್ನಿಯು ವಾಸಿಸುತ್ತಾನೆ (೧-೬೮-೪). ಯಾಗಗಳನ್ನು ಆರಂಭಿಸಿದವನೇ ಮನುವು. ಅಗ್ನಿಯನ್ನು ಉದ್ದೀಪನಗೊಳಿಸಿ, ಸಪ್ತರ್ಷಿಸಹಿತನಾಗಿ ದೇವತೆಗಳಿಗೆ ಮೊದಲನೆಯ ಆಹುತಿಯನ್ನು ಕೊಟ್ಟನು (೧೦-೬೩-೭). ಮನುವಿನಿಂದ ಆಚರಿತವಾದ ಯಾಗವನ್ನೇ ಈಗ ಎಲ್ಲರೂ ಆಚರಿಸುತ್ತಿರುವುದು. ಮನುಗಳು ದೇವತೆಗಳನ್ನುದ್ದೇಶಿಸಿ ಮಾಡಿದ ಯಾಗಕ್ಕೇ ಈಗಿನ ಯಾಗವನ್ನು ಹೋಲಿಸಿರುವುದು (೧-೭೬-೫). ಮನುಷ್ವತ್ (ಮನುವಿನಂತೆ) ಎನ್ನುವ ಕ್ರಿಯಾವಿಶೇಷಣದಿಂದ, ಪದೇ ಪದೇ ಯಾಗ ಕರ್ಮಗಳು ಹೋಲಿಸಲ್ಪಡುತ್ತವೆ. ಮನುಗಳಂತೆ, ಆರಾಧಕರು ಅಗ್ನಿಯಿಂದ ಯಾಗವನ್ನು ಪೂರ್ತಿಗೊಳಿಸುತ್ತಾರೆ (೧-೪೪-೧೧). ಮನುಗಳಂತೆ, ಅಗ್ನಿಯನ್ನು ಹೊತ್ತಿಸುತ್ತಾರೆ (೫-೨೧-೧ ಇತ್ಯಾದಿ) ಮನುವಿನಿಂದ ಉದ್ದೀಪಿತನಾದ ಅಗ್ನಿಯನ್ನು, ಮನುವಿನಂತೆಯೇ ಸ್ತುತಿಸುತ್ತಾರೆ (೭-೨-೩). ಮನುಗಳಂತೆ, ಸೋಮರಸವನ್ನು ಅರ್ಪಿಸುತ್ತಾರೆ (೪-೩೭-೩). ಹಿಂದೆ ಮನುವಿಗೋಸ್ಕರ ಪ್ರವಹಿಸಿದಂತೆ, ಈಗ ತಮಗೋಸ್ಕರ ಪ್ರವಹಿಸಬೇಕೆಂದು ಸೋಮವನ್ನು ಪ್ರಾರ್ಥಿಸಿದಾರೆ (೯-೯೬-೧೨). ಎಲ್ಲಾ ಪ್ರಜೆಗಳಿಗೆ ಬೆಳಕಾಗಿರಲೆಂದು, ಅಗ್ನಿಯನ್ನು ಮನುವು ಸ್ಥಾಪಿಸಿದನು (೧-೩೬-೧೯). ಪುರಾತನ ಯಾಗಕರ್ತೃಗಳಾದ ಅಂಗಿರಸರು ಮತ್ತು ಯಯಾತಿಗಳೊಡನೆ (೧-೩೧-೧೭), ಭೃಗು ಮತ್ತು ಅಂಗಿರಸ

ರೊಡನೆ (೮-೪೩-೧೩), ಅಥರ್ವ ಮತ್ತು ದಧ್ಯಂಚರೊಡನೆ (೧-೮೦-೧೬), ಮತ್ತು ದಧ್ಯಂಚ, ಅಂಗಿರಸರು, ಅತ್ರಿ ಮತ್ತು ಕಣ್ವರೊಡನೆ (೧-೧೩೯-೧) ಮನುವೂ, ಸೇರಿಸಲ್ಪಟ್ಟಿದಾನೆ. ದೇವತೆಗಳು (೧-೩೬-೧೦). ಮಾತರಿಶ್ವಾ (೧-೧೨೮-೨), ಮಾತರಿಶ್ವಾ ಮತ್ತು ದೇವತೆಗಳು (೧-೪೬-೯) ಅಥವಾ ಕಾವ್ಯ ಉಶನಾ (೮-೨೩-೧೭,) ಇವರುಗಳು ಅಗ್ನಿಯನ್ನು ಮಾನುವಿಗೆ ಕೊಟ್ಟರು ಅಥವಾ ಮನುವಿನ ಋತ್ವಿಜನನ್ನಾಗಿ ನೇಮಿಸಿದರು. ನಾಲ್ಕು ಸಂದರ್ಭಗಳಲ್ಲಿ ಮನು ಎಂದರೆ ಮನುಷ್ಯನೆಂದಿರಬೇಕು.

ಇಂದ್ರನು ವಿವಸ್ವಂತನ ಮಗನಾದ ಮನುವಿನ (ವಾ. ೪-೧) ಅಥವಾ ಮನುಸಾಂವರಣಿಯ (ವಾ. ೩-೧) ಜೊತೆಯಲ್ಲಿ ಸೋಮಪಾನ ಮಾಡಿದನು. ವೃತ್ರಾಸುರನೊಡನೆ ಯುದ್ಧಮಾಡುವುದಕ್ಕೆ ಬೇಕಾದ ಶಕ್ತಿಯನ್ನು ಪಡೆಯುವುದಕ್ಕೆ, ಮೂರು ಸರೋವರದಷ್ಟು ಮನುಗಳಿಗೆ ಸೇರಿದ ಸೋಮರಸವನ್ನು ಇಂದ್ರನು ಪಾನಮಾಡಿದನು. (೫-೨೯-೭). ಪಕ್ಷಿಯು ಸೋಮರಸವನ್ನು ಮನುವಿಗೆ ತಂದುಕೊಟ್ಟಿತು (೪-೨೬-೪). ತೈತ್ತಿರೀಯ ಸಂಹಿತೆ ಮತ್ತು ಶತಪಥಬ್ರಾಹ್ಮಣಗಳಲ್ಲಿ ಮನುವನ್ನು ಧಾರ್ಮಿಕ ಕರ್ಮಗಳ ಪೋಷಕನೆಂದು ವರ್ಣಿಸಿದೆ.

ಮನುವು ವಿವಸ್ವಂತನ ಮಗನೆಂದು ಭಾವನೆ; ಅವನಿಗೆ ವೈವಸ್ವತ ಮನುವೆಂಬ ನಾಮಧೇಯವಿದೆ (೪-೧; ೩-೧ ನ್ನು ಹೋಲಿಸಿ). ಅಥರ್ವವೇದ (ಅ. ವೇ. ೮-೧೦-೨೪), ಶತಪಥಬ್ರಾಹ್ಮಣ (ಶ ಬ್ರಾ. ೧೩-೪-೩-೩) ಮತ್ತು ಪುರಾಣಾದಿಗಳಲ್ಲಿ, ಮನುವಿಗೆ ವೈವಸ್ವತನೆಂಡೇ ಹೆಸರು ರೂಢಿಯಾಗಿದೆ. ವಿವಸ್ವಂತನ ಮಕ್ಕಳಲ್ಲಿ ಯಮನೂ ಒಬ್ಬನು ಮತ್ತು ಅವನು ಮಾನವರಲ್ಲಿ ಮೊದಲನೆಯವನು. ಅಂದರೆ ಮನು ಮತ್ತು ಯಮರು ಮನುಷ್ಯರ ಮೂಲ ಪುರುಷದ್ವಯವೆನ್ನಬಹುದು. ಆದರೆ ಮನುವು ಜೀವದಿಂದಿರುವವರಲ್ಲಿ ಮೊದಲನೆಯವನಾದರೆ, ಯಮನು ಮೃತರಾದ ವರಲ್ಲಿ ಮೊದಲನೆಯವನಾಗಿ, ಮೃತರಲೋಕದ ಒಡೆಯನಾದನು. ಶತಪಥಬ್ರಾಹ್ಮಣದಲ್ಲಿ, ವೈವಸ್ವತಮನುವನ್ನು ಮನುಷ್ಯರ ರಾಜನೆಂದೂ, ಯಮನನ್ನು ಮೃತರ ರಾಜನೆಂದೂ ಹೇಳಿದೆ (ಶ. ಬ್ರಾ. ೧೩-೪-೩-೩ ೫), ನಿರುಕ್ತದಲ್ಲಿ (ನಿ. ೧೨-೧೦), ಮನುವನ್ನು ವಿವಸ್ವಂತನೆಂಬ ಆದಿತ್ಯನ ಮಗ ಮತ್ತು ಸವರ್ಣಾ (ಸರಣ್ಯು ಎಂಬುದರ ಸ್ಥಾನದಲ್ಲಿ ಪ್ರಯೋಗಿಸಿರಬಹುದು) ಎಂಬುವಳ ಮಗನೆಂದು ವಿವರಿಸಿ (೧೦-೧೭-೨ನ್ನು ಹೋಲಿಸಿ), ಸ್ವರ್ಗಲೋಕದ ದೇವತೆ ಗಳಲ್ಲಿ (ನಿ. ೫-೬) ಒಬ್ಬನೆಂದು ನಿರ್ದೇಶಿಸಿದಾರೆ (ನಿ. ೧೨-೩೪).

ಪ್ರಳಯ ಕಾಲದಲ್ಲಿ, ಇತರ ಎಲ್ಲಾ ಪ್ರಾಣಿಗಳೂ ಮುಳುಗಿಹೋದರೂ, ಮನುವೊಬ್ಬನೇ ಒಂದು ಹಡಗಿನಲ್ಲಿ ಒಂದು ಮತ್ಸ್ಯದಿಂದ (ವಿಷ್ಣುವಿನ ಅವತಾರ) ರಕ್ಷಿಸಲ್ಪಟ್ಟನೆಂಬ ಕಥೆಯೊಂದು ಶತಪಥಬ್ರಾಹ್ಮಣದಲ್ಲಿದೆ (ಶ. ಬ್ರಾ. ೧-೮-೧-೧ ರಿಂದ ೧೦). ಆಗಲೇ ಮನುವು, ಆಹುತಿಗಳಿಂದ ಜನಿತಳಾದ ಇಡಾ (ಇಳಾ) ಎಂಬ ತನ್ನ ಮಗಳ ಮೂಲಕ ಮಾನವ ವರ್ಗಕ್ಕೆ ಕಾರಣಭೂತನಾದುದು. ಈ ಪ್ರಳಯದ ಕಥೆಯು ಅಥರ್ವವೇದದಲ್ಲಿಯೂ ಪ್ರಸಕ್ತ ವಾಗಿದೆ (ಅ. ವೇ. ೧೯-೩೯-೮).

॥ ಸಂಹಿತಾಪಾಠಃ ॥

**ಪರಿ ಸದ್ಮೇವ ಪಶುಮಾಂತಿ ಹೋತಾ ರಾಜಾ ನ ಸತ್ಯಃ ಸಮಿತೀರಿಯಾನಃ ।**
**ಸೋಮಃ ಪುನಾನಃ ಕಲಶಾಁ ಅಯಾಸೀತ್ಸೀದನ್ಮೃಗೋ ನ ಮಹಿಷೋ ವನೇಷು ॥ ೬ ॥**

॥ ಪದಪಾಠಃ ॥

**ಪರಿ । ಸದ್ಮಽಇವ । ಪಶುಽಮಂತಿ । ಹೋತಾ । ರಾಜಾ । ನ । ಸತ್ಯಃ । ಸಂಽಇತೀಃ । ಇಯಾನಃ ।**

**ಸೋಮಃ । ಪುನಾನಃ । ಕಲಶಾನ್ । ಅಯಾಸೀತ್ । ಸೀದನ್ । ಮೃಗಃ । ನ । ಮಹಿಷಃ । ವನೇಷು ॥ ೬ ॥**

॥ ಸಾಯಣಭಾಷ್ಯಂ ॥

**ಹೋತಾ ದೇವಾನಾಮಾಹ್ವಾತರ್ತ್ವಿಕ್ ಪಶುಮಂತಿ ಪಶುಮತೇಃ ಸದ್ಮೇವ ಯಜ್ಞಗೃಹಾನ್ಯಥೋ-ಪಗಚ್ಛತಿ ಕಿಂಚ ರಾಜಾ ನ ಯಥಾ ರಾಜಾ ಸತ್ಯಃ ಸತ್ಯಕರ್ಮಾ ಸನ್ ಸಮಿತೀಃ । ಸಂಗ್ರಾಮನಾಮೈತತ್ ಸಮ್ಯಕ್ ಪ್ರಾಪ್ಯತೇ ಯೋದ್ಧೃಭಿರತ್ರೇತಿ । ತಾನ್ಸಂಗ್ರಾಮಾನಿಯಾನೋ ಗಚ್ಛನ್ ಭವತಿ ತಥಾ ಪುನಾನಃ ಸೋಮೋ ವನೇಷು ವನನೀಯೇಷು ವಸತೀವರ್ಯಾಖ್ಯೇಷೂದಕೇಷು ಸೀದನ್ ಮೃಗೋ ನ ಮಹಿಷೋ ಮಹಿಷಾಖ್ಯೋ ಮೃಗ ಇವೋದಕೇಷು ತಿಷ್ಠನ್ ಕಲಶಾನ್ ದ್ರೋಣಾಭಿಧಾನಾನಯಾಸೀತ್ । ಪರಿಯಾತಿ । ಯದ್ವಾ । ಮಹಿಷೋ ಮಹಾನ್ಪೂಜ್ಯೋ ವಾ ಸೋಮಃ ಕಲಶಾನ್ಪರಿಗಚ್ಛತೀತಿ ॥**

॥ ಪ್ರತಿಪದಾರ್ಥ ॥

**ಹೋತಾ**—ಹೋತೃವು । **ಪಶುಮಂತಿ**—ಯಜ್ಞಪಶುಯುಕ್ತವಾದ । **ಸದ್ಮೇವ**—ಯಾಗ ಗೃಹವನ್ನು ಪ್ರವೇಶಿಸುವಂತೆಯೂ । **ಸತ್ಯಃ**—ಸತ್ಯಕರ್ಮವುಳ್ಳ । **ರಾಜಾ**—ರಾಜನು । **ಸಮಿತೀಃ ನ ಇಯಾನಃ**—ಯುದ್ಧ ರಂಗವನ್ನು ಪ್ರವೇಶಿಸುವಂತೆಯೂ । **ಪುನಾನಃ**—ಶುದ್ಧಿಕಾರಕನಾದ । **ಸೋಮಃ**—ಸೋಮನು । **ಮಹಿಷಃ ಮೃಗೋ ನ**—ಮಹಿಷಸಂಜ್ಞಕವಾದ ಕಾಡುಮೃಗವು ಉದಕಕ್ಕೆ ಪ್ರವೇಶಿಸುವಂತೆ । **ವನೇಷು**—ವಸತೀವರ್ಯಾದಿಗಳಲ್ಲಿ । **ಸೀದನ್**—ಸ್ಥಿತನಾಗಿ । **ಕಲಶಾನ್**—ದ್ರೋಣಕಲಶದೊಳಕ್ಕೆ । **ಅಯಾಸೀತ್**—ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಹೋತೃವು ಯಜ್ಞಪಶುಯುಕ್ತವಾದ ಯಾಗ ಗೃಹವನ್ನು ಪ್ರವೇಶಿಸುವಂತೆಯೂ, ಸತ್ಯಕರ್ಮವುಳ್ಳ ರಾಜನು ಯುದ್ಧರಂಗವನ್ನು ಪ್ರವೇಶಿಸುವಂತೆಯೂ, ಶುದ್ಧಿಕಾರಕನಾದ ಸೋಮನು ಮಹಿಷಸಂಜ್ಞಕವಾದ ಕಾಡುಮೃಗವು (ಎಮ್ಮೆಯು) ಉದಕಕ್ಕೆ ಪ್ರವೇಶಿಸುವಂತೆ ವಸತೀವರ್ಯಾದಿಗಳಲ್ಲಿ ಸ್ಥಿತನಾಗಿ ದ್ರೋಣಕಲಶದೊಳಕ್ಕೆ ಪ್ರವೇಶಿಸುತ್ತಾನೆ.

**English Translation.**

As the ministrant priest proceeds to the hall where the victim is stationed, as a just king marches to battle, the Soma undergoing purification enters the pitchers like the wild buffalo in the waters,

# ತೊಂಭತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಾಕಮುಕ್ಷ ಇತಿ ಪಂಚರ್ಚಮಷ್ಟಮಂ ಸೂಕ್ತಂ । ಗೌತಮಸ್ಯ ನೋಧಸ ಆರ್ಷಂ । ಪೂರ್ವವ-ಚ್ಛಂದೋದೇವತೇ। ತಥಾ ಚಾನುಕ್ರಮ್ಯತೇ। ಸಾಕಮುಕ್ಷಃ ಪಂಚ ನೋಧಾ ಇತಿ ॥ ಗತೋ ವಿನಿಯೋಗಃ॥**

ಅನುವಾದವು— **ಸಾಕಮುಕ್ಷಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮಋಷಿಯ ಪುತ್ರನಾದ ನೋಧಾಃ ಎಂಬುವನು ಋಷಿಯು; ಪವಮಾನಸೋಮನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಸಾಕಮುಕ್ಷಃ ಪಂಚ ನೋಧಾಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೩

ಮಂಡಲ—೯ ॥ ಅನುವಾಕ—೫ ॥ ಸೂಕ್ತ—೯೩ ॥
ಅಷ್ಟಕ—೭ ॥ ಅಧ್ಯಾಯ—೪ ॥ ವರ್ಗ—೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ನೋಧಾಃ ॥
॥ ದೇವತಾ—ಪವಮಾನಃ ಸೋಮಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಸಾಕಮುಕ್ಷೋ ಮರ್ಜಯಂತ ಸ್ವಸಾರೋ ದಶ ಧೀರಸ್ಯ ಧೀತಯೋ ಧನುತ್ರೀಃ ।**
**ಹರಿಃ ಪರ್ಯದ್ರವಜ್ಜಾಃ ಸೂರ್ಯಸ್ಯ ದ್ರೋಣಂ ನನಕ್ಷೇ ಅತ್ಯೋ ನ ವಾಜೀ ॥ ೧ ॥**

॥ ಪದಪಾಠಃ ॥

ಸಾಕಂಽಉಕ್ಷಃ । ಮರ್ಜಯಂತ । ಸ್ವಸಾರಃ । ದಶ । ಧೀರಸ್ಯ । ಧೀತಯಃ । ಧನುತ್ರೀಃ ।
ಹರಿಃ । ಪರಿ । ಅದ್ರವತ್ । ಜಾಃ । ಸೂರ್ಯಸ್ಯ । ದ್ರೋಣಂ । ನನಕ್ಷೇ । ಅತ್ಯಃ । ನ । ವಾಜೀ ॥ ೧ ॥

॥ ಸಾಯಣಭಾಷ್ಯಂ ॥

ಸಾಕಮುಕ್ಷಃ ಸಹ ಯುಗಪತ್ಸಿಂಚಂತ್ಯಃ ॥ ಉಕ್ಷ ಸೇಚನೇ । ಕ್ವಿಪಿ ರೂಪಂ ॥ ತಾದೃಶ್ಯಃ ಸ್ವಸಾರಃ ಕರ್ಮಕರಣಾರ್ಥಮಿತಸ್ತತಃ ಸುಷ್ಠು ಗಚ್ಛಂತ್ಯೋಽಂಗುಲಯೋ ಮರ್ಜಯಂತ । ಸೋಮಂ ಶೋಧಯಂತಿ ॥ ಮೃಜೂ ಶೌಚಾಲಂಕಾರಯೋಃ ॥ ತಥಾ ದಶ ದಶಸಂಖ್ಯಾಕಾ ಧೀತಯಃ । ಅಂಗುಲಿನಾಮ್ಯೇತತ್ । ಅಂಗುಲಯೋ ಧೀರಸ್ಯ ಸಮರ್ಥಸ್ಯ ಪ್ರಾಜ್ಞಸ್ಯ ವಾ ದೇವೈರ್ಧ್ಯಾತವ್ಯಸ್ಯ ಕಾಮ್ಯಮಾನಸ್ಯ ವಾ ಸೋಮಸ್ಯ ಧನುತ್ರೀಃ ಪ್ರೇರಯಿತ್ರ್ಯೋ ಭವಂತಿ । ತತೋ ಹರಿರ್ಹರಿತವರ್ಣಃ ಸೋಮಃ ಸೂರ್ಯಸ್ಯ

ಜಾಃ ಪ್ರಾದುರ್ಭೂತಾ ಜಾಯೋ ದಿಶಸ್ತಾಃ ಪರ್ಯದ್ರವತ್ । ಪರಿತೋ ಗಚ್ಛತಿ । ಸೂರ್ಯತೇಜಸಾ ಹ್ಯಾವಿರ್ಭವಂತೀತಿ ದಿಶಾಂ ತಸ್ಯ ಜಾತ್ವಂ । ಅತ್ಯೋಽತನಶೀಲೋ ವಾಜೀ ನಾಶ್ವ ಇವ ಸ್ಥಿತಃ ಸೋಮೋ ದ್ರೋಣಂ ಕಲಶಂ ನನಕ್ಷೇ । ವ್ಯಾಪ್ನೋತಿ । ನಕ್ಷತಿರ್ವ್ಯಾಪ್ತಿಕರ್ಮಾ ॥

॥ಪ್ರತಿಪದಾರ್ಥ॥

**ಸಾಕಮುಕ್ಷಃ**—ಒಟ್ಟಿಗೆ ಸೇರಿ ಹಿಂಡತಕ್ಕ । **ಸ್ವಸಾರಃ**—ಬೆರಳುಗಳು । **ಮರ್ಜಯಂತ**—ಸೋಮನನ್ನು ಶುದ್ಧಿಗೊಳಿಸುತ್ತವೆ । **ದಶ ಧೀತಯಃ**—ಹತ್ತು ಬೆರಳುಗಳೂ ಸಹ । **ಧೀರಸ್ಯ**—ಪ್ರಾಜ್ಞನಾದ ಸೋಮನಿಗೆ । **ಧನುತ್ರೀಃ**—ಪ್ರೇರಕವಾಗಿರುತ್ತವೆ । **ಹರಿಃ**—ಪಚ್ಚೆವರ್ಣವುಳ್ಳ ಸೋಮನು । **ಸೂರ್ಯಸ್ಯ ಜಾಃ ಪರಿ**—ಸೂರ್ಯನಿಂದ ಪ್ರಕಾಶಿತವಾದ ದಿಕ್ಕುಗಳಲ್ಲೆಲ್ಲ । **ಅದ್ರವತ್**—ಸಂಚರಿಸುತ್ತಾನೆ । **ಅತ್ಯಃ**—ಶೀಘ್ರಗಾಮಿಯಾದ । **ವಾಜೀ ನ**—ಅಶ್ವದಂತೆ । **ದ್ರೋಣಂ**—ದ್ರೋಣಕಲಶಕ್ಕೆ । **ನನಕ್ಷೇ**—ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಒಟ್ಟಿಗೆ ಸೇರಿ ಹಿಂಡತಕ್ಕ ಬೆರಳುಗಳು ಸೋಮನನ್ನು ಶುದ್ಧಿಗೊಳಿಸುತ್ತವೆ. ಹತ್ತು ಬೆರಳುಗಳೂ ಸಹ ಪ್ರಾಜ್ಞನಾದ ಸೋಮನಿಗೆ ಪ್ರೇರಕವಾಗಿರುತ್ತವೆ. ಪಚ್ಚೆವರ್ಣವುಳ್ಳ ಸೋಮನು ಸೂರ್ಯನಿಂದ ಪ್ರಕಾಶಿತವಾದ ದಿಕ್ಕುಗಳಲ್ಲೆಲ್ಲ ಸಂಚರಿಸುತ್ತಾನೆ. ಶೀಘ್ರಗಾಮಿಯಾದ ಅಶ್ವದಂತೆ ದ್ರೋಣಕಲಶಕ್ಕೆ ಪ್ರವೇಶಿಸುತ್ತಾನೆ.

## English Translation.

The sister (fingers) sprinkling together cleanse (the Soma), the ten fingers (are) the effusers of the sagacious (Soma); the green-tinted one flows round the wives of the sun, he hastens like a swift horse to the pitcher.

॥ ವಿಶೇಷವಿಷಯಗಳು ॥

**ದಶ ಸ್ವಸಾರಃ—ಕರ್ಮಕರಣಾರ್ಥಮಿತಸ್ತತಃ ಸುಷ್ಠು ಗಚ್ಛಂತ್ಯೋಽಙ್ಗುಲಯಃ** । ಕೆಲಸ ಮಾಡುವಾಗ ಇಲ್ಲಿಂದಲ್ಲಿಗೆ ಯಾವಾಗಲೂ ಚಲಿಸುತ್ತಿರುವುದರಿಂದ ಬೆರಳುಗಳಿಗೆ ಸ್ವಸಾರಃ ಎಂದು ಹೆಸರು. ಇದಲ್ಲದೆ ಸ್ವಸಾರಃ ಎಂದರೆ ಸಹೋದರಿಯರು ಎಂಬರ್ಥವೂ ಇರುವುದು ಹಸ್ತದಿಂದಲೇ ಬೆರಳುಗಳು ಹೊರಟಿರುವುದರಿಂದ ಹಸ್ತವು ಬೆರಳುಗಳಿಗೆ ಸಮಾನವಾದ ಉತ್ಪತ್ತಿಸ್ಥಾನವು. ಒಂದೇ ಆದ ಉತ್ಪತ್ತಿಸ್ಥಾನವಿರುವ ಸ್ತ್ರೀಯರು ಪರಸ್ಪರ ಸಹೋದರಿಯರೆನಿಸುವರು. ಇಲ್ಲಿ ಬೆರಳುಗಳಿಗೆ ಹಸ್ತವೇ ಸಮಾನವಾದ ಉತ್ಪತ್ತಿಸ್ಥಾನವಾದ್ದರಿಂದ ಈ ಬೆರಳುಗಳನ್ನು **ಸ್ವಸಾರಃ** ಎಂಬ ಶಬ್ದದಿಂದ ಕರೆಯುವುದು ರೂಢಿಯಾಗಿದೆ. ಪ್ರಕೃತ ಋಕ್ಕಿನಲ್ಲಿ ಅಧ್ವರ್ಯ್ವಾದಿ ಋತ್ವಿಗ್ಜನರ ಕೈಗಳಲ್ಲಿರುವ ಹತ್ತು ಬೆರಳುಗಳೂ ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವ ಕಾರ್ಯದಲ್ಲಿ ನಿರತರಾಗಿರುವುದನ್ನು ಸೂಚಿಸಿದೆ. ಈ ಕಾರ್ಯದ ವಿವರಣೆಯು ಈ ಮಂಡಲದ ಅನೇಕ ಋಕ್ಕುಗಳಲ್ಲಿ ವಿವರಿಸಲಾಗಿದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ **ಸ್ವಸಾರಃ** ಎಂಬ ಶಬ್ದವನ್ನು **ಅಗ್ರುವಃ** ಮೊದಲಾದ ಇಪ್ಪತ್ತೆರಡು ಅಂಗುಲಿ ನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. (ನಿ. ೩-೯)

ಸೂರ್ಯಸ್ಯ ಜಾಃ— ಸೂರ್ಯಸ್ಯ ಪ್ರಾದುರ್ಭೂತಾ ಜಾಯಾ ದಿಶಃ । ಸೂರ್ಯತೇಜಸಾ ಹ್ಯಾವಿರ್ಭವಂತೀತಿ ದಿಶಾಂ ತಸ್ಯ ಜಾತ್ವಂ ॥ ಇಲ್ಲಿ ಜಾಃ ಎಂದರೆ ದಿಕ್ಕುಗಳು ಎಂದು ಅರ್ಥಮಾಡಿದಾರೆ. ಸೂರ್ಯನ ಪ್ರಕಾಶದಿಂದ ಸುತ್ತಲೂ ಇರುವ ದಿಕ್ಕುಗಳು ಎಲ್ಲರಿಗೂ ಕಾಣುವಂತಾಗುವುದರಿಂದ ದಿಕ್ಕುಗಳು ಸೂರ್ಯನಿಂದ ಉತ್ಪನ್ನವಾಗಿವೆ (ಪ್ರಕಾಶಿತವಾಗಿವೆ) ಎಂದು ಋಷಿಯು ವರ್ಣಿಸಿದಾನೆ.

॥ ಸಂಹಿತಾಪಾಠಃ ॥

ಸಂ ಮಾತೃಭಿರ್ನ ಶಿಶುರ್ವಾವಶಾನೋ ವೃಷಾ ದಧನ್ವೇ ಪುರುವಾರೋ ಅದ್ಭಿಃ ।
ಮರ್ಯೋ ನ ಯೋಷಾಮಭಿ ನಿಷ್ಕೃತಂ ಯನ್ತ್ಸಂ ಗಚ್ಛತೇ ಕಲಶ ಉಸ್ರಿಯಾಭಿಃ ॥ ೨ ॥

॥ ಪದಪಾಠಃ ॥

ಸಂ । ಮಾತೃऽಭಿಃ । ನ । ಶಿಶುಃ । ವಾವಶಾನಃ । ವೃಷಾ । ದಧನ್ವೇ । ಪುರುऽವಾರಃ । ಅತ್ऽಭಿಃ ।
ಮರ್ಯಃ । ನ । ಯೋಷಾಂ । ಅಭಿ । ನಿಃऽಕೃತಂ । ಯನ್ । ಸಂ । ಗಚ್ಛತೇ । ಕಲಶೇ । ಉಸ್ರಿಯಾಭಿಃ ॥

॥ ಸಾಯಣಭಾಷ್ಯಂ ॥

ವಾವಶಾನೋ ದೇವಾನ್ಕಾಮಯಮಾನೋ ವೃಷಾ ಕಾಮಾನಾಂ ವರ್ಷಕಃ ಅತ ಏವ ಪುರುವಾರೋ ಬಹುಭಿರ್ವರಣೀಯಃ ಸೋಽಯಮದ್ಭಿರ್ಮಾತೃಭೂತಾಭಿರ್ವಸತೀವರೀಭಿಃ ಸಂ ದಧನ್ವೇ । ಸಂಧಾರ್ಯತೇ । ತತ್ರ ದೃಷ್ಟಾಂತಃ । ಮಾತೃಭಿರ್ನ ಶಿಶುಃ ಕಾಮಯಮಾನಃ ಪುತ್ರೋ ಯಥಾ ಮಾತೃಭಿಃ ಪಯಃಪ್ರದಾನೇನ ಸಧಾರ್ಯತೇ ॥ ಧವಿರ್ಗತ್ಯರ್ಥಃ । ಕರ್ಮಣಿ ಲಿಟಿ ರೂಪಂ ॥ ಮರ್ಯೋ ನ ಮನುಷ್ಯೋ ಯಥಾ ಯೋಷಾಂ ಯುವತಿಮಭಿಗಚ್ಛತಿ ತದ್ವನ್ನಿಷ್ಕೃತಂ ಸಂಸ್ಕೃತಂ ಸ್ವಸ್ಥಾನಮಭಿ ಯನ್ನಭಿಗಚ್ಛನ್ ಕಲಶೇ ದ್ರೋಣಾಭಿಧಾನೇ ಉಸ್ರಿಯಾಭಿರದ್ಭಿರ್ಗೋವಿಕಾರೈಃ ಕ್ಷೀರಾದಿಭಿರ್ವಾ ಸಂ ಗಚ್ಛತೇ ॥ ಗಮೇರಕರ್ಮಕಾತ್ ಸಮೋ ಗಮ್ಯೃಚ್ಛೀತ್ಯಾತ್ಮನೇಪದಂ ॥

॥ ಪ್ರತಿಪದಾರ್ಥ ॥

**ಶಿಶುಃ**—ಮಗುವು । **ಮಾತೃಭಿಃ ನ**—ತಾಯಿಯರೊಂದಿಗೆ ಕೂಡಿಕೊಳ್ಳುವಂತೆ । **ವಾವಶಾನಃ**—ದೇವತೆಗಳನ್ನಪೇಕ್ಷಿಸುವವನೂ । **ವೃಷಾ**—ಇಷ್ಟಾರ್ಥಪ್ರದನೂ । **ಪುರುವಾರಃ**—ಅನೇಕರಿಂದ ಅಪೇಕ್ಷಿತನೂ ಆದ ಸೋಮದೇವನು । **ಅದ್ಭಿಃ**—ವಸತೀವರಿಗಳೊಡನೆ । **ಸಂ ದಧನ್ವೇ**—ಸೇರಿಕೊಳ್ಳುತ್ತಾನೆ । **ಮರ್ಯಃ**—ಪುರುಷನು । **ಯೋಷಾಂ ನ** ಯುವತಿಯ ಸವಿಾಪಕ್ಕೆ ಹೋಗುವಂತೆ । **ನಿಷ್ಕೃತಂ**—ಸುಸಂಸ್ಕೃತವಾದ ತನ್ನ ಸ್ಥಾನಕ್ಕೆ । **ಅಭಿ ಯನ್**—ಹೋಗುತ್ತ । **ಕಲಶೇ**—ದ್ರೋಣಕಲಶದಲ್ಲಿ । **ಉಸ್ರಿಯಾಭಿಃ**—ಕ್ಷೀರಾದಿಗಳೊಡನೆ । **ಸಂ ಗಚ್ಛತೇ**—ಸೇರಿಕೊಳ್ಳುತ್ತಾನೆ.

॥ ಭಾವಾರ್ಥ ॥

ಮಗುವು ತನ್ನ ತಾಯಿಯೊಂದಿಗೆ ಕೂಡಿಕೊಳ್ಳುವಂತೆ ದೇವತೆಗಳನ್ನಪೇಕ್ಷಿಸುವವನೂ, ಇಷ್ಟಾರ್ಥಪ್ರದನೂ, ಅನೇಕರಿಂದ ಅಪೇಕ್ಷಿತನೂ ಆದ ಸೋಮದೇವನು ವಸತೀವರಿಗಳೊಂದಿಗೆ ಸೇರಿಕೊಳ್ಳುತ್ತಾನೆ. ಪುರುಷನು ಯುವತಿಯ ಸಮೀಪಕ್ಕೆ ಹೋಗುವಂತೆ ಸುಸಂಸ್ಕೃತವಾದ ತನ್ನ ಸ್ಥಾನಕ್ಕೆ ಹೋಗುತ್ತ ದ್ರೋಣಕಲಶದಲ್ಲಿ ಕ್ಷೀರಾದಿಗಳೊಡನೆ ಸೇರಿಕೊಳ್ಳುತ್ತಾನೆ.

## English Translation.

Longing (for the deities) the showerer (of benefits) the desired of many (the Soma) is sustained by the (consecrated) waters as the infant by its mother; going to his station like a bridegroom to his bride, he combines in the pitcher with the curds and milk.

॥ ವಿಶೇಷವಿಷಯಗಳು ॥

ಲತೆಗಳಿಂದ ಹಿಂಡಲ್ಪಡುವ ಸೋಮರಸವು ಹರಿದುಹೋಗಿ ಅದಕ್ಕಾಗಿ ಇಟ್ಟಿರುವ ದ್ರೋಣಕಲಶವೆಂಬ ಪಾತ್ರೆಯೊಳಗೆ ಹೋಗಿ ಬೀಳುತ್ತದೆ ಇದನ್ನು ಎರಡುವಿಧ ದೃಷ್ಟಾಂತಗಳಿಂದ ಋಷಿಯು ವರ್ಣಿಸಿದ್ದಾನೆ. ಸಣ್ಣ ಮಗುವು ಸ್ತನ್ಯಪಾನಕ್ಕಾಗಿ ತನ್ನ ತಾಯಿಯ ಬಳಿಗೆ ಹೋಗುವಂತೆ ಸೋಮರಸವು ತನಗೆ ತಾಯಿಯಂತಿರುವ ವಸತೀವರೀಉದಕದೊಂದಿಗೆ ಸೇರಿಕೊಳ್ಳುವುದಕ್ಕಾಗಿ ಹೋಗುತ್ತದೆ ಎಂಬುದು ಒಂದುವಿಧವಾದ ದೃಷ್ಟಾಂತವು. ಆಗ ತಾನೇ ಹಿಂಡಿದ ಸೋಮರಸವನ್ನು ಸಣ್ಣಮಗುವಿಗೆ ಹೋಲಿಸಿದೆ. ಮಗುವು ತನ್ನ ತಾಯಿಯ ಬಳಿಗೆ ಹೋಗುವುದು ಸ್ವಾಭಾವಿಕವು. ಅದರಂತೆ ಹಿಂಡಿರುವ ಸೋಮವನ್ನು ದೇವತೆಗಳಿಗೆ ಅರ್ಪಿಸುವುದಕ್ಕೆ ಪೂರ್ವಭಾವಿಯಾಗಿ ದಶಾಪವಿತ್ರದಲ್ಲಿ ಶೋಧಿಸುವುದು. ವಸತೀವರೀ ಎಂಬ ಪಾತ್ರೆಯ ಉದಕದಿಂದ ಮಿಶ್ರಮಾಡುವುದು ಮೊದಲಾದ ಕರ್ಮಗಳಿಂದ ಸಂಸ್ಕರಿಸಬೇಕಾಗಿರುವುದು. ಅದನ್ನೇ ಇಲ್ಲಿ ಸೋಮರಸವು ವಸತೀವರೀಉದಕದೊಂದಿಗೆ ಮಿಶ್ರಿತವಾಗುವುದಕ್ಕಾಗಿ ಹೋಗುತ್ತದೆ ಎಂದು ಉಪಮಾನವನ್ನು ಹೇಳಿದೆ. ಎರಡನೆಯ ಉಪಮಾನವು—ಯುವಕನಾದ ಪುರುಷನು ತನಗೆ ಪ್ರೀತಿಪಾತ್ರಳಾದ ಯುವತಿಯ ಬಳಿಗೆ ಯಾವ ರೀತಿ ಆತುರದಿಂದ ಹೋಗುವನೋ ಅದರಂತೆ ಈ ಸೋಮರಸವು ಕ್ಷೀರಾದ್ಯಾಶ್ರಯಣ ದ್ರವ್ಯಗಳೊಂದಿಗೆ ಸೇರುವುದಕ್ಕಾಗಿ ದ್ರೋಣಕಲಶದ ಬಳಿಗೆ ಹೋಗುವುದು. ಇದು ಎರಡನೆಯ ದೃಷ್ಟಾಂತವು. ಸೋಮರಸಕ್ಕೆ ರುಚಿಯುಂಟಾಗುವುದಕ್ಕಾಗಿ ಅದಕ್ಕೆ ಹಾಲು, ಮೊಸರು, ಹಿಟ್ಟು ಎಂಬ ಆಶಿರ ದ್ರವ್ಯಗಳನ್ನು ಸೇರಿಸುವರು. ಹಾಲನ್ನು ಸೇರಿಸಿದ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಸೇರಿಸಿದ ಸೋಮರಸಕ್ಕೆ ದಧ್ಯಾಶಿರವೆಂದೂ, ಹಿಟ್ಟನ್ನು ಸೇರಿಸಿದ ಸೋಮರಸಕ್ಕೆ ಯವಾಶಿರವೆಂದೂ ಬೇರೆಬೇರೆ ಹೆಸರುಗಳಿವೆ. ಈ ವಿಧವಾದ ಆಶಿರದ್ರವ್ಯಗಳೊಡನೆ ಮಿಶ್ರಿತವಾಗುವುದಕ್ಕಾಗಿ ಹರಿದುಹೋಗುತ್ತಿರುವ ಸೋಮರಸವನ್ನು, ಯುವತಿಯೊಡನೆ ಕೂಡಲು ಹೋಗುತ್ತಿರುವ ಯುವಕನಿಗೆ ಋಷಿಯು ಹೋಲಿಸಿ ವರ್ಣಿಸಿದ್ದಾನೆ.

॥ ಸಂಹಿತಾಪಾಠಃ ॥

ಉತ ಪ್ರ ಪಿಪ್ಯ ಊಧರಘ್ನ್ಯಾಯಾ ಇಂದುರ್ಧಾರಾಭಿಃ ಸಚತೇ ಸುಮೇಧಾಃ ।

ಮೂರ್ಧಾನಂ ಗಾವಃ ಪಯಸಾ ಚಮೂಷ್ವಭಿ ಶ್ರೀಣಂತಿ ವಸುಭಿರ್ನ
ನಿಕ್ತೈಃ ॥ ೩ ॥

॥ ಪದಪಾಠಃ ॥

ಉತ । ಪ್ರ । ಪಿಪ್ಯೇ । ಊಧಃ । ಅಘ್ನ್ಯಾಯಾಃ । ಇಂದುಃ । ಧಾರಾಭಿಃ । ಸಚತೇ । ಸುಽಮೇಧಾಃ ।
ಮೂರ್ಧಾನಂ । ಗಾವಃ । ಪಯಸಾ । ಚಮೂಷು । ಅಭಿ । ಶ್ರೀಣಂತಿ । ವಸುಽಭಿಃ । ನ । ನಿಕ್ತೈಃ ॥ ೩ ॥

॥ ಸಾಯಣಭಾಷ್ಯಂ ॥

ಉತಾಪಿ ಚಾಘ್ನ್ಯಾಯಾಃ । ಅಘ್ನ್ಯೇತಿ ಗೋನಾಮ । ಅಹಂತವ್ಯಾಯಾ ಗೋರೂಧಃ ಪಯಃಸ್ಥಾನಂ ಸೋಮಃ ಪ್ರ ಪಿಪ್ಯೇ । ಓಷಧ್ಯಾದಿಷು ಸೋಮಃ ಪ್ರವಿಶ್ಯ ಪ್ರಕರ್ಷೇಣಾಪ್ಯಾಯಯತಿ ॥ ಪ್ಯಾಯತೇರ್ಲಿಟಿ ಲಿಡ್ಯಙೋರ್ಶ್ಚೇತಿ ಪೀಭಾವಃ ॥ ಸುಮೇಧಾಃ ಶೋಭನಪ್ರಜ್ಞಃ ಸೋಽಯಮಿಂದುಃ ಸೋಮೋ ಧಾರಾಭಿಃ ಸಚತೇ । ಸಮನ್ವೈತಿ । ಸಂಗಚ್ಛತೇ । ತತೋ ಗಾವಶ್ಚಮೂಷು । ಚಮಂತಿ ಭಕ್ಷಯಂತ್ಯತ್ರ ಸೋಮಮಿತಿ ಚಮ್ವೋ ಗ್ರಹಾದಯಃ । ತೇಷು ಸ್ಥಿತಂ ಮೂರ್ಧಾನಂ ಸಮುಚ್ಛ್ರಿತಮಿಮಂ ಸೋಮಂ ಪಯಸಾ ಕ್ಷೀರೇಣಾಭಿ ಶ್ರೀಣಂತಿ । ಅಭಿತ ಆಚ್ಛಾದಯಂತಿ । ತತ್ರ ದೃಷ್ಟಾಂತಃ । ನಿಕ್ತೈಃ ಪ್ರಕ್ಷಾಲಿತೈರ್ವಸುಭಿರ್ನ ವಸ್ತ್ರೈರ್ಯಥಾಚ್ಛಾದಯಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಅಘ್ನ್ಯಾಯಾಃ**—ಗೋವಿನ । **ಊಧಃ**—ಕೆಚ್ಚಲುಪ್ರದೇಶವನ್ನು । **ಪ್ರ ಪಿಪ್ಯೇ**—ಪುಷ್ಟವಾಗುವಂತೆ ಮಾಡುತ್ತಾನೆ । **ಸುಮೇಧಾಃ**—ಉತ್ತಮವಾದ ಪ್ರಜ್ಞೆಯುಳ್ಳ । **ಇಂದುಃ**—ಸೋಮನು । **ಧಾರಾಭಿಃ**—ತನ್ನ ಧಾರೆಗಳ ರೂಪದಲ್ಲಿ । **ಸಚತೇ**—ಸೇರಿಕೊಳ್ಳುತ್ತಾನೆ । **ನಿಕ್ತೈಃ**—ಶುಭ್ರವಾಗಿ ಒಗೆಯಲ್ಪಟ್ಟ । **ವಸುಭಿಃ ನ**—ವಸ್ತ್ರಗಳಿಂದ ಹೊದ್ದಿಸುವಂತೆ । **ಗಾವಃ**—ಗೋವುಗಳು । **ಚಮೂಷು**—ಚಮೂಪಾತ್ರೆಗಳಲ್ಲಿ । **ಮೂರ್ಧನಿ**—ಎತ್ತರಸ್ಥಾನದಲ್ಲಿರುವ ಸೋಮನನ್ನು । **ಪಯಸಾ**—ಕ್ಷೀರಗಳಿಂದ । **ಅಭಿ ಶ್ರೀಣಂತಿ**—ಹೊದ್ದಿಸುತ್ತವೆ.

॥ ಭಾವಾರ್ಥ ॥

ಸೋಮನು ಗೋವಿನ ಕೆಚ್ಚಲುಪ್ರದೇಶವನ್ನು ಪುಷ್ಟವಾಗುವಂತೆ ಮಾಡುತ್ತಾನೆ. ಉತ್ತಮವಾದ ಪ್ರಜ್ಞೆಯುಳ್ಳ ಸೋಮನು ತನ್ನ ಧಾರೆಗಳೊಡನೆ ಸೇರಿಕೊಳ್ಳುತ್ತಾನೆ. ಶುಭ್ರವಾಗಿ ಒಗೆಯಲ್ಪಟ್ಟ ವಸ್ತ್ರಗಳಿಂದ ಹೊದ್ದಿಸುವಂತೆ ಗೋವುಗಳು ಚಮೂಪಾತ್ರೆಗಳಲ್ಲಿ ಎತ್ತರಸ್ಥಾನದಲ್ಲಿರುವ ಸೋಮನನ್ನು ಕ್ಷೀರಗಳಿಂದ ಹೊದ್ದಿಸುತ್ತವೆ.

## English Translation

And he nourishes the cow's udder ; the intelligent Indu is associated with his streams ; the cows clothe the elevated Soma in the ladles with their milk as with newly washed robes.

|| ವಿಶೇಷವಿಷಯಗಳು ||

**ಅಘ್ನ್ಯಾಯಾಃ – ಅಹಂತವ್ಯಾ ಗೋಃ** । ಕೊಲ್ಲಲ್ಪಡಲು ಅರ್ಹವಲ್ಲದ ಎಂದರೆ ಪೂಜ್ಯವಾದ ಗೋವಿಗೆ **ಅಘ್ನ್ಯಾ** ಎಂದು ಹೆಸರು. **ಅಘ್ನ್ಯಾ** ಎಂಬ ಶಬ್ದವು ಒಂಭತ್ತು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯).

**ಅಘ್ನ್ಯಾಯಾಃ ಊಧಃ ಪ್ರ ಪಿಪ್ಯೇ—ಗೋಃ ಪಯಃಸ್ಥಾನಂ ಓಷಧ್ಯಾದಿಷು ಸೋಮಃ ಪ್ರವಿಶ್ಯ ಆಪ್ಯಾಯಯತಿ** । ಈ ಸೋಮದೇವನು ಗೋವುಗಳ ಕೆಚ್ಚಲುಗಳಲ್ಲಿರುವ ಹಾಲನ್ನು ಪುಷ್ಟಿಗೊಳಿಸಿ ಅಭಿವೃದ್ಧಿಯಾಗುವಂತೆ ಮಾಡುತ್ತಾನೆ ಎಂದರ್ಥವು. ಸೋಮನಿಗೂ ಗೋವುಗಳಿಗೂ ಏನು ಸಂಬಂಧ ? ಗೋವುಗಳಲ್ಲಿ ಹಾಲು ಅಭಿವೃದ್ಧಿಯಾಗುವಂತೆ ಸೋಮನು ಹೇಗೆ ಮಾಡುತ್ತಾನೆ ? ಎಂದರೆ, **ಸೋಮೋ ವನಸ್ಪತೀನಾಮಧಿಪತಿಃ** ಎಂಬ ಶ್ರುತಿವಾಕ್ಯದ ಪ್ರಕಾರ ಸೋಮದೇವತೆಯು ಓಷಧಿವನಸ್ಪತಿಗಳಿಗೆ ಪ್ರಭುವಾಗಿರುವನು. ಆದ್ದರಿಂದ ಗೋವುಗಳೇ ಮೊದಲಾದ ಪಶುಗಳಿಗೆ ಆಹಾರವಾದ ತೃಣಾದಿ (ಹುಲ್ಲು) ಗಳನ್ನು ಚೆನ್ನಾಗಿ ಪೋಷಿಸಿ ಸಾರವತ್ತಾಗಿ ಮಾಡಿ ಆ ಮೂಲಕ ಗೋವುಗಳ ಪುಷ್ಟಿಗೆ ಕಾರಣನಾಗಿರುವನು. ಗೋವುಗಳು ಸಾರವತ್ತಾದ ಆಹಾರವನ್ನು ತಿನ್ನುವುದರಿಂದ ಹಾಲನ್ನು ಯಥೇಚ್ಛವಾಗಿ ಕೊಡುವವು. ಆದ್ದರಿಂದ ಗೋವುಗಳು ಹೆಚ್ಚಾಗಿ ಹಾಲು ಕೊಡುವುದಕ್ಕೆ ಸೋಮದೇವತೆಯೇ ಪರೋಕ್ಷವಾಗಿ indirectly) ಕಾರಣವಾಗಿರುವನು ಎಂದಭಿಪ್ರಾಯವು.

**ನಿಕ್ತೈಃ ವಸುಭಿರ್ನ ಚಮೂಷು ಮೂರ್ಧನಿ ಸ್ಥಿತಂ ಪಯಸಾ ಅಭಿ ಶ್ರೀಣಂತಿ** । ಮನುಷ್ಯರು ಸ್ವಚ್ಛವಾಗಿ ಒಗೆದು ಶುಭ್ರವಾಗಿರುವ ಬಟ್ಟೆಗಳನ್ನು ಧರಿಸಿದಾಗ ಯಾವ ರೀತಿ ಬೆಳ್ಳಗೆ ಕಾಣುವರೋ ಅದರಂತೆ ಚಮಸಪಾತ್ರೆಗಳಲ್ಲಿ ತುಂಬಿರುವ ಸೋಮರಸಕ್ಕೆ ಗೋವುಗಳ ಹಾಲನ್ನು ಮಿಶ್ರಮಾಡಿದಾಗ ಸೋಮರಸವು ಬಿಳಿಯ ಬಟ್ಟೆಯನ್ನು ಹೊದ್ದುಕೊಂಡಿರುವ ಮನುಷ್ಯರಂತೆ ಬೆಳ್ಳಗೆ ಕಾಣಿಸುತ್ತದೆ ಎಂದಭಿಪ್ರಾಯವು. ಗೋವುಗಳು ತಮ್ಮ ಬೆಳ್ಳಗಿರುವ ಹಾಲಿನಿಂದ ಸೋಮರಸಕ್ಕೆ ಮಿಶ್ರಿತವಾದಾಗ ಆ ಸೋಮರಸವನ್ನು ಬೆಳ್ಳಗೆ ಕಾಣುವಂತೆ ಮಾಡುತ್ತವೆ ಎಂದು ಋಷಿಯು ಪ್ರಕಾರಾಂತರವಾಗಿ ವರ್ಣಿಸಿದಾನೆ.

|| ಸಂಹಿತಾಪಾಠಃ ||

**ಸ ನೋ ದೇವೇಭಿಃ ಪವಮಾನ ರದೇಂದೋ ರಯಿಮಶ್ವಿನಂ ವಾವಶಾನಃ ।**

**ರಥಿರಾಯತಾಮುಶತೀ ಪುರಂಧಿರಸ್ಮದ್ರ್ಯ೧ಗಾ ದಾವನೇ ವಸೂನಾಂ ॥ ೪ ॥**

|| ಪದಪಾಠಃ ||

ಸಃ । ನಃ । ದೇವೇಭಿಃ । ಪವಮಾನ । ರದ । ಇಂದೋ ಇತಿ । ರಯಿಂ । ಅಶ್ವಿನಂ । ವಾವಶಾನಃ ।

ರಥಿರಾಯತಾಂ । ಉಶತೀ । ಪುರಂऽಧಿಃ । ಅಸ್ಮದ್ರ್ಯಕ್ । ಆ । ದಾವನೇ । ವಸೂನಾಂ ॥ ೪ ॥

|| ಸಾಯಣಭಾಷ್ಯಂ ||

ಹೇ ಪವಮಾನ ಪೂಯಮಾನ ಸೋಮ ಸ ತಾದೃಶಸ್ತ್ವಂ ನೋಽಸ್ಮಭ್ಯಂ ದೇವೇಭಿರ್ದೇವೈಃ ಸಹ ರದ । ಪ್ರಯಚ್ಛ । ಕಿಂ ತತ್ ಉಚ್ಯತೇ । ಹೇ ಇಂದೋ ಪಾತ್ರೇಷು ಕ್ಷರನ್ ಸೋಮ ವಾವಶಾನಃ

ಕಾಮಯಮಾನಃ ಸನ್ನಶ್ವಿನಮಶ್ವವಂತಂ ರಯಿಂ ಧನಂ ಪ್ರಯಚ್ಛೇತಿ । ಕಿಂಚ ರಥಿರಾಯತಾಂ । ರಥೋ ಯೇಷಾಮಸ್ತೀತಿ ರಥಿರಾಃ ॥ ಮೇಧಾರಥಾಭ್ಯಾ ಮಿತೀರಚ್ಪ್ರತ್ಯಯಃ ॥ ತದ್ವದಾಚರತಸ್ತಾನಿಚ್ಛತೋ ವಾ ಪುರುಷಾನುಶತೀ ಕಾಮಯಮಾನಾ ಪುರಂಧಿಸ್ತ್ವದೀಯಾ ಬಹುವಿಧಾ ಧೀರ್ವಸೂನಾಂ ಧನಾನಾಂ ದಾವನೇ ದಾನಾಯಾಸ್ಮದ್ರ್ಯಗಸ್ಮದಭಿಮುಖ್ಯಾಗಚ್ಛತು । ಯದ್ವಾ । ರಥಿರಾಯತಾಮಿತಿ ಧನಾನಾಂ ವಿಶೇಷಣಂ । ಬಲವತಾಂ ಧನಾನಾಮಿತಿ ॥ ಅಸ್ಮದ್ರ್ಯಕ್ । ವಿಷ್ವಗ್ದೇವಯೋಶ್ಚ ಟೇರದ್ರ್ಯಂಚತಾವಪ್ರತ್ಯಯೇ । ಪಾ ೬-೩-೯೨ । ಇತ್ಯದ್ರ್ಯಾದೇಶಃ । ಅದ್ರಿಸಧ್ರ್ಯೋರಂತೋದಾತ್ತತ್ವನಿಪಾತನಾದುದಾತ್ತಸ್ವರಿತಯೋರ್ಯಣ ಇತಿ ಸ್ವರಿತಃ ॥

॥ ಪ್ರತಿಪದಾರ್ಥ ॥

**ಪವಮಾನ ಇಂದೋ** — ಪವಮಾನ ಸಂಜ್ಞಕನಾದ ಎಲೈ ಸೋಮನೇ । **ಸಃ**— ನೀನು । **ದೇವೇಭಿಃ**— ದೇವತೆಗಳೊಡನೆ । **ವಾವಶಾನಃ**— ಸಹವಾಸವನ್ನು ಇಚ್ಛಿಸುತ್ತ । **ಅಶ್ವಿನಂ**— ಅಶ್ವಯುಕ್ತವಾದ । **ರಯಿಂ**— ಧನವನ್ನು । **ನಃ**— ನಮಗೆ । **ರದ**— ಕೊಡು । **ರಥಿರಾಯತಾಂ**— ರಥವನ್ನು ಹೊಂದಿರುವ ಪುರುಷರನ್ನು । **ಉಶತೀ**— ಅಪೇಕ್ಷಿಸತಕ್ಕ । **ಪುರಂಧಿಃ**— ನಿನ್ನ ಪ್ರಜ್ಞೆಯು । **ವಸೂನಾಂ ದಾವನೇ**— ಧನದಾನಕ್ಕಾಗಿ । **ಅಸ್ಮದ್ರ್ಯಕ್**— ನಮಗಭಿಮುಖವಾಗಿ । **ಆ**— ಬರಲಿ.

॥ ಭಾವಾರ್ಥ ॥

ಪವಮಾನ ಸಂಜ್ಞಕನಾದ ಎಲೈ ಸೋಮದೇವನೇ, ದೇವತೆಗಳೊಡನೆ ಸಹವಾಸವನ್ನು ಇಚ್ಛಿಸುತ್ತ ನಮಗೆ ಅಶ್ವಯುಕ್ತವಾದ ಧನವನ್ನು ಕೊಡು ರಥವನ್ನು ಹೊಂದಿರುವ ಪುರುಷರನ್ನು ಅಪೇಕ್ಷಿಸತಕ್ಕ ನಿನ್ನ ಪ್ರಜ್ಞೆಯು ಧನ ದಾನಕ್ಕಾಗಿ ನಮಗಭಿಮುಖವಾಗಿ ಬರಲಿ.

English Translation

Indu Pavamana, do you with the gods, who do long for (our good) bestow upon us riches comprising horses ; may your capacious mind longing for those possess chariots (come) towards us to bestow treasures (upon us).

॥ ವಿಶೇಷವಿಷಯಗಳು ॥

**ರಥಿರಾಯತಾಂ — ರಥೋ ಯೇಷಾಮಸ್ತೀತಿ ರಥಿರಾಃ । ತದ್ವದಾಚರತಸ್ತಾನಿಚ್ಛತೋ ವಾ ಪುರುಷಾನ್ ।** ರಥವನ್ನು ಹೊಂದಿರುವವರಿಗೆ ರಥಿರಾಃ ಎಂದು ಹೆಸರು. ಅಂತಹ ರಥಿಕರಾದ ಪುರುಷರನ್ನು ಬಯಸುವ ಎಂದು ಈ ಶಬ್ದದ ಅರ್ಥವು. ಅಥವಾ—**ರಥಿರಾಯತಾಮಿತಿ ವಸೂನಾಂ ವಿಶೇಷಣಂ ಬಲವತಾಂ ಧನಾನಾಮಿತಿ । ರಥಿರಾಯತಾಂ** ಎಂಬ ಶಬ್ದವು **ವಸೂನಾಂ** ಎಂಬ ಶಬ್ದಕ್ಕೆ ವಿಶೇಷಣವೆಂದೂ ಹೇಳಬಹುದು. ಈ ಸಂದರ್ಭದಲ್ಲಿ ರಥಯುಕ್ತವಾದ, ರಥದಲ್ಲಿ ತುಂಬಿರುವ ಅಥವಾ ಶಕ್ತಿಪ್ರದವಾದ ಧನಾದಿಗಳ ಎಂಬರ್ಥವನ್ನು ಹೇಳಬಹುದು.

॥ ಸಂಹಿತಾಪಾಠಃ ॥

ನೂನೋ ರಯಿಮುಪ ಮಾಸ್ವ ನೃವಂತಂ ಪುನಾನೋ ವಾತಾಪ್ಯಂ ವಿಶ್ವ-

ಶ್ಚಂದ್ರಂ ।

ಪ್ರ ವಂದಿತುರಿಂದೋ ತಾರ್ಯಾಯುಃ ಪ್ರಾತರ್ಮಕ್ಷೂ ಧಿಯಾವಸುರ್ಜಗ-
ಮ್ಯಾತ್ ॥ ೫ ॥

॥ ಪದಪಾಠಃ ॥

ನು । ನಃ । ರಯಿಂ । ಉಪ । ಮಾಸ್ವ । ನೃವಂತಂ । ಪುನಾನಃ । ವಾತಾಪ್ಯಂ । ವಿಶ್ವಽಚಂದ್ರಂ ।

ಪ್ರ । ವಂದಿತುಃ । ಇಂದೋ ಇತಿ । ತಾರಿ । ಆಯುಃ । ಪ್ರಾತಃ । ಮಕ್ಷು । ಧಿಯಾಽವಸುಃ । ಜಗಮ್ಯಾತ್ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪುನಾನಃ ಪೂಯಮಾನಸ್ತ್ವಂ ನೋಽಸ್ಮಭ್ಯಂ ನೂ ಕ್ಷಿಪ್ರಂ ನೃವಂತಂ ಮನುಷ್ಯೈರ್ಯುಕ್ತಂ ॥ ಛಾಂದಸಂ ಮತುಪೋ ವತ್ವಂ ॥ ತಾದೃಶಂ ರಯಿಂ ಧನಮುಪ ಮಾಸ್ವ । ಉಪನಿರ್ಮಿಮೀಷ್ವ । ಉಪಕುರ್ವಿತ್ಯರ್ಥಃ । ಕಿಂಚ ವಿಶ್ವಚಂದ್ರಂ ಸರ್ವೇಷಾಮಾಹ್ಲಾದಕಂ ವಾತಾಪ್ಯಂ । ಉದಕನಾಮೈತತ್ । ಉದಕಂ ಚ ಕುರು । ತಥಾ ಹೇ ಇಂದೋ ಸೋಮ ವಂದಿತುಸ್ತವ ಸ್ತೋತುರಾಯುರ್ಜೀವನಂ ಪ್ರ ತಾರಿ । ತ್ವಯಾ ವರ್ಧಿತಮಸ್ತು । ಸೋಽಯಂ ಸೋಮೋ ಧಿಯಾವಸುರ್ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನಃ ಪ್ರಾತಃಕಾಲೇ ವಾ ಸವನೇ ವಾ ಮಕ್ಷು ಶೀಘ್ರಮಸ್ಮದೀಯಂ ಯಜ್ಞಂ ಪ್ರತಿ ಜಗಮ್ಯಾತ್ । ಆಗಚ್ಛೇತ್ ॥ ಗಮೇರ್ಲಿಙಿ ಬಹುಲಂ ಛಂದಸೀತಿ ಶಪಃ ಶ್ಲುಃ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಪುನಾನಃ**—ಶುದ್ಧಿಯನ್ನು ಹೊಂದಿದ ನೀನು । **ನಃ**—ನಮಗೆ । **ನು**—ಕ್ಷಿಪ್ರವಾಗಿ । **ನೃವಂತಂ**—ಮಾನವರಿಂದ ಕೂಡಿದ । **ರಯಿಂ**—ಧನವನ್ನು । **ಉಪ ಮಾಸ್ವ**—ಒದಗಿಸು । **ವಿಶ್ವಚಂದ್ರಂ**—ಲೋಕಕ್ಕೆಲ್ಲ ಆಹ್ಲಾದಕರವಾದ । **ವಾತಾಪ್ಯಂ**—ಉದಕವನ್ನು ಒದಗಿಸು । **ಇಂದೋ**—ಎಲೈ ಸೋಮನೇ । **ವಂದಿತುಃ**—ನಿನ್ನ ಸ್ತುತಿಕರ್ತನ । **ಆಯುಃ**—ಆಯುಸ್ಸು । **ಪ್ರ ತಾರಿ**—ದೀರ್ಘವಾಗಿ ಬೆಳೆಯಲಿ । **ಧಿಯಾವಸುಃ**—ಕರ್ಮರೂಪವಾದ ಧನವುಳ್ಳ ಸೋಮನು । **ಪ್ರಾತಃ**—ಪ್ರಾತಃಕಾಲದಲ್ಲಿ । **ಮಕ್ಷು**—ಶೀಘ್ರವಾಗಿ । **ಜಗಮ್ಯಾತ್**—ಯಜ್ಞಗೃಹಕ್ಕೆ ಬರಲಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನೀನು ಪುತ್ರಾದಿಗಳಿಂದ ಕೂಡಿದ ಧನವನ್ನು ನಮಗೆ ಕ್ಷಿಪ್ರವಾಗಿ ಒದಗಿಸು. ನಮಗೆ ಲೋಕಕ್ಕೆಲ್ಲ ಆಹ್ಲಾದಕರವಾದ ಉದಕವನ್ನು ಒದಗಿಸು. ಎಲೈ ಸೋಮನೇ, ನಿನ್ನನ್ನು ಸ್ತುತಿಸುವವನ ಆಯುಸ್ಸು ದೀರ್ಘವಾಗಿ ಬೆಳೆಯಲಿ. ಕರ್ಮರೂಪವಾದ ಧನವುಳ್ಳ ಸೋಮನು ಪ್ರಾತಃಕಾಲದಲ್ಲಿ ಶೀಘ್ರವಾಗಿ ಯಜ್ಞಗೃಹಕ್ಕೆ ಬರಲಿ.

## English Translation.

Soma, when you are purified, measure out to us riches and dependents and all–gratifying water. Indu, may the life of your praiser be prolonged ; may (Soma) who acquires wealth by his intelligence come quickly at dawn.

॥ ವಿಶೇಷವಿಷಯಗಳು ॥

ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ತನ್ನನ್ನು ಸ್ತೋತ್ರಮಾಡುವವರಿಗೆ ಧನಾದಿಗಳನ್ನೂ, ಪುತ್ರಾದಿ ಸಂತತಿಯನ್ನೂ, ದೀರ್ಘಾಯುಸ್ಸನ್ನೂ ಅನುಗ್ರಹಿಸಬೇಕೆಂದೂ ಸ್ತೋತೃವಿನ ಯಜ್ಞಭೂಮಿಗೆ ಪ್ರಾತಃಕಾಲದಲ್ಲಿ ಬರಬೇಕೆಂದೂ ಸೋಮದೇವತೆಯನ್ನು ಪ್ರಾರ್ಥಿಸಲಾಗಿದೆ.

## ತೊಂಭತ್ತನಾಲ್ಕನೆಯ ಸೂಕ್ತವು

। ಸಾಯಣಭಾಷ್ಯಂ ॥

**ಅಧಿ ಯದಿತಿ ಪಂಚರ್ಚಂ ನವಮಂ ಸೂಕ್ತಂ । ಆಂಗಿರಸಸ್ಯ ಕಣ್ವಸ್ಯಾರ್ಷಂ । ತಥಾನುಕ್ರಮ್ಯತೇ। ಅಧಿ ಯತ್ಕಣ್ವ ಇತಿ । ಪೂರ್ವವಚ್ಛಂದೋ ದೇವತೇ ॥ ಗತೋ ವಿನಿಯೋಗಃ ॥**

ಅನುವಾದವು— **ಅಧಿ ಯತ್** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಆಂಗಿರಸಗೋತ್ರದ ಕಣ್ವನೆಂಬುವನು ಋಷಿಯು ; ಈ ಸೂಕ್ತಕ್ಕೆ ದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆ. ಅನುಕ್ರಮಣಿಕೆಯಲ್ಲಿ— **ಅಧಿ ಯತ್ಕಣ್ವಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ— ೯೪

ಮಂಡಲ—೯ ॥ ಅನುವಾಕ—೫ ॥ ಸೂಕ್ತ—೯೪ ॥

ಅಷ್ಟಕ—೭ ॥ ಅಧ್ಯಾಯ—೪ ॥ ವರ್ಗ—೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಕಣ್ವಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಧಿ ಯದಸ್ಮಿನ್ವಾಜಿನೀವ ಶುಭಃ ಸ್ಪರ್ಧಂತೇ ಧಿಯಃ ಸೂರ್ಯೇ ನ ವಿಶಃ ।
ಅಪೋ ವೃಣಾನಃ ಪವತೇ ಕವೀಯನ್ವ್ರಜಂ ನ ಪಶುವರ್ಧನಾಯ ಮನ್ಮ ॥೧॥

॥ ಪದಪಾಠಃ ॥

ಅಧಿ । ಯತ್ । ಅಸ್ಮಿನ್ । ವಾಜಿನಿಽಇವ । ಶುಭಃ । ಸ್ಪರ್ಧಂತೇ । ಧಿಯಃ । ಸೂರ್ಯೇ । ನ । ವಿಶಃ ।
ಅಪಃ । ವೃಣಾನಃ । ಪವತೇ । ಕವಿಽಯನ್ । ವ್ರಜಂ । ನ । ಪಶುಽವರ್ಧನಾಯ । ಮನ್ಮ ॥ ೧ ॥

॥ ಸಾಯಣಭಾಷ್ಯಂ ॥

ಯದ್ಯದಾಸ್ಮಿನ್ಸೋಮೇ ವಾಜಿನೀವ ಶುಭೋಽಶ್ವೇ ಯಥಾ ವಸ್ತ್ರಪ್ರಭೃತ್ಯಲಂಕಾರಾ ಭವಂತಿ । ಯದಾ ವಾಸ್ಮಿನ್ಸೋಮೇ ಸೂರ್ಯೇ ನ ಯಥಾ ಸೂರ್ಯೇ ವಿಶೋ ರಶ್ಮಯ ಉದಿತಾ ಭವಂತಿ । ತದಾ ಧಿಯೋಽಂಗುಲಯೋಽಧಿ ಸ್ಪರ್ಧಂತೇ । ಅಹಂ ಪುರಸ್ತಾಚ್ಛೋಧಯಾಮ್ಯಹಂ ಪುರಃ ಶೋಧಯಾಮೀತ್ಯಹಮಹಮಿಕಯೋಪತಿಷ್ಠಂತಿ । ತತೋಽಯಂ ಸೋಮೋಽಪೋ ವಸತೀವರೀರ್ವೃಣಾನ ಆಚ್ಛಾದಯನ್ ಪವತೇ । ಪಾತ್ರೇಷು ಕ್ಷರತಿ । ಕಲಶಾನಧಿಗಚ್ಛತಿ । ಕೀದೃಶಃ । ಕವೀಯನ್ ಕವಿರಿವಾಚರನ್ । ಯದ್ವಾ । ಕವಯಃ ಸ್ತೋತಾರಃ । ತಾನಿಚ್ಛನ್ । ತತ್ರ ದೃಷ್ಟಾಂತಃ । ವ್ರಜಂ ನ ಮನ್ಮ ಮನನೀಯಂ ಗವಾಂ ಗೋಷ್ಠಂ ಪಶುವರ್ಧನಾಯ ಪಶೂನಾಂ ವರ್ಧನಾಯ ಗೋಪಾಲಃ ಪರಿಗಚ್ಛತಿ । ತಥಾ ದೇವಾನಾಂ ಪ್ರೀಣನಾಯ ಪಾತ್ರಾಣಿ ಪ್ರತಿ ಪವತ ಇತಿ ॥

॥ ಪ್ರತಿಪದಾರ್ಥ ॥

**ಶುಭಃ**—ಆಭರಣಾದಿಗಳು । **ವಾಜನೀವ**—ಅಶ್ವಗಳನ್ನು ಅಲಂಕರಿಸುವಂತೆಯೂ । **ವಿಶಃ**—ರಶ್ಮಿಗಳು । **ಸೂರ್ಯೇ ನ**—ಸೂರ್ಯನಲ್ಲಿ ಉದಯವನ್ನು ಹೊಂದುವಂತೆಯೂ । **ಯತ್**—ಯಾವಾಗ । **ಧಿಯಃ**—ಬೆರಳುಗಳು । **ಅಸ್ಮಿನ್**—ಈ ಸೋಮನಲ್ಲಿ । **ಅಧಿ ಸ್ಪರ್ಧಂತೇ**—ಸ್ಪರ್ಧೆಯಿಂದ ಶುದ್ಧಿಪಡಿಸಲು ಆಸಕ್ತರಾಗಿರುವುವೋ ಆಗ । **ಕವೀಯಾನ್**—ಸ್ತುತಿಕರ್ತರ ಶ್ರೇಯಸ್ಸನ್ನು ಇಚ್ಛಿಸುವ ಸೋಮನು । **ಅಪಃ**—ವಸತೀವರಿಗಳನ್ನು । **ವೃಣಾನಃ**-ಹೊದ್ದುಕೊಂಡು । **ಪಶುವರ್ಧನಾಯ**-ಪಶುಗಳನ್ನು ಪುಷ್ಟಿಗೊಳಿಸಲು । **ಮನ್ಮ**—ಉತ್ತಮವಾದ ಗೋವುಗಳಿರುವ । **ವ್ರಜಂ ನ**—ಕೊಟ್ಟಿಗೆಯನ್ನು (ಗೋಪಾಲಕನು) ಪ್ರವೇಶಿಸುವಂತೆ । **ಪವತೇ**—ಪಾತ್ರೆಗಳಲ್ಲಿ ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಆಭರಣಾಧಿಗಳು ಅಶ್ವಗಳ ಮೇಲಿದ್ದು ಅಲಂಕರಿಸುವಂತೆಯೂ, ರಶ್ಮಿಗಳು ಸೂರ್ಯನನ್ನು ಆವರಿಸಿ ಅಲಂಕರಿಸು ವಂತೆಯೂ ಸಹ ಬೆರಳುಗಳು ಸೋಮನನ್ನು ಪರಸ್ಪರಸ್ಪರ್ಧೆಯಿಂದ ಆವರಿಸಿ ಶುದ್ಧಿಪಡಿಸಲು ಆಸಕ್ತವಾಗಿರುವಾಗ ಸ್ತುತಿಕರ್ತರ ಶ್ರೇಯಸ್ಸನ್ನು ಇಚ್ಛಿಸುವ ಸೋಮನು ಉತ್ತಮವಾದ ಗೋವುಗಳಿರುವ ಕೊಟ್ಟಿಗೆಯನ್ನು ಪಶುಗಳ ಪೋಷಣೆಗಾಗಿ ಗೋಪಾಲಕನು ಪ್ರವೇಶಿಸುವಂತೆ ವಸತೀವರಿಉದಕಗಳಿಂದ ಮಿಶ್ರಿತನಾದ ಸೋಮನು ಪಾತ್ರೆಗಳಲ್ಲಿ ಪ್ರವೇಶಿಸುತ್ತಾನೆ.

## English Translation.

When the fingers vie with each other in this (Soma), as the trappings on a horse or the rays in the sun, clothed in the waters he flows desiring his

worshippers like (a cowhered going to) a pleasant cow-stall for the nourishment of his cattle.

॥ ಸಂಹಿತಾಪಾಠಃ ॥

ದ್ವಿತಾ ವ್ಯೂರ್ಣ್ವನ್ನಮೃತಸ್ಯ ಧಾಮ ಸ್ವರ್ವಿದೇ ಭುವನಾನಿ ಪ್ರಥಂತ ।
ಧಿಯಃ ಪಿನ್ವಾನಾಃ ಸ್ವಸರೇ ನ ಗಾವ ಋತಾಯಂತೀರಭಿ ವಾವಶ್ರ
ಇಂದುಂ ॥ ೨ ॥

॥ ಪದಪಾಠಃ ॥

ದ್ವಿತಾ । ವಿಽಊರ್ಣ್ವನ್ । ಅಮೃತಸ್ಯ । ಧಾಮ । ಸ್ವಃಽವಿದೇ । ಭುವನಾನಿ । ಪ್ರಥಂತ ।
ಧಿಯಃ । ಪಿನ್ವಾನಾಃ । ಸ್ವಸರೇ । ನ । ಗಾವಃ । ಋತಽಯಂತೀಃ । ಅಭಿ । ವಾವಶ್ರೇ । ಇಂದುಂ ॥ ೨ ॥

॥ ಸಾಯಣಭಾಷ್ಯಂ ॥

ಅಮೃತಸ್ಯೋದಕಸ್ಯ ಧಾಮ ಧಾರಕಂ ಸ್ಥಾನಮಂತರಿಕ್ಷಂ ಸೋಮೋ ದ್ವಿತಾ ದ್ವಿಧಾ ವ್ಯೂರ್ಣ್ವನ್ನುಭಯತಃ ಸ್ವತೇಜಸಾಚ್ಛಾದಯನ್ ಮಧ್ಯೇನ ಗಚ್ಛತಿ । ತತಃ ಸ್ವರ್ವಿದೇ ಸರ್ವಜ್ಞಾಯ ತಸ್ಮೈ ಸೋಮಾಯ ಭುವನಾನಿ ಪ್ರಥಂತ । ವಿಸ್ತೀರ್ಣಾನಿ ಭವಂತಿ । ತಸ್ಯ ರಶ್ಮೀನಾಂ ಸಂಚರಣಾರ್ಥಂ ಪ್ರಥಂತ ಇತ್ಯರ್ಥಃ । ಅಥ ಪಿನ್ವಾನಾಃ ಪ್ರೀಣಯಿತ್ರ್ಯೋ ಧಿಯಃ ಸ್ತುತಿಲಕ್ಷಣಾ ವಾಚ ಋತಾಯಂತೀರ್ಯಜ್ಞಮಿಚ್ಛಂತ್ಯಃ ಸತ್ಯಸ್ತುತಿಮಿಮಮಿಂದುಂ ಸೋಮಮಭಿಲಕ್ಷ್ಯ ಸ್ವಸರೇ ಯೋಗಾಹನಿ ವಾವಶ್ರೇ । ಶಬ್ದಾಯಂತೇ । ಯದ್ವಾ । ಸೋಮಂ ಕಾಮಯಂತೇ । ತತ್ರ ದೃಷ್ಟಾಂತಃ । ಗಾವೋ ನ ಯಥಾ ಪಿನ್ವಮಾನಾಃ ಪಯಃ ಕ್ಷರಂತ್ಯೋ ಗಾವಃ ಸ್ವಸರೇ । ಸುಷ್ಠು ಸ್ಯಂತೇ ಪ್ರೇರ್ಯಂತೇ ಗಾವೋಽತ್ರೇತಿ ಸ್ವಸರೋ ಗೋಷ್ಠಂ । ತಸ್ಮಿನ್ನುಚ್ಚಾಭಿಲಕ್ಷ್ಯ ಶಬ್ದಂ ಕುರ್ವಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಅಮೃತಸ್ಯ**—ಉದಕಕ್ಕೆ । **ಧಾಮ**— ಧಾರಕವಾದ ಅಂತರಿಕ್ಷವನ್ನು । **ದ್ವಿತಾ**—ಎರಡಾಗಿ ಮಾಡಿ । **ವ್ಯೂರ್ಣ್ವನ್**—ತನ್ನ ತೇಜಸ್ಸಿನಿಂದ ಆ ಭಾಗವನ್ನು ವ್ಯಾಪಿಸುತ್ತ (ಸೋಮನು ಸಂಚರಿಸುತ್ತಾನೆ) । **ಸ್ವರ್ವಿದೇ**—ಸರ್ವಜ್ಞನಾದ ಅವನಿಗಾಗಿ । **ಭುವನಾನಿ**—ಲೋಕಗಳು । **ಪ್ರಥಂತ**—ವಿಸ್ತೃತಿಯನ್ನು ಹೊಂದುತ್ತವೆ । **ಗಾವಃ**—ಗೋವುಗಳು । **ಸ್ವಸರೇ ನ**—ತಮ್ಮ ಕೊಟ್ಟಿಗೆಗೆ ಹೋಗಲು ಶಬ್ದಮಾಡುವಂತೆ । **ಪಿನ್ವಾನಾಃ**—ತೃಪ್ತಿಯನ್ನುಂಟುಮಾಡತಕ್ಕ । **ಧಿಯಃ**—ಸ್ತುತಿವಾಕ್ಯಗಳು । **ಋತಾಯಂತೀಃ**—ಯಜ್ಞವನ್ನು ಇಚ್ಛಿಸುತ್ತ । **ಇಂದುಂ ಅಭಿ**—ಸೋಮನನ್ನುದ್ದೇಶಿಸಿ । **ವಾವಶ್ರೇ**—ಶಬ್ದಮಾಡುತ್ತವೆ.

॥ ಭಾವಾರ್ಥ ॥

ಸೋಮನು ಉದಕಧಾರಕವಾದ ಅಂತರಿಕ್ಷವನ್ನು ಎರಡಾಗಿ ಮಾಡಿ ತನ್ನ ತೇಜಸ್ಸಿನಿಂದ ಆ ಭಾಗವನ್ನು ವ್ಯಾಪಿಸುತ್ತ ಅವುಗಳ ಮಧ್ಯದಲ್ಲಿ ಸಂಚರಿಸುತ್ತಾನೆ. ಸರ್ವಜ್ಞನಾದ ಅವನಿಗಾಗಿ ಲೋಕಗಳು ವಿಸ್ತೃತಿಯನ್ನು ಹೊಂದುತ್ತವೆ. ತಮ್ಮ ಕೊಟ್ಟಿಗೆಗೆ ಹೋಗಲು ಗೋವುಗಳು ಶಬ್ದಮಾಡುವಂತೆ ತೃಪ್ತಿಕಾರಕವಾದ ಸ್ತುತಿವಾಕ್ಯಗಳು ಯಜ್ಞವನ್ನು ಇಚ್ಛಿಸುತ್ತ ಸೋಮನನ್ನುದ್ದೇಶಿಸಿ ಶಬ್ದಮಾಡುತ್ತವೆ.

## English Translation.

Opening out the abode of the ambrosia on both sides (he passes between) ; for him, the omniscient, the worlds expand. Gratifying laudations eager for the sacrifice, call upon Indu, like cows (lowing) towards their stall,

॥ ಸಂಹಿತಾಪಾಠಃ ॥

ಪರಿ ಯತ್ಕವಿಃ ಕಾವ್ಯಾ ಭರತೇ ಶೂರೋ ನ ರಥೋ ಭುವನಾನಿ ವಿಶ್ವಾ ।
ದೇವೇಷು ಯಶೋ ಮರ್ತಾಯ ಭೂಷನ್ದಕ್ಷಾಯ ರಾಯಃ ಪುರುಭೂಷು
ನವ್ಯಃ ॥ ೩ ॥

॥ ಪದಪಾಠಃ ॥

ಪರಿ । ಯತ್ । ಕವಿಃ । ಕಾವ್ಯಾ । ಭರತೇ । ಶೂರಃ । ನ । ರಥಃ । ಭುವನಾನಿ । ವಿಶ್ವಾ ।
ದೇವೇಷು । ಯಶಃ । ಮರ್ತಾಯ । ಭೂಷನ್ । ದಕ್ಷಾಯ । ರಾಯಃ । ಪುರುऽಭೂಷು । ನವ್ಯಃ ॥ ೩ ॥

॥ ಸಾಯಣಭಾಷ್ಯಂ ॥

ಕವಿಃ ಕ್ರಾಂತಪ್ರಜ್ಞಃ ಸೋಮಃ ಕಾವ್ಯಾ ಕಾವ್ಯಾನಿ ಕವೇಃ ಕರ್ಮಾಣಿ ಸ್ತೋತ್ರಾಣಿ ಯದ್ಯದಾ ಪರಿ ಭರತೇ ಪರಿತೋ ಬಿಭರ್ತಿ । ಪರಿಗಚ್ಛತೀತಿ ಯಾವತ್ । ಕಥಮಿವ । ಶೂರೋ ನ ಯಥಾ ಶೂರಃ ಶತ್ರೂಣಾಂ ಬಾಧಕೋ ರಥಸ್ತದೀಯೋ ವಿಶ್ವಾ ಭುವನಾನಿ ಸಂಗ್ರಾಮಿಕಾಣಿ ಭೂತಾನಿ ಪರಿಯಾತಿ ತದ್ವತ್। ತದಾನೀಂ ದೇವೇಷು ಸ್ಥಿತಂ ಯಶೋ ವ್ಯಾಪಕಂ ಧನಂ ಮರ್ತಾಯ ಮನುಷ್ಯಾಯ ಸ್ತೋತ್ರೇ ಭೂಷನ್॥ ಭವತೇರಂತರ್ಭಾವಿತಣ್ಯರ್ಥಾತ್ಶತರಿ ರೂಪಂ ॥ ಭಾವಯಿತುಮಿಚ್ಛನ್ ಸೋಮೋ ರಾಯ ಆತ್ಮನಾ ದತ್ತಸ್ಯ ಧನಸ್ಯ ದಕ್ಷಾಯ ವೃದ್ಧ್ಯರ್ಥಂ ಪುರುಭೂಷು ಬಹುಷು ಯಜ್ಞಭವನೇಷು ನವ್ಯಃ ಸ್ತೋತವ್ಯೋ ಭವತಿ ॥ ಋ ಸ್ತುತೌ । ಅಚೋ ಯತ್ ॥

॥ ಪ್ರತಿಪದಾರ್ಥ ॥

**ಶೂರಃ**—ಶತ್ರುಹಿಂಸಕವಾದ | **ರಥಃ**—ರಥವು | **ವಿಶ್ವಾ ಭುವನಾನಿ ನ**—ತನ್ನ ಸಕಲವಾದ ಯುದ್ಧ ಸಲಕರಣೆಗಳನ್ನೂ ಧರಿಸಿಕೊಳ್ಳುವಂತೆ | **ಯತ್**—ಯಾವಾಗ | **ಕವಿಃ**—ಕ್ರಾಂತಪ್ರಜ್ಞನಾದ ಸೋಮನು | **ಕಾವ್ಯಾ**—ಸ್ತುತಿಗಳನ್ನು | **ಪರಿ ಭರತೇ**—ಧರಿಸಿಕೊಳ್ಳುವನೋ ಆಗ | **ದೇವೇಷು**—ದೇವತೆಗಳಲ್ಲಿರುವ | **ಯಶಃ**—ಧನವನ್ನು | **ಮರ್ತಾಯ**—ಮಾನವನಾದ ಸ್ತುತಿಕರ್ತನಿಗೆ | **ಭೂಷನ್**—ಕೊಡಲಿಚ್ಛೆಯುಳ್ಳವನಾಗಿಯೂ | **ರಾಯಃ**—ತನ್ನಿಂದ ದತ್ತವಾದ ಧನದ | **ದಕ್ಷಾಯ**—ವೃದ್ಧಿಗಾಗಿಯೂ | **ಪುರುಭೂಷು**—ಅನೇಕ ಯಜ್ಞಗೃಹಗಳಲ್ಲಿ | **ನವ್ಯಃ**—ಸ್ತುತಿಪಾತ್ರನಾಗುತ್ತಾನೆ.

॥ ಭಾವಾರ್ಥ ॥

ಶತ್ರುಹಿಂಸಕವಾದ ರಥವು ತನ್ನ ಸಕಲವಾದ ಯುದ್ಧಸಲಕರಣೆಗಳನ್ನು ಧರಿಸಿಕೊಳ್ಳುವಂತೆ ಯಾವಾಗ ಕ್ರಾಂತಪ್ರಜ್ಞನಾದ ಸೋಮನು ಸ್ತುತಿಗಳನ್ನು ಧರಿಸಿಕೊಳ್ಳುವನೋ ಆಗ ದೇವತೆಗಳಲ್ಲಿರುವ ಧನವನ್ನು ಮಾನವನಾದ ಸ್ತುತಿಕರ್ತನಿಗೆ ಕೊಡಲಿಚ್ಛೆಯುಳ್ಳವನಾಗಿಯೂ, ತನ್ನಿಂದ ದತ್ತವಾದ ಧನದ ವೃದ್ಧಿಗಾಗಿಯೂ ಅನೇಕ ಯಜ್ಞಗಳಲ್ಲಿ ಸ್ತುತಿಪಾತ್ರನಾಗುತ್ತಾನೆ.

English Translation

When the sage Soma goes round praises (of the wise) like a hostile chariot (going round) all the regions (of the battle-field), then desirous of bestowing upon mortals the wealth that abides with the gods, he (is) to be glorified in the many places of sacrifice for the preservation of the riches he has given.

॥ ಸಂಹಿತಾಪಾಠಃ ॥

ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ ।
ಶ್ರಿಯಂ ವಸಾನಾ ಅಮೃತತ್ವಮಾಯನ್ಭವಂತಿ ಸತ್ಯಾ ಸಮಿಥಾ ಮಿತದ್ರೌ ॥೪॥

॥ ಪದಪಾಠಃ ॥

ಶ್ರಿಯೇ । ಜಾತಃ । ಶ್ರಿಯೇ । ಆ । ನಿಃ । ಇಯಾಯ । ಶ್ರಿಯಂ । ವಯಃ । ಜರಿತೃಽಭ್ಯಃ । ದಧಾತಿ ।
ಶ್ರಿಯಂ । ವಸಾನಾಃ । ಅಮೃತಽತ್ವಂ । ಆಯನ್ । ಭವಂತಿ । ಸತ್ಯಾ । ಸಂಽಇಥಾ । ಮಿತಽದ್ರೌ ॥ ೪ ॥

|| ಸಾಯಣಭಾಷ್ಯಂ ||

ಯಃ ಸೋಮಃ ಶ್ರಿಯೇ ಜಾತಃ ಸಂಪದರ್ಥಂ ಪ್ರಾದುರ್ಭೂತೋ ಭವತಿ । ತದೇವಾಹ । ಶ್ರಿಯೇ ಶ್ರೈರ್ಥಮೇವಾ ನಿರಿಯಾಯ । ಅಂಶುಭ್ಯ ಆಭಿಮುಖ್ಯೇನ ನಿರ್ಗಚ್ಛತಿ । ನಿರ್ಗತಶ್ಚ ಸ ಸೋಮೋ ಜರಿತೃಭ್ಯಃ ಸ್ತೋತೃಭ್ಯಃ ಶ್ರಿಯಂ ವಯೋಽನ್ನಂ ಜೀವನಂ ವಾ ದಧಾತಿ । ವಿದಧಾತಿ । ಪ್ರಯಚ್ಛತಿ । ತೇನ ದತ್ತಾಂ ಶ್ರಿಯಂ ವಸಾನಾ ಆಚ್ಛಾದಯಂತಃ ಸ್ತೋತಾರೋಽಮೃತತ್ವಂ ದೇವತ್ವಮಮರಣಂ ವಾಯನ್ । ಪ್ರಾಪ್ನುವನ್ । ತಸ್ಮಿನ್ನಿತದ್ರೌ ಮಿತಗಮನೇ ಸೋಮೇ ಸಮಿಥಾ। ಯುದ್ಧನಾನ್ಯೈತತ್ ಸಮ್ಯಕ್ ಪ್ರಾಪ್ಯತೇಽತ್ರೇತಿ ॥ ಸಮಿಣಃ । ಉ. ೨-೧೧ । ಇತ್ಯೇತೇಃ ಸಂಪೂರ್ವಸ್ಯ ಥಕ್‌ಪ್ರತ್ಯಯಃ ॥ ತಾನಿ ಯುದ್ಧಾನಿ ಸತ್ಯಾ ಸತ್ಯಾನಿ ಯಥಾರ್ಥಾನಿ ಭವಂತಿ ನ ತು ವಿತಥಾನಿ । ತೇನ ಸೋಮೇನ ಪರಾಜಿತಾನಿ ಭವಂತೀತ್ಯರ್ಥಃ ॥

|| ಪ್ರತಿಪದಾರ್ಥ ||

**ಸೋಮಃ**—ಸೋಮದೇವನು | **ಶ್ರಿಯೇ**—ಸಂಪತ್ತಿಗಾಗಿ | **ಜಾತಃ**— ಉತ್ಪನ್ನನಾಗಿದ್ದಾನೆ | **ಶ್ರಿಯೇ**—ಸಂಪತ್ತಿಗಾಗಿ | **ಆ ನಿರಿಯಾಯ**—ಹೊರಹೊರಡುತ್ತಾನೆ | **ಜರಿತೃಭ್ಯಃ** —ಸ್ತುತಿಕರ್ತರಿಗೆ| **ಶ್ರಿಯಂ**—ಸಂಪತ್ತನ್ನೂ **ವಯಃ**—ಅನ್ನವನ್ನೂ | **ದಧಾತಿ**—ಕೊಡುತ್ತಾನೆ | **ಶ್ರಿಯಂ**—ಸೋಮನಿಂದ ದತ್ತವಾದ ಸಂಪತ್ತನ್ನು | **ವಸಾನಾಃ**—ಧರಿಸಿದ ಸ್ತುತಿಕರ್ತರು | **ಅಮೃತತ್ವಂ**—ಮರಣರಾಹಿತ್ಯವನ್ನು | **ಆಯನ್**—ಹೊಂದಿದರು | (ಹೊಂದುತ್ತಾರೆ) | **ಮಿತದ್ರೌ**— ಮಿತಗಾಮಿಯಾದ ಸೋಮನ ಸಹಾಯವಿರಲು | **ಸಮಿಥಾ**—ಸ್ತುತಿಕರ್ತರ ಯುದ್ಧಕರ್ಮಗಳು | **ಸತ್ಯಾ**—ಸತ್ಯಾತ್ಮಕವಾದ ಸತ್ಫಲವುಳ್ಳವಾಗಿ | **ಭವಂತಿ**—ಆಗುತ್ತವೆ.

|| ಭಾವಾರ್ಥ ||

ಸೋಮದೇವನು ಸಂಪತ್ತಿಗಾಗಿ ಉತ್ಪನ್ನನಾಗಿದ್ದಾನೆ. ಸಂಪತ್ತಿಗಾಗಿ ಹೊರಹೊರಡುತ್ತಾನೆ. ಸ್ತುತಿಕರ್ತರಿಗೆ ಸಂಪತ್ತನ್ನೂ, ಅನ್ನವನ್ನೂ ಕೊಡುತ್ತಾನೆ. ಸೋಮನಿಂದ ದತ್ತವಾದ ಸಂಪತ್ತನ್ನು ಧರಿಸಿದ (ಪಡೆದ) ಸ್ತುತಿಕರ್ತರು ಮರಣರಾಹಿತ್ಯವನ್ನು ಹೊಂದುತ್ತಾರೆ. ಮಿತಗಾಮಿಯಾದ ಸೋಮನ ಸಹಾಯವಿರಲಾಗಿ ಸ್ತುತಿಕರ್ತರ ಯುದ್ಧಕರ್ಮಗಳು ಸತ್ಯಾತ್ಮಕವಾದ ಸತ್ಫಲವುಳ್ಳವಾಗಿ ಆಗುತ್ತವೆ.

English Translation.

He (is) generated for prosperity, for prosperity he issues forth, he gives prosperity (and) sustenance to those who praise him ; clothing themselves in (his) prosperity, they obtain immortality ; their conflicts are successful through the aid of (the Soma) who moves with measured tread.

|| ಸಂಹಿತಾಪಾಠಃ ||

ಇಷಮೂರ್ಜಮಭ್ಯ೧ರ್ಷಾಶ್ವಂ ಗಾಮುರು ಜ್ಯೋತಿಃ ಕೃಣುಹಿ ಮತ್ಸಿ ದೇವಾನ್ ।

ವಿಶ್ವಾನಿ ಹಿ ಸುಷಹಾ ತಾನಿ ತುಭ್ಯಂ ಪವಮಾನ ಬಾಧಸೇ ಸೋಮ

ಶತ್ರೂನ್ ॥ ೫ ॥

॥ ಪದಪಾಠಃ ॥

ಇಷಂ । ಊರ್ಜಂ । ಅಭಿ । ಅರ್ಷ । ಅಶ್ವಂ । ಗಾಂ । ಉರು । ಜ್ಯೋತಿಃ । ಕೃಣುಹಿ । ಮತ್ಸಿ । ದೇವಾನ್।

ವಿಶ್ವಾನಿ । ಹಿ । ಸುಽಸಹಾ । ತಾನಿ । ತುಭ್ಯಂ । ಪವಮಾನ । ಬಾಧಸೇ । ಸೋಮ । ಶತ್ರೂನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಇಷಮನ್ನಮೂರ್ಜಮನ್ನರಸಂ ಚಾಸ್ಮಭ್ಯಮಭ್ಯರ್ಷ । ಅಭಿಗಮಯ । ಕಿಂಚಾಶ್ವಂ ವಾಹನಂ ಗಾಂ ಪಯಃಪ್ರದಾನೇನ ಯಜ್ಞಸ್ಯ ಸಾಧನಭೂತಾಂ ಗಾಂ ಚ । ತಥೋರು ಮಹಜ್ಜ್ಯೋತಿಃ ಸೂರ್ಯಾಖ್ಯಂ ಕೃಣುಹಿ । ಜಗದಾಲೋಕನಾರ್ಥಂ ಕುರು । ಕಿಂಚ ದೇವಾನಿಂದ್ರಾದೀನ್ ಮತ್ಸಿ । ಸೋಮೇನ ತರ್ಪಯ ॥ ಮದೇರ್ಲಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್। ವಾಕ್ಯಭೇದಾದನಿಘಾತಃ॥ ಅಪಿ ಚ ಹೇ ಸೋಮ ತುಭ್ಯಂ ವಿಶ್ವಾನಿ ಸರ್ವಾಣಿ ರಕ್ಷಾಂಸಿ ಸುಷಹಾ ಸುಸಹಾನ್ಯನಾಯಾಸೇನೈವಾಭಿಭವಿತುಂ ಶಕ್ಯಾನಿ ಭವಂತಿ । ಹಿರವಧಾರಣೇ । ಅತ ಏವ ಹೇ ಪವಮಾನ ಪೂಯಮಾನ ಹೇ ಸೋಮ ಸರ್ವಾಞ್ಛತ್ರೂನ್ಬಾಧಸೇ । ಜಹಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಇಷಂ**—ಅನ್ನವನ್ನೂ । **ಊರ್ಜಂ**—ಅನ್ನರಸವನ್ನೂ । **ಅಭ್ಯರ್ಷ** - ನಮಗೆ ಒದಗಿಸು । **ಅಶ್ವಂ**—ಅಶ್ವವನ್ನೂ । **ಗಾಂ** - ಗೋವನ್ನೂ । **ಉರು**—ವಿಸ್ತೃತವಾದ । **ಜ್ಯೋತಿಃ**—ತೇಜಸ್ಸನ್ನೂ । **ಕೃಣುಹಿ** ಉತ್ಪನ್ನಮಾಡು । **ದೇವಾನ್**—ಇಂದ್ರಾದಿದೇವತೆಗಳನ್ನು । **ಮತ್ಸಿ**—ತೃಪ್ತಿಗೊಳಿಸು । **ತುಭ್ಯಂ**—ನಿನಗೆ । **ವಿಶ್ವಾನಿ ತಾನಿ**—ಸಕಲ ರಾಕ್ಷಸಶಕ್ತಿಗಳೂ । **ಸುಷಹಾ**—ಸುಲಭವಾಗಿ ವಶವಾಗುತ್ತವೆ । **ಪವಮಾನ**—ಶುದ್ಧಿಕಾರಕನಾದ । **ಸೋಮ**—ಎಲೈ ಸೋಮದೇವನೇ । **ಶತ್ರೂನ್**—ಶತ್ರುಗಳನ್ನು । **ಭಾಧಸೇ** – ನೀನು ಹಿಂಸಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮಗೆ ಅನ್ನವನ್ನೂ, ರಸವನ್ನೂ ಕೊಡು. ಅಶ್ವವನ್ನೂ, ಗೋವನ್ನೂ ವಿಸ್ತೃತವಾದ ತೇಜಸ್ಸನ್ನೂ ಉತ್ಪನ್ನಮಾಡು. ಇಂದ್ರಾದಿದೇವತೆಗಳನ್ನು ತೃಪ್ತಿಪಡಿಸು. ಸಕಲ ರಾಕ್ಷಸಶಕ್ತಿಗಳನ್ನೂ ನೀನು ಸುಲಭವಾಗಿ ಸೋಲಿಸಬಲ್ಲೆ. ಶುದ್ಧಿಕಾರಕನಾದ ಎಲೈ ಸೋಮದೇವನೇ, ನೀನು ಸಕಲ ಶತ್ರುಗಳನ್ನೂ ಹಿಂಸಿಸುತ್ತೀಯೆ.

English Translation

Bring us food and drink, horses, cattle and ample light, exhilarate the gods ; for all (the Rakshasas) are easily subdued by you ; Soma Pavamana, destroy (all) foes.

# ತ್ತೊಂಭತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಕನಿಕ್ರಂತೀತಿ ಪಂಚರ್ಚಂ ದಶಮಂ ಸೂಕ್ತಂ ಕಣ್ವಪುತ್ರಸ್ಯ ಪ್ರಸ್ಕಣ್ವಸ್ಯಾರ್ಷಂ । ತಥಾನುಕ್ರಮ್ಯತೇ । ಕನಿಕ್ರಂತಿ ಪ್ರಸ್ಕಣ್ವ ಇತಿ । ಪೂರ್ವವಚ್ಛಂದೋದೇವತೇ ॥ ಗತೋ ವಿನಿಯೋಗಃ ॥**

ಅನುವಾದವು—**ಕನಿಕ್ರಂತಿ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನೆಂಬುವನು ಋಷಿಯು. ಈ ಸೂಕ್ತಕ್ಕೆ ದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ಕನಿಕ್ರಂತಿ ಪ್ರಸ್ಕಣ್ವಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೫

ಮಂಡಲ—೯ ॥ ಅನುವಾಕ—೫ ॥ ಸೂಕ್ತ—೯೫ ॥

ಅಷ್ಟಕ—೭ ॥ ಅಧ್ಯಾಯ—೪ ॥ ವರ್ಗ—೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಪ್ರಸ್ಕಣ್ವಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕನಿಕ್ರಂತಿ ಹರಿರಾ ಸೃಜ್ಯಮಾನಃ ಸೀದನ್ವನಸ್ಯ ಜಠರೇ ಪುನಾನಃ ।
ನೃಭಿರ್ಯತಃ ಕೃಣುತೇ ನಿರ್ಣಿಜಂ ಗಾ ಅತೋ ಮತೀರ್ಜನಯತ ಸ್ವಧಾಭಿಃ ॥

॥ ಪದಪಾಠಃ ॥

ಕನಿಕ್ರಂತಿ । ಹರಿಃ । ಆ । ಸೃಜ್ಯಮಾನಃ । ಸೀದನ್ । ವನಸ್ಯ । ಜಠರೇ । ಪುನಾನಃ ।
ನೃಽಭಿಃ । ಯತಃ । ಕೃಣುತೇ । ನಿಃಽನಿಜಂ । ಗಾಃ । ಅತಃ । ಮತೀಃ । ಜನಯತ । ಸ್ವಧಾಭಿಃ ॥ ೧ ॥

॥ ಸಾಯಣಭಾಷ್ಯಂ ॥

ಸೃಜ್ಯಮಾನ ಆ ಸಮಂತಾದ್ವಿಸೃಜ್ಯಮಾನೋಽಭಿಷೂಯಮಾಣೋ ಹರಿರ್ಹರಿತವರ್ಣಃ ಸೋಮಃ ಕನಿಕ್ರಂತಿ । ಪುನಃಪುನಃ ಶಬ್ದಾಯತೇ ॥ ಕ್ರಂದತೇರ್ಯಙ್ಲುಕಿ ತಿಪೀಡಭಾವೇ ದಾಧರ್ತಿ ದರ್ಧರ್ತೀತ್ಯಾ-

ದಿನಾ ನಿಪಾತೇನಾದೇಭ್ಯಾಸಸ್ಯ ನಿಗಾಗಮಃ । ಅಭ್ಯಸ್ತಸ್ವರಃ ॥ ತಥಾ ಪುನಾನಃ ಪೂಯಮಾನೋ ವನಸ್ಯ ವನನೀಯಸ್ಯ ದ್ರೋಣಕಲಶಸ್ಯ ಜಠರೇ ಸೀದನ್ನುಪವಿಶನ್ನುಚ್ಛಾದಯತೇ । ಕಿಂಚ ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿರ್ಯತಃ ಸಂಯತಃ ಸೋಮೋ ಗಾ ಗೋವಿಕಾರಾನ್ ಕ್ಷೀರಾದೀನ್ಯಾಚ್ಛಾದಯನ್ನಿರ್ಣಿಜಮಾತ್ಮನೋ ರೂಪಂ ಕೃಣುತೇ । ಗೃಹಾದಿಷು ಕರೋತಿ । ಅತೋಽಸ್ಮೈ ಸೋಮಾಯ ಮತೀರ್ಮನನೀಯಾಃ ಸ್ತುತೀಃ ಸ್ವಧಾಭಿರ್ಹವಿರ್ಭಿಃ ಸಹ ಜನಯತ । ಸ್ತೋತಾರೋಽಜನಯನ್ ॥ ಋಸ್ಯಾಂತಾದೇಶಾಭಾವಶ್ಛಾಂದಸಃ ॥ ಯದ್ವಾ । ಹೇ ಸ್ತೋತಾರಃ ಅಸ್ಮೈ ಸೋಮಾಯ ಸ್ತುತೀರ್ಜನಯತ । ಉತ್ಪಾದಯತ । ಕುರುತೇತಿ ಯಾವತ್ ॥

॥ ಪ್ರತಿಪದಾರ್ಥ ॥

**ಸೃಜ್ಯಮಾನಃ**— ಹಿಂಡಲ್ಪಟ್ಟವನೂ । **ಹರಿಃ** —ಪಚ್ಚೆವರ್ಣವುಳ್ಳವನೂ ಆದ ಸೋಮನು । **ಪುನಾನಃ**— ಶುದ್ಧಿಯನ್ನು ಹೊಂದಿದವನಾಗಿ । **ವನಸ್ಯ**—ಆಕರ್ಷಕವಾದ ದ್ರೋಣಕಲಶದ । **ಜಠರೇ**—ಮಧ್ಯಭಾಗದಲ್ಲಿ । **ಸೀದನ್**— ಕುಳಿತುಕೊಂಡು । **ಕನಿಕ್ರಂತಿ**— ಪುನಃಪುನಃ ಶಬ್ದಮಾಡುತ್ತಾನೆ । **ನೃಭಿಃ**— ಋತ್ವಿಕ್ಕುಗಳಿಂದ । **ಯತಃ**— ನಿಯಮಿತನಾಗಿ । **ಗಾಃ**— ಕ್ಷೀರಾದಿಗಳನ್ನು । **ನಿರ್ಣಿಜಂ**— ತನ್ನ ರೂಪಕ್ಕೆ । **ಕೃಣುತೇ**— ಮಾಡಿಕೊಳ್ಳುತ್ತಾನೆ । **ಅತಃ**— ಆದುದರಿಂದ (ಎಲೈ ಸ್ತೋತೃಗಳೇ) । **ಮತೀಃ**—ಅವನನ್ನುದ್ದೇಶಿಸಿದ ಸ್ತುತಿಗಳನ್ನು । **ಸ್ವಧಾಭಿಃ**— ಹವಿಸ್ಸುಗಳೊಡನೆ ಕೂಡಿ । **ಜನಯತ**— ನಿರ್ಮಿಸಿ.

॥ ಭಾವಾರ್ಥ ॥

ಹಿಂಡಲ್ಪಟ್ಟವನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಶುದ್ಧಿಯನ್ನು ಹೊಂದಿ ಆಕರ್ಷಕವಾದ ದ್ರೋಣಕಲಶದ ಮಧ್ಯಭಾಗದಲ್ಲಿ ಕುಳಿತು ಪುನಃಪುನಃ ಶಬ್ದಮಾಡುತ್ತಾನೆ. ಋತ್ವಿಕ್ಕುಗಳಿಂದ ನಿಯಮಿತನಾಗಿ ಕ್ಷೀರಾದಿಗಳನ್ನು ತನ್ನ ರೂಪಕ್ಕೆ ಮಿಶ್ರಮಾಡಿಕೊಳ್ಳುತ್ತಾನೆ. ಎಲೈ ಸ್ತೋತೃಗಳೇ, ಸೋಮನನ್ನುದ್ದೇಶಿಸಿ ಹವಿಸ್ಸುಗಳೊಡಗೂಡಿದ ಸ್ತುತಿಗಳನ್ನು ನಿರ್ಮಿಸಿರಿ.

## English Translation.

The green-tinted Soma cries aloud when let loose, sitting when filtered in the belly of the pitcher ; collected by the priests, he assumes his shape, (putting on) the products of the cows ; therefore raise praises (to him) with oblations.

॥ ಸಂಹಿತಾಪಾಠಃ ॥

ಹರಿಃ ಸೃಜಾನಃ ಪಥ್ಯಾಮೃತಸ್ಯೇಯರ್ತಿ ವಾಚಮರಿತೇವ ನಾವಂ ।

ದೇವೋ ದೇವಾನಾಂ ಗುಹ್ಯಾನಿ ನಾಮಾವಿಷ್ಕೃಣೋತಿ ಬರ್ಹಿಷಿ ಪ್ರವಾಚೇ ॥

|| ಪದಪಾಠಃ ||

ಹರಿಃ । ಸೃಜಾನಃ । ಪಥ್ಯಾಂ । ಋತಸ್ಯ । ಇಯರ್ತಿ । ವಾಚಂ । ಅರಿತಾಽಇವ । ನಾವಂ ।
ದೇವಃ । ದೇವಾನಾಂ । ಗುಹ್ಯಾನಿ । ನಾಮ । ಆವಿಃ । ಕೃಣೋತಿ । ಬರ್ಹಿಷಿ । ಪ್ರಽವಾಚೇ ॥ ೨ ॥

|| ಸಾಯಣಭಾಷ್ಯಂ ||

ಸೃಜಾನಃ ಸೃಜ್ಯಮಾನೋ ಹರಿರ್ಹರಿತವರ್ಣಃ ಸೋಮ ಋತಸ್ಯ ಸತ್ಯಭೂತಸ್ಯ ಪಥ್ಯಾಂ ಪಥಿಭವಾಂ ವಾಚಂ ದೈವೀಮಿಯರ್ತಿ । ಪ್ರೇರಯತಿ । ತತ್ರ ದೃಷ್ಟಾಂತಃ । ಅರಿತೇವ ಜನಾಂಸ್ತೀರಂ ಪ್ರಾಪಯನ್ನಾವಿಕೋ ನಾವಂ ಯಥಾ ಪ್ರೇರಯತಿ ತದ್ವತ್ ॥ ಋ ಗತೌ ಜೌಹೋತ್ಯಾದಿಕಃ । ಅರ್ತಿಪಿಪರ್ತ್ಯೋರಿತ್ಯಭ್ಯಾಸಸ್ಯೇತ್ವಂ ॥ ತತೋ ದೇವೋ ದೀಪ್ಯಮಾನಃ ಸೋಮೋ ದೇವಾನಾಮಿಂದ್ರಾದೀನಾಂ ಗುಹ್ಯಾನ್ಯಂತರ್ಹಿತಾನಿ ನಾಮ ನಾಮಾನಿ ಶರೀರಾಣಿ ಪ್ರವಾಚೇ ಪ್ರಕರ್ಷೇಣ ವಾಚಯಿತ್ರೇ ಸ್ತೋತ್ರೇ ಬರ್ಹಿಷಿ ಯಜ್ಞ ಆವಿಷ್ಕೃಣೋತಿ । ಸ್ತೋತುಮಾವಿಷ್ಕರೋತಿ ॥

|| ಪ್ರತಿಪದಾರ್ಥ ||

**ಅರಿತಾ ಇವ**—ನಾವಿಕನು । **ನಾವಂ**—ದೋಣಿಯನ್ನು ಪ್ರೇರಿಸುವಂತೆ । **ಸೃಜಾನಃ**—ಹಿಂಡಲ್ಪಟ್ಟವನೂ । **ಹರಿಃ**—ಪಚ್ಚೆವರ್ಣವುಳ್ಳವನೂ ಆದ ಸೋಮನು । **ಋತಸ್ಯ**—ಸತ್ಯಕ್ಕೆ । **ಪಥ್ಯಾಂ**—ಮಾರ್ಗದರ್ಶಕವಾದ । **ವಾಚಂ**—ವಾಕ್ಕನ್ನು । **ಇಯರ್ತಿ**—ಪ್ರೇರಿಸುತ್ತಾನೆ । **ದೇವಃ**—ಪ್ರಕಾಶಮಾನನಾದ ಸೋಮನು । **ಬರ್ಹಿಷಿ**—ಯಜ್ಞದಲ್ಲಿ । **ದೇವಾನಾಂ**—ಇಂದ್ರಾದಿ ದೇವತೆಗಳ । **ಗುಹ್ಯಾನಿ ನಾಮ**—ಗೂಢವಾದ ಶರೀರಗಳನ್ನು । **ಪ್ರವಾಚೇ**—ಸ್ತುತಿಕರ್ತನಿಗೆ । **ಆವಿಷ್ಕೃಣೋತಿ**—ಪ್ರಕಾಶಿತವಾಗುವಂತೆ ಮಾಡುತ್ತಾನೆ.

|| ಭಾವಾರ್ಥ ||

ನಾವಿಕನು ದೋಣಿಯನ್ನು ಚಲಿಸಲು ಪ್ರೇರಿಸುವಂತೆ, ಹಿಂಡಲ್ಪಟ್ಟವನೂ, ಪಚ್ಚೆವರ್ಣವುಳ್ಳವನೂ ಆದ ಸೋಮನು ಸತ್ಯಕ್ಕೆ ಮಾರ್ಗದರ್ಶಕವಾದ ವಾಕ್ಕನ್ನು (ಸ್ತುತಿಯನ್ನು) ಪ್ರೇರಿಸುತ್ತಾನೆ. ಪ್ರಕಾಶಮಾನನಾದ ಸೋಮನು ಯಜ್ಞದಲ್ಲಿ ಇಂದ್ರಾದಿ ದೇವತೆಗಳ ಗೂಢವಾದ ಶರೀರಗಳನ್ನು ಸ್ತುತಿಕರ್ತನಿಗೆ ಪ್ರಕಾಶಿತವಾಗುವಂತೆ ಮಾಡುತ್ತಾನೆ.

## English Translation

The green-tinted Soma being let loose propels the voice that indicates the path of truth as the boatman (propels his) boat ; the bright Soma reveals to his worshipper od the sacred grass the secret names of the god.

॥ ಸಂಹಿತಾಪಾಠಃ ॥

ಅಪಾಮಿವೇದೂರ್ಮಯಸ್ತರ್ತುರಾಣಾಃ ಪ್ರ ಮನೀಷಾ ಈರತೇ ಸೋಮ-
ಮಚ್ಛ ।
ನಮಸ್ಯಂತೀರುಪ ಚ ಯಂತಿ ಸಂ ಚಾ ಚ ವಿಶಂತ್ಯುಶತೀರುಶಂತಂ ॥ ೩ ॥

॥ ಪದಪಾಠಃ ॥

ಅಪಾಂಽಇವ । ಇತ್ । ಊರ್ಮಯಃ । ತರ್ತುರಾಣಾಃ । ಪ್ರ । ಮನೀಷಾಃ । ಈರತೇ । ಸೋಮಂ । ಅಚ್ಛ ।
ನಮಸ್ಯಂತೀಃ । ಉಪ । ಚ । ಯಂತಿ । ಸಂ । ಚ । ಆ । ಚ । ವಿಶಂತಿ । ಉಶತೀಃ । ಉಶಂತಂ ॥ ೩ ॥

॥ ಸಾಯಣಭಾಷ್ಯಂ ॥

ಅಪಾಮಿವ ಯಥೋದಕಾನಾಮೂರ್ಮಯಸ್ತ್ವರಂತೇ । ಇದಿತಿ ಪೂರಣಃ । ತದ್ವತ್ತರ್ತುರಾಣಾಃ ಕರ್ಮಣಿ ದೇವಾನ್ಸ್ತೋತುಂ ತ್ವರಮಾಣಾಃ ॥ ತುರ ತ್ವರಣೇ ಜೌಹೋತ್ಯಾದಿಕಃ । ಯಙ್ಲುಗಂತಸ್ಯ ಶಾನಚಿ ರೂಪಂ । ಅಭ್ಯಾಸಸ್ಯಾವರ್ಣಶ್ಚ ರೇಫಾದೇಶಶ್ಛಾಂದಸಃ । ಅಭ್ಯಸ್ತಸ್ವರಃ ॥ ತಾದೃಶಾ ಋತ್ವಿಜೋ ಮನೀಷಾ ಮನಸ ಈಶಿತ್ರೀಃ ಸ್ತುತೀಃ ಸೋಮಮಚ್ಛ ಸೋಮಂ ಪ್ರತಿ ಪ್ರೇರತೇ । ಪ್ರೇರಯಂತಿ । ನಮಸ್ಯಂತೀರ್ನಮಸ್ಯಂತ್ಯಃ ಸೋಮಂ ಪೂಜಯಂತ್ಯಃ ಸತ್ಯಸ್ತಮುಪ ಯಂತಿ ಚೋಪಗಚ್ಛಂತಿ ತಮೇವ ಸಂ ಯಂತಿ ಚ ॥ ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ತತ ಉಶತೀಃ ಕಾಮಯಮಾನಾಃ ಸ್ತುತಯ ಉಶಂತಂ ಕಾಮಯಮಾನಂ ಸೋಮಮಾ ವಿಶಂತಿ ಚ ॥

॥ ಪ್ರತಿಪದಾರ್ಥ ॥

**ಅಪಾಂ ಇವ**—ಉದಕಗಳ । **ಊರ್ಮಯ**—ಅಲೆಗಳಂತೆ । **ತರ್ತುರಾಣಾಃ**—ಕರ್ಮದಲ್ಲಿ ತ್ವರಿತವಾದ ಆಸಕ್ತಿಯುಳ್ಳ ಋತ್ವಿಕ್ಕುಗಳು । **ಮನೀಷಾಃ**—ತಮ್ಮ ಸ್ತುತಿಗಳನ್ನು । **ಸೋಮಮಚ್ಛ**—ಸೋಮನಿಗಭಿಮುಖವಾಗಿ । **ಪ್ರ ಈರತೇ**—ಪ್ರೇರಿಸುತ್ತಾರೆ । **ನಮಸ್ಯಂತೀಃ**—ಆ ಸ್ತುತಿಗಳು ಸೋಮನನ್ನು ಪೂಜಿಸುತ್ತ । **ಉಪ ಯಂತಿ**—ಅವನನ್ನು ಸಮೀಪಿಸುತ್ತವೆ । **ಸಂ (ಯಂತಿ)** ಅವನನ್ನು ಸೇರಿಕೊಳ್ಳುತ್ತವೆ । **ಉಶಂತಂ**—ಅವುಗಳನ್ನು ಅಪೇಕ್ಷಿಸುವ ಅವನನ್ನು । **ಉಶತೀಃ**—ಇಚ್ಛಿಸುತ್ತ । **ಆ ವಿಶಂತಿ**—ಅವನನ್ನು ಪ್ರವೇಶಿಸುತ್ತವೆ.

॥ ಭಾವಾರ್ಥ ॥

ಉದಕಗಳ ಅಲೆಗಳು ಅನುಸ್ಯೂತವಾಗಿ ಚಲಿಸುವಂತೆ ಕರ್ಮದಲ್ಲಿ ತ್ವರಿತವಾದ ಆಸಕ್ತಿಯುಳ್ಳ ಋತ್ವಿಕ್ಕುಗಳು ತಮ್ಮ ಸ್ತುತಿಗಳನ್ನು ಸೋಮನಿಗಭಿಮುಖವಾಗಿ ಪ್ರೇರಿಸಿ ಪಠಿಸುತ್ತಾರೆ. ಆ ಸ್ತುತಿಗಳು ಸೋಮನನ್ನು ಪೂಜಿಸುತ್ತ ಅವನನ್ನು ಸಮೀಪಿಸುತ್ತವೆ. ಅವುಗಳನ್ನೇ ಅಪೇಕ್ಷಿಸುವ ಸೋಮನನ್ನು ಆದರಿಸುತ್ತ ಅವನನ್ನು ಸೇರಿಕೊಳ್ಳುತ್ತವೆ.

## English Translation.

The priests hurrying like the waves of the waters despatch praises towards Soma ; adoring him they approach and come up together, longing for him who longs for them they enter him.

॥ ಸಂಹಿತಾಪಾಠಃ ॥

ತಂ ಮರ್ಮೃಜಾನಂ ಮಹಿಷಂ ನ ಸಾನಾವಂಶುಂ ದುಹಂತ್ಯುಕ್ಷಣಂ ಗಿರಿಷ್ಠಾಂ ।
ತಂ ವಾವಶಾನಂ ಮತಯಃ ಸಚಂತೇ ತ್ರಿತೋ ಬಿಭರ್ತಿ ವರುಣಂ ಸಮುದ್ರೇ ॥

॥ ಪದಪಾಠಃ ॥

ತಂ । ಮರ್ಮೃಜಾನಂ । ಮಹಿಷಂ । ನ । ಸಾನೌ । ಅಂಶುಂ । ದುಹಂತಿ । ಉಕ್ಷಣಂ । ಗಿರಿऽಸ್ಥಾಂ ।
ತಂ । ವಾವಶಾನಂ ಮತಯಃ । ಸಚಂತೇ । ತ್ರಿತಃ । ಬಿಭರ್ತಿ । ವರುಣಂ । ಸಮುದ್ರೇ ॥ ೪ ॥

॥ ಸಾಯಣಭಾಷ್ಯಂ ॥

ಮರ್ಮೃಜಾನಂ ಯಷ್ಟೃಭಿಃ ಪರಿಚರ್ಯಮಾಣಂ ಮಹಿಷಂ ನ ಮಹಿಷಾಖ್ಯಂ ಮೃಗಮಿವ ಸಾನೌ ಸಮುಚ್ಛ್ರಿತೇ ದೇಶೇ ವರ್ತಮಾನಮುಕ್ಷಣಂ ಕಾಮಾನಾಂ ಸೇಕ್ತಾರಂ ಗಿರಿಷ್ಠಾಮಭಿಷವಾರ್ಥಂ ಗ್ರಾವಸು ನಿಷ್ಠಿತಂ ತಂ ತಾದೃಶಂ ಪ್ರಸಿದ್ಧಮಂಶುಂ ಸೋಮಂ ದುಹಂತಿ । ಋತ್ವಿಜೋ ದುಹತೇ । ಗ್ರಾವಣೋ ವತ್ಸಾ ಋತ್ವಿಜೋ ದುಹಂತಿ । ತೈ. ಸಂ- ೬-೨-೧೧-೪ । ಇತಿ ತೈತ್ತಿರೀಯಬ್ರಾಹ್ಮಣಂ । ತಂ ತಾದೃಶಂ ವಾವಶಾನಂ ಕಾಮಯಮಾನಂ ಸೋಮಂ ಮತಯೋ ಮಂತವ್ಯಾಃ ಸ್ತುತಯಃ ಸಚಂತೇ । ಸಮವಯಂತಿ । ಸೇವಂತ ಇತಿ ಯಾವತ್ । ತ್ರಿತಸ್ತ್ರಿಷು ಸ್ಥಾನೇಷು ವರ್ತಮಾನ ಇಂದ್ರೋ ವರುಣಂ ಶತ್ರೂಣಾಂ ನಿವಾರಕಮೇನಂ ಸೋಮಂ ಸಮುದ್ರೇಽಂತರಿಕ್ಷೇ ಬಿಭರ್ತಿ । ಶತ್ರುವಧಾರ್ಥಂ ಧಾರಯತಿ । ಯದ್ವಾ । ತ್ರಿತಸ್ತ್ರಿಷು ಸ್ಥಾನೇಷು ದ್ರೋಣಾಧವನೀಯಪೂತಭೃದಾಖ್ಯೇಷು ಕಲಶೇಷು ತತೋ ವಿತತಃ ಸೋಮಃ ಶತ್ರೂಣಾಂ ನಿವಾರಕಮಿಂದ್ರಂ ದ್ಯುಲೋಕೇ ಬಿಭರ್ತಿ । ಪೋಷಯತಿ ॥

॥ ಪ್ರತಿಪದಾರ್ಥ ॥

**ಮರ್ಮೃಜಾನಂ**-ಶುದ್ಧಿಯನ್ನು ಹೊಂದಿದವನೂ । **ಮಹಿಷಂ ನ**-ಮಹಿಷಮೃಗದಂತೆ । **ಸಾನೌ**—ಉನ್ನತ ಪ್ರದೇಶದಲ್ಲಿರುವವನೂ । **ಉಕ್ಷಣಂ**—ಕಾಮವರ್ಷಕನೂ । **ಗಿರಿಷ್ಠಾಂ**—ಹಿಂಡುವ ಕಲ್ಲುಗಳ ನಡುವೆ ಸ್ಥಿತನೂ ಆದ । **ತಂ ಅಂಶುಂ**—ಸೋಮನನ್ನು । **ದುಹಂತಿ**—ಋತ್ವಿಕ್ಕುಗಳು ಕರೆಯುತ್ತಾರೆ । **ವಾವಶಾನಂ ತಂ**—ಸ್ತುತಿಗಳನ್ನು ಅಪೇಕ್ಷಿಸುವ ಸೋಮನನ್ನು । **ಮತಯಃ**—ಸ್ತುತಿಗಳು । **ಸಚಂತೇ**—ಸೇವಿಸುತ್ತವೆ । **ತ್ರಿತಃ**—ಮೂರು ಸ್ಥಾನಗಳಲ್ಲೂ ಇರುವ ಇಂದ್ರನು । **ವರುಣಂ**—ಶತ್ರುವಾರಕವಾದ ಸೋಮನನ್ನು । **ಸಮುದ್ರೇ**—ಅಂತರಿಕ್ಷದಲ್ಲಿ । **ಬಿಭರ್ತಿ**—ಧರಿಸುತ್ತಾನೆ.

|| ಭಾವಾರ್ಥ ||

ಶುದ್ಧಿಯನ್ನು ಹೊಂದಿದವನೂ, ಮಹಿಷಮೃಗದಂತೆ ಉನ್ನತಪ್ರದೇಶದಲ್ಲಿರುವವನೂ, ಕಾಮವರ್ಷಕನೂ, ಹಿಂಡುವ ಕಲ್ಲುಗಳ ನಡುವೆ ಇರುವವನೂ ಆದ ಸೋಮನನ್ನು ಋತ್ವಿಕ್ಕುಗಳು ಕರೆಯುತ್ತಾರೆ. ಸ್ತುತಿಗಳನ್ನು ಅಪೇಕ್ಷಿಸುವ ಸೋಮನನ್ನು ಸ್ತುತಿಗಳು ಸೇವಿಸುತ್ತವೆ. ಮೂರು ಸ್ಥಾನಗಳಲ್ಲೂ ಇರುವ ಇಂದ್ರನು ಶತ್ರುವಾರಕನಾದ ಸೋಮನನ್ನು ಅಂತರಿಕ್ಷದಲ್ಲಿ ಧರಿಸುತ್ತಾನೆ.

## English Translation.

(The priests) milk forth the Soma cleansed (dwelling) on a high place like a buffalo, the sprinkler, placed between the grinding-stones; praises attend upon the longing Soma; (Indra) who dwells in three abodes supports him, the defeater of enemies, in the firmament.

|| ವಿಶೇಷವಿಷಯಗಳು ||

**ಮಹಿಷಂ ನ ಗಿರಿಸ್ಥಾಂ ಅಂಶುಂ ದುಹಂತಿ**—ಅಧ್ವರ್ಯ್ವಾದಿ ಋತ್ವಿಗ್ಜನರು ಕಲ್ಲುಗಳಿಂದ ಸೋಮಲತೆಗಳನ್ನು ಜಜ್ಜಿ ಹಿಂಡಿ ರಸವನ್ನು ತೆಗೆಯುವುದನ್ನು ಎಮ್ಮೆಯಿಂದ ಹಾಲನ್ನು ಕರೆಯುವುದಕ್ಕೆ ಹೋಲಿಸಿ ವರ್ಣಿಸಿದೆ. ಇಲ್ಲಿ ಸೋಮಲತೆಗಳೇ ಎಮ್ಮೆಯು, ಲತೆಗಳನ್ನು ಜಜ್ಜುವ ಕಲ್ಲುಗಳೇ ಕರುವು. ಈ ವಿಷಯದಲ್ಲಿ **ಗ್ರಾವಾಣೋ ವತ್ಸಾ ಋತ್ವಿಜೋ ದುಹಂತಿ** (ತೈ. ಸಂ. ೬-೨-೧೧-೪) ಎಂದು ತೈತ್ತಿರೀಯಸಂಹಿತಾವಾಕ್ಯವಿರುವುದು. ಎಮ್ಮೆಯ ಬಳಿಗೆ ಅದರ ಕರುವನ್ನು ಬಿಟ್ಟು ಹಾಲನ್ನು ಯಾವರೀತಿ ಕರೆಯುವರೋ ಅದರಂತೆ ಸೋಮಲತೆಗಳ ಬಳಿಗೆ ಕಲ್ಲನ್ನು ಒಯ್ದು ಆ ಕಲ್ಲಿನಿಂದ ಲತೆಯನ್ನು ಜಜ್ಜಿ ಅದರಿಂದ ಹೊರಸೂಸುವ ಸೋಮರಸವನ್ನು ಋತ್ವಿಗ್ಜನರು ಹಾಲುಕರೆಯುವಂತೆ ತೆಗೆಯುತ್ತಾರೆ ಎಂದು ವ್ಯಾಖ್ಯಾಭಿಪ್ರಾಯವು.

ತ್ರಿತಃ—ಈ ಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ಹೇಳಿರುವರು. **ತ್ರಿತಃ** ಎಂದರೆ **ತ್ರಿಷು ಸ್ಥಾನೇಷು ವರ್ತಮಾನ ಇಂದ್ರಃ** ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಮೂರು ಸ್ಥಾನಗಳಲ್ಲಿ ಇರುವ ಎಂದರೆ ಆಧಿಪತ್ಯವನ್ನು ಮಾಡುವ ಇಂದ್ರನು. ಇಂತಹ ಇಂದ್ರನು ಶತ್ರುವಧಾರ್ಥವಾಗಿ ಸೋಮವನ್ನು ಧರಿಸುತ್ತಾನೆ ಎಂದರೆ ಪಾನಮಾಡುತ್ತಾನೆ. ಎಂದರೆ ಸೋಮಪಾನದಿಂದ ಹರ್ಷಿತನಾಗಿ ಇಂದ್ರನು ಶತ್ರುಗಳನ್ನು ಸಂಹರಿಸುತ್ತಾನೆ ಎಂದಭಿಪ್ರಾಯವು. ಅಥವಾ ತ್ರಿತಃ ಎಂಬ ಶಬ್ದಕ್ಕೆ **ತ್ರಿಷು ಸ್ಥಾನೇಷು ದ್ರೋಣಾಧವನೀಯಪೂತಭೃದಾಖ್ಯೇಷು ಕಲಶೇಷು** ವಿತತಃ **ಸೋಮಃ ದ್ಯುಲೋಕೇ ಇಂದ್ರಂ ಪೋಷಯತಿ**—ಎಂದರೆ ದ್ರೋಣಕಲಶ, ಆಧವನೀಯ, ಪೂತಭೃತ್ ಎಂಬ ಸೋಮರಸವನ್ನಿಡುವ ಮೂರು ಪಾತ್ರೆಗಳಲ್ಲಿರುವ ಸೋಮರಸವು. ಇಂತಹ ಸೋಮರಸವು ಶತ್ರುನಿವಾರಣಾರ್ಥವಾಗಿ ಇಂದ್ರನನ್ನು ಧರಿಸುವುದು ಎಂದರೆ ಪೋಷಿಸುವುದು ಸೋಮಪಾನದಿಂದ ಇಂದ್ರನು ಪುಷ್ಟನಾಗುವನು ಎಂದು ಇನ್ನೊಂದುವಿಧವಾದ ಅರ್ಥವು. ಮೊದಲನೆಯ ಅರ್ಥದಲ್ಲಿ ತ್ರಿತಃ ಎಂಬ ಶಬ್ದವು ಇಂದ್ರನ ಪರವಾಗಿಯೂ ಎರಡನೇ ಅರ್ಥದಲ್ಲಿ ಸೋಮಪರವಾಗಿಯೂ ಪ್ರಯುಕ್ತವಾಗಿರುವುದು.

॥ ಸಂಹಿತಾಪಾಠಃ ॥

ಇಷ್ಯನ್ವಾಚಮುಪವಕ್ತೇವ ಹೋತುಃ ಪುನಾನ ಇಂದೋ ವಿ ಷ್ಯಾ ಮನೀಷಾಂ।
ಇಂದ್ರಶ್ಚ ಯತ್ಕ್ಷಯಥಃ ಸೌಭಗಾಯ ಸುವೀರ್ಯಸ್ಯ ಪತಯಃ ಸ್ಯಾಮ॥೫॥

॥ ಪದಪಾಠಃ ॥

ಇಷ್ಯನ್ । ವಾಚಂ । ಉಪವಕ್ತಾಽಇವ । ಹೋತುಃ । ಪುನಾನಃ । ಇಂದೋ ಇತಿ । ವಿ । ಸ್ಯ । ಮನೀಷಾಂ।
ಇಂದ್ರಃ । ಚ । ಯತ್ । ಕ್ಷಯಥಃ । ಸೌಭಗಾಯ । ಸುಽವೀರ್ಯಸ್ಯ । ಪತಯಃ । ಸ್ಯಾಮ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಸೋಮ ವಾಚಂ ಸ್ತುತಿಮಿಷ್ಯನ್ ಪ್ರೇರಯನ್ ಹೋತುರುಪವಕ್ತೇವ ಯಥಾಧ್ವರ್ಯುಃ ಪ್ರತಿಗರಂ ಕುರ್ವನ್ ಪ್ರೋತ್ಸಾಹಯತಿ ತದ್ವತ್ಸ್ತೋತೄಣಾಂ ಶಂಸನಾಯ ಪ್ರೋತ್ಸಾಹಂ ಕುರ್ವನ್ ಪುನಾನಃ ಪೂಯಮಾನಸ್ತ್ವಂ ಮನೀಷಾಂ ಬುದ್ಧಿಂ ವಿ ಷ್ಯ । ವಿಮುಂಚ । ಕಿಂತು ಬುದ್ಧಿಂ ಧನಪ್ರದಾನಾಭಿಮುಖೀಂ ಕುರು । ಕಿಂಚ ಯದ್ಯದೇಂದ್ರಶ್ಚ ತ್ವಂ ಸಹ ಯಜ್ಞೇ ಕ್ಷಯಥಃ ನಿವಸಥಃ ತದಾ ಸ್ತೋತಾರೋ ವಯಂ ಸೌಭಗಾಯ ಸೌಭಾಗ್ಯಾಯ ಸ್ಯಾಮ । ಕಿಂಚ ಸುವೀರ್ಯಸ್ಯ ಶೋಭನವೀರ್ಯೋಪೇತಸ್ಯ ಧನಸ್ಯ ಪತಯಃ ಸ್ವಾಮಿನಃ ಸ್ಯಾಮ ಭವೇಮ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಹೋತುಃ**—ಹೋತೃವಿನ ವಾಕ್ಯಕ್ಕೆ । **ಉಪವಕ್ತಾ ಇವ**—ಉತ್ತರವಾಕ್ಯವನ್ನು ಹೇಳುವ ಅಧ್ವರ್ಯುವು ಹೋತೃವನ್ನು ಪ್ರೇರಿಸುವಂತೆ । **ವಾಚಂ**—ನಮ್ಮ ಸ್ತುತಿಯನ್ನು । **ಇಷ್ಯನ್**—ಪ್ರೇರಿಸುತ್ತ । **ಪುನಾನಃ**—ಶುದ್ಧಿಯನ್ನು ಹೊಂದಿದ ನೀನು । **ಮನೀಷಾಂ**—ನಿನ್ನ ಉಪಕಾರವಾದ ಬುದ್ಧಿಯನ್ನು । **ವಿ ಷ್ಯ**—ಪ್ರಕಾಶಪಡಿಸು । **ಯತ್**—ಯಾವಾಗ । **ಇಂದ್ರಶ್ಚ**—ಇಂದ್ರನೂ ಮತ್ತು ನೀನೂ । **ಕ್ಷಯಥಃ**—ಯಜ್ಞಗೃಹದಲ್ಲಿ ವಾಸಿಸುವಿರೋ ಆಗ । **ಸೌಭಗಾಯ**-(ನಾವು) ಕಲ್ಯಾಣಕ್ಕೆ ಪಾತ್ರರಾಗಿ । **ಸ್ಯಾಮ**-ಆಗುವಂತಿರಲಿ । **ಸುವೀರ್ಯಸ್ಯ**—ವೀರಪುತ್ರರಿಂದ ಕೂಡಿದ ಧನಕ್ಕೆ । **ಪತಯಃ**—ಒಡೆಯರಾಗುವಂತಾಗಲಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ಹೋತೃವಿನ ವಾಕ್ಯಕ್ಕೆ ಉತ್ತರವಾಕ್ಯವನ್ನು ಹೇಳುವ ಅಧ್ವರ್ಯುವು ಹೋತೃವನ್ನು ಪ್ರೇರಿಸುವಂತೆ ನಮ್ಮ ಸ್ತುತಿಯನ್ನು ನೀನು ಪ್ರೇರಿಸುತ್ತ ಶುದ್ಧಿಯನ್ನು ಹೊಂದಿದ ನೀನು ನಿನ್ನ ಉಪಕಾರಕವಾದ ಬುದ್ಧಿಯನ್ನು ಪ್ರಕಾಶಪಡಿಸು. ಇಂದ್ರನೂ ಮತ್ತು ನೀನೂ ಯಾವಾಗ ಯಜ್ಞಗೃಹದಲ್ಲಿ ವಾಸಿಸುವರೋ, ಆಗ ನಾವು ಕಲ್ಯಾಣಕ್ಕೆ ಪಾತ್ರರಾಗಿರುವಂತಾಗಲಿ. ವೀರಪುತ್ರರಿಂದ ಕೂಡಿದ ಧನಕ್ಕೆ ನಾವು ಒಡೆಯರಾಗುವಂತಾಗಲಿ.

## English Translation.

Indu, being purified, stimulating the praise (of the worshippers) like the answerer of the Hotri set free the understanding; when (you) and Indra are present together (at the sacrifice) may we be prosperous, may we become the possessors of excellent male progeny.

## ತೊಂಭತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರ ಸೇನಾನೀರಿತಿ ಚತುರ್ವಿಂಶತ್ಯೃಚಮೇಕಾದಶಂ ಸೂಕ್ತಂ ದಿವೋದಾಸಪುತ್ರಸ್ಯ ಪ್ರತರ್ದನಾಖ್ಯಸ್ಯ ರಾಜರ್ಷೇರಿದಂ ತ್ರೈಷ್ಟುಭಂ ಪವಮಾನಸೋಮದೇವತಾಕಂ । ತಥಾ ಚಾನುಕ್ರಮ್ಯತೇ । ಪ್ರ ಸೇನಾನೀಶ್ಚತುರ್ವಿಂಶತಿರ್ದೈವೋದಾಸಿಃ ಪ್ರತರ್ದನ ಇತಿ ॥ ಗತಃ ಸೂಕ್ತವಿನಿಯೋಗಃ ॥

ಅನುವಾದವು—ಪ್ರ ಸೇನಾನೀಃ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ದಿವೋದಾಸನ ಪುತ್ರನಾದ ಪ್ರತರ್ದನ ಎಂಬುವನು ಋಷಿಯು; ಪವಮಾನಸೋಮನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರ ಸೇನಾನೀಶ್ಚತುರ್ವಿಂಶತಿರ್ದೈವೋದಾಸಿಃ ಪ್ರತರ್ದನಃ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೯೬

ಮಂಡಲ-೯ ॥ ಅನುವಾಕ-೫ ॥ ಸೂಕ್ತ-೯೬ ॥

ಅಷ್ಟಕ-೭ ॥ ಅಧ್ಯಾಯ-೪ ॥ ವರ್ಗ-೬, ೭, ೮, ೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥

॥ ಋಷಿಃ— ಪ್ರತರ್ದನೋ ದೈವೋದಾಸಿಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯನ್ನೇತಿ ಹರ್ಷತೇ ಅಸ್ಯ ಸೇನಾ ।
ಭದ್ರಾನ್ಕೃಣ್ವನ್ನಿಂದ್ರಹವಾನ್ತ್ಸಖಿಭ್ಯ ಆ ಸೋಮೋ ವಸ್ತ್ರಾ ರಭಸಾನಿ ದತ್ತೇ ॥

‖ ಪದಪಾಠಃ ‖

ಪ್ರ । ಸೇನಾऽನೀಃ । ಶೂರಃ । ಅಗ್ರೇ । ರಥಾನಾಂ । ಗವ್ಯನ್ । ಏತಿ । ಹರ್ಷತೇ । ಅಸ್ಯ । ಸೇನಾ ।

ಭದ್ರಾನ್ । ಕೃಣ್ವನ್ । ಇಂದ್ರऽಹವಾನ್ । ಸಖಿऽಭ್ಯಃ । ಆ । ಸೋಮಃ । ವಸ್ತ್ರಾ । ರಭಸಾನಿ । ದತ್ತೇ ॥೧॥

‖ ಸಾಯಣಭಾಷ್ಯಂ ‖

ಸೇನಾನೀಃ ಸೇನಾನಾಮುಗ್ರ ಉಪನೇತಾ ಶೂರಃ ಶತ್ರೂಣಾಂ ಬಾಧಕಃ ಸೋಮೋ ಗವ್ಯ ಇಚ್ಛತ್ರೂಣಾಂ ಗಾ ಇಚ್ಛನ್ । ಯದ್ವಾ । ಯಜಮಾನಾನಾಂ ಪಶ್ವಾದಿಕಮಿಚ್ಛನ್ । ರಥಾನಾಮುಗ್ರೇ ರಥಾನಾಂ ಪುರತಃ ಪ್ರೈತಿ । ಪ್ರಕರ್ಷೇಣ ಸಂಗ್ರಾಮಂ ಗಚ್ಛತಿ । ಅಸ್ಯ ಸೋಮಸ್ಯ ಸೇನಾ ಚ ಹರ್ಷತೇ । ಹೃಷ್ಯತಿ ॥ ವಾಕ್ಯಭೇದಾದನಿಘಾತಃ ॥ ಕಿಂಚ ಸಖಿಭ್ಯಃ ಸಮಾನಖ್ಯಾನೇಭ್ಯೋ ಯಜಮಾನೇಭ್ಯ ಇಂದ್ರಹವಾಂಸ್ತೈಃ ಕೃತಾನೀಂದ್ರಸ್ಯಾಹ್ವಾನಾನಿ ಭದ್ರಾನ್ಕಲ್ಯಾಣಾನಿ ಯಥಾರ್ಥಾನಿ ಕೃಣ್ವನ್ ಕುರ್ವನ್ । ಆಹೂತೋ ಹೀಂದ್ರಃ ಸೋಮಂ ಪೀತ್ವಾ ಕಾಮಾನ್ಪ್ರಯಚ್ಛತೀತಿ ರಭಸಾನೀಂದ್ರಸ್ಯ ವೇಗೇನಾಗಮನೇ ನಿಮಿತ್ತಾನಿ ವಸ್ತ್ರಾಣ್ಯಾಚ್ಛಾದಕಾನಿ ಪಯಃಪ್ರಭೃತೀನ್ಯಾಶ್ರಯಣಾನ್ಯಾ ದತ್ತೇ । ಆಗೃಹ್ಣಾತಿ ॥

‖ ಪ್ರತಿಪದಾರ್ಥ ‖

**ಸೇನಾನೀಃ**—ಸೇನಾಧಿಪನೂ । **ಶೂರಃ**—ಪರಾಕ್ರಮಿಯೂ ಆದ । **ಸೋಮಃ**—ಸೋಮದೇವನು । **ಗವ್ಯನ್**—ಶತ್ರುಗಳ ಗೋವುಗಳನ್ನು ಇಚ್ಛಿಸಿ । **ರಥಾನಾಂ ಅಗ್ರೇ**—ರಥಗಳ ಅಗ್ರಭಾಗದಲ್ಲಿ । **ಪ್ರ ಏತಿ**—ಅತಿಶಯವಾಗಿ ಹೋಗುತ್ತಾನೆ । **ಅಸ್ಯ ಸೇನಾ**—ಅವನ ಸೇನೆಯು । **ಹರ್ಷತೇ**—ಉತ್ಸಾಹದಿಂದ ಹರ್ಷವುಳ್ಳದ್ದಾಗುತ್ತದೆ । **ಸಖಿಭ್ಯಃ**—ಮಿತ್ರರೂಪರಾದ ಯಜಮಾನರಿಗೆ । **ಇಂದ್ರಹವಾನ್**—ಇಂದ್ರನನ್ನುದ್ದೇಶಿಸಿದ ಪ್ರಾರ್ಥನಾಸ್ತುತಿಗಳನ್ನು । **ಭದ್ರಾನ್**—ಕಲ್ಯಾಣಾತ್ಮಕವಾದ ಫಲವುಳ್ಳವನ್ನಾಗಿ । **ಕೃಣ್ವನ್**—ಮಾಡುತ್ತ । **ರಭಸಾನಿ**—ಇಂದ್ರಾರ್ಥವಾಗಿ ಶೀಘ್ರವಾಗಿ ನಿರ್ಮಿತವಾದ । **ವಸ್ತ್ರಾ**—ಕ್ಷೀರಾದಿ ವಸ್ತ್ರಗಳನ್ನು । **ಆ ದತ್ತೇ**—ಸ್ವೀಕರಿಸುತ್ತಾನೆ.

‖ ಭಾವಾರ್ಥ ‖

ಸೇನಾಧಿಪತಿಯೂ, ಪರಾಕ್ರಮಿಯೂ ಆದ ಸೋಮದೇವನು ಶತ್ರುಗಳ ಗೋವುಗಳನ್ನು ಇಚ್ಛಿಸಿ ರಥಗಳ ಅಗ್ರಭಾಗದಲ್ಲಿ ಅತಿಶಯವಾಗಿ ಹೋಗುತ್ತಾನೆ. ಅವನ ಸೇನೆಯು ಉತ್ಸಾಹದಿಂದ ಹರ್ಷಿಸುತ್ತದೆ. ಮಿತ್ರರೂಪರಾದ ಯಜಮಾನರಿಗೆ ಇಂದ್ರನನ್ನುದ್ದೇಶಿಸಿದ ಪ್ರಾರ್ಥನಾಸ್ತುತಿಗಳನ್ನು ಕಲ್ಯಾಣಾತ್ಮಕವಾದ ಫಲವುಳ್ಳವನ್ನಾಗಿ ಮಾಡುತ್ತ ಇಂದ್ರಾರ್ಥವಾಗಿ ಶೀಘ್ರವಾಗಿ ನಿರ್ಮಿತವಾದ ಕ್ಷೀರಾದಿವಸ್ತ್ರಗಳನ್ನು ಸ್ವೀಕರಿಸುತ್ತಾನೆ. (ಕ್ಷೀರಾದಿಗಳಿಂದ ಮಿಶ್ರಿತನಾಗುತ್ತಾನೆ)

## English Translation.

The leader of the host, a hero, advances in front of the chariots intent on seizing the cattle (of the enemy) ; his army exults : making their oblations

to Indra prosperous for the friendly (worshippers), Soma assumes the hastily made robes (of curds and milk).

|| ಸಂಹಿತಾಪಾಠಃ ||

ಸಮಸ್ಯ ಹರಿಂ ಹರಯೋ ಮೃಜಂತ್ಯಶ್ವಹಯೈರನಿಶಿತಂ ನಮೋಭಿಃ |
ಆ ತಿಷ್ಠತಿ ರಥಮಿಂದ್ರಸ್ಯ ಸಖಾ ವಿದ್ವಾँ ಏನಾ ಸುಮತಿಂ ಯಾತ್ಯಚ್ಛ || ೨ ||

|| ಪದಪಾಠಃ ||

ಸಂ | ಅಸ್ಯ | ಹರಿಂ | ಹರಯಃ | ಮೃಜಂತಿ | ಅಶ್ವಽಹಯೈಃ | ಅನಿಽಶಿತಂ | ನಮಃಽಭಿಃ |
ಆ | ತಿಷ್ಠತಿ | ರಥಂ | ಇಂದ್ರಸ್ಯ | ಸಖಾ | ವಿದ್ವಾನ್ | ಏನ | ಸುಽಮತಿಂ | ಯಾತಿ | ಅಚ್ಛ || ೨ ||

|| ಸಾಯಣಭಾಷ್ಯಂ ||

ಹರಯಃ ಹರಂತ್ಯಭಿಷುಣ್ವಂತಿ ಸೋಮಮಿತ್ಯೃತ್ವಿಜೋಽಂಗುಲಯೋ ವಾ ಹರಿಂ ಹರಿತವರ್ಣಮಸ್ಯ ಸೋಮಸ್ಯ ಕಾರಣಮಂಶುಂ ಸಂ ಮೃಜಂತಿ | ಸಮ್ಯಗಭಿಷುಣ್ವಂತಿ | ತತಃ ಸೋಮೋ ನಮೋಭಿರ್ನಾಮಯಿತೃಭಿರಶ್ವಹಯೈರ್ವ್ಯಾಪ್ತೈರಸ್ಯನಿಶಿತಮಸಂಸ್ಕೃತಮಯುಕ್ತಮನನುಗತಂ ರಥಂ ರಮಣಸಾಧನಮಾತ್ಮೀಯಂ ದಶಾಪವಿತ್ರಮಾ ತಿಷ್ಠತಿ | ಆಸೀದತಿ | ಅನಂತರಮಿಂದ್ರಸ್ಯ ಸಖಾ ಸಖಿಭೂತೋ ವಿದ್ವಾನ್ ಪ್ರಾಜ್ಞಃ ಸೋಮ ಏನ್ಯೈತೇನ ರಥೇನ ಪವಿತ್ರೇಣ ಸುಮತಿಂ ಶೋಭನಸ್ತುತಿಕಂ ಸ್ತೋತಾರಮಚ್ಛ ಯಾತಿ | ಅಭಿಗಚ್ಛತಿ | ತಸ್ಮಿನ್ಕಾಲೇ ತೇನ ಕ್ರಿಯಮಾಣಾಂ ಸ್ತುತಿಮಭಿಗಚ್ಛತೀತ್ಯರ್ಥಃ ||

|| ಪ್ರತಿಪದಾರ್ಥ ||

**ಹರಯಃ** — ಋತ್ವಿಕ್ಕುಗಳು | **ಹರಿಂ ಅಸ್ಯ** — ಪಚ್ಚೆವರ್ಣದ ಸೋಮನನ್ನು | **ಸಂ ಮೃಜಂತಿ** — ಹಿಂಡುತ್ತಾರೆ (ಅನಂತರ) | **ನಮೋಭಿಃ** — ವಿಧೇಯವಾಗಿರುವುವೂ | **ಅಶ್ವಹಯೈಃ** — ವ್ಯಾಪಕವೂ ಆದ ಅಶ್ವಗಳಿಂದ | **ಅನಿಶಿತಂ** — ಯೋಜಿಸಲ್ಪಡದೇ ಇದ್ದರೂ | **ರಥಂ** — ಹರ್ಷಸಾಧಕವಾದ ದಶಾಪವಿತ್ರದಲ್ಲಿ | **ಆ ತಿಷ್ಠತಿ** — ಆಶ್ರಯವನ್ನು ಹೊಂದುತ್ತದೆ | **ಇಂದ್ರಸ್ಯ** — ಇಂದ್ರನ | **ಸಖಾ** — ಮಿತ್ರನೂ | **ವಿದ್ವಾನ್** — ಪ್ರಾಜ್ಞನೂ ಆದ ಸೋಮನು | **ಏನಾ** — ಈ ದಶಾಪವಿತ್ರದಿಂದ | **ಸುಮತಿಂ ಅಚ್ಛ** — ಉತ್ತಮವಾದ ಸ್ತುತಿಕರ್ತನಲ್ಲಿಗೆ | **ಯಾತಿ** — ಹೋಗುತ್ತಾನೆ.

|| ಭಾವಾರ್ಥ ||

ಋತ್ವಿಕ್ಕುಗಳು ಪಚ್ಚೆವರ್ಣದ ಸೋಮನನ್ನು ಹಿಂಡುತ್ತಾರೆ. ಅನಂತರ, ವಿಧೇಯವೂ, ವ್ಯಾಪಕವೂ ಆದ ಅಶ್ವಗಳಿಂದ ಯೋಜಿಸಲ್ಪಡದೇ ಇದ್ದರೂ, ಹರ್ಷಸಾಧಕವಾದ ದಶಾಪವಿತ್ರದಲ್ಲಿ ಆಶ್ರಯವನ್ನು ಹೊಂದುತ್ತದೆ. ಇಂದ್ರನ ಮಿತ್ರನೂ, ಪ್ರಾಜ್ಞನೂ ಆದ ಸೋಮನು ಈ ದಶಾಪವಿತ್ರವನ್ನು ದಾಟಿ ಉತ್ತಮವಾದ ಸ್ತುತಿಕರ್ತನಲ್ಲಿಗೆ ಹೋಗುತ್ತಾನೆ.

English Translation

The priests express his green-tinted (juice) ; he mounts the chariot unyoked by the horse-driving salutions ; the wise Soma the friend of Indra goes to meet the worshipper.

॥ ಸಂಹಿತಾಪಾಠಃ ॥

ಸ ನೋ᳚ ದೇವ ದೇವತಾ᳚ತೇ ಪವಸ್ವ ಮಹೇ ಸೋ᳚ಮ ಪ್ಸರ᳚ಸ ಇಂದ್ರಪಾನಃ᳚ ।
ಕೃಣ್ವನ್ನಪೋ ವರ್ಷಯನ್ದ್ಯಾಮುತೇಮಾಮುರೋರಾ ನೋ᳚ ವರಿವಸ್ಯಾ ಪುನಾನಃ ॥ ೩ ॥

॥ ಪದಪಾಠಃ ॥

ಸಃ । ನಃ । ದೇವ । ದೇವऽತಾ᳚ತೇ । ಪವಸ್ವ । ಮಹೇ । ಸೋಮ । ಪ್ಸರ᳚ಸೇ । ಇಂದ್ರऽಪಾನಃ᳚ ।
ಕೃಣ್ವನ್ । ಅಪಃ । ವರ್ಷಯ᳚ನ್ । ದ್ಯಾಂ । ಉತ । ಇಮಾಂ । ಉರೋಃ । ಆ । ನಃ । ವರಿವಸ್ಯ ಪುನಾನಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನ ಹೇ ಸೋಮ ಸ ತಾದೃಶ ಇಂದ್ರಪಾನ ಇಂದ್ರೇಣ ಪಾತವ್ಯಸ್ತ್ವಂ ನೋಽಸ್ಮಾಕಂ ಸ್ವಭೂತೇ ದೇವತಾತೇ ದೇವೈಸ್ತತೇ ವಿತತೇ ಯಜ್ಞೇ ಮಹೇ ಮಹತೇ ಪ್ಸರಸೇ ಭಕ್ಷಣಾಯೇಂದ್ರಸ್ಯ ಪಾನಾಯ ಪವಸ್ವ । ಗ್ರಹಾದಿಷು ಕ್ಷರ । ಕಿಂಚಾಪ ಉದಕಾನಿ ಕೃಣ್ವನ್ ಕುರ್ವನ್ ಉತಾಪಿ ಚ ದ್ಯಾಮಿಮಾಂ ದ್ಯಾವಾಪೃಥಿವ್ಯೌ ವರ್ಷಯನ್ । ಭೂಮಿಂ ಪರ್ಜನ್ಯರೂಪೇಣ ತರ್ಪಯತಿ ದ್ಯುಲೋಕಮಗ್ನಿರೂಪೇಣೇತಿ । ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥ ಋ. ೧-೧೬೪-೫೧ । ಇತಿ ಶ್ರವಣಾತ್ । ಉರೋರ್ವಿಸ್ತೀರ್ಣಾದಂತರಿಕ್ಷಾದಾಗಚ್ಛಂಸ್ತ್ವಂ ಪುನಾನಃ ಪೂಯಮಾನಃ ಸನ್ನೋಽಸ್ಮಾನ್ವರಿವಸ್ಯ । ಧನಾದಿಪ್ರದಾನೇನ ಪರಿಚರೇತಿ ॥

॥ ಪ್ರತಿಪದಾರ್ಥ ॥

**ದೇವ**—ದೇವತಾತ್ಮಕನಾದ । **ಸೋಮ**—ಎಲೈ ಸೋಮದೇವನೇ । **ಇಂದ್ರಪಾನಃ**—ಇಂದ್ರನ ಪಾನಕ್ಕೆ ಯೋಗ್ಯನಾದ । **ಸಃ**—ನೀನು । **ನಃ**—ನಮ್ಮ । **ದೇವತಾತೇ**—ಯಜ್ಞದಲ್ಲಿ । **ಮಹೇ**—ಮಹತ್ತಾದ । **ಪ್ಸರಸೇ**—ಇಂದ್ರನ ಪಾನಾರ್ಥವಾಗಿ । **ಪವಸ್ವ**—ಪ್ರವಹಿಸು । **ಅಪಃ**—ಉದಕಗಳನ್ನು । **ಕೃಣ್ವನ್**—ನಿರ್ಮಿಸುತ್ತಲೂ । **ಉತ**—ಮತ್ತು । **ದ್ಯಾಂ**—ದ್ಯುಲೋಕವನ್ನೂ । **ಇಮಾಂ**—ಈ ಲೋಕವನ್ನೂ । **ವರ್ಷಯನ್**—ವೃಷ್ಟಿಯಿಂದ ತೊಯ್ಯಿಸುತ್ತಲೂ । **ಉರೋಃ**—ವಿಸ್ತೃತವಾದ ಅಂತರಿಕ್ಷದಿಂದ । **ಆ**—

ದಯಮಾಡು | ಪುನಾನಃ - ಶುದ್ಧಿಯನ್ನು ಹೊಂದಿ | ನಃ—ನಮ್ಮನ್ನು | ಪರಿವಸ್ಯ—ಧನಾದಿದಾನಗಳಿಂದ ಉಪಚರಿಸು.

|| ಭಾವಾರ್ಥ ||

ದೇವತಾತ್ಮನಾದ ಎಲೈ ಸೋಮದೇವನೇ, ಇಂದ್ರನ ಪಾನಕ್ಕೆ ಯೋಗ್ಯನಾದ ನೀನು ನಮ್ಮ ಯಜ್ಞದಲ್ಲಿ ಮಹತ್ತಾದ ಇಂದ್ರನ ಪಾನಾರ್ಥವಾಗಿ ಪ್ರವಹಿಸು. ಉದಕಗಳನ್ನು ನಿರ್ಮಿಸುತ್ತಲೂ, ದ್ಯುಲೋಕವನ್ನೂ, ಈ ಲೋಕವನ್ನೂ ವೃಷ್ಟಿಯಿಂದ ತೊಯ್ಯಿಸುತ್ತಲೂ, ವಿಸ್ತೃತವಾದ ಅಂತರಿಕ್ಷದಿಂದ ದಯಮಾಡು. ಇಲ್ಲಿ ಶುದ್ಧಿಯನ್ನು ಹೊಂದಿ ನಮ್ಮನ್ನು ಧನಾದಿ ದಾನಗಳಿಂದ ಉಪಚರಿಸು.

## English Translation.

Divine Soma, who are the beverage of Indra, flow at our sacrifice for (his) abundant food ; sending water, causing rain to fall upon heaven and upon this earth, (come) from the wide (firmament, and) being purified bestow upon us wealth.

| ಸಂಹಿತಾಪಾಠಃ ||

ಅಜೀತಯೇಽಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ |
ತದುಶಂತಿ ವಿಶ್ವ ಇಮೇ ಸಖಾಯಸ್ತದಹಂ ವಶ್ಮಿ ಪವಮಾನ ಸೋಮ || ೪ ||

|| ಪದಪಾಠಃ ||

ಅಜೀತಯೇ | ಅಹತಯೇ | ಪವಸ್ವ | ಸ್ವಸ್ತಯೇ | ಸರ್ವಽತಾತಯೇ | ಬೃಹತೇ |
ತತ್ | ಉಶಂತಿ | ವಿಶ್ವೇ | ಇಮೇ | ಸಖಾಯಃ | ತತ್ | ಅಹಂ | ವಶ್ಮಿ | ಪವಮಾನ | ಸೋಮ || ೪ ||

|| ಸಾಯಣಭಾಷ್ಯಂ ||

ಹೇ ಸೋಮ ಅಜೀತಯೇ ಯಥಾ ವಯಂ ಶತ್ರುಭಿರಜಿತಾ ಭವೇಮ ತಥಾ ತೇಷಾಮಜಯಾಯ ಅಹತಯೇ ಯಥಾ ತೈರಹತಾಃ ಸ್ಯಾಮ ತಸ್ಮೈ ಚ ಅತ ಏವ ಸ್ವಸ್ತಯೇಽವಿನಾಶಾಯ ಕಿಂಚ ಬೃಹತೇ ಸರ್ವತಾತಯೇ ಸರ್ವೈರಿಂದ್ರಾದಿಭಿರ್ದೇವೈಃ ಸ್ತೂಯಮಾನಾಯ ಯಜ್ಞಾಯ ಏತದರ್ಥಂ ಪವಸ್ವ | ಅಸ್ಮದಭಿಮುಖಮಾಗಚ್ಛ | ಪವಿರ್ಗತಿಕರ್ಮಾ | ವಿಶ್ವೇ ಸರ್ವ ಇಮೇ ಮದೀಯಾಃ ಸಖಾಯಃ ಸ್ತೋತಾರಸ್ತತ್ತ್ವದೀಯಂ ರಕ್ಷಣಮುಶಂತಿ | ಕಾಮಯಂತೇ | ಹೇ ಪವಮಾನ ಸೋಮ ತದ್ರಕ್ಷಣಮಹಮಪಿ ವಶ್ಮಿ ಕಾಮಯೇ ||

|| ಪ್ರತಿಪದಾರ್ಥ ||

(ಎಲೈ ಸೋಮನೇ) | **ಅಜೀತಯೇ**—ಶತ್ರುಗಳು ನಮ್ಮನ್ನು ಜಯಿಸದೇ ಇರುವುದಕ್ಕೂ | **ಅಹತಯೇ**—ಹಿಂಸಾರಹಿತರಾಗಿರುವುದಕ್ಕೂ | **ಸ್ವಸ್ತಯೇ**—ಕಲ್ಯಾಣಸಂಪಾದನೆಗೂ ನೆರವೇರುವ | **ಬೃಹತೇ**—ಮಹತ್ತಾದ | **ಸರ್ವತಾತಯೇ**—ಯಜ್ಞಾರ್ಥವಾಗಿ | **ಪವಸ್ವ**—ಪ್ರವಹಿಸು | **ಇಮೇ ವಿಶ್ವೇ ಸಖಾಯಃ**—ನನ್ನ ಈ ಮಿತ್ರರೆಲ್ಲರೂ | **ತತ್**—ನಿನ್ನಿಂದ ರಕ್ಷಣವನ್ನು | **ಉಶಂತಿ**—ಅಪೇಕ್ಷಿಸುತ್ತಾರೆ | **ಪವಮಾನ**—ಪವಮಾನಸಂಜ್ಞಕನಾದ | **ಸೋಮ**—ಎಲೈ ಸೋಮನೇ | **ತತ್**—ಅದೇ ರಕ್ಷಣವನ್ನು | **ಅಹಂ**—ನಾನೂ | **ವಶ್ಮಿ**—ಅಪೇಕ್ಷಿಸುತ್ತೇನೆ.

|| ಭಾವಾರ್ಥ ||

ಎಲೈ ಸೋಮನೇ, ಶತ್ರುಗಳು ನಮ್ಮನ್ನು ಜಯಿಸದೇ ಇರುವುದಕ್ಕೂ, ನಾವು ಹಿಂಸೆಯಿಂದ ತಪ್ಪಿಸಿಕೊಳ್ಳುವುದಕ್ಕೂ, ನಮ್ಮ ಕಲ್ಯಾಣಸಂಪಾದನೆಗೂ ನೆರವೇರುವ ಮಹತ್ತಾದ ಯಜ್ಞಾರ್ಥವಾಗಿ ಪ್ರವಹಿಸು. ನನ್ನ ಈ ಮಿತ್ರರೆಲ್ಲರೂ ನಿನ್ನಿಂದ ರಕ್ಷಣವನ್ನು ಅಪೇಕ್ಷಿಸುತ್ತಾರೆ ಪವಮಾನಸಂಜ್ಞಕನಾದ ಎಲೈ ಸೋಮನೇ, ಅದೇ ರಕ್ಷಣವನ್ನು ನಾನೂ ಅಪೇಕ್ಷಿಸುತ್ತೇನೆ.

## English Translation.

Flow for our immunity from defeat and slaughter, flow for our welfare, for the great sacrifice for all the gods ; all these my friends desire this ; this I desire, O Soma Pavamana.

|| ಸಂಹಿತಾಪಾಠಃ ||

**ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ |**

**ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ||೫||**

|| ಪದಪಾಠಃ ||

ಸೋಮ | ಪವತೇ | ಜನಿತಾ | ಮತೀನಾಂ | ಜನಿತಾ | ದಿವಃ | ಜನಿತಾ | ಪೃಥಿವ್ಯಾಃ |

ಜನಿತಾ | ಅಗ್ನೇಃ | ಜನಿತಾ | ಸೂರ್ಯಸ್ಯ | ಜನಿತಾ | ಇಂದ್ರಸ್ಯ | ಜನಿತಾ | ಉತ | ವಿಷ್ಣೋಃ || ೫ ||

|| ಸಾಯಣಭಾಷ್ಯಂ ||

**ಸೋಮೋಽಭಿಷೂಯಮಾಣಃ ಪವತೇ | ಪಾತ್ರೇಷು ಕ್ಷರತಿ | ಕೀದೃಶಃ | ಮತೀನಾಂ ಬುದ್ಧೀನಾಂ ಯದ್ವಾ ಮನನೀಯಾನಾಂ ಸ್ತುತೀನಾಂ ಜನಿತಾ ಜನಯಿತಾ || ಜನಿತಾ ಮಂತ್ರೇ | ಪಾ. ೬-೪-೫೩ | ಇತಿ ನಿಪಾತನಾಣ್ಣಿಲೋಪಃ || ಕಿಂಚ ದಿವೋ ದ್ಯುಲೋಕಸ್ಯ ಜನಿತಾ ಪ್ರಾದುರ್ಭಾವಯಿತಾ ತಥಾ ಪೃಥಿವ್ಯಾ**

ಜನಯಿತಾ ಅಗ್ನೇರ್ಜನಯಿತಾ ಪ್ರಕಾಶಯಿತಾ ಸೂರ್ಯಸ್ಯ ಸರ್ವಸ್ಯ ಪ್ರೇರಕಸ್ಯಾದಿತ್ಯಸ್ಯ ಜನಿತಾ ಇಂದ್ರಸ್ಯ ಜನಿತಾ ಪಾನೇನ ಮದಸ್ಯ ಜನಯಿತಾ ಉತಾಪಿ ಚ ವಿಷ್ಣೋರ್ವ್ಯಾಪಕಸ್ಯ ಜನಿತಾ ಜನಯಿತಾ। ಏತತ್ಸರ್ವಂ ಸೋಮೋಽಭಿಷೂಯಮಾಣೇ ಭವತೀತಿ ಸೋಮೋ ಹಿ ದೇವಾನಾಪ್ಯಾಯಯತೀತಿ ॥

॥ ಪ್ರತಿಪದಾರ್ಥ ॥

ಮತೀನಾಂ—ಸ್ತುತಿಗಳಿಗೆ। ಜನಿತಾ—ಉತ್ಪಾದಕನೂ। ದಿವಃ—ದ್ಯುಲೋಕಕ್ಕೆ। ಜನಿತಾ—ಉತ್ಪಾದಕನೂ। ಪೃಥಿವ್ಯಾಃ—ಪೃಥ್ವಿಗೆ। ಜನಿತಾ—ಉತ್ಪಾದಕನೂ। ಅಗ್ನೇಃ—ಅಗ್ನಿಯ। ಜನಿತಾ—ಪ್ರಕಾಶಕನೂ। ಸೂರ್ಯಸ್ಯ—ಸೂರ್ಯನ। ಜನಿತಾ—ಪ್ರೇರಕನೂ। ಇಂದ್ರಸ್ಯ—ಇಂದ್ರನ। ಜನಿತಾ—ಉತ್ಪಾದಕನೂ। ಉತ—ಮತ್ತು। ವಿಷ್ಣೋಃ—ವಿಷ್ಣುವಿನ। ಜನಿತಾ—ಉತ್ಪಾದಕನೂ ಆದ। ಸೋಮಃ—ಸೋಮನು। ಪವತೇ—ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಸ್ತುತಿಗಳ ಉತ್ಪಾದಕನೂ, ದ್ಯಾವಾಪೃಥಿವಿಗಳ ನಿರ್ಮಾಪಕನೂ, ಅಗ್ನಿಯ ಪ್ರಕಾಶಕನೂ, ಸೂರ್ಯನ ಪ್ರೇರಕನೂ, ಇಂದ್ರ ಮತ್ತು ವಿಷ್ಣುಗಳ ಉತ್ಪಾದಕನೂ ಆದ ಸೋಮನು ಪ್ರವಹಿಸುತ್ತಾನೆ.

## English Translation.

The Soma flows the generator of praises, the generator of heaven, the generator of the earth, the generator of Agni, the generator of the sun, the generator of Indra and the generator of Vishnu.

॥ ಸಂಹಿತಾಪಾಠಃ ॥

ಬ್ರಹ್ಮಾ ದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ।
ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ ಸೋಮಃ ಪವಿತ್ರಮತ್ಯೇತಿ ರೇಭನ್ ॥ ೬ ॥

॥ ಪದಪಾಠಃ ॥

ಬ್ರಹ್ಮಾ। ದೇವಾನಾಂ। ಪದಽವೀಃ। ಕವೀನಾಂ। ಋಷಿಃ। ವಿಪ್ರಾಣಾಂ। ಮಹಿಷಃ। ಮೃಗಾಣಾಂ। ಶ್ಯೇನಃ। ಗೃಧ್ರಾಣಾಂ। ಸ್ವಽಧಿತಿಃ। ವನಾನಾಂ। ಸೋಮಃ। ಪವಿತ್ರಂ। ಅತಿ। ಏತಿ। ರೇಭನ್ ॥ ೬ ॥

|| ಸಾಯಣಭಾಷ್ಯಂ ||

ದೇವಸುವಾಂ ಹವಿಃಷು ಸೋಮಸ್ಯ ವನಸ್ಪತೇರ್ಬ್ರಹ್ಮಾ ದೇವಾನಾಮಿತಿ ಯಾಜ್ಯಾ | ಸೂತ್ರ್ಯತೇ ಚ | ತ್ವಂ ಚ ಸೋಮ ನೋ ವಶೋ ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ | ಆ. ೪-೧೧ | ಇತಿ ||

ಸೋಮ ಏವಂರೂಪೋ ಭವತಿ | ದೇವಾನಾಂ ಸ್ತೋತ್ರಕಾರಿಣಾಮೃತ್ವಿಜಾಂ ಬ್ರಹ್ಮಾ ಬ್ರಹ್ಮಾಖ್ಯ-ರ್ತ್ವಿಕ್ಸ್ಥಾನೀಯೋ ಭವತಿ | ಯದ್ವಾ | ದೇವಾನಾಂ ದ್ಯೋತಮಾನಾನಾಮಿಂದ್ರಾದೀನಾಂ ಬ್ರಹ್ಮಾ ರಾಜಾ ಭವತಿ | ತಥಾ ಕವೀನಾಂ ಕ್ರಾಂತಪ್ರಜ್ಞಾನಾಂ ಪದವೀಃ | ಸ್ಖಲಂತಿ ಪದಾನಿ ಸಾಧುತ್ವೇನ ಯೋ ಯೋಜ-ಯತಿ ಸ ಪದವೀಃ || ವೀ ಗತ್ಯಾದಿಷ್ವಿತ್ಯೇತಸ್ಮಾತ್ಕ್ವಿಪಿ ರೂಪಂ || ತಥಾ ವಿಪ್ರಾಣಾಂ ಮೇಧಾವಿನಾಂ ಮಧ್ಯ ಋಷಿರ್ಭವತಿ | ಯಃ ಪರೋಕ್ಷಂ ಪಶ್ಯತಿ ಸ ಋಷಿಃ ಋಷಿರ್ದರ್ಶನಾತ್ | ನಿ. ೨-೧೧ | ಇತಿ | ಮೃಗಾಣಾಂ ಮಹಿಷೋ ಭವತಿ | ಮಹಿಷಾಖ್ಯೋ ಬಲವಾನ್ರಾಜಾ ಭವತಿ | ತಥಾ ಗೃಧ್ರಾಣಾಂ ಪಕ್ಷಿವಿಶೇಷಾಣಾಂ ಶ್ಯೇನಃ ಶಂಸನೀಯಃ ಪಕ್ಷಿರಾಜೋ ಭವತಿ | ವನಾನಾಂ | ವನತಿರ್ಹಿಂಸಾಕರ್ಮಾ | ಹಿಂಸಕಾನಾಂ ಛೇದಕಾನಾಂ ಮಧ್ಯೇ ಸ್ವಧಿತಿರೇತನ್ನಾಮಕಶ್ಛೇದಕೋಽಸಿ | ಏವಂಪ್ರಭಾವಃ ಸೋಮೋ ರೇಭಞ್ಶಬ್ದಾ-ಯಮಾನಃ ಸನ್ ಪವಿತ್ರಮೂರ್ಣಾಸ್ತುಕೇನ ಕೃತಮತ್ಯೇತಿ | ಅತಿಗಚ್ಛತಿ ||

|| ಪ್ರತಿಪದಾರ್ಥ ||

**ದೇವಾನಾಂ** ದೇವತೆಗಳಿಗೆ | **ಬ್ರಹ್ಮಾ**— ಋತ್ವಿಗ್ರೂಪನೂ | **ಕವೀನಾಂ**— ಕವಿಗಳಿಗೆ | **ಪದವೀಃ**— ಮಾರ್ಗದರ್ಶಕನೂ | **ವಿಪ್ರಾಣಾಂ**— ಮೇಧಾವಿಗಳ ಮಧ್ಯೆ | **ಋಷಿಃ**— ಉತ್ತಮವಾದ ಅತೀಂದ್ರಿಯಶಕ್ತಿಯುಳ್ಳವನೂ | **ಮೃಗಾಣಾಂ**— ಮೃಗಗಳಲ್ಲಿ | **ಮಹಿಷಃ**— ಮಹಿಷರೂಪನಾದ ರಾಜನೂ | **ಗೃಧ್ರಾಣಾಂ**— ಗೃಧ್ರಗಳ ಗುಂಪಿನಲ್ಲಿ | **ಶ್ಯೇನಃ**— ಶ್ಯೇನಪಕ್ಷಿಯೂ | **ವನಾನಾಂ**— ಹಿಂಸಕರ ನಡುವೆ | **ಸ್ವಧಿತಿಃ**— ಸ್ವಧಿತಿ ಸಂಜ್ಞಕನಾದ ಛೇದಕನೂ ಆದ | **ಸೋಮಃ** ಸೋಮದೇವನು | **ರೇಭನ್**— ಶಬ್ದಮಾಡುತ್ತ | **ಪವಿತ್ರಂ**— ದಶಾಪವಿತ್ರವನ್ನು | **ಅತ್ಯೇತಿ**— ದಾಟಿಹೋಗುತ್ತಾನೆ.

|| ಭಾವಾರ್ಥ ||

ದೇವತೆಗಳಿಗೆ ಬ್ರಹ್ಮಸಂಜ್ಞಕನಾದ ಋತ್ವಿಗ್ರೂಪನೂ, ಕವಿಗಳಿಗೆ ಮಾರ್ಗದರ್ಶಕನೂ, ಮೇಧಾವಿಗಳ ಮಧ್ಯೆ ಉತ್ತಮವಾದ ಅತೀಂದ್ರಿಯಶಕ್ತಿಯುಳ್ಳವನೂ, ಮೃಗಗಳಲ್ಲಿ ಮಹಿಷರೂಪನಾದ ರಾಜನೂ, ಗೃಧ್ರಗಳ ಗುಂಪಿನಲ್ಲಿ ಶ್ಯೇನಪಕ್ಷಿಯೂ, ಹಿಂಸಕರ ನಡುವೆ ಸ್ವಧಿತಿಸಂಜ್ಞಕನಾದ ಛೇದಕನೂ (ಕತ್ತಿಯೂ) ಆದ ಸೋಮದೇವನು ಶಬ್ದ ಮಾಡುತ್ತ ದಶಾಪವಿತ್ರವನ್ನು ದಾಟಿಹೋಗುತ್ತಾನೆ.

## English Translation.

The Brahma of the gods, the guide of the sages, the rishi of the pious, the buffalo of wild animals, the falcon of the vultures, the hatchet of deadly weapons, the Soma passes through the filter with a roar.

ವಿಶೇಷವಿಷಯಗಳು

ದೇವಸುವ ಎಂಬ ಎಂಟು ಹೋಮಗಳಲ್ಲಿ ಸೋಮವನಸ್ಪತಿಯೆಂಬ ದೇವತೆಯನ್ನುದ್ದೇಶಿಸಿ ಹೋಮ ಮಾಡುವಾಗ **ಬ್ರಹ್ಮಾ ದೇವಾನಾಂ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ತ್ವಂ ಚ ಸೋಮ ನೋ ವಶೋ ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ** ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು. ಈ ಋಕ್ಕಿನಲ್ಲಿ ಸೋಮದೇವನ ಮಹತ್ಸ್ವರೂಪವನ್ನು ವಿವರಿಸುವುದಕ್ಕಾಗಿ ಅನೇಕ ವ್ಯಕ್ತಿಗಳೊಡನೆ ಹೋಲಿಸಲಾಗಿದೆ.

**ಬ್ರಹ್ಮಾ ದೇವಾನಾಂ-ಸ್ತೋತ್ರಕಾರಿಣಾಮೃತ್ವಿಜಾಂ ಬ್ರಹ್ಮಾಖ್ಯರ್ತ್ವಿಕ್ಸ್ಥಾನೀಯೋ ಭವತಿ ।** ಯಜ್ಞದಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ ಮೊದಲಾದ ಅನೇಕಮಂದಿ ಋತ್ವಿಕ್ಕುಗಳು ಇರುವರು. ಇವರೆಲ್ಲಾ ತಮಗೆ ನಿರ್ದಿಷ್ಟವಾದ ಕೆಲಸಕಾರ್ಯಗಳನ್ನು ಮಾಡುತ್ತಿರುವರು. ಅವರು ಮಾಡುವ ಕಾರ್ಯಗಳಲ್ಲಿ ಮಾತ್ರ ಅವರಿಗೆ ಪರಿಜ್ಞಾನವಿರುವುದು. ಇತರರ ಕೆಲಸಗಳ ಪರಿಚಯವಿರುವುದಿಲ್ಲ. ಹೇಗೆಂದರೆ ಹೋತೃವು ಋಗ್ವೇದಮಂತ್ರಗಳನ್ನು ಪಠಿಸಿ ಯಜ್ಞದಲ್ಲಿ ನಿರ್ದಿಷ್ಟವಾದ ದೇವತೆಯನ್ನು ಆಹ್ವಾನಮಾಡುವನು, ಅನಂತರ ಅವರ ಗುಣಗಾನಮಾಡಿ ಅವರಿಗೆ ಆಹುತ್ಯಾದಿಗಳನ್ನು ಅಗ್ನಿಯಲ್ಲಿ ಅರ್ಪಿಸುವ ಮಂತ್ರಾದಿಗಳನ್ನು ಪಠಿಸುವನು; ಇದೇ ಇವನ ಮುಖ್ಯ ಕಾರ್ಯವು. ಅಧ್ವರ್ಯುವು ಯಾವ ಯಾವ ಕಾಲದಲ್ಲಿ ಯಾವಯಾವ ಋತ್ವಿಜರು ಯಾವಯಾವ ಕೆಲಸಗಳನ್ನು ಮಾಡಬೇಕೆಂಬುದನ್ನು ಪ್ರೈಷಮಂತ್ರಗಳಿಂದ ನಿರ್ದೇಶಿಸುವನು ಮತ್ತು ಸೋಮಾಭಿಷವಣ, ಅಗ್ನಿಮಂಥನ ಮೊದಲಾದ ಯಜ್ಞಾಂಗಕರ್ಮಗಳಲ್ಲಿಯೂ ಭಾಗ ವಹಿಸುವನು. ಅಧ್ವರ್ಯುವು ಪಠಿಸಬೇಕಾದ ಮಂತ್ರಗಳೂ ಅನೇಕವಿರುವವು. ಇದರಂತೆಯೇ ಉದ್ಗಾತೃವು ಸಾಮಮಂತ್ರವನ್ನು ಗಾನಮಾಡುವನು. ಇತರ ಋತ್ವಿಕ್ಕುಗಳೂ ಅವರವರು ಮಾಡಬೇಕಾದ ಕಾರ್ಯಕಲಾಪಗಳು ಅನೇಕವಾಗಿರುವವು. ಆದರೆ ಹೋತೃವು ಮಾಡುವ ಕಾರ್ಯವನ್ನು ಅಧ್ವರ್ಯುವಾಗಲೀ ಅಧ್ವರ್ಯುವು ಮಾಡುವ ಕಾರ್ಯವನ್ನು ಹೋತೃವಾಗಲೀ ಮಾಡುವಂತಿಲ್ಲ. ಇತರ ಋತ್ವಿಕ್ಕುಗಳ ವಿಷಯದಲ್ಲಿಯೂ ಹೀಗೆಯೇ. ಅಧ್ವರ್ಯುವು ಯಜುರ್ವೇದವನ್ನೂ, ಉದ್ಗಾತೃವು ಸಾಮವೇದವನ್ನೂ ಅಧ್ಯಯನ ಮಾಡಿರಬೇಕು. ಆದರೆ ಬ್ರಹ್ಮನೆಂಬ ಋತ್ವಿಜನು ಯಜ್ಞಕರ್ಮಾಂಗಗಳೆಲ್ಲವನ್ನೂ, ಇತರ ಋತ್ವಿಕ್ಕುಗಳು ಮಾಡಬೇಕಾದ ಕಾರ್ಯಕಲಾಪಗಳನ್ನೂ, ಮಂತ್ರಗಳನ್ನೂ ಚೆನ್ನಾಗಿ ತಿಳಿದವನಾಗಿರಬೇಕು ಇತರ ಋತ್ವಿಕ್ಕುಗಳು ಮಂತ್ರಗಳನ್ನು ಸರಿಯಾಗಿ ಪಠಿಸುತ್ತಿರುವರೇ, ತಮ್ಮ ಕಾರ್ಯಕಲಾಪಗಳನ್ನು ಲೋಪದೋಷಗಳಿಲ್ಲದೆ ಸರಿಯಾಗಿ ನೆರವೇರಿಸುತ್ತಿರುವರೇ ಎಂಬುದನ್ನು ನೋಡಿಕೊಳ್ಳುವ ಜವಾಬ್ದಾರಿಯು ಬ್ರಹ್ಮನದಾಗಿದೆ. ಯಜ್ಞದಲ್ಲಿ ಲೋಪದೋಷಗಳು ಸಂಭವಿಸಿದಲ್ಲಿ ಅದಕ್ಕೆ ತಕ್ಕ ಪ್ರಾಯಶ್ಚಿತ್ತಗಳನ್ನು ವಿಧಿಸಿ ಆ ಲೋಪದೋಷಗಳನ್ನು ಬ್ರಹ್ಮನೇ ಸರಿಪಡಿಸಬೇಕು. ಆದ್ದರಿಂದ ಯಜ್ಞದಲ್ಲಿ ಬ್ರಹ್ಮನ ಕರ್ತವ್ಯವು ಮಹತ್ತ್ವದ್ದಾಗಿದೆ. ಆದ್ದರಿಂದಲೇ ಋತ್ವಿಕ್ಕುಗಳಲ್ಲೆಲ್ಲಾ ಬ್ರಹ್ಮನೇ ಶ್ರೇಷ್ಠನೆಂದೂ ಅಂತಹ ಬ್ರಹ್ಮನಿಗೆ ಸೋಮನು ಸರಿಸಮಾನನೆಂದೂ ಸೋಮನ ಮಹಿಮೆಯನ್ನು ಇಲ್ಲಿ ವರ್ಣಿಸಿದೆ ಇದರಂತೆಯೇ ಸೋಮದೇವನ ಮಹಿಮೆಯನ್ನು ವರ್ಣಿಸುವುದಕ್ಕಾಗಿ ಇತರ ಉಪಮಾನಗಳನ್ನು ವಿವರಿಸಿ ಋಷಿಯು ವರ್ಣಿಸಿದಾನೆ

**ಪದವೀಃ ಕವೀನಾಂ—ಕವೀನಾಂ ಕ್ರಾಂತಪ್ರಜ್ಞಾನಾಂ । ಸ್ಖಲಂತಿ ಪದಾನಿ ಸಾಧುತ್ವೇನ ಯೋಜಯತಿ ಸ ಪದವೀಃ ।** ದೇವತೆಗಳನ್ನು ಸ್ತೋತ್ರಮಾಡುವಾಗ ಆಯಾ ಸಂದರ್ಭಕ್ಕೆ ಅನುಸಾರವಾಗಿ ದೇವತೆಗಳ

ಗುಣಾದಿಗಳನ್ನು ವರ್ಣಿಸುವ ಪದಗಳ ಜೋಡಣೆಯಿಂದ ಕ್ರಮಬದ್ಧವಾಗಿ ವಾಕ್ಯಗಳನ್ನು ರಚಿಸಿ ಪಠಿಸುವವರಲ್ಲಿ ಶ್ರೇಷ್ಠನಾದವನು ಇಂತಹ ಪುರುಷನನ್ನು ಸೋಮದೇವನಿಗೆ ಹೋಲಿಸಿದೆ.

**ವಿಪ್ರಾಣಾಂ ಋಷಿಃ**—ಮೇಧಾವಿಗಳಾದ ಪುರುಷರ ಮಧ್ಯದಲ್ಲಿ ಕ್ರಾಂತದರ್ಶಿಯಾದ ಋಷಿಯು ಹೇಗೆ ಶ್ರೇಷ್ಠನೋ ಹಾಗೆ ಸೋಮದೇವನು ದೇವತೆಗಳ ಮಧ್ಯದಲ್ಲಿ ಶ್ರೇಷ್ಠನು. ಋಷಿಯೆಂದರೆ—**ಯಃ ಪರೋಕ್ಷಂ ಪಶ್ಯತಿ ಸ ಋಷಿಃ । ಋಷಿರ್ದರ್ಶನಾತ್** (ನಿ. ೨ ೧೧) ಸಾಮಾನ್ಯ ಜನರು ತಮ್ಮ ಕಣ್ಣೆದುರಿಗಿರುವ ವಿಷಯಗಳನ್ನೂ ವಸ್ತುಗಳನ್ನೂ ಮಾತ್ರ ನೋಡಿ ತಿಳಿಯಬಲ್ಲರು. ಆದರೆ ಋಷಿಯು ತನ್ನೆದುರಿಗಿಲ್ಲದ ವಿಷಯಗಳನ್ನೂ ಭೂತಭವಿಷ್ಯತ್ಕಾಲಗಳಲ್ಲಿ ನಡೆದ ಅಥವಾ ನಡೆಯುವ ವಿಷಯಗಳನ್ನು ಅರಿಯಬಲ್ಲನು. ಆದ್ದರಿಂದಲೇ ಋಷಿಯು ಇತರ ಬುದ್ಧಿವಂತರಾದ ಮನುಷ್ಯರಿಗಿಂತಲೂ ಶ್ರೇಷ್ಠನೆಂದು ಹೇಳಿ ಅಂತಹ ಋಷಿಯ ಉಪಮಾನದಿಂದ ಸೋಮನನ್ನು ಹೋಲಿಸಲಾಗಿದೆ.

**ಮಹಿಷೋ ಮೃಗಾಣಾಂ**—ಮಹಿಷಶಬ್ದಕ್ಕೆ ಎರಡು ಅರ್ಥಗಳಿರುವವು. ಮಹಿಷವೆಂದರೆ ಕಾಡುಕೋಣವು. ಮೃಗಗಳಲ್ಲೆಲ್ಲಾ ಕಾಡುಕೋಣವು ಅತ್ಯಂತ ಬಲಶಾಲಿಯಾಗಿಯೂ, ಧೈರ್ಯದಿಂದ ಮುನ್ನುಗ್ಗುವುದಾಗಿಯೂ ಇದೆ. ಆದ್ದರಿಂದ ಮೃಗಗಳಲ್ಲಿ ಮಹಿಷಕ್ಕೆ ಪ್ರಾಶಸ್ತ್ಯವಿದೆ ಅಥವಾ ಮಹಿಷಶಬ್ದಕ್ಕೆ ಬಲವುಳ್ಳವನೂ. ಪೂಜ್ಯನೂ (ಮಹಿಷಃ—ಮಹಾನ್) ಎಂಬರ್ಥವಿರುವುದರಿಂದ ಬಲವುಳ್ಳವನೂ, ಪೂಜ್ಯನೂ ಆದ ರಾಜನಂತೆ ಸೋಮನು ಬಲಪ್ರದನೂ, ಪೂಜ್ಯನೂ ಆಗಿರುವನು.

**ಶ್ಯೇನೋ ಗೃಧ್ರಾಣಾಂ**—ಗೃಧ್ರವೆಂಬ (ಹದ್ದು ಮೊದಲಾದ ಬಲವಾದ ಪಕ್ಷಿಗಳು) ಪಕ್ಷಿವಿಶೇಷಗಳಲ್ಲಿ ಶ್ಯೇನಪಕ್ಷಿಯಂತೆ ಇರುವವನು. ಶ್ಯೇನಪಕ್ಷಿಯು ತನ್ನ ಅತಿಶಯವಾದ ಶಕ್ತಿಯಿಂದ ಸ್ವರ್ಗಲೋಕಕ್ಕೆ ಹಾರಿಹೋಗಿ ಅಲ್ಲಿದ್ದ ಸೋಮಲತೆಗಳನ್ನು ಭೂಮಿಗೆ ತಂದಿತೆಂದು ಪ್ರಸಿದ್ಧಿಯು. ಆದ್ದರಿಂದ ಶ್ಯೇನಪಕ್ಷಿಯು ಪಕ್ಷಿಗಳಲ್ಲೆಲ್ಲಾ ಶ್ರೇಷ್ಠವೆಂದು ಪರಿಗಣಿತವಾಗಿದೆ. ಸೋಮದೇವನು ಅಂತಹ ಶ್ಯೇನಪಕ್ಷಿಗೆ ಸಮಾನನು.

**ಸ್ವಧಿತಿರ್ವನಾನಾಂ—ವನತಿರ್ಹಿಂಸಾಕರ್ಮಾ । ಹಿಂಸಕಾನಾಂ ಛೇದಕಾನಾಂ ಮಧ್ಯೇ ಸ್ವಧಿತಿಃ ಏತನ್ನಾಮಕಶ್ಛೇದಕೋಽಸಿ ।** ಸ್ವಧಿತಿಃ ಎಂದರೆ ಕತ್ತರಿಸುವ ಆಯುಧವು. ಇದನ್ನು ಯಜ್ಞಾದಿಗಳಲ್ಲಿ ಪಶುಗಳನ್ನು ಕತ್ತರಿಸಿ ಹೋಮಮಾಡುವುದಕ್ಕೆ ಉಪಯೋಗಿಸುವರು. ಹಿಂಸೆಮಾಡುವ ಕರ್ಮಗಳಲ್ಲಿ ಸ್ವಧಿತಿಯೆಂಬ ಕತ್ತಿಯು ಹೇಗೆ ಶ್ರೇಷ್ಠವೋ ಹಾಗೆ ಸೋಮನು ಇತರ ವಸ್ತುಗಳ ಮಧ್ಯದಲ್ಲಿ ಶ್ರೇಷ್ಠನು. ಇಂತಹ ಶ್ರೇಷ್ಠನೂ, ಪೂಜ್ಯನೂ ಆದ ಸೋಮನು ಜಳಜಳನೆ ಶಬ್ದಮಾಡುತ್ತಾ ಹರಿದುಹೋಗಿ ಶೋಧಿಸುವುದಕ್ಕಾಗಿ ಇಟ್ಟಿರುವ ದಶಾಪವಿತ್ರವೆಂಬ ಪಾತ್ರೆಯನ್ನು ಪ್ರವೇಶಿಸುತ್ತಾನೆಂದು ಋಷಿಯು ವರ್ಣಿಸಿದಾನೆ.

॥ ಸಂಹಿತಾಪಾಠಃ ॥

**ಪ್ರಾವೀವಿಪದ್ವಾಚ ಊರ್ಮಿಂ ನ ಸಿಂಧುರ್ಗಿರಃ ಸೋಮಃ ಪವಮಾನೋ ಮನೀಷಾಃ ।**

**ಅಂತಃ ಪಶ್ಯನ್ವೃಜನೇಮಾವರಾಣ್ಯಾ ತಿಷ್ಠತಿ ವೃಷಭೋ ಗೋಷು ಜಾನನ್ ॥**

॥ ಪದಪಾಠಃ ॥

ಪ್ರ । ಅವೀವಿಪತ್ । ವಾಚಃ । ಊರ್ಮಿಂ । ನ । ಸಿಂಧುಃ । ಗಿರಃ । ಸೋಮಃ । ಪವಮಾನಃ । ಮನೀಷಾಃ ।
ಅಂತರಿತಿ । ಪಶ್ಯನ್ । ವೃಜನಾ । ಇಮಾ । ಅವರಾಣಿ । ಆ । ತಿಷ್ಠತಿ । ವೃಷಭಃ । ಗೋಷು । ಜಾನನ್॥೭॥

॥ ಸಾಯಣಭಾಷ್ಯಂ ॥

ಪವಮಾನಃ ಸೋಮೋ ಮನೀಷಾ ಮನಸ ಈಶಿತಾ ಹೃದಯಂಗಮಾ ಗಿರಃ ಸ್ತುತೀಃ ಪ್ರಾವೀವಿಪತ್ । ಪ್ರಕರ್ಷೇಣ ವೇಪಯತಿ । ಪ್ರೇರಯತಿ । ಕಥಮಿವ । ಸಿಂಧುಃ ಸ್ಯಂದಮಾನಾ ನದೀವ ವಾಚಃ ಶಬ್ದಸ್ಯೋರ್ಮಿಂ ನ ಸಂಘಂ ಯಥಾ ಪ್ರೇರಯತಿ । ತದ್ವತ್ । ಕಿಂಚ ವೃಷಭಃ ಕಾಮಾನಾಮುದಕಾನಾಂ ವಾ ವರ್ಷಕಃ ಸೋಮೋಽಂತರಂತರ್ಹಿತಂ ವಸ್ತುಜಾತಂ ಪಶ್ಯನ್ನವರಾಣಿ ದುರ್ಬಲೈರ್ವಾರಯಿತುಮಶಕ್ಯಾನೀಮಾ ವೃಜನೇಮಾನಿ ಬಲಾನ್ಯಾ ತಿಷ್ಠತಿ । ಆಸೀದತಿ । ಕಿಂ ಕುರ್ವನ್ । ಗೋಷು ಜಾನನ್ ಗವಾಂ ಜಾನಾನಃ ಸನ್ ಪರಬಲಾನಿ ಪ್ರವಿಶತಿ ॥

॥ ಪ್ರತಿಪದಾರ್ಥ ॥

**ಸಿಂಧುಃ**—ಪ್ರವಹಿಸುವ ನದಿಯು । **ವಾಚಃ**—ಶಬ್ದದ । **ಊರ್ಮಿಂ ನ**—ತರಂಗಗಳನ್ನು ಎಬ್ಬಿಸುವಂತೆ । **ಪವಮಾನಃ**—ಪವಮಾನಸಂಜ್ಞಕನಾದ । **ಸೋಮಃ**—ಸೋಮದೇವನು । **ಮನೀಷಾಃ**—ಹೃದಯಂಗಮವಾದ । **ಗಿರಃ**—ಸ್ತುತಿಗಳನ್ನು । **ಪ್ರಾವೀವಿಪತ್**—ಪ್ರೇರಿಸುತ್ತಾನೆ । **ವೃಷಭಃ**—ಕಾಮವರ್ಷಕನಾದ ಸೋಮನು । **ಅಂತಃ**—ಗೂಢವಾಗಿ ಅಡಗಿರುವ ವಸ್ತುಗಳನ್ನು । **ಪಶ್ಯನ್**—ನೋಡುತ್ತಲೂ । **ಗೋಷು**—ಗೋವುಗಳ ವಿಷಯವನ್ನು । **ಜಾನನ್**—ಪೂರ್ಣವಾಗಿ ಅರಿತವನಾಗಿಯೂ । **ಅವರಾಣಿ**—ದುರ್ಬಲರಿಂದ ಅಪ್ರತಿಹತವಾದ । **ಇಮಾ ವೃಜನಾ**—ಸಕಲ ಶಕ್ತಿಗಳಿಗೂ । **ಆ ತಿಷ್ಠತಿ**—ಮುಖ್ಯಸ್ಥಾನವನ್ನಾಕ್ರಮಿಸುತ್ತಾನೆ.

॥ ಭಾವಾರ್ಥ ॥

ಪ್ರವಹಿಸುವ ನದಿಯು ಶಬ್ದದ ತರಂಗಗಳನ್ನು ಎಬ್ಬಿಸುವಂತೆ ಪವಮಾನಸಂಜ್ಞಕನಾದ ಸೋಮದೇವನು ಹೃದಯಂಗಮವಾದ ಸ್ತುತಿಗಳನ್ನು ಪ್ರೇರಿಸುತ್ತಾನೆ. ಕಾಮ ವರ್ಷಕನಾದ ಸೋಮನು ಗೂಢವಾಗಿ ಅಡಗಿರುವ ವಸ್ತುಗಳನ್ನು ನೋಡುತ್ತಲೂ, ಗೋವುಗಳ ವಿಷಯವನ್ನು ಪೂರ್ಣವಾಗಿ ಅರಿತವನಾಗಿಯೂ ದುರ್ಬಲರಿಂದ ತಡೆಯಲಾಗದ ಸಕಲ ಶಕ್ತಿಗಳಿಗೂ ಮುಖ್ಯಸ್ಥಾನವನ್ನಾಕ್ರಮಿಸುತ್ತಾನೆ.

## English Translation.

The purified Soma excites gratifying praises as a river (excites) the wave of sound ; the showerer (of benefits) beholding the hidden (treasure) presides over these irresistible powers, knowing about the cattle.

॥ ವಿಶೇಷವಿಷಯಗಳು ॥

**ಸಿಂಧುಃ ಊರ್ಮಿಂ ನ ಪವಮಾನಃ ಸೋಮಃ ಗಿರಃ ಪ್ರ ಅವೀವಿಪತ್**—ಹರಿಯುತ್ತಿರುವ ನದಿಯು ತನ್ನ ಪ್ರವಾಹವೇಗದಿಂದ ಅಲೆಗಳನ್ನು ಎಬ್ಬಿಸಿ ಹೇಗೆ ಶಬ್ದಮಾಡುವುದೋ ಅದರಂತೆ ಪವಮಾನ ಸೋಮನು ಸೋಮ ಪಾನಮಾಡಿದ ಋತ್ವಿಗ್ಜನರಲ್ಲಿ ಸ್ತುತಿರೂಪವಾದ ವಾಕ್ಯಗಳನ್ನು ಪಠಿಸುವಂತೆ ಪ್ರೇರಿಸುವನು ಎಂದರೆ ಸೋಮಪಾನ ದಿಂದ ಹರ್ಷಗೊಂಡ ಋತ್ವಿಗ್ಜನರು ದೇವತೆಗಳನ್ನು ಉತ್ಸಾಹದಿಂದ ಸ್ತೋತ್ರಮಾಡುವರು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಸ ಮತ್ಸರಃ । ಪೃತ್ಸು ವನ್ವನ್ನವಾತಃ ಸಹಸ್ರರೇತಾ ಅಭಿ ವಾಜಮರ್ಷ ।**
**ಇಂದ್ರಾಯೇಂದೋ ಪವಮಾನೋ ಮನೀಷ್ಯಂ೧ ಶೋರೂರ್ಮಿಮೀರಯ**
**ಗಾ ಇಷಣ್ಯನ್ ॥ ೮ ॥**

॥ ಪದಪಾಠಃ ॥

**ಸಃ । ಮತ್ಸರಃ । ಪೃತ್ಽಸು । ವನ್ವನ್ । ಅವಾತಃ । ಸಹಸ್ರಽರೇತಾಃ । ಅಭಿ । ವಾಜಂ । ಅರ್ಷ ।**
**ಇಂದ್ರಾಯ । ಇಂದೋ ಇತಿ । ಪವಮಾನಃ । ಮನೀಷೀ । ಅಂಶೋಃ । ಊರ್ಮಿಂ । ಈರಯ । ಗಾಃ ।**
**ಇಷಣ್ಯನ್ ॥ ೮ ॥**

॥ ಸಾಯಣಭಾಷ್ಯಂ ॥

**ಮತ್ಸರೋ ಮದಕರಃ ಪೃತ್ಸು ಸಂಗ್ರಾಮೇಷು ವನ್ವನ್ ಶತ್ರೂನ್ ಹಿಂಸನ್ ಅತ ಏವಾವಾತೋಽನ್ಯೈರ್ಗಂತುಮಶಕ್ಯಃ ಸಹಸ್ರರೇತಾಃ ಸಹಸ್ರೋದಕಧಾರೋಪೇತಃ ಸ ಸೋಮೋ ವಾಜಂ ಶತ್ರೂಣಾಂ ಬಲಮಭ್ಯರ್ಷ । ಅಭಿಗಚ್ಛ । ಹೇ ಇಂದೋ ಸೋಮ ಪವಮಾನಃ ಪೂಯಮಾನೋ ಮನೀಷೀ ಪ್ರಾಜ್ಞಸ್ತ್ವಂ ಗಾ ಇಷಣ್ಯನ್ನಪೋ ಬ್ರಾಹ್ಮಣಾನ್ ಪ್ರೇರಯನ್ । ಯದ್ವಾ । ಯಜಮಾನಾನಾಂ ಯಜ್ಞಸಾಧನಭೂತಾ ಗಾಃ ಪ್ರೇರಯನ್ । ಇಂದ್ರಾಯೇಂದ್ರಾರ್ಥಮಂಶೋರಭಿಷೂಯಮಾಣಸ್ಯ ಸೋಮಸ್ಯೋರ್ಮಿಂ ಸಂಘಮೀರಯ । ಪ್ರೇರಯ ॥**

॥ ಪ್ರತಿಪದಾರ್ಥ ॥

(ಎಲೈ ಸೋಮನೇ) । **ಮತ್ಸರಃ**—ಮದಕರನೂ । **ಪೃತ್ಸು**—ಯುದ್ಧಗಳಲ್ಲಿ । **ವನ್ವನ್**—ಶತ್ರುಗಳನ್ನು ಹಿಂಸಿಸಿ । **ಅವಾತಃ**—ತಾನು ಮಾತ್ರ ಅಹಿಂಸಿತನಾಗಿರುವವನೂ । **ಸಹಸ್ರರೇತಾಃ**—ಅನೇಕ ವಿಧವಾದ ಧಾರಾ ರೂಪವುಳ್ಳವನೂ । **ಸಃ**—ಪ್ರಸಿದ್ಧನೂ ಆದ ನೀನು । **ವಾಜಂ**—ಶತ್ರುಬಲವನ್ನು ಎದುರಿಸಿ । **ಅಭ್ಯರ್ಷ**—ಮುನ್ನುಗ್ಗು । **ಇಂದೋ**—ಎಲೈ ಸೋಮದೇವನೇ । **ಪವಮಾನಃ**—ಶುದ್ಧಿಕಾರಕನಾದ ನೀನು । **ಮನೀಷೀ**—

ಪ್ರಾಜ್ಞನಾಗಿದ್ದು | **ಗಾಃ ಇಷಣ್ಯನ್**—ಗೋವುಗಳನ್ನು ಪ್ರೇರಿಸುತ್ತ | **ಇಂದ್ರಾಯ**—ಇಂದ್ರಾರ್ಥವಾಗಿ | **ಅಂಶೋಃ**—ಸೋಮರಸದ | **ಊರ್ಮಿಂ**—ಸಂಘವನ್ನು | **ಈರಯ**—ಪ್ರವಹಿಸುವಂತೆ ಮಾಡು.

|| ಭಾವಾರ್ಥ ||

ಎಲೈ ಸೋಮನೇ, ಹರ್ಷಕಾರಕನೂ, ಯುದ್ಧಗಳಲ್ಲಿ ಶತ್ರುಗಳನ್ನು ಹಿಂಸಿಸಿ ನೀನು ಮಾತ್ರ ಅಹಿಂಸಿತನಾಗಿರುವವನೂ, ಅನೇಕ ವಿಧವಾದ ಧಾರಾರೂಪವುಳ್ಳವನೂ, ಪ್ರಸಿದ್ಧನೂ ಆದ ನೀನು ಶತ್ರುಬಲವನ್ನು ಎದುರಿಸಿ ಮುನ್ನುಗ್ಗು. ಎಲೈ ಸೋಮದೇವನೇ, ಶುದ್ಧಿಕಾರಕನಾದ ನೀನು ಪ್ರಾಜ್ಞನಾಗಿದ್ದು ಗೋವುಗಳನ್ನು ಪ್ರೇರಿಸುತ್ತ, ಇಂದ್ರಾರ್ಥವಾಗಿ ಸೋಮರಸದ ಸಂಘವನ್ನು ಪ್ರವಹಿಸುವಂತೆ ಮಾಡು.

English Translation.

(Soma) who are the exhilarator, harming (the foe) in battles, (yourself) unharmed, who have a thousand streams, rush against the :strength (of the enemy) ; Indu, who are being purified, the sage, uttering cries, urge on for Indra the wave of juice.

|| ವಿಶೇಷವಿಷಯಗಳು ||

**ಸ ಮತ್ಸರಃ ಪೃತ್ಸು ವನ್ವನ್ ಅವಾತಃ**—ಮದವನ್ನುಂಟುಮಾಡುವ ಸೋಮನು ಯುದ್ಧಾದಿಗಳಲ್ಲಿ ಶತ್ರುಗಳನ್ನು ಹಿಂಸೆಮಾಡುತ್ತಾನೆ. ಆದರೆ ತಾನು ಮಾತ್ರ ಯಾರಿಂದಲೂ ಹಿಂಸಿತನಾಗುವುದಿಲ್ಲ. ಎಂದರೆ ಸೋಮಪಾನಮಾಡಿದ ಮೇಲೆ ಹರ್ಷವುಂಟಾಗಿ ಉತ್ಸಾಹವು ಇಮ್ಮಡಿಯಾಗುವುದು. ಆದ್ದರಿಂದ ಸೋಮಪಾನದಿಂದ ಉತ್ಸಾಹಗೊಂಡ ಯುದ್ಧಭಟರು ಯುದ್ಧಗಳಲ್ಲಿ ವೀರಾವೇಶದಿಂದ ಶತ್ರುಗಳ ಮೇಲೆ ಮುನ್ನುಗ್ಗಿ ಅವರನ್ನು ಸಂಹರಿಸುವುದು ಸಹಜವಾಗಿದೆ. ಈ ರೀತಿಯಾದ ಶತ್ರುವಧಕ್ಕೆ ಸೋಮಪಾನವೇ ಕಾರಣವಾದ್ದರಿಂದ ಸೋಮನು ಯುದ್ಧಗಳಲ್ಲಿ ಶತ್ರುಗಳನ್ನು ಸಂಹರಿಸುವನೆಂದು ಋಷಿಯು ಪ್ರಕಾರಾಂತರವಾಗಿ ವರ್ಣಿಸಿದಾನೆ.

**ಸಹಸ್ರರೇತಾಃ—ಸಹಸ್ರೋದಕಧಾರೋಪೇತಃ |** ಸೋಮ ಲತೆಗಳನ್ನು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡುವಾಗ ಲತೆಗಳಿಂದ ಸೋಮರಸವು ನಾನಾ ಕಡೆಗಳಿಂದ ಜಿನುಗಿ ಹೊರಸೂಸಿ ಬರುವುದು. ಅದನ್ನು ಇಲ್ಲಿ **ಸಹಸ್ರರೇತಾಃ ಸಹಸ್ರಧಾರಃ ಶತಧಾರಃ** ಇತ್ಯಾದಿ ಶಬ್ದಗಳಿಂದ ವರ್ಣಿಸಿರುವುದು. **ಸಹಸ್ರ, ಶತ** ಎಂಬ ಶಬ್ದಗಳಿಗೆ ಅನೇಕ ಎಂಬರ್ಥವು.

|| ಸಂಹಿತಾಪಾಠಃ ||

ಪರಿ ಪ್ರಿಯಃ ಕಲಶೇ ದೇವವಾತ ಇಂದ್ರಾಯ ಸೋಮೋ ರಣ್ಯೋ ಮದಾಯ |
ಸಹಸ್ರಧಾರಃ ಶತವಾಜ ಇಂದುರ್ವಾಜೀ ನ ಸಪ್ತಿಃ ಸಮನಾ ಜಿಗಾತಿ || ೯ ||

॥ ಪದಪಾಠಃ ॥

ಪರಿ । ಪ್ರಿಯಃ । ಕಲಶೇ । ದೇವऽವಾತಃ । ಇಂದ್ರಾಯ । ಸೋಮಃ । ರಣ್ಯಃ । ಮದಾಯ ।

ಸಹಸ್ರऽಧಾರಃ । ಶತऽವಾಜಃ । ಇಂದುಃ । ವಾಜೀ । ನ । ಸಪ್ತಿಃ । ಸಮನಾ । ಜಿಗಾತಿ ॥ ೯ ॥

॥ ಸಾಯಣಭಾಷ್ಯಂ ॥

**ಪ್ರಿಯಃ ಪ್ರೀಣಯಿತಾ ಅತ ಏವ ದೇವವಾತೋ ದೇವೈರಭಿಗತೋ ರಣ್ಯೋ ರಮಣೀಯಃ ಸೋಮ ಇಂದ್ರಾಯೇಂದ್ರಸ್ಯ ಮದಾಯ ಮದಾರ್ಥಂ ಕಲಶೇ ದ್ರೋಣಾಭಿಧಾನೇ ಪರಿ ಜಿಗಾತಿ । ಪರಿಗಚ್ಛತಿ । ಕೀದೃಶಃ । ಸಹಸ್ರಧಾರೋ ಬಹುವಿಧಧಾರೋಪೇತಃ ಶತವಾಜೋ ಬಹುಬಲ ಇಂದುಃ ಪಾತ್ರೇಷು ಕ್ಷರನ್ । ತತ್ರ ದೃಷ್ಟಾಂತಃ । ವಾಜೀ ನ ಯಥಾ ವಾಜೀ ಬಲವಾನ್ ಸಪ್ತಿರಶ್ವಃ ಸಮನಾ । ಸಂಗ್ರಾಮನಾಮೈತತ್ ॥ ಸಮ ಸ್ಮನ ಅನ್ಯೈಕ್ಲವ್ಯೇ ॥ ಸಮಂತಿ ಧೃಷ್ಣಾ ಭವಂತಿ ಯೋದ್ಧಾರೋऽತ್ರೇತಿ। ತಸ್ಮಿನ್ಸಂಗ್ರಾಮೇ ಯಥಾಶ್ವೋ ಜಿಗಾತಿ ಗಚ್ಛತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಪ್ರಿಯಃ**—ಪ್ರೀತಿಕಾರಕನೂ । **ದೇವವಾತಃ**—ದೇವತೆಗಳಿಂದ ಸುತ್ತುವರೆಯಲ್ಪಟ್ಟವನೂ । **ರಣ್ಯಃ**—ರಮಣೀಯನೂ । **ಸಹಸ್ರಧಾರಃ**—ಅನೇಕ ಧಾರಾರೂಪನೂ । **ಶತವಾಜಃ**—ಬಹುವಿಧವಾದ ಶಕ್ತಿಯುಳ್ಳವನೂ । **ಇಂದುಃ**—ಪ್ರವಾಹಾತ್ಮಕನೂ ಆದ । **ಸೋಮಃ**—ಸೋಮನು । **ಇಂದ್ರಾಯ**—ಇಂದ್ರನ । **ಮದಾಯ**—ಹರ್ಷಕ್ಕಾಗಿ । **ಸಮನಾ**—ಸಂಗ್ರಾಮದಲ್ಲಿ । **ವಾಜೀ**—ಬಲಶಾಲಿಯಾದ । **ಸಪ್ತಿಃ ನ**—ಅಶ್ವದಂತೆ । **ಕಲಶೇ**—ದ್ರೋಣಕಲಶದಲ್ಲಿ । **ಪರಿ ಜಿಗಾತಿ**—ಸುತ್ತುವರಿಯುತ್ತಾನೆ.

॥ ಭಾವಾರ್ಥ ॥

ಪ್ರೀತಿಕಾರಕನೂ, ದೇವತೆಗಳಿಂದ ಸುತ್ತುವರೆಯಲ್ಪಟ್ಟವನೂ, ರಮಣೀಯನೂ, ಅನೇಕಧಾರಾರೂಪನೂ, ಬಹುವಿಧವಾದ ಶಕ್ತಿಯುಳ್ಳವನೂ ಪ್ರವಾಹಾತ್ಮಕನೂ ಆದ ಸೋಮನು ಇಂದ್ರನ ಹರ್ಷಕ್ಕಾಗಿ, ಯುದ್ಧದಲ್ಲಿ ಬಲಶಾಲಿಯಾದ ಅಶ್ವವು ಸಂಚರಿಸುವಂತೆ ದ್ರೋಣಕಲಶದಲ್ಲಿ ಸುತ್ತುವರಿಯುತ್ತಾನೆ.

## English Translation.

The pleasing delightful Soma approached by gods (proceeds) to the pitcher to exhilarate Indra ; Indu the thousand-streamed and vigorous proceeds like a strong horse to battle.

ವಿಶೇಷ ವಿಷಯಗಳು

**ಇಂದ್ರಾಯ ಮದಾಯ ಸೋಮಃ ಕಲಶೇ ಪರಿ ಜಿಗಾತಿ**—ಇಂದ್ರನನ್ನು ತೃಪ್ತಿ ಅಥವಾ ಹರ್ಷಪಡಿಸುವುದಕ್ಕಾಗಿ ಸೋಮರಸವು ಕಲಶಪಾತ್ರೆಯಲ್ಲಿ ಹೋಗಿ ಸೇರುವುದು. ಸೋಮವನ್ನು ಕಲ್ಲುಗಳಿಂದ ಜಜ್ಜಿ ರಸವನ್ನು

ಹಿಂಡುವಾಗಲೂ, ಆ ರಸವನ್ನು ಪವಿತ್ರವೆಂಬ ಉಣ್ಣೆಯ ನಾರುಗಳಿಂದ ಆಚ್ಛಾದಿತವಾದ ಪವಿತ್ರವೆಂಬ ಶೋಧನ ಪಾತ್ರೆಗಳಲ್ಲಿ ಶೋಧಿಸುವಾಗಲೂ "ಇಂದ್ರನ ಪ್ರೀತ್ಯರ್ಥವಾಗಿ ಪ್ರವಹಿಸು" ಎಂದು ಋಷಿಗಳು ಸೋಮನನ್ನು ಪ್ರಾರ್ಥಿಸುವುದು ಅನೇಕಕಡೆ ಉಕ್ತವಾಗಿದೆ. ಸೋಮಪಾನಮಾಡುವ ದೇವತೆಗಳು ಅನೇಕರಿದ್ದರೂ ಸೋಮಪಾನ ದಲ್ಲಿ ಇಂದ್ರನಿಗೆ ಆಸಕ್ತಿ ಹೆಚ್ಚಾಗಿರುವುದರಿಂದ ಇಂದ್ರನ ಪಾನಾರ್ಥವಾಗಿ ಅಥವಾ ಇಂದ್ರನ ಹರ್ಷಾರ್ಥವಾಗಿ ಎಂದು ಹೇಳುವುದಕ್ಕೆ ರೂಢಿಯು. ಇಂದ್ರನಿಗೆ ಸೋಮಪಾನದಲ್ಲಿರುವ ಆಸಕ್ತಿಯನ್ನು ನಾವು ಈ ಭಾಗದ ಸೂಕ್ತದ ಪೀಠಿಕೆ ಯಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

**ಸಮನಾ ವಾಜೀ ಸಪ್ತಿಃ ನ**—ಬಲಶಾಲಿಯಾದ ಅಶ್ವವು ಯುದ್ಧಭೂಮಿಯಲ್ಲಿ ಒಂದುಕಡೆ ಸುಮ್ಮನೆ ನಿಲ್ಲದೆ ವೇಗವಾಗಿ ಇಲ್ಲಿಂದಲ್ಲಿಗೆ ರಥಿಕನ ಇಷ್ಟದಂತೆ ಯಾವ ರೀತಿ ಸಂಚರಿಸುವುದೋ ಅದರಂತೆ ಸೋಮರಸವು ವೇಗವಾಗಿ ಹರಿಯುತ್ತಾ ದ್ರೋಣಕಲಶದಲ್ಲಿ ಹೋಗಿ ಸೇರುತ್ತದೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

**ಸ ಪೂರ್ವ್ಯೋ ವಸುವಿಜ್ಜಾಯಮಾನೋ ಮೃಜಾನೋ ಅಪ್ಸು ದುದುಹಾನೋ ಅದ್ರೌ ।**
**ಅಭಿಶಸ್ತಿಪಾ ಭುವನಸ್ಯ ರಾಜಾ ವಿದದ್ಗಾತುಂ ಬ್ರಹ್ಮಣೇ ಪೂಯಮಾನಃ॥೧೦॥**

|| ಪದಪಾಠಃ ||

**ಸಃ । ಪೂರ್ವ್ಯಃ । ವಸುಽವಿತ್ । ಜಾಯಮಾನಃ । ಮೃಜಾನಃ । ಅಪ್ಽಸು । ದುದುಹಾನಃ । ಅದ್ರೌ ।**
**ಅಭಿಶಸ್ತಿಽಪಾಃ । ಭುವನಸ್ಯ । ರಾಜಾ । ವಿದತ್ । ಗಾತುಂ । ಬ್ರಹ್ಮಣೇ । ಪೂಯಮಾನಃ ॥ ೧೦ ॥**

|| ಸಾಯಣಭಾಷ್ಯಂ ||

**ಪೂರ್ವ್ಯಃ ಪುರಾಣೋ ಯದ್ವಾ ಪೂರ್ವೈಃ ಕೃತೋಽಭಿಷುತೋ ವಸುವಿದ್ಧನಾನಾಂ ಲಂಭಕೋ ಜಾಯಮಾನೋಽಪ್ಸು ವಸತೀವರ್ಯಾಖ್ಯೇಷೂದಕೇಷು ಮೃಜಾನೋ ಮೃಜ್ಯಮಾನೋಽದ್ರಾವಭಿಷವ- ಗ್ರಾವಣಿ ದುದುಹಾನೋ ದುಹ್ಯಮಾನೋಽಭಿಶಸ್ತಿಪಾಃ। ಅಭಿತಃ ಶಸ್ತಿರ್ಹಿಂಸಾ ಯೇಷಾಂ ತೇಽಭಿಶಸ್ತಯಃ ಶತ್ರವಃ । ತೇಭ್ಯಃ ಪರಿರಕ್ಷಕೋ ಭುವನಸ್ಯ ಭೂತಜಾತಸ್ಯ ರಾಜಾ ಸ್ವಾಮೀ ಏವಂವಿಧಃ ಸ ತಾದೃಶಃ ಸೋಮೋ ಬ್ರಹ್ಮಣೇ ಕರ್ಮಾರ್ಥಂ ಪೂಯಮಾನಃ ಸನ್ ಗಾತುಂ ಮಾರ್ಗಂ ಸಮೀಚೀನಂ ವಿದತ್ । ಯಜಮಾನೇಭ್ಯಃ ಪ್ರಯಚ್ಛತಿ ॥**

|| ಪ್ರತಿಪದಾರ್ಥ ||

**ಪೂರ್ವ್ಯಃ**—ಪುರಾತನನೂ । **ವಸುವಿತ್**—ಧನಪ್ರಾಪಕನೂ । **ಜಾಯಮಾನಃ**—ಉತ್ಪನ್ನನಾಗು ವಾಗಲೇ । **ಅಪ್ಸು**—ಉದಕಗಳಲ್ಲಿ । **ಮೃಜಾನಃ**—ಶುದ್ಧಿಯನ್ನು ಹೊಂದುವವನೂ । **ಅದ್ರೌ**—ಹಿಂಡುವ

ಕಲ್ಲುಗಳಿಂದ । **ದುದುಹಾನಃ**—ಜಜ್ಜಿ ಹಿಂಡಲ್ಪಡುವವನೂ । **ಅಭಿಶಸ್ತಿಪಾಃ**—ಶತ್ರುಗಳಿಂದ ಯಜಮಾನರನ್ನು ರಕ್ಷಿಸುವವನೂ । **ಭುವನಸ್ಯ**—ಸಕಲ ಭೂತಗಳಿಗೂ । **ರಾಜಾ**—ಸ್ವಾಮಿಯೂ ಆದ । **ಸಃ**—ಸೋಮದೇವನು । **ಬ್ರಹ್ಮಣೇ**—ಯಜ್ಞಕರ್ಮಾರ್ಥವಾಗಿ । **ಪೂಯಮಾನಃ**—ಹಿಂಡಲ್ಪಟ್ಟು । **ಗಾತುಂ**—ಉತ್ತಮವಾದ ಮಾರ್ಗವನ್ನು । **ವಿದತ್**—ಯಜಮಾನನಿಗೆ ತಿಳಿಯಪಡಿಸುತ್ತಾನೆ.

॥ ಭಾವಾರ್ಥ ॥

ಪುರಾತನನೂ, ಧನಪ್ರಾಪಕನೂ, ಉತ್ಪನ್ನನಾಗುವಾಗಲೇ ಉದಕಗಳಲ್ಲಿ ಶುದ್ಧಿಯನ್ನು ಹೊಂದುವವನೂ, ಹಿಂಡುವ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಡುವವನೂ, ಶತ್ರುಗಳಿಂದ ಯಜಮಾನರನ್ನು ರಕ್ಷಿಸುವವನೂ, ಸಕಲ ಭೂತಗಳಿಗೂ ಪ್ರಭುವೂ ಆದ ಸೋಮದೇವನು ಯಜ್ಞಕರ್ಮಾರ್ಥವಾಗಿ ಹಿಂಡಲ್ಪಟ್ಟು ಯಜಮಾನನಿಗೆ ಸನ್ಮಾರ್ಗವನ್ನು ತಿಳಿಸುತ್ತಾನೆ.

English Translation

The ancient (Soma) the finder of treasure as soon as generated, cleansed in the waters milkd on the stone, the defender against enemies, the sovereign of the world, purified for the sacrifice, shows (the worshipper) the right way.

॥ ವಿಶೇಷವಿಷಯಗಳು ॥

**ಪೂರ್ವ್ಯಃ**—ಪುರಾತನನು, ಬಹುಕಾಲದಿಂದಲೂ ಪ್ರಸಿದ್ಧನಾದವನು; ಅಥವಾ ನಮಗಿಂತಲೂ ಹಿಂದಿನವರಾದ ಋಷಿಗಳಿಂದ ಹಿಂಡಲ್ಪಟ್ಟವನು. ಹಿಂದಿನವರೂ ನಮ್ಮಂತೆಯೇ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ, ಸೋಮರಸವನ್ನು ಹಿಂಡಿ ತೆಗೆದು ಯಜ್ಞಗಳಲ್ಲಿ ದೇವತೆಗಳಿಗೆ ಅರ್ಪಿಸುತ್ತಿದ್ದರು ಎಂದಭಿಪ್ರಾಯವು.

**ವಸುವಿತ್—ಧನಾನಾಂ ಲಂಭಕಃ ।** ಧನಪ್ರಾಪಕನು. ಎಂದರೆ ಸೋಮಪಾನದಿಂದ ಉತ್ಸಾಹವನ್ನು ಹೊಂದಿ, ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ, ಅವರಲ್ಲಿರುವ ಧನಾದಿಗಳನ್ನು ಹೊಂದುವುದಕ್ಕೆ ಸೋಮಪಾನವೇ ಕಾರಣವಾದ್ದರಿಂದ ಸೋಮನು ಧನಪ್ರಾಪಕನು ಎಂದು ಹೇಳಿದೆ.

**ಜಾಯಮಾನಃ ಮೃಜಾನಃ ಅಪ್ಸು**—ಹುಟ್ಟಿದ ಕೂಡಲೇ ಎಂದರೆ ಲತೆಗಳಿಂದ ರಸವನ್ನು ಹಿಂಡಿ ತೆಗದ ಕೂಡಲೇ ವಸತೀವರೀ ಮೊದಲಾದ ಉದಕಗಳಲ್ಲಿ ಶೋಧಿಸುವರು. ಸೋಮರಸವನ್ನು ಮಂತ್ರಗಳಿಂದ ಸಂಸ್ಕಾರ ಮಾಡುವಾಗ ವಸತೀವರೀ ಎಂಬ ಪಾತ್ರೆಗಳಲ್ಲಿರುವ ಉದಕವನ್ನು ಮಿಶ್ರಮಾಡುವರು. ಆದ್ದರಿಂದ ವಸತೀವರೀ ಉದಕಗಳಲ್ಲಿ ಶುದ್ಧಿಹೊಂದುವವನು ಎಂದು ಇಲ್ಲಿ ಹೇಳಿದೆ.

**ದುದುಹಾನೋ ಅದ್ರೌ**—ಅದ್ರಿ ಎಂದರೆ, ಸೋಮಲತೆಗಳನ್ನು ಜಜ್ಜುವ ಕಲ್ಲು. ಇದಕ್ಕೆ ಗ್ರಾವಾ ಎಂದೂ ಹೆಸರು. ಹಸುವಿನಿಂದ ಹಾಲನ್ನು ಕರೆಯುವಂತೆ, ಕಲ್ಲುಗಳಿಂದ ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆಯುವುದನ್ನು ಇಲ್ಲಿ ಹಾಲು ಕರೆಯುವುದಕ್ಕೆ ಹೋಲಿಸಿದೆ.

**ಅಭಿಶಸ್ತಿಪಾಃ—ಅಭಿತಃ ಶಸ್ತಿರ್ಹಿಂಸಾ ಯೇಷಾಂತೇಽಭಿಶಸ್ತಯಃ ಶತ್ರವಃ ತೇಭ್ಯಃ ಪರಿರಕ್ಷಕಃ ।** ನಮ್ಮನ್ನು ಸುತ್ತಲೂ ಮುತ್ತಿ ಹಿಂಸಿಸುವವರಿಗೆ ಅಭಿಶಸ್ತಯಃ ಎಂದರೆ ಶತ್ರುಗಳು ಎಂದು ಹೆಸರು. ಇಂತಹ

ಶತ್ರುಗಳಿಂದ ನಮ್ಮನ್ನು ಕಾಪಾಡುವವನಾದ್ದರಿಂದ ಸೋಮನಿಗೆ ಅಭಿಶಸ್ತಿಪಾಃ ಎಂದು ಹೆಸರು. ಸೋಮಪಾನ ಮಾಡುವುದರಿಂದ ಶಕ್ತಿಯು ಇಮ್ಮಡಿಯಾಗಿ ಉತ್ಸಾಹವು ಹೆಚ್ಚಿ ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ಸೋಮವು ಸಹಾಯಕವಾಗುವುದರಿಂದ ಸೋಮನು ಶತ್ರುಗಳಿಂದ ನಮ್ಮನ್ನು ರಕ್ಷಿಸುವನು ಎಂದು ಪ್ರಕಾರಾಂತವಾಗಿ ಋಷಿಯು ವರ್ಣಿಸಿದಾನೆ.

**ಭುವನಸ್ಯ ರಾಜಾ—ಭೂತಜಾತಸ್ಯ ರಾಜಾ ಸ್ವಾಮೀ ।** ಉತ್ಪನ್ನವಾದ ಸಕಲ ಪ್ರಾಣಿಗಳಿಗೂ ಅಥವಾ ಓಷಧಿ ವನಸ್ಪತಿ ಮೊದಲಾದ ಸಸ್ಯವರ್ಗಗಳಿಗೂ ಪ್ರಭುವಾದ್ದರಿಂದ ಸೋಮನು ರಾಜಾ—ಪ್ರಭು ಎಂಬ ಸಂಜ್ಞೆಯಿಂದ ಕರೆಯಲ್ಪಡುವನು. ಸೋಮ ಓಷಧೀನಾಂ । ಸೋಮೋ ವನಸ್ಪತೀನಾಂ (ಅಧಿಪತಿಃ) ಎಂದು ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು.

**ಅದ್ರೌ**—ಸೋಮರಸವನ್ನು ಹಿಂಡುವ ಕಲ್ಲುಗಳು ಅಥವಾ ಅಂತಹ ಕಲ್ಲುಗಳನ್ನು ಹಿಡಿದಿರುವ ಯಜಮಾನರು ಎಂದು ಅರ್ಥಮಾಡಿದೆ ಸೋಮರಸವನ್ನು ಹಿಂಡುವ ಸಾಧನವೆಂಬರ್ಥದಲ್ಲಿ **ಅದ್ರಿ** ಶಬ್ದಕ್ಕೂ ಗ್ರಾವ ಶಬ್ದಕ್ಕೂ ಇರತಕ್ಕ ವ್ಯತ್ಯಾಸವನ್ನು ತೋರಿಸಿ ಋ. ಸಂ. ಭಾಗ ೧೧ ಪುಟ 4–5 ಗಳಲ್ಲಿ ತಿಳಿಸಿದೆ.

ಈ ಪದಕ್ಕೆ ರಸವನ್ನು ಹಿಂಡುವುದು ಅಥವಾ ಅದರ ಸಾಧನ ಎಂಬರ್ಥವು ಮಾತ್ರವಲ್ಲದೇ ಇನ್ನೂ ಇತರ ಅರ್ಥಗಳಲ್ಲೂ ಈ ಪದದ ಪ್ರಯೋಗವಿದೆ.

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**

(ಋ ಸಂ. ೫–೫೨–೯)

ಇತ್ಯಾದಿ ಋಕ್ಕುಗಳಲ್ಲಿ **ಪರ್ವತವೆಂದೂ,**

**ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।**
**ಆ ಶಾಸತೇ ಪ್ರತಿ ಹರ್ಯಂತ್ಯುಕ್ಥೇಮಾ ಹರೀ ವಹತಸ್ತಾ ನೋ ಅಚ್ಛ ॥**

(ಋ. ಸಂ. ೧– ೬೫–೪)

ಎಂಬ ಋಕ್ಕಿನಲ್ಲಿ **ಶತ್ರೂಣಾಂ ಭಕ್ಷಕೋ ವಜ್ರಃ ।** ಶತ್ರುನಾಶಕವಾದ ವಜ್ರಾಯುಧವೆಂದೂ,

**ಇಂದ್ರಸ್ಯಾಂಗಿರಸಾಂ ಚೇಷ್ಟೌ ವಿದತ್ಸರಮಾ ತನಯಾಯ ಧಾಸಿಂ ।**
**ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ॥**

(ಋ. ಸಂ. ೧–೬೨–೩)

ಇತ್ಯಾದಿ ಋಕ್ಕುಗಳಲ್ಲಿ **ಅಸುರನೆಂದೂ,**

**ಪ್ರ ಯದ್ರಥೇಷು ಪೃಷತೀರಯುಗ್ಧ್ವಂ ವಾಜೇ ಅದ್ರಿಂ ಮರುತೋ ರಂಹಯಂತಃ ।**
**ಉತಾರುಷಸ್ಯ ವಿ ಷ್ಯಂತಿ ಧಾರಾಶ್ಚರ್ಮೇವೋದಭಿರ್ವ್ಯುಂದಂತಿ ಭೂಮ ॥**

(ಋ. ಸಂ. ೧–೮೫–೫)

ಎಂಬಲ್ಲಿ **ಮೇಘ** ವೆಂದೂ,

**ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।**
**ಉಪ ಧ್ರಜಂತಮದ್ರಯೋ ವಿದನ್ನಿತ್ ॥**

(ಋ. ಸಂ. ೧–೧೪೯–೧)

ಇತ್ಯಾದಿ ಕಡೆಗಳಲ್ಲಿ **ಅದ್ರಿಗಳುಳ್ಳ** ಎಂದರೆ ಹಿಂಡುವ ಕಲ್ಲುಗಳುಳ್ಳ ಯಜಮಾನರೆಂದೂ ಅನೇಕಾರ್ಥಗಳಿವೆ.

ಅದ್ರಿ ಶಬ್ದಕ್ಕೆ ಹೀಗೆ ವಜ್ರಾಯುಧ, ರಾಕ್ಷಸ, ಕಲ್ಲು, ಪರ್ವತ, ಮೇಘ ಇತ್ಯಾದ್ಯರ್ಥಗಳಾಗುವುದಕ್ಕೆ ನಿರುಕ್ತಕಾರರು ನಿರ್ವಚನಗಳನ್ನು ಈರೀತಿ ತೋರಿಸಿದ್ದಾರೆ.

**ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ।**

(ನಿ. ೪-೪)

ಸೀಳು ಎಂದರ್ಥವನ್ನು ಕೊಡತಕ್ಕ ಧೃ ಧಾತುವಿನಿಂದಾಗಲೀ ತಿನ್ನು ಎಂದರ್ಥವನ್ನು ಕೊಡುವ ಅದ್ ಧಾತುವಿನಿಂದಾಗಲೀ ಅದ್ರಿ ಶಬ್ದವು ನಿಷ್ಪನ್ನವಾಗಿದೆ. ಪರ್ವತಾದಿಗಳನ್ನು ಸೀಳುವುದರಿಂದ ವಜ್ರಾಯುಧಕ್ಕೆ ಅದ್ರಿಯೆಂದು ಹೆಸರು. ಇದರಂತೆಯೇ ಭಕ್ಷಕಃ ವಜ್ರಃ ಎಂದು ೧-೧೬೭-೪ ಇತ್ಯಾದಿ ಋಕ್ಕುಗಳಲ್ಲಿ ಅದ್ರಿ ಶಬ್ದದ ವಿವರಣೆಯಿದೆ ಮತ್ತು ಅತ್ತಾರಂ, ಅಸುರಂ, ಭಕ್ಷಕಂ ಪಣಿಂ ಎಂದೂ ಸಹ ಅರ್ಥಮಾಡಿದೆ. ಈ ವಿವರಣೆಯನ್ನು ಕೊಡುವಾಗ ನಿರುಕ್ತಕಾರರು,

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।**
**ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥**

(ಋ. ಸಂ. ೫-೩೯ ೧)

ಎಂಬ ಋಕ್ಕನ್ನುದಹರಿಸಿ ಅದ್ರಿವಃ ಎಂಬುದಕ್ಕೆ ವಜ್ರವನ್ ಇಂದ್ರ ಎಂಬ ಅರ್ಥವು ಹೇಗೆ ಸಾಧ್ಯವಾಗುವುದೆಂದು ತೋರಿಸಿದ್ದಾರೆ. ಹೀಗೆ ಅದ್ರಿ ಶಬ್ದದ ಮೂಲಧಾತುವು ಅಥವಾ ಧಾತುಗಳು ಸಂದರ್ಭಾನುಸಾರವಾದ ನಿಷ್ಪತ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದರಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ ಸೋಮರಸವನ್ನು ಹಿಂಡುವ ಕಲ್ಲುಗಳು ಎಂದು ಅರ್ಥಮಾಡಿದೆ.

॥ ಸಂಹಿತಾಪಾಠಃ ॥

**ತ್ವಯಾ ಹಿ ನಃ ಪಿತರಃ ಸೋಮ ಪೂರ್ವೇ ಕರ್ಮಾಣಿ ಚಕ್ರುಃ ಪವಮಾನ ಧೀರಾಃ ।**
**ವನ್ವನ್ನವಾತಃ ಪರಿಧೀಁರಪೋರ್ಣು ವೀರೇಭಿರಶ್ವೈರ್ಮಘವಾ ಭವಾ ನಃ ॥**

॥ ಪದಪಾಠಃ ॥

ತ್ವಯಾ । ಹಿ । ನಃ । ಪಿತರಃ । ಸೋಮ । ಪೂರ್ವೇ । ಕರ್ಮಾಣಿ । ಚಕ್ರುಃ । ಪವಮಾನ । ಧೀರಾಃ ।
ವನ್ವನ್ । ಅವಾತಃ । ಪರಿಧೀನ್ । ಅಪ । ಊರ್ಣು । ವೀರೇಭಿಃ । ಅಶ್ವೈಃ । ಮಘವಾ । ಭವ । ನಃ ॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ಪಿತರಃ ಸೋಮವಂತ ಇತ್ಯಸ್ಯ ದ್ವಿತೀಯಾನುವಾಕ್ಯಾ ತ್ವಯಾ ಹಿ ನಃ ಪಿತರ ಇತ್ಯೇಷಾ । ಸೂತ್ರಿತಂ ಚ । ಪಿತರೋಽಗ್ನಿಷ್ವಾತ್ತಾ ಯಮ ಉದೀರತಾಮವರ ಉತ್ಪರಾಸಸ್ತ್ವಯಾ ಹಿ ನಃ ಪಿತರಃ ಸೋಮ ಪೂರ್ವೇ ॥ ಆ. ೨-೧೯ । ಇತಿ ॥

ಹೇ ಪವಮಾನ ಪೂಯಮಾನ ಸೋಮ ಧೀರಾಃ ಕರ್ಮಣಿ ಕುಶಲಾಃ ಪ್ರಾಜ್ಞಾ ನೋಽಸ್ಮಾಕಂ ಪಿತರಃ ಪೂರ್ವೇ ಪುರಾತನಾ ಅಂಗಿರಸಸ್ತ್ವಯಾ । ಹಿರವಧಾರಣೇ । ತ್ವಯಾ ಸಹಾಯೇನೈವ ಕರ್ಮಾಣ್ಯ-ಗ್ನಿಷ್ಟೋಮಾದೀನಿ ಚಕ್ರುಃ । ಕೃತವಂತಃ । ಕಿಂಚ ವನ್ವನ್ ಸ್ತೋತೄನ್ಸಂಭಜನ್ । ಯದ್ವಾ । ವನತಿ-ರ್ಹಿಂಸಾರ್ಥಃ । ಶತ್ರೂನ್ಹಿಂಸನ್ । ಅವಾತಸ್ತೈರಭಿಗತಸ್ತ್ವಂ ಪರಿಧೀನ್ । ಪರಿಧೀಯತೆ ಏಭಿಃ ಸರ್ವಮಿತಿ ಪರಿಧಯೋ ರಾಕ್ಷಸಾಃ । ತಾನಪೋರ್ಣು । ಅಪೋರ್ಣುಹಿ । ಅಪಚ್ಛಾದಯ । ಜಹೀತಿ ಯಾವತ್ ॥ ಊರ್ಣೋತೇರ್ಲೋಟಿ ಛಾಂದಸೋ ಹೇರ್ಲುಕ್ ॥ ಏತಾದೃಶಸ್ತ್ವಂ ನೋಽಸ್ಮಾಕಂ ಪುತ್ರಾದಿಯುಕ್ತಂ ಧನಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪವಮಾನ**—ಪವಮಾನಸಂಜ್ಞಕನಾದ । **ಸೋಮ**—ಎಲೈ ಸೋಮದೇವನೇ । **ಧೀರಾಃ**—ಕರ್ಮ ಕುಶಲರೂ ಪ್ರಾಜ್ಞರೂ । **ಪೂರ್ವೇ**—ಪ್ರಾಚೀನರೂ ಆದ । **ನಃ ಪಿತರಃ**—ನಮ್ಮ ಪಿತೃಗಳು (ಅಂಗಿರಸ್ಸುಗಳು) । **ತ್ವಯಾ**—ನಿನ್ನ ಸಹಾಯದಿಂದ । **ಕರ್ಮಾಣಿ**—ಯಜ್ಞಕರ್ಮಗಳನ್ನು । **ಚಕ್ರುಃ**—ನೆರವೇರಿಸಿದರು । **ವನ್ವನ್**—ಶತ್ರುಗಳನ್ನು ಹಿಂಸಿಸುತ್ತಲೂ । **ಅವಾತಃ**—ಅವರ ಹಿಂಸೆಗೆ ಒಳಗಾಗದೆಯೂ । **ಪರಿಧೀನ್**—ರಾಕ್ಷಸರನ್ನು । **ಅಪೋರ್ಣು**—ಸೋಲಿಸಿ ಓಡಿಸು । **ನಃ**—ನಮಗೆ ದಾನಮಾಡಲು । **ವೀರೇಭಿಃ**—ವೀರಪುತ್ರ ರೊಡನೆಯೂ । **ಅಶ್ವೈಃ**—ಅಶ್ವಗಳೊಡನೆಯೂ ಕೂಡಿದ । **ಮಘವಾ**—ಧನವಂತನಾಗಿ । **ಭವ**—ಆಗಿರು.

॥ ಭಾವಾರ್ಥ ॥

ಪವಮಾನಸಂಜ್ಞಕನಾದ ಎಲೈ ಸೋಮದೇವನೇ, ಕರ್ಮಕುಶಲರೂ, ಪ್ರಾಜ್ಞರೂ, ಪ್ರಾಚೀನರೂ ಆದ ನಮ್ಮ ಪಿತೃಗಳು ನಿನ್ನ ಸಹಾಯದಿಂದ ಯಜ್ಞಕರ್ಮಗಳನ್ನು ನೆರವೇರಿಸಿದರು. ಶತ್ರುಗಳನ್ನು ಹಿಂಸಿಸುತ್ತಲೂ, ಅವರ ಹಿಂಸೆಗೆ ಒಳಗಾದೆಯೋ, ರಾಕ್ಷಸರನ್ನು ಸೋಲಿಸಿ ಓಡಿಸು. ನಮಗೆ ದಾನಮಾಡಲು ವೀರಪುತ್ರರೊಡನೆಯೂ, ಅಶ್ವಗಳೊಡನೆಯೂ ಕೂಡಿದ ಧನವಂತನಾಗಿ ಆಗಿರು.

English Translation

Soma Pavamana, by you our ancient and wise progenitors performed their religious rites ; harming the foes (yourself) unharmed slay the Rakshasas and be liberal in enriching us with male offspring and horses.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ **ಪಿತರಃ ಸೋಮವಂತಃ** ಎಂಬ ಸೋಮಸಹಿತರಾದ ಪಿತೃದೇವತೆ ಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ತ್ವಯಾ ಹಿ ನಃ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಪಿತರೋಽಗ್ನಿಷ್ವಾತ್ತಾ ಯಮ ಉದೀರತಾಮವರ ಉತ್ಪರಾಸಸ್ತ್ವಯಾ ಹಿ ನಃ ಪಿತರಃ ಸೋಮ ಪೂರ್ವೇ** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

ಪೂರ್ವದಲ್ಲಿ ನಮ್ಮ ಹಿರಿಯರೂ ಪುರಾತನರೂ ಆದ ಅಂಗಿರಸರೇ ಮೊದಲಾದ ಋಷಿಗಳು, ಯಜ್ಞಕರ್ಮ ಗಳಲ್ಲಿ ಕುಶಲರೂ ಬುದ್ಧಿವಂತರೂ ಆಗಿದ್ದರು. ಅವರು ತಾವು ಮಾಡುತ್ತಿದ್ದ ಅಗ್ನಿಷ್ಟೋಮವೇ ಮೊದಲಾದ ಯಜ್ಞ

ಗಳಲ್ಲಿ ನಿನ್ನ (ಸೋಮದೇವನ) ಸಹಾಯದಿಂದ ಕರ್ಮಗಳನ್ನು ಸಾಂಗವಾಗಿಯೂ ವಿಧಿವತ್ತಾಗಿಯೂ ನೆರವೇರಿಸಿ ಕೃತಾರ್ಥರಾದರು. ಅಂತಹ ನೀನು ಈಗ ನಮ್ಮನ್ನು ಸುತ್ತಲೂ ಕಾಡಿ ಹಿಂಸಿಸುತ್ತಿರುವ ಅಥವಾ ನಮ್ಮ ಯಜ್ಞಾದಿಗಳಿಗೆ ವಿಘ್ನವನ್ನುಂಟುಮಾಡುತ್ತಿರುವ ರಾಕ್ಷಸಾದಿಗಳನ್ನು ದೂರಕ್ಕೆ ಓಡಿಸಿ ನಮಗೆ ಪುತ್ರಾದಿಗಳನ್ನೂ ಧನವನ್ನೂ ಕೊಡು ಎಂದು ಸೋಮನನ್ನು ಈ ಋಕ್ಕಿನಲ್ಲಿ ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಯಥಾಪವಥಾ ಮನವೇ ವಯೋಧಾ ಅಮಿತ್ರಹಾ ವರಿವೋವಿದ್ಧವಿಷ್ಮಾನ್ ।
ಏವಾ ಪವಸ್ವ ದ್ರವಿಣಂ ದಧಾನ ಇಂದ್ರೇ ಸಂ ತಿಷ್ಠ ಜನಯಾಯುಧಾನಿ ॥೧೨॥

॥ ಪದಪಾಠಃ ॥

ಯಥಾ । ಅಪವಥಾಃ । ಮನವೇ । ವಯಃऽಧಾಃ । ಅಮಿತ್ರऽಹಾ । ವರಿವಃऽವಿತ್ । ಹವಿಷ್ಮಾನ್ ।
ಏವ । ಪವಸ್ವ । ದ್ರವಿಣಂ । ದಧಾನಃ । ಇಂದ್ರೇ । ಸಂ । ತಿಷ್ಠ । ಜನಯ । ಆಯುಧಾನಿ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸೋಮ ಯಥಾ ಪುರಾ ತ್ವಂ ಮನವೇ ರಾಜ್ಞೇ ವಯೋಧಾ ಅನ್ನಸ್ಯ ಧಾತಾ ತಥಾಮಿತ್ರಹಾ ಶತ್ರೂಣಾಂ ಹಂತಾ ವರಿವೋವಿದ್ಧನಸ್ಯ ಲಂಭಯಿತಾ ಹವಿಷ್ಮಾನ್ ಪುರೋಡಾಶಾದಿಯುಕ್ತಃ ಸನ್ನಪವಥಾಃ ತಸ್ಮೈ ಧನಾದಿಕಂ ಪ್ರದಾತುಂ ಯಥಾಗಚ್ಛಃ ಏವಮಸ್ಮಭ್ಯಮಪಿ ದ್ರವಿಣಂ ಧನಂ ದಧಾನಃ ಪ್ರಯಚ್ಛನ್ ಪವಸ್ವ । ಅಸ್ಮದಭಿಮುಖಮಾಗಚ್ಛ । ಕಿಂಚಾಸ್ಮಾಭಿರ್ದೀಯಮಾನಸ್ತ್ವಮಿಂದ್ರೇ ಸಂ ತಿಷ್ಠ । ಸಮ್ಯಕ್ ತಿಷ್ಠ । ಅಪಿ ಚಾಯುಧಾನಿ ತ್ವದಿಯಾನಿ ಜನಯ । ತಸ್ಮೈ ಪ್ರಕಾಶಯ ॥ ವಾಕ್ಯಭೇದಾದನಿಘಾತಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಯಥಾ**—ಯಾವ ರೀತಿ (ಹಿಂದೆ) । **ಮನವೇ**—ಮನುಸಂಜ್ಞನಾದ ರಾಜನಿಗೆ । **ವಯೋಧಾಃ**—ಅನ್ನದಾತನಾಗಿಯೂ । **ಅಮಿತ್ರಹಾ**—ಶತ್ರುನಾಶಕನಾಗಿಯೂ । **ವರಿವೋವಿತ್**—ಧನಪ್ರಾಪಕನಾಗಿಯೂ । **ಹವಿಷ್ಮಾನ್**—ಪುರೋಡಾಶಾದಿಗಳಿಂದ ಕೂಡಿಯೂ । **ಅಪವಥಾಃ**—ಅವನಲ್ಲಿಗೆ ಹೋದೆಯೋ । **ಏವ**—ಹಾಗೆಯೇ (ನಮಗೂ ಸಹ) । **ದ್ರವಿಣಂ**—ಧನವನ್ನು । **ದಧಾನಃ**—ಕೊಡುವವನಾಗಿ । **ಪವಸ್ವ**—ನಮ್ಮಲ್ಲಿಗೂ ಪ್ರವಹಿಸಿ ಬಾ । **ಇಂದ್ರೇ**—ಇಂದ್ರನಲ್ಲಿ । **ಸಂ ತಿಷ್ಠ**—ಆಶ್ರಯಿಸಿ ನಿಲ್ಲು । **ಆಯುಧಾನಿ**—ನಿನ್ನ ಆಯುಧಗಳನ್ನು । **ಜನಯ**—ಅವನಿಗೆ ಪ್ರಕಾಶಪಡಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಯಾವ ರೀತಿ ಹಿಂದೆ ಮನುಸಂಜ್ಞಕನಾದ ರಾಜನಿಗೆ ನೀನು ಅನ್ನದಾತನಾಗಿಯೂ, ಶತ್ರುನಾಶಕನಾಗಿಯೂ, ಧನಪ್ರಾಪಕನಾಗಿಯೂ, ಪುರೋಡಾಶಾದಿಗಳಿಂದ ಕೂಡಿಯೂ ಅವನಲ್ಲಿಗೆ ಹೋದೆಯೋ,

ಹಾಗೆಯೇ ನಮಗೂ ಸಹ ಧನವನ್ನು ಕೊಡುವವನಾಗಿ ನಮ್ಮಲ್ಲಿಗೂ ಪ್ರವಹಿಸಿ ಬಾ. ಇಂದ್ರನಲ್ಲಿ ಆಶ್ರಯವನ್ನು ಹೊಂದಿ ನಿಲ್ಲು. ನಿನ್ನ ಆಯುಧಗಳನ್ನು ಅವನಿಗೆ ಪ್ರಕಾಶಪಡಿಸು

## English Translation.

As you did flow to Manu possessing food, slaying enemies, acquiring wealth, having oblations, so now flow bringing us riches; abide you in Indra; make manifest (your) weapons.

॥ ವಿಶೇಷವಿಷಯಗಳು ॥

ಮನುವೆಂಬುವನು ಮಾನವಕುಲಕ್ಕೆ ಮೂಲಪುರುಷನೆಂದು ಪರಿಗಣಿಸಲ್ಪಟ್ಟಿರುವ ಒಬ್ಬ ರಾಜರ್ಷಿಯು ಇವನು ಯಜ್ಞಾದಿಕರ್ಮಗಳನ್ನು ವಿಧಿವತ್ತಾಗಿ ಮಾಡುತ್ತಿದ್ದನೆಂದು ಪ್ರತೀತಿ ಇದೆ. ಆದ್ದರಿಂದ ಇತರರು ಮಾಡುವ ಕರ್ಮಗಳಲ್ಲಿ "ಮನುವು ಮಾಡಿದಂತೆ" ಎಂದು ಹೇಳುವುದು ರೂಢಿಯಾಗಿದೆ. ಇಂತಹ ಮನುವಿಗೆ ಯಜ್ಞದಲ್ಲಿ ಸಂತುಷ್ಟನಾದ ನೀನು (ಸೋಮನು) ಅನ್ನವನ್ನೂ ಧನವನ್ನೂ ಒದಗಿಸಿಕೊಟ್ಟು ಅವನ ಶತ್ರುಗಳನ್ನು ಸಂಹರಿಸಿದೆ. ಅದರಂತೆ ಈಗ ನಮಗೂ ಧನಾದಿಗಳನ್ನು ಕೊಟ್ಟು ಕಾಪಾಡುವುದಲ್ಲದೆ ನಾವು ಇಂದ್ರನಿಗೆ ಅರ್ಪಿಸುವ ಸೋಮರಸವು ಇಂದ್ರನ ಉದರದಲ್ಲಿದ್ದು ಅವನಿಗೆ ಹರ್ಷದಾಯಕವಾಗುವಂತೆಯೂ ಶತ್ರುವಧಾರ್ಥವಾಗಿ ಇಂದ್ರನಿಗೆ ನಿನ್ನ ಆಯುಧಗಳನ್ನು (ಇಲ್ಲಿ ಸೋಮಪಾನಜನಿತ ಉತ್ಸಾಹ ಅಥವಾ ಹರ್ಷವೇ ಆಯುಧವೆಂದು ಹೇಳಬಹುದು) ಕೊಡಬೇಕೆಂದೂ ಪ್ರಾರ್ಥಿಸುತ್ತೇವೆ ಎಂದು ಋಷಿಯು ವರ್ಣಿಸಿದಾನೆ.

॥ ಸಂಹಿತಾಪಾಠಃ ॥

**ಪವಸ್ವ ಸೋಮ ಮಧುಮಾँ ಋತಾವಾಪೋ ವಸಾನೋ ಅಧಿ ಸಾನೋ ಅವ್ಯೇ ।**

**ಅವ ದ್ರೋಣಾನಿ ಘೃತವಾಂತಿ ಸೀದ ಮದಿಂತಮೋ ಮತ್ಸರ ಇಂದ್ರಪಾನಃ ॥**

॥ ಪದಪಾಠಃ ॥

ಪವಸ್ವ । ಸೋಮ । ಮಧುಽಮಾನ್ । ಋತಽವಾ । ಅಪಃ । ವಸಾನಃ । ಅಧಿ । ಸಾನೌ । ಅವ್ಯೇ ।

ಅವ । ದ್ರೋಣಾನಿ । ಘೃತಽವಂತಿ । ಸೀದ । ಮದಿನ್ಽತಮಃ । ಮತ್ಸರಃ । ಇಂದ್ರಽಪಾನಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ಮಧುಮಾನ್ಮಧುಕರರಸೋಪೇತ ಋತಾವಾ ಯಜ್ಞವಾನ್ ॥ ಛಂದಸೀವನಿಪಾವಿತಿ ವನಿಬ್ಮತ್ವರ್ಥೀಯಃ ॥ ತಾದೃಶಸ್ತ್ವಮಪೋ ವಸತೀವರೀರೇಕಧನಾಶ್ಚ ವಸಾನಃ ಆಚ್ಛಾದಯನ್ನಧ್ಯಧಿಕಂ

**ಸಾನೌ ಸಮುಚ್ಛ್ರಿತೇಽವ್ಯೇಽವಿಭವೇ ಪವಿತ್ರೇ ಪವಸ್ವ । ಕ್ಷರ । ತತೋ ಮದಿಂತಮೋಽತಿಶಯೇನ ಮದಕರ ಇಂದ್ರಪಾನ ಇಂದ್ರೇಣ ಪಾತವ್ಯೋ ಮತ್ಸರೋ ಮಾದಯಿತಾ ಸೋಮೋ ಘೃತವಂತ್ಯುದಕವತೋ ದ್ರೋಣಾನಿ ದ್ರೋಣಕಲಶಾನವ ಸೀದ । ಅವತಿಷ್ಠಸ್ವ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ಮಧುಮಾನ್**—ಮಾಧುರ್ಯವುಳ್ಳವನೂ । **ಋತಾವಾ**—ಯಜ್ಞವಂತನೂ ಆದ ನೀನು । **ಅಪಃ**—ವಸತೀವರಿಗಳನ್ನು । **ವಸಾನಃ**—ಹೊದ್ದುಕೊಂಡು । **ಸಾನೌ**—ಉನ್ನತವಾದ । **ಅವ್ಯೇ**—ದಶಾಪವಿತ್ರದಲ್ಲಿ । **ಅಧಿ**—ಅಧಿಕವಾಗಿ । **ಪವಸ್ವ**—ಪ್ರವಹಿಸು. । **ಮದಿಂತಮಃ**—ಅಧಿಕವಾದ ಹರ್ಷಕಾರಕನೂ । **ಇಂದ್ರಪಾನಃ**—ಇಂದ್ರನ ಪಾನಕ್ಕೆ ಯೋಗ್ಯನೂ । **ಮತ್ಸರಃ**—ಹರ್ಷಕಾರಕನೂ ಆದ ನೀನು । **ಘೃತವಂತಿ**—ಉದಕದಿಂದ ಪೂರ್ಣವಾದ । **ದ್ರೋಣಾನಿ**—ದ್ರೋಣಕಲಶಗಳನ್ನು । **ಅವಸೀದ**—ಆಶ್ರಯಿಸಿ ಕುಳಿತುಕೊ.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಾಧುರ್ಯವುಳ್ಳವನೂ, ಯಜ್ಞವಂತನೂ ಆದ ನೀನು ವಸತೀವರಿಗಳಿಂದ ಮಿಶ್ರಿತನಾಗಿ, ಉನ್ನತವಾದ ದಶಾಪವಿತ್ರದಲ್ಲಿ ಅಧಿಕವಾಗಿ ಪ್ರವಹಿಸು. ಅಧಿಕವಾದ ಹರ್ಷಕಾರಕನೂ, ಇಂದ್ರನ ಪಾನಕ್ಕೆ ಯೋಗ್ಯನೂ, ಹರ್ಷಕಾರಕನೂ ಆದ ನೀನು ಉದಕದಿಂದ ಪೂರ್ಣವಾದ ದ್ರೋಣಕಲಶಗಳನ್ನು ಆಶ್ರಯಿಸಿ ಕುಳಿತುಕೊ.

## English Translation.

Soma who have exhilarating juice, who are connected with the sacrifice, clothed with water flow upon the elevated fleece; alight upon the water holding pitchers, you who are most exhilarating, intoxicating, the especial beverage of Indra.

॥ ವಿಶೇಷವಿಷಯಗಳು ॥

**ಮಧುಮಾನ್, ಋತಾವಾ**—ಸೋಮರಸವು ಪಾನಮಾಡುವಾಗ ರುಚಿಕರವಾಗಿರುವುದೆಂದು ತಿಳಿಸುವುದಕ್ಕಾಗಿ ರುಚಿಕರವಾದ ಮಧುವಿಗೆ (ಜೇನುತುಪ್ಪಕ್ಕೆ) ಹೋಲಿಸುವುದು ರೂಢಿಯಾಗಿದೆ. ಕೆಲವು ಸಂದರ್ಭಗಳಲ್ಲಿ ಸೋಮ ಶಬ್ದಕ್ಕೆ ಬದಲಾಗಿ ಮಧುಶಬ್ದವೇ ಉಪಯೋಗಿಸಲ್ಪಡುವದು. ಎಂದರೆ, **ಸೋಮಃ, ಸೋಮಸ್ಯ** ಎಂಬ ಶಬ್ದಗಳಿಗೆ ಬದಲಾಗಿ **ಮಧು, ಮಧ್ವಃ** ಎಂಬ ಶಬ್ದಗಳ ಪ್ರಯೋಗವಿರುವುದು. ಈ ಸೋಮರಸವು ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಯಜ್ಞದಲ್ಲಿ ಉಪಯೋಗಿಸಲ್ಪಡುವುದರಿಂದ ಇಲ್ಲಿ **ಋತಾವಾ**—ಯಜ್ಞವಂತನೆಂದು ವರ್ಣಿಸಿದೆ.

**ಅಪಃ ವಸಾನಃ ಅಧಿ ಸಾನೌ ಅವ್ಯೇ ಪವಸ್ವ**—ಇಲ್ಲಿ ಅಪಃ ಎಂದರೆ, ವಸತೀವರೀ ಪಾತ್ರೆಗಳಲ್ಲಿರುವ ಉದಕವು. ಇವುಗಳನ್ನು ಹೊದ್ದುಕೊಂಡು ಎಂದರೆ, ಈ ಉದಕಗಳಿಂದ ಮಿಶ್ರಿತವಾಗಿ ಎಂದರ್ಥವು. ಸೋಮರಸವನ್ನು ಸಂಸ್ಕಾರಮಾಡುವಾಗ ವಸತೀವರೀ ಉದಕಗಳನ್ನು ಮಿಶ್ರಮಾಡುವುದೂ ಒಂದು ವಿಧಿಯು. ಅದನ್ನೇ ಇಲ್ಲಿ **ಅಪಃ ವಸಾನಃ** ಎಂಬ ಶಬ್ದಗಳಿಂದ ವರ್ಣಿಸಿದೆ. ಇಲ್ಲಿ **ಅವ್ಯೇ ಸಾನೌ** ಎಂಬ ಶಬ್ದಗಳಿಗೆ ಶೋಧಿಸುವ ಪಾತ್ರೆಯಾದ

ಪವಿತ್ರದ ಮೇಲೆ ಎಂದರ್ಥವು. **ಅವ್ಯೇ** ಎಂದರೆ **ಅವಿಮಯೇ** ಆಡು ಅಥವಾ ಕುರಿಯ ಸಂಬಂಧವಾದ **ಉಣ್ಣೆಯ** ಮೇಲೆ; ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವಾಗ ಆ ರಸದಲ್ಲಿ ಲತೆಯ ಸಣ್ಣ ಸಣ್ಣ ಚೂರುಗಳೂ ಇತರ ಕಲ್ಮಷವೂ ಸೇರಿ ಪಾನಮಾಡುವುದಕ್ಕೆ ಅಶುದ್ಧವಾಗಿರುವುದು ಆದ್ದರಿಂದ ಆ ವಿಧವಾದ ರಸವನ್ನು ಶೋಧಿಸುವುದಕ್ಕಾಗಿ ಒಂದು ಪಾತ್ರೆಯ ಮೇಲೆ ಕುರಿಯ ತುಬಟವನ್ನು ತೆಳ್ಳಗೆ ಹರಡಿ, ಅದರ ಮೇಲೆ ಈ ರಸವನ್ನು ಸುರಿಯುವುದರಿಂದ ಸಿಪ್ಪೆ ಮೊದಲಾದ ಕಲ್ಮಷಗಳು ಜಾಲರಿಯಂತಿರುವ ತುಬಟದಲ್ಲಿ ನಿಂತುಹೋಗಿ ಸ್ವಚ್ಛವಾದ ರಸ ಮಾತ್ರ ಪಾತ್ರೆಯೊಳಗೆ ಬೀಳುವುದು, ಈ ರೀತಿಯಾಗಿ ಸೋಮರಸವನ್ನು ಶೋಧಿಸುವುದನ್ನು **ಅವ್ಯೇ ವಾರೇ, ಪವಿತ್ರೇ** ಮೊದಲಾದ ಶಬ್ದಗಳಿಂದ ವರ್ಣಿಸುತ್ತಾರೆ. **ಪವಿತ್ರ** ಶಬ್ದಕ್ಕೆ ಶುದ್ಧಿಮಾಡುವ ಅಥವಾ ಶೋಧನೆಮಾಡುವ ಪಾತ್ರೆ ಎಂದರ್ಥವು. **ದಶಾಪವಿತ್ರ**ವೆಂದರೆ ಜಜ್ಜಿದ ಸೋಮಲತೆಗಳನ್ನು ಎರಡು ಕೈಗಳ ಹತ್ತು ಬೆರಳುಗಳಿಂದಲೂ ಹಿಡಿದುಕೊಂಡು ಚೆನ್ನಾಗಿ ಪಾತ್ರೆಯಲ್ಲಿ ಹಿಂಡುವುದು ಅಥವಾ ಎರಡು ಕೈಗಳ ಹತ್ತು ಬೆರಳುಗಳನ್ನೂ ಒಟ್ಟಾಗಿ ಸೇರಿಸಿ ಪ್ರಸರಿಸಿ (ಅಗಲಮಾಡಿ) ಆ ಬೆರಳುಗಳ ಸಂದಿಯಿಂದ ರಸವನ್ನು ಶೋಧಿಸುವುದು. ಹತ್ತು ಬೆರಳುಗಳಿಂದ ಹಿಂಡಿ ಶೋಧಿಸುವುದರಿಂದ ದಶಾಪವಿತ್ರವೆಂದು ಹೆಸರು.

**ದ್ರೋಣಾನಿ**— ಶೋಧಿಸಿದ ಸೋಮರಸವನ್ನು ಶೇಖರಿಸಿಡುವ ಮರದ ಪಾತ್ರೆ. ಸೋಮರಸವನ್ನು ತುಂಬಿಡುವ ಪಾತ್ರೆಗಳು **ದ್ರೋಣಕಲಶ, ಪೂತಭೃತ್, ಆಧವನೀಯ** ಎಂದು ಮೂರುವಿಧವಾಗಿರುವವು. ಇವುಗಳಲ್ಲಿ ದ್ರೋಣ ಕಲಶವೆಂಬುದು ದೊಡ್ಡ ಪಾತ್ರೆ. ಇದರಲ್ಲಿ ಶೋಧಿಸಿದ ಅಥವಾ ಶೋಧಿಸದೇ ಇರುವ ಎರಡುವಿಧವಾದ ಸೋಮರಸಗಳನ್ನೂ ಸಂದರ್ಭಾನುಸಾರ ತುಂಬಿಡುವರು. **ಪೂತಭೃತ್** ಎಂದರೆ ಶೋಧಿಸಿ ಶುದ್ಧವಾಗಿರುವ ಸೋಮರಸವನ್ನು ಮಾತ್ರ ತುಂಬಿಡುವ ಪಾತ್ರೆ. **ಆಧವನೀಯ** ಎಂದರೆ ಯಜ್ಞಗಳಲ್ಲಿ ಸೋಮರಸವನ್ನು ತುಂಬಿ ಹೋಮಮಾಡುವಾಗ ಸಂಸ್ಕರಿಸುವ ಪಾತ್ರೆ. ಇವುಗಳಲ್ಲದೆ ಕೆಲವುಕಡೆ ಚರ್ಮದ ಪಾತ್ರೆಗಳಲ್ಲಿ (ಚೀಲಗಳಲ್ಲಿ) ಸೋಮವನ್ನು ತುಂಬುತ್ತಿದ್ದರೆಂಬ ವರ್ಣನೆಗಳೂ ಇವೆ. ಆದರೆ ಮುಖ್ಯವಾಗಿ ಮೇಲೆ ಹೇಳಿದ ಮೂರುವಿಧ ಪಾತ್ರೆಗಳೇ ವಿಶೇಷ ಬಳಕೆಯಲ್ಲಿದ್ದಂತೆ ಕಾಣುತ್ತದೆ.

|| ಸಂಹಿತಾಪಾಠಃ ||

ವೃಷ್ಟಿಂ ದಿವಃ ಶತಧಾರಃ ಪವಸ್ವ ಸಹಸ್ರಸಾ ವಾಜಯುರ್ದೇವವೀತೌ |
ಸಂ ಸಿಂಧುಭಿಃ ಕಲಶೇ ವಾವಶಾನಃ ಸಮುಸ್ರಿಯಾಭಿಃ ಪ್ರತಿರನ್ನ ಆಯುಃ ||

|| ಪದಪಾಠಃ ||

ವೃಷ್ಟಿಂ | ದಿವಃ | ಶತಽಧಾರಾಃ | ಪವಸ್ವ | ಸಹಸ್ರಽಸಾಃ | ವಾಜಽಯುಃ | ದೇವಽವೀತೌ |
ಸಂ | ಸಿಂಧುಽಭಿಃ | ಕಲಶೇ | ವಾವಶಾನಃ | ಸಂ | ಉಸ್ರಿಯಾಭಿಃ | ಪ್ರಽತಿರನ್ | ನಃ | ಆಯುಃ ||೧೪||

|| ಸಾಯಣಭಾಷ್ಯಂ ||

**ಹೇ ಸೋಮ ಶತಧಾರೋ ಬಹುಧಾರೋಪೇತಸ್ತ್ವಂ ದಿವೋಽಂತರಿಕ್ಷಾದಾದಿತ್ಯಾದ್ವಾ ವೃಷ್ಟಿಂ ಪವಸ್ವ | ಕುರು | ಯದ್ವಾ | ಶತಧಾರೋ ಬಹುಧಾತ್ಮೀಯಧಾರೋಪೇತಸ್ತ್ವಂ ದಿವೋ ದ್ಯೋತಮಾನಾ-**

**ತ್ಪವಿತ್ರಾದ್ವೃಷ್ಟಿಮವಿಚ್ಛಿನ್ನಧಾರಾಂ ಪವಸ್ವ । ಪಾತ್ರೇಷು ಕುರು । ಕೀದೃಶಃ । ದೇವವೀತೌ । ದೇವಾನಾಂ ವೀತಿರ್ಹವಿರ್ಭಕ್ಷಣಂ ಯಸ್ಮಿನ್ ಸ ದೇವವೀತಿರ್ಯಜ್ಞಃ । ತಸ್ಮಿನ್ಸಹಸ್ರಸಾ ಯಜಮಾನಾನಾಂ ಸಹಸ್ರಸ್ಯ ಧನಸ್ಯ ದಾತಾ ವಾಜಯುಸ್ತೇಷಾಮನ್ನಂ ಕಾಮಯಮಾನಸ್ತ್ವಂ ಸಿಂಧುಭಿಃ ಸ್ಯಂದಮಾನಾಭಿರ್ವಸತೀವ-ರೀಭಿಃ ಕಲಶೇ ದ್ರೋಣಾಭಿಧಾನೇ ಸಂಗಚ್ಛಸ್ವ । ತಥಾ ತ್ವಂ ನೋಽಸ್ಮಾಕಮಾಯುರ್ಜೀವನಂ ಪ್ರತಿರನ್ವ-ರ್ಧಯನ್ನುಸ್ರಿಯಾಭಿರ್ಗೋವಿಕಾರೈಃ ಕ್ಷೀರಾದಿಭಿಶ್ಚ ಕಲಶೇ ಸಂಗಚ್ಛಸ್ವ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಶತಧಾರಃ**—ಅನೇಕ ಧಾರೆಗಳುಳ್ಳ ನೀನು । **ದಿವಃ**—ಅಂತರಿಕ್ಷದಿಂದ । **ವೃಷ್ಟಿಂ**—ವೃಷ್ಟಿಯನ್ನು । **ಪವಸ್ವ**—ಸುರಿಸು । **ದೇವವೀತೌ**—ಯಜ್ಞದಲ್ಲಿ । **ಸಹಸ್ರಸಾಃ**—ಅನೇಕ ವಸ್ತುಗಳನ್ನು ದಾನಮಾಡುವವನೂ । **ವಾಜಯುಃ**—ಯಜಮಾನನಿಗೆ ಅನ್ನವನ್ನು ಇಚ್ಛಿಸುವವನೂ ಆದ ನೀನು । **ಸಿಂಧುಭಿಃ**—ಪ್ರವಹಿಸುವ ವಸತೀವರಿಗಳೊಡನೆ । **ಕಲಶೇ**—ದ್ರೋಣಕಲಶದಲ್ಲಿ । **ಸಂ (ಗಚ್ಛಸ್ವ)**—ಸೇರಿಕೊ । **ವಾವಶಾನಃ**—ಯಜ್ಞವನ್ನಪೇಕ್ಷಿಸುವ ನೀನು । **ನಃ**—ನಮ್ಮ । **ಆಯುಃ**—ಜೀವನವನ್ನು । **ಪ್ರತಿರನ್**—ವೃದ್ಧಿಪಡಿಸುತ್ತ । **ಉಸ್ರಿಯಾಭಿಃ**—ಕ್ಷೀರಾದಿಗಳೊಡನೆ । **ಸಂ**—ಸೇರಿಕೋ.

॥ ಭಾವಾರ್ಥ ॥

ಎಲೈ ಸೋಮದೇವನೇ, ಅನೇಕಧಾರೆಗಳುಳ್ಳ ನೀನು ಅಂತರಿಕ್ಷದಿಂದ ವೃಷ್ಟಿಯನ್ನು ಸುರಿಸು. ಯಜ್ಞದಲ್ಲಿ ಅನೇಕ ವಸ್ತುಗಳನ್ನು ದಾನಮಾಡುವವನೂ, ಯಜಮಾನನಿಗೆ ಅನ್ನವನ್ನು ಇಚ್ಛಿಸುವವನೂ ಆದ ನೀನು ಪ್ರವಹಿಸುವ ವಸತೀವರಿಗಳೊಡನೆ ದ್ರೋಣಕಲಶದಲ್ಲಿ ಸೇರಿಕೋ. ಯಜ್ಞವನ್ನಪೇಕ್ಷಿಸುವ ನೀನು ನಮ್ಮ ಜೀವನವನ್ನು ವೃದ್ಧಿಪಡಿಸುತ್ತ ಕ್ಷೀರಾದಿಗಳೊಡನೆ ಸೇರಿಕೊ.

English Translation

(Soma), who flow in a hundred streams, pour rain from the firmament, you who are the giver of hundredfold (wealth), the bestower of food at the banquet of the gods; desirous of (the mixture) combine with the water in the pitchers and with the curds and milk, prolonging our life.

॥ ವಿಶೇಷವಿಷಯಗಳು ॥

**ಶತಧಾರಃ—ಬಹುಧಾರೋಪೇತಃ ।** ಜಜ್ಜಲ್ಪಡುವ ಸೋಮಲತೆಗಳಿಂದ ಅನೇಕ ಕಡೆ ಜಿನುಗಿ ಅಥವಾ ಸ್ರವಿಸಿ ಧಾರಾರೂಪದಿಂದ ಪ್ರವಹಿಸುತ್ತಿರುವ ಎಂದರ್ಥವು.

**ವೃಷ್ಟಿಂ ದಿವಃ ಪವಸ್ವ**—ಅಂತರಿಕ್ಷದಿಂದ ಮಳೆಯನ್ನು ಸುರಿಸು ಎಂದು ಸೋಮನನ್ನು ಪ್ರಾರ್ಥಿಸಲಾಗಿದೆ. ಸೋಮನಿಗೂ ವೃಷ್ಟಿಗೂ ಏನು ಸಂಬಂಧ ? ಸೋಮದೇವನು ವೃಷ್ಟಿಯನ್ನು ಸುರಿಸುವುದು ಹೇಗೆ ? ಎಂದರೆ—**ಯಜ್ಞಾ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥** ಎಂಬಂತೆ ಯಜ್ಞಾದಿಗಳಲ್ಲಿ ಸೋಮ, ಹವಿಸ್ಸು ಮೊದಲಾದುವುಗಳನ್ನು ಆಹುತಿರೂಪದಲ್ಲಿ ಅರ್ಪಿಸಿ ದೇವತೆ

ಗಳನ್ನು ತೃಪ್ತಿಪಡಿಸುವುದರಿಂದ ಈ ಆಹುತಿಗಳು ಆದಿತ್ಯನಿಗೆ ಸೇರಿ ಅವನಿಂದ ವೃಷ್ಟಿಯು ಉಂಟಾಗುವುದು ಎಂದು ಹೇಳಿದೆ. ಆದ್ದರಿಂದ ಸೋಮನು ಪರೋಕ್ಷವಾಗಿ ವೃಷ್ಟಿಗೆ ಕಾರಣನು. ಇದಲ್ಲದೆ ಸೋಮಪಾನದಿಂದ ಇಂದ್ರನಿಗೆ ಹರ್ಷವುಂಟಾಗಿ ಇಂದ್ರನು ಮೇಘಗಳನ್ನು ತನ್ನ ವಜ್ರಾಯುಧದಿಂದ ಪ್ರಹರಿಸಿ ವೃಷ್ಟಿಯನ್ನು ಸುರಿಸುವುದಕ್ಕೆ ಸೋಮನೇ ಪರೋಕ್ಷವಾಗಿ ಕಾರಣನು. ಈ ವಿಧವಾದ ಕಾರಣಗಳಿಂದ ವೃಷ್ಟಿವರ್ಷಣಕ್ಕಾಗಿ ಸೋಮನನ್ನು ಪ್ರಾರ್ಥಿಸಲಾಗಿದೆ.

**ದೇವವೀತೌ— ದೇವಾನಾಂ ವೀತಿರ್ಹವಿರ್ಭಕ್ಷಣಂ ಯಸ್ಮಿನ್ ಸ ದೇವವೀತಿರ್ಯಜ್ಞಃ ।** ವೀತಿ ಎಂದರೆ ಭಕ್ಷಣವು. ಯಜ್ಞದಲ್ಲಿ ದೇವತೆಗಳು ಹವಿರ್ಭಕ್ಷಣಮಾಡುವುದರಿಂದ ಇದಕ್ಕೆ ದೇವವೀತಿ ಎಂದು ಹೆಸರು.

॥ ಸಂಹಿತಾಪಾಠಃ ॥

ಏಷ ಸ್ಯ ಸೋಮೋ ಮತಿಭಿಃ ಪುನಾನೋಽತ್ಯೋ ನ ವಾಜೀ ತರತೀದರಾತೀಃ ।
ಪಯೋ ನ ದುಗ್ಧಮದಿತೇರಿಷಿರಮುರ್ವಿವ ಗಾತುಃ ಸುಯಮೋ ನ
ವೋಳ್ಹಾ ॥ ೧೫ ॥

॥ ಪದಪಾಠಃ ॥

ಏಷಃ । ಸ್ಯಃ । ಸೋಮಃ । ಮತಿಽಭಿಃ । ಪುನಾನಃ । ಅತ್ಯಃ । ನ । ವಾಜೀ । ತರತಿ । ಇತ್ । ಅರಾತೀಃ ।
ಪಯಃ । ನ । ದುಗ್ಧಂ । ಅದಿತೇಃ । ಇಷಿರಂ । ಉರುಽಇವ । ಗಾತುಃ । ಸುಽಯಮಃ । ನ । ವೋಳ್ಹಾ ॥

॥ ಸಾಯಣಭಾಷ್ಯಂ ॥

ಏಷ ಏತಾದೃಶಃ ಸ್ಯ ಸ ಸೋಮೋ ಮತಿಭಿರ್ಮನನಸಾಧನೈಃ ಸ್ತೋತ್ರೈಃ ಪುನಾನಃ ಪೂಯಮಾನೋ ಭವತಿ । ಯಃ ಸೋಮೋಽತ್ಯೋ ನಾತನಶೀಲೋ ವಾಜ್ಯಶ್ವ ಇವ ಸಂಗ್ರಾಮೇಽರಾತೀರರಾತೀಞ್ಛತ್ರೂಂಸ್ತರತಿ । ಇದವಧಾರಣೇ । ತರತ್ಯೇವ ಹಿನಸ್ತ್ಯೇವ ॥ ಯದ್ವೃತ್ತಯೋಗಾದನಿಘಾತಃ ॥ ಕಿಂಚಾದಿತೇಃ । ಗೋನಾಮೈತತ್ । ಅದೀನಾಯಾ ಗೋರಿಷಿರಮನ್ವೇಷಣೀಯಂ ದುಗ್ಧಂ ಪಯೋ ನ ಕ್ಷೀರಂ ಯಥಾ ಪೂತಂ ಭವತಿ ಏವಂ ಸೋಮಃ ಪರಿಶುದ್ಧಃ । ಅಪಿ ಚೋರ್ವಿವ ॥ ಸುಪಾಂ ಸುಲುಗಿತಿ ಸೋರ್ಲುಕ್ ॥ ಉರುರ್ವಿಸ್ತೀರ್ಣೋ ಗಾತುರ್ಮಾರ್ಗ ಇವ ಸರ್ವೈಃ ಸಮಾಶ್ರಯಣೀಯಸ್ತಥಾ ವೋಳ್ಹಾ ಪ್ರೋಢಾಶ್ವಃ ಸುಯಮಃ ಸುಷ್ಠು ನಿಯಂತುಂ ಶಕ್ಯೋ ಯಥಾ ಭವತಿ ತದ್ವದಯಂ ಸೋಮಃ ಸ್ತೋತೃಭಿರ್ನಿಯಂತವ್ಯೋ ಭವತಿ ॥

॥ ಪ್ರತಿಪದಾರ್ಥ ॥

**ಏಷಃ ಸ್ಯಃ ಸೋಮಃ**— ಪ್ರಸಿದ್ಧವಾದ ಈ ಸೋಮನು । **ಮತಿಭಿಃ**— ಸ್ತುತಿಗಳಿಂದ । **ಪುನಾನಃ**— ಶುದ್ಧನಾಗುತ್ತಾನೆ । **ವಾಜೀ**— ಶಕ್ತಿಯುತವಾದ । **ಅತ್ಯೋನ**— ಅಶ್ವದಂತೆ । **ಅರಾತೀಃ**— ಶತ್ರುಗಳನ್ನು ।

**ತರತಿ**— ಜಯಿಸುತ್ತಾನೆ । **ಅದಿತೇಃ**—ಗೋವಿನಿಂದ । **ದುಗ್ಧಂ**—ಕರೆಯಲ್ಪಟ್ಟುದೂ । **ಇಷಿರಂ**—ಅಪೇಕ್ಷಿತವಾದುದೂ ಆದ । **ಪಯಃ ನ**—ಕ್ಷೀರದಂತೆ ಪರಿಶುದ್ಧಿಯನ್ನು ಹೊಂದುತ್ತಾನೆ । **ಉರು**—ವಿಸ್ತೃತವಾದ । **ಗಾತುಃ ನ**—ಮಾರ್ಗದಂತೆ ಅನೇಕರಿಗೆ ಆಶ್ರಯವನ್ನು ಕೊಡುತ್ತಾನೆ । **ವೋಳ್ಹಾ**—ಭಾರವನ್ನು ವಹಿಸುವ ಅಶ್ವದಂತೆ । **ಸುಯಮಃ**— ಉತ್ತಮವಾದ ನಿಯಮಕ್ಕೆ ಒಳಪಡುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧನಾದ ಸೋಮನು ಸ್ತುತಿಗಳಿಂದ ಪರಿಶುದ್ಧನಾಗುತ್ತಾನೆ. ಶಕ್ತಿಯುತವಾದ ಅಶ್ವದಂತೆ ಶತ್ರುಗಳನ್ನು ಜಯಿಸುತ್ತಾನೆ. ಗೋವಿನಿಂದ ಕರೆಯಲ್ಪಟ್ಟುದೂ, ಅಪೇಕ್ಷಿತವಾದುದೂ ಆದ ಕ್ಷೀರದಂತೆ ಪರಿಶುದ್ಧಿಯನ್ನು ಹೊಂದಿರುತ್ತಾನೆ. ವಿಸ್ತೃತವಾದ ಮಾರ್ಗದಂತೆ ಅನೇಕರಿಗೆ ಆಶ್ರಯವನ್ನು ಕೊಡುತ್ತಾನೆ. ಭಾರವನ್ನು ವಹಿಸುವ ಅಶ್ವದಂತೆ ಉತ್ತಮವಾದ ನಿಯಮಕ್ಕೆ ಒಳಪಡುತ್ತಾನೆ.

## English Translation.

This Soma (is) purified with praises, like a strong horse he overthrows (his) foes ; (he is purified) like the strong milk milked from the cow. (flocked to by all) like a broad road, and guided by the praisers) like a well-trained horse of burden.

॥ ವಿಶೇಷವಿಷಯಗಳು ॥

**ಮತಿಭಿಃ ಪುನಾನಃ—ಮನನಸಾಧನೈಃ ಸ್ತೋತ್ರೈಃ ಪೂಯಮಾನಃ ।** ಮತಿ ಎಂದರೆ ಮನಸ್ಸಿನಲ್ಲಿ ಧ್ಯಾನಮಾಡಿ ಪಠಿಸುವ ಸ್ತೋತ್ರ. ಎಂದರೆ ಮನನಾತ್ಮಕವಾದ ಮಂತ್ರಗಳ ಪಠನಪೂರ್ವಕವಾಗಿ ಸಂಸ್ಕರಿಸಲ್ಪಟ್ಟು ಶುದ್ಧವಾದ ಎಂದರ್ಥವು.

**ಅತ್ಯೋ ನ ವಾಜೀ ತರತಿ ಇತ್ ಅರಾತೀಃ**—ವೇಗವಾಗಿ ಸಂಚರಿಸುವ ಸ್ವಭಾವವುಳ್ಳ ಕುದುರೆಯು ಯುದ್ಧಾದಿಗಳಲ್ಲಿ ಶತ್ರುಗಳಮೇಲೆ ಮುನ್ನಾಗಿ ಅವರನ್ನು ಧ್ವಂಸಮಾಡುವಂತೆ ಸೋಮರಸವು ಅದನ್ನು ಪಾನಮಾಡುವವರಲ್ಲಿ ಉತ್ಸಾಹವನ್ನೂ ಹರ್ಷವನ್ನೂ ತುಂಬಿ ಶತ್ರುವಧಕ್ಕೆ ಕಾರಣವಾಗುವುದು.

**ಇತ್ ಏವ ।** ಈ ಶಬ್ದವು ಋಗ್ವೇದದಲ್ಲಿಯೂ ಅಥವಾ ಇತರ ವೇದಗಳಲ್ಲಿಯೂ ಸಹ ಏವ ಎಂಬ ಅವಧಾರಣಾರ್ಥವನ್ನು ಸೂಚಿಸುವುದು. ಕೆಲವು ಸಂದರ್ಭಗಳಲ್ಲಿ ಈ ಶಬ್ದಕ್ಕೆ ಯಾವ ಅರ್ಥವೂ ಇಲ್ಲದೆ ಛಂದಸ್ಸಿನಲ್ಲಿರಬೇಕಾದ ಕ್ಲಿಪ್ತಸಂಖ್ಯೆಯ ಅಕ್ಷರಗಳನ್ನು ಭರ್ತಿಮಾಡುವುದಕ್ಕಾಗಿ ಎಂದರೆ ಪದಪೂರಣಕ್ಕಾಗಿ ಉಪಯೋಗಿಸಲ್ಪಡುವುದು.

**ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ॥**

(ನಿ ೧-೯)

ಎಂದು ಯಾಸ್ಕರು ನಿರ್ವಚನವನ್ನು ಹೇಳಿರುವರು—ಎಂದರೆ – **ಕಂ, ಈಂ, ಇತ್, ಉ** ಎಂಬ ನಿಪಾತಗಳು (ಅವ್ಯಯಗಳು) ಛಂದೋಬದ್ಧವಲ್ಲದ ಗದ್ಯರೂಪವಾದ ಗ್ರಂಥಗಳಲ್ಲಿ ವಾಕ್ಯಪೂರಣಾರ್ಥವಾಗಿಯೂ, ಮಿತಾಕ್ಷರಗ್ರಂಥ

ಗಳಲ್ಲಿ ಎಂದರೆ ನಿರ್ದಿಷ್ಟಸಂಖ್ಯೆಯ ಅಕ್ಷರಗಳನ್ನೊಳಗೊಂಡಿರುವ ಛಂದಸ್ಸುಗಳಲ್ಲಿ ಪಾದಪೂರಣಾರ್ಥವಾಗಿಯೂ ಉಪಯೋಗಿಸಲ್ಪಡುವುವು. ಇಂತಹ ಸಂದರ್ಭಗಳಲ್ಲಿ ಈ ನಿಪಾತಗಳಿಗೆ ನಿರ್ದಿಷ್ಟವಾದ ಯಾವ ಅರ್ಥವೂ ಇರುವುದಿಲ್ಲ ಎಂದು ಹೇಳಿದಾರೆ. ಆದರೂ ಸಂದರ್ಭಾನುಸಾರವಾಗಿ ಈ ಶಬ್ದಗಳಿಗೆ ನಾನಾವಿಧ ಅರ್ಥಗಳನ್ನು ಹೇಳಿರುವುದು ಕಂಡುಬಂದಿದೆ. ಪ್ರಕೃತವಾದ **ಇತ್** ಎಂಬ ಶಬ್ದಕ್ಕೆ **ಏವ** ಎಂಬ ಶಬ್ದದ ಅರ್ಥವೇ ಸಾಧಾರಣವಾಗಿ ಬಳಕೆಯಲ್ಲಿರುವುದು.

|| ಸಂಹಿತಾಪಾಠಃ ||

ಸ್ವಾಯುಧಃ ಸೋತೃಭಿಃ ಪೂಯಮಾನೋಽಭ್ಯರ್ಷ ಗುಹ್ಯಂ ಚಾರು ನಾಮ ।
ಅಭಿ ವಾಜಂ ಸಪ್ತಿರಿವ ಶ್ರವಸ್ಯಾಭಿ ವಾಯುಮಭಿ ಗಾ ದೇವ ಸೋಮ ॥೧೬॥

|| ಪದಪಾಠಃ ||

ಸುಽಆಯುಧಃ । ಸೋತೃಽಭಿಃ । ಪೂಯಮಾನಃ । ಅಭಿ । ಅರ್ಷ । ಗುಹ್ಯಂ । ಚಾರು । ನಾಮ ।
ಅಭಿ । ವಾಜಂ । ಸಪ್ತಿಃಽಇವ । ಶ್ರವಸ್ಯಾ । ಅಭಿ । ವಾಯುಂ । ಅಭಿ । ಗಾಃ । ದೇವ । ಸೋಮ ॥ ೧೬ ॥

|| ಸಾಯಣಭಾಷ್ಯಂ ||

ಸ್ವಾಯುಧಃ ಶೋಭನಾಯುಧೋಪೇತಃ । ಯದ್ವಾ। ಯಜ್ಞೇ ಸ್ಫ್ಯಕಪಾಲಾದೀನಿ ದಶಾಯುಧಾನಿ ಸಂತಿ । ತದ್ವಾನ್ । ಸೋತೃಭಿರಭಿಷುಣ್ವದ್ಭಿಃ ಪೂಯಮಾನಸ್ತ್ವಂ ಗುಹ್ಯಂ ಗುಹಾಯಾಂ ನಿಹಿತಂ ಚಾರು ಕಮನೀಯಂ ನಾಮ ತ್ವದೀಯಂ ರಸಾತ್ಮಕಂ ಶರೀರಂ ಸ್ತುತಿಭಿಃ ಸಹಾಭ್ಯರ್ಷ । ಕಲಶಾದೀನ್ಯಭಿಗಮಯ। ಕಿಂಚ ಸಪ್ತಿರಿವಾಶ್ವ ಇವ ವರ್ತಮಾನಸ್ತ್ವಂ ಶ್ರವಸ್ಯಾ ॥ ಸುಪಾಂ ಸುಲುಗಿತಿ ಸಪ್ತಮ್ಯಾ ಆಜಾದೇಶಃ ॥ ಅಸ್ಮದೀಯಾಯಾಮನ್ನೇಚ್ಛಾಯಾಂ ವಾಜಮನ್ನಮಸ್ಮಭ್ಯಮಭಿಗಮಯ । ಅಪಿ ಚ ಹೇ ದೇವ ಸ್ತೋತವ್ಯ ಹೇ ಸೋಮ ವಾಯುಂ ಪ್ರಾಣಂ ಜೀವನಮಭಿಗಮಯ । ಗಾಃ ಪಶೂಂಶ್ಚಾಸ್ಮಭ್ಯಮಭಿಗಮಯ ॥

|| ಪ್ರತಿಪದಾರ್ಥ ||

**ದೇವ** -- ದೇವತಾತ್ಮನಾದ । **ಸೋಮ** — ಎಲೈ ಸೋಮನೇ । **ಸ್ವಾಯುಧಃ** — ಉತ್ತಮವಾದ ಆಯುಧವುಳ್ಳವನೂ । **ಸೋತೃಭಿಃ** — ಹಿಂಡುವವರಿಂದ । **ಪೂಯಮಾನಃ** — ಶುದ್ಧಿಮಾಡಲ್ಪಡುವವನೂ ಆದ ನೀನು । **ಗುಹ್ಯಂ** — ರಹಸ್ಯವಾಗಿರುವುದೂ । **ಚಾರು** — ಆಕರ್ಷಕವಾದುದೂ । **ನಾಮ** — ರಸಾತ್ಮಕವೂ ಆದ ನಿನ್ನ ಶರೀರವನ್ನು । **ಅಭ್ಯರ್ಷ** — ಪ್ರವಹಿಸುವಂತೆ ಮಾಡು । **ಶ್ರವಸ್ಯಾ** — ನಮಗೆ ಅನ್ನಾಪೇಕ್ಷೆಯಿರುವಾಗ । **ಸಪ್ತಿಃ ಇವ** — ಅಶ್ವದಂತೆ । **ವಾಜಂ** — ಅನ್ನವನ್ನು । **ಅಭಿ** -- ಒದಗಿಸು । **ವಾಯುಂ** — ನಮ್ಮ ಆಯುಸ್ಸನ್ನು । **ಅಭಿ** — ತುಂಬು । **ಗಾಃ** — ಪಶುಗಳನ್ನು । **ಅಭಿ** — ಒದಗಿಸು.

॥ ಭಾವಾರ್ಥ॥

ದೇವತಾತ್ಮನಾದ ಎಲೈ ಸೋಮನೇ, ಉತ್ತಮವಾದ ಆಯುಧವುಳ್ಳವನೂ, ಹಿಂಡುವವರಿಂದ ಶುದ್ಧಿಮಾಡಲ್ಪಡುವವನೂ ಆದ ನೀನು ರಹಸ್ಯವಾಗಿರುವುದೂ, ಆಕರ್ಷಕವಾದುದೂ, ರಸಾತ್ಮಕವೂ ಆದ ನಿನ್ನ ಶರೀರವನ್ನು ಪ್ರವಹಿಸುವಂತೆ ಮಾಡು. ನಮಗೆ ಅಪೇಕ್ಷೆಯಿರುವಾಗ ನಮಗೆ ಅನ್ನವನ್ನು ಒದಗಿಸು ಪಶುಗಳನ್ನು ಒದಗಿಸು. ಆಯುಸ್ಸನ್ನು ವೃದ್ಧಿಪಡಿಸು.

## English Translation.

Well-armed, purified by those who express you, send your concealed desirable from (into the pitchers); like a horse bring us food in our desire for food; divine Soma, bring us life, bring us cattle.

॥ ವಿಶೇಷವಿಷಯಗಳು ॥

**ಸ್ವಾಯುಧಃ— ಶೋಭನಾಯುಧೋಪೇತಃ । ಯದ್ವಾ । ಸ್ಫ್ಯಕಪಾಲಾದೀನಿ ದಶಾಯುಧಾನಿ ಸಂತಿ ತದ್ವಾನ್ । ಸ್ವಾಯುಧಃ**— ಉತ್ತಮವಾದ ಆಯುಧಗಳುಳ್ಳವನು ಎಂಬ ಶಬ್ದವು ಸೋಮನಿಗೆ ವಿಶೇಷಣವಾಗಿದೆ. ಅಥವಾ ಯಜ್ಞದಲ್ಲಿ ಉಪಯೋಗಿಸುವ ಮುಖ್ಯಸಾಮಗ್ರಿಗಳಲ್ಲಿ ಸ್ಫ್ಯಃ ಮೊದಲಾದ ಹತ್ತು ವಸ್ತುಗಳಿಗೆ **ದಶಯಜ್ಞಾಯುಧಾನಿ** ಹತ್ತು ಯಜ್ಞಾಯುಧಗಳೆಂದು ಹೆಸರು ಪ್ರಸಿದ್ಧಿಯಾಗಿದೆ—

> **ಯೋ ವೈ ದಶ ಯಜ್ಞಾಯುಧಾನಿ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾ ಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ ಯ ಏವಂ ವೇದ ಮುಖತೋಽಸ್ಯ ಯಜ್ಞಃ ಕಲ್ಪತೇ ॥** (ತೈ ಸಂ. ೧-೬-೮-೨,೩)

ಎಂದು ಕೃಷ್ಣಯಜುರ್ವೇದ ತೈತ್ತಿರೀಯ ಸಂಹಿತಾ ವಚನವಿರುವುದು. ಎಂದರೆ ಯಜ್ಞದಲ್ಲಿ ಉಪಯೋಗಿಸುವ ಮುಖ್ಯಸಾಧನಗಳು ಹತ್ತು—

(೧) **ಸ್ಫ್ಯಃ—ಚ್ಛೇದನಾದಿಕೃತ್ ।** ದರ್ಭೆ ಮೊದಲಾದುವುಗಳನ್ನು ಕತ್ತರಿಸುವುದಕ್ಕಾಗಿ ಉಪಯೋಗಿಸುವ ಚಾಕು.

(೨) **ಕಪಾಲಾನಿ— ಹವಿರಧಿಶ್ರಯಣಾರ್ಥಾನಿ ।** ಹವಿಸ್ಸನ್ನು ಎಂದರೆ ಪುರೋಡಾಶವೆಂಬ ಹವಿಸ್ಸನ್ನು ಬೆಂಕಿಯ ಮೇಲಿಟ್ಟು ಬೇಯಿಸುವ ಮಣ್ಣಿನ ತವೆ.

(೩) **ಅಗ್ನಿಹೋತ್ರಹವಣೀ**— ಹವಿಸ್ಸನ್ನು ಹೋಮಮಾಡುವುದಕ್ಕಾಗಿ ಉಪಯೋಗಿಸುವ ಸೌಟಿನಂತಿರುವ ಮರದ ಪಾತ್ರೆ.

(೪) **ಶೂರ್ಪಂ**— ಧಾನ್ಯವನ್ನು ಕೇರುವುದಕ್ಕಾಗಿ ಉಪಯೋಗಿಸುವ ಮರ.

(೫) **ಕೃಷ್ಣಾಜಿನಂ**— ಒರಳಿನ ಹತ್ತಿರ ಉಪಯೋಗಿಸುವ ಕೃಷ್ಣಾಜಿನವೆಂಬ ಜಿಂಕೆಯ ಚರ್ಮವು.

(೬) **ಶಮ್ಯಾ**— ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ಉಪಯೋಗಿಸುವ ಆಯುಧ.

(೭) **ಉಲೂಖಲಂ**—ಧಾನ್ಯವನ್ನು ಕುಟ್ಟುವುದಕ್ಕೂ ಸೋಮರಸವನ್ನು ಜಜ್ಜುವುದಕ್ಕೂ ಉಪಯೋಗಿಸುವ ಒರಳು.

(೮) **ಮುಸಲಂ**—ಧಾನ್ಯವನ್ನು ಕುಟ್ಟುವ ವನಕೆಯು.

(೯) **ದೃಷತ್**—ಸೋಮರಸವನ್ನು ಜಜ್ಜುವಾಗ ಕೆಳಭಾಗದಲ್ಲಿ ಉಪಯೋಗಿಸು ಕಲ್ಲು, ಅಥವಾ ಕಲ್ಲುಬತ್ತು. ಇದಕ್ಕೆ ಗ್ರಾವಾ ಎಂದೂ ಹೆಸರು.

(೧೦) **ಉಪಲಾ**—ಮೇಲೆ ಹೇಳಿದ **ದೃಷತ್** ಎಂಬ ಕಲ್ಲಿನ ಮೇಲೆ ಇಡುವ ವಸ್ತುವನ್ನು ಅರೆಯುವುದಕ್ಕೆ ಉಪಯೋಗಿಸುವ ಗುಂಡುಕಲ್ಲು. ಇದಕ್ಕೆ ಗ್ರಾವಾ ಅಥವಾ ಅದ್ರಿಯೆಂದು ಹೆಸರು.

ಈ ಹತ್ತು ವಿಧ ಯಜ್ಞಸಾಧನಗಳಲ್ಲಿ ೮, ೯, ೧೦ ನೆಯ ಆಯುಧಗಳು ಸೋಮಾಭಿ ಷವಣಕಾರ್ಯದಲ್ಲಿ ಉಪಯೋಗಿಸಲ್ಪಡುವುದರಿಂದ ಇವು ಸೋಮನಿಗೆ ಸೇರಿದ ಆಯುಧಗಳೆಂದು ಪರಿಗಣಿಸಲಾಗಿದೆ.

ಸೋಮಲತೆಯನ್ನು ಜಜ್ಜಿ ಸೋಮರಸವನ್ನು ಸಿದ್ಧಪಡಿಸುವ ಕ್ರಮವನ್ನು ಋಗ್ವೇದದಲ್ಲಿ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ. ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳಿಂದ ಆ ಕ್ರಮವನ್ನು ಊಹಿಸಬಹುದಾಗಿದೆ. ಸೋಮಲತೆಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವಾ–ಅದ್ರಿ** ಎಂಬ ಹೆಸರುಗಳಿವೆ. ಕೆಲವು ಸಂದರ್ಭಗಳಲ್ಲಿ ಅಧಿಷವಣ ಎಂಬ ಹೆಸರಿನಿಂದ ಪ್ರಸಿದ್ಧವಾದ ಮರದ ಹಲಗೆಗಳನ್ನು ಉಪಯೋಗಿಸುವುದೂ ಉಂಟು. ಲತೆಯು ಹೊಸದಾಗಿದ್ದರೆ ರಸವು ಹೆಚ್ಚಾಗಿ ಬರುವುದು. ಇಲ್ಲದಿದ್ದರೆ ಎಂದರೆ ಕುಯಿದು ತಂದು ಕೆಲವು ದಿನಗಳಾಗಿದ್ದರೆ, ಅವುಗಳನ್ನು ನೀರಿನಲ್ಲಿ ನೆನೆ ಹಾಕಿದ್ದು ಅನಂತರ ಅವುಗಳನ್ನು ಚರ್ಮದಮೇಲೆ ತಂದಿರಿಸುವರು. ಬಳಿಕ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವರು. ಹೀಗೆ ತೆಗೆದ ರಸದಲ್ಲಿ ಲತೆಯ ಸಿಪ್ಪೆಗಳು, ಚೂರುಗಳು ಮೊದಲಾದುವುಗಳು ಮಿಶ್ರಿತವಾಗಿರುವುದರಿಂದ ಆ ರಸವನ್ನು ಕೈಗಳ ಬೆರಳಸಂದಿಗಳಿಂದಾಗಲಿ, ಪವಿತ್ರವೆಂಬ ಜಾಲರಿ ಅಥವಾ ಬಟ್ಟೆಯಿಂದಾಗಲಿ, ಕುರಿಯ ತುಬಟ ದಿಂದಾಗಲಿ ಶೋಧಿಸುವರು. ಈ ರೀತಿ ಶೋಧಿಸಿದ ರಸವು ಕಶ್ಮಲಗಳಿಲ್ಲದೆ ಶುಭ್ರವಾಗಿರುವುದು. ಇದಕ್ಕೆ ಶುಕ್ರ, ಶುಚಿ ಎಂದು ಹೆಸರುಗಳಿವೆ. ನೋಡುವುದಕ್ಕೆ ಈ ರಸವು ಮಾಸಲುಗೆಂಪು ಅಥವಾ ಹಳದಿ ಮಿಶ್ರವಾದ ಕೆಂಪುಬಣ್ಣವುಳ್ಳದ್ದಾಗಿರುವುದು ಇಂದ್ರನಿಗೂ ವಾಯುವಿಗೂ ಶುದ್ಧವಾದ ಎಂದರೆ ಆಶಿರದ್ರವ್ಯಗಳ ಬೆರಕೆಯಿಲ್ಲದ ಸೋಮರಸವನ್ನೇ ಅರ್ಪಿಸುವುದು ರೂಢಿಯು. ಇತರ ದೇವತೆಗಳಿಗೆ, ಹಾಲು, ಮೊಸರು, ಧಾನ್ಯದಹಿಟ್ಟು ಇವುಗಳನ್ನು ಬೆರಸಿ ಉಪಯೋಗಿಸುವುದುಂಟು. ಇವುಗಳನ್ನು ಮಿಶ್ರಮಾಡಿದ ಸೋಮರಸಕ್ಕೆ ಕ್ರಮವಾಗಿ **ಗವಾಶಿರ, ದಧ್ಯಾಶಿರ ಯವಾಶಿರ** ಎಂಬ ಹೆಸರುಗಳಿವೆ.

|| ಸಂಹಿತಾಪಾಠಃ ||

**ಶಿಶುಂ ಜಜ್ಞಾನಂ ಹರ್ಯತಂ ಮೃಜಂತಿ ಶುಂಭಂತಿ ವಹ್ನಿಂ ಮರುತೋ ಗಣೇನ ।**

**ಕವಿರ್ಗೀರ್ಭಿಃ ಕಾವ್ಯೇನಾ ಕವಿಃ ಸನ್ತ್ಸೋಮಃ ಪವಿತ್ರಮತ್ಯೇತಿ ರೇಭನ್ ॥೧೭॥**

॥ ಪದಪಾಠಃ ॥

ಶಿಶುಂ । ಜಜ್ಞಾನಂ । ಹರ್ಯತಂ । ಮೃಜಂತಿ । ಶುಂಭಂತಿ । ವಹ್ನಿಂ । ಮರುತಃ । ಗಣೇನ ।

ಕವಿಃ । ಗೀಃऽಭಿಃ । ಕಾವ್ಯೇನ । ಕವಿಃ । ಸನ್ । ಸೋಮಃ । ಪವಿತ್ರಂ । ಅತಿ । ಏತಿ । ರೇಭನ್ ॥ ೧೭ ॥

॥ ಸಾಯಣಭಾಷ್ಯಂ ॥

ಶಿಶುಮಿದಾನೀಮುತ್ಪನ್ನತ್ವಾಚ್ಛಿಶುವತ್ತ್ರಿಷ್ಮಂತಂ । ಯದ್ವಾ । ಪಾಪಾನಿ ತನೂಕುರ್ವಂತಂ ವಿನಾಶಯಂತಂ । ಜಜ್ಞಾನಂ ಪ್ರಾದುರ್ಭೂತಂ ಅತ ಏವ ಹರ್ಯತಂ ॥ ಹರ್ಯ ಗತಿಕಾಂತ್ಯೋಃ । ಭೃಮೃದೃಶೀತ್ಯಾದಿನಾತಚ್ ॥ ಸರ್ವೈಃ ಕಾಮ್ಯಮಾನಂ ಸೋಮಂ ಮೃಜಂತಿ । ಮರುತಃ ಶೋಧಯಂತಿ । ಕಿಂಚ ವಹ್ನಿಂ ವೋಢಾರಂ ಸೋಮಂ ಗಣೇನಾತ್ಮೀಯೇನ ಸಪ್ತಸಂಖ್ಯಾಕೇನ ಗಣೇನ ಶುಂಭಂತಿ । ಅಲಂಕುರ್ವಂತಿ । ತತಃ ಕವಿಃ ಕ್ರಾಂತಪ್ರಜ್ಞಃ ಸೋಮಃ ಕಾವ್ಯೇನ ಕವಿಕರ್ಮಣೈವ ಕವಿಃ ಶಬ್ದೋಪೇತಃ ಸನ್ರೇಭಞ್ಶಬ್ದಾಯಮಾನೋ ಗೀರ್ಭಿಃ ಸ್ತುತಿಭಿಃ ಸಹ ಪವಿತ್ರಮತ್ಯೇತಿ । ಅತೀತ್ಯ ಗಚ್ಛತಿ ॥

॥ ಪ್ರತಿಪದಾರ್ಥ ॥

**ಶಿಶುಂ**—ಶಿಶುರೂಪನೂ । **ಹರ್ಯತಂ**—ಆಕರ್ಷಕವಾದ ರೂಪವುಳ್ಳವನೂ ಆದ ಸೋಮನನ್ನು । **ಜಜ್ಞಾನಂ**—ಉತ್ಪನ್ನವಾಗುವಾಗಲೇ । **ಮೃಜಂತಿ**—ಶುದ್ಧಿಗೊಳಿಸುತ್ತಾರೆ । **ಮರುತಃ**—ಮರುತ್ತುಗಳು **ಗಣೇನ**—ತಮ್ಮ ಗುಂಪಿನಿಂದ । **ವಹ್ನಿಂ**—ವಹನಸಾಮರ್ಥ್ಯವುಳ್ಳ ಸೋಮನನ್ನು । **ಶುಂಭಂತಿ**—ಅಲಂಕರಿಸುತ್ತಾರೆ । **ಕವಿಃ**—ಕ್ರಾಂತಪ್ರಜ್ಞನೂ । **ಕಾವ್ಯೇನ**—ತನ್ನ ಕವಿಕರ್ಮದಿಂದ । **ಕವಿಃ ಸನ್**—ಪ್ರಶಂಸನೀಯನೂ ಆದ । **ಸೋಮಃ**—ಸೋಮನು । **ರೇಭನ್**—ಶಬ್ದಮಾಡುತ್ತ । **ಗೀರ್ಭಿಃ**—ಸ್ತುತಿಗಳೊಡನೆ । **ಪವಿತ್ರಂ**—ದಶಾಪವಿತ್ರವನ್ನು । **ಅತ್ಯೇತಿ**—ದಾಟಿಹೋಗುತ್ತಾನೆ.

॥ ಭಾವಾರ್ಥ ॥

ಶಿಶುರೂಪನೂ, ಆಕರ್ಷಕವಾದ ರೂಪವುಳ್ಳವನೂ ಆದ ಸೋಮನನ್ನು ಉತ್ಪನ್ನನಾಗುವಾಗಲೇ ಶುದ್ಧಿಗೊಳಿಸುತ್ತಾರೆ. ಮರುತ್ತುಗಳು ತಮ್ಮ ಗುಂಪಿನಿಂದ ವಹನಸಾಮರ್ಥ್ಯವುಳ್ಳ ಸೋಮನನ್ನು ಅಲಂಕರಿಸುತ್ತಾರೆ. ಕ್ರಾಂತಪ್ರಾಜ್ಞನೂ, ತನ್ನ ಕವಿಕರ್ಮದಿಂದ ಪ್ರಶಂಸನೀಯನೂ ಆದ ಸೋಮನು ಶಬ್ದಮಾಡುತ್ತ ಸ್ತುತಿಗಳೊಡನೆ ದಶಾಪವಿತ್ರವನ್ನು ದಾಟಿಹೋಗುತ್ತಾನೆ.

## English Translation

They cleanse the charming infant (Soma) at his birth ; the Maruts decorate the bearer (of boons) with their troop ; being wise with songs, wise with wisdom, Soma passes clamorous through the filter.

|| ವಿಶೇಷವಿಷಯಗಳು ||

**ಶಿಶುಂ ಜಜ್ಞಾನಂ**—**ಇದಾನೀಮುತ್ಪನ್ನತ್ವಾಚ್ಛಿಶುವತ್ಪ್ರಿಷ್ಮಂತಂ। ಯದ್ವಾ। ಪಾಪಾನಿ ತನೂ-ಕುರ್ವಂತಂ ವಿನಾಶಯಂತಂ।** ಆಗತಾನೆ ಹುಟ್ಟಿದ ಮಗುವಿಗೆ ಶಿಶುವೆಂದು ಹೆಸರು. ಅದರಂತೆ ಆಗತಾನೆ (ಹೊಸದಾಗಿ) ಸೋಮಲತೆಗಳಿಂದ ತೆಗೆದ ರಸಕ್ಕೆ ಶಿಶುವೆಂದು ಋಷಿಯು ಹೇಳಿದಾನೆ ಅಥವಾ ಋತ್ವಿಗ್ಜನರ ಪಾಪ ಗಳನ್ನು ನಾಶಮಾಡುವುದರಿಂದ ಶಿಶುವೆಂಬ ಹೆಸರೆಂದು ಇನ್ನೊಂದು ವಿಧ ಅರ್ಥವನ್ನೂ ಭಾಷ್ಯಕಾರರು ಹೇಳಿದಾರೆ.

**ಮರುತೋ ಗಣೇನ**—ಮರುದ್ದೇವತೆಗಳ ಗಣವೆಂದರೇನು ಎಂಬ ವಿಷಯದಲ್ಲಿ ವಿವರಣೆಯು ಅವಶ್ಯಕವು. ಮರುದ್ದೇವತೆಗಳನ್ನು ನಿರ್ದೇಶಿಸುವ ಸಂದರ್ಭಗಳಲ್ಲಿ **ಮಾರುತಂ ಗಣಂ, ಮಾರುತಂ ಶರ್ಧಃ** ಎಂದು ಏಳು ಗಣ ಅಥವಾ ಗುಂಪುಗಳಿಂದ ಸಹಿತರಾದ ಮರುದ್ದೇವತೆಗಳನ್ನು ಸೂಚಿಸುವುದು ರೂಢಿಯಾಗಿದೆ. **ಸಪ್ತಗಣಾ ವೈ ಮರುತಃ** ಎಂಬ ಶ್ರುತಿವಾಕ್ಯದಂತೆ ಮರುತ್ತುಗಳ ಗಣಗಳು ಏಳು. ಪ್ರತಿಯೊಂದು ಗಣ ಅಥವಾ ಗುಂಪಿನಲ್ಲಿಯೂ ಏಳೇಳರಂತೆ ಮರುತ್ತುಗಳು ಇರುವರು. ಒಟ್ಟು ಏಳು ಗಣಗಳಿಂದ ನಲವತ್ತೊಂಭತ್ತುಮಂದಿ ದೇವತೆಗಳಿರುವರು. ಇವರನ್ನೆಲ್ಲ ಒಟ್ಟಾಗಿ ಸೇರಿಸಿ **ಮಾರುತಂ ಗಣಂ, ಮಾರುತಂ ಶರ್ಧಃ** ಅಥವಾ **ಮರುತಃ** ಎಂಬ ಶಬ್ದಗಳಿಂದ ಕರೆಯುವರು.

**ಸಪ್ತ ಸಪ್ತ ಹಿ ಮಾರುತೋ ಗಣಸ್ತಸ್ಮಾನ್ಮಾರುತಃ ಸಪ್ತಕಪಾಲಃ।**
(ಶ. ಬ್ರಾ. ೨-೫-೧-೧೩)

**ಸಪ್ತ ಸಪ್ತ ಹಿ ಮಾರುತೋ ಗಣಃ ಸರ್ವಮೇವೈತೇನ ರಥಂ ಪ್ರೀಣಾತಿ।**
(ಶ. ಬ್ರಾ. ೫-೪-೩-೧೭)

ಇತ್ಯಾದಿ ವಾಕ್ಯಗಳಿಂದ ಮರುತ್ತುಗಳು ಯಾವಾಗಲೂ ಗುಂಪುಕಟ್ಟಿಕೊಂಡೇ ಇರುವರೆಂದೂ ಆ ವಿಧವಾದ ಗುಂಪಿನಲ್ಲಿ ಒಂದು ವಿಧವಾದ ಚೈತನ್ಯವೂ ಶಕ್ತಿಯೂ ಸಹಜವಾಗಿರುತ್ತದೆಂದೂ ತಿಳಿಯಬರುತ್ತದೆ. ಈ ಮರುದ್ದೇವತೆಗಳನ್ನು ರುದ್ರಪುತ್ರರೆಂದೂ ಕರೆಯುವ ರೂಢಿ ಇದೆ. ಇವರು ರುದ್ರನ ಪುತ್ರರು ಹೇಗಾದರು ? ಇವರು ಏಳು ಗಣಗಳಾಗಿರಲು ಕಾರಣವೇನು ಎಂಬ ವಿಷಯದಲ್ಲಿ ಭಾಷ್ಯಕಾರರು ಹೇಳಿರುವುದನ್ನು ಇಲ್ಲಿ ವಿವರಿಸುತ್ತೇವೆ.

**ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ। ತದಾನೀಂ ದಿತಿರಸುರಮಾತಾ ಇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ। ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ। ಪುನರಪ್ಯೇಕೈಕಂ ಸಪ್ತಖಂಡಮಕರೋತ್। ತೇ ಸರ್ವೇ ಗರ್ಭೈಕದೇಶಾಯೋನೇರ್ನಿರ್ಗತ್ಯ ಅರುದನ್। ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರೌ ಇಮಾನ್ ದದೃಶತುಃ। ಮಹೇಶಂ ಪ್ರತಿ ಪಾರ್ವತೀ ಏವಮುವಾಚತ್। ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿರಸ್ತೀತಿ। ಸ ಚ ಮಹೇಶ್ವರಸ್ತಾನ್ ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ ಪುತ್ರಾನ್ ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ। ಅತಃ ಸರ್ವೇಷು**

**ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ ॥**

(ಸಾಯಣಭಾಷ್ಯ ಋ. ಸಂ. ೧-೧೧೪-೬)

ಪೂರ್ವದಲ್ಲಿ ಒಂದುಸಲ ಇಂದ್ರನು ಅಸುರರನ್ನು ಜಯಿಸಿದನು. ಆಗ ಅಸುರಮಾತೆಯಾದ ದಿತಿಯು ಇಂದ್ರನನ್ನು ಕೊಲ್ಲಲು ಸಮರ್ಥನಾದ ಒಬ್ಬ ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ತಪಸ್ಸನ್ನಾಚರಿಸಿ, ತನ್ನ ಪತಿಯ ಅನುಗ್ರಹದಿಂದ ಗರ್ಭವನ್ನು ಧರಿಸಿದಳು. ಇಂದ್ರನು ಈ ಸಮಾಚಾರವನ್ನು ತಿಳಿದು, ವಜ್ರಾಯುಧವನ್ನು ಹಿಡಿದುಕೊಂಡು ಸೂಕ್ಷ್ಮರೂಪಿಯಾಗಿ ಬಂದು ಅವಳ ಉದರವನ್ನು ಪ್ರವೇಶಿಸಿ ಆ ಗರ್ಭವನ್ನು ಏಳುಭಾಗವಾಗಿ ಸೀಳಿದನು. ಪುನಃ ಏಳೇಳು ತುಂಡಗಳನ್ನಾಗಿ ಮಾಡಿದನು. ಆಗ ಅವೆಲ್ಲವೂ ಹೊರಕ್ಕೆ ಬಂದು ಅಳುತ್ತಿದ್ದುವು. ಆಗ ಲೀಲಾರ್ಥವಾಗಿ ಪಾರ್ವತೀ ಪರಮೇಶ್ವರರಿಬ್ಬರೂ ಸಂಚರಿಸುತ್ತಿದ್ದಾಗ ಇವನ್ನು ನೋಡಿ, ಪಾರ್ವತಿಯು ಮರುಕಗೊಂಡು, ಮಹೇಶ್ವರನನ್ನು ಕುರಿತು ಅವೆಲ್ಲವನ್ನೂ ಮಕ್ಕಳನ್ನಾಗಿ ಪರಿವರ್ತಿಸಬೇಕೆಂದು ಬೇಡಿದಳು. ಆಗ ಈಶ್ವರನು ಅವೆಲ್ಲವನ್ನೂ ಒಂದೇ ರೂಪವುಳ್ಳವರನ್ನಾಗಿಯೂ, ಒಂದೇ ವಯಸ್ಸಿನವರಾಗಿಯೂ, ಒಂದೇ ಅಲಂಕಾರವುಳ್ಳವರನ್ನಾಗಿಯೂ ಮಾಡಿ, ಪುತ್ರರೂಪರಾದ ಅವರನ್ನು ಇವು ನಿನ್ನ ಪುತ್ರರಾಗಿರಲಿ ಎಂದು ಗೌರಿಗೆ ಕೊಟ್ಟನು. ಆದುದರಿಂದ **ಮರುತ್ಸೂಕ್ತ**ಗಳಲ್ಲೆಲ್ಲಾ **ಮರುತ್ತು**ಗಳಿಗೆ **ರುದ್ರಪುತ್ರ**ರೆಂದೂ, **ರುದ್ರಸೂಕ್ತ**ಗಳಲ್ಲಿ **ರುದ್ರನಿಗೆ ಮರುತ್ತು**ಗಳ **ಪಿತೃ**ವೆಂದೂ ಹೇಳುವ ಕ್ರಮವಿದೆಯೆಂದು ಸಾಯಣರು ಈ ಕಥೆಯನ್ನು ಹೇಳಿರುತ್ತಾರೆ.

ಪುರಾಣಾದಿ ಗ್ರಂಥಗಳಲ್ಲಿಯೂ, ಆಧುನಿಕ ಸಾಹಿತ್ಯದಲ್ಲಿಯೂ, **ಮರುತ್ ವಾಯು** ಎಂಬ ಶಬ್ದಗಳ ಅರ್ಥ ವಿಷಯದಲ್ಲಿ ವಿಶೇಷ ವ್ಯತ್ಯಾಸವು ಕಂಡುಬರುವುದಿಲ್ಲ. ಈ ಶಬ್ದಗಳ ವಿಷಯದಲ್ಲಿ ಗಾಳಿ ಅಥವಾ ವಾಯು ದೇವತೆ ಎಂದೇ ಅರ್ಥ ಮಾಡಿ ವ್ಯವಹರಿಸುವ ರೂಢಿ ಇದೆ. ಆದರೆ ಋಗ್ವೇದದಲ್ಲಿ ಈ ಎರಡು ಶಬ್ದಗಳಿಗೂ ಅರ್ಥದಲ್ಲಿಯೂ ಪ್ರಯೋಗ ಅಥವಾ ವ್ಯವಹಾರದಲ್ಲಿಯೂ ಬಹಳ ವ್ಯತ್ಯಾಸವಿದೆ. ವಾಯು ಅಥವಾ ವಾತ ಎಂದರೆ ಅಂತರಿಕ್ಷ ಅಥವಾ ಆಕಾಶದಲ್ಲಿ ವ್ಯಾಪಿಸಿರುವ ಗಾಳಿ ಅಥವಾ ವಾಯುದೇವತೆ. ಗಾಳಿ ಎಂಬ ಅರ್ಥಕ್ಕಿಂತಲೂ ವಾಯುದೇವತೆ ಎಂಬ ವ್ಯವಹಾರವೇ ಹೆಚ್ಚು ಬಳಕೆಯಲ್ಲಿದೆ. ಮತ್ತು ಈ ದೇವತೆಯನ್ನು ಸ್ತುತಿಸುವಾಗಲೆಲ್ಲಾ ಏಕವಚನ ಪ್ರಯೋಗವೇ ಇರುವುದು. ಆದರೆ ಮರುದ್ದೇವತೆಗಳನ್ನು ಯಾವಾಗಲೂ ಬಹುವಚನಪ್ರಯೋಗದಿಂದಲೇ ವ್ಯವಹರಿಸಲಾಗಿದೆ. ಇದಲ್ಲದೆ ವಾಯು ಮತ್ತು ಮರುತ್ತುಗಳ ವೈಶಿಷ್ಟ್ಯದಲ್ಲಿಯೂ ಬಹಳ ವ್ಯತ್ಯಾಸವಿದೆ. ವಾಯುವಿನ ಗುಣವರ್ಣನೆಯು ವಿಶೇಷವಾಗಿಲ್ಲ. ವಾಯುವು ಅಂತರಿಕ್ಷದಲ್ಲಿ ನೆಲೆಸಿರುವುದರಿಂದ ಮಧ್ಯಸ್ಥಾನ ದೇವತೆಯೆಂದು ಪ್ರಸಿದ್ಧನಾಗಿದಾನೆ. ಮರುತ್ತುಗಳು ಅನೇಕರಾದ್ದರಿಂದ ಇವರನ್ನು ದೇವಗಣವೆಂದು ಕರೆಯುವ ರೂಢಿ ಇದೆ. ಸಾಧಾರಣವಾಗಿ ಇವರನ್ನು **ಮಾರುತಂ ಶರ್ಧಃ, ಮಾರುತಂ ಗಣಂ** ಎಂಬ ಶಬ್ದಗಳಿಂದ ಅಥವಾ ಅದೇ ಅರ್ಥವಿರುವ ಇತರ ಶಬ್ದಗಳಿಂದ ವ್ಯವಹರಿಸುವುದೇ ರೂಢಿಯು. ಇವರೂ ವಾಯುವಿನಂತೆ ಮಧ್ಯಮಸ್ಥಾನ ದೇವತೆಗಳೇ ಆಗಿದ್ದಾರೆ.

ಮರುತ್ತುಗಳು ಅತಿ ರಭಸದಿಂದ ಬೀಸುವ ಚಂಡಮಾರುತದ ಸ್ವರೂಪವು. ಮುಂಗಾರುಮಳೆ ಹುಯ್ಯುವಾಗ ಮಳೆ ಬರುವುದಕ್ಕೆ ಮೊದಲು ಅಥವಾ ಮಳೆಯು ಸುರಿಯುತ್ತಿರುವಾಗ ಗಾಳಿಯು ಅತಿ ರಭಸವಾಗಿ ಬೀಸುವುದು ಎಲ್ಲರಿಗೂ ಅನುಭವದ ವಿಷಯವೇ ಆಗಿದೆ ರಭಸದಿಂದ ಬೀಸುವ ಈ ಚಂಡಮಾರುತವನ್ನೇ ಮರುದ್ದೇವತೆಗಳ ಸಂಘವೆಂದು ಋಗ್ವೇದದಲ್ಲಿ ವರ್ಣಿಸಿದೆ. ಮಳೆಯು ಹುಯ್ಯುವುದಕ್ಕೆ ಮೊದಲು ಅಥವಾ ಹುಯ್ಯುವಾಗ ಗಾಳಿಯು

ರಭಸವು ವಿಶೇಷವಾಗಿರುವುದು. ಆದ್ದರಿಂದ ಮಳೆಗೂ ಮರುತ್ತುಗಳಿಗೂ ವಿಶೇಷ ಸಂಬಂಧವಿದೆ. ಆದುದರಿಂದಲೇ ಮರುತ್ತುಗಳನ್ನು **ಉಕ್ಷಣಃ**—ಜಲಸ್ಯ ಸೇಕ್ತಾರಃ ನೀರಿನಿಂದ ಎಲ್ಲವನ್ನೂ ತೋಯಿಸುವವರು ಎಂದು ಮೊದಲಾದ ವಿಶೇಷಣಗಳಿಂದ ಸ್ತುತಿಸಲಾಗಿದೆ ಇದಲ್ಲದೆ ಗುಡುಗು, ಮಿಂಚು, ಸಿಡಿಲು ಇವುಗಳಿಂದಲೂ, ಅತಿ ರಭಸವಾಗಿ ಬೀಸುತ್ತಿರುವ ಗಾಳಿಯಿಂದಲೂ ಕೂಡಿರುವ ವೃಷ್ಟಿಗೆ ವೃತ್ರಹನನಾದಿರೂಪವಾದ ಇಂದ್ರನ ಸಂಬಂಧವೂ ಇರುವುದರಿಂದ ಮರುದ್ದೇವತೆಗಳಿಗೂ ಇಂದ್ರನಿಗೂ ಸ್ನೇಹವೂ ಸಾಹಚರ್ಯವೂ ಇರುವುದೆಂದೂ ಅನೇಕ ಕಡೆ ಹೇಳಿದೆ. ವೃಷ್ಟಿಯನ್ನು ಸುರಿಸದೆ ತಡೆದು ನಿಲ್ಲಿಸಿದ ಮೇಘಗಳನ್ನು ಅಥವಾ ವೃತ್ರನನ್ನು ಇಂದ್ರನು ತನ್ನ ವಜ್ರಾಯುಧದಿಂದ ಪ್ರಹರಿಸಿ ಮಳೆ ಗರೆಯುವಂತೆ ಮಾಡುತ್ತಾನೆ. ಆ ವೃಷ್ಟಿಕರ್ಮದಲ್ಲಿ ಮೇಘಗಳನ್ನು ಚದುರಿಸಿ ಮಳೆ ಹುಯ್ಯುವಂತೆ ಮರುತ್ತುಗಳು ಮಾಡುವುದರಿಂದ ವೃಷ್ಟಿಕರ್ಮಕ್ಕೆ ಮರುತ್ತುಗಳು ಇಂದ್ರನಿಗೆ ಸಹಾಯ ಮಾಡಿದಂತಾಗುತ್ತದೆ. ಈ ಕಾರಣದಿಂದಲೇ ಇಂದ್ರನಿಗೂ ಮರುತ್ತುಗಳಿಗೂ ವಿಶೇಷ ರೀತಿಯ ಸಖ್ಯವಿದೆ. ಇಂದ್ರನಿಗೆ **ಮರುತ್ವಾನ್** ಎಂಬ ವಿಶೇಷಣವು ಸಹ ಈ ಕಾರಣದಿಂದಲೇ ಉಂಟಾಗಿದೆ.

### ಮರುತಃ ಎಂಬ ಶಬ್ದದ ನಿರ್ವಚನ

**ಅಥಾತೋ ಮಧ್ಯಸ್ಥಾನಾ ದೇವಗಣಾಃ । ತೇಷಾಂ ಮರುತಃ ಪ್ರಥಮಾಗಾಮಿನೋ ಭವಂತಿ । ಮರುತಃ । ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ॥**
(ನಿ. ೧೧–೧೪)

ಎಂದು ಯಾಸ್ಕರು ಮರುತಃ ಶಬ್ದದ ನಿರ್ವಚನವನ್ನು ಹೇಳಿದ್ದಾರೆ. ಈಗ ಮಧ್ಯಸ್ಥಾನವಾದ ಅಂತರಿಕ್ಷಸ್ಥ ದೇವಗಣಗಳ ವಿಷಯವನ್ನು ಹೇಳುತ್ತೇವೆ. ಈ ಗಣಗಳಲ್ಲಿ ಮರುತ್ತುಗಳಿಗೇ ಪ್ರಥಮಸ್ಥಾನವು. **ಮರುತ್** ಎಂಬ ಶಬ್ದವು ಮಿ+ರು ಎಂಬ ಎರಡು ಧಾತುಗಳಿಂದ ನಿಷ್ಪನ್ನವಾಗಿದೆ. ಕ್ಲಿಪ್ತವಾದ ಎಂದರೆ ಅಳತೆಗೆ ಸರಿಯಾದ, ಒಂದೇ ವಿಧವಾದ ಅಥವಾ ಒಂದೇ ಸಮನಾದ ಶಬ್ದ ಮಾಡುವವರಾದ್ದರಿಂದ ಈ ದೇವತೆಗಳಿಗೆ ಮರುತ್ತುಗಳೆಂದು ಹೆಸರು. ಅಥವಾ ಮಿ+ರುಚ್ ಎಂಬ ಧಾತುಗಳಿಂದ ಮರುತ್ ಶಬ್ದವು ನಿಷ್ಪನ್ನವಾದರೆ ಒಂದೇ ಸಮನಾದ ಪ್ರಕಾಶವುಳ್ಳವರು ಎಂದೂ, ಮಹತ್+ದ್ರು ಎಂಬ ಧಾತುವಿನಿಂದ ನಿಷ್ಪನ್ನವಾದರೆ ಬಹಳವಾಗಿ (ರಭಸವಾಗಿ) ಚಲಿಸುವವರು (ಬೀಸುವವರು) ಎಂದೂ ನಿರ್ವಚನದ ಅರ್ಥವು.

॥ ಸಂಹಿತಾಪಾಠಃ ॥

**ಋಷಿಮನಾ ಯ ಋಷಿಕೃತ್ಸ್ವರ್ಷಾಃ ಸಹಸ್ರಣೀಥಃ ಪದವೀಃ ಕವೀನಾಂ ।**
**ತೃತೀಯಂ ಧಾಮ ಮಹಿಷಃ ಸಿಷಾಸನ್ತ್ಸೋಮೋ ವಿರಾಜಮನು ರಾಜತಿ ಷ್ಟುಪ್ ॥ ೧೮ ॥**

॥ ಪದಪಾಠಃ ॥

**ಋಷಿಽಮನಾಃ । ಯಃ । ಋಷಿಽಕೃತ್ । ಸ್ವಃಽಸಾಃ । ಸಹಸ್ರಽನೀಥಃ । ಪದಽವೀಃ । ಕವೀನಾಂ ।**
**ತೃತೀಯಂ । ಧಾಮ । ಮಹಿಷಃ । ಸಿಸಾಸನ್ । ಸೋಮಃ । ವಿಽರಾಜಂ । ಅನು । ರಾಜತಿ । ಸ್ತುಪ್ ॥೧೮॥**

॥ ಸಾಯಣಭಾಷ್ಯಂ ॥

**ಋಷಿಮನಾಃ ಸರ್ವದರ್ಶನಶೀಲಮನಸ್ಕಃ ಅತ ಏವರ್ಷಿಕೃತ್ ಸರ್ವಸ್ಯ ದರ್ಶನಕರ್ತಾ ಪ್ರಕಾಶನಸ್ಯ ಕರ್ತಾ ಸ್ವರ್ಷಾಃ ಸರ್ವಸ್ಯ ಸೂರ್ಯಸ್ಯ ವಾ ಸಂಭಕ್ತಾ ಸಹಸ್ರಣೀಥಃ । ನೀಥಾ ಸ್ತುತಿಃ । ಬಹುವಿಧಸ್ತುತಿಕಃ ಕವೀನಾಂ ಕ್ರಾಂತಪ್ರಜ್ಞಾನಾಂ ಮಧ್ಯೇ ಪದವೀಃ ಸ್ಖಲತಾಂ ಪದಾನಾಂ ಸಾಧುತ್ವೇನ ಸಂಯೋಜಯಿತಾ ಯಃ ಸೋಮೋ ವಿದ್ಯತೇ ಸ ಮಹಿಷೋ ಮಹಾನ್ ಪೂಜ್ಯೋ ವಾ ಸೋಮಸ್ತೃತೀಯಂ ಧಾಮ ದ್ಯುಲೋಕಂ ಸಿಷಾಸನ್ ಸಂಭಕ್ತುಮಿಚ್ಛನ್ ಸ್ತುಪ್ ಸ್ತೂಯಮಾನಃ ಸನ್ವಿರಾಜಂ ವಿಶೇಷೇಣ ರಾಜಂತಂ ದೀಪ್ಯಮಾನಮಿಂದ್ರಮನು ರಾಜತಿ । ಪ್ರಕಾಶಯತಿ ॥**

॥ ಪ್ರತಿಪದಾರ್ಥ ॥

**ಯಃ**— ಯಾವ ಸೋಮನು । **ಋಷಿಮನಾಃ**—ಸಕಲವನ್ನೂ ದರ್ಶನಮಾಡುವ ಮನಸ್ಸುಳ್ಳವನೂ । **ಋಷಿಕೃತ್**— ಸಕಲವನ್ನೂ ಪ್ರಕಾಶಪಡಿಸುವವನೂ । **ಸ್ವರ್ಷಾಃ**—ಸ್ವರ್ಗವನ್ನು ಪಡೆಯುವವನೂ । **ಸಹಸ್ರಣೀಥಃ**—ಅನೇಕವಾದ ಸ್ತುತಿಯುಳ್ಳವನೂ । **ಕವೀನಾಂ**— ಕವಿಗಳಿಗೆ । **ಪದವೀಃ**— ಮಾರ್ಗದರ್ಶಕನೂ ಆಗಿರುವನೋ । **ಮಹಿಷಃ**—ಮಹಾತ್ಮನಾದ । **ಸಃ**— ಅದೇ ಸೋಮನು । **ತೃತೀಯಂ ಧಾಮ**— ಮೂರನೆಯ ದ್ಯುಲೋಕವನ್ನು । **ಸಿಷಾಸನ್**-- ಹೊಂದಲಿಚ್ಛೆಯುಳ್ಳವನಾಗಿಯೂ । **ಸ್ತುಪ್**— ಪ್ರಶಂಸಿತನಾಗಿಯೂ । **ವಿರಾಜಂ**— ಪ್ರಕಾಶಮಾನನಾದ ಇಂದ್ರನನ್ನು । **ಅನು ರಾಜತಿ**—ಅಧಿಕವಾಗಿ ಪ್ರಕಾಶಪಡಿಸುತ್ತಾನೆ.

॥ ಭಾವಾರ್ಥ ॥

ಸಕಲವನ್ನೂ ದರ್ಶನಮಾಡುವ ಮನಸ್ಸುಳ್ಳವನೂ, ಸಕಲವನ್ನೂ ಪ್ರಕಾಶಪಡಿಸುವವನೂ, ಸ್ವರ್ಗವನ್ನು ಪಡೆಯುವವನೂ, ಅನೇಕವಾದ ಸ್ತುತಿಯುಳ್ಳವನೂ ಕವಿಗಳಿಗೆ ಮಾರ್ಗದರ್ಶಕನೂ ಮಹಾತ್ಮನೂ ಆದ ಸೋಮನು ಮೂರನೆಯ ದ್ಯುಲೋಕವನ್ನು ಹೊಂದಲಿಚ್ಛೆಯುಳ್ಳವನಾಗಿಯೂ ಪ್ರಶಂಸಿತನಾಗಿಯೂ, ಆಗ ಪ್ರಕಾಶಮಾನನಾದ ಇಂದ್ರನನ್ನು ಅಧಿಕವಾಗಿ ಪ್ರಕಾಶಪಡಿಸುತ್ತಾನೆ.

## English Translation.

Thinking as a rishi, acting as a rishi, gaining heaven, praised by thousands, the guide of the wise, the mighty Soma desiring to attain the third region (heaven), being praised adds lustre to the illustrious (Indra).

॥ ವಿಶೇಷವಿಷಯಗಳು ॥

**ತೃತೀಯಂ ಧಾಮ**—ಮೂರನೆಯ ಸ್ಥಾನವು ಎಂದರೆ ಸ್ವರ್ಗಲೋಕವು. ಕೆಲವು ಸಂದರ್ಭಗಳಲ್ಲಿ ಸ್ವರ್ಗ ಲೋಕದಲ್ಲಿಯೂ ಮೂರು ಪ್ರಭೇದಗಳಿವೆಯೆಂದು ಹೇಳಲಾಗಿದೆ. ಆ ಮೂರು ಪ್ರಭೇದಗಳಲ್ಲಿ ಅತ್ಯುನ್ನತವಾದ ಮೂರನೆಯ ಸ್ಥಾನವು. **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್** ಎಂಬ ಶ್ರುತಿವಾಕ್ಯದ ಪ್ರಕಾರ ಸೋಮ ಲತೆಯು ಪೂರ್ವದಲ್ಲಿ ಸ್ವರ್ಗದ ಮೂರನೆಯ ಪ್ರಭೇದವಾದ ಅತ್ಯುನ್ನ ಪ್ರದೇಶದಲ್ಲಿದ್ದಿತು ಎಂದು ಹೇಳಲಾಗಿದೆ.

|| ಸಂಹಿತಾಪಾಠಃ ||

ಚಮೂಷಚ್ಛ್ಯೇನಃ ಶಕುನೋ ವಿಭೃತ್ವಾ ಗೋವಿಂದುರ್ದ್ರಪ್ಸ ಆಯುಧಾನಿ ಬಿಭ್ರತ್ |

ಅಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತಿ || ೧೯ ||

|| ಪದಪಾಠಃ ||

ಚಮೂಽಸತ್ | ಶ್ಯೇನಃ | ಶಕುನಃ | ವಿಽಭೃತ್ವಾ | ಗೋಽವಿಂದುಃ | ದ್ರಪ್ಸಃ | ಆಯುಧಾನಿ | ಬಿಭ್ರತ್ |

ಅಪಾಂ | ಊರ್ಮಿಂ | ಸಚಮಾನಃ | ಸಮುದ್ರಂ | ತುರೀಯಂ | ಧಾಮ | ಮಹಿಷಃ | ವಿವಕ್ತಿ || ೧೯ ||

|| ಸಾಯಣಭಾಷ್ಯಂ ||

ಚಮೂಷತ್ | ಚಮಂತಿ ಭಕ್ಷಯಂತ್ಯತ್ರೇತಿ ಚಮ್ವಶ್ಚಮಸಾಃ | ತೇಷು ಸೀದನ್ | ಯದ್ವಾ | ಚಮ್ವಾವಧಿಷವಣಫಲಕೇ | ತಯೋರ್ವರ್ತಮಾನಃ | ಶ್ಯೇನಃ ಶಂಸನೀಯಃ ಶಕುನಃ ಶಕ್ತಃ ಸಾಮರ್ಥ್ಯಕಾರೀ ವಿಭೃತ್ವಾ || ಹರತೇರಾತೋ ಮನಿನ್ನಿತ್ಯಾದಿನಾ ಕ್ವನಿಪ್ || ಪಾತ್ರೇಷು ವಿಹರಣಶೀಲಃ ಗೋವಿಂದುರ್ಯಜಮಾನಾನಾಂ ಗವಾಂ ಲಂಭಕಃ || ವಿಂದುರಿಚ್ಛುಃ | ಪಾ. ೩–೨–೧೬೯ | ಇತ್ಯುಪ್ರತ್ಯಯಾಂತತ್ವೇನ ನಿಪಾತಿತಃ || ದ್ರಪ್ಸೋ ದ್ರವಣಶೀಲಃ ಆಯುಧಾನಿ ಸ್ಫ್ಯಕಪಾಲಾದೀನಿ ಬಿಭ್ರದ್ಧಾರಯನ್ ಅಪಾಮುದಕಾನಾಮೂರ್ಮಿಂ ಪ್ರೇರಕಂ ಸಮುದ್ರಂ | ಅಂತರಿಕ್ಷನಾಮೈತತ್ | ಅಂತರಿಕ್ಷಲೋಕಂ ಸಚಮಾನಃ ಸೇವಮಾನಃ ಮಹಿಷೋ ಮಹಾನ್ ಯ ಏವಂವಿಧಃ ಸೋಮಃ ಸ ಸೋಮಸ್ತುರೀಯಂ ಚತುರ್ಥಂ ಧಾಮ ಚಾಂದ್ರಮಸಂ ಸ್ಥಾನಂ ವಿವಕ್ತಿ | ಸೇವತೇ | ಸೂರ್ಯಲೋಕಸ್ಯೋಪರಿ ಚಂದ್ರಮಸೋ ಲೋಕೋ ವಿದ್ಯತ ಇತಿ ಯಮಃ ಪೃಥಿವ್ಯಾ ಅಧಿಪತಿಃ ಸ ಮಾವತ್ವಿತ್ಯಾದಿಭಿಶ್ಚಂದ್ರಮಾ ನಕ್ಷತ್ರಾಣಾಮಧಿಪತಿಃ ಸ ಮಾವತ್ವಿತ್ಯಂತೈರ್ಮಂತ್ರೈರ್ಜ್ಞಾಯತೇ | ತೈ. ಸಂ. ೩–೪–೫–೧ ||

|| ಪ್ರತಿಪದಾರ್ಥ ||

**ಚಮೂಷತ್**—ಚಮೂಪಾತ್ರೆಯಲ್ಲಿ ಸ್ಥಿತನೂ | **ಶ್ಯೇನಃ**—ಪ್ರಶಂಸನೀಯನೂ | **ಶಕುನಃ**—ಸಾಮರ್ಥ್ಯವುಳ್ಳವನೂ | **ವಿಭೃತ್ವಾ**—ಪಾತ್ರೆಗಳಲ್ಲಿ ವಿಹರಿಸುವವನೂ | **ಗೋವಿಂದುಃ**—ಯಜಮಾನನ ಗೋವುಗಳನ್ನು ಕಂಡುಹಿಡಿಯುವವನೂ | **ದ್ರಪ್ಸಃ**—ಪ್ರವಾಹಾತ್ಮಕನೂ | **ಮಹಿಷಃ**—ಮಹಾತ್ಮನೂ ಆದ ಸೋಮನು | **ಆಯುಧಾನಿ**—ಆಯುಧಗಳನ್ನು | **ಬಿಭ್ರತ್**—ಧರಿಸಿಕೊಂಡು | **ಅಪಾಂ ಊರ್ಮಿಂ**—ಉದಕಗಳಿಗೆ ಪ್ರೇರಕವಾದ | **ಸಮುದ್ರಂ**—ಅಂತರಿಕ್ಷವನ್ನು | **ಸಚಮಾನಃ**—ಸೇವಿಸುತ್ತ | **ತುರೀಯಂ ಧಾಮ**—ನಾಲ್ಕನೆಯ ಲೋಕವನ್ನು | **ವಿವಕ್ತಿ**—ಸೇವಿಸುತ್ತಾನೆ.

॥ ಭಾವಾರ್ಥ ॥

ಚಮೂಪಾತ್ರೆಯಲ್ಲಿ ಸ್ಥಿತನೂ, ಪ್ರಶಂಸನೀಯನೂ, ಸಾಮರ್ಥ್ಯವುಳ್ಳವನೂ, ಪಾತ್ರೆಗಳಲ್ಲಿ ವಿಹರಿಸುವವನೂ, ಯಜಮಾನನ ಗೋವುಗಳನ್ನು ಕಂಡುಹಿಡಿಯುವವನೂ, ಪ್ರವಾಹಾತ್ಮಕನೂ, ಮಹಾತ್ಮನೂ ಆದ ಸೋಮನು ತನ್ನ ಆಯುಧಗಳನ್ನು ಧರಿಸಿಕೊಂಡು ಉದಕಗಳಿಗೆ ಪ್ರೇರಕವಾದ ಅಂತರಿಕ್ಷವನ್ನು ಸೇವಿಸುತ್ತ ನಾಲ್ಕನೆಯ ಚಂದ್ರ ಲೋಕವನ್ನು ಸೇವಿಸುತ್ತಾನೆ.

English Translation

Seated on the ladles, praiseworthy, competent, supporting, acquiring cattle, flowing, bearing arms, attending upon the firmament, the sender of the waters, the mighty (Soma) attends the forth sphere.

॥ ವಿಶೇಷವಿಷಯಗಳು ॥

**ತುರೀಯಂ ಧಾಮ – ಚತುರ್ಥಂ ಧಾಮ ಚಂದ್ರಮಸಂಸ್ಥಾನಂ ಸೇವತೇ ।** ಇಲ್ಲಿ ನಾಲ್ಕನೆಯ ಸ್ಥಾನವನ್ನು ಎಂದು ಹೇಳಿದೆ. ಈ ನಾಲ್ಕನೆಯ ಸ್ಥಾನವು ಯಾವುದು? ಚಂದ್ರಲೋಕವೆಂದು ಭಾಷ್ಯಕಾರರು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ

**ಯಮಃ ಪೃಥಿವ್ಯಾ ಅಧಿಪತಿಃ ಸ ಮಾವತು** ...............
**ವಾಯುರಂತರಿಕ್ಷಸ್ಯ** ,, ,,
**ಸೂರ್ಯೋ ದಿವಃ** ,, ,,
**ಚಂದ್ರಮಾ ನಕ್ಷತ್ರಾಣಾಂ** ,, ,, (ತೈ ಸಂ. ೩-೪-೫-೧)

ಎಂಬ ತೈತ್ತಿರೀಯಸಂಹಿತಾವಾಕ್ಯವನ್ನು ಉದಾಹರಿಸಿದಾರೆ. ಇದರಂತೆ ಪೃಥಿವೀ ಎಂದರೆ ಭೂಲೋಕಕ್ಕೆ ಯಮನು ಅಧಿಪತಿಯು; ಇದರ ಮೇಲಿರುವ ಅಂತರಿಕ್ಷಲೋಕಕ್ಕೆ ವಾಯುವು ಅಧಿಪತಿಯು; ಇದಕ್ಕಿಂತಲೂ ಮೇಲಿರುವ ಸ್ವರ್ಗಲೋಕಕ್ಕೆ ಸೂರ್ಯನು ಅಧಿಪತಿಯು; ಇದಕ್ಕಿಂತಲೂ ಮೇಲಿರುವ ನಕ್ಷತ್ರ ಲೋಕಕ್ಕೆ (ಅಥವಾ ಚಂದ್ರಲೋಕಕ್ಕೆ) ಚಂದ್ರನು ಅಧಿಪತಿಯು. ಆದ್ದರಿಂದ ಇಲ್ಲಿ ನಾಲ್ಕನೆಯ ಸ್ಥಾನವೆಂದರೆ ಚಂದ್ರಲೋಕವೆಂದು ಹೇಳಿದಾರೆ. ಸೋಮನಿಗೂ ಚಂದ್ರನಿಗೂ ವಿಶೇಷಸಂಬಂಧವಿದೆ. ಯಜುರ್ವೇದಾದಿಗಳಲ್ಲಿ ಚಂದ್ರನಿಗೆ ಸೋಮನೆಂಬ ಹೆಸರೂ ಇದೆ. ಸೋಮ ಓಷಧೀನಾಮಧಿಪತಿಃ ಎಂಬ ವಾಕ್ಯಕ್ಕೆ ಕೆಲವರು ಚಂದ್ರನು ಓಷಧಿಗಳಿಗೆ ಪ್ರಭುವೆಂದು ಅರ್ಥಮಾಡಿದಾರೆ. ಸೋಮಲತೆಯು ಓಷಧ್ಯಾದಿಗಳಲ್ಲಿ ಸೇರಿರುವುದರಿಂದ ಇದಕ್ಕೂ ಚಂದ್ರನಿಗೂ ಸಾಮಿಪ್ಯವಿದೆ ಎಂದು ಪುರಾಣಾದಿಗಳಲ್ಲಿಯೂ ಹೇಳಿದೆ.

ಸಮುದ್ರಶಬ್ದವು ಅಂತರಿಕ್ಷನಾಮಗಳಲ್ಲಿ (ನಿ. ೨-೧೩) ಪಠಿತವಾಗಿದೆ, ಮತ್ತು ಈ ಋಕ್ಕಿನಲ್ಲಿ ಇದೇ ಅರ್ಥದಲ್ಲಿ ಪ್ರಯುಕ್ತವಾಗಿದೆ

**ಸಮುದ್ರ ಶಬ್ದವು** ಋಕ್ಸಂಹಿತೆಯಲ್ಲಿ ಬೇರೆಬೇರೆ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ನಿರುಕ್ತಕಾರರು **ಸಮುದ್ರ** ಶಬ್ದವನ್ನು **ಅಂತರಿಕ್ಷ** ನಾಮಗಳಲ್ಲಿ ಸೇರಿಸಿರುವರು (ನಿ. ೨-೧೦). ಅನಂತರ ಪಾರ್ಥಿವವಾದ

**ಸಮುದ್ರಕ್ಕೂ ಅಂತರಿಕ್ಷ** ಪರ್ಯಾಯವಾದ **ಸಮುದ್ರಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು,

**ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ।** ಅಂತರಿಕ್ಷಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. ಅದು ಸರಿಯಲ್ಲ ಎಂದು ಸಮುದ್ರ ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ.

**ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ॥ (ನಿ- ೨–೧೧)**

ಮೊದಲನೆಯದಾಗಿ ಚಲಿಸು ಎಂಬರ್ಥವನ್ನು ಕೊಡುವ **ದ್ರು** ಧಾತುವಿನೊಡನೆ **ಸಮ್ ಉದ್** ಎಂಬ ಎರಡು ಉಪಸರ್ಗಗಳೂ ಸೇರಿಕೊಂಡು ಮೇಲಕ್ಕೆ ಉಕ್ಕಿ ಹರಿಯುತ್ತದೆ ಎಂದು ತಾತ್ಪರ್ಯವನ್ನು ಕೊಡುತ್ತದೆಯಾದ್ದರಿಂದಲೂ, ಅಥವಾ ಎರಡನೆಯದಾಗಿ ಅದೇ **ದ್ರು** ಧಾತುವಿನೊಡನೆ **ಸಮ್ ಅಭಿ** ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರ ಕಡೆಗೆ ಹರಿದುಬರುತ್ತವೆಯೆಂಬ ಅರ್ಥವನ್ನು ಕೊಡುವುದರಿಂದಾಗಲಿ ಅಥವಾ ಸಂತೋಷಪಡು ಎಂದರ್ಥವನ್ನು ಕೊಡುವ **ಮುದ್** ಧಾತುವಿನೊಡನೆ **ಸಮ್** ಎಂಬ ಉಪಸರ್ಗವು ಸೇರಿ ಜಲಚರ ಪ್ರಾಣಿಗಳು ಇದರಲ್ಲಿ ಹರ್ಷವನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಾಗಲಿ, ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಾಗಲಿ ಅಥವಾ **ತೇವಮಾಡು** ಎಂಬರ್ಥವನ್ನು ಕೊಡುವ **ಉದ್** ಧಾತುವಿನೊಡನೆ **ಸಮ್** ಉಪಸರ್ಗವು ಸೇರಿ ನೆನೆಯಿಸು ಎಂಬ ತಾತ್ಪರ್ಯವನ್ನು ಕೊಡುವುದರಿಂದಾಗಲಿ, **ಸಮುದ್ರ**ವೆಂಬ ಪದವು ನಿಷ್ಪನ್ನವಾಗಿದೆಯೆಂದು ಆ ಪದದ ನಿರ್ವಚನವನ್ನು ತೋರಿಸಿದ್ದಾರೆ (ನಿ. ೨-೧೦). ಈ ಸಂದರ್ಭದಲ್ಲಿ ಅಂತರಿಕ್ಷಪರ್ಯಾಯವಾದ ಸಮುದ್ರ ಶಬ್ದಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುವುದಕ್ಕೆ ಒಂದು ಇತಿಹಾಸವನ್ನೂ ತೋರಿಸಿದ್ದಾರೆ.

**ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ । ತಸ್ಯೈತದ್ವರ್ಷಕಾಮಸೂಕ್ತಂ ತಸ್ಯೈಷಾ ಭವತಿ ॥**

ಕುರುವಂಶಸ್ಥರೂ, ಋಷ್ಟಿಷೇಣ ಪುತ್ರರೂ ಆದ **ದೇವಾಪಿ** ಮತ್ತು **ಶಂತನು** ಎಂಬಿಬ್ಬರಲ್ಲಿ ಚಿಕ್ಕವನಾದ ಶಂತನುವು ತಾನೇ ಪಟ್ಟಾಭಿಷಕ್ತನಾಗಿ ಆ ರಾಜ್ಯಕ್ಕೆ ದೊರೆಯಾದನು. ದೇವಾಪಿಯು ತಪಶ್ಚರಣೆಗಾಗಿ ಕಾಡಿಗೆ ಹೊರಟುಹೋದನು. ಅಲ್ಲಿಂದ ಮೊದಲು ಹನ್ನೆರಡು ವರ್ಷಗಳಕಾಲ ಶಂತನುವಿನ ರಾಜ್ಯದಲ್ಲಿ ಮಳೆಯಾಗಲಿಲ್ಲ. ಆಗ ಬ್ರಾಹ್ಮಣರು ಶಂತನುವನ್ನು ಕುರಿತು, ನೀನು ದೊಡ್ಡವನಾದ ನಿಮ್ಮಣ್ಣನನ್ನು ಕಾಡಿಗೆ ಕಳುಹಿಸಿ ನೀನೇ ದೊರೆಯಾಗಿರುವುದರಿಂದ ನೀನು ಪಾಪಕೃತ್ಯವನ್ನು ಮಾಡಿದಂತಾಯಿತು. ಆದುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಯನ್ನು ಸುರಿಸಿಲ್ಲ ಎಂದರು.

ಆಗ ಶಂತನುವು ದೇವಾಪಿಯನ್ನು ರಾಜ್ಯಾಭಿಷಿಕ್ತನನ್ನಾಗಿ ಮಾಡಲು ಪ್ರಯತ್ನಿಸಿದಾಗ ದೇವಾಪಿಯು ನಾನು ನಿನಗೆ ಪುರೋಹಿತನಾಗಿದ್ದುಕೊಂಡು ನಿನಗಾಗಿ ಯಜ್ಞವನ್ನು ನೆರವೇರಿಸುತ್ತೇನೆ ಎಂದು ವೃಷ್ಟ್ಯರ್ಥವಾಗಿ ಯಜ್ಞವನ್ನು ಮಾಡಿಸಿದನು. ಅನಂತರ ಊರ್ಧ್ವಭಾಗದಲ್ಲಿರುವ **ಸಮುದ್ರದಿಂದ** ಅಧೋಭಾಗದಲ್ಲಿರುವ **ಸಮುದ್ರಕ್ಕೆ** ಮಳೆಯು ಸುರಿಯಿತು. ಎಂದು ಎರಡು ಸಮುದ್ರಗಳಿಗೂ ವ್ಯತ್ಯಾಸವನ್ನು ತೋರಿಸುವ,

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**
**ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥**

(ಋ. ಸಂ. ೧೦-೯೮-೫)

ಈ ಋಕ್ಕನ್ನು ಉದಹರಿಸಿ ಇಲ್ಲಿರುವ **ಉತ್ತರಸಮುದ್ರಕ್ಕೂ, ಅಧರಸಮುದ್ರಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಇಲ್ಲಿ **ಉತ್ತರಸಮುದ್ರ**ವೆಂದರೆ ಅಂತರಿಕ್ಷವೆಂದೂ, **ಅಧರಸಮುದ್ರ**ವೆಂದರೆ ಪಾರ್ಥಿವಸಮುದ್ರವೆಂದೂ ಅರ್ಥ. ಋಕ್ಸಂಹಿತೆಯಲ್ಲಿ **ಸಮುದ್ರ** ಶಬ್ದಕ್ಕೆ ಕೆಲವೆಡೆಗಳಲ್ಲಿ ನಿಷ್ಕರ್ಷವಾಗಿ ಪಾರ್ಥಿವಸಮುದ್ರವೆಂದೇ ಹೇಳಬಹುದು. ಆದರೆ,

**ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।**

(ಋ. ಸಂ. ೫-೭೮-೮)

ಇತ್ಯಾದಿ ಋಕ್ಕುಗಳಲ್ಲಿ **ಅಂತರಿಕ್ಷ** ಪರ್ಯಾಯವೇ ಅಥವಾ **ಪಾರ್ಥಿವ** ಸಮುದ್ರವೇ ಎಂದು ಹೇಳಲು ಕಷ್ಟವಾಗುವುದು.

**ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚಂತೇ ಸಮುದ್ರಂ ನ ಸ್ರವತಃ ಸಪ್ತ ಯಹ್ವೀಃ ।**

(ಋ. ಸಂ. ೧-೭೧-೭)

**ಸಂ ಯಂ ಸ್ತುಭೋಽವನಯೋ ನ ಯಂತಿ ಸಮುದ್ರಂ ನ ಸ್ರವತೋ ರೋಧಚಕ್ರಾಃ ।**

(ಋ. ಸಂ. ೧-೧೯೦-೭)

**ಯಾ ಆಪೋ ದಿವ್ಯಾ ಉತ ವಾ ಸ್ರವಂತಿ ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ ।**
**ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮವಂತು ॥**

(ಋ. ಸಂ. ೭-೪೯-೨)

ಇತ್ಯಾದಿ ನಾನಾ ಋಕ್ಕುಗಳಲ್ಲಿ ಪಾರ್ಥಿವಸಮುದ್ರವೆಂದು ನಿಷ್ಕರ್ಷವಾಗಿ ಹೇಳಬಹುದು. ಕೆಲವು ಕಡೆಗಳಲ್ಲಿ ಈ ಪದವು ವಿಶೇಷವಾಗಿ ಉಪಯೋಗಿಸಲ್ಪಟ್ಟು **ಸ್ರವಿಸತಕ್ಕ** ಎಂಬರ್ಥವನ್ನು ಕೊಡುತ್ತದೆ.

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾँ ಇಚ್ಛಂತಃ ಶವಸೋ ನಪಾತಃ ।**

(ಋ. ಸಂ. ೧-೧೬೧-೧೪)

ಎಂಬ ಋಕ್ಕಿನಲ್ಲಿ **ಸಮುದ್ರೈಃ ಸಮುಂದನಸ್ವಭಾವೈಃಅದ್ಭಿಃ** ಸ್ರವಿಸತಕ್ಕ ಸ್ವಭಾವವುಳ್ಳ ಉದಕಗಳೊಡನೆ ಎಂದರ್ಥ ಹೀಗೆಯೇ ಸಂದರ್ಭಾನುಸಾರವಾಗಿ ಅರ್ಥಮಾಡಬೇಕು.

|| ಸಂಹಿತಾಪಾಠಃ ||

ಮರ್ಯೋ॑ ನ ಶುಭ್ರಸ್ತ॒ನ್ವಂ॑ ಮೃಜಾ॒ನೋಽತ್ಯೋ॑ ನ ಸೃತ್ವಾ॑ ಸ॒ನಯೇ॒ ಧನಾ॑ನಾಂ ।

ವೃಷೇ॑ವ ಯೂ॒ಥಾ ಪರಿ॒ ಕೋಶ॒ಮರ್ಷ॒ನ್ಕನಿ॑ಕ್ರದಚ್ಚ॒ಮ್ವೋ॒೩॑ರಾ ವಿ॑ವೇಶ ॥೨೦॥

|| ಪದಪಾಠಃ ||

ಮರ್ಯಃ॑ । ನ । ಶು॒ಭ್ರಃ । ತ॒ನ್ವಂ॑ । ಮೃ॒ಜಾ॒ನಃ । ಅತ್ಯಃ॑ । ನ । ಸೃತ್ವಾ॑ । ಸ॒ನಯೇ॑ । ಧನಾ॑ನಾಂ ।

ವೃಷಾ॑ಽಇವ । ಯೂ॒ಥಾ । ಪರಿ॑ । ಕೋಶಂ॑ । ಅರ್ಷ॑ನ್ । ಕನಿ॑ಕ್ರದತ್ । ಚ॒ಮ್ವೋಃ॑ । ಆ । ವಿ॒ವೇ॒ಶ ॥ ೨೦ ॥

|| ಸಾಯಣಭಾಷ್ಯಂ ||

ಶುಭ್ರೋ ದೀಪ್ಯಮಾನೋಽಲಂಕೃತೋ ಮರ್ಯೋ ನ ಮನುಷ್ಯ ಇವ ತನ್ವಮಾತ್ಮೀಯಂ ಶರೀರಂ ಮೃಜಾನೋ ವಸತೀವರೀಭಿಃ ಶೋಧಯನ್ ಕಿಂಚ ಧನಾನಾಂ ಸನಯೇ ಸಂಭಜನಾಯ ಲಾಭಾಯಾತ್ಯೋ ನಾತನಶೀಲೋಽಶ್ವ ಇವ ಸೃತ್ವಾ ಸರಣಶೀಲಃ ಅಪಿ ಚ ವೃಷೇವ ವೃಷಾ ಯಥಾ ಯೂಥಾನಿ ಪ್ರತಿಗಚ್ಛೇ-ಚ್ಛಬ್ದಂ ಕರೋತಿ ತದ್ವತ್ ಕೋಶಮಧಿಷವಣಚರ್ಮಣಾ ಕೃತಂ ಪಾತ್ರಂ ಪರ್ಯರ್ಷನ್ ಪ್ರತಿಗಚ್ಛನ್ ಸೋಮಃ ಕನಿಕ್ರದತ್ ಪುನಃಪುನಃ ಶಬ್ದಂ ಕುರ್ವಂಶ್ಚಮ್ವೋರಧಿಷವಣಫಲಕಯೋರಾ ವಿವೇಶ । ಆವಿಶತಿ ॥ ಕನಿಕ್ರದತ್ । ಕ್ರದೇರ್ಯಙ್‌ಲುಕಿ ದಾಧರ್ತಿ ದರ್ಧರ್ತೀತ್ಯಾದಿನಾ ನಿಪಾತನಾದಭ್ಯಾಸಸ್ಯ ನಿಗಾಗಮಃ । ತಸ್ಯ ಶತರ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

|| ಪ್ರತಿಪದಾರ್ಥ ||

**ಶುಭ್ರಃ**—ಅಲಂಕಾರದಿಂದ ಪ್ರಕಾಶಿತನಾದ | **ಮರ್ಯಃ ನ**—ಮಾನವನಂತೆ | **ತನ್ವಂ**—ತನ್ನ ಶರೀರವನ್ನು | **ಮೃಜಾನಃ**—ಶುದ್ಧಿಗೊಳಿಸುತ್ತಲೂ | **ಧನಾನಾಂ**—ಧನಗಳ | **ಸನಯೇ**—ಲಾಭಕ್ಕಾಗಿ | **ಅತ್ಯೋ ನ**—ಅಶ್ವದಂತೆ | **ಸೃತ್ವಾ**—ಸಂಚಾರಶೀಲನೂ | **ವೃಷಾ**—ವೃಷಭವು | **ಯೂಥೇವ**—ಗೋವಿನ ಸಮೂಹಕ್ಕೆ ಆತುರದಿಂದ ಪ್ರವೇಶಿಸುವಂತೆ | **ಕೋಶಂ**— ದಶಾಪವಿತ್ರಕ್ಕೆ | **ಪರ್ಯರ್ಷನ್**— ಪ್ರವೇಶಿಸುವ ಸೋಮನು | **ಕನಿಕ್ರದತ್**—ಶಬ್ದಮಾಡುತ್ತ | **ಚಮ್ವೋಃ**—ಹಿಂಡುವ ಹಲಗೆಗಳಲ್ಲಿ | **ಆ ವಿವೇಶ**—ಪ್ರವೇಶಿಸುತ್ತಾನೆ.

|| ಭಾವಾರ್ಥ ||

ಅಲಂಕಾರದಿಂದ ಪ್ರಕಾಶಿತನಾದ ಮಾನವನಂತೆ ತನ್ನ ಶರೀರವನ್ನು ಶುದ್ಧಿಗೊಳಿಸುತ್ತಲೂ, ಧನಗಳ ಲಾಭಕ್ಕಾಗಿ ಅಶ್ವಗಳಂತೆ ಸಂಚಾರಶೀಲನೂ, ಆತುರದಿಂದ ಗೋ ಸಮೂಹಕ್ಕೆ ಪ್ರವೇಶಿಸುವ ವೃಷಭದಂತೆ ದಶಾಪವಿತ್ರಕ್ಕೆ ಪ್ರವೇಶಿಸುವವನೂ ಆದ ಸೋಮನು ಶಬ್ದಮಾಡುತ್ತ ಹಿಂಡುವ ಹಲಗೆಗಳಲ್ಲಿ ಪ್ರವೇಶಿಸುತ್ತಾನೆ.

## English Translation.

Cleansing his person like a richly-decorated man, flowing to acquire riches like a rapid (horse), rushing to the receptacle like a bull to the herd, (Soma) crying repeatedly enters the planks.

॥ ವಿಶೇಷವಿಷಯಗಳು ॥

**ಶುಭ್ರಃ ಮರ್ಯಃ ನ ಮೃಜಾನಃ**— **ದೀಪ್ಯಮಾನೋಽಲಂಕೃತಃ ಮನುಷ್ಯ ಇವ ಆತ್ಮೀಯಂ ಶರೀರಂ ವಸತೀವರೀಭಿಃ ಶೋಧಯನ್ ।** ಸ್ನಾನಾದಿಗಳಿಂದ ಅಲಂಕೃತನಾಗಿರುವ ಮನುಷ್ಯನಂತೆ ಈ ಸೋಮರಸವು ತನ್ನ ಶರೀರವನ್ನು ಎಂದರೆ ಲತೆಯಿಂದ ಹೊರಸೂಸಿ ಬಂದ ರಸವನ್ನು ವಸತೀವರೀ ಉದಕಗಳಿಂದ ಮಿಶ್ರಮಾಡಿದ ಮೇಲೆ ಶೋಭಿಸುತ್ತಿರುವುದು ಎಂದಭಿಪ್ರಾಯವು.

**ಅತ್ಯೋ ನ ಸೃತ್ವಾ ಸನಯೇ ಧನಾನಾಂ**—ಶತ್ರುಗಳನ್ನು ಯುದ್ಧದಲ್ಲಿ ಗೆದ್ದು ಧನಸಂಪಾಧನೆ ಮಾಡುವುದಕ್ಕಾಗಿ ಮಾಡುವ ಯುದ್ಧದಲ್ಲಿ ಸಂಚರಿಸುವ ಸ್ವಭಾವವುಳ್ಳ (spirited horse) ಅಶ್ವದಂತೆ ಹಿಂಡಲ್ಪಟ್ಟಿರುವ ಸೋಮರಸವು ಬೇಗನೆ ಹರಿದು ಹೋಗಿ ಕಲಶದೊಳಕ್ಕೆ ಬೀಳುವುದು.

**ವೃಷೇವ ಯೂಥಾ ಪರಿ ಕೋಶಮರ್ಷನ್**—ಗೋವುಗಳ ಹಿಂಡಿಗೆ ನಾಯಕನಾದ ವೃಷಭವು (ಗೂಳಿಯು) ಯಾವ ರೀತಿ ಶಬ್ದಮಾಡುತ್ತಾ (ಗುಟರು ಹಾಕುತ್ತಾ) ಗೋವುಗಳ ಮಂದೆಯನ್ನು ಪ್ರವೇಶಿಸುವುದೋ ಅದರಂತೆ ಸೋಮರಸವು ಹರಿಯುವಾಗ ಜಳಜಳನೆ ಶಬ್ದಮಾಡುತ್ತಾ ಕಲಶದ ಬಳಿಗೆ ಹೋಗುವುದು.

**ಕನಿಕ್ರದತ್ ಚಮ್ವೋಃ ಆ ವಿವೇಶ**— ಸೋಮಲತೆಗಳನ್ನು ಜಜ್ಜಿ ಹಿಂಡುವುದಕ್ಕಾಗಿ ಸಿದ್ಧವಾಗಿರುವ ಎರಡು ಹಲಗೆಗಳ ಮಧ್ಯದಲ್ಲಿ ಸೋಮಲತೆಗಳನ್ನು ಹೊರಹೊರಡುವ ಸೋಮರಸವು ಹರಿದುಹೋಗಿ ಅದಕ್ಕಾಗಿ ಇಟ್ಟಿರುವ ಕಲಶದೊಳಗೆ ಬೀಳುವುದು.

॥ ಸಂಹಿತಾಪಾಠಃ ॥

ಪವಸ್ವೇಂದೋ ಪವಮಾನೋ ಮಹೋಭಿಃ ಕನಿಕ್ರದತ್ಪರಿ ವಾರಾಣ್ಯರ್ಷ ।
ಕ್ರೀಳಞ್ಚಮ್ವೋ೩ರಾ ವಿಶ ಪೂಯಮಾನ ಇಂದ್ರಂ ತೇ ರಸೋ ಮದಿರೋ
ಮಮತ್ತು ॥ ೨೧ ॥

॥ ಪದಪಾಠಃ ॥

ಪವಸ್ವ । ಇಂದೋ ಇತಿ । ಪವಮಾನಃ । ಮಹಃಽಭಿಃ । ಕನಿಕ್ರದತ್ । ಪರಿ । ವಾರಾಣಿ । ಅರ್ಷ ।
ಕ್ರೀಳನ್ । ಚಮ್ವೋಃ । ಆ । ವಿಶ । ಪೂಯಮಾನಃ । ಇಂದ್ರಂ । ತೇ । ರಸಃ । ಮದಿರಃ । ಮಮತ್ತು ॥೨೧॥

|| ಸಾಯಣಭಾಷ್ಯಂ ||

ಹೇ ಇಂದೋ ಸೋಮ ಮಹೋಭಿಃ ಪೂಜಕೈರ್ಋತ್ವಿಗ್ಭಿಃ ಪವಮಾನಃ ಪೂಯಮಾನಸ್ತ್ವಂ ಪವಸ್ವ । ಕ್ಷರ । ತತಃ ಕನಿಕ್ರದದ್ಭೃಶಂ ಶಬ್ದಂ ಕುರ್ವನ್ ವಾರಾಣ್ಯವೇರ್ವಾಲಾನಿ ಪವಿತ್ರಾಣಿ ಪರ್ಯರ್ಷ। ಪರಿಗಚ್ಛ । ಕಿಂಚ ಪೂಯಮಾನಸ್ತ್ವಂ ಚಮ್ವೋರಧಿಷವಣಫಲಕಯೋಃ ಕ್ರೀಳನ್ ಸಂಕ್ರೀಡಮಾನಃ ಸನ್ನಾ ವಿಶ । ಪಾತ್ರಾಣಿ ಪ್ರವಿಶ । ಅನಂತರಂ ಮದಿರೋ ಮದಕರಸ್ತೇ ತ್ವದೀಯೋ ರಸ ಇಂದ್ರಂ ಮಮತ್ತು । ಮೋದಯತು ॥ ಮಾಮೃತೇರ್ಬಹುಲಂ ಛಂದಸೀತಿ ಶ್ಲುಃ ॥

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ । **ಮಹೋಭಿಃ**—ಪೂಜಕರಾದ ಋತ್ವಿಕ್ಕುಗಳಿಂದ । **ಪವಮಾನಃ**—ಶುದ್ಧಿಯನ್ನು ಹೊಂದಿದ ನೀನು । **ಪವಸ್ವ**—ಪ್ರವಹಿಸು । **ಕನಿಕ್ರದತ್**—ಶಬ್ದಮಾಡುತ್ತ । **ವಾರಾಣಿ**—ದಶಾಪವಿತ್ರದ ಮೂಲಕ । **ಪರ್ಯರ್ಷ**—ಪ್ರವಹಿಸು । **ಪೂಯಮಾನಃ**—ಶುದ್ಧಿಯನ್ನು ಹೊಂದಿದ ನೀನು । **ಚಮ್ವೋಃ**—ಹಿಂಡುವ ಹಲಗೆಗಳ ಮೂಲಕ । **ಕ್ರೀಳನ್**—ವಿಹರಿಸುತ್ತ । **ಆ ವಿಶ**—ಪಾತ್ರೆಗಳಲ್ಲಿ ಪ್ರವಹಿಸು । **ಮದಿರಃ**—ಹರ್ಷಕಾರಕವಾದ । **ತೇ ರಸಃ**—ನಿನ್ನ ರಸವು । **ಇಂದ್ರಂ**—ಇಂದ್ರನನ್ನು । **ಮಮತ್ತು**—ತೃಪ್ತಿಗೊಳಿಸಲಿ.

|| ಭಾವಾರ್ಥ ||

ಎಲೈ ಸೋಮದೇವನೇ, ಪೂಜಕರಾದ ಋತ್ವಿಕ್ಕುಗಳಿಂದ ಶುದ್ಧಿಯನ್ನು ಹೊಂದಿದ ನೀನು ಪ್ರವಹಿಸು. ಶುದ್ಧಿಯನ್ನು ಹೊಂದಿದ ನೀನು ಹಿಂಡುವ ಹಲಗೆಗಳ ಮೂಲಕ ವಿಹರಿಸುತ್ತ ಪಾತ್ರೆಗಳಲ್ಲಿ ಪ್ರವಹಿಸು ಹರ್ಷಕಾರಕವಾದ ನಿನ್ನ ರಸವು ಇಂದ್ರನನ್ನು ತೃಪ್ತಿಗೊಳಿಸಲಿ.

## English Translation.

Flow, Indu, purified by the venerable (priests), rush through the filter crying repeatedly, sporting enter the planks purified, let your exhilarating liquor exhilarate Indra.

|| ವಿಶೇಷವಿಷಯಗಳು ||

ಎಲೈ ಸೋಮದೇವನೇ, ಅಧ್ವರ್ಯುವೇ ಮೊದಲಾದ ಋತ್ವಿಗ್ಜನರು ಮಂತ್ರಪೂರ್ವಕವಾಗಿ ಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆಯುವರು. ಆ ರಸವು ಜಳಜಳನೆ ಶಬ್ದಮಾಡುತ್ತಾ ಹರಿದುಹೋಗಿ ರಸದಲ್ಲಿರುವ ಕಲ್ಮಷಗಳನ್ನು ಶೋಧಿಸುವುದಕ್ಕಾಗಿ ಇಟ್ಟಿರುವ ಪಾತ್ರೆಯಮೇಲೆ ಇರುವ ಉಣ್ಣೆಯ ಪದರಗಳನ್ನು ದಾಟಿಕೊಂಡು ಹೋಗಿ ಪಾತ್ರೆಯೊಳಗೆ ಬೀಳುವುದು. ಮತ್ತು ಅಧಿಷವಣಕ್ಕಾಗಿ ಉಪಯೋಗಿಸುವ ಹಲಗೆಗಳ ಮಧ್ಯದಲ್ಲಿ ಆಟವಾಡುವಂತೆ ಶಬ್ದಮಾಡುತ್ತಿರುವ ಆ ಸೋಮರಸವು ಶುದ್ಧಿಯನ್ನು ಹೊಂದಿ ಇಂದ್ರನ ಪ್ರೀತ್ಯರ್ಥವಾಗಿ ಪ್ರವಹಿಸಲಿ ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಪ್ರಾಸ್ಯ ಧಾರಾ ಬೃಹತೀರಸೃಗ್ರನ್ನಕ್ತೋ ಗೋಭಿಃ ಕಲಶಾಁ ಆ ವಿವೇಶ ।

ಸಾಮ ಕೃಣ್ವನ್ತ್ಸಾಮನ್ಯೋ ವಿಪಶ್ಚಿತ್ಕ್ರಂದನ್ನೇತ್ಯಭಿ ಸಖ್ಯುರ್ನ ಜಾಮಿಂ ॥ ೨೨

॥ ಪದಪಾಠಃ ॥

ಪ್ರ । ಅಸ್ಯ । ಧಾರಾಃ । ಬೃಹತೀಃ । ಅಸೃಗ್ರನ್ । ಅಕ್ತಃ । ಗೋಭಿಃ । ಕಲಶಾನ್ । ಆ । ವಿವೇಶ ।

ಸಾಮ । ಕೃಣ್ವನ್ । ಸಾಮನ್ಯಃ । ವಿಪಃಽಚಿತ್ । ಕ್ರಂದನ್ । ಏತಿ । ಅಭಿ । ಸಖ್ಯುಃ । ನ । ಜಾಮಿಂ ॥೨೨॥

॥ ಸಾಯಣಭಾಷ್ಯಂ ॥

ಅಸ್ಯ ಸೋಮಸ್ಯ ಬೃಹತೀರ್ಬೃಹತ್ಯೋ ಮಹತ್ಯೋ ಧಾರಾಃ ಪ್ರಾಸೃಗ್ರನ್ । ಪ್ರಸೃಜ್ಯಂತೇ ॥ ಸೃಜೇಃ ಕರ್ಮಾರ್ಥೇ ಲಙ್ ವ್ಯತ್ಯಯೇನ ಝೋರನಾದೇಶಃ । ಬಹುಲಂ ಛಂದಸೀತಿ ರುಡಾಗಮಃ ॥ ತತಃ ಸೋಽಯಂ ಸೋಮೋ ಗೋಭಿರ್ಗೋವಿಕಾರೈಃ ಕ್ಷೀರಾದಿಭಿರಕ್ತಃ ಸನ್ ಕಲಶಾನ್ದ್ರೋಣಾಭಿಧಾನಾನಾ ವಿವೇಶ । ಆವಿಶತಿ । ಸಾಮ ಸಾಮಾನಿ ಕೃಣ್ವನ್ ಕುರ್ವನ್ ಸೋಮಃ ಸಾಮನ್ಯಃ ಸಾಮಗಾನಕುಶಲಃ । ಸುಷ್ಠು ಶಬ್ದಾಯಮಾನ ಇತ್ಯರ್ಥಃ । ವಿಪಶ್ಚಿತ್ ಸರ್ವಂ ಜಾನಾನಃ ಸೋಮಃ ಕ್ರಂದನ್ ದೇವಾನಾಹ್ವಯನ್ನಭ್ಯೇತಿ । ಗ್ರಹಾದೀನಿ ತ್ವರಯಾಭಿಗಚ್ಛತಿ । ತತ್ರ ದೃಷ್ಟಾಂತಃ । ಸಖ್ಯುರ್ನ ಸಖ್ಯುರ್ಜಾಮಿಂ ಜಾಯಾಂ ಯಥೇತರೋ ಲಂಪಟೋ ವೇಗೇನಾಭಿಗಚ್ಛತಿ ತದ್ವತ್ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ಸೋಮನ । **ಬೃಹತೀಃ**—ಮಹತ್ತಾದ । **ಧಾರಾಃ**—ಧಾರೆಗಳು । **ಪ್ರ ಅಸೃಗ್ರನ್**—ಪ್ರವಹಿಸುತ್ತವೆ । **ಗೋಭಿಃ**—ಕ್ಷೀರಾದಿಗಳೊಡನೆ । **ಅಕ್ತಃ ಸನ್**—ಸೇರಿಕೊಂಡು । **ಕಲಶಾನ್**—ದ್ರೋಣ ಕಲಶಗಳಲ್ಲಿ । **ಆ ವಿವೇಶ**—ಸೋಮನು ಪ್ರವೇಶಿಸುತ್ತಾನೆ । **ಸಖ್ಯುಃ**—ತನ್ನ ಮಿತ್ರನ । **ಜಾಮಿಂ ನ**—ಸುಂದರಳಾದ ಪತ್ನಿಯಲ್ಲಿಗೆ ಲಂಪಟನಾದ ಪುರುಷನು ಓಡಿಬರುವಂತೆ । **ಸಾಮನ್ಯಃ**—ಸಾಮಗಾನಕುಶಲನೂ । **ವಿಪಶ್ಚಿತ್**—ಪ್ರಾಜ್ಞನೂ ಆದ ಸೋಮನು । **ಸಾಮ**—ಸಾಮಗಾನವನ್ನು । **ಕೃಣ್ವನ್**—ಪಠಿಸುತ್ತಲೂ । **ಕ್ರಂದನ್**—ಶಬ್ದಮಾಡುತ್ತಲೂ । **ಅಭ್ಯೇತಿ**—ಗ್ರಹಪಾತ್ರೆಗಳಿಗೆ ಪ್ರವೇಶಿಸುತ್ತಾನೆ

॥ ಭಾವಾರ್ಥ ॥

ಸೋಮನ ಮಹತ್ತಾದ ಧಾರೆಗಳು ಪ್ರವಹಿಸುತ್ತವೆ. ಸೋಮನು ಕ್ಷೀರಾದಿಗಳೊಡನೆ ಸೇರಿಕೊಂಡು ದ್ರೋಣ ಕಲಶಗಳಲ್ಲಿ ಪ್ರವೇಶಿಸುತ್ತಾನೆ. ಲಂಪಟನಾದ ಪುರುಷನು ತನ್ನ ಮಿತ್ರನ ಸುಂದರಳಾದ ಪತ್ನಿಯಲ್ಲಿಗೆ ಆತುರದಿಂದ ಹೋಗುವಂತೆ, ಸಾಮಗಾನಕುಶಲನೂ, ಪ್ರಾಜ್ಞನೂ ಆದ ಸೋಮನು ಸಾಮಗಾನವನ್ನು ಪಠಿಸುತ್ತಲೂ, ಶಬ್ದ ಮಾಡುತ್ತಲೂ ಗ್ರಹಪಾತ್ರೆಗಳಿಗೆ ಪ್ರವೇಶಿಸುತ್ತಾನೆ.

## English Translation

His copius streams flow forth ; blended with the milk and curds he enters the pitchers; uttering chants the skilful chanter, the omniscient (Soma) hastens invoking (the gods) towards (the cups) like (a libertine) to the wife of a friend.

॥ ವಿಶೇಷವಿಷಯಗಳು ॥

**ಅಸ್ಯ ಧಾರಾಃ ಬೃಹತೀಃ ಪ್ರ ಅಸೃಗ್ರನ್**— ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆಯುವ ಕಾಲದಲ್ಲಿ ಲತೆಗಳಿಂದ ಜಿನುಗಿ ಹೊರಟ ರಸವು ಬಹಳವಾಗಿರುವುದು ಮತ್ತು ಅದು ಪ್ರವಾಹರೂಪದಿಂದ ಧಾರಾಕಾರ ವಾಗಿ ಹರಿದು ಹೋಗುತ್ತಿರುವುದು.

**ಗೋಭಿಃ ಅಕ್ತಃ ಕಲಶಾನ್ ಆ ವಿವೇಶ** ಹೀಗೆ ಹರಿದುಹೋಗುವ ಸೋಮರಸಕ್ಕೆ ಋತ್ವಿಗ್ಜನರು ಹಾಲು ಅಥವಾ ಮೊಸರನ್ನು ಸೇರಿಸಿ ಮಿಶ್ರಮಾಡುವರು. ಈರೀತಿ ಮಿಶ್ರಿತವಾದ ರಸವು ದ್ರೋಣಕಲಶದೊಳಗೆ ಹೋಗಿ ಬೀಳುವುದು. ಇಲ್ಲಿ **ಗೋಭಿಃ** ಎಂದರೆ ಗೋವುಗಳಿಂದ ಒದಗುವ ಹಾಲು ಅಥವಾ ಮೊಸರು ಎಂದರ್ಥವು. ಸೋಮ ರಸವನ್ನು ಹಿಂಡಿದಕೂಡಲೇ ಅದಕ್ಕೆ ಏನನ್ನೂ ಬೆರಿಸದೆ ಹಾಗೆಯೇ ಪಾನಮಾಡುವುದುಂಟು. ಇಂತಹ ಸೋಮರಸಕ್ಕೆ ತೀವ್ರ ಅಥವಾ ಶುಕ್ರ (strong) ಎನ್ನುವರು. ಇನ್ನು ಕೆಲವು ಸಂದರ್ಭಗಳಲ್ಲಿ ಸೋಮರಸಕ್ಕೆ ರುಚಿಯನ್ನುಂಟು ಮಾಡುವುದಕ್ಕಾಗಿ ಅಥವಾ ರಸದ ಪರಿಮಾಣವನ್ನು ಹೆಚ್ಚಿಸುವುದಕ್ಕಾಗಿ ಹಾಲು, ಮೊಸರು ಅಥವಾ ಹಿಟ್ಟು ಇವುಗಳಲ್ಲಿ ಯಾವುದಾದರೂ ಒಂದನ್ನು ಮಿಶ್ರಮಾಡಿ ಉಪಯೋಗಿಸುವರು. ಈ ವಿಧವಾಗಿ ಹಾಲು ಅಥವಾ ಮೊಸರನ್ನು ಮಿಶ್ರ ಮಾಡುವ ವಿಷಯವನ್ನೇ ಇಲ್ಲಿ ಹೇಳಿದೆ.

**ವಿಪಶ್ಚಿತ್ ಸಾಮನ್ಯಃ ಸಾಮ ಕೃಣ್ವನ್ ಕ್ರಂದನ್ ಸಖ್ಯುಃ ಜಾಮಿಂ ನ ಅಭಿ ಏತಿ**—ಸಕಲವನ್ನೂ ತಿಳಿದಿರುವವನೂ ಸಾಮಗಾನಕುಶಲನೂ ಆದ ಈ ಸೋಮದೇವನು ದೇವತೆಗಳನ್ನು ಕರೆಯುತ್ತಾ, ಸ್ನೇಹಿತನ ಪತ್ನಿಯ ಬಳಿಗೆ ಕಾಮಪರವಶನಾದ ಅನ್ಯಪುರುಷನು ಹೋಗುವಂತೆ ಕಲಶದ ಬಳಿಗೆ ಹೋಗುತ್ತಾನೆ. ಇಲ್ಲಿ **ವಿಪಶ್ಚಿತ್** ಎಂದರೆ ಎಲ್ಲವನ್ನೂ ತಿಳಿದಿರುವವನು, ಸರ್ವಜ್ಞನು ಎಂದರ್ಥವು ಸೋಮನಿಗೆ ಎಂದರೆ ಸೋಮಪಾನಮಾಡಿದ ಪುರುಷನಿಗೆ ಬುದ್ಧಿಯು ಚುರುಕಾಗುವುದರಿಂದ, ಆ ಸೋಮಪಾನವೇ ಎಂದರೆ ಆ ಸೋಮನೇ ಸರ್ವಜ್ಞನೆಂದು ಹೇಳಲ್ಪಡುವುದು. **ಸಾಮನ್ಯಃ ಸಾಮ ಕೃಣ್ವನ್**— ಎಂಬ ಶಬ್ದಗಳಿಗೆ ಸಾಮಗಾನಕುಶಲನಾದ ಪುರುಷನು ಸಾಮಗಾನಮಾಡುವಂತೆ ಸೋಮನು ಹರಿಯುವಾಗ ಆಹ್ಲಾದಕರವಾದ ಶಬ್ದಮಾಡುವನೆಂದಭಿಪ್ರಾಯವು. ಅಥವಾ ಸೋಮಾಭಿಷವಣಕಾಲದಲ್ಲಿ ಉದ್ಗಾತೃವೇ ಮೊದಲಾದ ಋತ್ವಿಕ್ಕುಗಳು ಶ್ರಾವ್ಯವಾಗಿ ಸಾಮಗಾನವನ್ನು ಮಾಡುತ್ತಿರುವರು. ಅಂತಹ ಗಾನದಿಂದ ಕೂಡಿದ ಸೋಮನು ದೇವತೆಗಳನ್ನು ಸೋಮಪಾನಾರ್ಥವಾಗಿ ಕರೆಯುತ್ತಿರುವನು ಎಂದು ಸೋಮರಸವು ಹರಿಯು ವಾಗ ಉದ್ಭವಿಸುವ ಶಬ್ದವು ಸೂಚಿಸುವುದು ಎಂಬ ಉತ್ಪ್ರೇಕ್ಷೆಯನ್ನು ಋಷಿಯು ವರ್ಣಿಸಿದಾನೆ. ಇದಲ್ಲದೆ ಸೋಮ ರಸವು ಬೇಗನೆ ಹರಿದುಹೋಗುತ್ತಿರುವ ವಿಚಾರದಲ್ಲಿ ಋಷಿಯು ಒಂದು ದೃಷ್ಟಾಂತವನ್ನು ಹೇಳಿದಾನೆ. ಸ್ನೇಹಿತನ ಪತ್ನಿಯಲ್ಲಿ ಆಸಕ್ತನಾದ ಓರ್ವ ಪರಪುರುಷನು ತನ್ನ ಕಾಮಪೂರ್ತಿಗಾಗಿ ಯಾವರೀತಿ ಬೇಗಬೇಗನೆ ಆ ಸ್ತ್ರೀಯ ಬಳಿಗೆ ಹೋಗುವನೋ ಅದರಂತೆ ಈ ಸೋಮರಸವು ಬೇಗನೆ ಹರಿದುಹೋಗುತ್ತಿರುವುದೆಂದು ವರ್ಣಿಸಲಾಗಿದೆ. ಇಲ್ಲಿ ಸ್ನೇಹಿತನ

ಪತ್ನಿಯ ಬಳಿಗೆ ಇತರ ಪುರುಷನು ಹೋಗುವ ದೃಷ್ಟಾಂತವನ್ನು ಹೇಳಿರುವ ಕಾರಣವೇನೆಂದರೆ—ಸ್ನೇಹಿತನ ಪತ್ನಿಯ ಬಳಿಗೆ ಇತರ ಪುರುಷನು ಹೋಗುವುದು ಕೆಟ್ಟಕೆಲಸವೆಂದು ಪ್ರಸಿದ್ಧವು ಇಂತಹ ದುಷ್ಟಕರ್ಮವನ್ನು ಯಾರಿಗೂ ತಿಳಿಯದಂತೆ ಗುಟ್ಟಾಗಿಯೂ ಅದಷ್ಟು ಜಾಗ್ರತೆಯಾಗಿಯೂ ಮಾಡಬೇಕಾಗಿರುವುದರಿಂದ ಆ ಪುರುಷನು ತನ್ನ ಸ್ನೇಹಿತನ ಪತ್ನಿಯ ಬಳಿಗೆ ಬೇಗಬೇಗನೆ ಹೋಗುವನು. ಈರೀತಿ ಶೀಘ್ರವಾಗಿ ಹೋಗುವುದನ್ನು ಸೂಚಿಸುವುದಕ್ಕಾಗಿ ಋಷಿಯು ಸ್ನೇಹಿತನ ಪತ್ನಿಯ ಬಳಿಗೆ ಅನ್ಯಪುರುಷನು ಹೋಗುವ ದೃಷ್ಟಾಂತವನ್ನು ವಿವರಿಸಿರುವನು.

॥ ಸಂಹಿತಾಪಾಠಃ ॥

**ಅಪಘ್ನನ್ನೇಷಿ ಪವಮಾನ ಶತ್ರೂನ್ಪ್ರಿಯಾಂ ನ ಜಾರೋ ಅಭಿಗೀತ ಇಂದುಃ ।**
**ಸೀದನ್ವನೇಷು ಶಕುನೋ ನ ಪತ್ವಾ ಸೋಮಃ ಪುನಾನಃ ಕಲಶೇಷು ಸತ್ತಾ ॥ ೨೨ ॥**

॥ ಪದಪಾಠಃ ॥

**ಅಪ್ಽಘ್ನನ್ । ಏಷಿ । ಪವಮಾನ । ಶತ್ರೂನ್ । ಪ್ರಿಯಾಂ । ನ । ಜಾರಃ । ಅಭಿಽಗೀತಃ । ಇಂದುಃ ॥**
**ಸೀದನ್ । ವನೇಷು । ಶಕುನಃ । ನ । ಪತ್ವಾ । ಸೋಮಃ । ಪುನಾನಃ । ಕಲಶೇಷು । ಸತ್ತಾ ॥ ೨೨ ॥**

॥ ಸಾಯಣಭಾಷ್ಯಂ ॥

ಹೇ ಪವಮಾನ ಪೂಯಮಾನ ಸೋಮ ಅಭಿಗೀತಃ ಸ್ತೋತೃಭಿರಭಿಷ್ಟುತ ಇಂದುಃ ಪಾತ್ರೇಷು ಕ್ಷರಂಸ್ತ್ವಂ ಶತ್ರೂನಪಘ್ನನ್ನಪಹಿಂಸನ್ನೇಷಿ । ಆಗಚ್ಛಸಿ । ಕಥಮಿವ । ಜಾರಃ ಪ್ರಿಯಾಂ ನ ಪ್ರಿಯತಮಾಮಸತೀಂ ಸ್ತ್ರೀಮನ್ಯಾನ್ಬಾಧಮಾನಃ ಸನ್ಯಥಾಭಿಗಚ್ಛತಿ ತದ್ವತ್ । ಪತ್ವಾ ಪತನಶೀಲಃ ಶಕುನೋ ನ ಯಥಾ ಶಕುನೋ ವನೇಷು ವೃಕ್ಷೇಷು ಸೀದನ್ಭವತಿ ತದ್ವತ್ ಪತನಶೀಲಃ । ಪುನಾನಃ ಪೂಯಮಾನಃ ಸೋಮಃ ಕಲಶೇಷು ಸತ್ತಾ ಸದನಶೀಲೋ ನಿಷಣ್ಣೋ ಭವತಿ ॥ ಸದೇಸ್ತಾಚ್ಛೀಲಿಕಸ್ತೃನ್ ಏಕಾಚ ಇತೀಟ್ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

**ಪವಮಾನ**—ಎಲೈ ಸೋಮದೇವನೇ । **ಜಾರಃ**—ಲಂಪಟನಾದ ಪುರುಷನು । **ಪ್ರಿಯಾಂ ನ**—ಪ್ರಿಯತಮಳಾದ ಪತ್ನಿಯಲ್ಲಿಗೆ ಹೋಗುವಂತೆ । **ಅಭಿಗೀತಃ**—ಪ್ರಶಂಸಿತನೂ । **ಇಂದುಃ**—ಪ್ರವಾಹರೂಪನೂ ಆದ ನೀನು । **ಶತ್ರೂನ್**—ಶತ್ರುಗಳನ್ನು । **ಅಪಘ್ನನ್**—ನಾಶಪಡಿಸುತ್ತ । **ಏಷಿ**—ಪ್ರವಹಿಸುತ್ತೀಯೆ । **ಪತ್ವಾ**—ಅತಿಶಯವಾಗಿ ಹಾರುವ । **ಶಕುನಃ**—ಪಕ್ಷಿಯು । **ವನೇಷು**—ವೃಕ್ಷಗಳಲ್ಲಿ । **ಸೀದನ್ ನ**—ಕುಳಿತುಕೊಳ್ಳುವಂತೆ । **ಪುನಾನಃ**—ಶುದ್ಧಿಯನ್ನು ಹೊಂದಿದ । **ಸೋಮಃ**—ಸೋಮನು । **ಕಲಶೇಷು**—ದ್ರೋಣಕಲಶಗಳಲ್ಲಿ । **ಸತ್ತಾ**—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಎಲೈ ಸೋಮದೇವನೇ, ಲಂಪಟನಾದ ಪುರುಷನು ಪ್ರಿಯತಮಳಾದ ಅನ್ಯಪುರುಷನ ಪತ್ನಿಯಲ್ಲಿಗೆ ಹೋಗುವಂತೆ ಪ್ರಶಂಸಿತನೂ ಪ್ರವಾಹರೂಪನೂ ಆದ ನೀನು ಶತ್ರುಗಳನ್ನು ನಾಶಪಡಿಸುತ್ತ ಪ್ರವಹಿಸುತ್ತೀಯೆ. ಅತಿಶಯವಾಗಿ ಹಾರುವ ಪಕ್ಷಿಯು ವೃಕ್ಷಗಳಲ್ಲಿ ಕುಳಿತುಕೊಳ್ಳುವಂತೆ ಶುದ್ಧಿಯನ್ನು ಹೊಂದಿದ ಸೋಮನು ದ್ರೋಣಕಲಶಗಳಲ್ಲಿ ಕುಳಿತುಕೊಳ್ಳುತ್ತಾನೆ.

## English Translation.

O Pavamana, eulogized (by the worshippers), distilling (into the receptacles), destroying the enemies you go like a gallant to his mistress; falling like a bird alighting on the trees the Soma when purified alights upon the pitchers.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಋಷಿಯು ಎರಡು ದೃಷ್ಟಾಂತಗಳ ಮೂಲಕ ಋಕ್ಕಿನ ಅರ್ಥವನ್ನೂ ವಿಶದಪಡಿಸಿರುತ್ತಾನೆ. ಸೋಮದೇವನು ಶತ್ರುಗಳನ್ನು ನಾಶಪಡಿಸುವ ವಿಷಯದಲ್ಲಿ—**ಜಾರಃ ಪ್ರಿಯಾಂ ನ** | **ಜಾರಃ ಪ್ರಿಯತಮಾಮಸತೀಂ ಸ್ತ್ರೀಮನ್ಯಾಂ ಬಾಧಮಾನಃ ಸನ್ ಯಥಾಭಿಗಚ್ಛತಿ ತದ್ವತ್** | ಜಾರನು ಎಂದರೆ ಸ್ತ್ರೀಲಂಪಟನಾದ ಒಬ್ಬ ಪುರುಷನು ಇತರ ಪುರುಷನ ಪತ್ನಿಯಾದ ತನಗೆ ಪ್ರೀತಿಪಾತ್ರಳಾದ ಓರ್ವ ಸ್ತ್ರೀಯನ್ನು ಸೇರಿ ಅವಳ ಶೀಲವನ್ನು ಕೆಡಿಸುವಂತೆ ಸೋಮದೇವನು ಶತ್ರುಗಳನ್ನು ನಾಶಮಾಡುವನು ಎಂದು ಹೇಳಿದೆ. ಹರಿದುಹೋಗುತ್ತಿರುವ ಸೋಮರಸವು ಪಾತ್ರೆಯೊಳಗೆ ಹೋಗಿ ಬೀಳುವುದನ್ನು ಮತ್ತೊಂದು ದೃಷ್ಟಾಂತದಿಂದ ಹೇಳಲಾಗಿದೆ—**ಪತ್ವಾ ಶಕುನಃ ವನೇಷು ಸೀದನ್ ನ ಸೋಮಃ ಕಲಶೇಷು ಸತ್ತಾ**— ವಿಶೇಷವಾಗಿ ಹಾರಾಡುತ್ತಿರುವ ಒಂದು ಪಕ್ಷಿಯು ಹಾರಾಡುವುದರಿಂದ ಬಳಲಿ ಬೆಂಡಾಗಿ ಆಯಾಸಪರಿಹಾರಾರ್ಥವಾಗಿ ಒಂದು ವೃಕ್ಷದ ಕೊಂಬೆಗಳಲ್ಲಿ ಕುಳಿತು ವಿಶ್ರಮಿಸಿಕೊಳ್ಳುವಂತೆ ಬೇಗಬೇಗನೆ ಹರಿಯುತ್ತಿರುವ ಸೋಮರಸವು ತನ್ನ ನಿವಾಸಸ್ಥಾನವಾದ ದ್ರೋಣಕಲಶಾದಿಗಳಲ್ಲಿ ಹೋಗಿ ಸೇರಿಕೊಳ್ಳುತ್ತದೆ.

|| ಸಂಹಿತಾಪಾಠಃ ||

**ಆ ತೇ ರುಚಃ ಪವಮಾನಸ್ಯ ಸೋಮ ಯೋಷೇವ ಯಂತಿ ಸುದುಘಾಃ ಸುಧಾರಾಃ |**

**ಹರಿರಾನೀತಃ ಪುರುವಾರೋ ಅಪ್ಸ್ವಚಿಕ್ರದತ್ಕಲಶೇ ದೇವಯೂನಾಂ ||೧೪||**

|| ಪದಪಾಠಃ ||

ಆ | ತೇ | ರುಚಃ | ಪವಮಾನಸ್ಯ | ಸೋಮ | ಯೋಷಾऽಇವ | ಯಂತಿ | ಸುऽದುಘಾಃ | ಸುऽಧಾರಾಃ |

ಹರಿಃ | ಆऽನೀತಃ | ಪುರುऽವಾರಃ | ಅಪ್ऽಸು | ಅಚಿಕ್ರದತ್ | ಕಲಶೇ | ದೇವऽಯೂನಾಂ || ೧೪ ||

|| ಸಾಯಣಭಾಷ್ಯಂ ||

ಹೇ ಸೋಮ ಪವಮಾನಸ್ಯ ಪೂಯಮಾನಸ್ಯ ತೇ ತವ ಸ್ವಭೂತಾ ಯೋಷೇವ ಸ್ತ್ರೀ ಯಥಾ ಪುತ್ರಾಣಾಂ ಪಯೋ ದೋಗ್ಧಿ ತದ್ವದ್ಯಜಮಾನಾನಾಂ ಧನಾದಿಕಸ್ಯ ಸುಷ್ಠು ದೋಗ್ಧ್ರ್ಯಃ ಸುಧಾರಾಃ ಶೋಭನಧಾರೋಪೇತಾ ರುಚೋ ದೀಪ್ತಯ ಆ ಯಂತಿ | ಪಾತ್ರಾದೀನ್ಯಾಗಚ್ಛಂತಿ | ಕಿಂಚ | ಹರಿರ್ಹರಿತವರ್ಣ ಆನೀತ ಋತ್ವಿಗ್ಭಿಃ ಪುರುವಾರೋ ಬಹುಧಾ ವರಣೀಯಃ ಸೋಮೋಽಪ್ಸು ವಸತೀವರೀಷು ದೇವಯೂನಾಂ ದೇವಾನಿಚ್ಛತಾಂ ಯಜಮಾನಾನಾಂ ಸ್ವಭೂತೇ ಕಲಶೇ ದ್ರೋಣಾಖ್ಯೇ ಚಾಚಿಕ್ರದತ್ | ಪುನಃಪುನಃ ಕ್ರಂದತೇ | ಶಬ್ದಾಯತೇ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ಯೋಷೇವ**—ಮಾತೆಯು ಮಗುವಿಗೆ ಕ್ಷೀರವನ್ನು ಕೊಡುವಂತೆ | **ಪವಮಾನಸ್ಯ**—ಶುದ್ಧಿಯನ್ನು ಹೊಂದುವ | **ತೇ**—ನಿನ್ನ | **ಸುಧಾರಾಃ**—ಧಾರಾರೂಪದಲ್ಲಿರುವುವೂ | **ಸುದುಘಾಃ**—ಧನಾದಿಗಳನ್ನು ಕರೆಯುವುವೂ | **ರುಚಃ**—ಕಾಂತಿಯುತವಾದವೂ ಆದ ಸೋಮರಸಗಳು | **ಆ ಯಂತಿ**—ಪಾತ್ರೆಗಳಿಗೆ ಹೋಗಿ ಸೇರುತ್ತವೆ | **ಹರಿಃ**—ಪಚ್ಚೆವರ್ಣವುಳ್ಳವನೂ | **ಆನೀತಃ**—ಋತ್ವಿಕ್ಕುಗಳಿಂದ ತರಲ್ಪಟ್ಟವನೂ | **ಪುರುವಾರಃ**—ಅನೇಕರ ಆದರಕ್ಕೆ ಪಾತ್ರನೂ ಆದ ಸೋಮನು | **ಅಪ್ಸು**—ವಸತೀವರಿಗಳಲ್ಲಿ ಸೇರಿ | **ದೇವಯೂನಾಂ**—ದೇವತೆಗಳನ್ನಿಚ್ಛಿಸುವ ಯಜಮಾನರ | **ಕಲಶೇಷು**—ದ್ರೋಣಕಲಶಗಳಲ್ಲಿ | **ಸತ್ತಾ**—ಕುಳಿತುಕೊಳ್ಳುತ್ತಾನೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮಾತೆಯು ಮಗುವಿಗೆ ಕ್ಷೀರವನ್ನು ಹಿಂಡಿಕೊಡುವಂತೆ ಶುದ್ಧಿಯನ್ನು ಹೊಂದುವ ನಿನ್ನ ಧಾರಾರೂಪವೂ ಕಾಂತಿಯುತವೂ ಧನಾದಿಗಳನ್ನು ಕರೆಯುವುವೂ ಆದ ಸೋಮರಸಗಳು ಪಾತ್ರೆಗಳಿಗೆ ಹೋಗಿ ಸೇರುತ್ತವೆ. ಪಚ್ಚೆವರ್ಣವುಳ್ಳವನೂ, ಋತ್ವಿಕ್ಕುಗಳಿಂದ ತರಲ್ಪಟ್ಟವನೂ, ಅನೇಕರ ಆದರಕ್ಕೆ ಪಾತ್ರನೂ ಆದ ಸೋಮನು ವಸತೀವರಿಗಳಲ್ಲಿ ಸೇರಿ ದೇವತೆಗಳನ್ನಿಚ್ಛಿಸುವ ಯಜಮಾನರ ದ್ರೋಣಕಲಶಗಳಲ್ಲಿ ಕುಳಿತುಕೊಳ್ಳುತ್ತಾನೆ.

## English Translation.

The lustres, Soma, of you when being purified, approach with abundant milk with copious streams like a woman (giving milk to her child) ; the green-tinted Soma, the desired of many, has been brought to the waters and cries repeatedly in the pitcher of god-loving (worshippers).

|| ವಿಶೇಷವಿಷಯಗಳು ||

**ಸೋಮ ತೇ ಸುಧಾರಾಃ ರುಚಃ ಯೋಷೇವ ಸುದುಘಾಃ** — ಎಲೈ ಸೋಮದೇವನೇ, ಧಾರೆಧಾರೆಯಾಗಿ ಪ್ರವಾಹರೂಪದಲ್ಲಿ ಹರಿಯುತ್ತಿರುವವೂ, ಪ್ರಕಾಶಮಾನವೂ (ಸ್ವಚ್ಛವೂ) ಆದ ಸೋಮರಸಗಳು, ತಾಯಿಯು ತನ್ನ ಮಕ್ಕಳಿಗೆ ಆದರದಿಂದ ಸ್ತನ್ಯಪಾನಮಾಡಿಸುವಂತೆ (ಎಂದರೆ ಹಾಲುಕೊಡುವಂತೆ) ಯಜ್ಞನಿರತರಾದ ಯಜಮಾನರಿಗೆ ಧನಾದಿಗಳನ್ನು ಕೊಡುವವು ಎಂದಭಿಪ್ರಾಯವು

# ತೊಂಭತ್ತೇಳನೆಯ ಸೂಕ್ತವು

## ಪೀಠಿಕೆ

ಈ ಸೂಕ್ತದಲ್ಲಿ ೫೮ ಋಕ್ಕುಗಳಿವೆ. ಋಗ್ವೇದದಲ್ಲೆಲ್ಲಾ ಇದೇ ದೊಡ್ಡ ಸೂಕ್ತ. ಅತ್ಯಂತ ಸಣ್ಣ ಸೂಕ್ತವೆಂದರೆ ಮೊದಲನೇ ಮಂಡಲದ ೯೯ ನೇ ಸೂಕ್ತ. ಇದರಲ್ಲಿ ಒಂದೇ ಒಂದು ಋಕ್ಕು ಮಾತ್ರ ಇದೆ. ಸಾಧಾರಣವಾಗಿ ಋಗ್ವೇದದಲ್ಲಿ ಒಂದೊಂದು ಸೂಕ್ತಕ್ಕೆ ಒಬ್ಬೊಬ್ಬ ಋಷಿಮಾತ್ರವಿದ್ದರೂ ಒಬ್ಬರಿಗಿಂತ ಹೆಚ್ಚುಮಂದಿ ಋಷಿಗಳಿರುವ ಸೂಕ್ತಗಳೂ ಅನೇಕವಿವೆ. ಆದರೆ ಪ್ರಕೃತ ಸೂಕ್ತದಲ್ಲಿ ೧೨ ಮಂದಿ ಋಷಿಗಳಿರುವರು. ಅವರಲ್ಲಿ ಕೊನೆಯ ಇಬ್ಬರು ಹೊರತು ಉಳಿದವರು ವಸಿಷ್ಠಗೋತ್ರದವರು. ಇವರೆಲ್ಲರೂ ಒಟ್ಟಿಗೆ ಒಂದೆಡೆ ಸೇರಿ ಈ ಸೂಕ್ತವನ್ನು ರಚಿಸಿ ಸೋಮವನ್ನು ಸ್ತೋತ್ರಮಾಡಿರುವರೆಂದು ತಿಳಿಯಕೂಡದು. ಇವರೆಲ್ಲರೂ ಯಾವಾಗಲೋ ರಚಿಸಿ ಬಳಕೆಯಲ್ಲಿದ್ದ ಈ ಋಕ್ಕುಗಳನ್ನೆಲ್ಲಾ ಋಗ್ವೇದ ಮಂತ್ರಗಳನ್ನು ಬಹಳ ಹಿಂದೆ ವಿಂಗಡಿಸಿ ಈಗಿರುವ ಸ್ಥಿತಿಯಲ್ಲಿ ರೂಪಗೊಳಿಸಿರುವ ಪುರಾತನ ಋಷಿಗಳು ಇವನ್ನೆಲ್ಲಾ ಒಟ್ಟುಗೂಡಿಸಿ ಒಂದು ಸೂಕ್ತವನ್ನಾಗಿ ಪರಿವರ್ತಿಸಿದಾರೆ. ಈ ವಿಧವಾದ ಸೂಕ್ತಗಳು ಋಗ್ವೇದದಲ್ಲಿ ಕೆಲವು ಮಾತ್ರ ಇರುತ್ತವೆ.

॥ ಸಾಯಣಭಾಷ್ಯಂ ॥

**ಷಷ್ಠೇನುವಾಕೇ ಸಪ್ತ ಸೂಕ್ತಾನಿ । ತತ್ರಾಸ್ಯ ಪ್ರೇಷೇತ್ಯಷ್ಟಾಪಂಚಾಶದೃಚಂ ಪ್ರಥಮಂ ಸೂಕ್ತಂ ತ್ರೈಷ್ಟುಭಂ ಪವಮಾನಸೋಮದೇವತಾಕಂ । ತತ್ರಾದ್ಯಸ್ಯ ತೃಚಸ್ಯ ಮೈತ್ರಾವರುಣೋ ವಸಿಷ್ಠ ಋಷಿಃ । ದ್ವಿತೀಯಸ್ಯೇಂದ್ರಪ್ರಮತಿರ್ನಾಮ । ತೃತೀಯಸ್ಯ ವೃಷಗಣಃ । ಚತುರ್ಥಸ್ಯ ಮನ್ಯುಃ । ಪಂಚಮಸ್ಯೋಪಮನ್ಯುಃ । ಷಷ್ಠಸ್ಯ ವ್ಯಾಘ್ರಪಾತ್ । ಸಪ್ತಮಸ್ಯ ಶಕ್ತಿಃ । ಅಷ್ಟಮಸ್ಯ ಕರ್ಣಶ್ರುತ್ । ನವಮಸ್ಯ ಮೃಳೀಕಃ । ದಶಮಸ್ಯ ವಸುಕ್ರಃ । ಏತೇ ಸರ್ವೇ ವಸಿಷ್ಠಗೋತ್ರಾಃ । ಏವಂ ತ್ರಿಂಶದೃಚೋ ಗತಾಃ । ಅಥ ಚತುರ್ದಶಾನಾಮೃಚಾಂ ಶಕ್ತಿಪುತ್ರಃ ಪರಾಶರ ಋಷಿಃ । ಶಿಷ್ಟಾನಾಮಾಂಗಿರಸಃ ಕುತ್ಸಃ । ತಥಾನುಕ್ರಮ್ಯತೇ । ಅಸ್ಯ ಪ್ರೇಷಾಷ್ಟಾಪಂಚಾಶದಾದ್ಯಂ ತೃಚಂ ವಸಿಷ್ಠೋಽಪಶ್ಯದುತ್ತರಾನ್ನವ ಪೃಥಗ್ವಸಿಷ್ಠಾ ಇಂದ್ರಪ್ರಮತಿರ್ವೃಷಗಣೋ ಮನ್ಯುರುಪಮನ್ಯುರ್ವ್ಯಾಘ್ರಪಾಚ್ಛಕ್ತಿಃ ಕರ್ಣಶ್ರುನ್ಮೃಳೀಕೋ ವಸುಕ್ರ ಇತಿ ಚತುರ್ದಶ ಪರಾಶರೋಽಂತ್ಯಾಃ ಕುತ್ಸ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—ಋಗ್ವೇದಸಂಹಿತೆಯ ಒಂಭತ್ತನೆಯ ಮಂಡಲದ ಆರನೆಯ ಅನುವಾಕದಲ್ಲಿ ಏಳು ಸೂಕ್ತಗಳಿರುವವು. ಅವುಗಳಲ್ಲಿ **ಅಸ್ಯ ಪ್ರೇಷಾ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಐವತ್ತೆಂಟು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಮೊದಲ ಮೂರು ಋಕ್ಕುಗಳಿವೆ (೧–೩) ಮಿತ್ರಾವರುಣದ ಪುತ್ರನಾದ ವಸಿಷ್ಠನು ಋಷಿಯು ; ನಾಲ್ಕರಿಂದ ಆರರವರೆಗಿನ (೪–೬) ಋಕ್ಕುಗಳಿಗೆ ಇಂದ್ರಪ್ರಮತಿಯೆಂಬುವನು ಋಷಿಯು ; ಏಳರಿಂದ ಒಂಭತ್ತವರೆಗಿನ ಋಕ್ಕುಗಳಿಗೆ (೭–೯) ವೃಷಗಣಃ ಎಂಬುವನು ಋಷಿಯು ; ಹತ್ತರಿಂದ ಹನ್ನೆರಡರವರೆಗಿನ ಋಕ್ಕುಗಳಿಗೆ (೧೦ ೧೨) ಮನ್ಯುಃ ಎಂಬುವನು ಋಷಿಯು ; ಹದಿಮೂರರಿಂದ ಹದಿನೈದರವರೆಗಿನ ಋಕ್ಕುಗಳಿಗೆ (೧೩–೧೫) ಉಪಮನ್ಯು ಎಂಬುವನು ಋಷಿಯು ; ಹದಿನಾರರಿಂದ ಹದಿನೆಂಟರವರೆಗಿನ ಋಕ್ಕುಗಳಿಗೆ (೧೬–೧೮) ವ್ಯಾಘ್ರಪಾತ್

ಎಂಬುವನು ಋಷಿಯು; ಹತ್ತೊಂಭತ್ತರಿಂದ ಇಪ್ಪತ್ತೊಂದರವರೆಗಿನ ಋಕ್ಕುಗಳಿಗೆ (೧೯-೨೧) ಶಕ್ತಿಃ ಎಂಬುವನು ಋಷಿಯು ; ಇಪ್ಪತ್ತೆರಡರಿಂದ ಇಪ್ಪತ್ತನಾಲ್ಕನೆಯ ಋಕ್ಕುಗಳಿಗೆ (೨೨-೨೪) ಕರ್ಣಶ್ರುತ್ ಎಂಬುವನು ಋಷಿಯು ; ಇಪ್ಪತ್ತೈದರಿಂದ ಇಪ್ಪತ್ತೇಳರವರೆಗಿನ ಋಕ್ಕುಗಳಿಗೆ (೨೫-೨೭) ಮೃಳೀಕಃ ಎಂಬುವನು ಋಷಿಯು ; ಇಪ್ಪತ್ತೆಂಟರಿಂದ ಮೂವತ್ತರವರೆಗಿನ ಋಕ್ಕುಗಳಿಗೆ (೨೮-೩೦) ವಸುಕ್ರಃ ಎಂಬುವನು ಋಷಿಯು ; ಇವರೆಲ್ಲರೂ ವಸಿಷ್ಠಗೋತ್ರದವರು ; ಇಲ್ಲಿಗೆ ಮೂವತ್ತು ಋಕ್ಕುಗಳಾದವು. ಇಲ್ಲಿಂದ ಮುಂದಿನ ಹದಿನಾಲ್ಕು ಋಕ್ಕುಗಳಿಗೆ (೩೧-೪೪) ಶಕ್ತಿಪುತ್ರನಾದ ಪರಾಶರಃ ಎಂಬುವನು ಋಷಿಯು ; ಉಳಿದ ಋಕ್ಕುಗಳಿಗೆ (೪೫-೫೮) ಕುತ್ಸ ಎಂಬುವನು ಋಷಿಯು ; ಪವಮಾನಸೋಮನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಸ್ಯ ಪ್ರೇಷಾಷ್ಟಾಪಂಚಾಶದಾದ್ಯಂ ತೃಚಂ ವಸಿಷ್ಠೋಽಪಶ್ಯದುತ್ತರಾನ್ನವ ಪೃಥಗ್ವಸಿಷ್ಠಾ ಇಂದ್ರಪ್ರಮತಿರ್ವೃಷಗಣೋ ಮನ್ಯುರುಪಮನ್ಯುರ್ವ್ಯಾಘ್ರಪಾಚ್ಛಕ್ತಿಃ ಕರ್ಣಶ್ರುನ್ಮೃಳೀಕೋ ವಸುಕ್ರ ಇತಿ ಚತುರ್ದಶ ಪರಾಶರೋಽನ್ತ್ಯಾಃ ಕುತ್ಸಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೭

ಮಂಡಲ—೯ ॥ ಅನುವಾಕ—೬ ॥ ಸೂಕ್ತ—೯೭ ॥

ಅಷ್ಟಕ—೭ ॥ ಅಧ್ಯಾಯ—೪ ॥ ವರ್ಗ—೧೧, ೧೨, ೧೩, ೧೪, ೧೫, ೧೬, ೧೭, ೧೮, ೧೯, ೨೦, ೨೧, ೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫೮ ॥

॥ ಋಷಿಃ—೧-೩. ವಸಿಷ್ಠಃ । ೪-೬. ಇಂದ್ರಪ್ರಮತಿರ್ವಾಸಿಷ್ಠಃ । ೭-೯. ವೃಷಗಣೋವಾಸಿಷ್ಠಃ । ೧೦-೧೨. ಮನ್ಯುರ್ವಾಸಿಷ್ಠಃ । ೧೩-೧೫. ಉಪಮನ್ಯುರ್ವಾಸಿಷ್ಠಃ ೧೬-೧೮. ವ್ಯಾಘ್ರಪಾದ್ವಾಸಿಷ್ಠಃ ೧೯-೨೧. ಶಕ್ತಿರ್ವಾಸಿಷ್ಠಃ । ೨೨-೨೪. ಕರ್ಣಶ್ರುದ್ವಾಸಿಷ್ಠಃ । ೨೫-೨೭. ಮೃಳೀಕೋವಾಸಿಷ್ಠಃ । ೨೮-೩೦. ವಸುಕ್ರೋ ವಾಸಿಷ್ಠಃ । ೩೧-೪೪. ಪರಾಶರಃ । ೪೫-೫೮. ಕುತ್ಸಃ ॥

॥ ದೇವತಾ—ಪವಮಾನಃ ಸೋಮಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಸ್ಯ ಪ್ರೇಷಾ ಹೇಮನಾ ಪೂಯಮಾನೋ ದೇವೋ ದೇವೇಭಿಃ ಸಮಪೃಕ್ತ ರಸಂ ।
ಸುತಃ ಪವಿತ್ರಂ ಪರ್ಯೇತಿ ರೇಭನ್ಮಿತೇವ ಸದ್ಮ ಪಶುಮಾಂತಿ ಹೋತಾ ॥೧॥

॥ ಪದಪಾಠಃ ॥

ಅಸ್ಯ । ಪ್ರೇಷಾ । ಹೇಮನಾ । ಪೂಯಮಾನಃ । ದೇವಃ । ದೇವೇಭಿಃ । ಸಂ । ಅಪೃಕ್ತ । ರಸಂ ।
ಸುತಃ । ಪವಿತ್ರಂ । ಪರಿ । ಏತಿ । ರೇಭನ್ । ಮಿತಾಽಇವ । ಸದ್ಮ । ಪಶುಽಮಂತಿ । ಹೋತಾ ॥ ೧ ॥

॥ ಸಾಯಣಭಾಷ್ಯಂ ॥

ಅಸ್ಯ ಸೋಮಸ್ಯ ಪ್ರೇಷಾ ॥ ಪ್ರೇಷತಿರ್ಗತ್ಯರ್ಥಃ । ಕ್ವಿಪಿ ರೂಪಂ । ಸಾವೇಕಾಚ ಇತಿ ವಿಭಕ್ತೇ-ರುದಾತ್ತತ್ವಂ ॥ ಪ್ರೇಷಾ ಪ್ರೇರಕೇಣ ಹೇಮನಾ ಹಿರಣ್ಯೇನ ಪೂಯಮಾನಃ । ಹಿರಣ್ಯಪಾಣಿರಭಿಷುಣೋ-ತೀತಿ ಹಿರಣ್ಯಸಂಬಂಧಃ । ತಾದೃಶೋ ದೇವೋ ದೀಪ್ಯಮಾನಾಂಶೂ ರಸಮಾತ್ಮೀಯಂ : ದೇವೇಭಿರ್ದೇವೈಃ ಸಹ ಸಮಪೃಕ್ತ । ಸಂಪರ್ಚಯತಿ । ಸಂಯೋಜಯತಿ ॥ ಪೃಚೀ ಸಂಪರ್ಕೇ ॥ ತತಃ ಸುತೋಽಭಿಷುತಃ ಸೋಮೋ ರೇಭಞ್ಛಬ್ದಾಯಮಾನಃ ಸನ್ ಪವಿತ್ರಮೂರ್ಣಾಸ್ತುಕೇನ ನಿರ್ಮಿತಂ ಪರ್ಯೇತಿ । ಪರಿಗಚ್ಛತಿ। ಕಥಮಿವ । ಹೋತಾ ದೇವಾನಾಮಾಹ್ವಾತರ್ತ್ವಿಜ್ಮಿತೇವ ನಿರ್ಮಿತಾನ್ ಪಶುಮಂತಿ ಬದ್ಧಪಶೂನ್ ಸದ್ಮ ಸದನಾನಿ ಯಜ್ಞಗೃಹಾನ್ಯಥಾ ಪರ್ಯೇತಿ ತದ್ವತ್ ॥

॥ ಪ್ರತಿಪದಾರ್ಥ ॥

**ಪ್ರೇಷಾ**—ಪ್ರೇರಕವಾದ । **ಹೇಮನಾ**—ಹಿರಣ್ಯದಿಂದ । **ಪೂಯಮಾನಃ**—ಶುದ್ಧಿಯನ್ನು ಹೊಂದಿದ । **ಅಸ್ಯ**—ಈ ಸೋಮನ । **ದೇವಃ**—ಪ್ರಕಾಶಮಾನವಾದ ಅಂಶುವು । **ರಸಂ**—ತನ್ನ ರಸವನ್ನು । **ದೇವೇಭಿಃ**—ದೇವತೆಗಳೊಡನೆ । **ಸಮಪೃಕ್ತ**—ಒಂದುಗೂಡಿಸುತ್ತದೆ । **ಹೋತಾ**—ಹೋತೃವು । **ಮಿತಾ**—ಉತ್ತಮವಾಗಿ ನಿರ್ಮಿತವೂ । **ಪಶುಮಂತಿ**—ಯಜ್ಞಪಶುಗಳಿಂದ ಕೂಡಿದುದೂ ಆದ । **ಸದ್ಮ ಇವ**—ಯಜ್ಞಸದನವನ್ನು ಪ್ರವೇಶಿಸುವಂತೆ । **ಸುತಃ**—ಹಿಂಡಲ್ಪಟ್ಟ ಸೋಮನು । **ರೇಭನ್**—ಶಬ್ದಮಾಡುತ್ತ । **ಪವಿತ್ರಂ**—ದಶಾಪವಿತ್ರವನ್ನು । **ಪರ್ಯೇತಿ**—ಹೋಗಿ ಪ್ರವೇಶಿಸುತ್ತಾನೆ.

॥ ಭಾವಾರ್ಥ ॥

ಕರ್ಮಪ್ರೇರಕವಾದ ಹಿರಣ್ಯದಿಂದ ಶುದ್ಧಿಯನ್ನು ಹೊಂದಿದ ಸೋಮನು ಪ್ರಕಾಶಮಾನವಾದ ತನ್ನ ರಸವನ್ನು ದೇವತೆಗಳೊಡನೆ ಒಂದುಗೂಡಿಸುತ್ತಾನೆ. ಉತ್ತಮವಾಗಿ ನಿರ್ಮಿತವೂ, ಯಜ್ಞಪಶುಗಳಿಂದ ಕೂಡಿದುದೂ ಆದ ಯಜ್ಞಸದನವನ್ನು ಹೋತೃವು ಪ್ರವೇಶಿಸುವಂತೆ ಹಿಂಡಿಲ್ಪಟ್ಟ ಸೋಮನು ಶಬ್ದಮಾಡುತ್ತ ದಶಾಪವಿತ್ರವನ್ನು ಹೋಗಿ ಪ್ರವೇಶಿಸುತ್ತಾನೆ.

## English Translation

The shining Soma being purified by the golden hand that urges it forth, brings its juice into contact with the gods ; when effused it proceeds with a roar to the filter like the ministrant priest to the halls prepared (for sacrifice) containing victims.

॥ ವಿಶೇಷವಿಷಯಗಳು ॥

**ಹೇಮನಾ ಪೂಯಮಾನಃ ದೇವಃ**—ಸುವರ್ಣ (ಚಿನ್ನ) ದಿಂದ ಶುದ್ಧಿಗೊಳಿಸಲ್ಪಟ್ಟ ಸೋಮನು ಎಂದರೆ ಸೋಮಾಭಿಷವಣಕಾಲದಲ್ಲಿ ಅಧ್ವರ್ಯ್ವಾದಿ ಋತ್ವಿಗ್ಜನರು ತಮ್ಮ ಬೆರಳುಗಳಲ್ಲಿ ಚಿನ್ನದ ಉಂಗುರಗಳನ್ನು ಧರಿಸಿರುವುದು ರೂಢಿಯು. ಏಕೆಂದರೆ ಸುವರ್ಣಸ್ಪರ್ಶದಿಂದ ರಸವು ಶುದ್ಧಿಯಾಗುವುದೆಂದು ಅನೇಕ ಕಡೆ ಹೇಳಿದೆ. **ಪವಿತ್ರಂ ವ್ಯೆ**

ಹಿರಣ್ಯಂ। ಪುನಾತ್ಯೇವೈನಂ। ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುವುದು. ಹಿರಣ್ಯಪಾಣಿರಭಿಷುಣೋತಿ ಎಂಬ ಬ್ರಾಹ್ಮಣ ವಾಕ್ಯವನ್ನು ಭಾಷ್ಯಕಾರರು ಉದಾಹರಿಸಿರುವವರು. ಇದಲ್ಲದೆ ಈ ಮಂಡಲದ ಎರಡನೆಯ ಋಕ್ಕಿನಲ್ಲಿ—

> ರಕ್ಷೋಹಾ ವಿಶ್ವಚರ್ಷಣಿರಭಿ ಯೋನಿಮಯೋಹತಂ।
> ದ್ರುಣಾ ಸಧಸ್ಥಮಾಸದತ್ ॥

(ಋ ಸಂ. ೯-೧-೨)

ಅಯೋಹತಂ— ಹಿರಣ್ಯೇನ ಹತಂ। ಹಿರಣ್ಯೋಪೇತವಾದ ಎಂದರೆ ಸುವರ್ಣಾಭರಣವನ್ನು ಧರಿಸಿರುವ ಹಸ್ತದಿಂದ ಜಜ್ಜಲ್ಪಡುವ ಸೋಮಲತೆಯೆಂದು ಹೇಳಿದೆ.

ಹೋತಾ ಮಿತೇವ ಪಶುಮಂತಿ ಸದ್ಮ—ಯಜ್ಞಪಶುವನ್ನು ಕಟ್ಟಿ ಯಜ್ಞಕ್ಕಾಗಿ ಸಿದ್ಧಪಡಿಸಿರುವ ಯಜ್ಞಗೃಹವನ್ನು ಹೋತೃವೆಂಬ ಋತ್ವಿಜನು ಪ್ರವೇಶಿಸುವಂತೆ ಎಂಬ ದೃಷ್ಟಾಂತವನ್ನು ಪವಿತ್ರದೆಡೆಗೆ ಹರಿದು ಹೋಗುತ್ತಿರುವ ಸೋಮರಸದ ವಿಷಯದಲ್ಲಿ ಹೇಳಿದೆ. ಪಶುವೇ ಮೊದಲಾದ ಯಜ್ಞಸಂಭಾರಗಳನ್ನು ಸಿದ್ಧಪಡಿಸಿ ಸುಸಜ್ಜಿತವಾಗಿರುವ ಯಾಗಗೃಹಕ್ಕೆ ತನ್ನ ಕರ್ತವ್ಯವನ್ನು ಮಾಡುವುದಕ್ಕಾಗಿ ಹೋತೃವು ಯಾವರೀತಿ ಪ್ರವೇಶಿಸುವನೋ ಹಾಗೆ ಋತ್ವಿಗ್ಜನರಿಂದ ಹಿಂಡಲ್ಪಟ್ಟ ಸೋಮರಸವು ಯಜ್ಞನಿರ್ವಹಣೆಗಾಗಿ ಎಂದರೆ ಯಜ್ಞದಲ್ಲಿ ಆಹ್ವಾನಿತರಾದ ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಸಂತೋಷದಿಂದ ಶಬ್ದಮಾಡುತ್ತಾ ದಶಾಪವಿತ್ರದೆಡೆಗೆ ಶೋಧನೆಗಾಗಿ ಹರಿದು ಹೋಗುತ್ತಿರುವುದು ಎಂದು ಋಷಿಯು ವರ್ಣಿಸಿದಾನೆ.

॥ ಸಂಹಿತಾಪಾಠಃ ॥

ಭದ್ರಾ ವಸ್ತ್ರಾ ಸಮನ್ಯಾ೩ ವಸಾನೋ ಮಹಾನ್ಕವಿರ್ನಿವಚನಾನಿ ಶಂಸನ್ ।
ಆ ವಚ್ಯಸ್ವ ಚಮ್ವೋಃ ಪೂಯಮಾನೋ ವಿಚಕ್ಷಣೋ ಜಾಗೃವಿರ್ದೇವವೀತೌ ॥ ೨ ॥

॥ ಪದಪಾಠಃ ॥

ಭದ್ರಾ । ವಸ್ತ್ರಾ । ಸಮನ್ಯಾ । ವಸಾನಃ । ಮಹಾನ್ । ಕವಿಃ । ನಿऽವಚನಾನಿ । ಶಂಸನ್ ।
ಆ । ವಚ್ಯಸ್ವ। ಚಮ್ವೋಃ। ಪೂಯಮಾನಃ। ವಿऽಚಕ್ಷಣಃ । ಜಾಗೃವಿಃ । ದೇವऽವೀತೌ ॥ ೨ ॥

॥ ಸಾಯಣಭಾಷ್ಯಂ ॥

ಭದ್ರಾ ಭದ್ರಾಣಿ ಕಲ್ಯಾಣಾನಿ ಸಮನ್ಯಾ । ಸಮನಮಿತಿ ಸಂಗ್ರಾಮನಾಮ ॥ ತತ್ರ ಸಾಧುರಿತಿ ಯತ್ ॥ ಸಂಗ್ರಾಮಯೋಗ್ಯಾನಿ ವಸ್ತ್ರಾ ವಸ್ತ್ರಾಣ್ಯಾಚ್ಛಾದಕಾನಿ ತೇಜಾಂಸಿ ವಸಾನ ಆಚ್ಛಾದಯನ್ ಮಹಾನ್ಕವಿಃ ಕ್ರಾಂತದರ್ಶೀ ಅತ ಏವ ನಿವಚನಾನಿ ನಿತರಾಂ ವಕ್ತವ್ಯಾನ್ಯೃತ್ವಿಕ್ಕೃತಾನಿ ಸ್ತೋತ್ರಾಣಿ

ಶಂಸನ್ ವಿಚಕ್ಷಣೋ ವಿಶೇಷೇಣ ಸರ್ವಸ್ಯ ದ್ರಷ್ಟಾ ಜಾಗೃವಿರ್ಜಾಗರಣಶೀಲಃ ಸೋಮಸ್ತ್ವಂ ದೇವವೀತೌ। ದೇವಾನಾಂ ವೀತಿರ್ಭಕ್ಷಣಂ ಯಸ್ಮಿನ್ ಸ ದೇವವೀತಿರ್ಯಜ್ಞಃ। ತಸ್ಮಿಂಶ್ಚ ನ್ವೋರಧಿಷವಣಫಲಕಯೋರಾ ವಚ್ಯಸ್ವ। ಪಾತ್ರಾಣ್ಯಾ ವಿಶ॥ ವಚಿರ್ಗತ್ಯರ್ಥಃ। ವ್ಯತ್ಯಯೇನ ಶ್ಯನ್॥ ಪೂಯಮಾನಃ ಸನ್॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಭದ್ರಾ**—ಕಲ್ಯಾಣಾತ್ಮಕವೂ। **ಸಮನ್ಯಾ**—ಯುದ್ಧಕ್ಕೆ ಯೋಗ್ಯವೂ ಆದ। **ವಸ್ತ್ರಾ**—ತೇಜೋರೂಪವಾದ ವಸ್ತ್ರವನ್ನು। **ವಸಾನಃ**—ಧರಿಸಿದವನೂ। **ಮಹಾನ್**—ಮಹಾತ್ಮನೂ। **ಕವಿಃ**—ಮೇಧಾವಿಯೂ। **ವಿಚಕ್ಷಣಃ**—ಸಕಲವನ್ನೂ ನೋಡಬಲ್ಲವನೂ। **ಜಾಗೃವಿಃ**—ಎಚ್ಚರವುಳ್ಳವನೂ ಆದ ನೀನು। **ನಿವಚನಾನಿ**—ಸ್ತುತಿಗಳನ್ನು। **ಶಂಸನ್**—ಪಠಿಸುತ್ತ। **ದೇವವೀತೌ**—ಯಜ್ಞದಲ್ಲಿ। **ಪೂಯಮಾನಃ**—ಶುದ್ಧಿಯನ್ನು ಹೊಂದಿ। **ಚನ್ವೋಃ**—ಹಿಂಡುವ ಕಲ್ಲುಗಳ ಮೂಲಕ। **ಆ ವಚ್ಯಸ್ವ**—ಪಾತ್ರೆಗಳಲ್ಲಿ ಪ್ರವೇಶಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಕಲ್ಯಾಣಾತ್ಮಕವೂ, ಯುದ್ಧಕ್ಕೆ ಯೋಗ್ಯವೂ ಆದ ತೇಜೋರೂಪವಾದ ವಸ್ತ್ರವನ್ನು ಧರಿಸಿದವನೂ, ಮಹಾತ್ಮನೂ ಮೇಧಾವಿಯೂ, ಸಕಲವನ್ನೂ ನೋಡಬಲ್ಲವನೂ, ಎಚ್ಚರವುಳ್ಳವನೂ ಆದ ನೀನು ಸ್ತುತಿಗಳನ್ನು ಪಠಿಸುತ್ತ ಯಜ್ಞದಲ್ಲಿ ಹಿಂಡುವ ಕಲ್ಲುಗಳ ಮೂಲಕ ಪಾತ್ರೆಗಳಲ್ಲಿ ಪ್ರವೇಶಿಸು.

English Translation.

The great wise Soma, clothed in his auspicious warvestments, the inspirer of praises enter into the vessels when purified, you who are sagacious and vigilant at the banquet of the gods.

॥ ವಿಶೇಷವಿಷಯಗಳು ॥

**ಭದ್ರಾ ವಸ್ತ್ರಾ ಸಮನ್ಯಾ ವಸಾನಃ ಮಹಾನ್ ಕವಿಃ ನಿವಚನಾನಿ ಶಂಸನ್ ದೇವವೀತೌ ಆ ವಚ್ಯಸ್ವ**—ಯುದ್ಧಾರ್ಥವಾಗಿ ಹೊರಡುವ ಯುದ್ಧಭಟನು ಅಥವಾ ಶೂರನು ತನ್ನ ಆಪ್ತಜನರ ಪ್ರೋತ್ಸಾಹಕರವಾದ ವಾಕ್ಯಗಳಿಂದ ಉತ್ತೇಜಿತನಾಗಿ ಉತ್ತಮವಸ್ತ್ರಗಳಿಂದ ಅಲಂಕೃತನಾಗಿ ಯುದ್ಧಭೂಮಿಗೆ ಹೋಗುವಂತೆ ತನ್ನ ತೇಜಸ್ಸೆಂಬ ಉತ್ತಮ ವಸ್ತ್ರಗಳಿಂದ ಅಲಂಕೃತನಾದ ಮಹತ್ಸ್ವರೂಪವುಳ್ಳ ಸೋಮದೇವನು ಋತ್ವಿಗ್ಜನರ ಸ್ತುತಿರೂಪವಾದ ವಾಕ್ಯಗಳನ್ನು (ಮಂತ್ರಗಳನ್ನು) ಆಲಿಸುತ್ತಾ ಯಜ್ಞವೇದಿಯಲ್ಲಿ ಸಿದ್ಧವಾಗಿರುವ ಪಾತ್ರೆಗಳನ್ನು ಪ್ರವೇಶಿಸುತ್ತಾನೆ ಎಂದು ಸೋಮ ರಸದ ನಿರ್ಗಮನವನ್ನು ಪ್ರಶಂಸೆ ಮಾಡಲಾಗಿದೆ.

॥ ಸಂಹಿತಾಪಾಠಃ ॥

ಸಮು ಪ್ರಿಯೋ ಮೃಜ್ಯತೇ ಸಾನೋ ಅವ್ಯೇ ಯಶಸ್ತರೋ ಯಶಸಾಂ
ಕ್ಷೈತೋ ಅಸ್ಮೇ।

ಅಭಿ ಸ್ವರ ಧನ್ವಾ ಪೂಯಮಾನೋ ಯೂಯಂ ಪಾತ ಸ್ವಸ್ತಿಭಿಃ ಸದಾ
ನಃ ॥ ೩ ॥

॥ ಪದಪಾಠಃ ॥

ಸ । ಊಂ ಇತಿ । ಪ್ರಿಯಃ । ಮೃಜ್ಯತೇ । ಸಾನೌ । ಅವ್ಯೇ । ಯಶಃऽತರಃ । ಯಶಸಾಂ । ಕ್ಷೈತಃ ।
ಅಸ್ಮೇ ಇತಿ ।

ಅಭಿ । ಸ್ವರ । ಧನ್ವ । ಪೂಯಮಾನಃ । ಯೂಯಂ । ಪಾತ । ಸ್ವಸ್ತಿಭಿಃ । ಸದಾ । ನಃ ॥ ೩ ॥

॥ ಸಾಯಣಭಾಷ್ಯಂ ॥

ಯಶಸಾಂ ಯಶಸ್ವಿನಾಂ ಮಧ್ಯೇ ಯಶಸ್ತರೋऽತಿಶಯೇನ ಯಶಸ್ವೀ ಕ್ಷೈತಃ ಕ್ಷಿತೌ ಭವಃ ಪ್ರಿಯಃ ಪ್ರೀಣಯಿತಾ ಸೋಮಃ ಸಾನೌ ಸಮುಚ್ಛ್ರಿತೇऽವ್ಯೇऽವಿಮಯೇ ಪವಿತ್ರೇऽಸ್ಮೇ ಅಸ್ಮದರ್ಥಂ ಸಂ ಮೃಜ್ಯತೇ । ಋತ್ವಿಗ್ಭಿಃ ಪರಿಪೂಯತೇ । ಉ ಅವಧಾರಣೇ । ಪೂಯಮಾನಸ್ತ್ವಂ ಧನ್ವಾಂತರಿಕ್ಷೇऽಭಿ ಸ್ವರ । ಅಭಿತಃ । ಶಬ್ದಯ । ಯೂಯಂ ॥ ಪೂಜಾಯಾಂ ಬಹುವಚನಂ ॥ ಹೇ ಸೋಮ ತ್ವಂ ನೋऽಸ್ಮಾನ್ ಸ್ವಸ್ತಿಭಿಃ ಕಲ್ಯಾಣತಮೈಃ ಪಾಲನೈಃ ಸದಾ ಸರ್ವದಾ ಪಾತ । ರಕ್ಷತ । ಪಾಲಯತ ॥

॥ ಪ್ರತಿಪದಾರ್ಥ ॥

**ಯಶಸಾಂ**—ಯಶಸ್ವಿಗಳ ನಡುವೆ । **ಯಶಸ್ತರಃ**—ಅತ್ಯಂತ ಯಶಸ್ವಿಯೂ । **ಕ್ಷೈತಃ**—ಪೃಥ್ವಿಯಲ್ಲಿ ಉತ್ಪನ್ನನೂ । **ಪ್ರಿಯಃ**—ಪ್ರೀತಿಕಾರಕನೂ ಆದ ಸೋಮದೇವನು । **ಸಾನೌ**—ಉನ್ನತ ಪ್ರದೇಶದಲ್ಲಿರುವ । **ಅವ್ಯೇ**—ದಶಾಪವಿತ್ರದಲ್ಲಿ । **ಅಸ್ಮೇ**—ನಮಗಾಗಿ । **ಸಂಮೃಜ್ಯತೇ**—ಶುದ್ಧಿಯನ್ನು ಹೊಂದುತ್ತಾನೆ. । (ಎಲೈ ಸೋಮನೇ) **ಪೂಯಮಾನಃ**—ಶುದ್ಧಿಯನ್ನು ಹೊಂದಿದ ನೀನು । **ಧನ್ವ**—ಅಂತರಿಕ್ಷದಲ್ಲಿ । **ಅಭಿಸ್ವರ**—ಸುತ್ತಲೂ ಶಬ್ದವನ್ನು ಮಾಡು. । **ಯೂಯಂ**—ನೀನು । **ಸದಾ**—ಯಾವಾಗಲೂ । **ನಃ**—ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸು.

॥ ಭಾವಾರ್ಥ ॥

ಯಶಸ್ವಿಗಳ ನಡುವೆ ಅತ್ಯಂತ ಯಶಸ್ವಿಯೂ, ಪೃಥ್ವಿಯಲ್ಲಿ ಉತ್ಪನ್ನನೂ, ಪ್ರೀತಿಕಾರಕನೂ ಆದ ಸೋಮದೇವನು ಉನ್ನತಪ್ರದೇಶದಲ್ಲಿರುವ ದಶಾಪವಿತ್ರದಲ್ಲಿ ನಮಗಾಗಿ ಶುದ್ಧಿಯನ್ನು ಹೊಂದುತ್ತಾನೆ. ಎಲೈ ಸೋಮನೇ, ಶುದ್ಧಿಯನ್ನು ಹೊಂದಿದ ನೀನು ಅಂತರಿಕ್ಷದಲ್ಲಿ ಸುತ್ತಲೂ ಶಬ್ದವನ್ನು ಮಾಡು. ನೀನು ಯಾವಾಗಲೂ ನಮ್ಮನ್ನು ಕಲ್ಯಾಣಗಳಿಂದ ರಕ್ಷಿಸು

English Translation

(Soma), the most famous of the famous, the earthborn, the conciliator, is cleansed for us in the elevated fleece ; sound aloud in the firmament when purified ; you Gods, ever protect us with blessings.

॥ ವಿಶೇಷವಿಷಯಗಳು ॥

**ಯಶಸಾಂ ಯಶಸ್ತರಃ**—ಯಶಸ್ವಿಗಳಾದ ದೇವತೆಗಳ ಮಧ್ಯದಲ್ಲಿ ಅತ್ಯಂತ ಕೀರ್ತಿಯುತನಾದವನು. ಅಗ್ನಿಷ್ಟೋಮ ಮೊದಲಾದ ಸೋಮಯಾಗಗಳಲ್ಲಿ ಸೋಮರಸವು ಅತಿ ಮುಖ್ಯಸಾಧನವಾದ್ದರಿಂದಲೂ, ಇಂದ್ರಾದಿ ದೇವತೆಗಳಿಗೆ ಸೋಮಪಾನವು ಆಹ್ಲಾದಕರವಾಗಿರುವುದರಿಂದಲೂ ಸೋಮವು ಅತ್ಯಂತ ಪ್ರಸಿದ್ಧವಾದ ಮತ್ತು ಅವಶ್ಯಕವಾದ ವಸ್ತುವಾಗಿದೆ ಮತ್ತು ಸ್ತೋತ್ರಮಾಡುವವರಿಗೆ ಧನಾದಿದಾನಗಳಿಂದ ಸೋಮನು ಅತ್ಯಂತ ಪ್ರೀತಿ ಪಾತ್ರನಾಗಿದಾನೆ ಎಂದಭಿಪ್ರಾಯವು.

**ಕ್ಷೈತಃ—ಕ್ಷಿತೌ ಭವಃ** । ಭೂಮಿಯ ಮೇಲೆ ಬೆಳೆಯುವ ಸೋಮಲತೆಯು. ಸೋಮಲತೆಗಳು ಭೂಮಿಯ ಮೇಲೆಯೂ ಎತ್ತರವಾದ ಪರ್ವತ ಪ್ರದೇಶಗಳಲ್ಲಿಯೂ ಬೆಳೆಯುತ್ತವೆ.

**ಅಸ್ಮೇ**—ಈ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಉಪಯೋಗಿಸಲ್ಪಡುವುದು. ಉದಾಹರಣೆ—

(೧) **ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥**

**ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ— ಪ್ರಥಮಾಯಾಸ್ತಾವತ್—ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು. ಎಂದರೆ ಆಯಾ ಪ್ರಕರಣಾನುಸಾರ ವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು. ಹೇಗೆಂದರೆ—**ಅಸ್ಮೇ ತೇ ಬಂಧುಃ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂದರ್ಥವಿರುವುದು. ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು

(೨) **ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥**

**ದ್ವಿತೀಯಾಯಾಸ್ತಾವತ್**—ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್—ನಮ್ಮನ್ನು ಎಂದು ಇಲ್ಲಿ ಅರ್ಥವು. ಈ ಅರ್ಥದ ಉದಾಹರಣೆಗಾಗಿ—

**ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥**
(ಋ. ಸಂ. ೧-೧೧೮-೧೧)

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್—ನಮ್ಮನ್ನು ಎಂದರ್ಥವು.

(೩) **ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ।**

**ತೃತೀಯಾಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ—ನಮ್ಮಿಂದ ಎಂದು ತೃತೀಯಾ ವಿಭಕ್ತ್ಯರ್ಥವು. ಈ ವಿಷಯದಲ್ಲಿ—

ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।
ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥
(ಋ ಸಂ. ೧-೧೬೫-೭)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ— ನಮ್ಮಿಂದ ಎಂದರ್ಥವು.

(೪) ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥
ಚತುರ್ಥ್ಯಾಸ್ಸ್ಥಾನೇ—ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ—ನಮಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವು. ಉದಾಹರಣೆಗೆ—

ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।
ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥
(ಋ. ಸಂ. ೩-೩೬-೧೦)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ— ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು.

(೫) ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।
ಪಂಚಮ್ಯಾಸ್ಸ್ಥಾನೇ— ಇಲ್ಲಿ ಅಸ್ಮೇ ಎಂದರೆ ಅಸ್ಮತ್— ನಮ್ಮ ದೆಶೆಯಿಂದ ಎಂದರ್ಥವು. ಉದಾಹರಣೆಗೆ—

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।
ಸ ಸುತ್ರಾಮಾ ಸ್ವವಾ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್— ನಮ್ಮ ದೆಶೆಯಿಂದ ಎಂದು ಪಂಚಮೀ ವಿಭಕ್ತ್ಯರ್ಥವು.

(೬) ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।

ಷಷ್ಠ್ಯಾಸ್ಸ್ಥಾನೇ— ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ— ನಮಗೆ ಎಂದರ್ಥವು. ಈ ಅರ್ಥವಿವರಣೆಗಾಗಿ—
ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।
ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥
(ಋ ಸಂ. ೩.೩೦-೧೯)

ಎಂಬ ಋಕ್ಕನ್ನುದಹರಿಸಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ— ನಮ್ಮ, ನಮಗೆ ಎಂದು ಷಷ್ಠೀ ವಿಭಕ್ತ್ಯರ್ಥವು.

(೭) ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥
ಸಪ್ತಮ್ಯಾಸ್ಸ್ಥಾನೇ— ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು. ಉದಾಹರಣೆಗೆ—

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥
(ಋ. ಸಂ. ೧-೭೯-೪)

ಈ ಋಕ್ಕಿನಲ್ಲಿರುವ ಅಸ್ಮೇ— ಎಂಬ ಶಬ್ದಕ್ಕೆ ಅಸ್ಮಾಸು ನಮ್ಮಲ್ಲಿ ಎಂದು ಸಪ್ತಮೀ ವಿಭಕ್ತ್ಯರ್ಥವು.

|| ಸಂಹಿತಾಪಾಠಃ ||

ಪ್ರ ಗಾಯತಾಭ್ಯರ್ಚಾಮ ದೇವಾನ್ತ್ಸೋಮಂ ಹಿನೋತ ಮಹತೇ ಧನಾಯ ।

ಸ್ವಾದುಃ ಪವಾತೇ ಅತಿ ವಾರಮವ್ಯಮಾ ಸೀದಾತಿ ಕಲಶಂ ದೇವಯುರ್ನಃ ॥

|| ಪದಪಾಠಃ ||

ಪ್ರ । ಗಾಯತ । ಅಭಿ । ಅರ್ಚಾಮ । ದೇವಾನ್ । ಸೋಮಂ । ಹಿನೋತ । ಮಹತೇ । ಧನಾಯ ।

ಸ್ವಾದುಃ । ಪವಾತೇ । ಅತಿ । ವಾರಂ । ಅವ್ಯಂ । ಆ । ಸೀದಾತಿ । ಕಲಶಂ । ದೇವಽಯುಃ । ನಃ ॥ ೪ ॥

|| ಸಾಯಣಭಾಷ್ಯಂ ||

ಹೇ ಸ್ತೋತಾರಃ ಪ್ರ ಗಾಯತ । ಸೋಮಂ ಪ್ರಕರ್ಷೇಣಾಭಿಷ್ಟುತ । ತಥಾ ದೇವಾನಭ್ಯರ್ಚಾಮ। ಅಭ್ಯರ್ಚತ ॥ ಪುರುಷವ್ಯತ್ಯಯಃ ॥ ಯದ್ವಾ । ವಯಂ ದೇವಾನಭಿಷ್ಟುಮಃ ಯೂಯಂ ಸೋಮಂ ಸ್ತುತೇತಿ । ಕಿಂಚ ಮಹತೇ ಮಹತ್ತ್ವಭೂತಂ ಧನಾಯ ಧನಂ ಪ್ರಾಪ್ತುಂ ಸೋಮಂ ಹಿನೋತ । ಅಭಿಷವಾರ್ಥಂ ಪ್ರೇರಯತ ॥ ಕ್ರಿಯಾರ್ಥೋಪಪದಸ್ಯ ಚ ಕರ್ಮಣಿ ಸ್ಥಾನಿನ ಇತಿ ಧನಶಬ್ದಸ್ಯ ಚತುರ್ಥೀ ॥ ತತಃ ಸ್ವಾದುಃ ಸ್ವಾದುಕರಃ ಸೋಮೋಽವ್ಯಮವಿಭವಂ ವಾರಂ ವಾಲಂ ಪವಿತ್ರಮತಿ ಪವಾತೇ । ಅತೀತ್ಯ ಪವತೇ । ಕಿಂಚ ದೇವಯುರ್ದೇವಾನ್ಕಾಮಯಮಾನೋ ನೋಽಸ್ಮದೀಯಃ ಸೋಮಃ ಕಲಶಂ ಪಾತ್ರಮಾ ಸೀದಾತಿ । ಆಸೀದತಿ । ಪ್ರವಿಶತಿ ॥ ಉಭಯತ್ರ ಲೇಟ್ಯಡಾಗಮಃ ॥

|| ಪ್ರತಿಪದಾರ್ಥ ||

ಎಲೈ ಸ್ತುತಿಕರ್ತರೇ) **ಪ್ರ ಗಾಯತ**—ಸೋಮನನ್ನು ಪ್ರಶಂಸಿಸಿ ಸ್ತುತಿವಾಕ್ಯವನ್ನು ಪಠಿಸಿ । **ದೇವಾನ್**—ದೇವತೆಗಳನ್ನೂ । **ಅಭ್ಯರ್ಚಾಮ**—ಆರಾಧಿಸಿರಿ । **ಮಹತೇ**—ಅತ್ಯಧಿಕವಾದ । **ಧನಾಯ**—ಧನಕ್ಕಾಗಿ । **ಸೋಮಂ ಹಿನೋತ**—ಸೋಮಾಭಿಷವವನ್ನು ಮಾಡಿರಿ (ಹಿಂಡಿರಿ) । **ಸ್ವಾದುಃ**—ರುಚಿಕರನಾದ ಸೋಮನು । **ಅವ್ಯಂ**—ದಶಾಪವಿತ್ರದ । **ವಾರಂ**—ಉಣ್ಣೆಯ ನೂಲುಗಳನ್ನು । **ಅತಿ ಪವತೇ**—ದಾಟಿ ಹರಿಯುತ್ತಾನೆ । **ದೇವಯುಃ**—ದೇವತೆಗಳನ್ನಿಚ್ಛಿಸುವ । **ನಃ**—ನಮ್ಮ ಸೋಮನು । **ಕಲಶಂ**—ಪಾತ್ರೆಯಲ್ಲಿ । **ಆ ಸೀದಾತಿ**—ಸ್ಥಾನವನ್ನು ಹೊಂದುತ್ತಾನೆ. (ಕುಳಿತುಕೊಳ್ಳುತ್ತಾನೆ)

|| ಭಾವಾರ್ಥ ||

ಎಲೈ ಸ್ತುತಿಕರ್ತನೇ, ಸೋಮನನ್ನು ಪ್ರಶಂಸಿಸಿ ಸ್ತುತಿವಾಕ್ಯಗಳನ್ನು ಪಠಿಸಿರಿ. ದೇವತೆಗಳನ್ನು ಆರಾಧಿಸಿರಿ. ಅತ್ಯಧಿಕವಾದ ಧನಕ್ಕಾಗಿ ಸೋಮವನ್ನು ಹಿಂಡಿರಿ. ರುಚಿಕರನಾದ ಸೋಮನು ದಶಾಪವಿತ್ರದ ಉಣ್ಣೆಯ ನೂಲುಗಳನ್ನು ದಾಟಿ ಹರಿಯುತ್ತಾನೆ. ದೇವತೆಗಳನ್ನಿಚ್ಛಿಸುವ ನಮ್ಮ ಸೋಮನು ಪಾತ್ರೆಯಲ್ಲಿ (ಕುಳಿತುಕೊಳ್ಳುತ್ತಾನೆ)..

## English Translation.

Sing (to the Soma), let us praise the gods ; send forth the Soma for (the acquirement of) great wealth. He passes sweet-flavoured pure through the fleecy filter ; our (Soma) devoted to the gods alights on the pitcher.

॥ ವಿಶೇಷವಿಷಯಗಳು ॥

**ಪ್ರ ಗಾಯತ – ಹೇ ಸ್ತೋತಾರಃ ಸೋಮಂ ಪ್ರಕರ್ಷೇಣಾಭಿಷ್ಟುತ** । ಎಲೈ ಸ್ತೋತೃಗಳೇ, ಸೋಮ ದೇವನನ್ನು ಗಾನರೂಪವಾದ ಸಾಮಮಂತ್ರಪಠನದಿಂದ ಸ್ತುತಿಸಿರಿ. ಋಗ್ವೇದಮಂತ್ರಗಳಲ್ಲಿ ಅನೇಕ ಋಕ್ಕುಗಳು, ಅದರಲ್ಲಿಯೂ ಸೋಮದೇವತೆಯನ್ನು ಸ್ತುತಿಸುವ ಋಕ್ಕುಗಳು ಗಾನಮಾಡುವುದಕ್ಕೆ ಅನುಕೂಲವಾಗಿರುವಂತೆ ಸರಿಯಾದ ಅಕ್ಷರ, ಪದ, ಅನುರೂಪವಾದ ಅರ್ಥ ಇವುಗಳ ಜೋಡಣೆಯಿಂದ ರಚಿಸಲ್ಪಟ್ಟಿವೆ ಆದ್ದರಿಂದಲೇ ಸಾಮವೇದದಲ್ಲಿ ಬಹುಭಾಗ ಮಂತ್ರಗಳು ಋಗ್ವೇದದ ಋಕ್ಕುಗಳೇ ಆಗಿವೆ.

**ದೇವಾನ್ ಅಭಿ ಅರ್ಚಾಮ**—ದೇವತೆಗಳನ್ನು ಅರ್ಚಿಸಿರಿ, ಅಥವಾ ಇಲ್ಲಿ ಅರ್ಚಾಮ ಎಂದು ಉತ್ತಮ ಪುರುಷಪ್ರಯೋಗವಿರುವುದರಿಂದ ನಾವು (ಋತ್ವಿಗ್ಜನರು) ದೇವತೆಗಳನ್ನು ಆಹ್ವಾನಿಸಿ ಪೂಜಿಸುತ್ತೇವೆ. ನೀವು (ಸಾಮಗಾನಮಾಡುವವರು) ಸೋಮದೇವತೆಯನ್ನು ಗಾನಮಾಡಿ ಸ್ತುತಿಸಿ ಎಂದೂ ಅರ್ಥವನ್ನು ಹೇಳಬಹುದು.

**ಸೋಮಂ ಹಿನೋತ ಮಹತೇ ಧನಾಯ**—ಅಧಿಕವಾದ ಧನಲಾಭಕ್ಕಾಗಿ ಸೋಮರಸವನ್ನು ಹಿಂಡಿರಿ ಎಂದು ಋತ್ವಿಗ್ಜನರನ್ನು ಸಂಬೋಧಿಸಲಾಗಿದೆ. ಯಜ್ಞಮಾಡಿ ಅದರಲ್ಲಿ ದೇವತೆಗಳನ್ನು ಆಹ್ವಾನಿಸಿ ಅವರನ್ನು ಸೋಮಪಾನದಿಂದ ತೃಪ್ತಿಪಡಿಸಿದರೆ ಅವರು ಸಂತೋಷಗೊಂಡು ಯಜ್ಞಕರ್ತರಾದ ನಮಗೆ ಧನಾದಿಗಳನ್ನು ಕೊಡುವರು. ಯಜ್ಞದಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಿ ಅದರಿಂದ ಧನಪ್ರಾಪ್ತಿಯಾಗುವುದು ಎಂದು ತಿಳಿಸುವುದಕ್ಕಾಗಿ **ಸೋಮಂ ಹಿನೋತ ಮಹತೇ ಧನಾಯ** ಎಂದು ಇಲ್ಲಿ ಹೇಳಿರುವುದು.

**ಸ್ವಾದುಃ ಅವ್ಯಂ ವಾರಂ ಪವತೇ**—ಇಲ್ಲಿ **ಅವ್ಯಂ** ಎಂದರೆ ಅವಿಸಂಬಂಧವಾದ ಎಂದರೆ ಕುರಿಯ ತುಪ್ಪಟದಿಂದ ನಿರ್ಮಿತವಾದ ಎಂದರ್ಥವು. **ವಾರಂ** ಎಂದರೆ ಅದರಿಂದ ಆಚ್ಛಾದಿತವಾದ ಪವಿತ್ರವೆಂಬ ಶೋಧಿಸುವ ಪಾತ್ರೆಯು. ಒಂದು ಪಾತ್ರೆಯಮೇಲೆ ತೆಳ್ಳಗೆ ಕುರಿಯ ತುಪ್ಪಟವನ್ನು ಅಥವಾ ಉಣ್ಣೆಯನ್ನು ಹರಡಿ ಅದರಮೇಲೆ ಹಿಂಡಿದ ರಸವು ಹರಿದುಹೋಗಿ ಬೀಳುವಂತೆ ಮಾಡುವರು. ಆ ಉಣ್ಣೆಯ ಪದರವನ್ನು ಈ ಸೋಮರಸವು ದಾಟಿ ಹೋಗುವಾಗ ಅದರಲ್ಲಿರುವ ಸಿಪ್ಪೆ ಮುಂತಾದ ಕಲ್ಮಷಗಳು ಉಣ್ಣೆಯ ಮೇಲೆಯೇ ನಿಂತು ಶುಭ್ರವಾದ ರಸವು ಮಾತ್ರ ಪಾತ್ರೆಯೊಳಗೆ ಹೋಗಿ ನಿಲ್ಲುವುದು. ತಂತಿಯ ಜಾಲರಿಯಿಂದ ತುಪ್ಪ ಅಥವಾ ಎಣ್ಣೆಯನ್ನು ಸೋಸಿದಂತೆ. ಈರೀತಿ ಸೋಮರಸವನ್ನು ಶೋಧಿಸುವ ವಿಷಯವು ಅನೇಕ ಋಕ್ಕುಗಳಲ್ಲಿ ವರ್ಣಿಸಿದೆ.

**ಆ ಸೀದಾತಿ ಕಲಶಂ ದೇವಯುಃ ನಃ**—ದೇವಯುಃ ಎಂದರೆ ದೇವತೆಗಳನ್ನಿಚ್ಛಿಸುವ ಸೋಮವು. ಎಂದರೆ ದೇವತೆಗಳಿಗೆ ಅರ್ಪಿಸಲು ಸಿದ್ಧವಾಗಿರುವ ಸೋಮರಸವು ಎಂದರ್ಥವು. ಇಂತಹ ಸೋಮರಸವು ಉಣ್ಣೆಯ ಜಾಲರಿಯನ್ನು ದಾಟಿಕೊಂಡುಹೋಗಿ ಕೆಳಭಾಗದಲ್ಲಿರುವ ಕಲಶ ಅಥವಾ ಪಾತ್ರೆಯೊಳಗೆ ನಿಲ್ಲುತ್ತದೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಇಂದುರ್ದೇವಾನಾಮುಪ ಸಖ್ಯಮಾಯನ್ತ್ಸಹಸ್ರಧಾರಃ ಪವತೇ ಮದಾಯ ।
ನೃಭಿಃ ಸ್ತವಾನೋ ಅನು ಧಾಮ ಪೂರ್ವಮಗನ್ನಿಂದ್ರಂ ಮಹತೇ ಸೌಭ-
ಗಾಯ || ೫ ||

|| ಪದಪಾಠಃ ||

ಇಂದುಃ । ದೇವಾನಾಂ । ಉಪ । ಸಖ್ಯಂ । ಆऽಯನ್ । ಸಹಸ್ರऽಧಾರಃ । ಪವತೇ । ಮದಾಯ ।
ನೃऽಭಿಃ । ಸ್ತವಾನಃ । ಅನು । ಧಾಮ । ಪೂರ್ವಂ । ಅಗನ್ । ಇಂದ್ರಂ । ಮಹತೇ । ಸೌಭಗಾಯ || ೫ ||

|| ಸಾಯಣಭಾಷ್ಯಂ ||

ದೇವಾನಾಮಿಂದ್ರಾದೀನಾಂ ಸಖ್ಯಂ ಸಖಿಭಾವಮುಪಾಯನ್ನುಪಗಚ್ಛನ್ ಸಹಸ್ರಧಾರೋ ಬಹುವಿಧಧಾರ ಇಂದುಃ ಸೋಮೋ ಮದಾಯ ದೇವಾನಾಂ ಮದಾರ್ಥಂ ಪವತೇ । ಕಲಶಾದಿಷು ಕ್ಷರತಿ । ನೃಭಿಃ ಕರ್ಮನೇತೃಭಿಃ ಸ್ತವಾನಃ ಸ್ತೂಯಮಾನಃ ಸೋಮಃ ಪೂರ್ವಂ ಪುರಾತನಂ ಧಾಮ ದ್ಯುಲೋಕಮನುಗಚ್ಛತಿ । ತದೇವಾಹ । ಮಹತೇ ಪ್ರಭೂತಾಯ ಸೌಭಗಾಯ ಸೌಭಾಗ್ಯಾಯೇಂದ್ರಮಗನ್। ಗಚ್ಛತಿ । ಸೋಮ ಇಂದ್ರೇಣ ಪೀತೇ ಸತಿ ಯಜಮಾನಾನಾಂ ಮಹತ್ಸೌಭಾಗ್ಯಂ ಭವತಿ ಖಲು || ಅಗನ್ । ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಮೋ ನೋ ಧಾತೋರಿತಿ ನತ್ವಂ ||

|| ಪ್ರತಿಪದಾರ್ಥ ||

**ದೇವಾನಾಂ**— ಇಂದ್ರಾದಿ ದೇವತೆಗಳ । **ಸಖ್ಯಂ**—ಮಿತ್ರತ್ವವನ್ನು । **ಉಪಾಯನ್**— ಪಡೆಯಲಿಚ್ಛಿಸಿ । **ಸಹಸ್ರಧಾರಃ**—ಅನೇಕ ಧಾರಾರೂಪನಾದ । **ಇಂದುಃ**—ಸೋಮನು । **ಮದಾಯ**—ಹರ್ಷಾರ್ಥವಾಗಿ । **ಪವತೇ**—ಪ್ರವಹಿಸುತ್ತಾನೆ. । **ನೃಭಿಃ**— ಋತ್ವಿಕ್ಕುಗಳಿಂದ । **ಸ್ತವಾನಃ**—ಪ್ರಶಂಸಿಸಲ್ಪಡುವ ಸೋಮನು । **ಪೂರ್ವಂ ಧಾಮ**—ತನ್ನ ಪುರಾತನವಾದ ದ್ಯುಲೋಕವನ್ನು । **ಅನು**—ಪ್ರವೇಶಿಸುತ್ತಾನೆ । **ಮಹತೇ**—ಪ್ರಭೂತ ವಾದ । **ಸೌಭಗಾಯ**—ಕಲ್ಯಾಣಕ್ಕಾಗಿ । **ಇಂದ್ರಂ ಅಗನ್**—ಇಂದ್ರನನ್ನು ಸಮೀಪಿಸಿ ಹೋಗುತ್ತಾನೆ.

|| ಭಾವಾರ್ಥ ||

ಸೋಮನು ಇಂದ್ರಾದಿ ದೇವತೆಗಳ ಮಿತ್ರತ್ವವನ್ನು ಪಡೆಯಲಿಚ್ಛಿಸಿ, ಅನೇಕ ಧಾರಾರೂಪನಾಗಿ ದೇವತೆಗಳ ಹರ್ಷಾರ್ಥವಾಗಿ ಪ್ರವಹಿಸುತ್ತಾನೆ. ಋತ್ವಿಕ್ಕುಗಳಿಂದ ಪ್ರಶಂಸಿಸಲ್ಪಡುವ ಸೋಮನು ತನ್ನ ಪುರಾತನವಾದ ದ್ಯುಲೋಕ ವನ್ನು ಪ್ರವೇಶಿಸುತ್ತಾನೆ. ಪ್ರಭೂತವಾದ ಕಲ್ಯಾಣಕ್ಕಾಗಿ ಇಂದ್ರನನ್ನು ಸಮೀಪಿಸಿ ಹೋಗುತ್ತಾನೆ.

English Translation

Indu coming to obtain the friendship of the gods flows in a thousand streams for (their) exhilaration ; glorified by the priests (he proceeds) to his ancient station, he proceeds to Indra for the sake of great prosperity (to the worshippers).

ವಿಶೇಷ ವಿಷಯಗಳು

**ಸಹಸ್ರಧಾರಃ ಇಂದುಃ ದೇವಾನಾಂ ಸಖ್ಯಂ ಉಪ ಆಯನ್ ಮದಾಯ ಪವತೇ**—ಇಲ್ಲಿ ಸಹಸ್ರವೆಂದರೆ ಅನೇಕ ; ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಆ ಲತೆಗಳಿಂದ ಜಿನುಗುವ ರಸವು ಅನೇಕಕಡೆಗಳಿಂದ ಜಿನುಗಿ ಬರುತ್ತಿರುವುದು ಅಥವಾ ಆ ರೀತಿ ಲತೆಗಳಿಂದ ಹೊರಸೂಸುವ ರಸವು ನಾನಾಮುಖವಾಗಿ ಎಂದರೆ ಅನೇಕ ಧಾರೆಗಳಾಗಿ ಶೋಧನಪಾತ್ರೆಯಕಡೆಗೆ ಹರಿದು ಹೋಗುತ್ತಿರುವುದು. ಇಂತಹ ರಸವು ಇಂದ್ರಾದಿದೇವತೆಗಳ ಸ್ನೇಹವನ್ನು ಬಯಸಿ ಎಂದರೆ ಅವರ ಪಾನಾರ್ಥವಾಗಿಯೂ ಅವರಿಗೆ ಹರ್ಷವನ್ನುಂಟುಮಾಡುವುದಕ್ಕಾಗಿಯೂ ಹರಿದು ಕಲಶಾದಿಗಳಲ್ಲಿ ಹೋಗಿ ಸೇರುತ್ತದೆ ಎಂದಭಿಪ್ರಾಯವು.

**ನೃಭಿಃ ಸ್ತವಾನಃ ಪೂರ್ವ ಧಾಮ ಅನು ಅಗನ್**—ಕರ್ಮನೇತೃಗಳಾದ ಎಂದರೆ ಯಜ್ಞದಲ್ಲಿ ನಾನಾವಿಧ ಯಜ್ಞಾಂಗಕರ್ಮಗಳನ್ನು ಮಾಡುತ್ತಿರುವ ಅಧ್ವರ್ಯ್ವಾದಿ ಋತ್ವಿಗ್ಜನರಿಂದ ಸವನತ್ರಯಕಾಲಗಳಲ್ಲಿಯೂ ಸಮಯೋಚಿತವಾದ ಮಂತ್ರಪಠನದಿಂದ ಸ್ತುತಿಸಲ್ಪಟ್ಟು ತನ್ನ ಹಿಂದಿನ ಸ್ಥಾನವಾದ ಸ್ವರ್ಗಲೋಕವನ್ನು ಸೇರುವುದು. ಎಂದರೆ ಸವನತ್ರಯಗಳಲ್ಲಿಯೂ ಸೋಮರಸವನ್ನು ಹಿಂಡಿತೆಗೆಯುವಾಗ ಋತ್ವಿಕ್ಕುಗಳು ಮಂತ್ರಗಳನ್ನು ಪಠಿಸಿ ಸೋಮನನ್ನು ಸ್ತುತಿಸುವರು. ಅನಂತರ ಆ ಸೋಮವನ್ನು ಯಜ್ಞದಲ್ಲಿ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸಿ ದೇವತೆಗಳಿಗೆ ಸೇರುವಂತೆ ಮಾಡುವರು. ದೇವತೆಗಳು ಸ್ವರ್ಗದಿಂದಲೇ ಯಜ್ಞಭೂಮಿಗೆ ಬಂದು ಯಜ್ಞಾನಾಂತರ ಪುನಃ ಸ್ವರ್ಗಕ್ಕೆ ಹಿಂತಿರುಗಿ ಹೋಗುವುದರಿಂದ ಅವರು ಪಾನಮಾಡಿದ ಸೋಮರಸವು ಸ್ವರ್ಗವನ್ನು ಸೇರಿದಂತಾಯಿತು. **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್**—ಎಂಬ ಶ್ರುತಿವಾಕ್ಯದಂತೆ ಪೂರ್ವದಲ್ಲಿ ಸೋಮಲತೆಯು ಸ್ವರ್ಗದಲ್ಲಿಯೇ ಇದ್ದಿತು. ಭೂಮಿಯಮೇಲೆ ಇರಲಿಲ್ಲ. ಅದನ್ನು ಶ್ಯೇನಪಕ್ಷಿಯು ಭೂಮಿಯ ಮೇಲೆ ತಂದಿತು. ಆದ್ದರಿಂದ ಸೋಮದ **ಪೂರ್ವಂ ಧಾಮ**—ಹಿಂದಿನ ಸ್ವಸ್ಥಾನ ಎಂದರೆ ಸ್ವರ್ಗವೆಂದಾಯಿತು. ಹಿಂದಿನ ಸ್ವಸ್ಥಾನವಾದ ಸೋಮರಸವು ದೇವತೆಗಳನ್ನು ಅನುಸರಿಸಿ ಎಂದರೆ ಅವರ ಉದರಗಳಲ್ಲಿ ಸೇರಿ ಸ್ವರ್ಗಕ್ಕೇ ಹೋಯಿತು ಎಂದು ಇಲ್ಲಿ ಹೇಳಿದೆ.

**ಇಂದ್ರಂ ಮಹತೇ ಸೌಭಗಾಯ—ಸೋಮ ಇಂದ್ರೇಣ ಪೀತೇ ಸತಿ ಯಜಮಾನಾನಾಂ ಮಹತ್ಸೌಭಾಗ್ಯಂ ಭವತಿ ಖಲು ।** ಇಂದ್ರನು ಯಜ್ಞಗಳಲ್ಲಿ ಬಂದು ಸೋಮಪಾನಮಾಡಿದರೆ ಆದರಿಂದ ಯಜಮಾನರಿಗೆ ಮಹತ್ಸೌಭಾಗ್ಯವು ಎಂದರೆ ಧನಧಾನ್ಯಾದಿಗಳೂ, ಗೋವುಗಳೂ, ಸಂಪತ್ತೂ ಎಲ್ಲವೂ ಲಭಿಸುವವು ಎಂದರೆ ಇಂದ್ರನು ಸೋಮಪಾನದಿಂದ ಸಂತುಷ್ಟನಾಗಿ ಯಜಮಾನರಿಗೆ ಸಕಲ ಸಂಪತ್ತನ್ನೂ ಕೊಡುವನು ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಸ್ತೋತ್ರೇ ರಾಯೇ ಹರಿರರ್ಷಾ ಪುನಾನ ಇಂದ್ರಂ ಮದೋ ಗಚ್ಛತು ತೇ
ಭರಾಯ ।

ದೇವೈರ್ಯಾಹಿ ಸರಥಂ ರಾಧೋ ಅಚ್ಛಾ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೬ ॥

॥ ಪದಪಾಠಃ ॥

ಸ್ತೋತ್ರೇ । ರಾಯೇ । ಹರಿಃ । ಅರ್ಷ । ಪುನಾನಃ । ಇಂದ್ರಂ । ಮದಃ । ಗಚ್ಛತು । ತೇ । ಭರಾಯ ।

ದೇವೈಃ । ಯಾಹಿ । ಸ್ಽರಥಂ । ರಾಧಃ । ಅಚ್ಛ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಹರಿರ್ಹರಿತವರ್ಣಃ ಪುನಾನಃ ಪೂಯಮಾನಸ್ತ್ವಂ ಸ್ತೋತ್ರೇಽಸ್ಮಾಭಿಃ ಕ್ರಿಯಮಾಣೇ ಸತಿ ರಾಯೇ ಧನಾರ್ಥಮರ್ಷ । ಆಗಚ್ಛ । ತತಸ್ತೇ ತ್ವದೀಯೋ ಮದೋ ಮದಕರೋ ರಸೋ ಭರಾಯ ॥ ಭೃ ಭರ್ತ್ಸನೇ ॥ ಭರ್ತ್ಸಯಂತಿ ಶತ್ರೂನತ್ರ ಯೋದ್ಧಾರ ಇತಿ ಭರಃ ಸಂಗ್ರಾಮಃ । ತದರ್ಥಮಿಂದ್ರಂ ಗಚ್ಛತು । ಕಿಂಚ ಸರಥಂ ದೇವೈಃ ಸಮಾನಂ ರಥಮಾಸ್ಥಾಯ ರಾಧೋಽಚ್ಛಾಸ್ಮಾಕಂ ಧನಾರ್ಥಂ ಯಾಹಿ । ಆಗಚ್ಛ । ಯೂಯಂ ನೋಽಸ್ಮಾನ್ ಸ್ವಸ್ತಿಭಿಃ ಸದಾ ಪಾತ । ತ್ವಂ ರಕ್ಷ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) ಹರಿಃ— ಪಚ್ಚೆವರ್ಣವುಳ್ಳವನೂ । ಪುನಾನಃ—ಶುದ್ಧಿಯನ್ನು ಹೊಂದುವವನೂ ಆದನೀನು । ಸ್ತೋತ್ರೇ—ನಮ್ಮ ಸ್ತುತಿಪಠನದಕಾಲದಲ್ಲಿ । ರಾಯೇ—ಧನಾರ್ಥವಾಗಿ । ಅರ್ಷ— ಪ್ರವಹಿಸಿ ಬಾ । ತೇ—ನಿನ್ನ । ಮದಃ—ಹರ್ಷಕಾರಕವಾದ ರಸವು । ಭರಾಯ—ಯುದ್ಧಾರ್ಥವಾಗಿ । ಇಂದ್ರಂ—ಇಂದ್ರನನ್ನು । ಗಚ್ಛತು—ಹೋಗಿ ಸೇರಲಿ । ದೇವೈಃ—ದೇವತೆಗಳೊಡನೆ । ಸರಥಂ—ಸಮಾನವಾದ ರಥವನ್ನು ಹತ್ತಿ । ರಾಧಃ ಅಚ್ಛ—ನಮಗೆ ಸಂಪತ್ತನ್ನೊದಗಿಸಲು । ಯಾಹಿ—ದಯಮಾಡು । ಯೂಯಂ—ನೀನು । ನಃ—ನಮ್ಮನ್ನು । ಸದಾ—ಯಾವಾಗಲೂ । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪಚ್ಚೆವರ್ಣವುಳ್ಳವನೂ, ಶುದ್ಧಿಯನ್ನು ಹೊಂದಿದವನೂ ಆದ ನೀನು ನಮ್ಮ ಸ್ತುತಿ ಪಠನಕಾಲದಲ್ಲಿ ಧನಾರ್ಥವಾಗಿ ಪ್ರವಹಿಸಿ ಬಾ. ನಿನ್ನ ಹರ್ಷಕಾರಕವಾದ ರಸವು ಯುದ್ಧಾರ್ಥವಾಗಿ ಇಂದ್ರನನ್ನು ಹೋಗಿ ಸೇರಲಿ. ದೇವತೆಗಳೊಡನೆ ಸಮಾನವಾದ ರಥವನ್ನು ಹತ್ತಿ ನಮಗೆ ಸಂಪತ್ತನ್ನೊದಗಿಸಲು ದಯಮಾಡು. ನೀನು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸು.

## English Translation.

(Soma), when our praise is offered, flow green-tinted aud purified, to (bring us) riches, may your exhilarating beverage animate Indra to battle.

Go in the same car with the gods to (procure us) wealth ; do you ever protect us with blessings.

|| ವಿಶೇಷವಿಷಯಗಳು ||

**ಸ್ತೋತ್ರೇ ರಾಯೇ ಹರಿಃ ಅರ್ಷ ಪುನಾನಃ**—ಸೋಮರಸವು ಹಿಂಡಲ್ಪಟ್ಟಾಗ **ಹರಿಃ**— ಎಂದರೆ ಹರಿತ (ಪಚ್ಚೆ) ವರ್ಣವುಳ್ಳದ್ದಾಗಿರುವುದು. ಇಂತಹ ಸೋಮರಸವು ದಶಾಪವಿತ್ರದಲ್ಲಿ ಶುದ್ಧಿಯನ್ನು ಹೊಂದಿ ನಮ್ಮಿಂದ ಧನಾರ್ಥವಾಗಿ ಸ್ತುತಿಸಲ್ಪಟ್ಟು ಹರಿದುಬರುವುದು.

**ಇಂದ್ರಂ ಮದೋ ಗಚ್ಛತು ತೇ ಭರಾಯ**—ಎಲೈ ಸೋಮನೇ, ನಿನ್ನ ಮದಕರವಾದ ರಸವು ಯುದ್ಧದಲ್ಲಿ ಇಂದ್ರನನ್ನು ಉತ್ಸಾಹಭರಿತನನ್ನಾಗಿ ಮಾಡಲು ಅವನ ಬಳಿಗೆ ಹೋಗಲಿ ಎಂದರೆ ಯುದ್ಧದಲ್ಲಿ ಉತ್ಸಾಹವುಂಟಾಗುವುದಕ್ಕಾಗಿ ಇಂದ್ರನು ಮದಕರವಾದ ಸೋಮರಸವನ್ನು ಪಾನಮಾಡಲಿ ಎಂದರ್ಥವು. ಇಲ್ಲಿ **ಭರಾಯ** ಎಂಬ ಶಬ್ದಕ್ಕೆ ಭಾಷ್ಯಕಾರರು **ಭರ್ತ್ಸಯಂತಿ ಶತ್ರೂನತ್ರ ಯೋದ್ಧಾರ ಇತಿ ಭರಃ ಸಂಗ್ರಾಮಃ**—ಇಲ್ಲಿ ಎಂದರೆ ಯುದ್ಧಭೂಮಿಯಲ್ಲಿ ಯುದ್ಧಭಟರು ತಮ್ಮ ಶತ್ರುಗಳನ್ನು ವೀರವಾಕ್ಯಗಳನ್ನಾಡುತ್ತಾ ಅವಹೇಳನಮಾಡುವುದರಿಂದ **ಭರಃ** ಎಂದರೆ ಯುದ್ಧವು ಎಂದು ಅವಯವಾರ್ಥವನ್ನು ಹೇಳಿದಾರೆ.

**ದೇವೈಃ ಸರಥಂ ರಾಧಃ ಅಚ್ಛ ಯಾಹಿ**—ಎಲೈ ಸೋಮದೇವನೇ, ನಮಗೆ ಧನವನ್ನು ಕೊಡುವುದಕ್ಕಾಗಿ ದೇವತೆಗಳು ಯಜ್ಞಭೂಮಿಗೆ ಬರುವಾಗ ಅವರ ಜೊತೆಯಲ್ಲಿ ನೀನೂ ಸಹ ಅವರೊಡನೆ ಒಂದೇ ರಥದಲ್ಲಿ ಕುಳಿತು ನಮ್ಮಲ್ಲಿಗೆ ಬಾ ಎಂದು ಋಷಿಯು ಪ್ರಾರ್ಥಿಸಿರುವನು.

**ಯೂಯಂ ಪಾತ ಸ್ವಸ್ತಿಭಿಃ ಸದಾ ನಃ**—ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ ಎಂಬ ವಾಕ್ಯವನ್ನು ಋಷಿಯು ಪಠಿಸಿ ಸೂಕ್ತವನ್ನು ಸಮಾಪ್ತಿಗೊಳಿಸಿರುವನು. ವಸಿಷ್ಠಋಷಿದೃಷ್ಟವಾದ ಏಳನೆಯ ಮಂಡಲದ ಅನೇಕ ಸೂಕ್ತಗಳ ಪರಿಸಮಾಪ್ತಿಯಲ್ಲಿ ಈ ವಾಕ್ಯವು ಇರುವುದು. ಆದ್ದರಿಂದ ವಸಿಷ್ಠಗೋತ್ರದವನೂ, ಈ ಮೂರು ಋಕ್ಕುಗಳ (೪–೬) ದ್ರಷ್ಟೃವೂ ಆದ ಇಂದ್ರಪ್ರಮತಿ ಎಂಬ ಋಷಿಯು ತನ್ನ ಪೂರ್ವಜರಂತೆ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ಈ ವಾಕ್ಯವನ್ನು ಪಠಿಸಿರುವನು.

|| ಸಂಹಿತಾಪಾಠಃ ||

ಪ್ರ ಕಾವ್ಯಮುಶನೇವ ಬ್ರುವಾಣೋ ದೇವೋ ದೇವಾನಾಂ ಜನಿಮಾ ವಿವಕ್ತಿ ।
ಮಹಿವ್ರತಃ ಶುಚಿಬಂಧುಃ ಪಾವಕಃ ಪದಾ ವರಾಹೋ ಅಭ್ಯೇತಿ ರೇಭನ್ ॥

|| ಪದಪಾಠಃ ||

ಪ್ರ । ಕಾವ್ಯಂ । ಉಶನಾಃऽಇವ । ಬ್ರುವಾಣಃ । ದೇವಃ । ದೇವಾನಾಂ । ಜನಿಮ । ವಿವಕ್ತಿ ।
ಮಹಿऽವ್ರತಃ । ಶುಚಿऽಬಂಧುಃ । ಪಾವಕಃ । ಪದಾ । ವರಾಹಃ । ಅಭಿ । ಏತಿ । ರೇಭನ್ ॥ ೭ ॥

|| ಸಾಯಣಭಾಷ್ಯಂ ||

ಉಶನೇವೈತನ್ನಾಮಕ ಋಷಿರಿವ ಕಾವ್ಯಂ ಕವಿಕರ್ಮ ಸ್ತೋತ್ರಂ ಬ್ರುವಾಣ ಉಚ್ಚಾರಯನ್ ದೇವಃ ಸ್ತೋತಾಯಮೃಷಿರ್ವೃಷಗಣೋ ನಾಮ ದೇವಾನಾಮಿಂದ್ರಾದೀನಾಂ ಜನಿಮ ಜನ್ಮಾನಿ ಪ್ರ ವಿವಕ್ತಿ। ಪ್ರಕರ್ಷೇಣ ಬ್ರವೀತಿ ॥ ವಚ ಪರಿಭಾಷಣೇ । ವ್ಯತ್ಯಯೇನ ವಿಕರಣಸ್ಯ ಶ್ಲುಃ । ಬಹುಲಂ ಛಂದಸೀತ್ಯ-ಭ್ಯಾಸಸ್ಯೇತ್ವಂ ॥ ಮಹಿವ್ರತಃ ಪ್ರಭೂತಕರ್ಮಾ ಶುಚಿಬಂಧುಃ । ಬಧ್ನಂತಿ ಶತ್ರೂನಿತಿ ಬಂಧೂನಿ ತೇಜಾಂಸಿ ಬಲಾನಿ ವಾ। ದೀಪ್ತತೇಜಸ್ಕಃ ಪಾವಕಃ ಪಾಪಾನಾಂ ಶೋಧಕೋ ವರಾಹಃ । ವರಂ ಚ ತೆಥ್ವಹ್ವಕ್ಷ್ಕ ವರಾಹಃ॥ ರಾಜಾಹಃಸಖಿಭ್ಯಷ್ಟಜಿತಿ ಟಚ್‌ಸಮಾಸಾಂತಃ ॥ ತಸ್ಮಿನ್ನಹನ್ಯಭಿಷೂಯಮಾಣತ್ವೇನ . ತದ್ವಾನ್ ॥ ಅರ್ಶ ಆದಿತ್ವಾನ್ಮತ್ವರ್ಥೀಯೋಽಚ್ ॥ ತಾದೃಶಃ ಸೋಮೋ ರೇಭಞ್ಛಬ್ದಂ ಕುರ್ವನ್ಪದಾ ಪದಾನಿ ಸ್ಥಾನಾನಿ ಪಾತ್ರಾಣ್ಯಭ್ಯೇತಿ । ಅಭಿಗಚ್ಛತಿ । ಯದ್ವಾ । ಯಥಾ ಕಶ್ಚನ ವರಾಹಃ ಪದಾ ಪಾದೇನ ಭೂಮಿಂ ವಿಕ್ರಮಮಾಣಃ ಶಬ್ದಂ ಕರೋತಿ ತದ್ವತ್ ॥

|| ಪ್ರತಿಪದಾರ್ಥ ||

**ಉಶನೇವ**—ಉಶನಾನಾಮಕನಾದ ಋಷಿಯಂತೆ | **ಕಾವ್ಯಂ**—ಉತ್ತಮವಾದ ಸ್ತುತಿಯನ್ನು | **ಬ್ರುವಾಣಃ**—ಪಠಿಸುತ್ತ | **ದೇವಃ**—ಸ್ತುತಿಕರ್ತನಾದ ವೃಷಗಣನು | **ದೇವಾನಾಂ**—ಇಂದ್ರಾದಿ ದೇವತೆಗಳ | **ಜನಿಮ**—ಉತ್ಪತ್ತಿ ಕ್ರಮವನ್ನು | **ಪ್ರ ವಿವಕ್ತಿ**—ಪ್ರಶಂಸಿಸುತ್ತಾನೆ | **ಪದಾ**—ಕಾಲುಗಳನ್ನಿಡುವಾಗ | **ವರಾಹ (ಇವ)**—ವರಾಹವು ಶಬ್ದಮಾಡುವಂತೆ | **ಮಹಿವ್ರತಃ**—ಉತ್ತಮವಾದ ಕರ್ಮವುಳ್ಳವನೂ | **ಶುಚಿಬಂಧುಃ**—ಪ್ರಕಾಶಮಾನವಾದ ತೇಜೋಯುತನೂ | **ಪಾವಕಃ**—ಪರಿಶುದ್ಧನೂ ಆದ ಸೋಮನು | **ರೇಭನ್**—ಶಬ್ದ ಮಾಡುತ್ತ | **ಅಭ್ಯೇತಿ**—ದಶಾಪವಿತ್ರವನ್ನು ಸಮೀಪಿಸುತ್ತಾನೆ.

|| ಭಾವಾರ್ಥ ||

ಉಶನಾನಾಮಕನಾದ ಋಷಿಯಂತೆ ಉತ್ತಮವಾದ ಸ್ತುತಿಯನ್ನು ಪಠಿಸುತ್ತ ಸ್ತುತಿಕರ್ತನಾದ ವೃಷಗಣನು ಇಂದ್ರಾದಿದೇವತೆಗಳ ಉತ್ಪತ್ತಿಕ್ರಮವನ್ನು ಪ್ರಶಂಸಿಸುತ್ತಾನೆ. ವರಾಹದಂತೆ ಪ್ರವಹಿಸುವಾಗ ಶಬ್ದವನ್ನು ಮಾಡುತ್ತ ಉತ್ತಮವಾದ ಕರ್ಮವುಳ್ಳವನೂ, ಪ್ರಕಾಶಮಾನವಾದ ತೇಜೋಯುತನೂ ಪರಿಶುದ್ಧನೂ ಆದ ಸೋಮನು ಶಬ್ದ ಮಾಡುತ್ತ ದಶಾಪವಿತ್ರವನ್ನು ಸಮೀಪಿಸುತ್ತಾನೆ.

English Translation

Reciting sacred praise like Ushanas the praiser (Vrishagana) proclaims the births of the gods ; assiduous in pious observances, of brilliant radiance, purifying (from sin), he approaches the filter making a noise (as) a wild boar (makes a noise) with its foot.

|| ವಿಶೇಷವಿಷಯಗಳು ||

**ಉಶನೇವ ಕಾವ್ಯಂ**— ಉಶನಾಃ ಎಂಬ ಹೆಸರಿನ ಋಷಿಯಂತೆ ಉತ್ತಮವಾದ ಸ್ತೋತ್ರವನ್ನು ಪಠಿಸುವ ಎಂದು ಇಲ್ಲಿ ಉಶನಾಃ ಎಂಬ ಋಷಿಯ ಉಪಮಾನವನ್ನು ಕೊಟ್ಟಿದೆ. ಈ ಉಶನಾಃ ಎಂಬ ಋಷಿಯು ಕವಿಃ ಎಂಬ

ಋಷಿಯ ಪುತ್ರನು. ಈ ಋಷಿಯ ಹೆಸರು ಋಗ್ವೇದಸಂಹಿತೆಯಲ್ಲಿ— ೧-೫೧-೧೦ ; ೧-೮೩-೫; ೧-೧೨೧-೧೨ ; ೪-೧೬-೨; ೪-೨೬-೧ ; ೬-೨೦-೧೧ ; ೮-೨೩-೧೭ ; ೯-೮೭-೩ ; ೯-೯೭-೭; ೧೦-೪೦-೭ ; ೧-೧೩೦-೯ ; ೫-೩೧-೮ ; ೫-೩೪-೨ ; ೮-೭-೨೬; ೧೦-೨೨-೬ ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ. ಇದಲ್ಲದೆ, ತೈತ್ತಿರೀಯ ಸಂಹಿತೆಯಲ್ಲಿ—

> ಅಗ್ನಿರ್ದೇವಾನಾಂ ದೂತ ಆಸೀದುಶನಾ ಕಾವ್ಯೋಽಸುರಾಣಾಂ ತೌ ಪ್ರಜಾಪತಿಂ ಪ್ರಶ್ನಮೈತಾಗ್ಂ ಸ ಪ್ರಜಾಪತಿರಗ್ನಿಂ ದೂತಂ ವೃಣೀಮಹ ಇತ್ಯಭಿಪರ್ಯಾವರ್ತತ ತತೋ ದೇವಾ ಅಭವನ್ಪರಾಸುರಾಃ ।
>
> (ತೈ. ಸಂ. ೨-೫-೮-೫)

ಪೂರ್ವದಲ್ಲಿ ಯಜ್ಞಮಾಡುವ ಯಜಮಾನರು ಯಜ್ಞಾದಿಗಳಲ್ಲಿ ಅರ್ಪಿಸುವ ಹವಿರಾದಿಗಳನ್ನು ಉದ್ದಿಷ್ಟದೇವತೆಗಳಿಗೆ ಒಯ್ಯಲು ಅಗ್ನಿಯು ದೇವತೆಗಳ ದೂತನಾಗಿದ್ದನು. ಇದೇರೀತಿ ಅಸುರರ ವಿಷಯದಲ್ಲಿ ಕವಿಪುತ್ರನಾದ ಉಶನಾಃ ಎಂಬುವನು ದೂತನಾಗಿದ್ದನು. ಹೀಗಿರುವಲ್ಲಿ ಅಗ್ನಿ ಮತ್ತು ಉಶನಾಃ ಎಂಬಿಬ್ಬರೂ ಪ್ರಜಾಪತಿಯ ಬಳಿಗೆ ಹೋಗಿ ನಮ್ಮಿಬ್ಬರಲ್ಲಿ ಯಾರು ದೂತಕಾರ್ಯವನ್ನು ವಹಿಸಲು ಸಮರ್ಥರು ಎಂದು ಕೇಳಲಾಗಿ, ಪ್ರಜಾಪತಿಯು **ಅಗ್ನಿಂ ದೂತಂ ವೃಣೀಮಹೇ**—ನಾವು ಅಗ್ನಿಯನ್ನೇ ದೂತನನ್ನಾಗಿ ಆರಿಸಿಕೊಳ್ಳುತ್ತೇವೆ ಎಂದು ಹೇಳಿದನು. ಆದ್ದರಿಂದ ಅಗ್ನಿಯ ಹವಿರ್ವಹನದಿಂದ ತುಷ್ಟರಾದ ದೇವತೆಗಳು ಎಲ್ಲಾ ಯುದ್ಧಗಳಲ್ಲಿಯೂ ಜಯಶಾಲಿಗಳಾದರು ; ಅಸುರರು ಪರಾಜಿತರಾದರು ಎಂದು ಹೇಳಿದೆ.

ಈ ಋಷಿಯ ವಿಷಯವು ಅಥರ್ವವೇದ. ೪-೨೯-೬ ; ಪಂಚವಿಂಶಬ್ರಾಹ್ಮಣ ೭-೫-೨೦ ; ೧೪-೧೨-೫ ; ಜೈಮಿನೀಯ ಉಪನಿಷದ್ಬ್ರಾಹ್ಮಣ. ೩-೭-೨-೬ ; ಸಾಂಖ್ಯಾಯನ ಶ್ರೌತಸೂತ್ರ. ೧೪-೨೭-೧ ಇತ್ಯಾದಿ ಸ್ಥಳಗಳಲ್ಲಿ ಸೂಚಿತವಾಗಿದೆ.

**ವರಾಹಃ**— ಈ ಋಕ್ಕಿನಲ್ಲಿ ವರಾಹ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಭಾಷ್ಯಕಾರರು ಹೇಳಿದಾರೆ. **ವರಂ ಚ ತದಹಶ್ಚ ವರಾಹಃ ।** ಉತ್ತಮವಾದ ದಿನದಲ್ಲಿ ಎಂದರ್ಥವು. ಅಥವಾ ವರಾಹವೆಂದರೆ ಒಂದು ಮೃಗ ವಿಶೇಷವು (ಹಂದಿ). **ಯಥಾ ಕಶ್ಚನ ವರಾಹಃ ಪಾದೇನ ಭೂಮಿಂ ಶಬ್ದಂ ಕರೋತಿ ತದ್ವತ್ ।** ವರಾಹವು ಅಥವಾ ಹಂದಿಯು ಭೂಮಿಯನ್ನು ತನ್ನ ಪಾದಗಳಿಂದ ತೋಡುವಾಗ ಯಾವ ರೀತಿ ಶಬ್ದಮಾಡುವುದೋ, ಆದರಂತೆ ಸೋಮರಸವು ಶಬ್ದಮಾಡುತ್ತಾ ಪಾತ್ರೆಗಳ ಬಳಿಗೆ ಹರಿದು ಹೋಗುತ್ತದೆ ಎಂದಭಿಪ್ರಾಯವು.

ವರಾಹ ಶಬ್ದಕ್ಕೆ ಮೇಘ ಮೊದಲಾದ ಅನೇಕ ಅರ್ಥಗಳಿರುವುದು. ಮತ್ತು ಯಾಸ್ಕರು ಈ ಶಬ್ದಕ್ಕೆ ನಿರ್ವಚನವನ್ನು ಹೇಳುವುದಕ್ಕಾಗಿ ಋ. ಸಂ. ೮-೭೭-೧೦ ನೇ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಆ ಋಕ್ಕಿಗೆ ನಿರುಕ್ತಪಕ್ಷವಾಗಿಯೂ, ಆಧ್ಯಾತ್ಮಿಕಪಕ್ಷವಾಗಿಯೂ ಎರಡುವಿಧ ಅರ್ಥಗಳನ್ನು ವಿವರಿಸಿರುವರು. (ಭಾಗ ೨೫ ಪುಟ 171-172 ಗಳನ್ನು ನೋಡಿ) ಇದಲ್ಲದೆ ವರಾಹನೆಂಬ ಅಸುರನೊಬ್ಬನಿದ್ದನೆಂದೂ, ಅವನನ್ನು ಇಂದ್ರನು ಸಂಹರಿಸಿದನೆಂದೂ ಒಂದು ಉಪಾಖ್ಯಾನವಿದೆ. ಅದರಲ್ಲಿ ವಿಷ್ಣುವಿನ ಪಾತ್ರವೂ ಇದೆ. ಈ ವಿಷಯದಲ್ಲಿ ಚರಕಬ್ರಾಹ್ಮಣದಲ್ಲಿ ಉಕ್ತವಾಗಿರುವ ಇತಿಹಾಸವನ್ನು ಇಲ್ಲಿ ವಿವರಿಸಿದೇವೆ.

ವಿಷ್ಣುರ್ಯಜ್ಞಃ । ಸ ದೇವೇಭ್ಯ ಆತ್ಮಾನಮಂತರಧಾತ್ । ತಮನ್ಯದೇವತಾ ನಾವಿಂದನ್ನಿಂದ್ರಸ್ತ್ವವೇತ್ । ಸ ಇಂದ್ರಮಬ್ರವೀತ್ಕೋ ಭವಾನಿತಿ । ತಮಿಂದ್ರಃ ಪ್ರತ್ಯಬ್ರವೀದಹಂ ದುರ್ಗಾಣಾಮಸುರಾಣಾಂ ಚ ಹಂತಾ ಭವಾಂಸ್ತು ಕ ಇತಿ । ಸೋಽಬ್ರವೀದಹಂ ದುರ್ಗಾದಾಹರ್ತಾ ತ್ವಂ ತು ಯದಿ ದುರ್ಗಾಣಾಮಸುರಾಣಾಂ ಹಂತಾ ತತೋಽಯಂ ವರಾಹೋ ವಾಮಮುಷ ಏಕವಿಂಶ್ಯಾಃ ಪುರಾಂ ಪಾರೇಽಶ್ಮಮಯೀನಾಂ ವಸತಿ ತಸ್ಮಿನ್ನಸುರಾಣಾಂ ವಸು ವಾಮಮಸ್ತಿ ತಮಿಮಂ ಜಹೀತಿ । ತಸ್ಯೇಂದ್ರಸ್ತಾಃ ಪುರೋ ಭಿತ್ತ್ವಾ ಹೃದಯಮವಿಧ್ಯತ್ । ಅಧಿ ತತ್ರ ಯದಾಸೀತ್ತದ್ವಿಷ್ಣುರಾಹರದಿತಿ । ಸೋಽಯಮಿತಿಹಾಸಃ ॥

ಇದರ ಮುಖ್ಯಾಭಿಪ್ರಾಯವೇನೆಂದರೆ–ವಿಷ್ಣುವೇ ಯಜ್ಞವು. ಆ ಯಜ್ಞರೂಪಿಯಾದ ವಿಷ್ಣುವು ಒಂದಾನೊಂದುಕಾಲದಲ್ಲಿ ದೇವತೆಗಳನ್ನು ಬಿಟ್ಟು ಹೊರಟುಹೋಗಿ ಒಂದು ರಹಸ್ಯಸ್ಥಳದಲ್ಲಿದ್ದನು. ಇದು ಇತರ ದೇವತೆಗಳಿಗೆ ತಿಳಿಯಲಿಲ್ಲ. ಇಂದ್ರನಿಗೆ ಮಾತ್ರ ತಿಳಿಯಿತು. ಆಗ ಇಂದ್ರನು ವಿಷ್ಣುವಿದ್ದ ಸ್ಥಳಕ್ಕೆ ಹೋದಾಗ ವಿಷ್ಣುವು ಇಂದ್ರನನ್ನು ಕುರಿತು ನೀನು ಯಾರೆಂದು ಅವನನ್ನು ಕೇಳಿದನು. ವಿಷ್ಣುವಿಗೆ ಪ್ರತ್ಯುತ್ತರವಾಗಿ ಇಂದ್ರನು ನಾನು ದುರ್ಗಗಳನ್ನೂ ಅಸುರರನ್ನೂ ಧ್ವಂಸಮಾಡುವವನು. ಆದರೆ, ನೀನು ಯಾರು ಎಂದನು. ವಿಷ್ಣುವು ನಾನು ದುರ್ಗಾದಿಗಳಿಂದ ಅಸುರರಿಗೆ ಸೇರಿದ ಧನಾದಿಗಳನ್ನು ಅಪಹರಿಸಿ ತರುವವನು. ನೀನು ಯಾರು ? ನೀನು ಮಾಡುವ ಕೆಲಸವೇನು ಎಂದು ಪುನಃ ಕೇಳಲು ಅದಕ್ಕೆ ವಿಷ್ಣುವು ಇಂತೆಂದನು—ನೀನು ಹೇಳಿದಂತೆ ದುರ್ಗಗಳ ಮತ್ತು ಅಸುರರ ಧನಾದಿಗಳನ್ನು ಧ್ವಂಸಮಾಡುವವನಾಗಿದ್ದಲ್ಲಿ, ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರನು ಇಲ್ಲಿಂದ ಇಪ್ಪತ್ತೊಂದು ಪುರಗಳ (ಕೋಟೆಗಳ) ಕೊನೆಯಲ್ಲಿ ಕಲ್ಲುಗಳಿಂದ ಭದ್ರವಾಗಿ ಕಟ್ಟಲ್ಪಟ್ಟಿರುವ ಕೋಟೆಯಲ್ಲಿ ವಾಸಮಾಡುತ್ತಿರುವನು. ಅವನಲ್ಲಿ ಅಸುರರ ಬಹಳವಾದ ಧನವಿರುವುದು. ಆದ್ದರಿಂದ ಆ ಅಸುರನನ್ನು ಸಂಹರಿಸು ಎಂದನು. ಅದನ್ನು ಕೇಳಿ ಇಂದ್ರನು ಅಸುರರ ಆ ಪಟ್ಟಣಗಳನ್ನು ಧ್ವಂಸಮಾಡಿ ವರಾಹ ಎಂಬ ಅಸುರನ ಹೃದಯವನ್ನು ಇರಿದು ಕೊಂದನು. ಆಗ ವಿಷ್ಣುವು ಅಸುರನಲ್ಲಿದ್ದ ಧನವನ್ನೆಲ್ಲಾ ಅಲ್ಲಿಂದ ತಂದನು. ಇದೇ ಈ ಇತಿಹಾಸದ ಮುಖ್ಯಾಭಿಪ್ರಾಯವು. ಈ ವಿಷಯವು ಮೇಲೆ ಹೇಳಿದ ಋಕ್ಕಿನಲ್ಲಿಯೂ,

ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಞ್ಚಾರ್ವನ್ನಾ ।
ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥
(ಋ. ಸಂ. ೧-೬೧-೭)

ಎಂಬ ಋಕ್ಕಿನಲ್ಲಿಯೂ ಹೇಳಿದೆಯೆಂದು ಭಾಷ್ಯಕಾರರು ಹೇಳಿ ಪ್ರಕೃತ ಋಕ್ಕಿನಲ್ಲಿರುವ ಮತ್ತು ಉದಾರಣೆಯಾಗಿ ಕೊಟ್ಟಿರುವ ವಾಕ್ಯಗಳಿಗೂ ಮೇಲೆ ಹೇಳಿದ ಇತಿಹಾಸಕ್ಕೂ ಹೊಂದಿಸಿ ಅರ್ಥವಿವರಣೆಮಾಡಿರುವರು.

ಅಸ್ಯೇದು ಮಾತುಃ ಇತ್ಯತ್ರ ವಿಷ್ಣುನಾ ಹೇ ಇಂದ್ರ ತ್ವಂ ದುರ್ಗಾಣಾಂ ಹಂತೇತ್ಯಾತ್ಮಾನಂ ಕಥಯಸಿ ತರ್ಹಿ ವಾಮಮುಷಂ ವರಾಹಮಸುರಂ ಜಹೀತ್ಯುಕ್ತಾರ್ಥೋ ವಿಧ್ಯದ್ವರಾಹಂ ಇತಿ ಪಾದೇನ ಪ್ರತಿಪಾದಿತಃ ।

ಮೇಲಿನ ಇತಿಹಾಸದಲ್ಲಿ ಹೇಳಿರುವ–"ಎಲೈ ಇಂದ್ರನೇ, ನೀನು ದುರ್ಗಗಳ ಮತ್ತು ಅಸುರರ ಸಂಹಾರಕನೆಂದು ಹೇಳಿಕೊಳ್ಳುವಿಯಷ್ಟೆ. ಹಾಗಾದರೆ ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರ

ನನ್ನು ಸಂಹರಿಸು ''ಎಂದು ವಿಷ್ಣುವಿನ ವಾಕ್ಯಾರ್ಥವು ಮೇಲೆ ಹೇಳಿದ **ಅಸ್ಯೇದು ಮಾತುಃ** ಎಂಬ ಉದಾಹರಣೆಯ ಋಕ್ಕಿನ **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬ ಕೊನೆಯ ಪಾದವಲ್ಲಿ ಉಕ್ತವಾಗಿರುವುದು.

**ಇಂದ್ರೇಣ ಚ ವಿಷ್ಣೋ ತ್ವಂ ದುರ್ಗಾದಾಹರ್ತೇತಿ ಬ್ರೂಷೇ ಮಯಾ ಪುರಾಣಿ ಜಿತಾನ್ಯಸುರಶ್ಚ ಘಾತಿತಸ್ತಸ್ಯ ವಾಮಂ ವಸ್ವಾನಯೇತ್ಯುಕ್ತೋ ವಿಷ್ಣುಮೂರ್ತಿಸ್ತಸ್ಯ ವರಾಹಾಸುರಸ್ಯ ಧನಂ ಮುಮೋಷ । ಸೋಽರ್ಥಂ ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ ಇತಿ ಪಾದೇನ ಸೂಚಿತಃ ॥**

ಮತ್ತು ಇಂದ್ರನು ವಿಷ್ಣುವನ್ನು ಕುರಿತು—ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಅವರ ಧನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿದ್ದೀಯಷ್ಟೆ. ಈಗ ನಾನು ಅನೇಕ ಶತ್ರುಪಟ್ಟಣಗಳನ್ನು ಜಯಿಸಿ ಅಸುರರನ್ನು ಕೊಂದಿರುವೆನು. ಆ ಅಸುರನಲ್ಲಿರುವ ಧನವನ್ನು ತೆಗೆದುಕೊಂಡು ಬಾ ಎಂದು ಹೇಳಲು ವಿಷ್ಣುವು ಅದಕ್ಕೆ ಒಪ್ಪಿ ಆ ವರಾಹಾಸುರನಲ್ಲಿದ್ದ ಧನವನ್ನು ಅಪಹರಿಸಿ ತಂದನು. ಈ ವಿವರವು—**ಮುಷಾಯದ್ವಿಷ್ಣುಃ ಪಚತಂ ಸಹೀಯಾನ್** ಎಂಬ ಉದಾಹೃತ ಋಕ್ಕಿನ ಪಾದದಿಂದ ವ್ಯಕ್ತಪಡುವುದು.

**ಸ ಕಿಂ ಪುನರ್ಮುಷಿತವಾನಿತಿ ತದತ್ರೋಚ್ಯತೇ । ವಿಶ್ವೇತ್ತಾ ಇತಿ । ಹೇ ಇಂದ್ರ ತ್ವೇಷಿತಸ್ತ್ವಯಾ ಪ್ರೇರಿತೋ ವಿಷ್ಣುರ್ಯಜ್ಞರೂಪೀ ತ್ವೇಷಿತಸ್ತ್ವಂ ದುರ್ಗಾದಾಹರ್ತಾ ಕಿಲ ತರ್ಹಿ ತ್ವಂ ತಸ್ಯ ಧನಾನ್ಯಾಹರೇತಿ ತ್ವಯಾ ಪ್ರೇರಿತಃ ಸನ್ನುರುಕ್ರಮೋ ಭೂತ್ವಾ ವಿಶ್ವೇತ್ತಾ ಯಾನಿ ಚ ತತ್ರ ಸ್ಥಿತಾನಿ ತಾನಿ ಸರ್ವಾಣ್ಯಾಭರತ್ । ಅಭರತು । ಕಾನಿ ತಾನೀತಿ । ಶತಂ ಮಹಿಷಾನಪರಿಮಿತಾನ್ ಪ್ರಶಸ್ತಾನ್ ಪದಾರ್ಥಾನ್ ತೇಷಾಂ ವಾಹನರೂಪಾನ್ ಮಹಿಷಾನ್ವಾ ಕ್ಷೀರಪಾಕಮೋದನಂ ಚ ಪಕ್ವಮಾತ್ರಮೇವೌದನಂ ಚಾಭರತ್ ॥**

ಮತ್ತು ಆ ವಿಷ್ಣುವು ಪುನಃ ಇನ್ನೂ ಅನೇಕ ಪದಾರ್ಥಗಳನ್ನು ಅಪಹರಿಸಿ ತಂದನು ಎಂದು ಹೇಳಿದೆಯಷ್ಟೆ. ಅದರ ವಿವರವನ್ನು ವಿಶ್ವೇತ್ತಾ ಎಂಬ ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಹೇಳಲಾಗಿದೆ. ಎಲೈ ಇಂದ್ರನೇ, ನೀನು ಯಜ್ಞರೂಪಿಯಾದ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಧನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿರುವೆಯಷ್ಟೆ. ಹಾಗಾದರೆ ಈ ವರಾಹಾಸುರನಲ್ಲಿರುವ ಧನಾದಿಗಳನ್ನು ತೆಗೆದುಕೊಂಡುಬಾ ಎಂಬುದಾಗಿ ನಿನ್ನಿಂದ (ಇಂದ್ರನಿಂದ) ಪ್ರೇರಿತನಾದಕೂಡಲೇ ವಿಷ್ಣುವು ಹಾಗೇ ಆಗಲೆಂದೊಪ್ಪಿ ಬೇಗಬೇಗನೆ ಅಸುರನ ಪಟ್ಟಣಕ್ಕೆ ಹೋಗಿ, ಅಸುರನಲ್ಲಿದ್ದ—ಎಂದರೆ ಯಾವಯಾವ ವಸ್ತುಗಳನ್ನು ತರಬೇಕೆಂದು ಹೇಳಿದ್ದನೋ ಆ ಧನಾದಿಗಳನ್ನೆಲ್ಲಾ ಅಪಹರಿಸಿ ತಂದನು. ವಿಷ್ಣುವು ತಂದ ಆ ವಸ್ತುಗಳಾವುವು ಎಂದರೆ ಅತ್ಯುತ್ತಮವಾದುವೂ ಅಸಂಖ್ಯಾತವಾದುವೂ ಆದ ಧನಾದಿ ಶ್ರೇಷ್ಠವಸ್ತುಗಳನ್ನೂ, ಅವುಗಳನ್ನು ಹೊತ್ತುತರುವ ಮಹಿಷಾದಿಪಶುಗಳನ್ನೂ, ಕ್ಷೀರಾದಿಗಳಿಂದ ಪಕ್ವಮಾಡಿದ ಅನ್ನಾದ್ಯಾಹಾರಗಳನ್ನೂ ಎಲ್ಲವನ್ನೂ ಇಂದ್ರನು ಹೇಳಿದಂತೆ ಅಪಹರಿಸಿ ತಂದನು ಎಂಬ ವಿವರವು ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಸೂಚಿತವಾಗಿರುವುದು.

**ವಿಧ್ಯದ್ವರಾಹಂ ಇತ್ಯತ್ರೋಕ್ತೋಽರ್ಥಶ್ಚ ಚರಮಪಾದೇನೋಚ್ಯತೇ । ಇಂದ್ರಸ್ತು ವರಾಹಾರಂ ಸ್ವೀಕೃತಾಸುರಸರ್ವಸ್ವಂ ವರಾಹರೂಪಿಣಂ ವೈಮುಷಮೇಮುಷನಾಮಾನಮಥವೈಮುಷಂ ಧನಾನಾಮಾಮೋಷಕಂ ವರಾಹಮಸುರಂ ಹೃದಯೇಽವಿಧ್ಯದಿತಿ ಶೇಷಃ ॥**

ಇನ್ನು ವಿಧ್ಯದ್ವರಾಹಮಿಂದ್ರ ಏಮುಷಂ ಎಂಬ ಪ್ರಕೃತ ಋಕ್ಕಿನ ಕೊನೆಯ ಪಾದದ ಅರ್ಥವನ್ನು ವಿವರಿಸುವರು ಈ ವರಾಹನೆಂಬ ಅಸುರನು ವರಾಹ (ಹಂದಿ) ರೂಪಿಯಾಗಿದ್ದು ಬಹಳ ಧನವನ್ನು ಅನೇಕರಿಂದ ಅಪಹರಿಸಿಟ್ಟಿದ್ದನು. ಆದ್ದರಿಂದ ಇವನನ್ನು **ಏಮುಷಂ ಎಂದರೆ ಧನಾನಾಮಾಮೋಷಕಂ** ಧನವನ್ನು ಅಪಹರಿಸುವವನು ಎಂಬ ಹೆಸರಿನಿಂದ ಕರೆಯುವುದು ರೂಢಿಯು. ಇಂತಹ ವರಾಹರೂಪಿಯಾದ ಏಮುಷನೆಂಬ ಅಸುರನನ್ನು ಇಂದ್ರನು ತನ್ನ ಶಕ್ತಿಸಾಮರ್ಥ್ಯಗಳಿಂದ ಅವನ ಎದೆಯನ್ನು ತಿವಿದು ಕೊಂದನು ಎಂಬ ಅಭಿಪ್ರಾಯವು ಪ್ರಕೃತ ಋಕ್ಕಿನ ಕೊನೆಯ ಪಾದದಲ್ಲಿ ವಿವೃತವಾಗಿದೆ.

ಕೃಷ್ಣಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ ಈ ವಿಷಯದ ವಿವರಣೆಯು ಇದೇ ರೀತಿಯಾಗಿ ಹೇಳಲ್ಪಟ್ಟಿದೆ

> **ಯಜ್ಞೋ ದೇವೇಭ್ಯೋ ನಿಲಾಯತ ವಿಷ್ಣೂರೂಪಂ ಕೃತ್ವಾ ಸ ಪೃಥಿವೀಂ ಪ್ರಾವಿಶತ್ತಂ ದೇವಾ ಹಸ್ತಾನ್ತ್ಸಗ್ಂ ರಭ್ಯೈಚ್ಛನ್ತಮಿಂದ್ರ ಉಪರ್ಯುಪರ್ಯತ್ಯಕ್ರಾಮತ್ಸೋಽಬ್ರವೀತ್ಕೋಮಾಯಮುಪರ್ಯುಪರ್ಯತ್ಯಕ್ರಮೀದಿತ್ಯಹಂ ದುರ್ಗೇ ಹಂತೇತ್ಯಥ ಕಸ್ತ್ವಮಿತ್ಯಹಂ ದುರ್ಗಾದಾಹರ್ತೇತಿ ಸೋಽಬ್ರವೀದ್ದುರ್ಗೇ ವೈ ಹಂತಾವೋಚಥಾವರಾಹೋಽಯಂ ವಾಮಮೋಷಃ ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತಿ ತಂ ಜಹಿ ಯದಿ ದುರ್ಗೇ ಹಂತಾಸೀತಿ ಸದರ್ಭಪುಂಜೀಲಮುದ್ವೃಹ್ಯ ಸಪ್ತಗಿರೀನ್ ಭಿತ್ವಾ ತಮಹನ್ತ್ಸೋಽಬ್ರವಿದ್ದುರ್ಗಾದ್ವಾ ಆಹರ್ತಾ ವೋಚಥಾ ಏತಮಾಹರೇತಿ ತಮೇಭ್ಯೋ ಯಜ್ಞ ಏವ ಯಜ್ಞಮಾಹರದ್ಯತ್ತದ್ವಿತ್ತಂ ವೇದ್ಯಮಸುರಾಣಾಮವಿಂದಂತ ತದೇಕಂ ವೇದ್ಯೈ ವೇದಿತ್ವಂ ||**
>
> (ತೈ. ಸಂ ೬-೨-೪-೨, ೩)

ಯಜ್ಞವೇದಿಗೆ ವೇದಿ ಎಂದು ಹೆಸರು ಹೇಗೆ ಬಂದಿತೆಂಬ ವಿಷಯವನ್ನು ವಿವರಿಸುವುದಕ್ಕಾಗಿ ಯಜುರ್ವೇದದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ—

ಪೂರ್ವದಲ್ಲಿ ಕಾರಣಾಂತರದಿಂದ ಯಜ್ಞವು ವಿಷ್ಣುರೂಪವನ್ನು ಧರಿಸಿ ದೇವತೆಗಳನ್ನು ಬಿಟ್ಟು ಹೊರಟು ಹೋಯಿತು. ಅನಂತರ ಯಜ್ಞರೂಪನಾದ ಆ ವಿಷ್ಣುವು ಭೂಮಿಯನ್ನು ಪ್ರವೇಶಿಸಿ ಯಾರಿಗೂ ತಿಳಿಯದಂತೆ ಅಡಗಿಕೊಂಡಿದ್ದಿತು. ದೇವತೆಗಳು ಅವನನ್ನು ಕಾಣದೆ ಒಬ್ಬರ ಕೈಯ್ಯನ್ನೊಬ್ಬರು ಹಿಡಿದುಕೊಂಡು ಎಲ್ಲೆಲ್ಲೂ ಹುಡುಕುತ್ತಿದ್ದರು. ಆದರೂ ಅವರಿಗೆ ವಿಷ್ಣುವಿರುವ ಸ್ಥಳವು ಸಿಕ್ಕಲಿಲ್ಲ. ಆದರೆ ಇಂದ್ರನು ವಿಷ್ಣುವು ಅಡಗಿಕೊಂಡಿದ್ದ ಪ್ರದೇಶದಮೇಲೆ ಹಾದುಹೋಗುವಾಗ, ಕೆಳಗಿದ್ದ ವಿಷ್ಣುವು—ಯಾರದು ? ನಾನಿರುವ ಈ ಸ್ಥಳದಮೇಲೆ ಹಾದು ಹೋಗುವವರು ? ಎನ್ನಲು, ಅದನ್ನು ಕೇಳಿ ಇಂದ್ರನು—ನಾನು, ಅಸುರರ ದುರ್ಗಗಳನ್ನು ಪ್ರಹರಿಸಿ ಧ್ವಂಸಮಾಡುವ ಶೂರನೇ ನಾನು. ಆದರೆ ನೀನು ಯಾರು ? ಎಂದು ಕೇಳಿದನು. ಅದಕ್ಕೆ ವಿಷ್ಣುವು—ಅಸುರರ ದುರ್ಗಾದಿಗಳು ಧ್ವಂಸವಾದಮೇಲೆ ಅಲ್ಲಿರತಕ್ಕ ಧನಾದಿವಸ್ತುಗಳನ್ನು ತರುವವನೇ ನಾನು ಎಂದು ಪ್ರತ್ಯುತ್ತರವಿತ್ತನು ಮತ್ತು ಇಂದ್ರನನ್ನುದ್ದೇಶಿಸಿ—ಎಲೈ ಪುರುಷನೇ, ನೀನು ಹೇಳಿಕೊಳ್ಳುವಂತೆ ಶತ್ರುಪಟ್ಟಣಗಳನ್ನು ಧ್ವಂಸಮಾಡುವವನು ನೀನೇ ಆಗಿದ್ದರೆ ಇಲ್ಲಿಂದ ಮುಂದೆ ಏಳು ಪರ್ವತಗಳ ಆಚೆ ವರಾಹನೆಂಬ ಅಸುರನಿರುವನು. ಅವನು ಅಸುರರ ಧನಾದಿಗಳನ್ನು

ಅಪಹರಿಸಿ ತನ್ನ ಬಲವಾದ ಕೋಟೆಯೊಳಗೆ ಇಟ್ಟುಕೊಂಡಿರುವನು. ನೀನು ಹೇಳಿಕೊಳ್ಳುವಂತೆ, ಅಸುರರ ದುರ್ಗಗಳನ್ನು ನಾಶಮಾಡುವ ಶಕ್ತಿ ನಿನಗಿದ್ದರೆ ಆ ವರಾಹನೆಂಬ ಅಸುರನನ್ನು ಪ್ರಹರಿಸಿ ಧ್ವಂಸಮಾಡು. ಆಗ ಮಾತ್ರ ನಿನ್ನ ಶಕ್ತಿಯು ಗೊತ್ತಾಗುವುದು ಎಂದನು. ಅದನ್ನು ಕೇಳಿ ಇಂದ್ರನು ಸಮೀಪದಲ್ಲಿದ್ದ ದರ್ಭೆಯ ಗೊಂಚಲೊಂದನ್ನು ತೆಗೆದುಕೊಂಡು ಅದನ್ನೇ ತನ್ನ ಆಯುಧವನ್ನಾಗಿ ಮಾಡಿಕೊಂಡು ಅಭೇದ್ಯವಾದ ಏಳು ಪರ್ವತಗಳನ್ನೂ ಭೇದಿಸಿ ಆ ವರಾಹಾಸುರನನ್ನೂ ಹೊಡೆದು ಕೊಂದನು. ಬಳಿಕ ವಿಷ್ಣುವನ್ನುದ್ದೇಶಿಸಿ ಎಲೈ ಪುರುಷನೇ, ನೀನು ಹೇಳಿದಂತೆ ಸಪ್ತಪರ್ವತಗಳನ್ನೂ ಸೀಳಿಹಾಕಿ ಅಲ್ಲಿದ್ದ ಅಸುರನನ್ನು ಕೊಂದಿರುವೆನು. ಇದರಿಂದ ನನ್ನ ಶಕ್ತಿಸಾಮರ್ಥ್ಯಗಳು ಸ್ಪಷ್ಟವಾಯಿತಷ್ಟೆ. ನೀನು ಹಿಂದೆ ಧ್ವಂಸವಾದ ಅಸುರರ ದುರ್ಗಾದಿಗಳಿಂದ ಅಲ್ಲಿರುವ ಧನಾದಿಗಳನ್ನು ತರುವವನೇ ನಾನು ಎಂದು ಹೇಳಿಕೊಂಡೆಯಷ್ಟೆ. ಈಗ ನೀನು ಹೇಳಿಕೊಂಡಂತೆ ಅಲ್ಲಿರುವ ಧನಾದಿವಸ್ತುಗಳನ್ನು ತೆಗೆದುಕೊಂಡು ಬಾ ಆಗ ನಿನ್ನ ಶಕ್ತಿಯು ವ್ಯಕ್ತವಾಗುವುದು ಎಂದು ಹೇಳಲು ವಿಷ್ಣುವು ಹಾಗೇ ಆಗಲೆಂದು ಹೇಳಿ ಯಜ್ಞರೂಪದಿಂದಲೇ ಆ ಅಸುರನಲ್ಲಿದ್ದ ಧನಾದಿ ವಸ್ತುಗಳನ್ನು ಅಪಹರಿಸಿ ದೇವತೆಗಳ ಸಮೀಪಕ್ಕೆ ತಂದನು. ಈರೀತಿ ಯಜ್ಞದಿಂದ ದೇವತೆಗಳು ಅಸುರರ ಧನಗಳನ್ನು ಪಡೆದದ್ದರಿಂದ ಯಜ್ಞಮಾಡುವ ಪ್ರದೇಶಕ್ಕೆ ವೇದಿ ಎಂದು ಹೆಸರು ಬಂದಿತು ಎಂದು ಈ ಇತಿಹಾಸದ ಮುಖ್ಯಾಭಿಪ್ರಾಯವು,

ಯಾಸ್ಕರು **ವರಾಹಃ** ಎಂಬ ಶಬ್ದದ ಅರ್ಥವಿವರಣೆಮಾಡುವುದಕ್ಕಾಗಿ ಈ ರೀತಿ ನಿರ್ವಚನವನ್ನು ಹೇಳಿಧಾರೆ—

> ವರಾಹಃ । **ವರಾಹೋ ಮೇಘೋ ಭವತಿ ವರಾಹಾರಃ । ವರಮುಹಾರಮಾಹಾರ್ಷೀಃ ಇತಿ ಚ ಬ್ರಾಹ್ಮಣಂ । ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ಇತ್ಯಪಿ ನಿಗಮೋ ಭವತಿ । ಅಯಮಪೀತರೋ ವರಾಹ ಏತಸ್ಮಾದೇವ । ಬೃಹತಿ ಮೂಲಾನಿ ವರಂ ವರಂ ಮೂಲಂ ಬೃಹತೀತಿ ವಾ । ವರಾಹಮಿಂದ್ರ ಏಮುಷಂ ಇತ್ಯಪಿ ನಿಗಮೋ ಭವತಿ ॥**
>
> (ನಿ. ೫–೪)

ವರಾಹವೆಂದರೆ ಮೇಘವು. ಈ ಮೇಘವು ವೃಷ್ಟಿಯನ್ನು ಸುರಿಸುವುದರ ಮೂಲಕ ಉತ್ತಮವಾದ ಆಹಾರವನ್ನು ಒದಗಿಸುವುದರಿಂದ ಮೇಘಕ್ಕೆ ವರಾಹಾರ ಅಥವಾ ವರಾಹ ಎಂಬ ಹೆಸರು ಬಂದಿದೆ. **ವರಮಾಹಾರಮಾಹಾರ್ಷೀಃ** ಎಂಬುದು ಈ ವಿಧವಾದ ಅರ್ಥಸಮರ್ಥನೆಯನ್ನು ಮಾಡುವ ಬ್ರಾಹ್ಮಣವಾಕ್ಯವು. **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬುದೂ ಇನ್ನೊಂದು ಶ್ರುತಿವಾಕ್ಯದ ಉದಾಹರಣೆಯು. ಇದರಲ್ಲಿ-ಇಂದ್ರನು ದೂರದಿಂದಲೇ ತನ್ನ ವಜ್ರಾಯುಧವನ್ನು ಪ್ರಯೋಗಿಸಿ ಮೇಘವನ್ನು ಸೀಳಿದನು ಎಂಬ ಅಭಿಪ್ರಾಯವು ಸೂಚಿತವಾಗಿದೆ ಎಂದರೆ ಈ ಉದಾಹರಣೆಯಲ್ಲಿ ವರಾಹಶಬ್ದಕ್ಕೆ ಮೇಘವೆಂಬ ಅರ್ಥವು ಸ್ಪಷ್ಟವಾಗಿದೆ. ವರಾಹಶಬ್ದಕ್ಕೆ ಹಂದಿ ಎಂಬ ಇನ್ನೊಂದು ಅರ್ಥವೂ ಇರುವುದು. (ವರಾಹ ಶಬ್ದವೂ) ಇದೇ ಮೂಲಧಾತುವಿನಿಂದ ನಿಷ್ಪನ್ನವಾಗಿದೆ. ಗಿಡಗಳ ಎಂದರೆ ಸಸ್ಯಾದಿಗಳ ಬೇರುಗಳನ್ನು ತನ್ನ ಕೋರೆದಾಡೆಗಳಿಂದ ಈಚೆಗೆ ಕಿತ್ತು ಹಾಕುವುದರಿಂದಲೂ, ಉತ್ತಮವಾದ ಆ ಗೆಡ್ಡೆಗೆಣಸುಗಳನ್ನು ಬುಡಸಹಿತ ಕಿತ್ತು ಧ್ವಂಸಮಾಡುವುದರಿಂದಲೂ ಸೂಕರ ಅಥವಾ ಹಂದಿಗೆ ವರಾಹ ಎಂಬ ಹೆಸರು ಬಂದಿದೆ. ಈ ವಿಷಯದಲ್ಲಿ ಪ್ರಕೃತ ಋಕ್ಕಿನಲ್ಲಿರುವ **ವರಾಹಮಿಂದ್ರ ಏಮುಷಂ**—ಇಂದ್ರನು ಆಹಾರಧ್ವಂಸಕವಾದ ಹಂದಿಯನ್ನು (ಅಸುರನನ್ನು) ಸೀಳಿ ಕೊಂದನು ಎಂಬ ಶ್ರುತಿವಾಕ್ಯವು ಈ ವಿಧವಾದ ಅರ್ಥದ ಸಮರ್ಥನೆಗೆ ಉದಾಹರಣೆಯಾಗಿದೆ. ಇದೇ ನಿರುಕ್ತದ ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಪ್ರ ಹಂಸಾಸಸ್ತೃಪಲಂ ಮನ್ಯುಮಚ್ಛಾಮಾದಸ್ತಂ ವೃಷಗಣಾ ಅಯಾಸುಃ |
ಆಂಗೂಷ್ಯಂ೧ ಪವಮಾನಂ ಸಖಾಯೋ ದುರ್ಮರ್ಷಂ ಸಾಕಂ ಪ್ರ ವದಂತಿ ವಾಣಂ || ೮ ||

|| ಪದಪಾಠಃ ||

ಪ್ರ | ಹಂಸಾಸಃ | ತೃಪಲಂ | ಮನ್ಯುಂ | ಅಚ್ಛ | ಅಮಾತ್ | ಅಸ್ತಂ | ವೃಷऽಗಣಾಃ | ಅಯಾಸುಃ |
ಆಂಗೂಷ್ಯಂ | ಪವಮಾನಂ | ಸಖಾಯಃ | ದುಃऽಮರ್ಷಂ | ಸಾಕಂ | ಪ್ರ | ವದಂತಿ | ವಾಣಂ || ೮ ||

|| ಸಾಯಣಭಾಷ್ಯಂ ||

ಹಂಸಾಸಃ ಶತ್ರುಭಿರ್ಹನ್ಯಮಾನಾ ಹಂಸಾ ಇವ ಚರಂತೋ ವಾ ವೃಷಗಣಾ ಏತನ್ನಾಮಕಾ ಋಷಯೋऽಮಾಚ್ಛತ್ರೂಣಾಂ ಬಲಾತ್ತ್ರಾಸಿತಾಃ ಸಂತಸ್ತೃಪಲಂ | ತೃಪಲಶಬ್ದಃ ಕ್ಷಿಪ್ರವಾಚೀ | ತದುಕ್ತಂ ಯಾಸ್ಕೇನ | ತೃಪಲಪ್ರಭರ್ಮಾ ಕ್ಷಿಪ್ರಪ್ರಹಾರೀತಿ | ನಿ- ೫-೧೨ | ಕ್ಷಿಪ್ರಪ್ರಹಾರಿಣಂ ಮನ್ಯುಂ ಶತ್ರೂನಭಿಮನ್ಯಮಾನಂ ಸೋಮಮುಚ್ಛಾಭಿಲಕ್ಷ್ಯಾಸ್ತಂ ಯಜ್ಞಗೃಹಂ ಪ್ರಾಯಾಸುಃ | ಪ್ರಾಯಾಸಿಷುಃ | ಪ್ರಗಚ್ಛಂತಿ | ತತಃ ಸಖಾಯಃ ಸ್ತುತ್ಯಸ್ತೋತೃತ್ವಲಕ್ಷಣೇನ ಸಂಬಂಧೇನ ಸಖಿಭೂತಾಃ ಸ್ತೋತಾರ ಆಂಗೂಷ್ಯಂ ಸರ್ವೈರಭಿಗಂತವ್ಯಂ | ಯದ್ವಾ || ಘೋಷಶಬ್ದಸ್ಯ ಪೃಷೋದರಾದಿತ್ವಾದ್ಗೂ ಇತ್ಯಾದೇಶಃ | ಆಜ ಅನುನಾಸಿಕಶ್ಛಾಂದಸಃ || ಸ್ತೋತ್ರಾರ್ಹಂ ದುರ್ಮರ್ಷಂ ಶತ್ರುಭಿರ್ದುರ್ಧರಂ ದುಃಸಹಂ ಏವಂವಿಧಂ ಸೋಮಂ ಪವಮಾನಮುದ್ದಿಶ್ಯ ವಾಣಂ ವಾದ್ಯವಿಶೇಷಂ ಸಾಕಂ ಸಹೈವ ಪ್ರ ವದಂತಿ | ಪ್ರವಾದಯಂತಿ | ತದುಪಲಕ್ಷಿತಂ ಗಾನಂ ಕುರ್ವಂತೀತ್ಯರ್ಥಃ ||

|| ಪ್ರತಿಪದಾರ್ಥ ||

**ಹಂಸಾಸಃ**—ಹಂಸಗಳಂತೆ ನಡಗೆಯುಳ್ಳ | **ವೃಷಗಣಾಃ**—ವೃಷಗಣರೆಂಬ ಋಷಿಗಳು | **ಅಮಾತ್**—ಶತ್ರುಗಳಿಗೆ ಬೆದರಿ | **ತೃಪಲಂ**—ಶೀಘ್ರವಾಗಿ ಶತ್ರುಗಳನ್ನು ನಾಶಮಾಡುವವನೂ | **ಮನ್ಯುಂ ಅಚ್ಛ**—ಶತ್ರುಚ್ಛೇದಕನೂ ಆದ ಸೋಮನನ್ನುದ್ದೇಶಿಸಿ | **ಅಸ್ತಂ**— ಯಜ್ಞಗೃಹಕ್ಕೆ | **ಪ್ರಯಾಸುಃ**—ಬಂದಿದ್ದಾರೆ | **ಸಖಾಯಃ**—ಮಿತ್ರಭೂತರಾದ ಸ್ತುತಿಕರ್ತರು | **ಆಂಗೂಷ್ಯಂ** —ಸ್ತುತಿಗೆ ಪಾತ್ರನೂ | **ದುರ್ಮರ್ಷಂ**—ಶತ್ರುಗಳಿಂದ ಅಪ್ರತಿಹತನೂ ಆದ | **ಪವಮಾನಂ**—ಸೋಮದೇವನನ್ನುದ್ದೇಶಿಸಿ | **ವಾಣಂ**—ವೇಣುನಾದನವನ್ನು | **ಸಾಕಂ**—ಒಟ್ಟಿಗೆ | **ಪ್ರ ವದಂತಿ**—ಗಾನರೂಪದಲ್ಲಿ ಪಠಿಸುತ್ತಾರೆ.

|| ಭಾವಾರ್ಥ||

ಹಂಸದಂತೆ ನಡಗೆಯುಳ್ಳ ವೃಷಗಣರೆಂಬ ಋಷಿಗಳು ಬೆದರಿ ಶೀಘ್ರವಾಗಿ ಶತ್ರುಗಳನ್ನು ನಾಶಮಾಡುವವನೂ ಶತ್ರುಚ್ಛೇದಕನೂ ಆದ ಸೋಮನನ್ನು ಲಕ್ಷಿಸಿ ಯಜ್ಞಗೃಹಕ್ಕೆ ಬಂದಿದ್ದಾರೆ. ಮಿತ್ರಭೂತರಾದ ಸ್ತುತಿಕರ್ತರು |

ಸ್ತುತಿಗೆ ಪಾತ್ರನೂ, ಶತ್ರುಗಳಿಂದ ಅಪ್ರತಿಹತನೂ ಆದ ಸೋಮನನ್ನುದ್ದೇಶಿಸಿ ವೇಣುಗಾನವನ್ನು ಒಟ್ಟಿಗೆ ಪಠಿಸುತ್ತಾರೆ. (ವೇಣುಗಾನ ರೂಪದಲ್ಲಿ ಸೋಮನನ್ನು ಪ್ರಶಂಸಿಸುತ್ತಾರೆ)

## English Translation.

The Vrishaganas (walking like) swans, (alarmed) at the strength (of the foe), have repaired to the house of sacrifice, to the swift-shooting foe-despising (Soma); the friends sound the flute to the praiseworthy irresistible Pavamana.

### ವಿಶೇಷವಿಷಯಗಳು

**ವೃಷಗಣಾಃ**—ವೃಷಗಣರೆಂಬ ಹೆಸರಿನ ಕೆಲವು ಮಂದಿ ಋಷಿಗಳು ; ಈ ಋಕ್ಕಿಗೂ ಇದರ ಹಿಂದಿನ ಮತ್ತು ಮುಂದಿನ ಋಕ್ಕುಗಳಿಗೂ (೭–೯ ಋಕ್ಕುಗಳು) ವಸಿಷ್ಠಗೋತ್ರದ ವೃಷಗಣನೆಂಬುವನು ಋಷಿಯು ; ಇಲ್ಲಿ ಹೇಳಿರುವ **ವೃಷಗಣಾ** ಎಂಬ ಋಷಿಗಳು ಇವನ ಬಂಧುಗಳೇ ಆಗಿರಬಹುದು. ಇವರ ಹೆಸರು ಈ ಋಕ್ಕಿನಲ್ಲಲ್ಲದೆ ಮತ್ತೆಲ್ಲಿಯೂ ಪಠಿತವಾಗಿಲ್ಲ. ಇವರು ಗಾನಮಾಡುವುದರಲ್ಲಿ ಪ್ರವೀಣರೆಂದು ಪ್ರಸಿದ್ಧಿಯು. ಶತ್ರುಗಳಿಂದ ಎಂದರೆ ಬೇಟೆಗಾರರಿಂದ ಹಿಂಸೆಗೆ ಒಳಗಾದ ಹಂಸಪಕ್ಷಿಗಳು ಯಾವರೀತಿ ಆರ್ತನಾದವನ್ನು ಮಾಡುತ್ತಾ ಓಡಿಹೋಗುವವೋ ಅದರಂತೆ ಶತ್ರುಗಳಿಂದ ಹಿಂಸಿತರಾದ ವೃಷಗಣರೆಂಬ ಋಷಿಗಳು ಹೆದರಿ ಶತ್ರುಸಂಹಾರಕನಾದ ಸೋಮದೇವತೆಯ ಬಳಿಗೆ ಬಂದರು. ಅನಂತರ ಗಾನಕುಶಲರಾದ ಈ ಋಷಿಗಳು ತಮಗೆ ಮಿತ್ರನಂತಿರುವ ಸೋಮದೇವತೆಯನ್ನು ವಾಣವೆಂಬ ವಾದ್ಯವಿಶೇಷವನ್ನು ನುಡಿಸುತ್ತಾ ಸ್ತುತಿಸಿದರು ಎಂದು ಋಷಿಯು ಇಲ್ಲಿ ವರ್ಣಿಸಿದಾನೆ

॥ ಸಂಹಿತಾಪಾಠಃ ॥

ಸ ರಂಹತ ಉರುಗಾಯಸ್ಯ ಜೂತಿಂ ವೃಥಾ ಕ್ರೀಳಂತಂ ಮಿಮತೇ ನ ಗಾವಃ।
ಪರೀಣಸಂ ಕೃಣುತೇ ತಿಗ್ಮಶೃಂಗೋ ದಿವಾ ಹರಿರ್ದದೃಶೇ ನಕ್ತಮೃಜ್ರಃ ॥೯॥

॥ ಪದಪಾಠಃ ॥

ಸಃ । ರಂಹತೇ । ಉರುಽಗಾಯಸ್ಯ । ಜೂತಿಂ । ವೃಥಾ । ಕ್ರೀಳಂತಂ । ಮಿಮತೇ । ನ । ಗಾವಃ ।
ಪರೀಣಸಂ । ಕೃಣುತೇ । ತಿಗ್ಮಽಶೃಂಗಃ । ದಿವಾ । ಹರಿಃ । ದದೃಶೇ । ನಕ್ತಂ । ಋಜ್ರಃ ॥ ೯ ॥

॥ ಸಾಯಣಭಾಷ್ಯಂ ॥

ಸ ಸೋಮೋ ರಂಹತೇ । ಅತಿಶೀಘ್ರಂ ಗಚ್ಛತೀತ್ಯರ್ಥಃ । ಉರುಗಾಯಸ್ಯ ಬಹುಭಿಃ ಸ್ತುತ್ಯಸ್ಯಾತ್ಮನೋ ಜೂತಿಂ ಗತಿಮನುಸರನ್ । ತಂ ವೃಥಾನಾಯಾಸೇನ ಕ್ರೀಳಂತಂ ವಿಹರಂತಂ ಗಚ್ಛಂತಂ ಸೋಮಂ ಗಾವೋಽನ್ಯೇ ಗಂತಾರೋ ನ ಮಿಮತೇ । ನ ಪರಿಚ್ಛಿಂದಂತಿ । ತಮನುಗಂತುಂ ನ ಶಕ್ನುವಂತೀತ್ಯರ್ಥಃ । ಕಿಂಚ ತಿಗ್ಮಶೃಂಗಃ । ಶೃಣಂತಿ ಹಿಂಸಂತಿ ತಮಾಂಸೀತಿ ಶೃಂಗಾಣಿ ತೇಜಾಂಸಿ । ತೀಕ್ಷ್ಣತೇಜಸ್ಕಃ

ಪರೀಣಸಂ । ಬಹುನಾಮೈತತ್ । ಬಹುವಿಧಂ ತೇಜಃ ಕೃಣುತೇ । ಕರೋತಿ । ಅಂತರಿಕ್ಷೇ ವರ್ತಮಾನೋ ಯಃ ಸೋಮೋ ದಿವಾಹನಿ ಹರಿರ್ಹರಿತವರ್ಣೋ ದದೃಶೇ ದೃಶ್ಯತೇ । ನ ಪ್ರಕಾಶತ ಇತ್ಯರ್ಥಃ । ನಕ್ತಂ ರಾತ್ರೌ ತ್ವೃಜ್ರ ಋಜುಗಾಮೀ ವಿಸ್ಪಷ್ಟಃ ಪ್ರಕಾಶಯುಕ್ತೋ ದೃಶ್ಯತೇ ॥ ದೃಶೇಃ ಕರ್ಮಣಿ ಲಿಟಿ ರೂಪಂ ॥

॥ ಪ್ರತಿಪದಾರ್ಥ ॥

**ಸಃ**—ಸೋಮದೇವನು । **ಉರುಗಾಯಸ್ಯ**—ಅನೇಕರಿಂದ ಪ್ರಶಂಸಿಸಲ್ಪಡುವ ತನ್ನದೇ ಆದ । **ಜೂತಿಂ**—ಗತಿಯನ್ನನುಸರಿಸಿ । **ರಂಹತೇ**—ಶೀಘ್ರವಾಗಿ ನಡೆಯುತ್ತಾನೆ । **ವೃಥಾ**—ಶ್ರಮವಿಲ್ಲದೇ । **ಕ್ರೀಳಂತಂ**—ನಡೆಯುತ್ತಿರುವ ಈ ಸೋಮನನ್ನು । **ಗಾವಃ**—ಇತರ ಸಂಚಾರಿಗಳು । **ನ ಮಿಮತೇ**—ಅನುಸರಿಸಲಾಗುವುದಿಲ್ಲ । **ತಿಗ್ಮಶೃಂಗಃ**—ತೀಕ್ಷ್ಣವಾದ ಪ್ರಭೆಯುಳ್ಳ ಸೋಮನು । **ಪರೀಣಸಂ**—ಅನೇಕ ವಿಧವಾದ ತೇಜಸ್ಸನ್ನು । **ಕೃಣುತೇ**—ಪ್ರಕಾಶಪಡಿಸುತ್ತಾನೆ । **ದಿವಾ**—ಅಹಸ್ಸುಗಳಲ್ಲಿ । **ಹರಿಃ**—ಪಚ್ಚೆವರ್ಣವುಳ್ಳವನಾಗಿಯೂ । **ನಕ್ತಂ**—ರಾತ್ರಿಯಲ್ಲಿ । **ಋಜ್ರಃ**—ಸ್ಪಷ್ಟವಾಗಿ ತೋರುವ ಪ್ರಕಾಶವುಳ್ಳವನಾಗಿಯೂ । **ದದೃಶೇ**—ಕಾಣುತ್ತಾನೆ.

॥ ಭಾವಾರ್ಥ ॥

ಸೋಮದೇವನು ಅನೇಕರಿಂದ ಪ್ರಶಂಸಿಸಲ್ಪಡುವ ತನ್ನದೇ ಆದ ಗತಿಯನ್ನನುಸರಿಸಿ ಶೀಘ್ರವಾಗಿ ನಡೆಯುತ್ತಾನೆ. ಶ್ರಮವಿಲ್ಲದೇ ನಡೆಯುತ್ತಿರುವ ಈ ಸೋಮನನ್ನು ಇತರರು ಅನುಸರಿಸಲಾಗುವುದಿಲ್ಲ. ತೀಕ್ಷ್ಣವಾದ ಅನೇಕವಿಧವಾದ ತೇಜಸ್ಸನ್ನು ಪ್ರಭೆಯುಳ್ಳ ಸೋಮನು ಪ್ರಕಾಶಪಡಿಸುತ್ತಾನೆ. ಅಹಸ್ಸುಗಳಲ್ಲಿ ಪಚ್ಚೆವರ್ಣವುಳ್ಳವನಾಗಿಯೂ, ರಾತ್ರಿಯಲ್ಲಿ ಸ್ಪಷ್ಟವಾಗಿ ತೋರುವ ಪ್ರಕಾಶವುಳ್ಳವನಾಗಿಯೂ ಕಾಣುತ್ತಾನೆ.

## English Translation

He moves rapidly (following) the path of (him) the much-praised, (other) goers cannot overtake him (though he is) moving easily ; sharp-horned he displays manifold (radiance) ; the Soma appears green-tinted by day, and clearly visible at night.

॥ ಸಂಹಿತಾಪಾಠಃ ॥

**ಇಂದುರ್ವಾಜೀ ಪವತೇ ಗೋನ್ಯೋಘಾ ಇಂದ್ರೇ ಸೋಮಃ ಸಹ ಇನ್ವನ್ಮ-**
**ದಾಯ ।**
**ಹಂತಿ ರಕ್ಷೋ ಬಾಧತೇ ಪರ್ಯರಾತೀರ್ವರಿವಃ ಕೃಣ್ವನ್ವೃಜನಸ್ಯ ರಾಜಾ ॥**

॥ ಪದಪಾಠಃ ॥

ಇಂದುಃ । ವಾಜೀ । ಪವತೇ । ಗೋಽನ್ಯೋಘಾಃ । ಇಂದ್ರೇ । ಸೋಮಃ । ಸಹಃ । ಇನ್ವನ್ । ಮದಾಯ ।
ಹಂತಿ । ರಕ್ಷಃ । ಬಾಧತೇ । ಪರಿ । ಅರಾತೀಃ । ವರಿವಃ । ಕೃಣ್ವನ್ । ವೃಜನಸ್ಯ । ರಾಜಾ ॥ ೧೦ ॥

॥ ಸಾಯಣಭಾಷ್ಯಂ ॥

ಇಂದುಃ ಕ್ಷರಣಶೀಲೋ ವಾಜೀ ಬಲವಾನ್ ಗೋನ್ಯೋಘಾ ಗಮನಶೀಲನೀಚೀನಾಗ್ರರಸಸಂಘಾತ ಇಂದ್ರೇ ಸಹೋ ಬಲಕರರಸಮಿನ್ವನ್ ಪ್ರೇರಯನ್ ಸೋಮೋ ಮದಾಯ ತಸ್ಯ ಮದಾರ್ಥಂ ಪವತೇ । ಕ್ಷರತಿ । ಕಿಂಚ ರಕ್ಷೋ ರಕ್ಷಃಕುಲಂ ಹಂತಿ । ಹಿನಸ್ತಿ । ಕಿಂಚಾರಾತೀರರಾತೀಞ್ಶತ್ರೂನ್ಪರಿ ಬಾಧತೇ । ಪರಿತಃ ಸಂಹರತಿ । ಕೀದೃಶಃ । ವರಿವೋ ವರಣೀಯಂ ಧನಂ ಕೃಣ್ವನ್ ಸ್ತೋತೄಣಾಂ ಕುರ್ವನ್ ವೃಜನಸ್ಯ ಬಲಸ್ಯ ರಾಜೇಶಿತಾ ಸೋಮ ಇತಿ ॥

॥ ಪ್ರತಿಪದಾರ್ಥ ॥

**ಇಂದುಃ**— ಸ್ರವಿಸುವ ಸ್ವಭಾವವುಳ್ಳವನೂ । **ವಾಜೀ**— ಶಕ್ತಿಯುತನೂ । **ಗೋನ್ಯೋಘಾಃ**— ಪೃಥ್ವಿಯ ಮೇಲೆ ಪ್ರವಹಿಸುವ ರಸಗಳುಳ್ಳವನೂ ಆದ । **ಸೋಮಃ**—ಸೋಮದೇವನು । **ಇಂದ್ರೇ**— ಇಂದ್ರನಲ್ಲಿ । **ಸಹಃ**—ಶಕ್ತಿಯನ್ನು । **ಇನ್ವನ್**—ಪ್ರೇರಿಸುತ್ತ । **ಮದಾಯ**—ಅವನ ಹರ್ಷಕ್ಕಾಗಿ । **ಪವತೇ**—ಹರಿಯುತ್ತಾನೆ. । **ವೃಜನಸ್ಯ**—ಶಕ್ತಿಗೆ । **ರಾಜಾ**— ಪ್ರಭುವಾದ ಸೋಮನು । **ವರಿವಃ**—ಧನವನ್ನು । **ಕೃಣ್ವನ್**— ಸ್ತುತಿಕರ್ತರಿಗೆ ಒದಗಿಸುತ್ತ । **ರಕ್ಷಃ** ರಾಕ್ಷಸರನ್ನು । **ಹಂತಿ**—ಹಿಂಸಿಸುತ್ತಾನೆ. । **ಅರಾತೀಃ**—ಶತ್ರುಗಳನ್ನು । **ಪರಿ ಬಾಧತೇ**— ಪೂರ್ಣವಾಗಿ ಹಿಂಸಿಸುತ್ತಾನೆ.

॥ ಭಾವಾರ್ಥ ॥

ಸ್ರವಿಸುವ ಸ್ವಭಾವವುಳ್ಳವನೂ, ಶಕ್ತಿಯುತನೂ, ಪೃಥ್ವಿಯ ಮೇಲೆ ಪ್ರವಹಿಸುವ ರಸಗಳುಳ್ಳವನೂ ಆದ ಸೋಮದೇವನು ಇಂದ್ರನಲ್ಲಿ ಶಕ್ತಿಯನ್ನು ಪ್ರೇರಿಸುತ್ತ ಅವನ ಹರ್ಷಕ್ಕಾಗಿ ಹರಿಯುತ್ತಾನೆ. ಶಕ್ತಿಗೆ ಪ್ರಭುವಾದ ಸೋಮನು ಸ್ತುತಿಕರ್ತರಿಗೆ ಧನವನ್ನು ಒದಗಿಸುತ್ತಾ ರಾಕ್ಷಸರನ್ನು ಹಿಂಸಿಸುತ್ತಾನೆ. ಶತ್ರುಗಳನ್ನು ಪೂರ್ಣವಾಗಿ ಹಿಂಸಿಸುತ್ತಾನೆ.

English Translation.

The powerful, flowing Soma having quantities of juice flowing down, streams forth infusing strength into Indra for his exhilaration ; conferring wealth the king of strength slays the Rakshasas and harasses the enemy.

॥ ವಿಶೇಷವಿಷಯಗಳು ॥

**ಗೋನ್ಯೋಘಾಃ—ಗಮ್ಲೃ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಗೋಶಬ್ದಕ್ಕೆ **ಗಂತಾರಃ** ಎಂದು ಗಮನಾರ್ಥಕವಾದ ಅರ್ಥವಿರುವುದು **ನಿ** ಎಂದರೆ **ನೀಚೀನ,** ಕೆಳಭಾಗ ; **ಓಘಃ** ಎಂದರೆ **ಸಂಘಾತಃ ಗಮನಶೀಲ ನೀಚೀನಾಗ್ರರಸಸಂಘಾತಃ**—ಕೆಳಮುಖವಾಗಿ ಜಿನುಗಿ ಹರಿಯುತ್ತಿರುವ ಸೋಮರಸಪ್ರವಾಹವು ಎಂದರ್ಥವು.

**ರಕ್ಷಃ**—ಪಿಶಾಚಿಗಳು, ಭೂತಗಳು ಮೊದಲಾದ ಭೂತಗಣಗಳು. ಇಲ್ಲಿ ರಾಕ್ಷಸರಿಗೂ ರಕ್ಷಃ ಎಂಬುವರಿಗೂ ಕೆಲವು ಭಾಗದಲ್ಲಿ ವ್ಯತ್ಯಾಸವಿದೆ. ರಾಕ್ಷಸರೆಂಬುವರು ನಮ್ಮಂತೆ ಮನುಷ್ಯರ ಅಥವಾ ಇತರ ಪ್ರಾಣಿಗಳ ಆಕಾರದಲ್ಲಿ ಇರುವವರು. ಇವರಿಗೆ ನಮ್ಮಂತೆಯೇ ಕೈಕಾಲುಗಳೂ ಇತರ ವ್ಯವಹಾರಗಳೂ ಇವೆ. ಆದರೆ ಇವರ ಸ್ವಭಾವ ಮಾತ್ರ ದುಷ್ಟವಾದುದು. ಆದರೆ ರಕ್ಷಃ ಎಂಬ ಗಣದವರಿಗೆ ಕಣ್ಣಿಗೆ ಕಾಣಿಸುವ ಆಕಾರಾದಿಗಳು ಇರಬೇಕೆಂಬ ನಿರ್ಬಂಧವಿಲ್ಲ. ಇವರು ಪಿಶಾಚಿಗಳು, ಭೂತಗಳು, ಯಾತುಧಾನರೆಂಬುವರು ಮನುಷ್ಯರ ಕಣ್ಣಿಗೆ ಕಾಣಿಸದಂತೆ ಸೂಕ್ಷ್ಮಶರೀರಗಳಾಗಿದ್ದು ಮನುಷ್ಯರಿಗೂ ಯಜ್ಞಾದಿ ಸತ್ಕರ್ಮಗಳಿಗೂ ತೊಂದರೆಯನ್ನುಂಟುಮಾಡುವುದೇ ಇವರ ಸ್ವಭಾವ. ಯಜ್ಞಾದಿಗಳಲ್ಲಿ ಇವರ ಬಾಧೆಯನ್ನು ತಡೆಯುವುದಕ್ಕಾಗಿಯೂ ಇವರನ್ನು ದೂರ ಓಡಿಸುವುದಕ್ಕಾಗಿಯೂ **ರಕ್ಷೋಘ್ನ**ವೆಂಬ ಕೆಲವು ವಿಶೇಷ ಸೂಕ್ತಗಳನ್ನು ಪಠಿಸುವ ರೂಢಿಇದೆ. ಈ ರಕ್ಷೋಘ್ನ ಸೂಕ್ತಗಳಿಗೆ ಸಾಧಾರಣವಾಗಿ **ರಕ್ಷೋಹಾಗ್ನಿಃ** ಎಂಬ ಅಗ್ನಿಯ ರೂಪವಿಶೇಷವೇ ದೇವತೆಯು. ಸೋಮದೇವತೆಯನ್ನು ಕೆಲವು ಕಡೆ **ರಕ್ಷೋಹಾ ವಿಶ್ವಚರ್ಷಣಿಃ** (೯–೧–೨) ಈ ರಕ್ಷೋಗಣಗಳನ್ನು ಸಂಹರಿಸಬೇಕೆಂಬ ಪ್ರಾರ್ಥನೆಗಳಿವೆ. ಈ ಗಣಗಳ ವಿಷಯವಾಗಿ ಕೆಲವು ವಿವರ ಗಳನ್ನು ಕೊಡುತ್ತೇವೆ.

ಭೂಮಿಯಲ್ಲಿರುವ ಪಿಶಾಚಿಗಳು ಅಥವಾ ಭೂತಗಳು ಮನುಷ್ಯರ ದ್ವೇಷಿಗಳು. ಇವರನ್ನು ಹೇಳುವ ಜಾತಿವಾಚಕವು ರಕ್ಷಃ ಎಂಬುದು. ಐವತ್ತಕ್ಕಿಂತ ಹೆಚ್ಚುಸಲ ಏಕವಚನ ಮತ್ತು ಬಹುವಚನಗಳಲ್ಲಿ ಬಂದಿದೆ ; ಸಾಧಾರಣವಾಗಿ ಯಾವುದಾದರೊಂದು ದೇವತೆಯೊಡನೆ, ರಾಕ್ಷಸನನ್ನು ಧ್ವಂಸಮಾಡೆಂದು ಪ್ರಾರ್ಥನಾರೂಪವಾಗಿ, ಅಥವಾ ರಾಕ್ಷಸನನ್ನು ವಧಿಸಿದೆ ಎಂದು ಸ್ತುತಿರೂಪವಾಗಿ ಬರುತ್ತದೆ. ೭–೧೦೪ ಮತ್ತು ೧೦–೮೭ ನೆಯ ಸೂಕ್ತಗಳಲ್ಲಿ ಇವರ ಪ್ರಸ್ತಾಪವೇ ಇದೆ ಇಲ್ಲಿ ರಕ್ಷಸಃ, ಯಾತು, ಯಾತುಧಾನ ಮೊದಲಾದ ಪದಗಳು ಇವರನ್ನು ಸೂಚಿಸುತ್ತವೆ. ರಕ್ಷಸಃ ಎಂಬುದು ದುರ್ದೇವತೆಗಳು, ಪಿಶಾಚಿಗಳು ಎಲ್ಲಕ್ಕೂ ಹೆಸರಾದುದರಿಂದ, ಅದನ್ನು ಜಾತಿವಾಚಕವೆಂತಲೂ, ಯಾತು ಎಂಬುದನ್ನು ಉಪಜಾತಿವಾಚಕವೆಂತಲೂ ತಿಳಿಯಬಹುದು

ಈ ಪಿಶಾಚಿಗಳು ಅಥವಾ ಭೂತಗಳಿಗೆ, ನಾಯಿ, ರಣಹದ್ದು, ಗೂಬೆ ಮತ್ತು ಇತರ ಪಕ್ಷಿಗಳ ರೂಪಗಳು (೭–೧೦೪–೨೦ ರಿಂದ ೨೨) ಇವೆ. ಪಕ್ಷಿರೂಪವಾಗಿ, ರಾತ್ರಿಯವೇಳೆ ಹಾರಾಡುತ್ತಾರೆ (೭-೧೦೪-೧೮). ಭ್ರಾತೃ, ಭರ್ತೃ ಅಥವಾ ಪ್ರಿಯನ ರೂಪವನ್ನು ಧರಿಸಿ, ಸ್ತ್ರೀಯರನ್ನು ಸಮೀಪಿಸಿ, ಅವರ ಮಕ್ಕಳನ್ನು ನಾಶಪಡಿಸಲು ಇಚ್ಛಿಸುತ್ತಾರೆ (೧೦-೧೬೨-೫). ನಾಯಿ ಅಥವಾ ಕಪಿರೂಪವಾಗಿ, ಹೆಂಗಸರಮೇಲೆ ಬೀಳಲು ಕಾದಿರುತ್ತಾರೆ (ಅ. ವೇ. ೪-೩೭ ೧೧). ಆದುದರಿಂದ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ಇವರಿಂದ ತೊಂದರೆಯುಂಟು (ಅ. ವೇ. ೮-೬). ವಿವಾಹಕಾಲದಲ್ಲಿ, ವಧುವಿನ ಸುತ್ತಲೂ ಓಡಾಡುತ್ತದೆ. ಇವರ ಕಣ್ಣುಗಳನ್ನು ಚುಚ್ಚಲೆಂದು ಸಣ್ಣ ಬಾಣಗಳನ್ನು ಅಂತರಿಕ್ಷದಲ್ಲಿ ಬಿಡು ತ್ತಾರೆ (ಮಾ. ಗೃ. ಸೂ. ೧-೧೦). ಅಥರ್ವವೇದದಲ್ಲಿಯೇ ಇವರ ರೂಪ ಮೊದಲಾದವುಗಳ ವರ್ಣನೆಯಿರುವುದು. ಅವರು ವಿಶೇಷವಾಗಿ ಮನುಷ್ಯರಂತೆ ರೂಪವನ್ನು ಧರಿಸಿರುತ್ತಾರೆ. ಅವರ ಶಿರಸ್ಸು, ಕಣ್ಣು, ಹೃದಯ ಮೊದಲಾದ ಅಂಗಾಂಗಗಳ ಪ್ರಸಕ್ತಿಯಿದೆ ; ಆದರೆ ಏನಾದರೊಂದು ವೈರೂಪ್ಯವಿದ್ದೇ ಇರುತ್ತದೆ. ಮೂರು ತಲೆ, ಎರಡು ಬಾಯಿ, ನಾಲ್ಕು ಕಣ್ಣು, ಐದು ಪಾದಗಳು, ಬೆರಳುಗಳಿಲ್ಲ, ಪಾದಗಳು ಹಿಂದುಮುಂದಾಗಿರುವುದು ಅಥವಾ ಕೈಮೇಲೆ ಕೊಂಬು ಗಳು, ಇತ್ಯಾದಿ (ಅ. ವೇ. ೮–೬ ; ಹಿ. ಗೃ. ಸೂ. ೨-೩-೭). ನೀಲಿ, ಹಳದಿ ಅಥವಾ ಹಸರು ಪಿಶಾಚಿಗಳೂ ಉಕ್ತ

ರಾಗಿದಾರೆ (ಅ. ವೆ, ೧೯—೨೨—೪, ೫). ಅವರಲ್ಲಿಯೂ ಗಂಡುಹೆಣ್ಣುಗಳೂ, ಸಂಸಾರಗಳೂ, ರಾಜರೂ (ಅ. ವೇ. ೫ ೨೨-೧೨ ; ಹಿ. ಗೃ. ಸೂ. ೨೩-೭) ಉಂಟು ; ಅವರೂ ಮರಣಶೀಲರು (ಅ. ವೇ. ೬-೩೨-೨ ; ಇತ್ಯಾದಿ).

ಯಾತುಧಾನರು ಮನುಷ್ಯರ ಮತ್ತು ಅಶ್ವಗಳ ಮಾಂಸವನ್ನು ತಿನ್ನುತ್ತಾರೆ ಮತ್ತು ಗೋಕ್ಷೀರವನ್ನು ಪಾನ ಮಾಡುತ್ತಾರೆ (೧೦—೮೭—೧೬, ೧೭) ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿಕೊಳ್ಳಲು ರಾಕ್ಷಸರು ಮನುಷ್ಯರನ್ನು ಆಕ್ರಮಿಸುತ್ತಾರೆ; ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶಮಾಡುವ ಮೂಲಕವೇ. ಆರಾಧಕರನ್ನು ಪ್ರವೇಶಿಸದಂತೆ ರಾಕ್ಷಸರನ್ನು ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆ ಇದೆ. (೮—೪೮—೨೦) ಅಲ್ಲಿಂದಿಲ್ಲಿ ಹಾರಾಡುತ್ತಿರುವ ರೋಗಾಭಿಮಾನಿಯಾದ ಪಿಶಾಚಿಯೊಂದು ಮನುಷ್ಯರನ್ನು ಪ್ರವೇಶಿಸುತ್ತದೆ (ಅ ವೇ. ೭—೭೬—೪) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ ನಮ್ಮನ್ನು ಪ್ರವೇಶಿಸುತ್ತವೆ (ಅ. ವೇ. ೫—೨೯—೬ ರಿಂದ ೮); ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು (ಅ. ವೇ. ೮—೬—೩) ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತುತಿಂದು, ರೋಗವನ್ನುಂಟುಮಾಡುತ್ತಾರೆ (ಅ ವೇ. ೫—೨೯—೫,೧೦) ಹುಚ್ಚುತನವನ್ನುಂಟುಮಾಡುತ್ತಾರೆ ಮತ್ತು ವಾಕ್ಪಟುತ್ವವನ್ನು ನಾಶಗೊಳಿಸುತ್ತಾರೆ (೬—೧೧೧—೩ ; ಹಿ. ಗೃ. ಸೂ. ೧—೧೫—೫) ಮನುಷ್ಯರ ವಾಸಗೃಹಗಳನ್ನು ಆಕ್ರಮಿಸುತ್ತಾರೆ (ಕೌ. ಸೂ. ೧೩೫—೯) ಕೆಲವು ಭೂತಗಳು ಸಾಯಂಕಾಲದ ವೇಳೆಯಲ್ಲಿ ಮನೆಗಳ ಸುತ್ತಲೂ ಕುಣಿಯುತ್ತಾ, ಕತ್ತೆಗಳಂತೆ ಅರಚುತ್ತಾ ತಿರುಗುತ್ತಿರುತ್ತವೆ ಅಥವಾ ಕಾಡುಗಳಲ್ಲಿ ತಿರುಗುತ್ತಿರುತ್ತವೆ ಅಥವಾ ಗಟ್ಟಿಯಾಗಿ ನಗುತ್ತಾ ಇಲ್ಲವೇ ಕಪಾಲಗಳಿಂದ ಪಾನಮಾಡುತ್ತಾ ಇರುತ್ತವೆ (ಅ. ವೇ. ೮—೬—೧೦—೧೧—೧೪ : ಹಿ. ಗೃ. ಸೂ. ೨—೩—೩).

ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ (೭—೧೦೪—೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ. ಅಲ್ಲಿ ಉದಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ (ತೈ. ಸಂ. ೨—೬—೬—೩). ಬೀಳುತ್ತಿರುವ ಉಲ್ಕೆಯು ಭೂತದ ರೂಪವೆಂದು ಭಾವನೆ (ಕೌ ಸೂ. ೧೨೭—೯) ಅಮಾವಾಸ್ಯೆಯ ಕಗ್ಗತ್ತಲೆಯು ಪ್ರೇತಗಳ ಸಂಚರಕ್ಕೆ ಯೋಗ್ಯವಾಗಿರುವಂತೆ ಭೂತಗಳಿಗೂ ಅದೇ ಅನುಕೂಲ (ಅ. ವೇ. ೧—೧೬—೧ ; ೪—೩೬—೩)

ಯಜ್ಞಗಳಿಗೆ ಇವರಿಂದ ಇರುವಷ್ಟು ಆಪತ್ತು ಯಾವುದಕ್ಕೂ ಇಲ್ಲ. ದೇವಯೋಗ್ಯವಾದ ಯಜ್ಞಗಳಲ್ಲಿ ಪಿಶಾಚಿಗಳು, ಲೋಪದೋಷಗಳನ್ನುಂಟುಮಾಡುತ್ತವೆ. ಮತ್ತು ಯಾತುಗಳು ಅರ್ಪಿತವಾದ ಆಹುತಿಗಳನ್ನು ಚೆಲ್ಲಾಪಿಲ್ಲಿಯಾಗಿ ಎರಚುತ್ತವೆ. (೭—೧೦೪—೧೮, ೨೧) ಸ್ತೋತ್ರವನ್ನು ಕಂಡರೆ ಅವರಿಗಾಗದು (೧೦—೧೮೨—೩) ಯಜ್ಞಕ್ಕೆ ಬಾಧೆಯಾಗದಂತೆ ಭೂತಾದಿಗಳನ್ನು ದಹಿಸಿಬಿಡೆಂದು ಅಗ್ನಿಗೆ ಪ್ರಾರ್ಥನೆ. (೧—೭೬—೩) ಯಾತುಧಾನರ ಮತ್ತು ರಕ್ಷೋಗಣಗಳ ಮಾಯೆಯಿಂದ ಶತ್ರುವಿನ ಯಾಗವನ್ನು ಊರ್ಜಿತವಾಗದಂತೆ ಮಾಡುವ ಮಂತ್ರವೊಂದಿದೆ. (ಅ. ವೇ. ೭—೭೦—೨) ಮೃತರಿಗೆ ಆಹುತಿಕೊಡುವ ಅನ್ನೋದಕಗಳಿಗೆ ಪ್ರೇತರೂಪದಲ್ಲಿ ಅಡ್ಡಿಯಾಗಿ ಬರುತ್ತಾರೆ. (ಅ. ವೇ. ೧೮—೨—೨೮); ವಾ. ಸಂ. ೨—೨೯ನ್ನು ಹೋಲಿಸಿ). ಪುರಾಣಗಳಲ್ಲಿ ಈ ರಕ್ಷೋಗಣಗಳು (ರಾಕ್ಷಸರೆಂತಲೇ—ವ್ಯವಹಾರ) ಯೋಗಿಗಳಿಗೆ ತೊಂದರೆಮಾಡುತ್ತಾರೆ ಎಂಬುದು ಸಾಮಾನ್ಯವಾಗಿದೆ.

ಕತ್ತಲನ್ನು ಹೋಗಲಾಡಿಸುವವನೂ, ಯಾಗಕ್ಕೆ ಯಜಮಾನನೂ ಆದ ಅಗ್ನಿಗೂ ಇವರಿಗೂ ಬದ್ಧದ್ವೇಷ. ಇವರನ್ನು ದಹಿಸು, ಓಡಿಸು ಅಥವಾ ನಾಶಮಾಡು ಎಂದು ಅಗ್ನಿಯನ್ನೇ ಪ್ರಾರ್ಥಿಸುವುದು. (೧೦-೮೭—೩—೬ ಇತ್ಯಾದಿ) ಈ ಕಾರ್ಯದಿಂದಲೇ ಅಗ್ನಿ ಮತ್ತು ಇತರ ಕೆಲವು ದೇವತೆಗಳಿಗೆ "ರಕ್ಷೋಹಾ" ಎಂಬ ಹೆಸರು ಬಂದಿರುವುದು

ಈ ಭೂತಗಳು ಸ್ವಭಾವತಃ ಹಾನಿಕರಗಳು ಮಾತ್ರವಲ್ಲ ; ಇತರರಿಂದ ಪ್ರೇರಿತರಾಗಿಯೂ ಹಾನಿಯುಂಟು ಮಾಡುವುದುಂಟು. ರಕ್ಷೋಯುಜಃ (ರಾಕ್ಷಸರನ್ನು ಪ್ರೇರಿಸುವವರು) ಎಂಬುದು ಕಂಡುಬರುತ್ತದೆ. (೬-೬೨-೯) ಮತ್ತು ಮಂತ್ರಗಾರರ ಭೂತಗಳು ಮತ್ತು ಯಾತುಗಳು ಅಲ್ಲಲ್ಲಿ ಇವೆ (೭-೧೦೪-೨೩ ; ೮-೬೦-೨೦) ಶತ್ರುವಿನಿಂದ ಪ್ರೇರಿತವಾದ ಭೂತದ ಕಾಟಕ್ಕೆ ಒಳಗಾದವನು, ಯವಿಷ್ಠಾಗ್ನಿಗೆ ಹೋಮಮಾಡಿ ಅವುಗಳನ್ನು ಓಡಿಸಬಹುದು. (ತೈ. ಸಂ. ೨-೨-೩-೨) ಮತ್ತು ಪ್ರೇರಿಸುವವನ್ನೇ ನುಂಗಿಬಿಡು ಎಂದು ಆ ಭೂತಗಳಿಗೇ ಅಪ್ಪಣೆ ಇದೆ. (ಅ.ವೇ.೨-೨-೪)

ಭೂತಗಳು ಎಂಬರ್ಥದಲ್ಲಿ ರಕ್ಷಃ ಎಂಬ ಪದವು ಪುಲ್ಲಿಂಗ ಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ನಪುಂಸಕದಲ್ಲಿ ಅಪಾಯ ಎಂತಲೂ ಅರ್ಥವುಂಟು. ರಕ್ಷ್ (ತೊಂದರೆ ಮಾಡು) ಎಂಬ ಧಾತುವಿನಿಂದ ರಕ್ಷಃ ಎಂದಾಗಿರಬಹುದು (ಋಕ್ಷಾ ಅಪಾಯಕರ); ಆದರೆ ಈ ಪ್ರಯೋಗವು ಬಹಳ ಅಪರೂಪ. ಸಾಧಾರಣವಾದ ರಕ್ಷ್— ಕಾಪಾಡು ಎಂಬುದರಿಂದಲೂ ಆಗಿರಬಹುದು. ಈ ಸಂದರ್ಭದಲ್ಲಿ ರಕ್ಷಃ ಎಂದರೆ ತಪ್ಪಿಸಿಕೊಳ್ಳಬೇಕಾದುದು ಎಂದರ್ಥವಾಗುತ್ತದೆ.

**ವೃಜನಸ್ಯ ರಾಜಾ—ಬಲಸ್ಯ ಈಶಿತಾ ಸೋಮಃ** ಬಲಕ್ಕೆ ಸ್ವಾಮಿಯಾದ ಸೋಮನು. ಸೋಮಪಾನ ಮಾಡುವುದರಿಂದ ದೇಹದಲ್ಲಿ ಶಕ್ತಿಯೂ ಉತ್ಸಾಹವೂ ವೃದ್ಧಿಯಾಗುವುದರಿಂದ ಸೋಮನು ಬಲಕ್ಕೆ ಸ್ವಾಮಿಯೆಂದು ಇಲ್ಲಿ ಹೇಳಿದೆ.

|| ಸಂಹಿತಾಪಾಠಃ ||

ಅಧ ಧಾರಯಾ ಮಧ್ವಾ ಪೃಚಾನಸ್ತಿರೋ ರೋಮ ಪವತೇ ಅದ್ರಿದುಗ್ಧಃ ।
ಇಂದುರಿಂದ್ರಸ್ಯ ಸಖ್ಯಂ ಜುಷಾಣೋ ದೇವೋ ದೇವಸ್ಯ ಮತ್ಸರೋ
ಮದಾಯ ॥ ೧೧ ॥

|| ಪದಪಾಠಃ ||

ಅಧ । ಧಾರಯಾ । ಮಧ್ವಾ । ಪೃಚಾನಃ । ತಿರಃ । ರೋಮ । ಪವತೇ । ಅದ್ರಿಽದುಗ್ಧಃ ।
ಇಂದುಃ । ಇಂದ್ರಸ್ಯ । ಸಖ್ಯಂ । ಜುಷಾಣಃ । ದೇವಃ । ದೇವಸ್ಯ । ಮತ್ಸರಃ । ಮದಾಯ ॥ ೧೧ ॥

|| ಸಾಯಣಭಾಷ್ಯಂ ||

ಅಧಾಥಾನಂತರಮದ್ರಿದುಗ್ಧೋ ಗ್ರಾವಭಿರ್ದುಗ್ಧೋಽಭಿಷುತಃ ಸೋಮೋ ಮಧ್ವಾ ಮದಕಾರಿಣ್ಯಾ ಧಾರಯಾ ಪೃಚಾನೋ ದೇವಾನ್ ಸಂಪರ್ಚಯನ್ ಸಂಯೋಜಯನ್ ರೋಮಾವಿರೋಮಭಿಃ ಕೃತಂ ಪವಿತ್ರಂ ತಿರಸ್ತಿರಸ್ಕೃತ್ಯ ವ್ಯವಧಾಯಕಂ ಕೃತ್ವಾ ಪವತೇ । ಕಲಶೇಷು ಕ್ಷರತಿ । ಕಿಂಚೇಂದ್ರಸ್ಯ ಸಖ್ಯಂ ಸಖಿಭಾವಂ ಕರ್ಮ ವಾ ಜುಷಾಣಃ ಸೇವಮಾನೋ ದೇವೋ ದ್ಯೋತಮಾನೋ ಮತ್ಸರೋ ಮದಕರ ಇಂದುಃ ಸೋಮೋ ದೇವಸ್ಯೇಂದ್ರಸ್ಯ ಮದಾಯ ಮದಾರ್ಥಂ ಪವತೇ । ಕ್ಷರತಿ ॥

॥ ಪ್ರತಿಪದಾರ್ಥ ॥

**ಅಧ**— ಅನಂತರ । **ಅದ್ರಿದುಗ್ಧಃ**— ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟ ಸೋಮನು । **ಮಧ್ವಾ**— ಹರ್ಷಕಾರಕವಾದ । **ಧಾರಯಾ**— ಧಾರೆಯಿಂದ । **ಪೃಚಾನಃ**— ದೇವತೆಗಳನ್ನು ಸೇರುವ ನಿಮಿತ್ತವಾಗಿ । **ರೋಮ**— ದಶಾಪವಿತ್ರದ ನೂಲನ್ನು । **ತಿರಃ**— ದಾಟಿ । **ಪವತೇ**— ಪ್ರವಹಿಸುತ್ತಾನೆ । **ಇಂದ್ರಸ್ಯ**— ಇಂದ್ರನ । **ಸಖ್ಯಂ**— ಮಿತ್ರತ್ವವನ್ನು । **ಜುಷಾಣಃ**— ಸೇವಿಸುತ್ತ । **ದೇವಃ**— ಪ್ರಕಾಶಮಾನನೂ । **ಮತ್ಸರಃ**— ಹರ್ಷಕಾರಕನೂ ಆದ । **ಇಂದುಃ**— ಸೋಮನು । **ದೇವಸ್ಯ**— ಇಂದ್ರನ । **ಮದಾಯ**— ಹರ್ಷಕ್ಕಾಗಿ ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟ ಸೋಮನು ಹರ್ಷಕಾರಕವಾದ ಧಾರೆಯಿಂದ ದೇವತೆಗಳನ್ನು ಸೇರುವ ನಿಮಿತ್ತವಾಗಿ ದಶಾಪವಿತ್ರದ ನೂಲನ್ನು ದಾಟಿ ಪ್ರವಹಿಸುತ್ತಾನೆ. ಇಂದ್ರನ ಮಿತ್ರತ್ವವನ್ನು ಸೇವಿಸುತ್ತ, (ಇಚ್ಛಿಸುತ್ತ) ಪ್ರಕಾಶಮಾನನೂ, ಹರ್ಷಕಾರಕನೂ ಆದ ಸೋಮನು ಇಂದ್ರನ ಹರ್ಷಕ್ಕಾಗಿ ಪ್ರವಹಿಸುತ್ತಾನೆ.

## English Translation.

Milked forth by the stones the Soma flows through the (sheep's hair coming into contact (with the gods) with its sweet-flavoured stream; the divine exhilarating Indu desiring the friendship of Indra flows for the exhilaration of the deity.

॥ ವಿಶೇಷವಿಷಯಗಳು ॥

**ಅದ್ರಿದುಗ್ಧಃ**— ಅದ್ರಿ ಎಂದರೆ ಸೋಮಲತೆಗಳನ್ನು ಜಜ್ಜುವ ಕಲ್ಲು. ಈ ಕಲ್ಲುಗಳಿಂದ ಸೋಮಲತೆಗಳನ್ನು ಜಜ್ಜಿ ರಸವನ್ನು ಹೊರಗೆಬರುವಂತೆ ಮಾಡುವುದಕ್ಕೆ **ಅದ್ರಿದುಗ್ಧಃ** ಎಂದು ವಿವರಿಸಿದೆ.

**ತಿರಃ ರೋಮ ಪವತೇ**— ಕುರಿಯ ಅಥವಾ ಆಡಿನ ರೋಮಗಳಿಂದ ಎಂದರೆ ಉಣ್ಣೆಯಿಂದ ನಿರ್ಮಿತವಾದ ಜಾಲರಿಯನ್ನು ದಾಟಿಕೊಂಡು ಸೋಮರಸವು ಪಾತ್ರೆಯೊಳಕ್ಕೆ ಬೀಳುತ್ತದೆ.

**ಇಂದ್ರಸ್ಯ ಸಖ್ಯಂ ಜುಷಾಣಃ**— ಇಂದ್ರನ ಸ್ನೇಹವನ್ನು ಬಯಸಿ ಅವನ ತೃಪ್ತ್ಯರ್ಥವಾಗಿ; ಸೋಮಪಾನವು ಇಂದ್ರನಿಗೆ ಪ್ರೀತಿಕರವಾದುದರಿಂದ ಸೋಮಕ್ಕೂ ಇಂದ್ರನಿಗೂ ಸಖ್ಯವೆಂದು ಹೇಳಿದೆ.

॥ ಸಂಹಿತಾಪಾಠಃ ॥

ಅಭಿ ಪ್ರಿಯಾಣಿ ಪವತೇ ಪುನಾನೋ ದೇವೋ ದೇವಾನ್ತ್ಸ್ವೇನ ರಸೇನ ಪೃಂಚನ್ ।
ಇಂದುರ್ಧರ್ಮಾಣ್ಯೃತುಥಾ ವಸಾನೋ ದಶ ಕ್ಷಿಪೋ ಅವ್ಯತ ಸಾನೋ ಅವ್ಯೇ ॥ ೧೨ ॥

|| ಪದಪಾಠಃ ||

ಅಭಿ । ಪ್ರಿಯಾಣಿ । ಪವತೇ । ಪುನಾನಃ । ದೇವಃ । ದೇವಾನ್ । ಸ್ವೇನ । ರಸೇನ । ಪೃಂಚನ್ ।

ಇಂದುಃ । ಧರ್ಮಾಣಿ । ಋತುಽಥಾ । ವಸಾನಃ । ದಶ । ಕ್ಷಿಪಃ । ಅವ್ಯತ । ಸಾನೌ । ಅವ್ಯೇ ॥ ೧೨ ॥

|| ಸಾಯಣಭಾಷ್ಯಂ ||

ಪ್ರಿಯಾಣಿ ಪ್ರೀಣಯಿತೃಣಿ ಧರ್ಮಾಣಿ ಧಾರಕಾಣಿ ತೇಜಾಂಸ್ಯೃತುಥಾ ಕಾಲೇ ವಸಾನ ಆಚ್ಛಾದಯನ್ನಿಂದುಃ ಸೋಮಃ ಪುನಾನಃ ಪೂಯಮಾನಃ ಸನ್ನಭಿ ಪವತೇ । ಕಲಶಾನಭಿಲಕ್ಷ್ಯ ಕ್ಷರತಿ । ಕೀದೃಶಃ । ದೇವಃ ಸಂಕ್ರೀಡನಶೀಲಃ ಸ್ವೇನಾತ್ಮೀಯೇನ ರಸೇನ ದೇವಾನಿಂದ್ರಾದೀನ್ ಪೃಂಚನ್ ಸಂಪರ್ಚಯನ್ ಸಂಯೋಜಯನ್ । ತಮಿಮಂ ದಶ ದಶಸಂಖ್ಯಾಕಾಃ ಕ್ಷಿಪಃ । ಅಂಗುಲಿನಾಮೈತತ್ । ಕರ್ಮಾರ್ಥಂ ಪ್ರೇರ್ಯಂತ ಇತಿ । ತತ್ಸಂಖ್ಯಾಕಾ ಅಂಗುಲಯಃ ಸಾನೌ ಸಮುಚ್ಛ್ರಿತೇಽವ್ಯೇಽವಿಭವೇ ಪವಿತ್ರೇಽವ್ಯತ । ಗಮಯಂತಿ । ಯದ್ವಾ । ತತ್ರ ಪವಿತ್ರೇ ಪೂಯಮಾನಂ ಸೋಮಮವ್ಯತ । ಗಚ್ಛಂತಿ ॥ ವೀ ಗತ್ಯಾದಿಷು । ಲಙಿ ವ್ಯತ್ಯಯೇನಾತ್ಮನೇಪದಂ ॥

|| ಪ್ರತಿಪದಾರ್ಥ ||

**ಪ್ರಿಯಾಣಿ**—ಪ್ರೀತಿಕಾರಕವೂ । **ಧರ್ಮಾಣಿ**—ಧಾರಕವೂ ಆದ ತೇಜಸ್ಸುಗಳನ್ನು । **ಋತುಥಾ**—ಆಯಾ ಕಾಲಾನುಗುಣವಾಗಿ । **ವಸಾನಃ**—ಹೊದೆಯುವ । **ಇಂದುಃ**—ಸೋಮನು । **ಪುನಾನಃ**—ಶುದ್ಧಿಯನ್ನು ಹೊಂದಿ । **ದೇವಃ**—ಪ್ರಕಾಶಮಾನನಾಗಿಯೂ । **ಸ್ವೇನ**—ತನ್ನ । **ರಸೇನ**—ರಸದಿಂದ । **ದೇವಾನ್**—ದೇವತೆಗಳನ್ನು । **ಪೃಂಚನ್**—ಸೇರಿ ಹರ್ಷಪಡಿಸುತ್ತಲೂ । **ಅಭಿ ಪವತೇ**—ಪ್ರಹಹಿಸುತ್ತಾನೆ । **ದಶ ಕ್ಷಿಪಃ**—ಹತ್ತು ಬೆರಳುಗಳೂ । **ಸಾನೌ**—ಎತ್ತರವಾದ ಪ್ರದೇಶದಲ್ಲಿರುವ । **ಅವ್ಯೇ**—ದಶಾಪವಿತ್ರದಲ್ಲಿ । **ಅವ್ಯತ**—ಸೋಮನು ಪ್ರವೇಶಿಸುವಂತೆ ಮಾಡುತ್ತವೆ.

|| ಭಾವಾರ್ಥ ||

ಪ್ರೀತಿಕಾರಕವೂ, ಧಾರಕವೂ ಆದ ತೇಜಸ್ಸುಗಳನ್ನು ಆಯಾ ಕಾಲಾನುಗುಣವಾಗಿ ಹೊಂದಿರುವ ಸೋಮನು ಶುದ್ಧಿಯನ್ನು ಹೊಂದಿ ಪ್ರಕಾಶಮಾನನಾಗಿಯೂ ತನ್ನ ರಸವನ್ನು ದೇವತೆಗಳೊಂದಿಗೆ ಸೇರಿಸಿ ಹರ್ಷಪಡಿಸುತ್ತಲೂ ಪ್ರವಹಿಸುತ್ತಾನೆ. ಹತ್ತು ಬೆರಳುಗಳೂ, ಎತ್ತರವಾದ ಪ್ರದೇಶದಲ್ಲಿರುವ ದಶಾಪವಿತ್ರದಲ್ಲಿ ಸೋಮನು ಪ್ರವೇಶಿಸುವಂತೆ ಮಾಡುತ್ತವೆ.

## English Translation.

Clothed in pleasant radiance suited to the season, the sportive Indu flows purified, reaching the gods with its juice ; the ten fingers guide it to the elevated fleece.

॥ ವಿಶೇಷವಿಷಯಗಳು ॥

**ಪ್ರಿಯಾಣಿ ಧರ್ಮಾಣಿ ಪ್ರೀಣಯಿತೃಣಿ ಧಾರಕಾಣಿ ತೇಜಾಂಸಿ** । ಹರ್ಷವನ್ನುಂಟುಮಾಡುವ ತೇಜಸ್ಸುಗಳಿಂದ ಕೂಡಿ; ಅಥವಾ ಇಲ್ಲಿ **ಧರ್ಮಾಣಿ** ಎಂದರೆ **ಧಾರಕಾಣಿ** ಎಂದರ್ಥಮಾಡುವುದರಿಂದ ಹರ್ಷವನ್ನುಂಟುಮಾಡುವ ಕ್ಷೀರಾದಿ ಆಶ್ರಯಣದ್ರವ್ಯಗಳೊಡನೆ ಕೂಡಿ ಎಂದೂ ಅರ್ಥಮಾಡಬಹುದು

**ಋತುಥಾ–ಕಾಲೇ ಕಾಲೇ** । ಆಯಾ ಕಾಲಗಳಲ್ಲಿ ಎಂದರೆ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯ ಸವನ ಎಂಬ ಕಾಲತ್ರಯಗಳಲ್ಲಿ. ಇಂತಹ ಕಾಲಗಳಲ್ಲಿ **ಧರ್ಮಾಣಿ ವಸಾನಃ** ಎಂದರೆ ಧಾರಕ ಅಥವಾ ಪೋಷಕವಾದ ಕ್ಷೀರಾದಿ ಆಶಿರದ್ರವ್ಯಗಳಿಂದ ಕೂಡಿ; ಎಂದರೆ ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಸೋಮರಸವನ್ನು ಹಾಗೆಯೇ ಪಾನಮಾಡುವರು. ತೃತೀಯಸವನದಲ್ಲಿ ಸೋಮರಸದಲ್ಲಿ ಸಾರವು ಕಡಮೆಯಾಗಿರುವುರಿಂದ ಅದಕ್ಕೆ ಹಾಲು, ಮೊಸರು ಹಿಟ್ಟು ಎಂಬ ಯಾವುದಾದರೂ ಆಶಿರದ್ರವ್ಯವನ್ನು ಮಿಶ್ರಮಾಡುವರು. ಆದ್ದರಿಂದ ಈ ವಿಧವಾದ ಪುಷ್ಟಿಪ್ರದವಾದ ಕ್ಷೀರಾದಿದ್ರವ್ಯಮಿಶ್ರಿತವಾದ ರಸವನ್ನು ಸೂಚಿಸುವುದಕ್ಕಾಗಿ **ಧರ್ಮಾಣಿ ಋತುಥಾ ವಸಾನಃ** ಎಂದು ಇಲ್ಲಿ ಹೇಳಲಾಗಿದೆ

**ದಶ ಕ್ಷಿಪಃ ಅವ್ಯೇ ಸಾನೌ ಅವ್ಯತೆ —ದಶಕ್ಷಿಪಃ** ಎಂದರೆ ಹತ್ತು ಬೆರಳುಗಳು. ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗಲೂ, ಹಿಂಡಿ ರಸವನ್ನು ತೆಗೆಯುವಾಗಲೂ ಋತ್ವಿಗ್ಜನರ ಹತ್ತುಬೆರಳಗಳೂ ಉಪಯೋಗಿಸಲ್ಪಡುವುದರಿಂದ ಇಲ್ಲಿ ಹತ್ತು ಬೆರಳುಗಳು ಸೋಮರಸವನ್ನು ಎತ್ತರಪ್ರದೇಶಲ್ಲಿಟ್ಟಿರುವ ಕುರಿಯ ತುಬಟದಿಂದ ಆಚ್ಛಾದಿತವಾದ ಶೋಧನ ಪಾತ್ರೆಯಲ್ಲಿ ಹಿಂಡಲಿ ಎಂದು ವಿವರಿಸಿದೆ.

॥ ಸಂಹಿತಾಪಾಠಃ ॥

ವೃಷಾ ಶೋಣೋ ಅಭಿಕನಿಕ್ರದದ್ಗಾ ನದಯನ್ನೇತಿ ಪೃಥಿವೀಮುತ ದ್ಯಾಂ ।
ಇಂದ್ರಸ್ಯೇವ ವಗ್ನುರಾ ಶೃಣ್ವ ಆಜೌ ಪ್ರಚೇತಯನ್ನರ್ಷತಿ ವಾಚಮೇಮಾಂ ॥ ೧೩ ॥

॥ ಪದಪಾಠಃ ॥

ವೃಷಾ । ಶೋಣಃ । ಅಭಿऽಕನಿಕ್ರದತ್ । ಗಾಃ । ನದಯನ್ । ಏತಿ । ಪೃಥಿವೀಂ । ಉತ । ದ್ಯಾಂ ।
ಇಂದ್ರಸ್ಯऽಇವ । ವಗ್ನುಃ । ಆ । ಶೃಣ್ವೇ । ಆಜೌ । ಪ್ರऽಚೇತಯನ್ । ಅರ್ಷತಿ । ವಾಚಂ । ಆ । ಇಮಾಂ ॥ ೧೩ ॥

॥ ಸಾಯಣಭಾಷ್ಯಂ ॥

ಶೋಣಃ ಶೋಣವರ್ಣೋ ವೃಷಾ ಕಶ್ಚಿದ್ವೃಷಭೋ ಗಾಃ ಪಶೂನಭಿಕನಿಕ್ರದತ್ । ಅಭಿಲಕ್ಷ್ಯ ಶಬ್ದಂ ಕರೋತಿ । ಏವಂ ಗಾಃ ಸ್ತುತೀರ್ವಿಶ್ರಯಣಾರ್ಥಂ ಪಯಸೋ ದೋಗ್ಧ್ರೀರ್ಧೇನೂರ್ವಾಭಿಕನಿಕ್ರದದಭಿಶಬ್ದಾಯಮಾನಃ । ತದೇವಾಹ । ನದಯಞ್ಛಬ್ದಮುತ್ಪಾದಯದ್ ಸೋಮಃ ಪೃಥಿವೀಮುತಾಪಿ ಚ

**ದ್ಯಾಂ ಏತೌ ಲೋಕಾವೇತಿ । ಗಚ್ಛತಿ । ಕಿಂಚ ವಗ್ನುಃ । ವಾಙ್ನಾಮೈತತ್ । ತಸ್ಯ ವಾಕ್ ಶಬ್ದ ಆಜೌ ಸಂಗ್ರಾಮ ಇಂದ್ರಸ್ಯೇವ ಇಂದ್ರಸ್ಯ ಶಬ್ದ ಇವಾ ಶೃಣ್ವೇ । ಸರ್ವೈಃ ಶ್ರೂಯತೇ । ತತಃ ಪ್ರಚೇತಯನ್ನಾತ್ಮಾನಂ ಸರ್ವೇಷಾಂ ಪ್ರಜ್ಞಾಪಯನ್ನಿಮಾಂ ವಾಚಮರ್ಷತಿ । ಸಮಂತಾದ್ಗಮಯತಿ । ಉಚ್ಚೈಃ ಶಬ್ದಾಯತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಶೋಣಃ**—ಹೊಂಬಣ್ಣದ । **ವೃಷಾ**—ವೃಷಭವು । **ಗಾಃ**—ಪಶುಗಳಿಗಾಗಿ । **ಅಭಿಕನಿಕ್ರದತ್**—ಗುಟುರುಹಾಕುವಂತೆ । **ನದಯನ್**—ಶಬ್ದಮಾಡುವ ಸೋಮನು । **ಪೃಥಿವೀಂ**—ಪೃಥ್ವಿಯಲ್ಲೂ । **ಉತ**—ಮತ್ತು । **ದ್ಯಾಂ**—ದ್ಯುಲೋಕದಲ್ಲೂ । **ಏತಿ**—ಸಂಚರಿಸುತ್ತಾನೆ । **ಆಜೌ**—ಸಂಗ್ರಾಮದಲ್ಲಿ । **ಇಂದ್ರಸ್ಯೇವ**—ಇಂದ್ರನ ಶಬ್ದದಂತೆ । **ವಗ್ನುಃ**—ಸೋಮನ ಶಬ್ದವು । **ಆ ಶೃಣ್ವೇ**—ಎಲ್ಲರಿಂದಲೂ ಕೇಳಲ್ಪಡುತ್ತದೆ । **ಪ್ರಚೇತಯನ್**—ತನ್ನ ಸ್ವರೂಪವನ್ನು ಎಲ್ಲರಿಗೂ ತೋರ್ಪಡಿಸುತ್ತ । **ಇಮಾಂ ವಾಚಂ**—ಈ ಶಬ್ದವನ್ನು । **ಅರ್ಷತಿ**—ವಿಸ್ತರಿಸುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಹೊಂಬಣ್ಣದ ಪುಷ್ಟವಾದ ವೃಷಭವು ಪಶುಗಳ ನಡುವೆ ಗುಟುರುಹಾಕುವಂತೆ ಶಬ್ದಮಾಡುವ ಸೋಮನು ದ್ಯಾವಾಪೃಥಿವಿಗಳಲ್ಲೆಲ್ಲ ಸಂಚರಿಸುತ್ತಾನೆ. ಸಂಗ್ರಾಮದಲ್ಲಿ ಇಂದ್ರನ ಶಬ್ದದಂತೆ ಸೋಮನ ಶಬ್ದವು ಎಲ್ಲರಿಂದಲೂ ಕೇಳಲ್ಪಡುತ್ತದೆ. ತನ್ನ ಸ್ವರೂಪವನ್ನು ಎಲ್ಲರಿಗೂ ತೋರ್ಪಡಿಸುತ್ತ ಈ ಶಬ್ದವನ್ನು ವಿಸ್ತರಿಸುವಂತೆ ಮಾಡುತ್ತಾನೆ.

English Translation

(Calling out for the praise like) a red bull bellowing after the cow, the Soma goes with a roar through heaven and earth ; (his voice) is heard as the voice of Indra, manifesting (himself) he raises this voice.

॥ ಸಂಹಿತಾಪಾಠಃ ॥

ರಸಾಯ್ಯಃ ಪಯಸಾ ಪಿನ್ವಮಾನ ಈರಯನ್ನೇಷಿ ಮಧುಮಂತಮಂಶುಂ ।
ಪವಮಾನಃ ಸಂತನಿಮೇಷಿ ಕೃಣ್ವನ್ನಿಂದ್ರಾಯ ಸೋಮ ಪರಿಷಿಚ್ಯಮಾನಃ ॥

॥ ಪದಪಾಠಃ ॥

ರಸಾಯ್ಯಃ । ಪಯಸಾ । ಪಿನ್ವಮಾನಃ । ಈರಯನ್ । ಏಷಿ । ಮಧುऽಮಂತಂ । ಅಂಶುಂ ।
ಪವಮಾನಃ । ಸಂऽತನಿಂ । ಏಷಿ । ಕೃಣ್ವನ್ । ಇಂದ್ರಾಯ । ಸೋಮ । ಪರಿऽಸಿಚ್ಯಮಾನಃ ॥ ೧೪ ॥

॥ ಸಾಯಣಭಾಷ್ಯಂ ॥

**ಹೇ ಸೋಮ ರಸಾಯ್ಯಃ ॥ ರಸೇರೌಣಾದಿಕ ಆಯ್ಯಪ್ರತ್ಯಯಃ ॥ ಆಸ್ವಾದ್ಯಃ ಪಯಸಾ ಪಿನ್ವಮಾನಃ ಕ್ಷರಂಸ್ತ್ವಮೀರಯಞ್ಛಬ್ದಂ ಪ್ರೇರಯನ್ ಮಧುಮಂತಂ ಮಾಧುರ್ಯೋಪೇತಮಂಶುಂ**

**ರಸಭಾವಮೇಷಿ । ಪ್ರಾಪ್ನೋಷಿ । ಅಂಶುಃ ಶಮಷ್ಟಮಾತ್ರೋ ಭವತೀತಿ ಯಾಸ್ಕಃ । ನಿ. ೨-೫। ಅನೇನ ಸೋಮರಸೋಽಭಿಧೀಯತೇ । ಕಿಂಚ ಹೇ ಸೋಮ ಪರಿಷಿಚ್ಯಮಾನೋಽದ್ಭಿಃ ಪರಿಷಿಕ್ತಸ್ತ್ವಂ ಪವಮಾನಃ ಪವಿತ್ರೇ ಪೂಯಮಾನಃ ಸನ್ ಸಂತನಿಂ ॥ ತನು ವಿಸ್ತಾರೇ । ಇಪ್ರತ್ಯಯಃ ॥ ಸಂತತಾಂ ಧಾರಾಂ ಕೃಣ್ವನ್ ಕುರ್ವನ್ನಿಂದ್ರಾಯೇಂದ್ರಾರ್ಥಮೇಷಿ । ಗಚ್ಛಸಿ ॥**

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ರಸಾಯ್ಯಃ**—ರುಚಿಕರನೂ । **ಪಯಸಾ**—ಕ್ಷೀರದೊಂದಿಗೆ । **ಪಿನ್ವಮಾನಃ**—ಜಿನುಗುವವನೂ ಆದ ನೀನು । **ಈರಯನ್**—ಶಬ್ದಮಾಡುತ್ತ । **ಮಧುಮಂತಂ**—ಮಾಧುರ್ಯಯುಕ್ತವಾದ । **ಅಂಶುಂ**—ರಸದ ರೂಪವನ್ನು । **ಏಷಿ**—ಹೊಂದುತ್ತೀಯೆ । **ಸೋಮ**—ಎಲೈ ಸೋಮನೇ । **ಪರಿಷಿಚ್ಯಮಾನಃ**—ಉದಕಗಳಿಂದ ಸಂಸ್ಕೃತನೂ । **ಪವಮಾನಃ**—ಶುದ್ಧಿಯನ್ನು ಹೊಂದಿದವನೂ ಆದ ನೀನು । **ಸಂತನಿಂ**—ಅನುಸ್ಯೂತವಾದ ಧಾರೆಯನ್ನು । **ಕೃಣ್ವನ್**—ಉತ್ಪನ್ನಮಾಡುತ್ತ । **ಇಂದ್ರಾಯ**—ಇಂದ್ರಾರ್ಥವಾಗಿ । **ಏಷಿ**—ಪ್ರವಹಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ರುಚಿಕರನೂ, ಕ್ಷೀರದೊಂದಿಗೆ ಜಿನುಗುವವನೂ ಆದ ನೀನು ಶಬ್ದಮಾಡುತ್ತ ಮಾಧುರ್ಯಯುಕ್ತವಾದ ರಸದ ರೂಪವನ್ನು ಹೊಂದುತ್ತೀಯೆ. ಎಲೈ ಸೋಮನೇ, ಉದಕಗಳಿಂದ ಸಂಸ್ಕೃತನೂ, ಶುದ್ಧಿಯನ್ನು ಹೊಂದಿದವನೂ ಆದ ನೀನು ಅನುಸ್ಯೂತವಾದ ಧಾರೆಯನ್ನು ಉತ್ಪನ್ನ ಮಾಡುತ್ತ ಇಂದ್ರಾರ್ಥವಾಗಿ ಪ್ರವಹಿಸುತ್ತೀಯೆ.

## English Translation.

Pleasant to the taste, dripping with milk, you flow pouring forth the sweet-flavoured juice. Soma, when purified and sprinkled, you flow for Indra in a continuous stream.

॥ ಸಂಹಿತಾಪಾಠಃ ॥

**ಏವಾ ಪವಸ್ವ ಮದಿರೋ ಮದಾಯೋದಗ್ರಾಭಸ್ಯ ನಮಯನ್ವಧಸ್ನೈಃ ।**
**ಪರಿ ವರ್ಣಂ ಭರಮಾಣೋ ರುಶಂತಂ ಗವ್ಯುರ್ನೋ ಅರ್ಷ ಪರಿ ಸೋಮ-**
**ಸಿಕ್ತಃ ॥ ೧೫ ॥**

॥ ಪದಪಾಠಃ ॥

**ಏವ । ಪವಸ್ವ । ಮದಿರಃ । ಮದಾಯ । ಉದ್ಽಗ್ರಾಭಸ್ಯ । ನಮಯನ್ । ವಧಽಸ್ನೈಃ ।**
**ಪರಿ । ವರ್ಣಂ । ಭರಮಾಣಃ । ರುಶಂತಂ । ಗವ್ಯುಃ । ನಃ । ಅರ್ಷ । ಪರಿ । ಸೋಮ । ಸಿಕ್ತಃ ॥ ೧೫ ॥**

|| ಸಾಯಣಭಾಷ್ಯಂ ||

ಹೇ ಸೋಮ ಮದಿರೋ ಮದಕರಸ್ತ್ವಮುದಗ್ರಾಭಸ್ಯ || ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ | ಪಾ. ೧-೪-೩೨-೧ | ಚತುರ್ಥ್ಯರ್ಥೇ ಬಹುಲಂ | ಪಾ. ೨-೩-೬೨ | ಇತಿ ಷಷ್ಠೀ || ಉದಗ್ರಾಭಮುದಕಗ್ರಾಹಿಣಂ ಮೇಘಂ ವಧಸ್ನೈರ್ಹನನಸಾಧನೈರಾಯುಧೈರ್ನಮಯನ್ ವೃಷ್ಟ್ಯರ್ಥಂ ಪ್ರಹ್ವೀಕುರ್ವನ್ ಮದಾಯ ಮದಾರ್ಥಮೇವ ಪವಸ್ವ | ಏವಂ ಪಾತ್ರೇಷು ಕ್ಷರ | ಕಿಂಚ ರುಶಂತಮಾರೋಚಮಾನಂ ಶ್ವೇತಂ ವರ್ಣಂ ಪರಿ ಭರಮಾಣಃ ಪರಿತೋ ಬಿಭ್ರತ್ ಸಿಕ್ತಃ ಪವಿತ್ರೇ ಸಿಚ್ಯಮಾನಸ್ತ್ವಂ ಗವ್ಯುರ್ನೋಽಸ್ಮಾಕಂ ಗಾ ಇಚ್ಛನ್ ಪರ್ಯರ್ಷ | ಪರಿಗಚ್ಛ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ, | **ಮದಿರಃ**—ಹರ್ಷಕಾರಕನಾದ ನೀನು | **ಉದಗ್ರಾಭಸ್ಯ**—ಉದಕವನ್ನು ಧರಿಸಿರುವ ಮೇಘವನ್ನು | **ವಧಸ್ನೈಃ**—ಆಯುಧಗಳಿಂದ | **ನಮಯನ್**—ಬಾಗುವಂತೆ ಮಾಡುತ್ತ | **ಏವ**—ಈ ರೀತಿ | **ಮದಾಯ**—ಇಂದ್ರನ ಹರ್ಷಕ್ಕಾಗಿ | **ಪವಸ್ವ**—ಪ್ರವಹಿಸು. | **ರುಶಂತಂ**—ಪ್ರಕಾಶಮಾನವಾದ | **ವರ್ಣಂ**—ಶುಭ್ರವರ್ಣವನ್ನು | **ಪರಿ ಭರಮಾಣಃ**—ಸುತ್ತಲೂ ಧರಿಸಿಕೊಂಡು | **ಸಿಕ್ತಃ**—ದಶಾಪವಿತ್ರದಲ್ಲಿ ತೊಯ್ಯುತ್ತ | **ನಃ**—ನಮಗೆ | **ಗವ್ಯುಃ**—ಗೋವುಗಳನ್ನು ಕೊಡುವ ಇಚ್ಛೆಯಿಂದ | **ಪರ್ಯರ್ಷ**—ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಹರ್ಷಕಾರಕನಾದ ನೀನು ಉದಕವನ್ನು ಧರಿಸಿರುವ ಮೇಘವನ್ನು ಆಯುಧಗಳಿಂದ ಬಾಗುವಂತೆ ಮಾಡುತ್ತ ಈ ರೀತಿ ಇಂದ್ರನ ಹರ್ಷಕ್ಕಾಗಿ ಪ್ರವಹಿಸು. ಪ್ರಕಾಶಮಾನವಾದ ಶುಭ್ರವರ್ಣವನ್ನು ಸುತ್ತಲೂ ಧರಿಸಿಕೊಂಡು ದಶಾಪವಿತ್ರದಲ್ಲಿ ತೊಯ್ಯುತ್ತ ನಮಗೆ ಗೋವುಗಳನ್ನು ಕೊಡುವ ಇಚ್ಛೆಯಿಂದ ಪ್ರವಹಿಸು.

English Translation.

Thus flow, the exhilarator, for Indra's exhilaration bowing down the the rain-holder with (your) weapons, assuming brilliant colour, desirous of our cattle, flow, Soma, sprinkled (into the filter).

|| ಸಂಹಿತಾಪಾಠಃ ||

**ಜುಷ್ಟ್ವೀ ನ ಇಂದೋ ಸುಪಥಾ ಸುಗಾನ್ಯುರೌ ಪವಸ್ವ ವರಿವಾಂಸಿ ಕೃಣ್ವನ್ |**

**ಘನೇವ ವಿಷ್ವಗ್ದುರಿತಾನಿ ವಿಘ್ನನ್ನಧಿ ಷ್ಣುನಾ ಧನ್ವ ಸಾನೋ ಅವ್ಯೇ ||೧೬ ||**

॥ ಪದಪಾಠಃ ॥

ಜುಷ್ಟ್ವೀ । ನಃ । ಇಂದೋ ಇತಿ । ಸುಽಪಥಾ । ಸುಽಗಾನಿ । ಉರೌ । ಪವಸ್ವ । ವರಿವಾಂಸಿ । ಕೃಣ್ವನ್ ।
ಘನಾಽಇವ । ವಿಷ್ವಕ್ । ದುಃಽಇತಾನಿ । ವಿಽಘ್ನನ್ । ಅಧಿ । ಸ್ನುನಾ । ಧನ್ವ । ಸಾನೌ । ಅವ್ಯೇ ॥ ೧೬ ॥

। ಸಾಯಣಭಾಷ್ಯಂ ॥

ಹೇ ಇಂದೋ ದೀಪ್ತ ಪವಮಾನ ಜುಷ್ಟ್ವೀ ॥ ಸ್ನಾತ್ವ್ಯಾದಯಶ್ಚೇತಿ ನಿಪಾತಿತಃ ॥ ಸ್ತುತಿಭಿಃ ಪ್ರೀತೋ ಭೂತ್ವಾ ನೋಽಸ್ಮಾಕಂ ಸುಪಥಾನಿ ವೈದಿಕಮಾರ್ಗಾನ್ ತಥಾ ವರಿವಾಂಸಿ ವರಣೀಯಾನಿ ಧನಾನಿ ಸುಗಾ ಸುಗಮನಾನಿ ಸುಪ್ರಾಪ್ತವ್ಯಾನಿ ಕೃಣ್ವನ್ಕುರ್ವನ್ನುರೌ ವಿಸ್ತೀರ್ಣೇ ದ್ರೋಣಕಲಶೇ ಪವಸ್ವ । ಕ್ಷರ । ಕಿಂಚ ಘನೇವ ಘನೀಭೂತೇನ ಲೋಹಮಯೇನಾಯುಧೇನೇವ ವಿಷ್ವಕ್ ಸರ್ವತೋ ದುರಿತಾನಿ ದುಷ್ಪ್ರಾಪ್ತವ್ಯಾನಿ ರಕ್ಷಾಂಸಿ ವಿಘ್ನನ್ ಹಿಂಸನ್ ಸಾನೌ ಸಮುಚ್ಛ್ರಿತೇಽವ್ಯೇಽವಿಭವೇ ಸ್ನುನಾ ಸ್ರವತಾ ಧಾರಾಸಂಘೇನಾಧಿ ಧನ್ವ । ಅಧಿಗಚ್ಛ । ಧವಿರ್ಗತ್ಯರ್ಥಃ ॥

|| ಪ್ರತಿಪದಾರ್ಥ ||

**ಇಂದೋ**—ಎಲೈ ಸೋಮದೇವನೇ । **ಜುಷ್ಟ್ವೀ**—ನಮ್ಮ ಸ್ತುತಿಯಿಂದ ಪ್ರೀತನಾಗಿ । **ನಃ**—ನಮ್ಮ **ಸುಪಥಾ**—ವೈದಿಕಮಾರ್ಗಗಳನ್ನು । **ವರಿವಾಂಸಿ**—ಧನಯುಕ್ತವನ್ನಾಗಿ । **ಸುಗಾನಿ**—ಉತ್ತಮವಾದ ಸಂಚಾರಯೋಗ್ಯವನ್ನಾಗಿಯೂ । **ಕೃಣ್ವನ್**—ಮಾಡುತ್ತ । **ಉರೌ**—ವಿಸ್ತೃತವಾದ ದ್ರೋಣಕಲಶದಲ್ಲಿ । **ಪವಸ್ವ**—ಪ್ರವಹಿಸು । **ಘನೇವ**—ಲೋಹದ ಆಯುಧದಿಂದ ಹೊಡೆಯುವಂತೆ । **ವಿಷ್ವಕ್**—ಸರ್ವತ್ರ । **ದುರಿತಾನಿ**—ದುಷ್ಟರಾಕ್ಷಸರನ್ನು । **ವಿಘ್ನನ್**—ನಾಶಪಡಿಸುತ್ತ । **ಸಾನೌ**—ಎತ್ತರವಾದ ಸ್ಥಾನದಲ್ಲಿರುವ । **ಅವ್ಯೇ**—ದಶಾಪವಿತ್ರಕ್ಕೆ । **ಅಧಿ ಧನ್ವ**—ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಸ್ತುತಿಯಿಂದ ಪ್ರೀತನಾಗಿ ನಮ್ಮ ವೈದಿಕಮಾರ್ಗಗಳನ್ನು ಧನಯುಕ್ತವನ್ನಾಗಿಯೂ, ಉತ್ತಮವಾದ ಸಂಚಾರಯೋಗ್ಯವನ್ನಾಗಿಯೂ ಮಾಡುತ್ತ ವಿಸ್ತೃತವಾದ ದ್ರೋಣಕಲಶದಲ್ಲಿ ಪ್ರವಹಿಸು. ಲೋಹದ ಆಯುಧದಿಂದ ಹೊಡೆಯುವಂತೆ ಸರ್ವತ್ರ ದುಷ್ಟರಾಕ್ಷಸರನ್ನು ನಾಶಪಡಿಸುತ್ತ ಎತ್ತರವಾದ ಸ್ಥಾನದಲ್ಲಿರುವ ದಶಾಪವಿತ್ರಕ್ಕೆ ಪ್ರವಹಿಸು.

## English Translation.

Gratified (with our praises), Indu, flow into the large (vessel), granting us riches coming by holy paths and easily acquired ; beating down the Rakshasas on every side as with a club, flow in a stream upon the elevated fleece.

|| ಸಂಹಿತಾಪಾಠಃ ||

ವೃಷ್ಟಿಂ ನೋ ಅರ್ಷ ದಿವ್ಯಾಂ ಜಿಗತ್ನುಮಿಳಾವತೀಂ ಶಂಗಯೀಂ ಜೀರ-
ದಾನುಂ ।
ಸ್ತುಕೇವ ವೀತಾ ಧನ್ವಾ ವಿಚಿನ್ವನ್ಬಂಧೂರಿಮಾಁ ಅವರಾಁ ಇಂದೋ
ವಾಯೂನ್ || ೧೭ ||

|| ಪದಪಾಠಃ ||

ವೃಷ್ಟಿಂ । ನಃ । ಅರ್ಷ । ದಿವ್ಯಾಂ । ಜಿಗತ್ನುಂ । ಇಳಾऽವತೀಂ । ಶಂऽಗಯೀಂ । ಜೀರऽದಾನುಂ ।
ಸ್ತುಕಾऽಇವ । ವೀತಾ । ಧನ್ವ । ವಿऽಚಿನ್ವನ್ । ಬಂಧೂನ್ । ಇಮಾನ್ । ಅವರಾನ್ । ಇಂದೋ ಇತಿ ।
ವಾಯೂನ್ || ೧೭ ||

|| ಸಾಯಣಭಾಷ್ಯಂ ||

ಹೇ ಸೋಮ ನೋऽಸ್ಮಾಕಂ ವೃಷ್ಟಿಮರ್ಷ । ಗಮಯ । ಕೀದೃಶೀಂ । ದಿವ್ಯಾಂ ದಿವಿ ಭವಾಂ ಜಿಗತ್ನುಂ ಗಮನಶೀಲಾಮಿಳಾವತೀಮನ್ನವತೀಂ ಶಂಗಯೀಂ ಸುಖಸ್ಯ ನಿವಾಸಭೂತಾಂ; ಜೀರದಾನುಂ ಕ್ಷಿಪ್ರದಾನೋಪೇತಾಂ । ಕಿಂಚ ಹೇ ಇಂದೋ ತ್ವಂ ಸ್ತುಕೇವ ವೀತಾ ಕಾಂತಾನಿ । ಸ್ತುಕಶಬ್ದೋऽಪತ್ಯ-ವಚನಃ । ಅಪತ್ಯಾನಿ ಯಥಾ ವಿಚಿನೋಷಿ ತದ್ವದ್ಬಂಧೂನ್ ಸ್ತುತ್ಯೈಸ್ತೋತೃತ್ವೇನ ಬಂಧುಭೂತಾನವರಾ-ನವರದೇಶೇ ಸ್ಥಿತಾನ್ಪಾರ್ಥಿವಾನ್ವಾಯೂಂಸ್ತ್ವಮಭಿಗಚ್ಛತೆ ಇಮಾನಸ್ಮಾನ್ವಿಚಿನ್ವನ್ಧನಾದಿಪ್ರದಾನಾರ್ಥಂ ಗವೇಷಮಾಣಃ ಸನ್ ಧನ್ವ । ಗಚ್ಛ ||

|| ಪ್ರತಿಪದಾರ್ಥ ||

ಇಂದೋ—ಎಲೈ ಸೋಮದೇವನೇ | ನಃ—ನಮಗೆ | ದಿವ್ಯಾ—ದ್ಯುಲೋಕೋತ್ಪನ್ನವೂ । ಜಿಗತ್ನುಂ—ಶೀಘ್ರವಾಗಿ ಬೀಳತಕ್ಕದ್ದೂ | ಇಳಾವತೀಂ—ಅನ್ನಯುಕ್ತವೂ | ಶಂಗಯೀಂ—ಸುಖಪ್ರದವೂ | ಜೀರ-ದಾನುಂ—ಕ್ಷಿಪ್ರವಾಗಿ ಸಂಪತ್ತನ್ನು ಒದಗಿಸುವುದೂ ಆದ | ವೃಷ್ಟಿಂ—ವೃಷ್ಟಿಯನ್ನು | ಅರ್ಷ—ಸುರಿಸು | ವೀತಾ—ಪ್ರೀತಿಪಾತ್ರವಾದ | ಸ್ತುಕೇವ—ಮಕ್ಕಳನ್ನು ಆದರಿಸಿ ಅವರನ್ನು ಸಮೀಪಿಸುವಂತೆ | ಬಂಧೂನ್—ನಿನಗೆ ಬಂಧುಭೂತರೂ | ಅವರಾನ್—ಪೃಥ್ವಿಯಲ್ಲಿರುವವರೂ | ವಾಯೂನ್—ನಿನ್ನನ್ನು ಸಮೀಪಿಸುವವರೂ ಆದ | ಇಮಾನ್—ನಮ್ಮನ್ನು | ವಿ ಚಿನ್ವನ್—ಸಮೀಪಿಸಲು ಇಚ್ಛಿಸುತ್ತ | ಧನ್ವ—ದಯಮಾಡು.

|| ಭಾವಾರ್ಥ ||

ಎಲೈ ಸೋಮದೇವನೇ, ದ್ಯುಲೋಕೋತ್ಪನ್ನವೂ, ಶೀಘ್ರವಾಗಿ ಬೀಳತಕ್ಕದ್ದೂ, ಅನ್ನಯುಕ್ತವೂ, ಸುಖಪ್ರದವೂ, ಕ್ಷಿಪ್ರವಾಗಿ ಸಂಪತ್ತನ್ನು ಒದಗಿಸುವುದೂ ಆದ ವೃಷ್ಟಿಯನ್ನು ಸುರಿಸು. ಪ್ರೀತಿಪಾತ್ರವಾದ ಮಕ್ಕಳನ್ನು

ಆದರಿಸಿ ಅವರನ್ನು ಸಮೀಪಿಸುವಂತೆ, ನಿನಗೆ ಬಂಧುಭೂತರೂ, ಪೃಥ್ವಿಯಲ್ಲಿರುವವರೂ ಆದ ನಮ್ಮನ್ನು ಸಮೀಪಿಸಲು ಇಚ್ಛಿಸುತ್ತ ದಯಮಾಡು.

## English Translation.

Send us rain from heaven, quick-falling, food-giving, giving health to our home, promptly munificent : flow Indu, seeking these lower winds your kinsmen as (one seeking his) beloved infants.

|| ಸಂಹಿತಾಪಾಠಃ ||

ಗ್ರಂಥಿಂ ನ ವಿ ಷ್ಯ ಗ್ರಥಿತಂ ಪುನಾನ ಋಜುಂ ಚ ಗಾತುಂ ವೃಜಿನಂ ಚ ಸೋಮ ।
ಅತ್ಯೋ ನ ಕ್ರದೋ ಹರಿರಾ ಸೃಜಾನೋ ಮರ್ಯೋ ದೇವ ಧನ್ವ ಪಸ್ತ್ಯ-
ವಾನ್ ॥ ೧೮ ॥

|| ಪದಪಾಠಃ ||

ಗ್ರಂಥಿಂ । ನ । ವಿ । ಸ್ಯ । ಗ್ರಥಿತಂ । ಪುನಾನಃ । ಋಜುಂ । ಚ । ಗಾತುಂ । ವೃಜಿನಂ । ಚ । ಸೋಮ ।
ಅತ್ಯಃ । ನ । ಕ್ರದಃ । ಹರಿಃ । ಆ । ಸೃಜಾನಃ । ಮರ್ಯಃ । ದೇವ । ಧನ್ವ । ಪಸ್ತ್ಯಽವಾನ್ ॥ ೧೮ ॥

|| ಸಾಯಣಭಾಷ್ಯಂ ||

ಪುನಾನಃ ಪೂಯಮಾನಸ್ತ್ವಂ ಗ್ರಥಿತಂ ಪಾಪೈರ್ಬದ್ಧಂ ಮಾಂ ವಿಷ್ಯ । ಮುಂಚ । ಪಾಪೇಭ್ಯೋ ವಿಶ್ಲೇಷಯ । ಕಥಮಿವ । ಗ್ರಂಥಿಂ ನ ಯಥಾ ಕಶ್ಚಿದ್ಗ್ರಂಥಿಂ ವಿಶ್ಲೇಷಯತಿ ॥ ಷೋ ಅಂತಕರ್ಮಣೀತ್ಯಸ್ಯ ಲೋಟಿ ರೂಪಂ ॥ ಕಿಂಚ ಹೇ ಸೋಮ ತ್ವಮೃಜುಮವಕ್ರಂ ಗಾತುಂ ಮಾರ್ಗಂ ಚ ವೃಜಿನಂ ಬಲಂ ಚ ಮಹ್ಯಂ ದೇಹಿ । ಹರಿರ್ಹರಿತವರ್ಣಸ್ತ್ವಮಾ ಸೃಜಾನಃ ಪಾತ್ರೇಷ್ವಾಸೃಜ್ಯಮಾನಃ ಸನ್ನತ್ಯೋ ನಾತನಶೀಲೋಽಶ್ವ ಇವ ಕ್ರದಃ । ಕ್ರಂದಸಿ । ಶಬ್ದಾಯಸೇ । ಕಿಂಚ ಹೇ ದೇವ ಮರ್ಯೋ ಮನುಷ್ಯಹಿತೋ ಮಾರಕೋ ಹಿಂಸಕೋ ವಾ ಶತ್ರೂಣಾಂ ಪಸ್ತ್ಯವಾನ್ । ಪಸ್ತ್ಯಂ ಗೃಹಂ । ತದ್ವಾಂಸ್ತ್ವಂ ಧನ್ವ । ಮಾಮಭಿಗಚ್ಛ ಕಲಶಾನ್ವಾ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ಪುನಾನಃ** – ಶುದ್ಧಿಯನ್ನು ಹೊಂದಿದ ನೀನು । **ಗ್ರಂಥಿಂ ನ**—ಗಂಟನ್ನು ಬಿಡಿಸುವಂತೆ । **ಗ್ರಥಿತಂ**—ಪಾಪದಿಂದ ಬದ್ಧನಾದ ನನ್ನನ್ನು । **ವಿ ಷ್ಯ**—ಬಿಡಿಸು । **ಋಜುಂ**—ನೇರವಾದ । **ಗಾತುಂ**—ಮಾರ್ಗವನ್ನು ತೋರಿಸು । **ವೃಜಿನಂ ಚ**—ಶಕ್ತಿಯನ್ನೂ ಕೊಡು । **ಹರಿಃ**—ಪಚ್ಚೆ ವರ್ಣವುಳ್ಳ ನೀನು । **ಆ ಸೃಜಾನಃ**—ಸ್ವತಂತ್ರವಾಗಿ ಬಿಡಲ್ಪಟ್ಟಾಗ । **ಅತ್ಯೋ ನ**—ಅಶ್ವದಂತೆ । **ಕ್ರದಃ**—

ಶಬ್ದಮಾಡುತ್ತೀಯೆ । **ದೇವ**—ದೇವಾತ್ಮನಾದ ಎಲೈ ಸೋಮನೇ । **ಮರ್ಯಃ**– ಮಾನವರಿಗೆ ಹಿತಕಾರಿಯೂ । **ಪಸ್ತ್ಯವಾನ್**—ಗೃಹಯುಕ್ತನೂ ಆದ ನೀನು । **ಧನ್ವ**—ನಮ್ಮಲ್ಲಿಗೆ ಬಾ.

॥ ಭಾವಾರ್ಥ ॥

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನೀನು ಗಂಟನ್ನು ಬಿಡಿಸುವಂತೆ ಪಾಪದಿಂದ ಬದ್ಧನಾದ ನನ್ನ ಪಾಪಬಂಧನವನ್ನು ಬಿಡಿಸು. ನನಗೆ ನೇರವಾದ ಮಾರ್ಗವನ್ನು ತೋರಿಸಿ ಶಕ್ತಿಯನ್ನೂ ಕೊಡು. ಹಚ್ಚಿ ವರ್ಣವುಳ್ಳ ನೀನು ಸ್ವತಂತ್ರವಾಗಿ ಬಿಡಲ್ಪಟ್ಟಾಗ ಅಶ್ವದಂತೆ ಶಬ್ದಮಾಡುತ್ತೀಯೆ. ದೇವಾತ್ಮನಾದ ಎಲೈ ಸೋಮನೇ, ಮಾನವರಿಗೆ ಹಿತಕಾರಿಯೂ, ಗೃಹಯುಕ್ತನೂ ಆದ ನೀನು ನಮ್ಮಲ್ಲಿಗೆ ಬಾ

English Translation.

(Soma), when filtered loose (me) bound (by sin) as (one looses) a knot; (grant me) a straight path and strength. You, green-tinted, neigh like a horse (when you are) let loose : proceed divine (Soma) who are friendly to man, and have a dwelling.

। ಸಂಹಿತಾಪಾಠಃ ॥

ಜುಷ್ಟೋ ಮದಾಯ ದೇವತಾತ ಇಂದೋ ಪರಿ ಷ್ಣುನಾ ಧನ್ವ ಸಾನೋ ಅವ್ಯೇ ।
ಸಹಸ್ರಧಾರಃ ಸುರಭಿರದಬ್ಧಃ ಪರಿ ಸ್ರವ ವಾಜಸಾತೌ ನೃಷಹ್ಯೇ ॥ ೧೯ ॥

॥ ಪದಪಾಠಃ ॥

ಜುಷ್ಟಃ । ಮದಾಯ । ದೇವಽತಾತೇ । ಇಂದೋ ಇತಿ । ಪರಿ । ಸ್ನುನಾ । ಧನ್ವ । ಸಾನೌ । ಅವ್ಯೇ ।
ಸಹಸ್ರಽಧಾರಃ । ಸುರಭಿಃ । ಅದಬ್ಧಃ । ಪರಿ । ಸ್ರವ । ವಾಜಽಸಾತೌ । ನೃಽಸಹ್ಯೇ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದೋ ಮದಾಯ ಜುಷ್ಟಃ ಪರ್ಯಾಪ್ತಸ್ತ್ವಂ ದೇವತಾತೇ ದೇವೈಸ್ತತೇ ಯಜ್ಞೇ ಸಾನೌ ಸಮುಚ್ಛ್ರಿತೇಽವ್ಯೇಽವಿಭವೇ ಪವಿತ್ರೇ ಸ್ನುನಾ ಪ್ರವಣಶೀಲೇನ ಧಾರಾಸಂಘೇನ ಸಹ ಪರಿ ಧನ್ವ।ಪರಿಗಚ್ಛ। ಸಹಸ್ರಧಾರೋ ಬಹುಧಾರೋಪೇತಃ ಸುರಭಿಃ ಸುಗಂಧಿಸ್ತ್ವಮದಬ್ಧೋ ನ ಕೈಶ್ಚಿದ್ಧಿಂಸಿತಃ ಸನ್ ವಾಜಸಾತಾವನ್ನಲಾಭನಿಮಿತ್ತೇ ನೃಸಹ್ಯೇ ನೃಭಿಃ ಸೋಢವ್ಯೇ ಯುದ್ಧೇ ಪರಿ ಸ್ರವ । ಪರಿತೋ ಗಚ್ಛ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ಮದಾಯ**—ಹರ್ಷವನ್ನುಂಟುಮಾಡಲು । **ಜುಷ್ಟಃ**—ಸಮರ್ಥನಾದ ನೀನು । **ದೇವತಾತೇ**—ಯಜ್ಞದಲ್ಲಿ । **ಸಾನೌ**—ಉನ್ನತಸ್ಥಾನದಲ್ಲಿರುವ । **ಅವ್ಯೇ**-ದಶಾಪವಿತ್ರದಲ್ಲಿ ।

**ಸ್ಮನಾ**— ಧಾರೆಯೊಡಗೂಡಿ | **ಪರಿ ಧನ್ವ**— ಪ್ರವಹಿಸು | **ಸಹಸ್ರಧಾರಃ**—ಅನೇಕ ಧಾರೆಯುಳ್ಳವನೂ | **ಸುರಭಿಃ**—ಸುಗಂಧಯುಕ್ತನೂ ಆದ ನೀನು | **ಅದಬ್ಧಃ**—ಯಾರ ಹಿಂಸೆಗೂ ಒಳಪಡದೆ | **ನೃಷಹ್ಯೇ**—ಯುದ್ಧದಲ್ಲಿ | **ವಾಜಸಾತೌ**—ಅನ್ನಲಾಭಕ್ಕಾಗಿ | **ಪರಿಸ್ರವ**— ಪ್ರವಹಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಹರ್ಷವನ್ನುಂಟುಮಾಡಲು ಸಮರ್ಥನಾದ ನೀನು ಯಜ್ಞದಲ್ಲಿ ಉನ್ನತಸ್ಥಾನದಲ್ಲಿರುವ ದಶಾಪವಿತ್ರದಲ್ಲಿ ಧಾರೆಯೊಡಗೂಡಿ ಪ್ರವಹಿಸು. ಅನೇಕ ಧಾರೆಯುಳ್ಳವನೂ, ಸುಗಂಧಯುಕ್ತನೂ ಆದ ನೀನು ಯಾರ ಹಿಂಸೆಗೂ ಒಳಪಡದೆ ಯುದ್ಧದಲ್ಲಿ ಅನ್ನಲಾಭಕ್ಕಾಗಿ ಪ್ರವಹಿಸು

## English Translation.

Indu, who are adequate for exhilaration flow in a stream to the elevated fleece at the sacrifice; thousand-streaming, fragrant, irresistible, flow for the acquisition of food in the combat.

|| ಸಂಹಿತಾಪಾಠಃ ||

**ಅರಶ್ಮಾನೋ ಯೇಽರಥಾ ಅಯುಕ್ತಾ ಅತ್ಯಾಸೋ ನ ಸಸೃಜಾನಾಸ ಆಜೌ |**
**ಏತೇ ಶುಕ್ರಾಸೋ ಧನ್ವಂತಿ ಸೋಮಾ ದೇವಾಸಸ್ತಾँ ಉಪ ಯಾತಾ**
**ಪಿಬಧ್ಯೈ || ೨೦ ||**

| ಪದಪಾಠಃ ||

**ಅರಶ್ಮಾನಃ | ಯೇ | ಅರಥಾಃ | ಅಯುಕ್ತಾಃ | ಅತ್ಯಾಸಃ | ನ | ಸಸೃಜಾನಾಸಃ | ಆಜೌ |**
**ಏತೇ | ಶುಕ್ರಾಸಃ | ಧನ್ವಂತಿ | ಸೋಮಾಃ | ದೇವಾಸಃ | ತಾನ್ | ಉಪ | ಯಾತ | ಪಿಬಧ್ಯೈ || ೨೦ ||**

|| ಸಾಯಣಭಾಷ್ಯಂ ||

**ಅರಶ್ಮಾನೋ ರಶ್ಮಿವರ್ಜಿತಾಃ | ರಜ್ಜುರಹಿತಾ ಇತಿ ಯಾವತ್| ಅರಥಾ ರಥವರ್ಜಿತಾ ಅಯುಕ್ತಾಃ ಕುತ್ರಾಪಿ ನ ನಿಯುಕ್ತಾಃ | ಅಬದ್ಧಾ ಇತ್ಯರ್ಥಃ | ಏತಾದೃಶಾ ಯ ಆಜೌ ಯುದ್ಧೇ ಸಸೃಜಾನಾಸಃ ಸೃಜ್ಯಮಾನಾ ಅತ್ಯಾಸೋ ನಾಶ್ವಾ ಯಥಾ ತ್ವರಯಾ ಲಕ್ಷ್ಯಂ ಗಚ್ಛಂತಿ ತದ್ವದಾಜೌ | ಅಜಂತಿ ಕರ್ಮಕರಣಾರ್ಥಮೃತ್ವಿಜೋಽತ್ರೇತ್ಯಾಜಿರ್ಯಜ್ಞಃ | ತಸ್ಮಿನ್ಸೃಜ್ಯಮಾನಾಃ ಶುಕ್ರಾ ದೀಪ್ಯಮಾನಾ ಏತೇ ಸೋಮಾ ಧನ್ವಂತಿ| ಕ್ಷಿಪ್ರಂ ಕಲಶಾನಭಿಗಚ್ಛಂತಿ | ಅಥ ಪ್ರತ್ಯಕ್ಷಃ | ಹೇ ದೇವಾಸೋ ದೇವಾಃ ತಾನಾಗಚ್ಛತಃ ಸೋಮಾನ್ಪಿಬಧ್ಯೈ ಪಾನಾಯೋಪ ಯಾತ | ಉಪಗಚ್ಛತ ||**

|| ಪ್ರತಿಪದಾರ್ಥ ||

**ಅರಶ್ಮಾನಃ**—ಕಡಿವಾಣವಿಲ್ಲದೆಯೂ | **ಅರಥಾಃ**—ರಥರಹಿತವೂ | **ಅಯುಕ್ತಾಃ**—ರಥಕ್ಕೆ ಕಟ್ಟಲ್ಪಡದವೂ ಆದ | **ಯೇ**—ಯಾವ ಅಶ್ವಗಳು | **ಆಜೌ**—ಯುದ್ಧದಲ್ಲಿ | **ಸಸೃಜಾನಾಸಃ**—ಸ್ವತಂತ್ರವಾಗಿ ಬಿಡಲ್ಪಡುವುವೋ ಅಂತಹ | **ಅತ್ಯಾಸೋ ನ**—ಅಶ್ವಗಳು ಸ್ವೇಚ್ಛೆಯಾಗಿ ಓಡುವಂತೆ | **ಶುಕ್ರಾಸಃ**—ಪ್ರಭಾವಯುತವಾದ | **ಏತೇ ಸೋಮಾಃ**—ಈ ಸೋಮರಸಗಳು | **ಧನ್ವಂತಿ**—ಕಲಶಾಭಿಮುಖವಾಗಿ ಓಡುತ್ತವೆ | **ದೇವಾಸಃ**—ಎಲೈ ದೇವತೆಗಳೇ | **ತಾನ್**—ಆ ಸೋಮರಸಗಳನ್ನು | **ಪಿಬಧ್ಯೈ**—ಪಾನಮಾಡಲು | **ಉಪ ಯಾತ**—ಸಮೀಪಿಸಿರಿ.

|| ಭಾವಾರ್ಥ ||

ಕಡಿವಾಣವಿಲ್ಲದೆಯೂ, ರಥಕ್ಕೆ ಕಟ್ಟಲ್ಪಡದೆಯೂ ಇರುವ ಅಶ್ವಗಳನ್ನು ಯುದ್ಧರಂಗದಲ್ಲಿ ಬಿಟ್ಟರೆ ಹೇಗೆ ಸ್ವತಂತ್ರವಾಗಿ ಓಡುವುವೋ, ಹಾಗೆ ಪ್ರಭಾವಯುತವಾದ ಈ ಸೋಮರಸಗಳು ಕಲಶಾಭಿಮುಖವಾಗಿ ಓಡುತ್ತವೆ. ಎಂದರೆ ಹರಿಯುತ್ತವೆ. ಎಲೈ ದೇವತೆಗಳೇ, ಆ ಸೋಮರಸಗಳನ್ನು ಪಾನಮಾಡಲು ಸಮೀಪಿಸಿರಿ.

## English Translation.

These brilliant Soma-juices flow like horses let loose in battle without reins, without chariots, unharnessed ; approach them, you gods, to drink.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ **ಅರಶ್ಮಾನಃ........ಸೋಮಾಃ** ಎಂಬ ವಾಕ್ಯವು ಪರೋಕ್ಷಕೃತವೆಂದೂ **ದೇವಾಸಃ........ ಪಿಬಧ್ಯೈ** ಎಂಬ ವಾಕ್ಯವು ಪ್ರತ್ಯಕ್ಷಕೃತವೆಂದೂ ಹೇಳಲಾಗಿದೆ. ಅನೇಕ ಋಕ್ಕುಗಳಲ್ಲಿ ಪರೋಕ್ಷಕೃತವಾಕ್ಯಗಳು ಮಾತ್ರವಿರುತ್ತವೆ. ಕೆಲವು ಋಕ್ಕುಗಳಲ್ಲಿ ಪ್ರತ್ಯಕ್ಷಕೃತವಮಾತ್ರವಿರುತ್ತವೆ. ಮತ್ತೆ ಕೆಲವು ಋಕ್ಕುಗಳಲ್ಲಿ ಪರೋಕ್ಷಕೃತ ಮತ್ತು ಪ್ರತ್ಯಕ್ಷಕೃತಗಳೆರಡೂ ಇರುತ್ತವೆ. ಆದ್ದರಿಂದ ಪರೋಕ್ಷಕೃತ ಮತ್ತು ಪ್ರತ್ಯಕ್ಷಕೃತಗಳೆಂದರೇನು ಎಂಬುದನ್ನು ಇಲ್ಲಿ ಯಾಸ್ಕರು ವಿವರಿಸಿರುವುದನ್ನೇ ಸೂಕ್ಷ್ಮವಾಗಿ ವಿವರಿಸುತ್ತೇವೆ.

ಋಗ್ವೇದದ ಋಕ್ಕುಗಳನ್ನು ಅರ್ಥಾನುಸಾರವಾಗಿ ವಿಭಜಿಸುವಾಗ ಯಾಸ್ಕರು ಪರೋಕ್ಷಕೃತ, ಪ್ರತ್ಯಕ್ಷಕೃತ, ಪರೋಕ್ಷಕೃತಃ ಪ್ರತ್ಯಕ್ಷಕೃತಶ್ಚ, ಆಧ್ಯಾತ್ಮಿಕಾ, ಸ್ತುತಿ, ಆಶೀರ್ವಾದ, ಶಪಥ, ಅಭಿಶಾಪ, ಕಸ್ಯಚಿದ್ಭಾವ, ಪರಿದೇವನಾ, ನಿಂದಾ ಇತ್ಯಾದಿ ವಿಷಯಗಳನ್ನೊಳಗೊಂಡ ನಾನಾ ಪ್ರಭೇದಗಳಿರುವುದೆಂದು ಹೇಳಿ ಅವುಗಳನ್ನು ಉದಾಹರಣೆ ಮೂಲಕವಾಗಿ ವಿವರಿಸಿದ್ದಾರೆ. ಹೇಗೆಂದರೆ—

(೧) **ಪರೋಕ್ಷಕೃತ**—ಈ ಋಕ್ಕಿನಲ್ಲಿ ದೇವತೆಯು ತನ್ನ ಎದುರಿಗೆ ಇಲ್ಲದಂತೆ ಎಂದರೆ ತನಗೆ ಕಾಣಿಸದಂತೆ ಪರೋಕ್ಷದಲ್ಲಿರುವನೆಂದು ಭಾವಿಸಿ ಆ ದೇವತೆಯನ್ನು ಸ್ತುತಿಸುವುದು. ಈ ಸಂದರ್ಭದಲ್ಲಿ ಸರ್ವನಾಮ ವಿಭಕ್ತಿಗಳಲ್ಲಿ ಯಾವ ವಿಭಕ್ತಿಯನ್ನಾದರೂ ಉಪಯೋಗಿಸಬಹುದು. ಆದರೆ ಕ್ರಿಯಾಪದವು ಮಾತ್ರ ಪ್ರಥಮಪುರುಷದಲ್ಲಿರಬೇಕು.

ಉದಾ— **ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾಃ** || (ಪ್ರಥಮಾವಿಭಕ್ತಿ)

**ಇಂದ್ರಮಿದ್ಗಾಥಿನೋ ಬೃಹತ್** ॥ (ದ್ವಿ. ವಿ)
**ಇಂದ್ರೇಣೈತೇ ತೃತ್ಸವೋ ವೇವಿಷಾಣಾಃ** ॥ (ತೃ. ವಿ)
**ಇಂದ್ರಾಯ ಸಾಮ ಗಾಯತ** ॥ (ಚ ವಿ)
**ನೇಂದ್ರಾದೃತೇ ಪವತೇ ಧಾಮ ಕಿಂಚನ** ॥ (ಪಂ. ವಿ)
**ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ** ॥ (ಷ. ವಿ)
**ಇಂದ್ರೇ ಕಾಮಾ ಅಯಂಸತ** ॥ (ಸ ವಿ)

ಇಲ್ಲಿ ಏಳು ವಿಭಕ್ತಿಗಳಿಗೂ ಏಳು ಉದಾಹರಣೆಗಳನ್ನು ಕೊಟ್ಟಿದೆ. ಕ್ರಿಯಾಪದ ಮಾತ್ರ ಪ್ರಥಮಪುರುಷ.

(೨ **ಪ್ರತ್ಯಕ್ಷಕೃತ**— ಈ ವಿಧವಾದ ಋಕ್ಕಿನಲ್ಲಿ ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎಂದರೆ ಎದುರಿಗೆ ನಿಂತಿರುವಂತೆ ಭಾವಿಸಿ ಆ ದೇವತೆಯನ್ನು ಎಲ್ಲಾ ವಿಭಕ್ತಿಗಳಲ್ಲಿಯೂ ಹಿಂದೆ ಹೇಳಿದಂತೆ ಸ್ತುತಿಸಬಹುದು. ಆದರೆ ನೀನು ನಿನ್ನ ಇತ್ಯಾದಿ ಮಧ್ಯಮಪುರುಷ ಸರ್ವನಾಮಪದಗಳನ್ನು ಅದಕ್ಕನುಸಾರವಾದ ಮಧ್ಯಮಪುರುಷ ಕ್ರಿಯಾಪದಗಳನ್ನು ಉಪಯೋಗಿಸಬೇಕು.

ಉದಾ— **ತ್ವಮಿಂದ್ರ ಬಲಾದಧಿ** ॥
**ವಿ ನ ಇಂದ್ರ ಮೃಧೋ ಜಹಿ** ॥ ಇತ್ಯಾದಿ.

(೩) **ಪ್ರತ್ಯಕ್ಷಕೃತ** ಮತ್ತು **ಪರೋಕ್ಷಕೃತ**— ಈ ಎರಡು ವಿಧವೂ ಸೇರಿದ ಕೆಲವು ಋಕ್ಕುಗಳಲ್ಲಿ ಸ್ತೋತ್ರಮಾಡುವ ಜನರು ಪ್ರತ್ಯಕ್ಷಕೃತರೆಂದೂ ಸ್ತೋತ್ರಮಾಡಲ್ಪಡುವ ದೇವತೆಗಳು ಪರೋಕ್ಷಕೃತರೆಂದೂ ವ್ಯವಹರಿಸಲ್ಪಡುವರು.

ಉದಾ— **ಮಾ ಚಿದನ್ಯದ್ವಿಶಂಸತ** ॥
**ಕಣ್ವಾ ಅಭಿ ಪ್ರ ಗಾಯತ** ॥
**ಉಪ ಪ್ರೇತ ಕುಶಿಕಾಶ್ಚೇತಯಧ್ವಂ** ॥ ಇತ್ಯಾದಿ.

(೪) **ಆಧ್ಯಾತ್ಮಿಕ**— ಸ್ತುತಿಸಲ್ಪಡುವ ದೇವತೆಗಳೇ ತಾವು ಮಾತನಾಡಿದಂತೆ ಉತ್ತಮಪುರುಷಪ್ರಯೋಗದಿಂದ ವಾಕ್ಯಗಳನ್ನು ಹೇಳಿರುವುದು.

ಉದಾ— **ಅಹಂ ಭುವಂ ವಸುನಃ ಪೂರ್ವಸ್ಪತಿಃ** ॥
**ಇತಿ ವಾ ಇತಿ ಮೇ ಮನಃ** ॥
**ಅಹಂ ರುದ್ರೇಭಿರ್ವಸುಭಿಶ್ಚರಾಮಿ** ॥ ಇತ್ಯಾದಿ.

(೫) **ಸ್ತುತಿ**— ದೇವತೆಗಳ ಅಥವಾ ಇತರ ವ್ಯಕ್ತಿಗಳ ಸ್ತುತಿಮಾತ್ರವಿರುವ ಋಕ್ಕು.

ಉದಾ— **ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ** ॥ ಇತ್ಯಾದಿ

(೬) **ಆಶೀಃ**— ಆಶೀರ್ವಾದ ಅಥವಾ ಒಳ್ಳೆಯದನ್ನು ಹಾರೈಸುವ ಮಂತ್ರವು.

ಉದಾ— **ಸುಚಕ್ಷಾ ಅಹಮಕ್ಷಿಭ್ಯಾಂ** ॥ ಇತ್ಯಾದಿ.

(೭) **ಶಪಥ ಮತ್ತು ಅಭಿಶಾಪ**— ಪ್ರತಿಜ್ಞೆ ಮತ್ತು ಮತ್ತೊಬ್ಬನಿಗೆ ಕೆಡುಕಾಗಲಿ ಎಂದು ಬಯಸಿ ಶಾಪ ಕೊಡುವುದು.

ಉದಾ— **ಅದ್ಯಾ ಮುರೀಯ ಯತಿ ಯಾತುಧಾನೋ ಅಸ್ಮಿ** ||
**ಅಧಾ ಸ ವೀರೈರ್ದಶಭಿರ್ವಿಯೂಯಾಃ** || ಇತ್ಯಾದಿ

(೮) **ಕಸ್ಯಚಿದ್ಭಾವ**—ಯಾವುದಾದರೂ ಒಂದು ವಿಷಯದ ವರ್ಣನೆ ಅಥವಾ ಪ್ರಸ್ತಾಪವಿರುವುದು.

ಉದಾ—**ನ ಮೃತ್ಯುರಾಸೀದಮೃತಂ ನ ತರ್ಹಿ** |
**ತಮ ಆಸೀತ್ತಮಸಾ ಗೂಳ್ಹಮಗ್ರೇ** || ಇತ್ಯಾದಿ.

(೯) **ಪರಿದೇವನಾ**—ವ್ಯಥೆಪಡುವುದು.

ಉದಾ—**ಸುದೇವೋ ಅದ್ಯ ಪ್ರಪತೇದನಾವೃತ್** ||
**ನ ವಿಜಾನಾಮಿ ಯದಿ ವೇದಮಸ್ಮಿ** || ಇತ್ಯಾದಿ.

(೧೦) **ನಿಂದಾ**—ನಿಂದಾ ಅಥವಾ ಪ್ರಶಂಸೆ ಇರುವ ಮಂತ್ರ.

ಉದಾ—**ಕೇವಲಾಘೋ ಭವತಿ ಕೇವಲಾದೀ** ||
**ಭೋಜಸ್ಯೇದಂ ಪುಷ್ಕರಣೀವ ವೇಷ್ಮ** (**ಅತ್ರ ದ್ಯೂತನಿಂದಾ ಚ ಕೃಷಿಪ್ರಶಂಸಾ ಚ**)

ಇತ್ಯಾದಿ. ಮೇಲೆ ಉದಾಹರಣೆಗಾಗಿ ಕೊಟ್ಟಿರುವ ಮಂತ್ರಗಳು ಆಯಾ ಋಕ್ಕುಗಳ ಪ್ರಾರಂಭಮಂತ್ರವು. ಪೂರ್ತಾ ಋಕ್ಕುಗಳನ್ನು ಋಕ್ಕುಗಳ ವರ್ಣಾನುಕ್ರಮಣಿಯಲ್ಲಿ (ಋ. ಸಂ. ಭಾಗ ೧ ಪುಟ 717-920 ನ್ನು) ನೋಡಿ ತಿಳಿಯ ಬೇಕು. ಮೇಲೆ ವಿವರಿಸಿರುವ ಹತ್ತು ವಿಧವಾದ ಮಂತ್ರಗಳಲ್ಲಿ ೭ ನೆಯದಾದ ಶಪಥ ಮತ್ತು ಅಭಿಶಾಪವೆಂಬ ವಿಷಯ) ವಿರುವ ಋಕ್ಕಿನ ಉದಾಹರಣೆಗಾಗಿ **ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ** (ಋ. ಸಂ. ೭-೧೦೪-೧೫, ಎಂಬ ಋಕ್ಕನ್ನೇ ಯಾಸ್ಕರು ಉದಾಹರಣೆಗಾಗಿ ಪಠಿಸಿರುವರು.

|| ಸಂಹಿತಾಪಾಠಃ ||

**ಏವಾ ನ ಇಂದೋ ಅಭಿ ದೇವವೀತಿಂ ಪರಿ ಸ್ರವ ನಭೋ ಅರ್ಣಶ್ಚಮೂಷು |**
**ಸೋಮೋ ಅಸ್ಮಭ್ಯಂ ಕಾಮ್ಯಂ ಬೃಹಂತಂ ರಯಿಂ ದದಾತು ವೀರವಂತ-**
**ಮುಗ್ರಂ || ೨೧ ||**

|| ಪದಪಾಠಃ ||

**ಏವ | ನಃ | ಇಂದೋ ಇತಿ | ಅಭಿ | ದೇವऽವೀತಿಂ | ಪರಿ | ಸ್ರವ | ನಭಃ | ಅರ್ಣಃ | ಚಮೂಷು |**
**ಸೋಮಃ | ಅಸ್ಮಭ್ಯಂ | ಕಾಮ್ಯಂ | ಬೃಹಂತಂ | ರಯಿಂ | ದದಾತು | ವೀರऽವಂತಂ | ಉಗ್ರಂ || ೨೧ ||**

॥ ಸಾಯಣಭಾಷ್ಯಂ ॥

**ಹೇ ಇಂದೋ ಸೋಮ ನೋಽಸ್ಮದೀಯಮೇವ ದೇವವೀತಿಂ। ದೇವಾನಾಂ ವೀತಿರ್ಭಕ್ಷಣಂ ಗಮನಂ ವಾ ಯಸ್ಮಿನ್ ಸ ದೇವವೀತಿರ್ಯಜ್ಞಃ। ತಮಭಿಲಕ್ಷ್ಯ ನಭೋ ನಭಸೋ ದ್ಯುಲೋಕಾದರ್ಣ ಉದಕಂ। ಅನೇನ ಪವಿತ್ರಾನ್ನಿರ್ಗತಃ ಸೋಮರಸೋಽಭಿಧೀಯತೇ। ತಂ ರಸಂ ಚಮೂಷು ಚಮಸೇಷು ಪರಿ ಸ್ರವ। ಪರಿತಃ ಕ್ಷರ। ತತಃ ಸೋಮಃ ಕಾಮ್ಯಂ ಕಾಮ್ಯಮಾನಂ ಬೃಹಂತಂ ಪ್ರವೃದ್ಧಂ ವೀರವಂತಂ ಪುತ್ರೈರ್ಯುಕ್ತಮುಗ್ರಮುದ್ಗೂರ್ಣಬಲಂ ರಯಿಂ ಧನಮಸ್ಮಭ್ಯಂ ದದಾತು। ಪ್ರಯಚ್ಛತು॥**

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ। **ನ ಏವ ದೇವವೀತಿಂ ಅಭಿ**—ನಮ್ಮ ಯಜ್ಞವನ್ನು ಮಾತ್ರ ಲಕ್ಷಿಸಿ। **ನಭಃ**—ದ್ಯುಲೋಕದಿಂದ। **ಅರ್ಣಃ**—ಉದಕವನ್ನು। **ಚಮೂಷು**—ಚಮೂ ಪಾತ್ರೆಗಳಲ್ಲಿ। **ಪರಿ ಸ್ರವ**—ಸುರಿಸು। **ಸೋಮಃ**—ಸೋಮನು। **ಕಾಮ್ಯಂ**—ಆಕರ್ಷಕವಾದುದೂ। **ಬೃಹಂತಂ**—ಪ್ರವೃದ್ಧವಾದುದೂ। **ವೀರವಂತಂ**—ಪುತ್ರಯುಕ್ತವಾದುದೂ। **ಉಗ್ರಂ**—ಅತ್ಯಧಿಕವಾದ ಶಕ್ತಿಯುಳ್ಳದ್ದೂ ಆದ। **ರಯಿಂ**—ಧನವನ್ನು। **ಅಸ್ಮಭ್ಯಂ**—ನಮಗೆ। **ದದಾತು**—ಕೊಡಲಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ನಮ್ಮ ಯಜ್ಞವನ್ನು ಮಾತ್ರ ಲಕ್ಷಿಸಿ ದ್ಯುಲೋಕದಿಂದ ಉದಕವನ್ನು ಚಮೂ ಪಾತ್ರೆಗಳಲ್ಲಿ ಸುರಿಸು. ಸೋಮನು ಆಕರ್ಷಕವಾದುದೂ, ಪ್ರವೃದ್ಧವಾದುದೂ, ಪುತ್ರಯುಕ್ತವಾದುದೂ, ಅತ್ಯಧಿಕವಾದ ಶಕ್ತಿಯುಳ್ಳದೂ ಆದ ಧನವನ್ನು ನಮಗೆ ಕೊಡಲಿ.

## English Translation

So, Indu, at our sacrifice pour the water from the firmament into the vessels; may Soma bestow upon us desirable riches in abundance with male offspring and strength.

॥ ವಿಶೇಷವಿಷಯಗಳು ॥

**ದೇವವೀತಿಂ—ದೇವಾನಾಂ ವೀತಿರ್ಭಕ್ಷಣಂ ಗಮನಂ ವಾ ಯಸ್ಮಿನ್ ಸ ದೇವವೀತಿರ್ಯಜ್ಞಃ।** ದೇವತೆಗಳು ಸ್ವರ್ಗದಿಂದ ಬಂದು ಹವಿಸ್ಸನ್ನು (ಅಗ್ನಿಮುಖೇನ) ಭಕ್ಷಿಸುವ ಸ್ಥಳಕ್ಕೆ ಯಜ್ಞವೆಂದು ಹೆಸರು. ಯಜ್ಞಗಳಲ್ಲಿ ಹೋತೃವೇ ಮೊದಲಾದ ಋತ್ವಿಜರು ಇಷ್ಟದೇವತೆಗಳನ್ನು ಮಂತ್ರಪಠನಪುರಸ್ಸರವಾಗಿ ಆಹ್ವಾನಿಸಿ ಅವರಿಗೆ ಅಗ್ನಿಯಲ್ಲಿ ಆಹುತಿಗಳನ್ನರ್ಪಿಸುವರು ಅದನ್ನು ದೇವತೆಗಳು ಸ್ವೀಕರಿಸುವ ಈ ಕರ್ಮಕ್ಕೆ ಯಜ್ಞವೆಂದು ಹೆಸರು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

**ನಭಃ ಅರ್ಣಃ ಚಮೂಷು ಪರಿಸ್ರವ— ಅನೇನ ಪವಿತ್ರಾನ್ನಿರ್ಗತಃ ಸೋಮರಸೋಽಭಿಧೀಯತೇ।** ಎಲೈ ಸೋಮನೇ, ಸ್ವರ್ಗದಲ್ಲಿರುವ ಉದಕವನ್ನು ಈ ಚಮೂಪಾತ್ರೆಗಳಲ್ಲಿ ಸುರಿಸು. ಇಲ್ಲಿ ಸ್ವರ್ಗದ ಉದಕಗಳು ಎಂದರೆ ಏನು ? ಹಿಂದೆ ಸೋಮಲತೆಗಳು ಸ್ವರ್ಗದಲ್ಲಿದ್ದುವು. ಅದನ್ನು ಗಾಯತ್ರಿಯು ಶ್ಯೇನಪಕ್ಷಿರೂಪದಿಂದ

ಹೋಗಿ ಭೂಮಿಗೆ ತಂದಿತು. ಆ ಲತೆಗಳನ್ನು ಯಜ್ಞದಲ್ಲಿ ಋತ್ವಿಕ್ಕುಗಳು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವರು ಹಿಂಡಿ ತೆಗೆದ ರಸವು ಶೋಧನೆಗಾಗಿ ಇಟ್ಟಿರುವ ದಶಾಪವಿತ್ರವೆಂಬ ಪಾತ್ರೆಯ ಬಳಿಗೆ ಹರಿದುಹೋಗುವುದು. ಈ ರಸವು ಸೋಮಲತೆಗಳಿಂದ ಉತ್ಪನ್ನವಾಗಿರುವುದು. ಸೋಮಲತೆಗಳು ಸ್ವರ್ಗದಲ್ಲಿದ್ದವು. ಆದ್ದರಿಂದ ಸೋಮರಸವು ಸ್ವರ್ಗದಲ್ಲಿದ್ದ ರಸವೆಂದು ಇಲ್ಲಿ ಋಷಿಯು ವರ್ಣಿಸಿದಾನೆ.

**ಸೋಮಃ ಅಸ್ಮಭ್ಯಂ ಬೃಹಂತಂ ಉಗ್ರಂ ವೀರವಂತಂ ಕಾಮ್ಯಂ ರಯಿಂ ದದಾತು**—ನಾವು ಅಪೇಕ್ಷಿಸುವ ಧನವನ್ನೂ, ಪ್ರವೃದ್ಧಮಾನರೂ ಶೂರರೂ ಆದ ಪುತ್ರರನ್ನೂ ಸೋಮದೇವನು ನಮಗೆ ಅನುಗ್ರಹಿಸಿ ಕೊಡಲಿ ಎಂದಭಿಪ್ರಾಯವು. ಋಗ್ವೇದದ ಅನೇಕ ಋಕ್ಕುಗಳಲ್ಲಿ—ಅದರಲ್ಲಿಯೂ ಸೂಕ್ತದ ಉಪಸಂಹಾರರೂಪವಾದ ಕೊನೆಯ ಋಕ್ಕುಗಳಲ್ಲಿ—ವೀರರಾದ ಪುತ್ರಾದಿಗಳನ್ನು ಕೊಡಬೇಕೆಂದು ಋಷಿಗಳು ದೇವತೆಗಳನ್ನು ಪ್ರಾರ್ಥಿಸಿರುವುದು ಕಂಡು ಬರುತ್ತದೆ. ಧನವೇನೋ ಎಲ್ಲರಿಗೂ ಬೇಕಾದ ವಸ್ತುವೇ ಆದರೂ ವೀರರಾದ ಪುತ್ರಾದಿಗಳ ಅವಶ್ಯಕತೆಯೇನು ಎಂದರೆ ಆ ಪ್ರಾಚೀನಕಾಲದಲ್ಲಿ ಆರ್ಯರು ಇಲ್ಲಿನ ಪೂರ್ವನಿವಾಸಿಗಳೂ, ದುಷ್ಟರೂ ಆದ ಅನಾರ್ಯರೊಡನೆ ಪ್ರಬಲವಾದ ಯುದ್ಧಗಳನ್ನು ಮಾಡಲೇಬೇಕಾಗಿತ್ತು. ಪೂರ್ವನಿವಾಸಿಗಳಾದ ಈ ಕಪ್ಪುಜನರು ರಾತ್ರಿಕಾಲಗಳಲ್ಲಿ ಆರ್ಯರ ಮೇಲೆ ಬಿದ್ದು ಮೋಸದಿಂದಲೂ ಕುಟಿಲೋಪಾಯಗಳಿಂದಲೂ ಯುದ್ಧಮಾಡುತ್ತಿದ್ದರು. ಯಜ್ಞಯಾಗಾದಿಗಳಿಗೆ ವಿಘ್ನವನ್ನುಂಟುಮಾಡುತ್ತಿದ್ದರು. ಆದ್ದರಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೂ ದೇಶದಲ್ಲಿ ಮುಂದುವರೆದು ಅಲ್ಲಲ್ಲಿ ನೆಲೆಸುವುದಕ್ಕಾಗಿಯೂ ಆರ್ಯರು ಕಪ್ಪುಜನರೊಡನೆ ಭಯಂಕರವಾದ ಯುದ್ಧಗಳನ್ನು ಮಾಡಬೇಕಾಗಿತ್ತು. ಈ ಕಾರಣಗಳಿಗಾಗಿ ಶೂರರಾದ ಯುದ್ಧಭಟರ ಅವಶ್ಯಕತೆ ಆ ಕಾಲದಲ್ಲಿ ಬಹಳವಾಗಿತ್ತು. ಆದ್ದರಿಂದ ವೀರರಾದ ಪುತ್ರಾದಿಗಳನ್ನು ಅನುಗ್ರಹಿಸಬೇಕೆಂದು ದೇವತೆಗಳನ್ನು ಪ್ರಾರ್ಥಿಸುವುದು ಸಹಜವಾಗಿತ್ತು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ತಕ್ಷದ್ಯದೀ ಮನಸೋ ವೇನತೋ ವಾಗ್ಜ್ಯೇಷ್ಠಸ್ಯ ವಾ ಧರ್ಮಣಿ ಕ್ಷೋರ-
ನೀಕೇ ।
ಆದೀಮಾಯನ್ವರಮಾ ವಾವಶಾನಾ ಜುಷ್ಟಂ ಪತಿಂ ಕಲಶೇ ಗಾವ
ಇಂದುಂ ॥ ೨೨ ॥

॥ ಪದಪಾಠಃ ॥

ತಕ್ಷತ್ । ಯದಿ । ಮನಸಃ । ವೇನತಃ । ವಾಕ್ । ಜ್ಯೇಷ್ಠಸ್ಯ । ವಾ । ಧರ್ಮಣಿ । ಕ್ಷೋಃ । ಅನೀಕೇ ।
ಆತ್ । ಈಂ । ಆಯನ್ । ವರಂ । ಆ । ವಾವಶಾನಾಃ । ಜುಷ್ಟಂ । ಪತಿಂ । ಕಲಶೇ । ಗಾವಃ । ಇಂದುಂ ॥

॥ ಸಾಯಣಭಾಷ್ಯಂ ॥

ವೇನತೇಃ । ವೇನೋ ವೇನತೇಃ ಕಾಂತಿಕರ್ಮಣಃ ಇತಿ ಯಾಸ್ಕಃ । ನಿ. ೧೦–೩೮ । ಕಾಮಯಮಾನಸ್ಯ ಮನಸಃ । ಮನ್ಯತೇಃ ಸ್ತುತಿಕರ್ಮಣಃ । ಸ್ತೋತುರ್ವಾಕ್ ಸ್ತುತಿಲಕ್ಷಣಾ ಯದ್ಯೇನಂ ತಕ್ಷತ್ ಸಂಸ್ಕರೋತಿ । ವಾಶಬ್ದ ಉಪಮಾರ್ಥೇ । ಯಥಾ ಧರ್ಮಣಿ ॥ ನಿಮಿತ್ತಾತ್ಕರ್ಮಸಂಯೋಗೇ ॥ ಪಾ. ೨–೩–೩೬–೬ । ಇತಿ ಸಪ್ತಮೀ ॥ ಧಾರಕಂ ಯೋಗಕ್ಷೇಮವಿಷಯಂ ಕರ್ಮೋದ್ದಿಶ್ಯ ಕ್ಷೋಃ ಶಬ್ದಾಯಮಾನಸ್ಯಾನೀಕೇ ಮುಖೇ ತತ್ರ ಸ್ಥಿತಸ್ಯ ಜಾನಪದಿಕಸ್ಯ ವಾಗ್ಜ್ಯೇಷ್ಠಸ್ಯ । ದ್ವಿತೀಯಾರ್ಥೇ ಷಷ್ಠೀ । ಪ್ರಶಸ್ಯತಮಂ ರಾಜಾನಂ ಯಥಾ ಸ್ತೌತಿ ತಥಾ ಸ್ತೋತುರ್ವಾಕ್ ಸೋಮಂ ಸ್ತೌತೀತ್ಯರ್ಥಃ । ಆದನಂತರಮೇವ ವರಂ ವರಣೀಯಂ ಜುಷ್ಟಂ ದೇವಾನಾಂ ಮದಾಯ ಪರ್ಯಾಪ್ತಂ ಪತಿಂ ಸರ್ವಸ್ಯ ಪಾಲಕಂ ಕಲಶೇ ಸ್ಥಿತಮಿಂದುಮಿಮಮೇನಂ ಸೋಮಂ ವಾವಶಾನಾಃ ಕಾಮಯಮಾನಾ ಗಾವ ಆಯನ್ । ಪಯಸಾ ಸ್ವೀಯೇನ ಮಿಶ್ರಯಿತುಮಾಗಚ್ಛಂತಿ ॥

॥ ಪ್ರತಿಪದಾರ್ಥ ॥

**ಮನಸಃ**—ಸ್ತೋತ್ರಮಾಡಬೇಕೆಂದು । **ವೇನತೇಃ**—ಬಯಸುವ ಸ್ತುತಿಕರ್ತನ । **ವಾಕ್**—ಪ್ರಶಂಸಾ ವಾಕ್ಯವು । **ಕ್ಷೋಃ**—ಶಬ್ದಮಾಡುತ್ತಿರುವ । **ಅನೀಕೇ**—ಸೈನ್ಯದ ಮುಂಭಾಗದಲ್ಲಿ । **ಜ್ಯೇಷ್ಠಸ್ಯ**—ನಾಯಕ ನಾಗಿರುವ । **ಧರ್ಮಣಿ**—ಜನರ ಪೋಷಕನಾದ ರಾಜನನ್ನು । **ವಾ**—ಯಾವಪ್ರಕಾರವಾಗಿ । **ಯದಿ ತಕ್ಷತ್**—ಹೊಗಳುವುದೋ ಆ ರೀತಿ । **ವೇನತಃ ವಾಕ್**—ಸ್ತುತಿಕರ್ತನ ವಾಕ್ಯವು ಸೋಮನನ್ನು ಸ್ತುತಿಸುತ್ತದೆ. । **ಆತ್**—ಅನಂತರ । **ಈಂ**—ಈ ಸೋಮನನ್ನು । **ವಾವಶಾನಾಃ**—ಅಪೇಕ್ಷಿಸುವ । **ಗಾವಃ**—ಗೋವುಗಳು । **ಕಲಶೇ**—ದ್ರೋಣಕಲಶದಲ್ಲಿರುವ । **ಜುಷ್ಟಂ**—ದೇವತೆಗಳ ತೃಪ್ತಿಗಾಗಿ ಹಿಂಡಲ್ಪಟ್ಟಿರುವ । **ಪತಿಂ**—ಸರ್ವರಿಗೂ ಪಾಲಕ ನಾದ । **ವರಂ**—ಎಲ್ಲರಿಗೂ ಬೇಕಾದವನಾದ । **ಇಂದು**—ಈ ಸೋಮದೇವನನ್ನು । **ಆ ಅಯನ್**—(ತಮ್ಮ ಕ್ಷೀರಾದಿಗಳಿಂದ ಮಿಶ್ರಮಾಡುವುದಕ್ಕಾಗಿ) ಸಮೀಪಿಸುತ್ತವೆ.

॥ ಭಾವಾರ್ಥ ॥

ಸೈನ್ಯದ ಮುಂಭಾಗದಲ್ಲಿ ಸೇನಾನಾಯಕನಾಗಿಯೂ ಜನರ ಎಂದರೆ ಪ್ರಜೆಗಳ ಪೋಷಕನಾಗಿಯೂ ಇರುವ ರಾಜನನ್ನು ಹೊಗಳುತ್ತಿರುವ (ವಂದಿ ಮಾಗಧರ) ಹೊಗಳಭಟ್ಟರ ವಾಕ್ಯವು ಸ್ತುತಿಸುವಂತೆ ಸ್ತೋತ್ರಮಾಡುತ್ತಿರುವ ಋತ್ವಿಗ್ಜನರ ವಾಕ್ಯವು ಈ ಸೋಮನನ್ನು ಸ್ತುತಿಸುತ್ತದೆ. ಅನಂತರ ಸೋಮರಸದ ಬಳಿಗೆ ಹೋಗಲಿಚ್ಛಿಸುವ ಗೋವುಗಳು ದೇವತೆಗಳ ತೃಪ್ತಿಗಾಗಿ ಹಿಂಡಲ್ಪಟ್ಟ ದ್ರೋಣಕಲಶದಲ್ಲಿರುವ ಎಲ್ಲರಿಗೂ ಬೇಕಾದ ಸೋಮರಸದ ಬಳಿಗೆ ತಮ್ಮ ಹಾಲನ್ನು ಮಿಶ್ರಮಾಡುವುದಕ್ಕಾಗಿ ಹೋಗುತ್ತವೆ.

English Translation

When the praise of the zealous worshipper sanctifies him as that of a noisy (crowd) in front (praises) a distinguished (prince) for the support (he affords); then the cows come to the excellent exhilarating Indu, the lord (of all, abiding) in the pitcher, eager to gratify him (with their milk).

|| ವಿಶೇಷವಿಷಯಗಳು ||

ಸೇನಾನಾಯಕನೂ ಪ್ರಜೆಗಳ ಧಾರಕನೂ ಆದ ರಾಜನನ್ನು ಹೊಗಳುಭಟ್ಟರು ಯಾವರೀತಿ ತಮ್ಮ ಸ್ತುತಿವಾಕ್ಯಗಳಿಂದ ಹೊಗಳುವರೋ ಅದರಂತೆ ಯಜ್ಞದಲ್ಲಿ ಋತ್ವಿಗ್ಜನರು ಆಗತಾನೇ ದೇವತೆಗಳ ಪ್ರೀತ್ಯರ್ಥವಾಗಿ ಹಿಂಡಲ್ಪಟ್ಟ ಸೋಮರಸವನ್ನು ನಾನಾವಿಧ ಸ್ತುತಿವಾಕ್ಯಗಳಿಂದ ಸ್ತುತಿಸುತ್ತಾರೆ. ಅನಂತರ ಗೋವುಗಳಿಂದ ಲಬ್ಧವಾದ ಕ್ಷೀರಾದಿ ಆಶ್ರಯಣದ್ರವ್ಯಗಳನ್ನು ಆ ಸೋಮರಸಕ್ಕೆ ಮಿಶ್ರಮಾಡುತ್ತಾರೆ ಎಂದು ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಪ್ರ ದಾನುದೋ ದಿವ್ಯೋ ದಾನುಪಿನ್ವ ಋತಮೃತಾಯ ಪವತೇ ಸುಮೇಧಾಃ |
ಧರ್ಮಾ ಭುವದ್ವೃಜನ್ಯಸ್ಯ ರಾಜಾ ಪ್ರ ರಶ್ಮಿಭಿರ್ದಶಭಿರ್ಭಾರಿ ಭೂಮ ||೨೩||

|| ಪದಪಾಠಃ ||

ಪ್ರ | ದಾನುऽದಃ | ದಿವ್ಯಃ | ದಾನುऽಪಿನ್ವಃ | ಋತಂ | ಋತಾಯ | ಪವತೇ | ಸುऽಮೇಧಾಃ |
ಧರ್ಮಾ | ಭುವತ್ | ವೃಜನ್ಯಸ್ಯ | ರಾಜಾ | ಪ್ರ | ರಶ್ಮಿऽಭಿಃ | ದಶऽಭಿಃ | ಭಾರಿ | ಭೂಮ || ೨೩ ||

|| ಸಾಯಣಭಾಷ್ಯಂ ||

ದಿವ್ಯೋ ದಿವಿ ಭವೋ ದಾನುದೋ ದಾತೃಭ್ಯೋ ಧನಾದೀನಾಂ ದಾತಾ| ಕೇದೇವಾಹ| ದಾನುಪಿನ್ವಃ|| ಪಿವಿ ಸೇಚನೇ | ಕರ್ಮಣ್ಯಣ್ | ಪಾ. ೩-೨-೧ | ಇತ್ಯಣ್ || ದಾತೃಭ್ಯಃ ಕಾಮಾನಾಂ ಕ್ಷಾರಯಿತಾ ಸುಮೇಧಾಃ ಶೋಭನಪ್ರಜ್ಞಃ ಸೋಮ ಋತಾಯ ಸತ್ಯಭೂತಾಯೇಂದ್ರಾಯರ್ತಂ ಸತ್ಯಭೂತಮಾತ್ಮೀಯಂ ರಸಂ ಪವತೇ | ಪ್ರಕರ್ಷೇಣ ಕ್ಷರತಿ | ರಾಜಾ ದೀಪ್ಯಮಾನಃ ಸೋಮೋ ವೃಜನ್ಯಸ್ಯ ಸಾಧುಬಲಸ್ಯ ಧರ್ಮಾ ಧಾರಯಿತಾ ಭುವತ್ | ಭವತಿ | ಕಿಂಚ ದಶಭಿರೇತತ್ಸಂಖ್ಯಾಕಾಭೀ ರಶ್ಮಿಭಿಃ ಕರ್ಮಕರಣಾರ್ಥಮುಚ್ಛ್ರಿತಾನಾಭಿರಂಗುಲಿಭಿರ್ಭೂಮ ಪ್ರಭೂತಂ ಪ್ರ ಭಾರಿ | ಪ್ರಧಾರ್ಯತೇ || ಚಿಣಿ ರೂಪಂ ||

|| ಪ್ರತಿಪದಾರ್ಥ ||

**ದಿವ್ಯಃ**—ದ್ಯುಲೋಕೋತ್ಪನ್ನನೂ | **ದಾನುದಃ**—ದಾತೃಗಳಿಗೆ ಉಪಕಾರಕನೂ | **ದಾನುಪಿನ್ವಃ**—ದಾತೃಗಳಿಗೆ ಇಷ್ಟಾರ್ಥಪ್ರದನೂ | **ಸುಮೇಧಾಃ**—ಉತ್ತಮವಾದ ಪ್ರಜ್ಞೆಯುಳ್ಳವನೂ ಆದ ಸೋಮನು | **ಋತಾಯ**—ಸತ್ಯಾತ್ಮಕನಾದ ಇಂದ್ರನಿಗಾಗಿ | **ಋತಂ**—ಸತ್ಯಾತ್ಮಕವಾದ ತನ್ನ ರಸವನ್ನು | **ಪ್ರ ಪವತೇ**—ಹರಿಸುತ್ತಾನೆ. | **ರಾಜಾ**—ಪ್ರಕಾಶಮಾನನಾದ ಸೋಮನು | **ವೃಜನ್ಯಸ್ಯ**—ಉತ್ತಮವಾದ ಶಕ್ತಿಗೆ | **ಧರ್ಮಾ**—ಧಾರಕನಾಗಿ | **ಭುವತ್**—ಆಗಿದ್ದಾನೆ. | **ದಶಭಿಃ ರಶ್ಮಿಭಿಃ**—ಹತ್ತು ಬೆರಳುಗಳಿಂದಲೂ | **ಭೂಮ**—ಅಧಿಕವಾಗಿ | **ಪ್ರ ಭಾರಿ**—ಹಿಡಿಯಲ್ಪಡುತ್ತಾನೆ.

|| ಭಾವಾರ್ಥ ||

ದ್ಯುಲೋಕೋತ್ಪನ್ನನೂ, ದಾತೃಗಳಿಗೆ ಉಪಕಾರಕನೂ, ಅವರಿಗೆ ಇಷ್ಟಾರ್ಥಪ್ರದನೂ, ಉತ್ತಮವಾದ ಪ್ರಜ್ಞೆಯುಳ್ಳವನೂ ಆದ ಸೋಮನು ಸತ್ಯಾತ್ಮಕನಾದ ಇಂದ್ರನಿಗಾಗಿ ಸತ್ಯಾತ್ಮಕವಾದ ತನ್ನ ರಸವನ್ನು ಹರಿಸುತ್ತಾನೆ. ಪ್ರಕಾಶಮಾನನಾದ ಸೋಮನು ಉತ್ತಮವಾದ ಶಕ್ತಿಗೆ ಧಾರಕನಾಗಿದ್ದಾನೆ. ಹತ್ತು ಬೆರಳುಗಳಿಂದಲೂ ಅಧಿಕವಾಗಿ ಹಿಡಿಯಲ್ಪಡುತ್ತಾನೆ.

## English Translation.

The divine benefactor of givers, pouring (boons) on givers, the intelligent (Soma) distils his true beverage for true (Indra); the radiant (Soma) is the upholder of strength, he is entirely restrained by the ten fingers.

ವಿಶೇಷವಿಷಯಗಳು

**ದಾನುದಃ**— **ದಾತೃಭ್ಯೋ ಧನಾದೀನಾಂ ದಾತಾ** | ತನ್ನನ್ನು ಪ್ರಾರ್ಥಿಸುವವರಿಗೆ ಧನಾದಿಗಳನ್ನು ಕೊಡುವವನು.

**ದಾನುಪಿನ್ವಃ**— **ಪಿವಿ ಸೇಚನೇ | ದಾತೃಭ್ಯಃ ಕಾಮಾನಾಂ ಕ್ಷಾರಯಿತಾ** | ಧನಾದಿಗಳನ್ನು ಬಯಸುವವರಿಗೆ ಕಾಮವರ್ಷಕನಂತೆ ಇಷ್ಟಾರ್ಥಗಳನ್ನು ಸ್ರವಿಸುವವನು ಎಂದರೆ ಸುರಿಸುವವನು ಲತೆಗಳಿಂದ ರಸವು ಯಾವ ರೀತಿ ಸ್ರವಿಸುವುದೋ, ಮೇಘದಿಂದ ವೃಷ್ಟಿಯು ಯಾವ ರೀತಿ ವರ್ಷಿಸುವುದೋ ಅದರಂತೆ, ಸ್ತುತಿಕರ್ತರಿಗೆ ಇಷ್ಟಾರ್ಥಗಳನ್ನು ಸುರಿಸುವವನು ಎಂದರೆ ಯಥೇಷ್ಟವಾಗಿ ಕೊಡುವವನು ಎಂದಭಿಪ್ರಾಯವು.

**ಸುಮೇಧಾಃ ಋತಂ ಋತಾಯ ಪವತೇ**— ಉತ್ತಮವಾದ ಜ್ಞಾನವುಳ್ಳ ಎಂದರೆ ಸರ್ವಜ್ಞನಾದ ಸೋಮನು ಸತ್ಯಾತ್ಮಕವಾದ ತನ್ನ ರಸವನ್ನು ಸತ್ಯಸ್ವಭಾವವುಳ್ಳ ಇಂದ್ರನಿಗಾಗಿ ಸ್ರವಿಸುತ್ತಾನೆ. ಎಂದರೆ ಇಂದ್ರನ ಪಾನಾರ್ಥವಾಗಿ ರಸವು ಲತೆಗಳಿಂದ ಸ್ರವಿಸಿ ಹರಿದುಬರುತ್ತಿರುವುದು.

**ದಿವ್ಯಃ**— **ದಿವಿ ಭವಃ** | ಸ್ವರ್ಗದಲ್ಲಿ ಬೆಳದ ಅಥವಾ ಇದ್ದ ; ಸೋಮಲತೆಗಳು ಪೂರ್ವದಲ್ಲಿ ಸ್ವರ್ಗದಲ್ಲಿದ್ದವೆಂದು ಪ್ರಸಿದ್ಧಿಯು.

**ರಾಜಾ ವೃಜನ್ಯಸ್ಯ ಧರ್ಮಾ ಭುವತ್**— ಎಲ್ಲರಿಗೂ ಒಡೆಯನಾದ ಸೋಮನು ಉತ್ತಮವಾದ ಬಲಕ್ಕೂ (ಶಕ್ತಿಗೂ) ಅಧಿಪತಿಯು. ಸೋಮಪಾನ ಮಾಡುವುದರಿಂದ ಶಕ್ತಿಯು ಹೆಚ್ಚುವುದು. ಆದ್ದರಿಂದ ಶಕ್ತಿಯ ವರ್ಧಕನೆಂದು ಕರೆಯುವರು.

**ರಶ್ಮಿಭಿಃ ದಶಭಿಃ ಭೂಮ ಪ್ರ ಭಾರಿ**— ಋತ್ವಿಗ್ಜನರ ಹತ್ತು ಬೆರಳುಗಳೂ ಈ ಸೋಮನನ್ನು ಧರಿಸುತ್ತವೆ. ಎಂದರೆ, ಋತ್ವಿಗ್ಜನರು ತಮ್ಮ ಹಸ್ತದ ಹತ್ತು ಬೆರಳುಗಳಿಂದಲೂ ಸೋಮರಸವನ್ನು ಹಿಂಡಿ ತೆಗೆಯುತ್ತಾರೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಪವಿತ್ರೇಭಿಃ ಪವಮಾನೋ ನೃಚಕ್ಷಾ ರಾಜಾ ದೇವಾನಾಮುತ ಮ-
ರ್ತ್ಯಾನಾಂ |
ದ್ವಿತಾ ಭುವದ್ರಯಿಪತೀ ರಯೀಣಾಮೃತಂ ಭರತ್ಸುಭೃತಂ ಚಾರ್ವಿಂದುಃ ||

|| ಪದಪಾಠಃ ||

ಪವಿತ್ರೇಭಿಃ | ಪವಮಾನಃ | ನೃऽಚಕ್ಷಾಃ | ರಾಜಾ | ದೇವಾನಾಂ | ಉತ | ಮರ್ತ್ಯಾನಾಂ |
ದ್ವಿತಾ | ಭುವತ್ | ರಯಿऽಪತಿಃ | ರಯೀಣಾಂ | ಋತಂ | ಭರತ್ | ಸುऽಭೃತಂ | ಚಾರು | ಇಂದುಃ ||೨೪||

|| ಸಾಯಣಭಾಷ್ಯಂ ||

ಪವಿತ್ರೇಭಿಃ ಪವಿತ್ರೈಃ ಪವಮಾನಃ ಪೂಯಮಾನೋ ನೃಚಕ್ಷಾ ನೃಣಾಂ ಫಲಾಫಲಯೋರ್ದ್ರಷ್ಟಾ ತಥಾ ದೇವಾನಾಮಿಂದ್ರಾದೀನಾಮುತಾಪಿ ಚ ಮರ್ತ್ಯಾನಾಂ ಮನುಷ್ಯಾಣಾಂ ಏವಮುಭಯೇಷಾಂ ಜನಾನಾಂ ರಾಜಾ ರಯಿಪತಿರ್ಧನಸ್ಯ ಪತಿಃ ನ ತ್ವಲ್ಪಸ್ಯ ಪತಿಃ ಕಿಂತು ರಯೀಣಾಂ ಬಹೂನಾಂ ಧನಾನಾಂ ಸ್ವಾಮಿ| ವೃತ್ತ್ಯವೃತ್ತಿಭ್ಯಾಂ ಸ್ವಾಮಿತ್ವಂ ಬಾಹುಲ್ಯಂ ಚ ವಿವಕ್ಷ್ಯತೇ | ಈದೃಶಃ ಸೋಮೋ ದ್ವಿತಾ ದ್ವಿಧಾ ದೇವೇಷ್ವಪಿ ಚ ಮನುಷ್ಯೇಷು ಭುವತ್ | ಭವತಿ | ಸೋऽಯಮಿಂದುಃ ಸೋಮಃ ಸುಭೃತಂ ಚಾರು ಕಲ್ಯಾಣಮೃತಮುದಕಂ ಭರತ್ | ಬಿಭರ್ತಿ ||

|| ಪ್ರತಿಪದಾರ್ಥ ||

**ಪವಿತ್ರೇಭಿಃ**—ದಶಾಪವಿತ್ರಗಳಿಂದ | **ಪವಮಾನಃ**—ಶುದ್ಧಿಯನ್ನು ಹೊಂದುವವನೂ | **ನೃಚಕ್ಷಾಃ**—ಮಾನವರ ವ್ಯವಹಾರಗಳನ್ನು ಗಮನಿಸುವವನೂ | **ದೇವಾನಾಂ**—ದೇವತೆಗಳಿಗೂ | **ಉತ**—ಮತ್ತು | **ಮರ್ತ್ಯಾನಾಂ**—ಮಾನವರಿಗೂ | **ರಾಜಾ**—ಪ್ರಭುವೂ | **ರಯೀಣಾಂ ರಯಿಪತಿಃ**—ಪ್ರಭೂತವಾದ ಧನಕ್ಕೆ ಒಡೆಯನೂ ಆದ ಸೋಮನು | **ದ್ವಿತಾ**—ಎರಡು ರೂಪಗಳಲ್ಲಿ | **ಭುವತ್**—ಇರುತ್ತಾನೆ | **ಇಂದುಃ**—ಇಂತಹ ಮಹಾತ್ಮನಾದ ಸೋಮನು | **ಸುಭೃತಂ**—ಉತ್ತಮವಾಗಿ ಶೇಖರಿಸಲ್ಪಟ್ಟುದೂ | **ಚಾರು**—ಕಲ್ಯಾಣಾತ್ಮಕವಾದದೂ ಆದ | **ಋತಂ**—ಉದಕವನ್ನು | **ಭರತ್**—ಭರಿಸುತ್ತಾನೆ.

|| ಭಾವಾರ್ಥ ||

ದಶಾಪವಿತ್ರಾದಿಗಳಿಂದ ಶುದ್ಧಿಯನ್ನು ಹೊಂದುವವನೂ, ಮಾನವರ ವ್ಯವಹಾರಗಳನ್ನು ಗಮನಿಸುವವನೂ, ದೇವತೆಗಳಿಗೂ ಮಾನವರಿಗೂ ಪ್ರಭುವೂ, ಪ್ರಭೂತವಾದ ಧನಕ್ಕೆ ಒಡೆಯನೂ ಆದ ಸೋಮನು ಎರಡು ರೂಪಗಳಲ್ಲಿ ಇರುತ್ತಾನೆ. ಇಂತಹ ಮಹಾತ್ಮನಾದ ಸೋಮನು ಉತ್ತಮವಾಗಿ ಶೇಖರಿಸಲ್ಪಟ್ಟುದೂ, ಕಲ್ಯಾಣಾತ್ಮಕವೂ ಆದ ಉದಕವನ್ನು ಭರಿಸುತ್ತಾನೆ.

English Translation.

Purified by the filters the observer of man, the sovereign of both gods and mortals, the lord of abundant wealth (Soma), is twofold ; Indu bears the auspicious collected water.

॥ ಸಂಹಿತಾಪಾಠಃ ॥

ಅರ್ವಾಁ ಇವ ಶ್ರವಸೇ ಸಾತಿಮಚ್ಛೇಂದ್ರಸ್ಯ ವಾಯೋರಭಿ ವೀತಿಮರ್ಷ ।
ಸ ನಃ ಸಹಸ್ರಾ ಬೃಹತೀರಿಷೋ ದಾ ಭವಾ ಸೋಮ ದ್ರವಿಣೋವಿತ್ಪು-
ನಾನಃ ॥ ೨೫ ॥

॥ ಪದಪಾಠಃ ॥

ಅರ್ವಾನ್ಽಇವ । ಶ್ರವಸೇ । ಸಾತಿಂ । ಅಚ್ಛ । ಇಂದ್ರಸ್ಯ । ವಾಯೋಃ । ಅಭಿ । ವೀತಿಂ । ಅರ್ಷ ।
ಸಃ । ನಃ । ಸಹಸ್ರಾ । ಬೃಹತೀಃ । ಇಷಃ । ದಾಃ । ಭವ । ಸೋಮ । ದ್ರವಿಣಃಽವಿತ್ । ಪುನಾನಃ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ಅನ್ನಾರ್ಥಂ ಯುದ್ಧೇಽರ್ವಾನಿವಾಶ್ವೋ ಯಥಾ ಗಚ್ಛತಿ ತದ್ವತ್ತ್ವಂ ಶ್ರವಸೇಽಸ್ಮಾಕಮನ್ನಾರ್ಥಂ ತಥಾ ಸಾತಿಮಚ್ಛ ಧನಲಾಭಂ ಪ್ರತೀಂದ್ರಸ್ಯ ವಾಯೋಶ್ಚ ವೀತಿಂ ಪಾನಮಭ್ಯರ್ಷ । ಅಭಿಗಚ್ಛ । ಐಂದ್ರವಾಯವಗ್ರಹೇ ಹೀಂದ್ರವಾಯೂ ಸಹ ಸೋಮಂ ಪಿಬತ ಇತ್ಯತ್ರ ಸಹೋಪಾದಾನಂ । ಸ ತ್ವಂ ಸಹಸ್ರಾ ಸಹಸ್ರಾಣಿ ಬಹುವಿಧಾನಿ ಬೃಹತೀರ್ಬೃಂಹಿತಾನಿ ಪ್ರವೃದ್ಧಾನೀಷೋಽನ್ನಾನಿ ನೋಽಸ್ಮಭ್ಯಂ ದಾಃ । ಪ್ರಯಚ್ಛ । ಹೇ ಸೋಮ ಪುನಾನಃ ಪೂಯಮಾನಸ್ತ್ವಂ ನೋಽಸ್ಮಭ್ಯಂ ದ್ರವಿಣೋವಿದ್ಧನಸ್ಯ ಲಂಭಯಿತಾ ಭವ ॥ ದ್ರವಿಣಶಬ್ದಾತ್ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಗ್ವಕ್ತವ್ಯಃ । ಕಾ. ೭–೧–೫೧–೩ । ಇತಿ ಸುಗಾಗಮಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ । **ಅರ್ವಾನಿವ**—ಯುದ್ಧದಲ್ಲಿ ಅಶ್ವದಂತೆ । **ಶ್ರವಸೇ**—ಅನ್ನಾರ್ಥವಾಗಿಯೂ । **ಸಾತಿಮಚ್ಛ**—ಧನಲಾಭಾರ್ಥವಾಗಿಯೂ । **ಇಂದ್ರಸ್ಯ**—ಇಂದ್ರನಿಗೂ । **ವಾಯೋಃ**—ವಾಯುವಿಗೂ । **ವೀತಿಂ**—ಪಾನವನ್ನು । **ಅಭ್ಯರ್ಷ**—ಒದಗಿಸು । **ಸಃ**—ನೀನು । **ನಃ**—ನಮಗೆ । **ಸಹಸ್ರಾ**—ಸಹಸ್ರಸಂಖ್ಯೆಯಲ್ಲಿಯೂ । **ಬೃಹತೀಃ**—ಪ್ರಭೂತವಾಗಿಯೂ । **ಇಷಃ**—ಅನ್ನಗಳನ್ನು । **ದಾಃ**—ಕೊಡು । **ಸೋಮ**—ಎಲೈ ಸೋಮದೇವನೇ । **ಪುನಾನಃ**—ಶುದ್ಧಿಯನ್ನು ಹೊಂದುವ ನೀನು । **ದ್ರವಿಣೋವಿತ್**—ಧನಪ್ರಾಪಕನಾಗಿ । **ಭವ**—ಆಗು

॥ ಭಾವಾರ್ಥ ॥

ಎಲೈ ಸೋಮದೇವನೇ, ಯುದ್ಧದಲ್ಲಿ ಅಶ್ವವು ಪ್ರವರ್ತಿಸುವಂತೆ ನೀನೂ ಪ್ರಯತ್ನಿಸಿ ನಮಗೆ ಅನ್ನಾರ್ಥವಾಗಿಯೂ, ಧನಲಾಭಾರ್ಥವಾಗಿಯೂ, ಇಂದ್ರನಿಗೂ, ವಾಯುವಿಗೂ ಪಾನವನ್ನು ಒದಗಿಸು ನಮಗೆ ಸಹಸ್ರಸಂಖ್ಯೆಯಲ್ಲಿಯೂ ಪ್ರಭೂತವಾಗಿಯೂ, ಅನ್ನಗಳನ್ನು ಕೊಡು ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದುವ ನೀನು ಧನಪ್ರಾಪಕನಾಗಿರು.

## Eng'ish Translation.

Hasten (Soma) to give food to Indra and Vayu like a horse, for (the sake of giving us) food, to acquire wealth ; give us abundant thousand-fold food ; Soma, when filtered, become the dispenser of riches.

॥ ವಿಶೇಷವಿಷಯಗಳು ॥

**ಇಂದ್ರಸ್ಯ ವಾಯೋಃ ವೀತಿಂ ಅಭಿ ಅರ್ಷ**—ಇಲ್ಲಿ ಇಂದ್ರನ ಮತ್ತು ವಾಯುವಿನ ಸೋಮಪಾನದ ವಿಷಯದ ಪ್ರಸ್ತಾಪವಿದೆ. ಐಂದ್ರವಾಯವಗ್ರಹದಲ್ಲಿ ಇವರಿಬ್ಬರಿಗೂ ಸೋಮಪಾನವು ಹೇಗೆ ಲಭಿಸಿತು ಮತ್ತು ವಾಯುವು ಎಲ್ಲರಿಗಿಂತಲೂ ಮೊದಲು ಹೇಗೆ ಸೋಮಪಾನಕ್ಕೆ ಅರ್ಹನಾದನು ಎಂಬ ವಿಷಯದಲ್ಲಿ ಒಂದು ಉಪಾಖ್ಯಾನವಿದೆ.

ಯಜ್ಞದಲ್ಲಿ ವಾಯುವೇ ಮೊದಲು ಸೋಮಪಾನಮಾಡಲು ಅರ್ಹನೆಂದೂ ಕಾರಣಾಂತರದಿಂದ ಇಂದ್ರನೂ ವಾಯುವಿನ ಜತೆಯಲ್ಲಿ ಸೇರಿಕೊಂಡು ಇಬ್ಬರೂ ಒಟ್ಟಿಗೆ ಸೋಮಪಾನಮಾಡುವರೆಂದೂ ಪ್ರಸಿದ್ಧವು. ಈ ವಿಷಯದಲ್ಲಿ ಎಂದರೆ ವಾಯುದೇವತೆಯು ಹೇಗೆ ಪ್ರಥಮಸೋಮಪಾನಕ್ಕೆ ಅರ್ಹನು ಎಂಬ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಪೂರ್ವೇತಿಹಾಸವಿದೆ

> **ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯ–ಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನಾ ।**
>
> (ಐ ಬ್ರಾ. ೯-೨೫)

ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಸೋಮಪಾನ ಮಾಡಬೇಕೆಂದು ಅಪೇಕ್ಷಿಸಿ ತಮ್ಮಲ್ಲಿ ಯಾರು ಮೊದಲು ಸೋಮಪಾನವನ್ನು ಮಾಡಬೇಕೆಂದು ವಿವಾದವುಂಟಾಗಲು ಆಗ ಅವರಲ್ಲಿ ನಾನು ಮೊದಲು, ತಾನು ಮೊದಲು ಪಾನಮಾಡಬೇಕೆಂದು ಚರ್ಚೆಗಾರಂಭವಾಯಿತು. ಈ ವಿಷಯವು ಯಾವ ರೀತಿಯಲ್ಲಿಯೂ ಇತ್ಯರ್ಥವಾಗದ್ದರಿಂದ ಅವರೆಲ್ಲರೂ ಸೇರಿ ಸಮಾಲೋಚನೆಮಾಡಿ ಒಂದು ಒಪ್ಪಂದಕ್ಕೆ ಬಂದರು. ಏನೆಂದರೆ, ನಾವೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸೋಣ. ಅದರಲ್ಲಿ ಗೆದ್ದವರು ಮೊದಲು ಸೋಮಪಾನಮಾಡಲು ಅರ್ಹರಾಗುವರು ಎಂದು. ಅದಕ್ಕೆ ಎಲ್ಲರೂ

ಒಪ್ಪಲು ಆಗ ಒಂದು ಸ್ಥಳದಿಂದ ದೂರದಲ್ಲಿರುವ ಮತ್ತೊಂದು ಸ್ಥಳಕ್ಕೆ ಓಡಿಹೋಗಿ ಅಲ್ಲಿರುವ ಒಂದು ಕಲ್ಲುಬಂಡೆಯನ್ನಾಗಲೀ, ವೃಕ್ಷವನ್ನಾಗಲೀ ಮೊದಲು ಸಮೀಪಿಸಿದವರು ಗೆದ್ದವರೆಂದು ಭಾವಿಸಬೇಕು ಎಂದು ಸ್ಪರ್ಧೆಯು ನಿಶ್ಚಯವಾಯಿತು. ಈ ರೀತಿ ಗೆದ್ದವರು ನಮ್ಮಗಳ ಮಧ್ಯದಲ್ಲಿ ಜಯಶಾಲಿಯಾಗಿ ಮೊದಲು ಸೋಮಪಾನವನ್ನು ಮಾಡಬೇಕು ಎಂಬ ಒಪ್ಪಂದಕ್ಕೆ ಎಲ್ಲರೂ ಸಮ್ಮತಿಸಲು ಎಲ್ಲಾ ದೇವತೆಗಳೂ ಏಕಕಾಲದಲ್ಲಿ ಓಡಲು ಪ್ರಾರಂಭಿಸಿದರು. ಓಡುತ್ತಿರುವ ಎಲ್ಲಾ ದೇವತೆಗಳಲ್ಲಿ ವಾಯುವು ಎಲ್ಲರಿಗಿಂತಲೂ ಮುಂದಾಗಿ ನಿರ್ದಿಷ್ಟಸ್ಥಳವನ್ನು ಸೇರಿದನು. ಇಂದ್ರನು ವಾಯುವಿನ ಹಿಂಭಾಗದಲ್ಲಿಯೇ ಬಂದು ಎರಡನೆಯವನಾದನು. ಅನಂತರ ಇಂದ್ರನ ಹಿಂದೆ ಮಿತ್ರಾವರುಣರೂ, ಅವರ ಹಿಂದೆ ಅಶ್ವಿನೀದೇವತೆಗಳೂ ಓಡಿಬಂದು ನಿರ್ದಿಷ್ಟ ಸ್ಥಳವನ್ನು ಸೇರಿದರು. ಆದುದರಿಂದ ಈ ದೇವತೆಗಳಲ್ಲಿ ವಾಯುವೇ ಎಲ್ಲರಿಗಿಂತಲೂ ಮುಂದಾಗಿ ಓಡಿ ಜಯಶಾಲಿಯಾದನು.

**ಸೋಽವೇದಿಂದ್ರೋ ವಾಯುಮುದ್ವೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ತ್ರಿಭಾಗ್ವಾಯುಃ ||**

ವಾಯುವೂ ಅವನ ಹಿಂದೆ ಇಂದ್ರನೂ ಓಡುತ್ತಿರುವಾಗ ಅವರಲ್ಲಿ ಈ ರೀತಿ ಪರಸ್ಪರ ಸಂವಾದವುಂಟಾಯಿತು. ವಾಯುವು ವೇಗವಾಗಿ ಓಡುತ್ತಿರುವುದನ್ನು ಅವನ ಹಿಂದಿದ್ದ ಇಂದ್ರನು ಕಂಡು ಈ ವಾಯುವೇ ಎಲ್ಲರಿಗಿಂತಲೂ ಮುಂಚಿತವಾಗಿ ಓಡಿ ಜಯಶಾಲಿಯಾಗುವನು. ಏನಾದರೂ ಮಾಡಿ ನಾನೂ ಅವನ ಜತೆಗೇ ಓಡಿ ಗೆಲ್ಲಬೇಕು ಎಂದು ನಿಶ್ಚಯಿಸಿ, ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ವಾಯುವಿನ ಸಮೀಪದಲ್ಲಿಯೇ ಓಡಿದನು. ಆದರೂ ವಾಯುವನ್ನು ಹಿಂದಕ್ಕೆ ಹಾಕಿ ತಾನು ಮುಂದುವರಿಯುವ ಸೂಚನೆಯು ಕಾಣದಿರಲು, ಆಗ ಇಂದ್ರನು ವಾಯುವನ್ನು ಕುರಿತು—ಎಲೈ ವಾಯುವೇ, ನಾವಿಬ್ಬರೂ ಎಲ್ಲರಿಗಿಂತಲೂ ಮುಂದಾಗಿರುವೆವು. ಆದ್ದರಿಂದ ನಾವಿಬ್ಬರೂ ಗೆದ್ದಂತೆ ಭಾವಿಸಿ ಪ್ರಥಮಸೋಮಪಾನವನ್ನು ಇಬ್ಬರೂ ಹಂಚಿಕೊಳ್ಳೋಣ. ನನಗರ್ಧ ನಿನಗರ್ಧ, ಈ ರೀತಿ ಇಬ್ಬರೂ ಸಹಕರಿಸಿ ಜಯವನ್ನು ಸಂಪಾದಿಸೋಣ ಎಂದನು. ಆ ಮಾತನ್ನು ಕೇಳಿ ವಾಯುವು—ಎಲೈ ಇಂದ್ರನೇ, ನಿನಗಿಂತಲೂ ನಾನು ಸ್ವಲ್ಪಮಟ್ಟಿಗಾದರೂ ಮುಂದಾಗಿಯೇ ಇರುವೆನು. ಆದ್ದರಿಂದ ನಾನೊಬ್ಬನೇ ಜಯಶಾಲಿಯಾಗುವೆನು. ಪ್ರಥಮ ಸೋಮಪಾನದಲ್ಲಿ ಎಲ್ಲವೂ ನನಗೇ ಸೇರಬೇಕು. ನಿನಗೆ ಅರ್ಧವನ್ನು ಕೊಡುವುದಕ್ಕಾಗುವುದಿಲ್ಲ ಎಂದನು. ಆಗ ಇಂದ್ರನು—ಒಳ್ಳೇದು ಹಾಗಾದರೆ ನನಗೆ ಅರ್ಧಭಾಗ ಬೇಡ. ಮೂರು ಭಾಗಗಳಲ್ಲಿ ಎರಡನ್ನು ನೀನು ತೆಗೆದುಕೊ, ನನಗೆ ಒಂದು ಭಾಗವನ್ನು ಮಾತ್ರ ಕೊಡು ಎನ್ನಲು, ವಾಯುವು ಅದಕ್ಕೂ ಒಪ್ಪದೆ, ಹೇಗಾದರೂ ನಾನೇ ಗೆಲ್ಲುವೆನು. ಎಲ್ಲಾ ಭಾಗವೂ ನನಗೇ ಸೇರುವುದು, ನಿನಗೆ ಮೂರರಲ್ಲಿ ಒಂದು ಭಾಗವನ್ನೂ ಕೊಡಲು ನನಗಿಷ್ಟವಿಲ್ಲ ಎಂದನು. ಆಗ ಇಂದ್ರನು ಮತ್ತೆ ವಾಯುವನ್ನು ಪ್ರಾರ್ಥಿಸುತ್ತಾ, ನನಗೆ ಮೂರರಲ್ಲೊಂದುಭಾಗವೂ ಬೇಡ. ಇನ್ನೂ ಕಡಿಮೆಯಾಗಿ ಎಂದರೆ ನಾಲ್ಕರಲ್ಲೊಂದುಭಾಗವನ್ನು ಕೊಟ್ಟರೆ ಸಾಕು. ಅದಕ್ಕಾದರೂ ಒಪ್ಪು ಎಂದು ಕೇಳಲು, ವಾಯುವು ಹಾಗೆಯೇ ಆಗಲೆಂದು ಅದಕ್ಕೊಪ್ಪಿದನು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ (ಎಂದರೆ ಇಂದ್ರ ಮತ್ತು ವಾಯು ಇಬ್ಬರು ಸೇರಿ ಸೋಮಪಾನಮಾಡುವ ಪಾತ್ರೆಯಲ್ಲಿ) ಇಂದ್ರನಿಗೆ ಒಂದು ಭಾಗವೂ, ವಾಯುವಿಗೆ ಮೂರು ಭಾಗವೂ ಇರಬೇಕೆಂದು ವ್ಯವಸ್ಥೆಯಾಯಿತು.

ತೌ ಸಹೈವೇಂದ್ರವಾಯೂ ಉದಜಯತಾಂ ಸಹ ಮಿತ್ರಾವರುಣೌ ಸಹಾಶ್ವಿನೌ ತ ಏಷಾಮೇತೇ ಯಥೋಜ್ಜಿತಂ ಭಕ್ಷಾ ಇಂದ್ರವಾಯ್ವೋಃ ಪ್ರಥಮೋಽಥ ಮಿತ್ರಾವರುಣಯೋರಥಾಶ್ವಿನೋಃ ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ ।

ಈ ರೀತಿ ಇಂದ್ರ ಮತ್ತು ವಾಯುವು ಸಹಕರಿಸಿ ಸ್ಪರ್ಧೆಯನ್ನು ಗೆದ್ದು ನಿರ್ದಿಷ್ಟಪ್ರದೇಶವನ್ನು ಮೊದಲು ತಲಪಿದರು. ಅವರ ಹಿಂದೆ ಮಿತ್ರಾವರುಣರು ಬಂದು ಸೇರಿದರು. ಅವರ ಹಿಂದೆ ಅಶ್ವಿನೀದೇವತೆಗಳು ಬಂದರು. ಆದ್ದರಿಂದ ಈ ದೇವತೆಗಳ ಮಧ್ಯದಲ್ಲಿ ಅವರು ಸ್ಪರ್ಧೆಯಲ್ಲಿ ಯಾವ ಯಾವ ಸ್ಥಾನವನ್ನು ಪಡೆದರೋ ಆ ಕ್ರಮದಲ್ಲಿ ಅವರು ಸೋಮ ಪಾನಕ್ಕೆ ಅರ್ಹರಾದರು. ಎಂದರೆ ಮೊದಲು ಇಂದ್ರ ವಾಯುಗಳು, ಅನಂತರ ಮಿತ್ರಾವರುಣರು, ಅನಂತರ ಅಶ್ವಿನೀ ದೇವತೆಗಳು ಸೋಮಪಾನ ಮಾಡಲು ವ್ಯವಸ್ಥೆಯುಂಟಾಯಿತು. ಹೀಗೆ ಇಬ್ಬಿಬ್ಬರು ದೇವತೆಗಳು ಸೇರಿ ಸೋಮಪಾನ ಮಾಡುವ ವ್ಯವಸ್ಥೆ ಎಂದು ದ್ವಿದೇವತ್ಯಗ್ರಹದ ಕ್ರಮವು (ಎಂದರೆ ಇಬ್ಬರು ದೇವತೆಗಳು ಒಟ್ಟಿಗೆ ಸೇರಿ ಸೋಮಪಾನ ಮಾಡುವ ಕ್ರಮವು) ರೂಢಿಗೆ ಬಂದಿತು ಆದ್ದರಿಂದ ಇಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗ ಮಾತ್ರ ಸೋಮಪಾನದಲ್ಲಿ ವ್ಯವಸ್ಥೆ ಇರುವುದು.

॥ ಸಂಹಿತಾಪಾಠಃ ॥

ದೇವಾವ್ಯೋ ನಃ ಪರಿಷಿಚ್ಯಮಾನಾಃ ಕ್ಷಯಂ ಸುವೀರಂ ಧನ್ವಂತು ಸೋಮಾಃ ।
ಆಯಜ್ಯವಃ ಸುಮತಿಂ ವಿಶ್ವವಾರಾ ಹೋತಾರೋ ನ ದಿವಿಯಜೋ ಮಂದ್ರತಮಾಃ ॥ ೨೬ ॥

॥ ಪದಪಾಠಃ ॥

ದೇವಽಅವ್ಯಃ । ನಃ । ಪರಿಽಸಿಚ್ಯಮಾನಾಃ । ಕ್ಷಯಂ । ಸುಽವೀರಂ । ಧನ್ವಂತು । ಸೋಮಾಃ ।
ಆಽಯಜ್ಯವಃ । ಸುಽಮತಿಂ । ವಿಶ್ವಽವಾರಾಃ । ಹೋತಾರಃ । ನ । ದಿವಿಽಯಜಃ । ಮಂದ್ರಽತಮಾಃ ॥

॥ ಸಾಯಣಭಾಷ್ಯಂ ॥

ದೇವಾವ್ಯಃ ॥ ಅವತೇಸ್ತರ್ಪಣಾರ್ಥಸ್ಯ ಅವಿತ್ರ್ಯಸ್ತೃತಂತ್ರಿಭ್ಯ ಈರಿತೀಪ್ರತ್ಯಯಃ । ಉದಾತ್ತ-ಸ್ವರಿತಯೋರ್ಯಣ ಇತಿ ಜಸಃ ಸ್ವರಿತತ್ವಂ ॥ ದೇವಾನಾಂ ತರ್ಪಯಿತಾರಃ ಪರಿಷಿಚ್ಯಮಾನಾಃ ಪರಿತಃ ಪಾತ್ರೇಷು ಸಿಚ್ಯಮಾನಾಃ ಸೋಮಾ ನೋಽಸ್ಮಾಕಂ ಸುವೀರಂ ಶೋಭನಪುತ್ರಂ ಕ್ಷಯಂ ಗೃಹಂ ಧನ್ವಂತು। ಪ್ರೇರಯಂತು । ಕೀದೃಶಾಃ । ಹೋತಾರೋ ನ ಹೋತಾರೋ ಯಥಾ ದೇವಾನಿಂದ್ರಾನೀನ್ಸ್ತುವಂತಿ ಏವಂ ದಿವಿಯಜೋ ದಿವಿ ದ್ಯುಲೋಕೇ ಸ್ಥಿತಾನಿಂದ್ರಾದೀನ್ದೇವಾನ್ಯಜಂತಃ ॥ ದಿವ್ಯಬ್ದೇ ತತ್ಪುರುಷೇ ಕೃತಿ ಬಹುಲಮಿತಿ ಸಪ್ತಮ್ಯಾ ಅಲುಕ್ ॥ ಮಂದ್ರತಮಾ ಅತ್ಯಂತಂ ಮದಕರಾಃ ॥

|| ಪ್ರತಿಪದಾರ್ಥ ||

**ದೇವಾವ್ಯಃ**—ದೇವತೆಗಳಿಗೆ ತೃಪ್ತಿಯನ್ನು ಕೊಡತಕ್ಕವೂ | **ಪರಿಷಿಚ್ಯಮಾನಾಃ**—ಪಾತ್ರೆಗಳಲ್ಲಿ ಸುತ್ತಲೂ ಸುರಿಯಲ್ಪಡುವುವೂ ಆದ | **ಸೋಮಾಃ**—ಸೋಮರಸಗಳು | **ನಃ**—ನಮಗೆ | **ಸುವೀರಂ**—ಉತ್ತಮವಾದ ವೀರಪುತ್ರರಿಂದ ಕೂಡಿದ | **ಕ್ಷಯಂ**—ಗೃಹವನ್ನು | **ಧನ್ವಂತು**—ಕೊಡಲಿ | **ಹೋತಾರೋ ನ**—ಹೋತೃಗಳಂತೆ | **ದಿವಿಯಜಃ**—ದ್ಯುಲೋಕದ ದೇವತೆಗಳನ್ನು ಪೂಜಿಸತಕ್ಕವೂ | **ಆಯಜ್ಯವಃ**—ಪ್ರತ್ಯಕ್ಷವಾಗಿ ದಾನಮಾಡತಕ್ಕವೂ | **ವಿಶ್ವವಾರಾಃ**—ಎಲ್ಲರ ಆದರಣೆಗೆ ಪಾತ್ರವಾದವೂ | **ಮಂದ್ರತಮಾಃ**—ಅತಿಶಯವಾದ ಮದಕಾರಕವೂ ಆದ ಸೋಮರಸಗಳು | **ಸುಮತಿಂ**—ನಮಗೆ ಒಳ್ಳೆಯ ಬುದ್ಧಿಯನ್ನನುಗ್ರಹಿಸಲಿ.

|| ಭಾವಾರ್ಥ ||

ದೇವತೆಗಳಿಗೆ ತೃಪ್ತಿಯನ್ನು ಕೊಡತಕ್ಕವೂ, ಪಾತ್ರೆಗಳಲ್ಲಿ ಸುತ್ತಲೂ ಸುರಿಯಲ್ಪಡುವುವೂ ಆದ ಸೋಮರಸಗಳು ನಮಗೆ ಉತ್ತಮವಾದ ವೀರಪುತ್ರರಿಂದ ಕೂಡಿದ ಗೃಹವನ್ನು ಕೊಡಲಿ. ಹೋತೃಗಳಂತೆ ದ್ಯುಲೋಕದ ದೇವತೆಗಳನ್ನು ಪೂಜಿಸತಕ್ಕವೂ, ಪ್ರತ್ಯಕ್ಷವಾಗಿ ದಾನ ಮಾಡತಕ್ಕವೂ, ಎಲ್ಲರ ಆದರಣೆಗೂ ಪಾತ್ರವಾದವೂ ಅತಿಶಯವಾದ ಮದಕಾರಕವೂ ಆದ ಸೋಮರಸಗಳು ನಮಗೆ ಒಳ್ಳೆಯ ಬುದ್ಧಿಯನ್ನನುಗ್ರಹಿಸಲಿ.

## English Translation.

May the Soma juices which are gratifying to the gods when poured around (into the vessels) bring us a dwelling and male offspring—(the juices) endeavouring to gain the favour (of the gods), desired by all offering (to the gods) in heaven like the the ministrant priests, most exhilarating.

|| ವಿಶೇಷವಿಷಯಗಳು ||

ಸುಮತಿ ಶಬ್ದವು ಯಾಸ್ಕರಿಂದ—

**ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ |**
**ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ ||**

(ಅಥ. ಸಂ. ೭-೭-೨)

ಉದಾಹೃತವಾದ ಈ ಋಕ್ಕಿನಲ್ಲಿಯೂ ಇನ್ನೂ ಇತರ ಕಡೆಗಳಲ್ಲಿಯೂ ಸುಮತಿ ಶಬ್ದಕ್ಕೆ **ಕಲ್ಯಾಣೀ ಮತಿಃ** ಎಂಬ ಅರ್ಥಬೋಧಕವೆಂದು ಸಾಯಣರು ವಿವರಿಸಿದ್ದಾರೆ.

ಆದರೆ, **ಸುಮತಿ** ಶಬ್ದವು ಕೇವಲ ದೈವಿಕವಾದ ಅನುಗ್ರಹಾತ್ಮಕ ಬುದ್ಧಿಯೆಂದು ಮಾತ್ರವಲ್ಲದೇ, ಮಾನವ ಕೃತ**ಪ್ರಾರ್ಥನಾ** ಅಥವಾ ಮಾನವನ **ಶ್ರೇಷ್ಠವಾದ ಅಭಿಲಾಷೆ** ಎಂಬರ್ಥದಲ್ಲಿಯೂ ಪ್ರಯೋಗಿಸಲ್ಪಟ್ಟದೆ. ಉದಾಹರಣೆಗೆ,

ತುಭ್ಯಂ ಭರಂತಿ ಕ್ಷಿತಯೋ ಯವಿಷ್ಠ ಬಲಿಮಗ್ನೇ ಅಂತಿತ ಓತ ದೂರಾತ್ ।
ಆ ಭಂದಿಷ್ಠಸ್ಯ ಸುಮತಿಂ ಚಿಕಿದ್ಧಿ ಬೃಹತ್ತೇ ಅಗ್ನೇ ಮಹಿ ಶರ್ಮ ಭದ್ರಂ ॥
(ಋ. ಸಂ. ೫-೧-೧೦)

ಪ್ರ ವೋ ಮಹೇ ಮಹಿವೃಧೇ ಭರಧ್ವಂ ಪ್ರಚೇತಸೇ ಪ್ರ ಸುಮತಿಂ ಕೃಣುಧ್ವಂ ।
ವಿಶಃ ಪೂರ್ವೀಃ ಪ್ರ ಚರಾ ಚರ್ಷಣಿಪ್ರಾಃ ॥
(ಋ. ಸಂ. ೭-೩೧-೧೦)

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತುಃ ಸ್ತುತಿಂ ಆ ಜಾನೀಹಿ ।** ಸ್ತೋತೃವಿನ ಶ್ರೇಷ್ಠವಾದ ಸ್ತುತಿಯನ್ನು ಆಲಿಸು ಎಂದೂ, **ಇಂದ್ರಾಯ ಸುಷ್ಟುತಿಂ ಪ್ರ ಕುರುತ** ಇಂದ್ರನನ್ನುದ್ದೇಶಿಸಿ ಶ್ರೇಷ್ಠವಾದ ಸ್ತುತಿಯನ್ನು ಪಠಿಸು ಎಂದೂ ಅರ್ಥಮಾಡಿದೆ. ಮತ್ತು

ಯೂಯಂ ನ ಉಗ್ರಾ ಮರುತಃ ಸುಚೇತುನಾರಿಷ್ಟಗ್ರಾಮಾಃ ಸುಮತಿಂ ಪಿಪರ್ತನ ।
ಯತ್ರಾ ವೋ ದಿದ್ಯುದ್ರದತಿ ಕ್ರಿವಿರ್ದತೀ ರಿಣಾತಿ ಪಶ್ವಃ ಸುಧಿತೇವ ಬರ್ಹಣಾ ॥
(ಋ. ಸಂ. ೧-೧೬೬-೬)

ಎಂದು ಹಿಂದೆ ವಿವರಿಸಿರುವ ಋಕ್ಕಿನಲ್ಲಿ **ಸುಮತಿಂ ಪಿಪರ್ತನ** ಎಂಬುದಕ್ಕೆ ಸಾಯಣರು **ಶೋಭನಬುದ್ಧಿಂ ಪೂರಯತ** ಎಂದರ್ಥಮಾಡಿದ್ದಾರೆ. ಇಲ್ಲಿ ಶೋಭನಬುದ್ಧಿಯೆಂದರೆ ದೇವತೆಗಳ ಅನುಗ್ರಹಾತ್ಮಕವಾದ ಬುದ್ಧಿಯೆಂದು ಮಾತ್ರವಲ್ಲ. **ಪಿಪರ್ತನ** ಎಂದಿರುವುದರಿಂದ ನಮ್ಮ ಶ್ರೇಷ್ಠವಾದ ಇಷ್ಟಾರ್ಥಗಳನ್ನೂ ನೆರವೇರಿಸು ಎಂಬರ್ಥವು ಸಹಜವಾಗಿರುತ್ತದೆ.

॥ ಸಂಹಿತಾಪಾಠಃ ॥

ಏವಾ ದೇವ ದೇವತಾತೇ ಪವಸ್ವ ಮಹೇ ಸೋಮ ಪ್ಸರಸೇ ದೇವಪಾನಃ ।
ಮಹಶ್ಚಿದ್ಧಿ ಷ್ಮಸಿ ಹಿತಾಃ ಸಮರ್ಯೇ ಕೃಧಿ ಸುಷ್ಠಾನೇ ರೋದಸೀ ಪುನಾನಃ॥

॥ ಪದಪಾಠಃ ॥

ಏವ । ದೇವ । ದೇವಽತಾತೇ । ಪವಸ್ವ । ಮಹೇ । ಸೋಮ । ಪ್ಸರಸೇ । ದೇವಽಪಾನಃ ।
ಮಹಃ । ಚಿತ್ । ಹಿ । ಸ್ಮಸಿ । ಹಿತಾಃ । ಸಽಮರ್ಯೇ । ಕೃಧಿ । ಸುಸ್ಥಾನೇ ಇತಿ ಸುಽಸ್ಥಾನೇ । ರೋದಸೀ ಇತಿ । ಪುನಾನಃ ॥ ೨೭ ॥

॥ ಸಾಯಣಭಾಷ್ಯಂ ॥

**ಹೇ ದೇವ ದ್ಯೋತಮಾನ ಸ್ತೋತವ್ಯ ವಾ ಹೇ ಸೋಮ ದೇವಪಾನೋ ದೇವೈಃ ಪಾತವ್ಯಸ್ತ್ವಂ ದೇವತಾತೇ ದೇವೈಸ್ತತೇ ವಿತತೇ ಯಜ್ಞೇ ಮಹೇ ಮಹತೇ ಪ್ಸರಸೇ ಭಕ್ಷಣಾಯ ದೇವಾನಾಂ ಪಾನಾಯೈ-**

ಯ್ಯೆನ್ಯೆವಂ ಪವಸ್ವ । ಕ್ಷರ। ತತೋ ವಯಂ ಹಿತಾಸ್ತ್ವಯಾ ಪ್ರೇರಿತಾಃ ಸಂತಃ ಸಮರ್ಯೇ ಮರಣಧರ್ಮ-ಸಹಿತೇ ಸಂಗ್ರಾಮೇ ಮಹಶ್ಚಿನ್ಮಹತೋ ಬಲಾಧಿಕಾನಪಿ ಶತ್ರೂನ್ ಸ್ಯಾಸಿ ಹಿ । ಅಭಿಭವೇಮ ಖಲು । ಕಿಂಚ ಪುನಾನಃ ಪೂಯಮಾನಸ್ತ್ವಂ ರೋದಸೀ ದ್ಯಾವಾಪೃಥಿವ್ಯೌ ಸುಸ್ಥಾನೇ ಅಸ್ಮಾಕಂ ಶೋಭನಾವಾಸಸ್ಥಾನೇ ಸತ್ಯೌ ಕೃಧಿ । ಕುರು ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ । **ಸೋಮ**—ಎಲೈ ಸೋಮದೇವನೇ । **ದೇವಪಾನಃ**—ದೇವತೆಗಳ ಪಾನಕ್ಕೆ ಯೋಗ್ಯನಾದ ನೀನು । **ದೇವತಾತೇ**—ಯಜ್ಞದಲ್ಲಿ । **ಮಹೇ**—ಮಹತ್ತಾದ । **ಪ್ಸರಸೇ**—ದೇವ ಪಾನಾರ್ಥವಾಗಿ । **ಏವ**—ವಿಧ್ಯುಕ್ತವಾದ ರೀತಿಯಲ್ಲಿ । **ಪವಸ್ವ**—ಪ್ರವಹಿಸು. । **ಹಿತಾಃ**—ನಿನ್ನಿಂದ ಉತ್ತೇಜಿತರಾದ ನಾವು । **ಸಮರ್ಯೇ**—ಯುದ್ಧದಲ್ಲಿ । **ಮಹಶ್ಚಿತ್**—ಅತಿ ಪ್ರಬಲರಾದ ಶತ್ರುಗಳನ್ನೂ ಸಹ । **ಸ್ಯಾಸಿ ಹಿ**—ಸೋಲಿಸುವಂತಾಗಲಿ. । **ಪುನಾನಃ**—ಶುದ್ಧಿಯನ್ನು ಹೊಂದಿದ ನೀನು । **ರೋದಸೀ**—ದ್ಯಾವಾಪೃಥಿವಿಗಳನ್ನು । **ಸುಸ್ಥಾನೇ**—ನಮಗೆ ಉತ್ತಮವಾದ ವಾಸಸ್ಥಾನವಾಗುವಂತೆ । **ಕೃಧಿ**—ಮಾಡು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಸೋಮದೇವನೇ, ದೇವತೆಗಳ ಪಾನಕ್ಕೆ ಯೋಗ್ಯನಾದ ನೀನು ಯಜ್ಞದಲ್ಲಿ ಮಹತ್ತಾದ ದೇವಪಾನಾರ್ಥವಾಗಿ ವಿಧ್ಯುಕ್ತವಾದ ರೀತಿಯಲ್ಲಿ ಪ್ರವಹಿಸು. ನಿನ್ನಿಂದ ಉತ್ತೇಜಿತರಾದ ನಾವು ಯುದ್ಧದಲ್ಲಿ ಅತಿ ಪ್ರಬಲರಾದ ಶತ್ರುಗಳನ್ನೂ ಸೋಲಿಸುವಂತಾಗಲಿ. ಶುದ್ಧಿಯನ್ನು ಹೊಂದಿದ ನೀನು ದ್ಯಾವಾಪೃಥಿವಿಗಳನ್ನು ನಮಗೆ ಉತ್ತಮವಾದ ವಾಸಸ್ಥಾನವಾಗುವಂತೆ ಮಾಡು.

## English Translation.

Divine Soma, you are the beverage of gods, flow at the sacrifice for (their) abundant food ; urged on (by you) may we overcome even mighty (foes) in battle ; purified do you render heaven and earth happy abodes (for us).

॥ ಸಂಹಿತಾಪಾಠಃ ॥

ಅಶ್ವೋ ನ ಕ್ರದೋ ವೃಷಭಿರ್ಯುಜಾನಃ ಸಿಂಹೋ ನ ಭೀಮೋ ಮನಸೋ ಜವೀಯಾನ್ ।
ಅರ್ವಾಚೀನೈಃ ಪಥಿಭಿರ್ಯೇ ರಜಿಷ್ಠಾ ಆ ಪವಸ್ವ ಸೌಮನಸಂ ನ ಇಂದೋ ॥

|| ಪದಪಾಠಃ ||

ಅಶ್ವಃ । ನ । ಕ್ರದಃ । ವೃಷ‌ಽಭಿಃ । ಯುಜಾನಃ । ಸಿಂಹಃ । ನ । ಭೀಮಃ । ಮನಸಃ । ಜವೀಯಾನ್ ।

ಅರ್ವಾಚೀನೈಃ । ಪಥಿಽಭಿಃ । ಯೇ । ರಜಿಷ್ಠಾಃ । ಆ । ಪವಸ್ವ । ಸೌಮನಸಂ । ನಃ । ಇಂದೋ ಇತಿ ॥೨೮॥

|| ಸಾಯಣಭಾಷ್ಯಂ ||

ಹೇ ಸೋಮ ವೃಷಭಿರ್ಋತ್ವಿಗ್ಭಿಃ ಸೋಮಮಭಿಷುಣ್ವದ್ಭಿರ್ಯುಜಾನೋ ಯೋಜ್ಯಮಾನಸ್ತ್ವಮಶ್ವೋ ನಾಶ್ವ ಇವ ಕ್ರದಃ । ಕ್ರಂದಸಿ । ಶಬ್ದಾಯಸೇ । ಕೀದೃಶಃ । ಸಿಂಹೋ ನ ಸಿಂಹ ಇವ ಭೀಮಃ ಶತ್ರೂಣಾಂ ಭಯಂಕರಃ ತಥಾ ಮನಸೋಽಪಿ ಜವೀಯಾನ್ ವೇಗವತ್ತರಃ । ಅರ್ವಾಚೀನೈರಭಿಮುಖೈಃ ಪಥಿಭಿರ್ಮಾರ್ಗೈರ್ಯೇ ಮಾರ್ಗಾ ರಜಿಷ್ಠಾ ಅತ್ಯಂತಮೃಜವೋ ಭವಂತಿ ॥ ವಿಭಾಷರ್ಜೋಶ್ಛಂದಸೀತ್ಯೃಕಾರಸ್ಯ ರಾದೇಶಃ ॥ ಹೇ ಇಂದೋ ದೀಪ್ಯಮಾನ ಸೋಮ ತೈರ್ಮಾರ್ಗೈರ್ನೋಽಸ್ಮಾಕಂ ಸೌಮನಸಂ ಸೌಮನಸ್ಯಮಾ ಪವಸ್ವ । ಆ ಪ್ರಾಪಯ ॥

|| ಪ್ರತಿಪದಾರ್ಥ ||

**ಇಂದೋ**— ಎಲೈ ಸೋಮದೇವನೇ । **ವೃಷಭಿಃ**— ಋತ್ವಿಕ್ಕುಗಳಿಂದ । **ಯುಜಾನಃ**— ಕರ್ಮಾರ್ಥವಾಗಿ ಯೋಜಿತನಾಗುವ ನೀನು । **ಅಶ್ವೋ ನ**— ಅಶ್ವದಂತೆ । **ಕ್ರದಃ**— ಶಬ್ದಮಾಡುತ್ತೀಯೆ । **ಸಿಂಹೋ ನ**— ಸಿಂಹದಂತೆ । **ಭೀಮಃ**— ಶತ್ರುಗಳಿಗೆ ಭಯಂಕರನಾಗಿದ್ದೀಯೆ. । **ಮನಸಃ (ಅಪಿ)**— ಮನೋವೇಗಕ್ಕಿಂತಲೂ । **ಜವೀಯಾನ್**— ಅಧಿಕವಾದ ವೇಗವುಳ್ಳವನಾಗಿದ್ದೀಯೆ. । **ಅರ್ವಾಚೀನೈಃ**— ನಮಗಭಿಮುಖವಾಗಿರತಕ್ಕ । **ಪಥಿಭಿಃ**— ಮಾರ್ಗಗಳಲ್ಲಿ । **ಯೇ**— ಯಾವುವು । **ರಜಿಷ್ಠಾಃ**— (ವಕ್ರವಿಲ್ಲದೇ) ನೇರವಾಗಿರುವುವೋ ಆ ಮಾರ್ಗಗಳಿಂದ । **ನಃ**— ನಮಗೆ । **ಸೌಮನಸಂ**— ಕಲ್ಯಾಣವನ್ನು । **ಆ ಪವಸ್ವ**— ಒದಗಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಋತ್ವಿಕ್ಕುಗಳಿಂದ ಕರ್ಮಾರ್ಥವಾಗಿ ಯೋಜಿತನಾಗುವ ನೀನು ಅಶ್ವದಂತೆ ಶಬ್ದ ಮಾಡುತ್ತೀಯೆ. ಸಿಂಹದಂತೆ ಶತ್ರುಗಳಿಗೆ ಭಯಂಕರನಾಗಿದ್ದೀಯೆ. ಮನೋವೇಗಕ್ಕಿಂತಲೂ ಅಧಿಕವಾದ ವೇಗವುಳ್ಳವನಾಗಿದ್ದೀಯೆ. ನಮಗಭಿಮುಖವಾಗಿರತಕ್ಕ ಮಾರ್ಗಗಳಲ್ಲಿ ಯಾವುವು ನೇರವಾಗಿರುವುವೋ, ಆ ಮಾರ್ಗಗಳಿಂದ ನಮಗೆ ಕಲ್ಯಾಣವನ್ನೊದಗಿಸು.

## English Translation.

Yoked by the priests, you neigh like a horse, (you are) terrible as a lion, swifter than thought ; Indu, pour happiness upon us by those which are the most direct of the pathes leading hitherward.

॥ ಸಂಹಿತಾಪಾಠಃ ॥

ಶತಂ ಧಾರಾ ದೇವಜಾತಾ ಅಸೃಗ್ರನ್ತ್ಸಹಸ್ರಮೇನಾಃ ಕವಯೋ ಮೃಜಂತಿ ।
ಇಂದೋ ಸನಿತ್ರಂ ದಿವ ಆ ಪವಸ್ವ ಪುರಏತಾಸಿ ಮಹತೋ ಧನಸ್ಯ ॥ ೨೯ ॥

॥ ಪದಪಾಠಃ ॥

ಶತಂ । ಧಾರಾಃ । ದೇವಽಜಾತಾಃ । ಅಸೃಗ್ರನ್ । ಸಹಸ್ರಂ । ಏನಾಃ । ಕವಯಃ । ಮೃಜಂತಿ ।
ಇಂದೋ ಇತಿ । ಸನಿತ್ರಂ । ದಿವಃ । ಆ । ಪವಸ್ವ । ಪುರಃಽಏತಾ । ಅಸಿ । ಮಹತಃ । ಧನಸ್ಯ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ದೇವಜಾತಾ ದೇವಾರ್ಥಂ ಪ್ರಾದುರ್ಭೂತಾಃ ಶತಂ ಶತಸಂಖ್ಯಾಕಾಸ್ತ್ವದೀಯಾ ಧಾರಾ ಅಸೃಗ್ರನ್ । ಸೃಜ್ಯಂತೇ । ತತಃ ಕವಯಃ ಕ್ರಾಂತದರ್ಶಿನ ಋತ್ವಿಜಃ ಸಹಸ್ರಂ ಬಹುವಿಧಾ ಏನಾಸ್ತ್ವದೀಯಾ ಧಾರಾ ಮೃಜಂತಿ । ಅಲಂಕುರ್ವಂತಿ । ಯದ್ವಾ । ಸಹಸ್ರಮನೇಕಧಾ ಮೃಜಂತಿ । ಶೋಧಯಂತಿ । ಹೇ ಇಂದೋ ಸನಿತ್ರಂ ಭಜನಸಾಧನಂ ಧನಂ ದಿವೋ ದ್ಯುಲೋಕಾದಸ್ಮಾಕಂ ಪುತ್ರಾದೀನಾಂ ಚಾ ಪವಸ್ವ । ಆಪ್ರಾಪಯ । ಕುತೋಽಸ್ಯ ಧನಮಿತಿ ಚೇತ್ ತತ್ರಾಹ । ಮಹತಃ ಪ್ರಭೂತಸ್ಯ ಧನಸ್ಯ ಪುರಏತಾ ಪುರತೋ ಗಂತಾಸಿ । ಭವಸಿ । ತಸ್ಮಾದ್ದೇಹೀತಿ ॥

॥ ಪ್ರತಿಪದಾರ್ಥ ॥

**ಇಂದೋ**— ಎಲೈ ಸೋಮದೇವನೇ । **ದೇವಜಾತಾಃ** – ದೇವತೆಗಳಿಗಾಗಿ ಉತ್ಪನ್ನವಾದ । **ಶತಂ-ಧಾರಾಃ**— ನಿನ್ನ ಅನೇಕ ಧಾರೆಗಳು । **ಅಸೃಗ್ರನ್** — ಸ್ವತಂತ್ರವಾಗಿ ಬಿಡಲ್ಪಟ್ಟಿವೆ । **ಕವಯಃ**— ಮೇಧಾವಿಗಳಾದ ಋತ್ವಿಕ್ಕುಗಳು । **ಸಹಸ್ರಂ**— ಅನೇಕ ರೀತಿಯಲ್ಲಿ । **ಏನಾಃ**— ಈ ಧಾರೆಗಳನ್ನು । **ಮೃಜಂತಿ**— ಶುದ್ಧಿಗೊಳಿಸುತ್ತಾರೆ. (ಅಲಂಕರಿಸುತ್ತಾರೆ) । **ಸನಿತ್ರಂ**— ಭೋಗಯೋಗ್ಯವಾದ ಧನವನ್ನು । **ದಿವಃ**— ದ್ಯುಲೋಕದಿಂದ । **ಆ ಪವಸ್ವ**— ನಮಗೆ ಒದಗಿಸು । **(ತ್ವಂ**— ನೀನು) । **ಮಹತಃ ಧನಸ್ಯ**— ಅತ್ಯಧಿಕವಾದ ಸಂಪತ್ತಿಗೆ । **ಪುರಏತಾ**— ನಾಯಕನಾಗಿ । **ಅಸಿ**— ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ದೇವತೆಗಳಿಗಾಗಿ ಉತ್ಪನ್ನವಾದ ನಿನ್ನ ಅನೇಕ ಧಾರೆಗಳು ಸ್ವತಂತ್ರವಾಗಿ ಹರಿಯುತ್ತಿವೆ. ಮೇಧಾವಿಗಳಾದ ಋತ್ವಿಕ್ಕುಗಳು ಅನೇಕ ರೀತಿಯಲ್ಲಿ ಈ ಧಾರೆಗಳನ್ನು ಶುದ್ಧಿಗೊಳಿಸುತ್ತಾರೆ. ಭೋಗಯೋಗ್ಯವಾದ ಧನವನ್ನು ದ್ಯುಲೋಕದಿಂದ ನಮಗೆ ಒದಗಿಸು. ನೀನು ಬಹಳವಾದ ಸಂಪತ್ತಿಗೆ ಪ್ರಭುವಾಗಿದ್ದೀಯೆ.

## English Translation.

Your hundred streams manifested for the gods are loose ; the sages cleanse those thousand (streams) ; pour wealth upon us, Indu, from heaven ; you are the precursor of abundant riches.

॥ ಸಂಹಿತಾಪಾಠಃ ॥

ದಿವೋ ನ ಸರ್ಗಾ ಅಸಸೃಗ್ರಮಹ್ನಾಂ ರಾಜಾ ನ ಮಿತ್ರಂ ಪ್ರ ಮಿನಾತಿ ಧೀರಃ ।
ಪಿತುರ್ನ ಪುತ್ರಃ ಕ್ರತುಭಿರ್ಯತಾನ ಆ ಪವಸ್ವ ವಿಶೇ ಅಸ್ಯಾ ಅಜೀತಿಂ ॥೩೦॥

॥ ಪದಪಾಠಃ ॥

ದಿವಃ । ನ । ಸರ್ಗಾಃ । ಅಸಸೃಗ್ರಂ । ಅಹ್ನಾಂ । ರಾಜಾ । ನ । ಮಿತ್ರಂ । ಪ್ರ । ಮಿನಾತಿ । ಧೀರಃ ।
ಪಿತುಃ । ನ । ಪುತ್ರಃ । ಕ್ರತುಽಭಿಃ । ಯತಾನಃ । ಆ । ಪವಸ್ವ । ವಿಶೇ । ಅಸ್ಯೈ । ಅಜೀತಿಂ ॥ ೩೦ ॥

॥ ಸಾಯಣಭಾಷ್ಯಂ ॥

ದಿವೋ ನ ಯಥಾ ದಿವೋ ದ್ಯೋತಮಾನಸ್ಯಾದಿತ್ಯಸ್ಯಾಹ್ನಾಂ ಸಂಬಂಧಿನಃ ಸರ್ಗಾ ರಶ್ಮಯೋಽಸಸೃಗ್ರಂ ವಿಸೃಜ್ಯಂತೇ ತದ್ವತ್ಸೋಮಸ್ಯ ಸರ್ಗಾಃ । ಸೃಜ್ಯಂತ ಇತಿ ಸರ್ಗಾ ಧಾರಾಃ । ವಿಸೃಜ್ಯಂತೇ ॥ ಸೃಜೇರ್ವ್ಯತ್ಯಯೇನ ಕರ್ಮಾರ್ಥೇ ಲಙ್ ಬಹುಲಂ ಛಂದಸೀತಿ ಶಸ್ಯ ಶ್ಲುಃ । ರ್ಘೋರಮಾದೇಶಶ್ಛಾಂದಸಃ ॥ ಧೀರಃ ಪ್ರಾಜ್ಞೋ ರಾಜಾಯಂ ಸೋಮೋ ಮಿತ್ರಂ ಸಖಾಯಂ ನ ಪ್ರ ಮಿನಾತಿ । ನ ಹಿನಸ್ತಿ । ಕ್ರತುಭಿಃ ಕರ್ಮಭಿರ್ಯತಾನೋ ಯತಮಾನಃ ಪುತ್ರಃ ಪಿತುರ್ನ ಪಿತುರ್ಯಥಾಪರಾಭವಂ ಕರೋತಿ ತದ್ವತ್ ಕರ್ಮಭಿರ್ಯತಮಾನಸ್ತ್ವಮಸ್ಯೈ ವಿಶೇ ಪ್ರಜಾಯಾ ಅಜೀತಿಮಪರಾಭವಮಾ ಪವಸ್ವ । ಆಪ್ರಾಪಯ । ಯಥಾ ನ ಪರಾಜಿತಾ ಭವಂತಿ ತಥಾ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ದಿವಃ**—ಪ್ರಕಾಶಮಾನನಾದ ಆದಿತ್ಯನ । **ಅಹ್ನಾಂ**—ಅಹಸ್ಸುಗಳಿಗೆ ಸಂಬಂಧಿಸಿದ । **ಸರ್ಗಾಃ ನ**—ರಶ್ಮಿಗಳಂತೆ । **ಅಸಸೃಗ್ರಂ**—ಸೋಮನ ರಶ್ಮಿಗಳೂ ಬಿಡಲ್ಪಡುತ್ತವೆ. । **ಧೀರಃ**—ಪ್ರಾಜ್ಞನೂ । **ರಾಜಾ**—ಪ್ರಭುವೂ ಆದ ಸೋಮನು । **ಮಿತ್ರಂ**—ತನ್ನ ಮಿತ್ರನನ್ನು । **ನ ಪ್ರ ಮಿನಾತಿ**—ಬಿಟ್ಟುಕೊಡುವುದಿಲ್ಲ. (ಎಲೈ ಸೋಮನೇ) **ಕ್ರತುಭಿಃ**—ತನ್ನ ಕರ್ಮಗಳಿಂದ । **ಯತಾನಃ**—ಪ್ರಯತ್ನಿಸುವ । **ಪುತ್ರಃ**—ಪುತ್ರನು । **ಪಿತುಃ ನ**—ತನ್ನ ತಂದೆಗೆ ಯಾವ ರೀತಿ ಅಪಜಯವನ್ನು ತರುವುದಿಲ್ಲವೋ ಅದೇ ರೀತಿ । **ಅಸ್ಯೈ ವಿಶೇ**—ನಿನ್ನ ಪ್ರಜೆಗಳಾದ ನಮಗೆ । **ಅಜೀತಿಂ**—ಪರಾಭವವಿಲ್ಲದಿರುವಿಕೆಯನ್ನು । **ಆ ಪವಸ್ವ**—ಉಂಟುಮಾಡು.

|| ಭಾವಾರ್ಥ ||

ಅಹಸ್ಸುಗಳಲ್ಲಿ ಪ್ರಕಾಶಮಾನನಾದ ಆದಿತ್ಯನ ರಶ್ಮಿಗಳು ಯಾವ ರೀತಿ ಪ್ರಸರಿಸುವುವೋ, ಅದೇ ರೀತಿ ಸೋಮನ ರಶ್ಮಿಗಳೂ ಪ್ರಸರಿಸುತ್ತವೆ. ಪ್ರಾಜ್ಞನೂ, ಪ್ರಭುವೂ ಆದ ಸೋಮನು ತನ್ನ ಮಿತ್ರನನ್ನು ಬಿಟ್ಟುಕೊಡುವುದಿಲ್ಲ. ಎಲೈ ಸೋಮನೇ, ತನ್ನ ಕರ್ಮಗಳಿಂದ ಪ್ರಯತ್ನಿಸುವ ಪುತ್ರನು ತನ್ನ ತಂದೆಗೆ ಯಾವ ರೀತಿ ಅಪಜಯವನ್ನು ತರುವುದಿಲ್ಲವೋ, ಅದೇ ರೀತಿ ನಿನ್ನ ಪ್ರಜೆಗಳಾದ ನಮಗೆ ಪರಾಜಯವೂ (ಪರಾಭವವೂ) ಇಲ್ಲದಿರುವಂತೆ ಮಾಡು.

English Translation.

As the rays of the days of the sun are let loose (so are the streams of the Soma) : a prudent king doee not obandon his friend ; as a son persevering in pious acts (wins) his father's (safety), so you pour upon this people immunity from defeat.

|| ಸಂಹಿತಾಪಾಠಃ ||

ಪ್ರ ತೇ ಧಾರಾ ಮಧುಮತೀರಸೃಗ್ರನ್ವಾರಾನ್ಯತ್ಪೂತೋ ಅತ್ಯೇಷ್ಯವ್ಯಾನ್ ।
ಪವಮಾನ ಪವಸೇ ಧಾಮ ಗೋನಾಂ ಜಜ್ಞಾನಃ ಸೂರ್ಯಮಪಿನ್ವೋ ಅರ್ಕೈಃ ॥ ೩೧ ॥

|| ಪದಪಾಠಃ ||

ಪ್ರ । ತೇ । ಧಾರಾಃ । ಮಧುऽಮತೀಃ । ಅಸೃಗ್ರನ್ । ವಾರಾನ್ । ಯತ್ । ಪೂತಃ । ಅತಿऽಏಷಿ । ಅವ್ಯಾನ್ ।
ಪವಮಾನ । ಪವಸೇ । ಧಾಮ । ಗೋನಾಂ । ಜಜ್ಞಾನಃ । ಸೂರ್ಯಂ । ಅಪಿನ್ವಃ । ಅರ್ಕೈಃ ॥ ೩೧ ॥

|| ಸಾಯಣಭಾಷ್ಯಂ ||

ತೇ ತವ ಸ್ವಭೂತಾ ಮಧುಮತೀರ್ಮಧುಮತ್ಯೋ ಧಾರಾಃ ಪ್ರಾಸೃಗ್ರನ್ ತದಾ ಪ್ರಸೃಜ್ಯಂತೇ ಯದ್ಯದಾ ಪೂತೋ ವಸತೀವರೀಭಿಸ್ತ್ವಮವ್ಯಾನವಿಭವಾನ್ವಾರಾನ್ವಾಲಾನ್ಪವಿತ್ರಾಣ್ಯತ್ಯೇಷಿ । ಅತೀತ್ಯ ಗಚ್ಛಸಿ। ಕಿಂಚ ಹೇ ಪವಮಾನ ಧಾಮ ಧಾರಕಂ ಗೋನಾಂ ಗವಾಂ ಪಯೋ ಲಕ್ಷೀಕೃತ್ಯ ಪವಸೇ । ತತೋ ಜಜ್ಞಾನೋ ಜಾಯಮಾನಸ್ತ್ವಮರ್ಕೈರರ್ಚನೀಯೈಃ ಸ್ವತೇಜೋಭಿಃ ಸೂರ್ಯಮಾದಿತ್ಯಮಪಿನ್ವಃ । ಪೂರಯಸಿ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಯತ್**—ಯಾವಾಗ । **ಪೂತಃ**—ವಸತೀವರಿಗಳಿಂದ ಶುದ್ಧನಾದ ನೀನು । **ಅವ್ಯಾನ್**—ದಶಾಪವಿತ್ರದ । **ವರಾನ್**—ಉಣ್ಣೆಯ ನೂಲುಗಳನ್ನು । **ಅತ್ಯೇಷಿ**—ದಾಟಿ ಹೋಗುವೆಯೋ ಆಗ ।

**ತೇ**—ನಿನ್ನ | **ಮಧುಮತೀಃ**—ಮಾಧುರ್ಯೋಪೇತವಾದ | **ಧಾರಾಃ**—ಪ್ರವಾಹಗಳು | **ಪ್ರ ಅಸೃಗ್ರನ್**—ಸ್ವತಂತ್ರವಾಗಿ ಪ್ರವಹಿಸುತ್ತವೆ | **ಪವಮಾನ**—ಎಲೈ ಸೋಮದೇವನೆ | **ಧಾಮ**—ಧಾರಕವಾದ | **ಗೋನಾಂ**—ಕ್ಷೀರಕ್ಕಭಿಮುಖವಾಗಿ | **ಪವಸೇ**—ನೀನು ಪ್ರವಹಿಸುತ್ತೀಯೆ | **ಜಜ್ಞಾನಃ**—ಉತ್ಪನ್ನನಾಗುವಾಗಲೇ | **ಅರ್ಕೈಃ**—ನಿನ್ನ ತೇಜಸ್ಸುಗಳಿಂದ | **ಸೂರ್ಯಂ**—ಸೂರ್ಯನನ್ನು | **ಅಪಿನ್ವಃ**—ವ್ಯಾಪಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ವಸತೀವರಿಗಳಿಂದ ಶುದ್ಧನಾದ ನೀನು ಯಾವಾಗ ಉಣ್ಣೆಯ ನೂಲುಗಳನ್ನು ದಾಟಿ ಹೋಗುವೆಯೋ ಆಗ ಮಾಧುರ್ಯೋಪೇತವಾದ ನಿನ್ನ ಪ್ರವಾಹಗಳು ಸ್ವತಂತ್ರವಾಗಿ ಪ್ರವಹಿಸುತ್ತವೆ. ಎಲೈ, ಸೋಮದೇವನೇ, ಧಾರಕವಾದ ಕ್ಷೀರಕ್ಕಭಿಮುಖವಾಗಿ ನೀನು ಪ್ರವಹಿಸುತ್ತೀಯೆ. ನೀನು ಉತ್ಪನ್ನನಾಗುವಾಗಲೇ, ನಿನ್ನ ತೇಜಸ್ಸುಗಳಿಂದ ಸೂರ್ಯನನ್ನು ವ್ಯಾಪಿಸುತ್ತೀಯೆ.

English Translation

Your exhilarating streams are let loose when you pass purified through the woollen fleece ; Pavamana, you flow to the supporting (milk) of the cows, as soon as generated you fill the sun with your radiance.

|| ವಿಶೇಷವಿಷಯಗಳು ||

**ಅರ್ಕೈಃ**—ಅರ್ಕ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುತ್ತಾ ಈ ಶಬ್ದದ ನಾನಾರ್ಥಗಳನ್ನು ವಿವರಿಸಿದ್ದಾರೆ.

**ಅರ್ಕಃ | ಅರ್ಕೋ ದೇವೋ ಭವತಿ ಯದೇನಮರ್ಚಂತಿ |**
**ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ |**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ |**
**ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ||**
(ನಿ. ೫-೪)

ಎಂದು ನಾಲ್ಕು ವಿಧವಾದ ಅರ್ಥವನ್ನು ಹೇಳಿರುವರು. ಇದರ ಅರ್ಥವಿವರಣೆಯನ್ನು ಈ ರೀತಿ ಮಾಡಬಹುದು—

**ದೇವಃ—ತಾವತ್ಸರ್ವ ಏಕಾರ್ಕ ಇತ್ಯುಚ್ಯತೇ ಯದ್ಯಸ್ಮಾದೇನಂ ದೇವಂ ಅರ್ಚಂತಿ ಸ್ತೋತಾರಃ**—ಅರ್ಕ ಎಂದರೆ ದೇವತೆಯು. ಏಕೆಂದರೆ, ಇದರಿಂದ ಭಕ್ತರು ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು, ಎಂದರೆ ಭಕ್ತರು ಪೂಜಿಸುವ ವಸ್ತುವಿಗೆ (ದೇವತೆಗೆ) ಅರ್ಕವೆಂದು ಹೆಸರು.

**ಅರ್ಕೋ ಮಂತ್ರೋ ಭವತಿ| ಯದ್ಯಸ್ಮಾದನೇನ ಮಂತ್ರೇಣಾರ್ಚಂತಿ ಸ್ತೋತಾರಸ್ತಸ್ಮಾದರ್ಕಃ**—ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ, ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

**ಅರ್ಕಮನ್ನಂ ಭವತಿ—ತದ್ಧಿ ಅರ್ಚತಿ ಭೂತಾನಿ ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರ-ವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ, ಪೂಜ್ಯಂ ಚ ಸರ್ವಸ್ಯೈವಾನ್ನಂ**—ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಗೌರವಿಸಿ ಅಪೇಕ್ಷಿಸುವರು. ಎಂದರೆ, ಎಲ್ಲರೂ ಪ್ರೀತ್ಯಾದಾರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕ ಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

**ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ। ಸಂವೃತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ**—ಇನ್ನು ಅರ್ಕಶಬ್ದಕ್ಕೆ ವೃಕ್ಷವಿಶೇಷಣವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕವೃಕ್ಷವೆಂದರೆ ಎಕ್ಕದಗಿಡವೆಂದು ಕರ್ಣಾಟಕಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು (ಕಡ್ಡಿಗಳನ್ನು) ಹೋಮಗಳಲ್ಲಿ ಉಪಯೋಗಿಸುವುದರಿಂದಗೂ, ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿ ಇರುವುದರಿಂದಲೂ ಅರ್ಕ ವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು. ಪ್ರಸಕ್ತ ಋಕ್ಕಿನಲ್ಲಿ ಅರ್ಕಶಬ್ದಕ್ಕೆ ಪೂಜಿಸಲು ಯೋಗ್ಯವಾದ ತೇಜಸ್ಸಿನಿಂದ ಎಂಬರ್ಥವನ್ನು ಭಾಷ್ಯಕಾರರು ವಿವರಿಸಿರುವರು.

ಅರ್ಕದ ಪ್ರಭಾವವು ಅತ್ಯಧಿಕವಾದುದೆಂದು ನಾನಾ ಕಡೆಗಳಲ್ಲಿ ಅದರ ಮಹಿಮೆಯನ್ನು ಸ್ತುತಿಸಿದೆ. ಐತರೇಯಾರಣ್ಯಕದಲ್ಲಿ,

> **ಅಥಾತಃ ಶಿರಃ। ಯದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ। ತದರ್ಕವತೀಷು ಭವತ್ಯಗ್ನಿರ್ವಾ ಅರ್ಕಃ। ತಾ ನವ ಭವಂತಿ ನವ ಕಪಾಲಂ ಶಿರಃ॥**
> (ಐ. ಆ. ೧-೪-೧)

ಎಂಬ ವಾಕ್ಯವನ್ನು ದಹರಿಸಿ, **ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ।** (ಋ. ಸಂ. ೧-೭-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಮುಂದಿನ ೯ ಋಕ್ಕುಗಳು ಅರ್ಕಮಂತ್ರಗಳೆಂದೂ, ಅವೇ ಶಿರ ಆತ್ಮಕಗಳಾದ ಮಂತ್ರಗಳೆಂದೂ, ಗಾಯತ್ರವೇ ಪ್ರಧಾನವಾದ ತತ್ತ್ವವಾಗಿ ಈ ಮಂತ್ರಗಳೂ ಆ ಗಾಯತ್ರರೂಪದಲ್ಲಿರುವುದರಿಂದ ಅರ್ಕ ಮಂತ್ರಗಳು ಎಲ್ಲಾ ಮಂತ್ರಗಳಿಗಿಂತಲೂ ಪ್ರಧಾನಸ್ಥಾನವನ್ನು ಹೊಂದಿವೆಯೆಂದೂ ತಿಳಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಅರ್ಕಶಬ್ದದ ನಿರ್ವಚನವನ್ನು ತಿಳಿಸುತ್ತಾ,

> **ಸೋಽರ್ಚನ್ನಚರತ್ತಸ್ಯಾರ್ಚತ ಆಪೋಽಜಾಯಂತಾರ್ಚತೇ ವೈ ಮೇ ಕಮಭೂದಿತಿ ತದೇವಾರ್ಕಸ್ಯಾರ್ಕತ್ವಂ ಕಂ ಹ ವಾ ಅಸ್ಮೈ ಭವತಿ ಯ ಏವಮೇತದರ್ಕಸ್ಯಾರ್ಕತ್ವಂ ವೇದ।**
> (ಬೃ. ಉ. ೧-೨-೧)

ಮೃತ್ಯುವು ದೇಹಾನ್ವೇಷಣಕ್ಕಾಗಿ ಸಂಚರಿಸುತ್ತಿರುವಾಗ ಉದಕದ ಉತ್ಪತ್ತಿಯಾಯಿತು. ಆದುದರಿಂದಲೇ ಉದಕಕ್ಕೆ **ಅರ್ಕ**ವೆಂದು ಹೆಸರು ಪ್ರಸಿದ್ಧವಾಯಿತು. ಇದಕ್ಕಾಗಿಯೇ,

> **ಆಪೋ ವಾ ಅರ್ಕಃ ತದ್ಯದಪಾಂ ಶಿರ ಆಸೀತ್ತತ್ಸಮಹನ್ಯತ।**
> (ಬೃ. ಉ. ೧-೨-೨)

ಇತ್ಯಾದಿಯಾಗಿ ವರ್ಣಿಸಿದೆ. ಇಲ್ಲಿ **ಅರ್ಕವು** ಗೂಢವಾದ ವಿಶ್ವತತ್ತ್ವವನ್ನು ಪ್ರತಿಬಿಂಬಿಸತಕ್ಕುದಾಗಿದೆ. ಪ್ರಜಾಪತಿತತ್ತ್ವಪ್ರತಿಪಾದಕವಾದ ಅರ್ಕದ ಮಹಿಮೆಯನ್ನೂ, ಅದರ ಸ್ವರೂಪವಿವರಣೆಯನ್ನೂ ಶತಪಥಬ್ರಾಹ್ಮಣದಲ್ಲಿ ಆರುಣಿಯ ಉಪದೇಶ ಸಂದರ್ಭದಲ್ಲಿ ಈ ರೀತಿ ವಿವರಿಸಿದೆ.

**ಶ್ವೇತಕೇತುರ್ವಾರುಣೇಯಃ ಯಕ್ಷ್ಯಮಾಣಾ ಆಸ ತಗ್‍ಂಹ ಪಿತೋವಾಚ ತಾನ್ವೃತ್ವಿಜೋಽವೃಥಾ ಇತಿ ಸ ಹೋವಾಚಾಯಂ ನ್ವೇವ ಮೇ ವೈಶ್ವಾವಸವ್ಯೋ ಹೋತೇತಿ ತಗ್‍ಂಹ ಪಪ್ರಚ್ಛ ವೇತ್ಥ ಬ್ರಾಹ್ಮಣಾ ವೈಶಾವಸವ್ಯ ॥**

(ಶ. ಬ್ರಾ ೧೦-೩-೪-೧)

ಉದ್ದಾಲಕ ಆರುಣಿಯ ಪುತ್ರನಾದ ಶ್ವೇತಕೇತು ಆರುಣಿಯು ಯಜ್ಞವನ್ನು ನೆರವೇರಿಸುವ ಪ್ರಯತ್ನದಲ್ಲಿದ್ದಾಗ ಅವನ ತಂದೆಯು ಯಜ್ಞಕರ್ಮಕ್ಕೆ ಯಾವ ಋತ್ವಿಕ್ಕುಗಳನ್ನು ಆರಿಸಿದ್ದೀಯೆ ಎಂದು ಅವನನ್ನು ಪ್ರಶ್ನಿಸಲು ಶ್ವೇತಕೇತುವು **ವೈಶ್ವಾವಸವ್ಯನೇ** ತನ್ನ ಹೋತೃವೆಂದು ಹೇಳಿದನು. ಆಗ ತಂದೆಯು,

**ಚತ್ವಾರಿ ಮಹಾಂತೀತಿ । ವೇದ ಭೋ ೩ ಇತಿ ಹೋವಾಚ................ವೇತ್ಥ ಚತ್ವಾರಿ ಕ್ಯಾನೀತಿ ವೇದ ಭೋ ೩ ಇತಿ ಹೋವಾಚ ವೇತ್ಥ ಚತ್ವಾರಿ ಕ್ಯಾನಾಂ ಕ್ಯಾನೀ೩ಇತಿ ವೇದ ಭೋ ೩ ಇತಿ ಹೋವಾಚ ವೇತ್ಥ ಚತ್ವಾರಿ ಅರ್ಕಾನಿತಿ ವೇದ ಭೋ ಇತಿ ಹೋವಾಚ ವೇತ್ಥ ಚತುರೋಽರ್ಕಾಣಾಮರ್ಕಾನಿತಿ ವೇದ ಭೋ ಇತಿ ಹೋವಾಚ ॥**

(ಶ. ಬ್ರಾ. ೧೦-೧-೪-೨)

ನೀನು ನಾಲ್ಕು ಮಹಾತತ್ತ್ವಗಳನ್ನು ತಿಳಿದಿದ್ದೀಯಾ? **ಕ** (ಪ್ರಜಾಪತಿ) ಸಂಬಂಧಿಯಾದ ತತ್ತ್ವವನ್ನು ತಿಳಿದಿದ್ದೀಯಾ? ಅದರಲ್ಲೂ ಅತ್ಯಂತ ಗೂಢವಾದ ನಾಲ್ಕು ತತ್ವಗಳು ನಿನಗೆ ಗೊತ್ತೇ, ನಾಲ್ಕು ವಿಶ್ವಜ್ಯೋತಿಗಳ ಸ್ವರೂಪವನ್ನು ಅರಿತಿದ್ದೀಯಾ? ಜ್ಯೋತಿಗಳಿಗೂ ಜ್ಯೋತೀರೂಪವಾದ ತತ್ತ್ವವನ್ನು ಮನನಮಾಡಿದ್ದೀಯಾ ಎಂದು ಪ್ರಶ್ನಿಸಲು ಶ್ವೇತಕೇತುವು ಅದೆಲ್ಲಾ ತನಗೆ ಗೊತ್ತೆಂದು ತಿಳಿಸಿದನು. ಪುನಃ ತಂದೆಯು,

**ವೇತ್ಥಾರ್ಕಮಿತಿ । ಅಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಪರ್ಣೋ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಪುಷ್ಪೇ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಕೋಶ್ಯಾವಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಸಮುದ್ಗಾವಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಧಾನಾ ಇತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಾಷ್ಠೀಲಾಮಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ವೇತ್ಥಾರ್ಕಮೂಲಮಿತ್ಯಥ ವೈ ನೋ ಭವಾನ್ವಕ್ಷ್ಯತೀತಿ ॥**

(ಶ. ಬ್ರಾ. ೧೦-೩-೪-೩)

ನಿನಗೆ ಅರ್ಕದ ಸ್ವರೂಪವೂ, ಅರ್ಕಪರ್ಣದ ಮತ್ತು ಅರ್ಕಪುಷ್ಪಗಳ ಸ್ವರೂಪವೂ ಗೊತ್ತೇ ? ಅರ್ಕಕೋಶಗಳ ಮತ್ತು ಅರ್ಕಧಾನ್ಯಗಳ ಸ್ವರೂಪವು ತಿಳಿದಿದೆಯೇ? ಅರ್ಕದ ಮೂಲವು ಗೊತ್ತೇ ಎಂದು ಕೇಳಲು ಅವೆಲ್ಲವೂ ತನಗೆ **ಗೊತ್ತಿಲ್ಲವೆಂದೂ** ಅವನ್ನು ತನಗೆ ವಿವರಿಸಬೇಕೆಂದೂ ಕೇಳಿದನು. ಆಗ ತಂದೆಯು ಅರ್ಕದ ವಿವರಣೆಯನ್ನು ಹೇಳುತ್ತಾ ಅದರ ಗೂಢಾರ್ಥವನ್ನೂ ತಿಳಿಸಿದ್ದಾನೆ.

ಅಥ ಹ ವೈ ಯತ್ತೈದುವಾಚ । ವೇತ್ಥಾರ್ಕಮಿತಿ ಪುರುಷಗ್ಂ ಹೈವ ತದುವಾಚ । ವೇತ್ಥಾರ್ಕಪರ್ಣೇ ಇತಿ ಕರ್ಣೌ ಹೈವ ತದುವಾಚ ವೇತ್ಥಾರ್ಕಪುಷ್ಪೇ ಇತ್ಯಕ್ಷಿಣೀ ಹೈವ ತದುವಾಚ ವೇತ್ಥಾರ್ಕಕೋಶ್ಯಾವಿತಿ ನಾಸಿಕೇ ಹೈವ ತದುವಾಚ ವೇತ್ಥಾರ್ಕಸಮುದ್ಗಾವಿತ್ಯೋಷ್ಠೌ ಹೈವ ತದುವಾಚ ವೇತ್ಥಾರ್ಕಧಾನಾ ಇತಿ ದಂತಾನ್ಹೈವ ತದುವಾಚ ವೇತ್ಥಾರ್ಕಾಷ್ಠೀಲಾಮಿತಿ ಜಿಹ್ವಾಗ್ಂ ಹೈವ ತದುವಾಚ ವೇತ್ಥಾರ್ಕಮೂಲಮಿತ್ಯನ್ನಗ್ಂ ಹೈವ ತದುವಾಚ ಸ ಏಷೋಽಗ್ನಿರರ್ಕೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಮರ್ಕಂ ಪುರುಷಮುಪಾಸ್ತೇಽಯಮಹಮಗ್ನಿರರ್ಕೋಽಸ್ಮೀತಿ ವಿದ್ಯಯಾ ಹೈವಾಸ್ಯೈಷ ಆತ್ಮನ್ನಗ್ನಿರರ್ಕಶ್ಚಿತೋ ಭವತಿ ॥

(ಶ ಬ್ರಾ. ೧೦-೩-೪-೫)

ಅರ್ಕವೆಂದರೆ ಪುರುಷನು ಎಂದರ್ಥ. ಅರ್ಕಪರ್ಣಗಳೇ ಪುರುಷನ ಕರ್ಣಗಳು; ಅರ್ಕಪುಷ್ಪಗಳೇ ನೇತ್ರಗಳು. ಅರ್ಕಕೋಶಗಳು ನಾಸಿಕದ್ವಾರಗಳು. ಅರ್ಕಸಮುದ್ಗವೆಂದರೆ ಓಷ್ಠಗಳು; ಅರ್ಕಧಾನಗಳೇ ದಂತಗಳು; ಅರ್ಕಾಷ್ಠೀಲವೇ ಜಿಹ್ವೆಯು; ಅರ್ಕಮೂಲವೇ ಅನ್ನವು; ಈ ಅರ್ಕದಿಂದ ಪ್ರತಿಪಾದಿತನಾಗಿರುವ ಪುರುಷನೇ ಯಜ್ಞಾಗ್ನಿಯು. ಈ ರೀತಿ ಅರ್ಕ, ಅಗ್ನಿ ಮತ್ತು ಪುರುಷ ಈ ಮೂರಕ್ಕೂ ತಾದಾತ್ಮ್ಯವನ್ನು ತಿಳಿದಿರುವವನ ಯಜ್ಞವೇದಿಯಲ್ಲಿ ಯಜ್ಞಾಗ್ನಿಯ ಪ್ರತ್ಯಕ್ಷವಾಗುತ್ತದೆ ಎಂದು ಅರ್ಕಶಬ್ದದ ಗೂಢಾರ್ಥವನ್ನು ತಿಳಿಸಿದ್ದಾನೆ. ಈ ಅರ್ಕವೇ ಅಕ್ಷರ ರೂಪಿಯಾದ ಪರಬ್ರಹ್ಮ ತತ್ವವೆಂದು ಪುನಃ ವಿವರಿಸುತ್ತಾ;

ತದ್ಧೈತತ್ಪಶ್ಯನ್ನೃಷಿರಭ್ಯನೂವಾದ । ಭೂತಂ ಭವಿಷ್ಯತ್ಪ್ರಸ್ತೌಮಿ । ಮಹದ್ಬ್ರಹ್ಮೈಕಮಕ್ಷರಂ ಬಹು ಬ್ರಹ್ಮೈಕಮಕ್ಷರಮಿತ್ಯೇತದ್ಧ್ಯೇವಾಕ್ಷರಗ್ಂ ಸರ್ವೇ ದೇವಾಃ ಸರ್ವಾಣಿ ಭೂತಾನ್ಯಭಿಸಂಪದ್ಯಂತೇ ಇದೇತದ್ಬ್ರಹ್ಮ ಚ ಕ್ಷತ್ರಂ ಚಾಗ್ನಿರೇವ ಬ್ರಹ್ಮೇಂದ್ರಃ ಕ್ಷತ್ರಮಿಂದ್ರಾಗ್ನೀ ವೈ ವಿಶ್ವೇ ದೇವಾ ವಿಡು ವಿಶ್ವೇ-ದೇವಾಸ್ತದೇತದ್ಬ್ರಹ್ಮ ಕ್ಷತ್ರಂ ವಿಟ್ ॥

(ಶ. ಬ್ರಾ. ೧೦-೪-೧-೯)

ಭೂತಭವಿಷ್ಯದ್ವರ್ತಮಾನಗಳನ್ನು ಪ್ರತಿಬಿಂಬಿಸುತ್ತಲೂ, ಸರ್ವವ್ಯಾಪಕವಾಗಿರುತ್ತಲೂ ಇರುವ ಪರಬ್ರಹ್ಮವೇ ಈ ಅರ್ಕವು. ಸಕಲ ದೇವತೆಗಳೂ ಅರ್ಕರೂಪವೂ, ಅಕ್ಷರರೂಪವೂ ಆದ ಈ ಪರಬ್ರಹ್ಮದಲ್ಲಿ ಅಂತರ್ಗತರಾಗಿದ್ದಾರೆ. ಬ್ರಹ್ಮಶಕ್ತಿಯನ್ನೂ, ಕ್ಷಾತ್ರಶಕ್ತಿಯನ್ನೂ ಇದೊಂದೇ ಪ್ರತಿಬಿಂಬಿಸುತ್ತದೆ. ಸಕಲ ದೇವತೆಗಳೂ ಇದರಲ್ಲೇ ಅಂತರ್ಗತರಾಗಿದ್ದಾರೆ ಎಂದು ಋಷಿಯು ಯಾವ ತತ್ತ್ವವನ್ನು ವಿವರಿಸಿದನೋ ಅದೇ ಈ ಅರ್ಕತತ್ತ್ವವು ಎಂದು ತಿಳಿಸಿದೆ. ಮತ್ತು,

ಸ ಏಷ ಏವಾರ್ಕಃ । ಯೋಽಯಮಗ್ನಿಶ್ಚಿತಸ್ತಸ್ಯೈತದನ್ನಂ ಕ್ಯನೇಷ ಸೌಮ್ಯೋಽಧ್ವರಸ್ತದರ್ಕ್ಯಂ ..................ಸಹೋದಕ್ರಾಮದೇಷ ಚಂದ್ರಮಾಃ ॥

(ಶ. ಬ್ರಾ. ೧೦-೪-೧-೨೧)

ಅರ್ಕವೇ ಈ ಯಜ್ಞ ದೇವತೆಯು. ಕ್ಯ ತತ್ತ್ವವೇ ಎಂದರೆ ಸೋಮಯಾಗವೇ ಅದರ ಅನ್ನವು. ಇವೆರಡರ ಸಾಮರಸ್ಯವು ಅರ್ಕ್ಯವಾಗುತ್ತದೆ.

**ಸ ಏಷ ಏವಾರ್ಕೋಃ ಯ ಏಷ ತಪತಿ ತಸ್ಯೈತದನ್ನಂ ಕ್ಯಮೇಷ ಚಂದ್ರಮಾಸ್ತದರ್ಕ್ಯಂ ಯಜುಷ್ಟ ಏಷ ಏವ ಮಹಾನ್...........|| ಇತ್ಯಧಿದೈವತಂ |**

(ಶ. ಬ್ರಾ. ೧೦-೪-೧-೨೨)

ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿರುವ ಆದಿತ್ಯನೇ ಅರ್ಕವು. ಚಂದ್ರನೇ ಅದರ ಅನ್ನವು. ಇವೆರಡರ ಸಾಮರಸ್ಯವು ಅರ್ಕ್ಯವಾಗುತ್ತದೆ. ಇದು ಅಧಿದೈವತಪಕ್ಷವು.

**ಅಥಾಧ್ಯಾತ್ಮಂ ಪ್ರಾಣೋ ವಾ ಅರ್ಕಸ್ತಸ್ಯಾನ್ನಮೇವ ಕ್ಯಂ................||**

ಪ್ರಾಣವೇ ಅರ್ಕವು. ಕ್ಯತತ್ತ್ವವೇ ಅದರ ಅನ್ನವು. ಇದರ ಸಾಮರಸ್ಯವು ಅರ್ಕ್ಯವಾಗುತ್ತದೆ. ಇತ್ಯಾದಿ ಅಕತತ್ತ್ವವನ್ನು ಅಧಿದೈವತಪಕ್ಷದಲ್ಲೂ, ಆಧ್ಯಾತ್ಮಪಕ್ಷದಲ್ಲೂ ವಿವರಿಸಿದೆ.

|| ಸಂಹಿತಾಪಾಠಃ ||

ಕನಿಕ್ರದದನು ಪಂಥಾಮೃತಸ್ಯ ಶುಕ್ರೋಃ ವಿ ಭಾಸ್ಯಮೃತಸ್ಯ ಧಾಮ |
ಸ ಇಂದ್ರಾಯ ಪವಸೇ ಮತ್ಸರವಾನ್ಹಿನ್ವಾನೋಃ ವಾಚಂ ಮತಿಭಿಃ ಕವೀನಾಂ||

|| ಪದಪಾಠಃ ||

ಕನಿಕ್ರದತ್ | ಅನು | ಪಂಥಾಂ | ಋತಸ್ಯ | ಶುಕ್ರಃ | ವಿ | ಭಾಸಿ | ಅಮೃತಸ್ಯ | ಧಾಮ |
ಸಃ | ಇಂದ್ರಾಯ | ಪವಸೇ | ಮತ್ಸರ್ಽವಾನ್ | ಹಿನ್ವಾನಃ | ವಾಚಂ | ಮತಿಽಭಿಃ | ಕವೀನಾಂ || ೩೨ ||

|| ಸಾಯಣಭಾಷ್ಯಂ ||

ಅಭಿಷೂಯಮಾಣಃ ಸ ಸೋಮ ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಪಂಥಾನಂ ಮಾರ್ಗಮಭಿ ಕನಿಕ್ರದತ್ | ಪುನಃ ಪುನಃ ಶಬ್ದಾಯತೇ | ಅಥ ಪ್ರತ್ಯಕ್ಷಃ | ಅಮೃತಸ್ಯಾಮರಣಧರ್ಮಸ್ಯ ಧಾಮ ಸ್ಥಾನಭೂತಃ | ಮರಣರಹಿತ ಇತ್ಯರ್ಥಃ | ತಾದೃಶಃ ಶುಕ್ರಃ ಶುಕ್ಲವರ್ಣಸ್ತ್ವಂ ವಿ ಭಾಸಿ | ವಿಶೇಷೇಣ ರಾಜಸಿ | ಮತ್ಸರವಾನ್ ಮದಕರರಸಯುಕ್ತಃ ಸ ತ್ವಮಿಂದ್ರಾಯೇಂದ್ರಾರ್ಥಂ ಪವಸೇ | ಕ್ಷರಸಿ| ಕೀದೃಶಃ| ಕವೀನಾಂ ಸ್ತೋತೄಣಾಂ ಮತಿಭಿಃ ಸಹ ವಾಚಂ ಶಬ್ದಂ ಹಿನ್ವಾನಃ ಪ್ರೇರಯನ್ ಪವಸೇ ||

|| ಪ್ರತಿಪದಾರ್ಥ ||

**(ಸೋಮಃ** - ಸೋಮನು) | **ಋತಸ್ಯ**—ಸತ್ಯಾತ್ಮಕವಾದ ಯಜ್ಞದ | **ಪಂಥಾಂ ಅನು**—ಮಾರ್ಗದಲ್ಲೆಲ್ಲ | **ಕನಿಕ್ರದತ್**—ಶಬ್ದಮಾಡುತ್ತಾನೆ. | (ಎಲೈ ಸೋಮನೇ) **ಅಮೃತಸ್ಯ**—ಶಾಶ್ವತಸ್ಥಿತಿಗೆ | **ಧಾಮ**—ಸ್ಥಾನಭೂತನಾದ ನೀನು | **ಶುಕ್ರಃ**—ಶುಭ್ರವರ್ಣವುಳ್ಳವನಾಗಿ | **ವಿ ಭಾಸಿ**— ಪ್ರಕಾಶಿಸುತ್ತೀಯೆ. | **ಮತ್ಸರವಾನ್**—ಹರ್ಷಕಾರಕನಾದ | **ಸಃ**— ನೀನು | **ಕವೀನಾಂ**— ಸ್ತುತಿಕರ್ತರ | **ಮತಿಭಿಃ**—ಸ್ತುತಿಗಳೊಡನೆ |

**ವಾಚಂ**—ಶಬ್ದವನ್ನು | **ಹಿನ್ವಾನಃ**—ಪ್ರೇರಿಸುತ್ತ | **ಇಂದ್ರಾಯ**—ಇಂದ್ರನ ಪಾನಾರ್ಥವಾಗಿ | **ಪವಸೇ**—ಪ್ರವಹಿಸುತ್ತೀಯೆ.

॥ ಭಾವಾರ್ಥ ॥

ಸೋಮನು ಸತ್ಯಾತ್ಮಕವಾದ ಯಜ್ಞಮಾರ್ಗದಲ್ಲೆಲ್ಲ ಶಬ್ದಮಾಡುತ್ತಾನೆ, ಎಲೈ ಸೋಮನೇ, ಅಮೃತತ್ವಕ್ಕೆ ಸ್ಥಾನಭೂತನಾದ ನೀನು ಶುಭ್ರವರ್ಣವುಳ್ಳವನಾಗಿ ಪ್ರಕಾಶಿಸುತ್ತೀಯೆ. ಹರ್ಷಕಾರಕನಾದ ನೀನು ಸ್ತುತಿಕರ್ತರ ಸ್ತುತಿಗಳೊಡನೆ ಶಬ್ದವನ್ನು ಪ್ರೇರಿಸುತ್ತ ಇಂದ್ರನ ಪಾನಾರ್ಥವಾಗಿ ಪ್ರವಹಿಸುತ್ತೀಯೆ.

## English Translation.

(The Soma) cries repeatedly upon the path of the sacrifice; you shine (being) the abode of immortality; possessing exhilaration you flow for Indra, sending forth your voice with the praises of the sages.

॥ ಸಂಹಿತಾಪಾಠಃ ॥

ದಿವ್ಯಃ ಸುಪರ್ಣೋಽವ ಚಕ್ಷಿ ಸೋಮ ಪಿನ್ವನ್ಧಾರಾಃ ಕರ್ಮಣಾ ದೇವವೀತೌ।
ಏಂದೋ ವಿಶ ಕಲಶಂ ಸೋಮಧಾನಂ ಕ್ರಂದನ್ನಿಹಿ ಸೂರ್ಯಸ್ಯೋಪ
ರಶ್ಮಿಂ ॥ ೩೩ ॥

॥ ಪದಪಾಠಃ ॥

ದಿವ್ಯಃ । ಸುಽಪರ್ಣಃ । ಅವ । ಚಕ್ಷಿ । ಸೋಮ । ಪಿನ್ವನ್ । ಧಾರಾಃ । ಕರ್ಮಣಾ । ದೇವಽವೀತೌ ।
ಆ । ಇಂದೋ ಇತಿ । ವಿಶ । ಕಲಶಂ । ಸೋಮಽಧಾನಂ । ಕ್ರಂದನ್ । ಇಹಿ । ಸೂರ್ಯಸ್ಯ । ಉಪ ।
ರಶ್ಮಿಂ ॥ ೩೩ ॥

॥ ಸಾಯಣಭಾಷ್ಯಂ ॥

**ಹೇ ಸೋಮ ದಿವ್ಯೋ ದಿವಿ ಭವಃ ಸುಪರ್ಣಃ ಸುಪತನಸ್ತ್ವಮವ ಚಕ್ಷಿ। ಅವಸ್ತಾತ್ಪಶ್ಯ ॥ ಚಷ್ಟೇರ್ಲಟಿ ಸಿಪಿ ವ್ಯತ್ಯಯೇನ ಪರಸ್ಮೈಪದಂ ॥ ಕಿಂ ಕುರ್ವನ್। ದೇವವೀತೌ ದೇವಾನಾಂ ಹವಿರ್ಭಕ್ಷಣ-ಸ್ಥಾನೇ ಯಜ್ಞೇ ಕರ್ಮಣಾ ಧಾರಾಃ ಪಿನ್ವನ್ ಕ್ಷರನ್। ಕಿಂಚ ಹೇ ಇಂದೋ ಸೋಮಧಾನಂ ಕಲಶಮಾ ವಿಶ। ಕ್ರಂದಞ್ಛಬ್ದಾಯಮಾನಸ್ತ್ವಂ ಸೂರ್ಯಸ್ಯ ಪ್ರೇರಕಸ್ಯಾದಿತ್ಯಸ್ಯ ರಶ್ಮಿಂ ಕಾಂತಿಮುಪೇಹಿ। ಉಪಗಚ್ಛ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ | **ದಿವ್ಯಃ**—ದ್ಯುಲೋಕೋತ್ಪನ್ನನೂ | **ಸುಪರ್ಣಃ**—ಉತ್ತಮವಾದ ಸಂಚಾರವುಳ್ಳವನೂ ಆದ ನೀನು | **ದೇವವೀತೌ**—ಯಜ್ಞದಲ್ಲಿ | **ಕರ್ಮಣಾ**—ನಿನ್ನ ಸತ್ಕರ್ಮದಿಂದ | **ಧಾರಾಃ**—

ರಸಧಾರೆಗಳನ್ನು | ಪಿನ್ವನ್—ಹರಿಯುವಂತೆ ಮಾಡುತ್ತ | ಅವ ಚಕ್ಷ—ನಮ್ಮ ಕಡೆ ಬಗ್ಗಿ ನೋಡು. | ಸೋಮಧಾನಂ—ಸೋಮವನ್ನು ಸ್ಥಾಪಿಸುವ | ಕಲಶಂ—ಪಾತ್ರೆಯೊಳಕ್ಕೆ | ಆ ವಿಶ—ಪ್ರವೇಶಿಸು. | ಕ್ರಂದನ್—ಶಬ್ದಮಾಡುತ್ತ | ಸೂರ್ಯಸ್ಯ—ಸೂರ್ಯನ | ರಶ್ಮಿಂ—ರಶ್ಮಿಯನ್ನು | ಉಪೇಹಿ—ಸೇರಿಕೊ.

|| ಭಾವಾರ್ಥ ||

ಎಲೈ ಸೋಮದೇವನೇ, ದ್ಯುಲೋಕೋತ್ಪನ್ನನೂ, ಉತ್ತಮವಾದ ಸಂಚಾರವುಳ್ಳವನೂ ಆದ ನೀನು ಯಜ್ಞದಲ್ಲಿ ನಿನ್ನ ಸತ್ಕರ್ಮದಿಂದ ರಸಧಾರೆಗಳನ್ನು ಹರಿಯುವಂತೆ ಮಾಡುತ್ತ, ನಮ್ಮ ಕಡೆಗೆ ಬಗ್ಗಿ ನೋಡು. ಸೋಮರಸವಿಡುವ ಕಲಶದೊಳಕ್ಕೆ ಪ್ರವೇಶಿಸು. ಶಬ್ದಮಾಡುತ್ತ ಸೂರ್ಯನ ರಶ್ಮಿಯನ್ನು ಸೇರಿ ಐಕ್ಯನಾಗು.

English Translation

Soma, who are celestial, well-winged, you look down from heaven pouring forth your streams by the pious rite at the sacrifice ; Indu,enter into pitcher the receptacle of the Soma : crying aloud approach the sun's rays.

|| ಸಂಹಿತಾಪಾಠಃ ||

ತಿಸ್ರೋ ವಾಚ ಈರಯತಿ ಪ್ರ ವಹ್ನಿರ್‌ಋತಸ್ಯ ಧೀತಿಂ ಬ್ರಹ್ಮಣೋ ಮನೀಷಾಂ |
ಗಾವೋ ಯಂತಿ ಗೋಪತಿಂ ಪೃಚ್ಛಮಾನಾಃ ಸೋಮಂ ಯಂತಿ ಮತಯೋ ವಾವಶಾನಾಃ || ೩೪ ||

|| ಪದಪಾಠಃ ||

ತಿಸ್ರಃ | ವಾಚಃ | ಈರಯತಿ | ಪ್ರ | ವಹ್ನಿಃ | ಋತಸ್ಯ | ಧೀತಿಂ | ಬ್ರಹ್ಮಣಃ | ಮನೀಷಾಂ |
ಗಾವಃ | ಯಂತಿ | ಗೋಽಪತಿಂ | ಪೃಚ್ಛಮಾನಾಃ | ಸೋಮಂ | ಯಂತಿ | ಮತಯಃ | ವಾವಶಾನಾಃ ||೩೪||

|| ಸಾಯಣಭಾಷ್ಯಂ ||

ವಹ್ನಿರ್ವೋಢಾ ಯಜಮಾನಸ್ತಿಸ್ರೋ ವಾಚ ಋಗ್ಯಜುಃಸಾಮಾತ್ಮಿಕಾಃ ಸ್ತುತೀಃ ಪ್ರೇರಯತಿ | ತಥರ್ತಸ್ಯ ಯಜ್ಞಸ್ಯ ಧೀತಿಂ ಧಾರಯಿತ್ರೀಂ ಬ್ರಹ್ಮಣಃ ಪರಿವೃಢಸ್ಯ ಸೋಮಸ್ಯ ಮನೀಷಾಂ ಮನಸ ಈಶಿತ್ರೀಂ ಕಲ್ಯಾಣೀಂ ವಾಚಂ ಚ ಪ್ರೇರಯತಿ | ಕಿಂಚ ಗೋಪತಿಂ ವೃಷಭಂ ಯಥಾ ಗಾವೋಽಭಿಗಚ್ಛಂತಿ ತದ್ವದ್ಗವಾಂ ಸ್ವಾಮಿನಂ ಸೋಮಂ ಗಾವಃ ಪೃಚ್ಛಮಾನಾಃ ಪೃಚ್ಛಂತ್ಯಃ ಸತ್ಯೋ ಯಂತಿ | ಸ್ವಪಯಸಾ ಮಿಶ್ರಯಿತುಮಭಿಗಚ್ಛಂತಿ | ತಥಾ ವಾವಶಾನಾಃ ಕಾಮಯಮಾನಾ ಮತಯಃ ಸ್ತೋತಾರಃ ಸೋಮಂ ಯಂತಿ | ಸ್ತೋತುಮಭಿಗಚ್ಛಂತಿ ||

|| ಪ್ರತಿಪದಾರ್ಥ ||

**ವಹ್ನಿಃ** — ಯಜ್ಞನಿರ್ವಾಹಕನಾದ ಯಜಮಾನನು | **ತಿಸ್ರಃ ವಾಚಃ**— ಋಗ್ಯಜುಸ್ಸಾಮಾತ್ಮಿಕವಾದ ಮೂರು ವಿಧವಾದ ವಾಕ್ಕುಗಳನ್ನೂ | **ಪ್ರೇರಯತಿ**— ಪಠಿಸುತ್ತಾನೆ | **ಋತಸ್ಯ**— ಯಜ್ಞಕ್ಕೆ | **ಧೀತಿಂ**— ಧಾರಕವಾದ | **ಬ್ರಹ್ಮಣಃ**— ಸೋಮನನ್ನುದ್ದೇಶಿಸಿದ | **ಮನೀಷಾಂ**— ಸ್ತುತಿಯನ್ನು ಪಠಿಸುತ್ತಾನೆ | **ಗಾವಃ**— ಕ್ಷೀರದಿಂದ ಕೂಡಿದ ಗೋವುಗಳು | **ಗೋಃಪತಿಂ**— ಗೋವುಗಳಿಗೆ ಒಡೆಯನಾದ ಸೋಮನು ಇರುವ ಸ್ಥಾನವನ್ನು | **ಪೃಚ್ಛಮಾನಾಃ**— ಪ್ರಶ್ನಿಸುತ್ತ | **ಯಂತಿ**— ಸೋಮನನ್ನು ಸಮೀಪಿಸುತ್ತವೆ. (ಗೋವುಗಳು ವೃಷಭವನ್ನು ಹುಡುಕುವಂತೆ ಗೋವುಗಳು ಸೋಮನನ್ನು ಹುಡುಕುತ್ತವೆ) | **ವಾವಶಾನಾಃ**— ಸೋಮನನ್ನು ಅಪೇಕ್ಷಿಸಿದ | **ಮತಯಃ**— ಸ್ತುತಿಕರ್ತರು | **ಸೋಮಂ**— ಸೋಮನನ್ನು | **ಯಂತಿ**— ಸಮೀಪಿಸುತ್ತಾರೆ.

|| ಭಾವಾರ್ಥ ||

ಯಜ್ಞನಿರ್ವಾಹಕನಾದ ಯಜಮಾನನು ಋಗ್ಯಜುಸ್ಸಾಮಾತ್ಮಿಕವೆಂಬ ಮೂರು ವಿಧವಾದ ವಾಕ್ಕುಗಳನ್ನು ಪಠಿಸುತ್ತಾನೆ. ಯಜ್ಞಕ್ಕೆ ಧಾರಕವಾದ ಸೋಮನನ್ನುದ್ದೇಶಿಸಿದ ಸ್ತುತಿಯನ್ನೂ ಪಠಿಸುತ್ತಾನೆ. ಕ್ಷೀರದಿಂದ ಕೂಡಿದ ಗೋವುಗಳು ತಮಗೆ ಒಡೆಯನಾದ ವೃಷಭವನ್ನು ಹುಡುಕುವಂತೆ ಗೋವುಗಳಿಗೆ ಒಡೆಯನಾದ ಸೋಮನನ್ನು ಹುಡುಕುತ್ತವೆ. ಸೋಮನನ್ನು ಅಪೇಕ್ಷಿಸುವ ಸ್ತುತಿಕರ್ತರು ಸೋಮನನ್ನು ಸಮೀಪಿಸುತ್ತಾರೆ.

English Translation.

The bearer (of the oblation) utters the three praises, the thought of Bramhma that sustains the sacrifice ; the cows come to the cowherd asking (to be milked), the praisers proceed to the Soma with eagerness.

ವಿಶೇಷ ವಿಷಯಗಳು

ಈ ಋಕ್ಕಿಗೆ ನಿರುಕ್ತ ಪರಿಶಿಷ್ಟದಲ್ಲಿ ಎರಡು ವಿಧವಾದ ವಿವರಣೆ ಇದೆ ಒಂದು ಆಧಿದೈವಿಕವಾದುದು, ಇನ್ನೊಂದು ಆಧ್ಯಾತ್ಮಿಕವಾದುದು. ಅಧಿದೈವತ ಅಥವಾ ದೇವತಾವಿಷಯಕವಾದ ಅರ್ಥವನ್ನು ಸಾಯಣಭಾಷ್ಯದಲ್ಲಿ ವಿವರಿಸಲಾಗಿದೆ. ಆದರೆ ಯಾಸ್ಕರು ಕೊಟ್ಟಿರುವ ವಿವರಣೆಯು ಸ್ವಲ್ಪ ವ್ಯತ್ಯಸ್ತವಾಗಿದೆ. ಆದ್ದರಿಂದ ಇಲ್ಲಿ ಯಾಸ್ಕರು ವಿವರಿಸಿರುವ ಎರಡುವಿಧ ವಿವರಣೆಗಳನ್ನು ಸೂಚಿಸುತ್ತೇವೆ.

ಅಧಿದೈವತಪಕ್ಷದಲ್ಲಿ—

**ವಹ್ನಿರಾದಿತ್ಯೋ ಭವತಿ ಸ ತಿಸ್ರೋ ವಾಚಃ ಪ್ರೇರಯತ್ಯೃಚೋ ಯಜೂಂಷಿ ಸಾಮಾನ್ಯೃತಸ್ಯಾದಿತ್ಯಸ್ಯ ಕರ್ಮಾಣಿ ಬ್ರಹ್ಮಣೋ ಮತಾನ್ಯೇಷ ಏವೈತತ್ ಸರ್ವಮಕ್ಷರಮಿತ್ಯಧಿದೈವತಂ ||**

(ನಿ. ಪರಿಶಿಷ್ಟ. ೧೪-೧೭)

ಇಲ್ಲಿ ವಹ್ನಿ ಎಂದರೆ ಆದಿತ್ಯನು ಆ ಆದಿತ್ಯನು ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೆಂಬ ಮೂರು ವೇದಗಳ ವಾಕ್ಯಗಳನ್ನು ಎಂದರೆ ಮಂತ್ರಗಳನ್ನು ಸ್ತೋತ್ರಮಾಡುವವರಲ್ಲಿ ಪ್ರೇರಿಸುತ್ತಾನೆ. ಸತ್ಯಾತ್ಮಕನಾದ

ಈ ಆದಿತ್ಯನ ಕರ್ಮಗಳೇ ಬ್ರಹ್ಮನ ನಿಯಮಾನುಸಾರವಾಗಿರುವವು. **ಅಸೌ ವಾ ಆದಿತ್ಯೋ ಬ್ರಹ್ಮೇತಿ** ಎಂಬ ಶ್ರುತಿವಾಕ್ಯದಂತೆ ಈ ಆದಿತ್ಯನೇ ಪರಬ್ರಹ್ಮನು, ಅವನ ನಿಯಮದಂತೆಯೇ ಸಕಲ ಪ್ರಾಣಿಗಳ ಕರ್ಮಗಳೂ ನಡೆಯುತ್ತಿರುವವು.

**ಅಧ್ಯಾತ್ಮಪಕ್ಷದಲ್ಲಿ**

**ವಹ್ನಿರಾತ್ಮಾ ಭವತಿ ಸ ತಿಸ್ರೋ ವಾಚ ಈರಯತಿ ಪ್ರೇರಯತಿ ವಿದ್ಯಾಮತಿಬುದ್ಧಿಮತಾವ್ಯತೆಸ್ಯಾತ್ಮನಃ ಕರ್ಮಾಣಿ ಬ್ರಹ್ಮಣೋ ಮತಾನ್ಯಯನೇನ್ಯೈತತ್ ಸರ್ವಮನುಭವತ್ಯಾತ್ಮಗತಿಮಾಚಷ್ಟೇ ||** (ನಿ. ೧೪-೧೪)

ಇಲ್ಲಿ ವಹ್ನಿಃ ಎಂದರೆ ಆತ್ಮನು. ಆ ಆತ್ಮನು ಶರೀರದಲ್ಲಿದ್ದುಕೊಂಡು ತಿಸ್ರಃ ವಾಚಃ ಎಂದರೆ ವಿದ್ಯಾ, ಮತಿ, ಬುದ್ಧಿಗಳೆಂಬ ಮೂರುವಿಧ ವ್ಯಾಪಾರಗಳಿಗೂ ಪ್ರೇರಕನಾಗಿರುತ್ತಾನೆ ಮತ್ತು ಬ್ರಹ್ಮನ ನಿಯಮದಂತೆ ಆಯಾ ಪ್ರಾಣಿಗಳು ಮಾಡುವ ಸಕಲ ಕರ್ಮಗಳ ಫಲಾದಿಗಳನ್ನು ಅನುಭವಿಸುತ್ತಿರುತ್ತಾನೆ.

|| ಸಂಹಿತಾಪಾಠಃ ||

**ಸೋಮಂ ಗಾವೋ ಧೇನವೋ ವಾವಶಾನಾಃ ಸೋಮಂ ವಿಪ್ರಾ ಮತಿಭಿಃ ಪೃಚ್ಛಮಾನಾಃ |**

**ಸೋಮಃ ಸುತಃ ಪೂಯತೇ ಅಜ್ಯಮಾನಃ ಸೋಮೇ ಅರ್ಕಾಸ್ತ್ರಿಷ್ಟುಭಃ ಸಂ ನವಂತೇ || ೩೫ ||**

|| ಪದಪಾಠಃ ||

**ಸೋಮಂ | ಗಾವಃ | ಧೇನವಃ | ವಾವಶಾನಾಃ | ಸೋಮಂ | ವಿಪ್ರಾಃ | ಮತಿಽಭಿಃ | ಪೃಚ್ಛಮಾನಾಃ |**

**ಸೋಮಃ | ಸುತಃ | ಪೂಯತೇ | ಅಜ್ಯಮಾನಃ | ಸೋಮೇ | ಅರ್ಕಾಃ | ತ್ರಿಽಸ್ತುಭಃ | ಸಂ | ನವಂತೇ ||**

|| ಸಾಯಣಭಾಷ್ಯಂ ||

**ಧೇನವಃ ಪ್ರೀಣಯಿತ್ರ್ಯೋ ಗಾವಃ ಸೋಮಂ ವಾವಶಾನಾಃ ಕಾಮಯಮಾನಾ ಭವಂತಿ | ವಿಪ್ರಾ ಮೇಧಾವಿನಃ ಸ್ತೋತಾರೋ ಮತಿಭಿಃ ಪೃಚ್ಛಮಾನಾಃ ಪೃಚ್ಛಂತೋ ಭವಂತಿ | ಅಜ್ಯಮಾನೋ ಗೋಭಿಃ ಸಿಚ್ಯಮಾನಃ ಸುತೋಽಭಿಷುತಃ ಸೋಮ ಋತ್ವಿಗ್ಭಿಃ ಪರಿಪೂಯತೇ | ತಥಾ ತ್ರಿಷ್ಟುಭಸ್ತ್ರಿಷ್ಟುಬ್ರೂಪಾ ಅರ್ಕಾ ಅಸ್ಮಾಭಿಃ ಕ್ರಿಯಮಾಣಾ ಏತೇ ಮಂತ್ರಾಃ ಸೋಮೇ ಸಂ ನವಂತೇ | ಸಂಗಚ್ಛಂತೇ ||**

|| ಪ್ರತಿಪದಾರ್ಥ ||

**ಧೇನವಃ**—ತೃಪ್ತಿಕರವಾದ ಕ್ಷೀರವನ್ನು ಕೊಡುವ | **ಗಾವಃ**—ಗೋವುಗಳು | **ಸೋಮಂ**—ಸೋಮನನ್ನು | **ವಾವಶಾನಾಃ**—ಸೇವಿಸಲು ಇಚ್ಛಿಸುತ್ತವೆ. | **ವಿಪ್ರಾಃ**—ಮೇಧಾವಿಗಳಾದ ಸ್ತುತಿಕರ್ತರು | **ಮತಿಭಿಃ**—ಸ್ತುತಿಗಳಿಂದ | **ಸೋಮಂ ಪೃಚ್ಛಮಾನಾಃ**—ಸೋಮನ ಸ್ಥಾನವನ್ನು ತಿಳಿಯಲು ಪ್ರಶ್ನಿಸುತ್ತಾರೆ. | **ಸುತಃ**—

ಹಿಂಡಲ್ಪಟ್ಟ | **ಸೋಮಃ**—ಸೋಮನು | **ಅಜ್ಯಮಾನಃ**—ಕ್ಷೀರಾದಿಗಳಿಂದ ಸಂಸ್ಕೃತನಾಗಿ | **ಪೂಯತೇ**—ಶುದ್ಧಿಗೊಳ್ಳುತ್ತಾನೆ. | **ತ್ರಿಷ್ಟುಭಃ**—ತ್ರಿಷ್ಟುಪ್‌ಚ್ಛಂದಸ್ಸುಗಳಲ್ಲಿ ನಿರ್ಮಿತವಾದ | **ಅರ್ಕಾಃ**—ನಮ್ಮ ಸ್ತುತಿಗಳು | **ಸೋಮೇ**—ಸೋಮನಲ್ಲಿ | **ಸಂ ನವಂತೇ**—ಒಂದಾಗಿ ಸೇರಿಕೊಳ್ಳುತ್ತವೆ

|| ಭಾವಾರ್ಥ ||

ತೃಪ್ತಿಕರವಾದ ಕ್ಷೀರವನ್ನು ಕೊಡುವ ಗೋವುಗಳು ಸೋಮನನ್ನು ಸೇವಿಸಲು ಇಚ್ಛಿಸುತ್ತವೆ. ಮೇಧಾವಿಗಳಾದ ಸ್ತುತಿಕರ್ತರು ಸ್ತುತಿಗಳಿಂದ ಸೋಮನ ಸ್ಥಾನವನ್ನು ತಿಳಿಯಲು ಪ್ರಶ್ನಿಸುತ್ತಾರೆ. ಹಿಂಡಲ್ಪಟ್ಟ ಸೋಮನು ಕ್ಷೀರಾದಿಗಳಿಂದ ಸಂಸ್ಕೃತನಾಗಿ ಶುದ್ಧಿಗೊಳ್ಳುತ್ತಾನೆ. ತ್ರಿಷ್ಟುಪ್‌ಚ್ಛಂದಸ್ಸುಗಳಲ್ಲಿ ನಿರ್ಮಿತವಾದ ನಮ್ಮ ಸ್ತುತಿಗಳು ಸೋಮನಲ್ಲಿ ಒಂದಾಗಿ ಸೇರಿಕೊಳ್ಳುತ್ತವೆ.

## English Translation.

The milch cows (are) longing for the Soma : wise men (are) inquiring for him with praises ; Soma being effused is purified blended (with the milk), our adorations in the Trishtubh metre are united in the Soma.

|| ವಿಶೇಷವಿಷಯಗಳು ||

ನಿರುಕ್ತ ಪರಿಶಿಷ್ಟದಲ್ಲಿ ಈ ಋಕ್ಕಿಗೆ ಆಧಿದೈವತ, ಅಧ್ಯಾತ್ಮ ಎಂಬ ಎರಡು ವಿಧವಾದ ಅರ್ಥಗಳನ್ನು ವಿವರಿಸಲಾಗಿದೆ.

### ಅಧಿದೈವತಪಕ್ಷ

ಏತ ಏವ ಸೋಮಂ ಗಾವೋ ಧೇನವೋ ರಶ್ಮಯೋ ವಾವಶ್ಯಮಾನಾಃ ಕಾಮಯಮಾನಾ ಆದಿತ್ಯಂ ಯಂತ್ಯೇವಮೇವ ಸೋಮಂ ವಿಪ್ರಾ ರಶ್ಮಯೋ ಮತಿಭಿಃ ಪೃಚ್ಛಮಾನಾಃ ಕಾಮಯಮಾನಾ ಆದಿತ್ಯಂ ಯಂತ್ಯೇವಮೇವ ಸೋಮಃ ಸುತಃ ಪೂಯತೇ ಅಜ್ಯಮಾನ ಏತಮೇವಾರ್ಕಾಶ್ಚ ತ್ರಿಷ್ಟುಭಶ್ಚ ಸನ್ನವಂತೇ ತತ ಏತಸ್ಮಿನ್ನಾದಿತ್ಯ ಏಕಂ ಭವಂತೀತ್ಯಧಿದೈವತಂ ||

(ನಿ. ೧೪-೧೫)

ಇಲ್ಲಿ **ಧೇನವಃ** ಎಂದರೆ ಸೂರ್ಯನ ರಶ್ಮಿಗಳು ಎಂದರ್ಥಮಾಡಿದಾರೆ. ಯಾವರೀತಿ ಗೋವುಗಳು ಸೂರ್ಯರಶ್ಮಿಗಳನ್ನು (ಎಂದರೆ ಬಿಸಿಲನ್ನು) ಅಪೇಕ್ಷಿಸುತ್ತಾ ತಮ್ಮ ಕೊಟ್ಟಿಗೆಯಿಂದ ಹೊರಟು ಬಿಸಿಲಿನಿಂದ ಆಹ್ಲಾದಕರವಾಗಿರುವ ಹುಲ್ಲುಗಾವಲಿಗೆ ಮೇಯುವುದಕ್ಕಾಗಿ ಹೋಗುವವೋ, ಅದರಂತೆ ಸ್ತುತ್ಯಾದಿಗಳಿಂದ ಋತ್ವಿಗ್ಜನರು ಸೋಮನನ್ನು ಸಮೀಪಿಸಿ ಶುದ್ಧಿಗೊಳಿಸುತ್ತಾರೆ.

### ಅಧ್ಯಾತ್ಮಪಕ್ಷ

ಏತ ಏವ ಸೋಮಂ ಗಾವೋ ಧೇನವ ಇಂದ್ರಿಯಾಣಿ ವಾವಶ್ಯಮಾನಾನಿ ಕಾಮಯಮಾನಾನ್ಯಾತ್ಮಾನಂ ಯಂತ್ಯೇವಮೇವ ಸೋಮಂ ವಿಪ್ರಾ ಇಂದ್ರಿಯಾಣಿ ಮತಿಭಿಃ ಪೃಚ್ಛಮಾನಾನಿ ಕಾಮಯಮಾನಾನ್ಯಾತ್ಮಾನಂ ಯಂತ್ಯೇವಮೇವ ಸೋಮಃ ಸುತಃ ಪೂಯತೇ ಅಜ್ಯಮಾನ ಇಮಮೇವಾತ್ಮಾ ಚ ಸಪ್ತ ಋಷಯಶ್ಚ ಸನ್ನವಂತೇ ತಾನೀಮಾನ್ಯೇ ತಸ್ಮಿನ್ನಾತ್ಮನ್ಯೇಕಂ ಭವಂತೀತ್ಯಾತ್ಮಗತಿಮಾಚಷ್ಟೇ ||

(ನಿ. ೧೪-೧೫)

ಇಲ್ಲಿ **ಧೇನವಃ** ಎಂದರೆ ಇಂದ್ರಿಯಗಳು ಎಂದರ್ಥವು. ಯಾವ ರೀತಿ ಶರೀರದ ಇಂದ್ರಿಯಗಳು ಆತ್ಮನನ್ನು ತೃಪ್ತಿಪಡಿಸುವುದಕ್ಕಾಗಿ ಅವನ ಸಮೀಪದಲ್ಲಿದ್ದು ತಮ್ಮ ತಮ್ಮ ವ್ಯಾಪಾರಾದಿಗಳಲ್ಲಿ ತೊಡಗಿರುವವೋ ಅದರಂತೆ ಸಪ್ತ ಋಷಿಗಳೂ ಸೋಮನನ್ನು ಸಮೀಪಿಸಿ ಶೋಧನಾದಿ ಕಾರ್ಯಗಳಲ್ಲಿ ಪ್ರವರ್ತಿಸುತ್ತಾರೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಏವಾ ನಃ ಸೋಮ ಪರಿಷಿಚ್ಯಮಾನ ಆ ಪವಸ್ವ ಪೂಯಮಾನಃ ಸ್ವಸ್ತಿ ।**

**ಇಂದ್ರಮಾ ವಿಶ ಬೃಹತಾ ರವೇಣ ವರ್ಧಯಾ ವಾಚಂ ಜನಯಾ ಪುರಂಧಿಂ ॥**

॥ ಪದಪಾಠಃ ॥

ಏವ । ನಃ । ಸೋಮ । ಪರಿऽಸಿಚ್ಯಮಾನಃ । ಆ । ಪವಸ್ವ । ಪೂಯಮಾನಃ । ಸ್ವಸ್ತಿ ।

ಇಂದ್ರಂ । ಆ । ವಿಶ । ಬೃಹತಾ । ರವೇಣ । ವರ್ಧಯ । ವಾಚಂ । ಜನಯ । ಪುರಂऽಧಿಂ ॥ ೩೬ ॥

॥ ಸಾಯಣಭಾಷ್ಯಂ ॥

ಹೇ ಸೋಮ ಪರಿಷಿಚ್ಯಮಾನಃ ಪರಿತಃ ಪಾತ್ರೇಷು ಸಿಚ್ಯಮಾನಃ ಪೂಯಮಾನಸ್ತ್ವಂ ಸೋಽಸ್ಮಾಕಮೇವ ಸ್ವಸ್ತ್ಯವಿನಾಶಮಾ ಪವಸ್ವ । ಆಸ್ರಾವಯ । ಕಿಂಚ ಬೃಹತಾ ಮಹತಾ ರವೇಣ ಶಬ್ದೇನ ಸಹೇಂದ್ರಮಾ ವಿಶ । ಪ್ರವಿಶ । ತಥಾ ವಾಚಂ ಸ್ತುತಿಲಕ್ಷಣಾಂ ವರ್ಧಯ । ಕಿಂಚ ಪುರಂಧಿಂ ಬಹುಧಿ ಪ್ರಜ್ಞಾನಂ ಜನಯ । ಅಸ್ಮಭ್ಯಮುತ್ಪಾದಯ ॥ ವಾಕ್ಯಭೇದಾದನಿಘಾತಃ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೆ । **ಪರಿಷಿಚ್ಯಮಾನಃ**—ಪಾತ್ರೆಗಳಲ್ಲಿ ಸುರಿಯಲ್ಪಟ್ಟವನೂ । **ಪೂಯಮಾನಃ**—ಪರಿಶುದ್ಧನೂ ಆದ ನೀನು । **ನಃ**—ನಮಗೆ । **ಏವ**—ಅಪೇಕ್ಷಿತವಾದಂತೆ । **ಸ್ವಸ್ತಿ**—ಕಲ್ಯಾಣ ಸಾಧನೆಗಾಗಿ । **ಆ ಪವಸ್ವ**—ಪ್ರವಹಿಸು । **ಬೃಹತಾ**—ಅಧಿಕವಾದ । **ರವೇಣ**—ಶಬ್ದದೊಡನೆ । **ಇಂದ್ರಂ**—ಇಂದ್ರನನ್ನು । **ಆ ವಿಶ**—ಪ್ರವೇಶಿಸು । **ವಾಚಂ**—ನಮ್ಮ ಸ್ತುತಿರೂಪವಾದ ವಾಕ್ಕನ್ನು । **ವರ್ಧಯ**—ಪುಷ್ಟಿಗೊಳಿಸು । **ಪುರಂಧಿಂ**—ಅತ್ಯಧಿಕವಾದ ಪ್ರಜ್ಞೆಯನ್ನು । **ಜನಯ**—ನಮ್ಮಲ್ಲಿ ಉತ್ಪನ್ನಮಾಡು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪಾತ್ರೆಗಳಲ್ಲಿ ಸುರಿಯಲ್ಪಟ್ಟವನೂ, ಪರಿಶುದ್ಧನೂ ಆದ ನೀನು ನಮಗೆ ಅಪೇಕ್ಷಿತವಾದ ಕಲ್ಯಾಣ ಸಾಧನೆಗಾಗಿ ಪ್ರವಹಿಸು. ಅಧಿಕವಾದ ಶಬ್ದದೊಡನೆ ಇಂದ್ರನನ್ನು ಪ್ರವೇಶಿಸು. ನಮ್ಮ ಸ್ತುತಿರೂಪವಾದ ವಾಕ್ಕನ್ನು ಪುಷ್ಟಿಗೊಳಿಸು. ನಮ್ಮಲ್ಲಿ ಅತ್ಯಧಿಕವಾದ ಪ್ರಜ್ಞೆಯನ್ನು ಉತ್ಪನ್ನಮಾಡು.

## English Translation.

Thus poured around (into the vessels), Soma, when purified flow for our welfare, enter with a great noise into Indra, foster our praise, generate abundant knowledge in us.

॥ ವಿಶೇಷವಿಷಯಗಳು ॥

**ಪುರಂಧಿಂ**— ಈ ಶಬ್ದದಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾಗುತ್ತದೆಯೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ.

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾಁ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**
(ಋ. ಸಂ. ೭-೩೯-೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಂಬ ಪದದ ಅರ್ಥವನ್ನು ವಿವರಿಸುವಾಗ, ಅಲ್ಲಿ

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ।**

(ನಿ. ೯-೧೩)

ಸಮೃದ್ಧಿಯಾದ **ಧೀ**—ಬುದ್ಧಿಯುಳ್ಳವನು ಎಂದು ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆಯಾದರೆ, ಉದಾಹೃತವಾಗಿರುವ ಈ ಋಕ್ಕಿನಲ್ಲಿ **ಭಗ** ಶಬ್ದವು ಈ ಪದಕ್ಕೆ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ- **ಧೀ**ಶಬ್ದವು **ಕರ್ಮ**ನಾಮಗಳಲ್ಲೂ ಪಠಿತವಾಗಿರುವುದರಿಂದ **ಪುರಂಧಿ**ಯೆಂದರೆ ನಾನಾ ವಿಧವಾದ ಕರ್ಮವುಳ್ಳವನು ಎಂದಾಗಲೀ, ಅಥವಾ ಶತ್ರು ಪಟ್ಟಣಗಳನ್ನು ಸೀಳುವವನು ಎಂದಾಗಲೀ ಅರ್ಥವಾಗುವುದರಿಂದ **ಇಂದ್ರ**ನಿಗೆ ವಿಶೇಷಣವೆಂದು ಇನ್ನು ಕೆಲವರ ಮತ. ಅಥವಾ **ಇಮಾಮೂ ನು ಕವಿತಮಸ್ಯ ಮಾಯಾಂ** (ಋ. ಸಂ. ೫-೮೫-೬) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರತಿಜ್ಞೆಯನ್ನು ಸ್ತುತಿಸಿರುವಂತೆ ನಿರುಕ್ತಕಾರರು ಉದಾಹರಿಸಿರುವ ಈ ಋಕ್ಕಿನಲ್ಲಿಯೂ, ಅವನ ಪ್ರಜ್ಞೆಯನ್ನು ವರ್ಣಿಸುತ್ತಾ **ವರುಣ**ನಿಗೆ ಪರ್ಯಾಯ ಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಈ ರೀತಿ ಅಭಿಪ್ರಾಯ ಭೇದಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸಿದ್ದಾರೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**
(ಋ. ಸಂ. ೪-೨೬--೭)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ. ೧೧-೨) **ಪುರಂಧಿಃ ಬಹುಧನಸ್ಯ ದಾತಾ** । ಅತ್ಯಧಿಕವಾಗಿ ಧನವನ್ನು ದಾನಮಾಡತಕ್ಕವನೆಂದೂ, ಸಾಯಣರು **ಬಹುಕರ್ಮಾ** ಎಂದೂ ಅರ್ಥಮಾಡಿದ್ದಾರೆ. ಈ ಪದವು ಇಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

**ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।**
**ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥**
(ಋ. ಸಂ. ೯-೭೨-೪)

ಎಂಬ ಋಕ್ಕಿನಲ್ಲಿ **ಬಹುಕರ್ಮವಾನ್ ಮನುಷ್ಯಃ** ದೇವತೆಗಳ ತೃಪ್ತ್ಯರ್ಥವಾಗಿ ನಾನಾವಿಧವಾದ ಕರ್ಮಗಳುಳ್ಳ ಎಂದರೆ ಕರ್ಮಗಳನ್ನು ಮಾಡುವ ಮಾನವನ ಎಂದರ್ಥಮಾಡಿದೆ. ಮತ್ತು—

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**
(ಋ. ಸಂ ೧೦-೬೫-೧೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು ಈ ಪದಕ್ಕೆ (ನಿ. ೧೨-೩೦) **ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ**–ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ **ವಚಾಂಸಿ**–ವಚನಗಳನ್ನು ಎಂದರ್ಥಮಾಡಿದ್ದಾರೆ. ಸಾಯಣರು **ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ** । ಬಹುವಿಧವಾದ ಪ್ರಜ್ಞೆಯಿಂದ ಕೂಡಿದ **ಸರಸ್ವತೀ** ಎಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨-೨೦) **ಬಹುಧಾತ್ರ್ಯಾ, ಮಾಧ್ಯಮಿಕಾ ವಾಚಾ** ಎಂಬ ವಿವರಣೆಯಿಂದ **ಪುರಂಧಿ** ಶಬ್ದವು **ಸರಸ್ವತೀ** ಸದೃಶವಾದ ಒಂದು ದೇವತಾವಿಶೇಷವನ್ನು ಸೂಚಿಸುವುದೆಂದು ತಿಳಿಯುತ್ತದೆ. ಇದರಂತೆಯೇ.

**ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।**
**ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥**
(ಋ. ಸಂ. ೫-೩೫-೨)

ಇತ್ಯಾದಿ ಋಕ್ಕುಗಳಲ್ಲಿ **ಪುರಂಧಿಯೇ** ಪ್ರತ್ಯೇಕವಾದ ದೇವತೆಯೆಂದೂ ತಿಳಿದುಬರುತ್ತದೆ. ಸಾಯಣರೂ ಸಹ ಈ ಋಕ್ಕಿನಲ್ಲಿರುವ **ಭಗಾದಿ**ಪದಗಳಿಗೆ ಇದನ್ನು ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು,

**ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।**
**ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥**
(ಋ. ಸಂ. ೫-೪೨-೫)

ಎಂಬಲ್ಲಿ ಈ ಪದವು **ವಿಭ್ವ**ನಿಗೆ ಪರ್ಯಾಯ ಪದವಾಗಿದೆ.

**ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ವಿಶ್ವವಾರೇ ।**
(ಋ. ಸಂ. ೩-೬೧-೧)

ಇತ್ಯಾದಿ ಕಡೆಗಳಲ್ಲಿ ಉಷಸ್ಸಿಗೆ ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ, ಹೀಗೆಯೇ ಅನೇಕಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಸಾಮಾನ್ಯರ ಪರವಾಗಿಯೂ, ಉಪಯೋಗಿಸಲ್ಪಟ್ಟು ಬಂಜೆಯರಲ್ಲದ ಸಂತಾನವನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರು ಎಂಬರ್ಥವನ್ನು ಕೊಡುತ್ತದೆ.

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥
(ಋ. ಸಂ. ೧೦-೮೦-೧)

ಇತ್ಯಾದಿ ಋಕ್ಕುಗಳಲ್ಲಿ (ಋ. ಸಂ. ೧-೧೬೬-೧೭ ; ೧-೧೧೭-೧೯) ಪ್ರಸವಸಮರ್ಥಳಾದ ಪತ್ನಿಯೆಂದೂ,

ಪ್ರ ಬೋಧಯಾ ಪುರಂಧಿಂ ಜಾರ ಆ ಸಸತೀಮಿವ ।
ಪ್ರ ಚಕ್ಷಯ ರೋದಸೀ ವಾಸಯೋಷಸಃ ಶ್ರವಸೇ ವಾಸಯೋಷಸಃ ॥
(ಋ. ಸಂ. ೧-೧೩೪-೩)

ಇತ್ಯಾದಿ ಋಕ್ಕುಗಳಲ್ಲಿ ಭೋಗಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತದೆ. ಹೀಗೆ ನಾನಾ ವಿಧವಾದ ಗುಣವನ್ನು ವರ್ಣಿಸುವ ವಿಶೇಷಣಪದವಾಗಿದೆಯೆಂದು ಸಾಯಣಭಾಷ್ಯವು ತಿಳಿಸಿದೆ.

। ಸಂಹಿತಾಪಾಠಃ ॥

ಆ ಜಾಗೃವಿರ್ವಿಪ್ರ ಋತಾ ಮತೀನಾಂ ಸೋಮಃ ಪುನಾನೋ ಅಸದಚ್ಚಮೂಷು ।
ಸಪಂತಿ ಯಂ ಮಿಥುನಾಸೋ ನಿಕಾಮಾ ಅಧ್ವರ್ಯವೋ ರಥಿರಾಸಃ ಸುಹಸ್ತಾಃ ॥ ೩೭ ॥

॥ ಪದಪಾಠಃ ॥

ಆ । ಜಾಗೃವಿಃ । ವಿಪ್ರಃ । ಋತಾ । ಮತೀನಾಂ । ಸೋಮಃ । ಪುನಾನಃ । ಅಸದತ್ । ಚಮೂಷು ।
ಸಪಂತಿ । ಯಂ । ಮಿಥುನಾಸಃ । ನಿऽಕಾಮಾಃ । ಅಧ್ವರ್ಯವಃ । ರಥಿರಾಸಃ । ಸುऽಹಸ್ತಾಃ ॥ ೩೭ ॥

॥ ಸಾಯಣಭಾಷ್ಯಂ ॥

ಜಾಗೃವಿರ್ಜಾಗರಣಶೀಲಃ ಋತಾ ॥ ಸುಪಾಂ ಸುಲುಗಿತಿ ಷಷ್ಠ್ಯಾ ಆಕಾರಃ ॥ ಋತಾನಾಂ ಸತ್ಯಾನಾಂ ಮತೀನಾಂ ಸ್ತುತೀನಾಂ ವಿಪ್ರೋ ಜ್ಞಾತಾ ಸ ಸೋಮಃ ಪುನಾನಃ ಪೂಯಮಾನಃ ಸಂಶ್ಚಮೂಷು ಚಮಸೇಷ್ವಾಸದತ್ । ಆಸೀದತಿ । ಮಿಥುನಾಸಃ ಪರಸ್ಪರಂ ಸಂಗತಾ ನಿಕಾಮಾ ನಿತರಾಂ ಕಾಮಯಮಾನಾ

ರಥಿರಾಸೋ ಯಜ್ಞಸ್ಯ ನೇತಾರಃ ಸುಹಸ್ತಾಃ ಕಲ್ಯಾಣಪಾಣಯೋಽಧ್ವರ್ಯವಃ ಪವಿತ್ರೇ ಯಂ ಸೋಮಂ ಸಪಂತಿ ಸ್ಪೃಶಂತಿ || ಷಪ ಸಮವಾಯೇ | ಸಪತಿಃ ಸ್ಪೃಶತಿಕರ್ಮೇತಿ ನೈರುಕ್ತಾಃ | ೫-೧೬ ||

|| ಪ್ರತಿಪದಾರ್ಥ ||

**ಮಿಥುನಾಸಃ**—ಯಜ್ಞಕರ್ಮಕ್ಕಾಗಿ ಒಟ್ಟಿಗೆ ಸೇರಿರುವವರೂ | **ನಿಕಾಮಾಃ**—ಕರ್ಮದಲ್ಲಿ ಆದರವುಳ್ಳವರೂ | **ರಥಿರಾಸಃ**—ಯಜ್ಞಕ್ಕೆ ನೇತೃಗಳೂ | **ಸುಹಸ್ತಾಃ**—ಉತ್ತಮವಾದ ಹಸ್ತವುಳ್ಳವರೂ ಆದ | **ಅಧ್ವರ್ಯವಃ**—ಅಧ್ವರ್ಯುಗಳು | **ಯಂ**—ಯಾವ ಸೋಮನನ್ನು | **ಸಪಂತಿ**—ಸ್ಪರ್ಶಮಾಡುವರೋ ಅಂತಹ | **ಜಾಗೃವಿಃ**—ಎಚ್ಚರದಿಂದಿರುವವನೂ | **ಋತಾ**—ಸತ್ಯಕ್ಕೂ | **ಮತೀನಾಂ**—ಸ್ತುತಿಗಳಿಗೂ | **ವಿಪ್ರಃ**—ಜ್ಞಾತೃವೂ (ಅವೆಲ್ಲವನ್ನೂ ತಿಳಿದವನೂ) ಆದ | **ಸೋಮಃ**—ಸೋಮನು | **ಪುನಾನಃ**—ಶುದ್ಧಿಯನ್ನು ಹೊಂದಿ | **ಚಮೂಷು**—ಚಮೂಪಾತ್ರೆಗಳಲ್ಲಿ | **ಆ ಅಸದತ್**—ಸ್ಥಾಪಿತನಾಗುತ್ತಾನೆ.

|| ಭಾವಾರ್ಥ ||

ಯಜ್ಞಕರ್ಮಕ್ಕಾಗಿ ಒಟ್ಟಿಗೆ ಸೇರಿರುವವರೂ, ಕರ್ಮದಲ್ಲಿ ಆದರವುಳ್ಳವರೂ, ಯಜ್ಞಕ್ಕೆ ನೇತೃಗಳೂ, ಉತ್ತಮವಾದ ಹಸ್ತವುಳ್ಳವರೂ ಆದ ಅಧ್ವರ್ಯುಗಳು ಯಾವ ಸೋಮನನ್ನು ಸ್ಪರ್ಶಮಾಡುವರೋ ಅಂತಹ ಎಚ್ಚರದಿಂದಿರುವವನೂ, ಸತ್ಯವನ್ನೂ, ಸ್ತುತಿಯ ಸ್ವರೂಪಗಳನ್ನೂ ಅರಿತವನೂ ಆದ ಸೋಮನು ಶುದ್ಧಿಯನ್ನು ಹೊಂದಿ ಚಮೂಪಾತ್ರೆಗಳಲ್ಲಿ ಸ್ಥಾಪಿತನಾಗುತ್ತಾನೆ.

## English Translation.

The vigilant Soma, the knower of true praises, being purified, has sat down in the vessels—(the Soma) whom the Adhwaryus touch, combined, emulous, leaders of the sacrifice, auspicious-handed.

|| ಸಂಹಿತಾಪಾಠಃ ||

ಸ ಪುನಾನ ಉಪ ಸೂರೇ ನ ಧಾತೋಭೇ ಅಪ್ರಾ ರೋದಸೀ ವಿ ಷ ಆವಃ |
ಪ್ರಿಯಾ ಚಿದ್ಯಸ್ಯ ಪ್ರಿಯಸಾಸ ಊತೀ ಸ ತೂ ಧನಂ ಕಾರಿಣೇ ನ ಪ್ರ ಯಂಸತ್ || ೩೮ ||

|| ಪದಪಾಠಃ ||

ಸಃ | ಪುನಾನಃ | ಉಪ | ಸೂರೇ | ನ | ಧಾತಾ | ಆ | ಉಭೇ ಇತಿ | ಅಪ್ರಾಃ | ರೋದಸೀ ಇತಿ | ವಿ | ಸಃ | ಆವರಿತ್ಯಾವಃ |

ಪ್ರಿಯಾ । ಚಿತ್ । ಯಸ್ಯ । ಪ್ರಿಯಸಾಸಃ । ಊತೀ । ಸಃ । ತು । ಧನಂ । ಕಾರಿಣೇ । ನ । ಪ್ರ । ಯಂಸತ್ ॥ ೩೮ ॥

॥ ಸಾಯಣಭಾಷ್ಯಂ ॥

ಪುನಾನಃ ಪೂಯಮಾನಃ ಸ ಸೋಮ ಇಂದ್ರ ಉಪಗಚ್ಛತಿ । ತತ್ರ ದೃಷ್ಟಾಂತಃ । ಸೂರೇ ನ ಯಥಾ ಸೂರ್ಯೇ ಧಾತಾ ಸಂವತ್ಸರ ಉಪಗಚ್ಛತಿ । ಸಂವತ್ಸರೋ ವೈ ಧಾತಾ ಸಂವತ್ಸರೇಣೈವಾಸ್ಮೈ ಪ್ರಜಾಃ ಪ್ರಜನಯತೀತ್ಯಾಮ್ನಾನಾತ್ । ತೈ. ಬ್ರಾ. ೧-೭-೨-೧ । ಕಿಂಚೋಭೇ ರೋದಸೀ ದ್ಯಾವಾಪೃಥಿವ್ಯಾವಾಪ್ರಾಃ । ಸ್ವಮಹಿಮ್ನಾಪೂರಯತಿ । ತಥಾ ಸ ಸೋಮೋ ವ್ಯಾವಃ । ಸ್ವತೇಜಸಾ ತಮಾಂಸಿ ವಿವೃಣೋತಿ ॥ ವೃಣೋತೇರ್ಮಂತ್ರೇ ಘಸೇತಿ ಚ್ಲೇರ್ಲುಕ್ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಪೂರ್ವಪದಾದಿತಿ ಸ ಇತ್ಯಸ್ಯ ಸಾಂಹಿತಿಕಂ ಷತ್ವಂ ॥ ಪ್ರಿಯಾ ॥ ಷಷ್ಠ್ಯಾ ಆಕಾರಃ ॥ ಪ್ರಿಯಸ್ಯ ಯಸ್ಯ ಸೋಮಸ್ಯ ಯದ್ವಾ ಪ್ರಿಯಾಣಿ ಪ್ರಯಚ್ಛತೋ ಯಸ್ಯ ಸೋಮಸ್ಯ ಪ್ರಿಯಸಾಸೋಽತ್ಯಂತಂ ಪ್ರಿಯತಮಾ ಧಾರಾ ಊತ್ಯೈ ರಕ್ಷಣಾಯ ಭವಂತಿ । ಸ ತು ಕ್ಷಿಪ್ರಮಸ್ಮಭ್ಯಂ ಧನಂ ಪ್ರ ಯಂಸತ್ । ಪ್ರಯಚ್ಛತು॥ ಯಚ್ಛತೇರ್ಲೇಟಿ ಸಿಪ್ಯಡಾಗಮಃ ॥ ತತ್ರ ದೃಷ್ಟಾಂತಃ । ಕಾರಿಣೇ ನ ಭೃತಕಾಯ ಭೃತಿಂ ಯಥಾ ಪ್ರಯಚ್ಛಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಪುನಾನಃ**—ಶುದ್ಧಿಯನ್ನು ಹೊಂದಿದ । **ಸಃ**—ಆ ಸೋಮದೇವನು । **ಸೂರೇ**—ಸೂರ್ಯನಲ್ಲಿಗೆ । **ಧಾತಾ**—ಸಂವತ್ಸರವು ಸಮೀಪಿಸಿ ಹೋಗುವಂತೆ । **ಉಪ**—ಇಂದ್ರನ ಸಮೀಪಕ್ಕೆ ಹೋಗುತ್ತಾನೆ (ಮತ್ತು) । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ಆ ಅಪ್ರಾಃ**—ತನ್ನ ಮಹಿಮೆಯಿಂದ ತುಂಬುತ್ತಾನೆ । **ಸಃ**—ಆ ಸೋಮನು । **ವಿ ಆವಃ**—ತನ್ನ ತೇಜಸ್ಸಿನಿಂದ ತಮಸ್ಸನ್ನು ನಾಶಮಾಡುತ್ತಾನೆ । **ಯಸ್ಯ**—ಆ ಸೋಮದೇವನ । **ಪ್ರಿಯಾ**—ಪ್ರಿಯಕರಗಳಾದ । **ಪ್ರಿಯಸಾಸಃ ಚಿತ್**—ಧಾರಾಪ್ರವಾಹಗಳೇ । **ಊತೀ**—ನಮಗೆ ರಕ್ಷಣೆಗಾಗಿ ಇರಲಿ । **ಸಃ ತು**—ಆ ಸೋಮದೇವನು । **ಕಾರಿಣೇ ನ**—ಕೆಲಸಗಾರರಿಗೆ (ಅವರಿಗೆ) ಸಲ್ಲಬೇಕಾದ ದ್ರವ್ಯವನ್ನು ಕೊಡುವಂತೆ । **ಧನಂ**—ಧನವನ್ನು । **ಪ್ರ ಯಂಸತ್**—ನಮಗೆ ಕೊಡಲಿ.

॥ ಭಾವಾರ್ಥ ॥

ಕಾಲಾತ್ಮಕವಾದ ಸಂವತ್ಸರವು ಸೂರ್ಯನ ಸಮೀಪವನ್ನೈದುವಂತೆ ಶುದ್ಧಿಯನ್ನು ಹೊಂದಿದ ಸೋಮನು ಇಂದ್ರನ ಪಾನಾರ್ಥವಾಗಿ ಅವನನ್ನು ಸಮೀಪಿಸುತ್ತಾನೆ ಮತ್ತು ಈ ಸೋಮನು ತನ್ನ ಮಹಿಮೆಯಿಂದ ಭೂಮಿಯನ್ನೂ ಸ್ವರ್ಗವನ್ನೂ ತುಂಬುತ್ತಾನೆ ಮತ್ತು ಕತ್ತಲನ್ನೂ ನಾಶಮಾಡುತ್ತಾನೆ. ಈ ಸೋಮನ ಹರಿಯುತ್ತಿರುವ ರಸಗಳು ನಮ್ಮನ್ನು ರಕ್ಷಿಸಲಿ ಮತ್ತು ಈ ಸೋಮನು, ಕೆಲಸಗಾರರಿಗೆ ಯಜಮಾನನು ಅವರ ದ್ರವ್ಯವನ್ನು ಕೊಡುವಂತೆ ನಮಗೆ ಧನವನ್ನು ಒದಗಿಸಿಕೊಡಲಿ.

English Translation.

The purified (Soma) approaches (Indra) as the year (approaches) the sun, he fills both heaven and earth (with his radiance), he opens (the darkness

with his light) : may he, the beloved (Soma), whose beloved (streams) are for (our) preservation, bestow upon us wealth like (wages given) to a labourer.

॥ ವಿಶೇಷವಿಷಯಗಳು ॥

**ಧಾತಾ ಸೂರೇ ನ**— ಇಲ್ಲಿ ಧಾತೃಶಬ್ದವು ಸಂವತ್ಸರವಾಚಿಯೆಂದು ಭಾಷ್ಯಕಾರರು ಹೇಳಿ ಅದರ ಸಮರ್ಥನೆಗಾಗಿ—**ಸಂವತ್ಸರೋ ವೈ ಧಾತಾ ಸಂವತ್ಸರೇಣೈವಾಸ್ಮೈ ಪ್ರಜಾಃ ಪ್ರಜನಯತಿ** (ತೈ ಬ್ರಾ. ೧-೭-೨-೧) ಎಂಬ ತೈತ್ತಿರೀಯಬ್ರಾಹ್ಮಣವಾಕ್ಯವನ್ನುದಹರಿಸಿದಾರೆ. ಧಾತಾ ಎಂದರೆ ಪ್ರಜಾಪತಿಯು. ಸಂವತ್ಸರವೆಂದರೆ ಕಾಲದ ಮುಖ್ಯಭಾಗವು. ಅನಂತವಾದ ಕಾಲವನ್ನು ಅಳತೆಮಾಡಲು ಸಂವತ್ಸರವೆಂಬ ಒಂದು ಪರಿಮಿತಿಯನ್ನು ಅಳತೆಗೋಲಾಗಿ ಇಟ್ಟುಕೊಳ್ಳುವುದು ರೂಢಿಯಾಗಿದೆ. ಎಂದರೆ ಇಲ್ಲಿ ಸಂವತ್ಸರವೇ ಕಾಲವು, ಪ್ರಜಾಪತಿಯೇ ಅಂತಹ ಕಾಲಸ್ವರೂಪನು. ಕಾಲಕ್ಕೂ ಪ್ರಜಾಪತಿಗೂ ಭೇದವಿಲ್ಲ ಎಂದರೆ ಪ್ರಜಾಪತಿಯು ಕಾಲಾತ್ಮಕನು ಅಥವಾ ಕಾಲಸ್ವರೂಪನು ಮತ್ತು ಸೂರ್ಯನಿಗೂ ಕಾಲಪರಿಮಿತಿಯನ್ನು ಸೂಚಿಸುವ ಸಂವತ್ಸರಕ್ಕೂ ನಿಕಟಸಂಬಂಧವಿದೆ. ಎಂದರೆ ಸೂರ್ಯನ ಗತಿಯನ್ನೇ ಕಾಲಪರಿಮಾಣವು ಅವಲಂಬಿಸಿರುವುದು ಸೂರ್ಯನ ಗತಿಯಿಂದಲೇ ಕಾಲಪರಿಮಾಣವನ್ನು ಅಥವಾ ಸಂವತ್ಸರವನ್ನು ನಿರ್ಧರಿಸುವರು. ಆದ್ದರಿಂದ ಸಂವತ್ಸರವು ಯಾವರೀತಿ ಸೂರ್ಯನನ್ನಾಶ್ರಯಿಸಿರುವುದೋ ಅದರಂತೆ ಸೋಮರಸವೂ ಸಹ ಸೋಮಪಾನದಲ್ಲಿ ಆಸಕ್ತನಾದ ಇಂದ್ರನ ಸಮೀಪಕ್ಕೆ ಹೋಗುವುದು ಎಂದರೆ ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸಲ್ಪಟ್ಟಿರುವುದು ಎಂದಭಿಪ್ರಾಯವು.

ಪ್ರಜಾಪತಿ, ಸಂವತ್ಸರ, ಕಾಲ, ಸೂರ್ಯ ಇವರಿಗಿರುವ ಪರಸ್ಪರಸಂಬಂಧವನ್ನು ಸೂಕ್ಷ್ಮವಾಗಿ ವಿಮರ್ಶೆ ಮಾಡುವುದು ಅವಶ್ಯಕವಾಗಿದೆ.

ಆದಿತ್ಯನಿಗೂ ಸಂವತ್ಸರಕ್ಕೂ ಸಮಾನವಾದ ಲಕ್ಷಣವನ್ನು ತೋರಿಸತಕ್ಕ ರೂಪಕಕ್ಕೆ ಆದಿತ್ಯ ಮತ್ತು ಸಂವತ್ಸರಗಳಿರತಕ್ಕ ತಾತ್ತ್ವಿಕಸಂಬಂಧವೂ ಲೋಕ ವ್ಯವಹಾರಗಳಿಗೆ ಸಮಾನವಾದ ಹೇತುತ್ವವೂ ಕಾರಣವಾಗಿದೆ. ಆದಿತ್ಯನೇ ಸಂವತ್ಸರವೆಂದೂ, ಸಂವತ್ಸರದ ಅವಯವಗಳೇ ಆದಿತ್ಯನ ಅವಯವಗಳೆಂದೂ ಹೇಳತಕ್ಕ ವಾಕ್ಯಗಳೇ ಈ ರೂಪಕದ ಸ್ವಾರಸ್ಯವನ್ನು ತಿಳಿಸುತ್ತವೆ

**ಸಂವತ್ಸರೋ ವೈ ಪ್ರಜಾಪತಿಃ । ................ಸ ಯಃ ಸ ಸಂವತ್ಸರೋಽಸೌ ಸ ಆದಿತ್ಯಃ ।**

(ಶ. ಬ್ರಾ. ೧೦-೨-೪-೩)

ಸಂವತ್ಸರವೇ ಪ್ರಜಾಪತಿಯು ; ಸಂವತ್ಸರವೇ ಆದಿತ್ಯನು.

**ತ್ರಯೋದಶ ಸಂಪಾದಯತಿ । ತ್ರಯೋದಶ ವೈ ಮಾಸಾಃ ಸಂವತ್ಸರಸ್ಯ ಸಂವತ್ಸರ ಏಷ ಯ ಏಷ ತಪತ್ಯೇಷ ಉ ಪ್ರವರ್ಗ್ಯಃ ।**

(ಶ. ಬ್ರಾ, ೧೪-೧-೩-೩೮)

ತ್ರಯೋದಶಮಾಸಾತ್ಮಕವಾದ ಸಂವತ್ಸರವು ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನಲ್ಲದೇ ಬೇರೆಯಲ್ಲ. ಇತ್ಯಾದಿಯಾಗಿ ಅನೇಕ ವಾಕ್ಯಗಳು ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳುತ್ತವೆ. ಸಂವತ್ಸರಕ್ಕೆ ಸಪ್ತ ಋತುಗಳು ಅವಯವಗಳಾಗಿರುವಾಗ ಆದಿತ್ಯನಿಗೂ ಆ ಸಪ್ತಋತುಗಳೇ ಅವಯವಗಳೇ ಎಂಬ ಪ್ರಶ್ನೆಯು ಸಂಭವಿಸಿದರೆ ಅದಕ್ಕೂ ಉತ್ತರವಾಗಿ,

> ಆದಿತ್ಯಸ್ತ್ವೇವ ಸರ್ವ ಋತವಃ । ಯದ್ಯೈವೋದೇತ್ಯಥ ವಸಂತೋ ಯದಾ ಸಂಗವೋಽಥ ಗ್ರೀಷ್ಮೋ ಯದಾ ಮಧ್ಯಂದಿನೋಽಥ ವರ್ಷಾ ಯದಪರಾಹ್ಣೋಽಥ ಶರದ್ಯದೈವಾಸ್ತಮೇ-ತ್ಯಥ ಹೇಮಂತಸ್ತಸ್ಮಾದು ಮಧ್ಯಂದಿನ ಏವಾದಧೀತ................ ॥
>
> (ಶ. ಬ್ರಾ. ೨-೨-೩-೯)

ಆದಿತ್ಯನೇ ಎಲ್ಲಾ ಋತ್ವಾತ್ಮಕನು ಅಥವಾ ಋತುಗಳಿಗೆ ಕಾರಣನು. ಅವನು ಉದಯಿಸಿದಾಗ ವಸಂತವು. ಪಶುಗಳನ್ನು ಕರೆಯತಕ್ಕ ಕಾಲವು ಪ್ರಾಪ್ತವಾದರೆ ಗ್ರೀಷ್ಮವು. ಮಧ್ಯಾಹ್ನಕಾಲವೇ ವರ್ಷಋತುವು. ಅಪರಾಹ್ನ ಪ್ರಾಪ್ತವಾದರೆ ಶರತ್ಕಾಲವು. ಅಸ್ತಮಯಕಾಲವು ಪ್ರಾಪ್ತವಾದಾಗ ಹೇಮಂತವು. ಇತ್ಯಾದಿಯಾಗಿ ಋತುಗಳಿಗೆ ಕಾರಣನಾದ ಆದಿತ್ಯನಿಗೂ ಋತುಗಳಿಗೂ ತಾದಾತ್ಮ್ಯವನ್ನು ಹೇಳಿದೆ. ಅಲ್ಲದೆ—

> ಅತ್ರ ಹ ವಾ ಅಸಾವಗ್ರ ಆದಿತ್ಯ ಆಸ ತಮೃತವಃ ಪರಿಗೃಹ್ಯೈವಾತ ಊರ್ಧ್ವಾಃ ಸ್ವರ್ಗಂ ಲೋಕ-ಮುಪೋದಕ್ರಾಮನ್ತ್ಸ ಏಷ ಋತುಷು ಪ್ರತಿಷ್ಠಿತಸ್ತಪತಿ ।
>
> (ಶ. ಬ್ರಾ. ೪-೨-೫-೯.)

ಪೂರ್ವದಲ್ಲಿ ಆದಿತ್ಯನು ಈ ಪೃಥ್ವಿಯನ್ನಾಕ್ರಮಿಸಿದ್ದನು. ಋತುಗಳು ಅವನನ್ನು ಪರಿಗ್ರಹಿಸಿದಾಗ ಅವುಗಳೊಂದಿಗೆ ಆದಿತ್ಯನು ಅಂತರಿಕ್ಷಕ್ಕೆ ಹಾರಿದನು. ಅನಂತರ ಋತುಗಳಲ್ಲಿ ದೃಢವಾಗಿ ಪ್ರತಿಷ್ಠಿತನಾಗಿ ಈಗ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿದ್ದಾನೆ. ಈ ಋತುಗಳೇ ಸಂವತ್ಸರದ ಅವಯವಗಳು ಮತ್ತು ಸಂವತ್ಸರದ ಸ್ವರೂಪವನ್ನು ಅರ್ಥಮಾಡಿ ಕೊಳ್ಳತಕ್ಕ ಮುಖ್ಯಸಾಧನಗಳು. ಈ ಸಾಧನಗಳ ಜ್ಞಾನವಿಲ್ಲದಿದ್ದರೆ ಸಂವತ್ಸರದ ಸ್ವರೂಪವು ತಿಳಿಯುವುದಿಲ್ಲ.

> ಸಂವತ್ಸರಗ್‍ಂಹ ವೈ ಪ್ರಯಾಜೈರ್ಜಯಯಿಜ್ಯತಿ । ಸ ಹ ಸ್ವೇವೈನಂ ಜಯತಿ ಯೋಽಸ್ಯ ದ್ವಾರಾಣಿ ವೇದ ತಗ್‍ಂ ಹಿ ಸ ತೈರ್ಗೃಹ್ಯೈಃ ಕುರ್ಯಾದ್ಯಾನಂತರತೋ ನ ವ್ಯವವಿದ್ಯಾದ್ಯಥಾಸ್ಯ ತೇ ಭವಂತಿ ತಸ್ಯ ವಸಂತ ಏವ ದ್ವಾರಗ್‍ಂ ಹೇಮಂತೋ ದ್ವಾರಂ ತಂ ವಾ ಏತಗ್‍ಂ ಸಂವತ್ಸ-ರಗ್‍ಂ ಸ್ವರ್ಗಂ ಲೋಕಂ ಪ್ರಪದ್ಯತೇ ಸರ್ವಂ ವೈ ಸಂವತ್ಸರ‌ ಸರ್ವಂ ವಾ ಅಕ್ಷಯ್ಯಮೇತೇನ ಹಾಸ್ಯಾಕ್ಷಯ್ಯಗ್‍ಂ ಸುಕೃತಂ ಭವತ್ಯಕ್ಷಯ್ಯೋ ಲೋಕಃ ॥
>
> (ಶ. ಬ್ರಾ. ೧-೬-೧-೧೯)

ಪ್ರಯಾಜಗಳಿಂದ ಉತ್ತಮಸ್ಥಿತಿಯನ್ನು ಪಡೆದು ಯಜಮಾನನು ಸಂವತ್ಸರದ ಸ್ವರೂಪವನ್ನು ತಿಳಿಯುತ್ತಾನೆ. ಆದರೆ ಸಂವತ್ಸರದ ದ್ವಾರಗಳ ಪರಿಚಯವನ್ನು ಹೊಂದಿದವನಿಗೆ ಮಾತ್ರ ಸಂವತ್ಸರದ ಜ್ಞಾನವು ಲಭಿಸುತ್ತದೆ. ಗೃಹದ ಒಳಗೆ ಪ್ರವೇಶಿಸಲು ಅನುಕೂಲವಾದ ದ್ವಾರವನ್ನು ತಿಳಿಯದೇ ಮನುಷ್ಯನಿಗೆ ಗೃಹದ ಪರಿಚಯವು ಪ್ರಯೋಜನವಿಲ್ಲದಿರುವಂತೆ ಸಂವತ್ಸರದ ದ್ವಾರಗಳಾದ ಋತುಗಳ ಪರಿಚಯವಿಲ್ಲದೆ ಸಂವತ್ಸರದ ಜ್ಞಾನವು ಲಭಿಸಲಾರದು. ಈ ಸಂವತ್ಸರಕ್ಕೆ ವಸಂತವೂ ಹೇಮಂತವೂ ದ್ವಾರಗಳು. ಸಂವತ್ಸರವೇ ಅಂತರಿಕ್ಷವು. ಮತ್ತು ಸಂವತ್ಸರವೇ ಸಮಸ್ತವೂ ಆಗಿದೆ. ಆದುದರಿಂದ ಸಂವತ್ಸರದ ಜ್ಞಾನವನ್ನು ಪಡೆದವರಿಗೆ ಶಾಶ್ವತವಾದ ಸ್ಥಿತಿಯು ಲಭಿಸುತ್ತದೆ.

> ದ್ವೇ ವಾವ ಬ್ರಹ್ಮಣೋ ರೂಪೇ ಕಾಲಶ್ಚಾಕಾಲಶ್ಚ । ಯ ಆದಿತ್ಯಾದ್ಯಃ ಸ ಕಾಲಃ । ತಸ್ಮಾತ್ಸಂ-ವತ್ಸರೋ ವೈ ಕಾಲಃ ॥
>
> (ಮೈತ್ರಾಯಣ ಬ್ರಾಹ್ಮಣೋಪನಿಷತ್. ೬-೧೫)

ಕಾಲ ಮತ್ತು ಅಕಾಲವೆಂಬುದು ಬ್ರಹ್ಮನ ರೂಪದ್ವಯವು. ಆದಿತ್ಯನಿಂದ ಉತ್ಪನ್ನವಾದ ಕಾಲವೇ ಸಂವತ್ಸರವು. ಇತ್ಯಾದಿಯಾಗಿ ಕೆಲವೆಡೆಗಳಲ್ಲಿ ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳುವಾಗ ಸಂವತ್ಸರದ ಅವಯವಗಳಾದ ಋತುಗಳು ಆದಿತ್ಯನ ಅವಯವಗಳೆಂದೂ, ಇನ್ನೂ ಕೆಲವೆಡೆಗಳಲ್ಲಿ ಸೂರ್ಯನಿಂದ ಸಂವತ್ಸರವು ಉತ್ಪನ್ನವಾಯಿತೆಂದು ಹೇಳುವಾಗ ಋತುಗಳೂ ಅವನಿಂದಲೇ ಉತ್ಪನ್ನವಾದವೆಂದೂ ಸಹ ತಿಳಿಸಿದೆ.

ಇಂತಹ ಸಂದರ್ಭಗಳಲ್ಲಿ ಆದಿತ್ಯನಿಗೂ ಸಂವತ್ಸರರೂಪವಾದ ಕಾಲಕ್ಕೂ ಸಹ ತಾದಾತ್ಮ್ಯವನ್ನು ತೋರಿಸಿ, ಅವೆರಡರ ಸ್ಥಾನವೂ, ಸ್ವರೂಪವೂ ಮತ್ತು ಶಕ್ತಿಯೂ ಒಂದೇ ಎಂದೂ ಸಹ ತೋರಿಸಬಹುದು. ಅನೇಕ ಸಂದರ್ಭಗಳಲ್ಲಿ ಆದಿತ್ಯನಿಗೂ ಸಂವತ್ಸರರೂಪವಾದ ಕಾಲಕ್ಕೂ ಐಕ್ಯವನ್ನು ತೋರಿಸಿದೆ. ಕೆಲವೆಡೆಗಳಲ್ಲಿ ಆದಿತ್ಯನೇ ಕಾಲಕ್ಕೆ ಕಾರಣನೆಂದೂ, ಇನ್ನು ಕೆಲವೆಡೆಗಳಲ್ಲಿ ಕಾಲಿಕವಾದ ನಿಯಮದಿಂದಲೇ ಆದಿತ್ಯನಸಂಚಾರವಿರುವುದರಿಂದ ಕಾಲವೇ ಆದಿತ್ಯನಿಗೆ ಕಾರಣವೆಂದೂ ಸಹ ಹೇಳಿದೆ. ಮೈತ್ರಾಯಣ ಬ್ರಾಹ್ಮಣೋಪನಿಷತ್ತಿನಲ್ಲಿ ಆದಿತ್ಯನಿಗೂ ಸಂವತ್ಸರಾಖ್ಯವಾದ ಕಾಲಕ್ಕೂ ಇರತಕ್ಕ ಸಂಬಂಧವನ್ನು ಈ ರೀತಿಯಲ್ಲಿ ತಿಳಿಸಿದೆ.

**ಅನ್ನಂ ಸರ್ವಸ್ಯ ಯೋನಿಃ ಕಾಲಶ್ಚಾನ್ನಸ್ಯ ಸೂರ್ಯೋ ಯೋನಿಃ ಕಾಲಸ್ಯ........... ....ಕಾಲಾತ್ಸ್ರವಂತಿ ಭೂತಾನಿ ಕಾಲಾದ್ವೃದ್ಧಿಂ ಪ್ರಯಾಂತಿ ಚ । ದ್ವೇವಾವ ಬ್ರಹ್ಮಣೋ ರೂಪೇ ಕಾಲಶ್ಚಾಕಾಲಶ್ಚ । ಯ ಆದಿತ್ಯಾದ್ಯಃ ಸಃ ಕಾಲಃ................ತಸ್ಮಾತ್ಸಂವತ್ಸರೋ ವೈ ಕಾಲಃ । ಪಚತಿ ಭೂತಾನಿ...........ಮಹಾತ್ಮನಿ ॥**

(ಮೈತ್ರಾಯಣಿ. ಉ. ೬–೧೪ ರಿಂದ ೧೬)

ಸಕಲ ಭೂತಗಳ ಸ್ಥಿತಿಗತಿಗಳಿಗೂ ಅನ್ನವೇ ಕಾರಣವು. ಅನ್ನಕ್ಕೆ ಕಾಲವೂ, ಕಾಲಕ್ಕೆ ಸೂರ್ಯನೂ ಕಾರಣವು. ಗೋಚರಕ್ಕೆ ವಿಷಯವಾಗಿರತಕ್ಕ ಸಂವತ್ಸರವು ಕಾಲದ ರೂಪವಾಗಿದೆ. ಕಾಲದ ಅವಯವಗಳ ಮೂಲಕ ಸೂರ್ಯನ ಸಂಚಾರವಿರುತ್ತದೆ.

ಈ ಕಾಲದಿಂದಲೇ ಸಕಲಭೂತಗಳೂ ಪ್ರಾದುರ್ಭವಿಸಿ ಅದರಿಂದಲೇ ಎಲ್ಲವೂ ವೃದ್ಧಿಯಾಗುತ್ತವೆ. ಕಣ್ಣಿಗೆ ಕಾಣತಕ್ಕ ಆದಿತ್ಯನೂ, ಕಾಣದಿರುವ ಮುಹೂರ್ತಾದಿಗಳೂ, ಕಾಲದ ಸ್ವರೂಪಗಳಾಗಿವೆ. ಬ್ರಹ್ಮನಿಗೆ ಕಾಲ ಮತ್ತು ಅಕಾಲಗಳೆಂಬ ಎರಡು ಅವಯವಗಳು, ಆದಿತ್ಯನಿಗಿಂತಲೂ ಪೂರ್ವಭಾವಿಯಾದ ಕಾಲವು ಅಪರಿಚ್ಛಿನ್ನವಾದುದು ಮತ್ತು ನಿರವಯವಗಳುಳ್ಳದ್ದು. ಸಂವತ್ಸರವೇ ಈ ಅವಯವದ ರೂಪವು ಸಂವತ್ಸರದಿಂದಲೇ ಸಕಲಭೂತಗಳೂ ಉತ್ಪನ್ನವಾಗುತ್ತವೆ, ವೃದ್ಧಿಯಾಗುತ್ತವೆ ಮತ್ತು ಲಯವಾಗುತ್ತವೆ. ಆದುದರಿಂದ ಸಂವತ್ಸರವೇ ಪ್ರಜಾಪತಿಯು, ಸಂವತ್ಸರವೇ ಅನ್ನವು, ಬ್ರಹ್ಮವು ಮತ್ತು ಪರಮಾತ್ಮನು.

ಇಂತಹ ಕಾಲಾತ್ಮನಾದ ಆದಿತ್ಯನು ಸಕಲ ಲೋಕಗಳಿಗೂ ಪ್ರಭುವಾಗಿ ವಿರಾಜಿಸುತ್ತಿದ್ದಾನೆ ಎಂಬುದನ್ನು ತಿಳಿಸಲು **ಏಕಃ ತಸ್ಥೌ** ಎಂದು ವರ್ಣಿಸಿದೆ. ಇದನ್ನೇ ಛಾಂದೋಗ್ಯಾದಿಗಳಲ್ಲಿ ವರ್ಣಿಸುತ್ತಾ,

**ಆದಿತ್ಯೋ ಬ್ರಹ್ಮೇತ್ಯಾದೇಶಃ** (ಛಾ. ಉ. ೩–೧೯–೧) **ಅಸಾವಾದಿತ್ಯೋ ಬ್ರಹ್ಮೇತಿ** (ತೈ. ಆ. ೨–೧) ಆದಿತ್ಯನೇ ಪರಬ್ರಹ್ಮನೆಂದು ತಿಳಿಸಿದೆ. ಈ ಆದಿತ್ಯನಿಗೂ ಸಂವತ್ಸರಕ್ಕೂ ಐಕ್ಯವನ್ನು ತೋರಿಸಿ, ಪೃಥಿವ್ಯಾದಿ ಲೋಕತ್ರಯವನ್ನೂ ವ್ಯಾಪಿಸಿರುವ ಆದಿತ್ಯನ ಪ್ರಭಾವವನ್ನು ವರ್ಣಿಸುತ್ತಾ ಐತರೇಯಾರಣ್ಯಕದಲ್ಲಿ ಈ ರೀತಿ ತಿಳಿಸಿದೆ.

ಅದರ ವರ್ಣನೆಯ ಪ್ರಕಾರ ಆದಿತ್ಯನು ಏಕಕಾಲದಲ್ಲಿ ಜಗದ್ವ್ಯಾಪಿಯೂ, ಅತ್ಯುತ್ತಮವಾದ ದ್ಯುಲೋಕವನ್ನು ಆಕ್ರಮಿಸಿರುವವನೂ ಆಗಿದ್ದಾನೆ.

**ಮಹಾಪುರುಷ ಇತಿ ಯಮವೋಚಾಮ ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೈಕ್ಯಾಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ ॥**

**ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ । ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ । ತದಪ್ಯೇತದೃಷಿಣೋಕ್ತಂ । ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತಿ ॥** (ಐ. ಆರಣ್ಯಕಂ. ೩-೨-೩)

ಮಹಾಪುರುಷನೆಂದು ಯಾವ ತತ್ತ್ವವನ್ನು ನಿರ್ದೇಶಿಸಿದೆವೋ ಆ ಮಹಾಪುರುಷನೇ ಸಂವತ್ಸರವು. ಆ ಸಂವತ್ಸರದ ರಸವೇ ಆದಿತ್ಯನು. ಅಶರೀರಿಯಾದ ಪ್ರಜ್ಞಾತ್ಮನೂ ಆದಿತ್ಯನೂ ಒಂದೇ ತತ್ತ್ವವು ಎಂದು ತಿಳಿಯಬೇಕು. ಇದನ್ನೇ ಕುತ್ಸಋಷಿಯು ಋಕ್ಸಂಹಿತೆಯಲ್ಲಿ (ಋ. ಸಂ. ೧-೧೧೫-೧) " ಮಿತ್ರ, ವರುಣ ಮತ್ತು ಅಗ್ನಿಗಳ ಚಕ್ಷುಸ್ಸೂ, ದೇವತೆಗಳ ಮುಖರೂಪವೂ ಆದ ತೇಜಸ್ಸು ಉದಯಿಸಿ ಪೃಥಿವ್ಯಂತರಿಕ್ಷಗಳನ್ನೂ ದ್ಯುಲೋಕವನ್ನೂ ವ್ಯಾಪಿಸಿದೆ. ಸ್ಥಾವರ ಜಂಗಮಾತ್ಮಕವಾದ ಸಕಲಲೋಕಗಳಿಗೂ ಇದೇ ಆತ್ಮವು " ಎಂದು ವರ್ಣಿಸಿದ್ದಾನೆ.

ಕಾಲಚಕ್ರವನ್ನು **ಸಂವತ್ಸರ, ಪರಿವತ್ಸರ, ಇದಾವತ್ಸರ, ಇದ್ವತ್ಸರ** ಮತ್ತು **ವತ್ಸರ** ಎಂದು ಐದು ಹೆಸರುಗಳಿಂದ ಕರೆಯುವ ಪದ್ಧತಿಯಿದ್ದಿತು ಈ ಹೆಸರುಗಳಲ್ಲಿಯೂ ಮತ್ತು ಇವುಗಳ ಪರಿಗಣನೆಯಲ್ಲಿಯೂ ಅಲ್ಲಲ್ಲೇ ಅಲ್ಪಸ್ವಲ್ಪ ವ್ಯತ್ಯಾಸಗಳೂ ಕಂಡುಬರುತ್ತವೆ. ಉದಾಹರಣೆಗೆ ತೈತ್ತಿರೀಯಸಂಹಿತೆಯಲ್ಲಿ.

**ಯತ್ತೇ ರುದ್ರ ಪುರೋ ಧನುಸ್ತದ್ವಾತೋ ಅನು ವಾತು ತೇ ತಸ್ಮೈ ತೇ ರುದ್ರ ಸಂವತ್ಸರೇಣ ನಮಸ್ಕರೋಮಿ**

| | | | | | |
|---|---|---|---|---|---|
| **ಯತ್ತೇ ರುದ್ರ ದಕ್ಷಿಣಾಧನುಃ** | ,, | ,, | ,, | **ಪರಿವತ್ಸರೇಣ** | ,, |
| **ಯತ್ತೇ ರುದ್ರ ಪಶ್ಚಾದ್ಧನುಃ** | ,, | ,, | ,, | **ಇದಾವತ್ಸರೇಣ** | ,, |
| **ಯತ್ತೇ ರುದ್ರೋತ್ತರಾದ್ಧನುಃ** | ,, | ,, | ,, | **ಇದುವತ್ಸರೇಣ** | ,, |
| **ಯತ್ತೇ ರುದ್ರೋಪರಿ ಧನುಃ** | ,, | ,, | ,, | **ವತ್ಸರೇಣ** | ,, |

(ತೈ. ಸಂ. ೫-೫-೭-೨,೩,೪)

ಎಂಬ ವಾಕ್ಯಗಳಲ್ಲಿ, ಸಂವತ್ಸರ, ಪರಿವತ್ಸರ, ಇದಾವತ್ಸರ, ಇದುವತ್ಸರ ಮತ್ತು ವತ್ಸರ ಎಂಬ ಪ್ರಭೇದಗಳಿವೆ. ವಾಜಸನೇಯ ಸಂಹಿತೆಯಲ್ಲಿಯೂ ಇದೇ ವಿಭಾಗವಿರುತ್ತದೆ. (ವಾ. ಸಂ. ೨೭-೪೫). ಆದರೆ ಅಲ್ಲಿ **ಇದ್ವತ್ಸರ** ಎಂದಿರುವುದಕ್ಕೆ ಬದಲಾಗಿ ತೈತ್ತಿರೀಯಸಂಹಿತೆಯಲ್ಲಿ **ಇದುವತ್ಸರ**ವೆಂದಿದೆ. ಉಳಿದುವು ಸಮಾನವಾಗಿರುತ್ತವೆ. ತೈತ್ತಿರೀಯ ಬ್ರಾಹ್ಮಣದಲ್ಲಿ,

**ಸಂವತ್ಸರೋಽಸಿ ಪರಿವತ್ಸರೋಽಸಿ । ಇಡಾವತ್ಸರೋಽಸೀದುವತ್ಸರೋಽಸಿ । ಇದ್ವತ್ಸರೋಽಸಿ ವತ್ಸರೋಽಸಿ । ತಸ್ಯ ತೇ ವಸಂತಶ್ಶಿರಃ । ಗ್ರೀಷ್ಮೋ ದಕ್ಷಿಣಃ ಪಕ್ಷಃ............ ॥**

(ತೈ. ಬ್ರಾ. ೩-೧೦-೪-೧)

ಸಂವತ್ಸರ, ಪರಿವತ್ಸರ, ಇದಾವತ್ಸರ, ಇದುವತ್ಸರ, ಇದ್ವತ್ಸರ ಮತ್ತು ವತ್ಸರ ಎಂಬ ಆರು ಪ್ರಭೇದಗಳಿವೆ. ಆದರೆ ಇದೇ ತೈತ್ತಿರೀಯ ಬ್ರಾಹ್ಮಣದಲ್ಲಿ—

**ಅಗ್ನಿರ್ವಾವ ಸಂವತ್ಸರಃ । ಆದಿತ್ಯಃ ಪರಿವತ್ಸರಃ । ಚಂದ್ರಮಾ ಇದಾವತ್ಸರಃ । ವಾಯುರನುವತ್ಸರಃ ।**

(ತೈ. ಬ್ರಾ. ೧–೪–೧೦–೧)

ಎಂಬಲ್ಲಿ ಸಂವತ್ಸರ, ಪರಿವತ್ಸರ, ಇದಾವತ್ಸರ ಮತ್ತು ಅನುವತ್ಸರ ಎಂಬ ನಾಲ್ಕು ಪ್ರಭೇದಗಳುಮಾತ್ರ ಹೇಳಲ್ಪಟ್ಟಿವೆ. ಇದಲ್ಲದೇ ತೈತ್ತಿರೀಯಸಂಹಿತೆಯ ಬೇರೊಂದು ಭಾಗದಲ್ಲಿ—

**ಇದುವತ್ಸರಾಯ ಪರಿವತ್ಸರಾಯ ಸಂವತ್ಸರಾಯ ಕೃಣುತಾ ಬೃಹನ್ನಮಃ ॥**

(ತೈ. ಸಂ. ೫–೭–೨–೪)

ಇದುವತ್ಸರ, ಪರಿವತ್ಸರ ಮತ್ತು ಸಂವತ್ಸರ ಎಂಬ ಮೂರು ಪ್ರಭೇದಗಳನ್ನು ಮಾತ್ರ ಹೇಳಿದೆ. ಈ ಎಲ್ಲಾ ವಾಕ್ಯಗಳಲ್ಲಿಯೂ ಸಂವತ್ಸರ ಮತ್ತು ಪರಿವತ್ಸರ ಈ ಎರಡು ಹೆಸರುಗಳು ಸಾಧಾರಣವಾಗಿವೆ. ಕಾಲಚಕ್ರವು ರೂಪಗಳಲ್ಲಿ ಅನಾದಿಯಿಂದಲೂ ಚಕ್ರದಂತೆ ಸುತ್ತುತ್ತಿದೆಯೆಂದು ವರ್ಣಿತವಾಗಿದೆ.

**ತಸ್ಮಿನ್ನಾತಸ್ಥುರ್ಭುವನಾನಿ ವಿಶ್ವಾ**— ಸಕಲ ಲೋಕಗಳೂ ಈ ಕಾಲಚಕ್ರದಲ್ಲಿ ನೆಲೆಸಿವೆಯೆಂದರ್ಥ. ಸಂವತ್ಸರ, ಪರಿವತ್ಸರ ಇತ್ಯಾದಿ ಹೆಸರುಗಳು ಈ ಮಹಾಕಾಲದ ಅವಯವಗಳು. ಈ ಮಹಾಕಾಲವೇ ಜಗತ್ತಿನ ಮತ್ತು ಜಗದ್ವ್ಯವಹಾರಗಳಿಗೆಲ್ಲಾ ಆಧಾರವಾಗಿದೆ. ಇದನ್ನೇ **ಸ್ವಭಾವ, ನಿಯುಮ, ಬ್ರಹ್ಮ** ಇತ್ಯಾದಿ ನಾನಾ ಹೆಸರುಗಳಿಂದ ಕರೆಯುತ್ತಾರೆ.

**ಕಿಂ ಕಾರಣಂ, ಬ್ರಹ್ಮ? ಕುತಃ ಸ್ಮ ಜಾತಾ ಜೀವಾಮ ಕೇನ ಕ್ವ ಚ ಸಂಪ್ರತಿಷ್ಠಾಃ ।**
**ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ॥**

(ಶ್ವೇ. ಉ. ೧–೧)

ಜಗತ್ತಿನ ಮೂಲಕಾರಣವಾವುದು? ಅದು ಬ್ರಹ್ಮವೇ? ಅಥವಾ ಬ್ರಹ್ಮವೆಂಬುದು ಯಾವುದು? ಅದರ ಸ್ವರೂಪವೇನು? ನಮ್ಮ ಉತ್ಪತ್ತಿಯು ಎಲ್ಲಿಂದ? ಯಾವುದರ ಅವಲಂಬನದಿಂದ ನಾವು ಜೀವಿಸುತ್ತೇವೆ? ನಮ್ಮ ಸ್ಥಿತಿಗೆ ಆಧಾರವಾವುದು? ನಮ್ಮ ಸುಖದುಃಖಗಳು ಎಲ್ಲಿಂದ ಸಂಭವಿಸುತ್ತವೆ? ಎಂಬ ಪ್ರಶ್ನೆಗೆ ಈ ರೀತಿಯಾದ ಉತ್ತರವಿದೆ.

**ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾ ।**

(ಶ್ವೇ. ಉ. ೧–೧)

ಜಗತ್ತಿನ ಈ ಮಹಾಮೂಲವನ್ನು **ಕಾಲ**ವೆಂದು ಕೆಲವರೂ, **ನಿಯತಿ**ಯೆಂದು ಕೆಲವರೂ, **ಸ್ವಭಾವ**ವೆಂದು ಕೆಲವರೂ, ಹೀಗೆಯೇ ಇನ್ನೂ ಕೆಲವು ಹೆಸರುಗಳಿಂದ ಬೇರೆಬೇರೆ ತತ್ತ್ವಜ್ಞರೂ ಕರೆಯುತ್ತಾರೆ. ಆದರೆ,

**ಸ್ವಭಾವಮೇಕೇ ಕವಯೋ ವದಂತಿ ಕಾಲಂ ತಥಾನ್ಯೇ ಪರಿಮುಹ್ಯಮಾನಾಃ ।**
**ದೇವಸ್ಯೈಷ ಮಹಿಮಾ ತು ಲೋಕೇ ಯೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಂ ॥**

(ಶ್ವೇ. ಉ. ೬–೧)

ಈ ಮಹಾಮೂಲವನ್ನು ಕೆಲವು ಕವಿಗಳು **ಸ್ವಭಾವ**ವೆಂದೂ, ಇನ್ನು ಕೆಲವರು **ಕಾಲ**ವೆಂದೂ ಕರೆಯುವರು. ಆದರೂ ಇದರ ಸ್ವರೂಪವನ್ನು ಪೂರ್ಣವಾಗಿ ವರ್ಣಿಸಿದಂತಾಗುವುದಿಲ್ಲ. ಸಕಲಲೋಕವನ್ನೂ ತನ್ನ ಶಕ್ತಿಯಿಂದ ಸ್ಥಾಪಿಸಿ ಬ್ರಹ್ಮಚಕ್ರವನ್ನೂ ಸಹ ಸುತ್ತುವಂತೆ ಮಾಡುತ್ತಿರುವವನು ಪರಮಪುರುಷನಾದ ಈಶ್ವರನು. ಅವನಿಂದಲೇ ಜಗದ್ಧೇತುವಾದ ಬ್ರಹ್ಮಚಕ್ರವೂ ಭ್ರಮಣವನ್ನು ಹೊಂದುತ್ತಿದೆಯೆಂದು ವರ್ಣಿಸಿದೆ. ಪ್ರಕೃತವಾದ ವರ್ಣನೆಯಲ್ಲಿ **ಕಾಲಚಕ್ರ**ವೆಂದು ವರ್ಣಿಸಿರುವುದನ್ನು ಬೇರೆಬೇರೆ ಹೆಸರುಗಳಿಂದ ವರ್ಣಿತವಾಗಿರುವ ಆದಿತತ್ತ್ವವೆಂದು ತಿಳಿಯಬೇಕು. ಯಾವ ಋಷಿಯಾಗಲಿ, ಯಾವ ಹೆಸರಿನಿಂದ ಈ ಆದಿತತ್ತ್ವವನ್ನು ಕರೆದರೂ ಸಹ ಈ ಆದಿಕಾರಣವನ್ನು ರಥಚಕ್ರಕ್ಕೆ ಹೋಲಿಸದೆ ಇದಕ್ಕೆ ಬೇರೆ ಅನುರೂಪವಾದ ಸಾಮ್ಯವನ್ನು ಹೇಳಲಾಗುವುದಿಲ್ಲ. ಆತ್ಮನೆಂದು ಕರೆಯಲಿ, ಬ್ರಹ್ಮನೆಂದು ಕರೆಯಲಿ, ನಿಯತಿಯೆಂದು ಕರೆಯಲಿ, ಇದಕ್ಕೂ ವ್ಯವಹಾರಜಗತ್ತಿಗೂ ಇರತಕ್ಕ ಸಂಬಂಧವನ್ನು ರಥಚಕ್ರಕ್ಕೂ ಅದರ ಅರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಲೇಬೇಕಾಗಿವೆ. ಆ ಉಪಮಾನವನ್ನು ತೋರಿಸಿ ಆದಿತತ್ತ್ವವನ್ನು ವರ್ಣಿಸುವ ಕ್ರಮವನ್ನು ಸಾಧಾರಣವಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ನೋಡಬಹುದು. ಉದಾಹರಣೆಗೆ, ಬೃಹದಾರಣ್ಯಕೋಪನಿಷತ್ತಿನಲ್ಲಿ,

**ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏವಾತ್ಮನಃ ಸಮರ್ಪಿತಾಃ ||**

(ಬೃ. ಉ. ೨-೫-೧೫)

ಈ ಆತ್ಮನು ಸಕಲ ಭೂತಗಳಿಗೂ ಪ್ರಭುವು. ರಥಚಕ್ರದ ನಾಭಿಯಲ್ಲಿಯೂ ನೇಮಿಯಲ್ಲಿಯೂ ಅರಗಳೆಲ್ಲವೂ ಯಾವ ರೀತಿ ಅಂತರ್ಗತವಾಗಿಯೂ, ನಿಯತವಾದ ಸ್ಥಿತಿಗಳುಳ್ಳವಾಗಿಯೂ ಇರುತ್ತವೆಯೋ ಅದರಂತೆ ಸಕಲ ಭೂತಗಳೂ ಈ ಆತ್ಮನಲ್ಲಿ ಅಂತರ್ಗತವಾಗಿಯೂ, ಈ ಆತ್ಮನ ನಿಯಮನಕ್ಕೆ ಅಧೀನವಾದವಾಗಿಯೂ ಇವೆ. ಸಕಲ ಭೂತಗಳೂ, ಸಕಲ ದೇವತೆಗಳೂ, ಸಕಲ ಲೋಕಗಳೂ, ಸಕಲ ಪ್ರಾಣಗಳೂ, ಸಮಸ್ತವೂ ಈ ಆತ್ಮನ ನಿಯಮನಕ್ಕೆ ಅಧೀನವಾಗಿ ತದಾಯತ್ತವಾಗಿವೆಯೆಂದು ಈ ಜಗದಾತ್ಮನಿಗೂ ರಥಚಕ್ರಕ್ಕೂ ಸಾಮ್ಯವನ್ನು ಹೇಳಿದೆ. ಇದರಂತೆಯೇ ಮುಂಡಕೋಪನಿಷತ್ತಿನಲ್ಲಿಯೂ ಮತ್ತು ಪ್ರಶ್ನೋಪನಿಷತ್ತಿನಲ್ಲಿಯೂ ಸಹ,

**ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ |**

(ಮು. ೨-೨-೬)

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ |**
**ಋಚೋ ಯಜೂಗ್ಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ||**

(ಪ್ರಶ್ನ. ೨-೬)

**ಅರಾ ಇವ ರಥನಾಭೌ ಕಲಾ ಯಸ್ಮಿನ್ಪ್ರತಿಷ್ಠಿತಾಃ |**
**ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ||**

(ಪ್ರಶ್ನ. ೬-೬)

ಇತ್ಯಾದಿಯಾಗಿ ಜೀವಾತ್ಮನಿಗೂ, ಜೀವದ ಸಕಲವಾದ ಅವಯುವಗಳಿಗೂ ಇರುವ ಸಂಬಂಧವನ್ನೂ, ಪ್ರಾಣಕ್ಕೂ ಋಗಾದಿಗಳಿಗೂ ಇರುವ ಸಂಬಂಧವನ್ನೂ, ಆದಿಪುರುಷನಿಗೂ ಸಕಲ ಕಲೆಗಳಿಗೂ ಇರುವ ಸಂಬಂಧವನ್ನೂ, ರಥನಾಭಿಗೂ ಆರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಈ ಮಹಾ ತತ್ತ್ವವನ್ನು ಕಾಲಚಕ್ರವೆಂದು ವರ್ಣಿಸಿದ್ದರೂ ಇತರ ಕಡೆಗಳಲ್ಲಿ **ಬ್ರಹ್ಮ, ಆತ್ಮ** ಇತ್ಯಾದಿ ಹೆಸರುಗಳಿಂದ ವರ್ಣಿತ ವಾಗಿರುವ ಆದಿತತ್ತ್ವವೇ ಎಂದು ತಿಳಿಯಬೇಕು.

ದೇವಮಾನವಾದಿ ಸಕಲಭೂತಗಳೂ ಸಹ ಈ ವಿಶ್ವತತ್ತ್ವದ ಆಜ್ಞಾನುವರ್ತಿಗಳಾಗಿ ಲೋಕವ್ಯವಹಾರ ಗಳನ್ನು ನಿರ್ವಹಿಸುತ್ತಾರೆ. ಅಮರವಾದ ಈ ಚಕ್ರದಲ್ಲಿ ಉನ್ನತ್ಯವನತಿಗಳು ಸಹಜವಾಗಿಯೇ ಇರುವುವು. ಮೂಲ ತತ್ತ್ವವು ಅಜರವಾದರೂ, ತದಧೀನವಾದ ಸಕಲಕ್ಕೂ ಆವಿರ್ಭಾವವೂ ತಿರೋಧಾನವೂ ಆವೃತ್ತಿಯ ರೂಪದಲ್ಲಿದ್ದೇ ಇರುವುದು. ಇದನ್ನೇ **ಬಾಧ್ವ** ನೆಂಬ ಋಷಿಯು ಐತರೇಯಾರಣ್ಯಕದಲ್ಲಿ—

> **ಮಹಾಪುರುಷ ಇತಿ ಯಮುಪೋಚಾಮ ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೈಕ್ಯಾ ಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ। ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್। ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ ॥**
>
> (ಐ. ಆ. ೩-೨-೩-೭ ರಿಂದ ೯)

ಯಾವನನ್ನು ನಾವು ಮಹಾಪುರುಷನೆನ್ನುತ್ತೇವೆಯೋ ಅವನೇ **ಸಂವತ್ಸರರೂಪನು.** ಆ ಸಂವತ್ಸರದ ಪರಿಭ್ರಮಣ ಕಾಲದಲ್ಲಿ ಸಕಲ ಭೂತಗಳಿಗೂ ಉನ್ನತ್ಯವನತಿಗಳು ಸಂಭವಿಸಲೇಬೇಕಾಗುತ್ತವೆ. ಈ ಸಂವತ್ಸರದ ಸಾರವೇ ಆದಿತ್ಯನು. ಅಶರೀರಿಯೂ, ಪ್ರಜ್ಞಾತ್ಮನೂ ಆದ ಪುರುಷನೂ ಈ ಆದಿತ್ಯನೂ ಒಂದೇ ವಿನಹ ಬೇರೆಬೇರೆಯಲ್ಲ. ಆದುದರಿಂದ ಪ್ರತಿ ಜೀವಾತ್ಮರಲ್ಲೂ ಈ ಆದಿತ್ಯನ ಅಂಶವೇ ವ್ಯಾಪಿಸಿ, ಎಲ್ಲರಲ್ಲಿಯೂ ಒಂದೇ ತತ್ತ್ವದ ಪ್ರತಿಬಿಂಬ ವನ್ನು ಹರಡಿರುತ್ತದೆ. ಬಾಧ್ವಋಷಿಯು ಇಲ್ಲಿ ಮಹಾಪುರುಷನಿಗೂ, ಸಂವತ್ಸರಕ್ಕೂ. ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳುವಾಗ ತನ್ನ ಮತಕ್ಕೆ ಸಮರ್ಥನೆಯನ್ನು ತೋರಿಸುವುದಕ್ಕಾಗಿ.

> **ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ।**
> **ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**
>
> (ಋ. ಸಂ. ೧-೧೧೫-೧)

ಮಿತ್ರ, ವರುಣ ಮತ್ತು ಅಗ್ನಿಗಳಿಗೆ ಚಕ್ಷುಸ್ಸ್ವರೂಪನಾದ ಆದಿತ್ಯನು ಉದಯಿಸಿದ್ದಾನೆ ಅವನು ಪೃಥ್ವಿಯನ್ನೂ ಅಂತರಿಕ್ಷವನ್ನೂ ಮತ್ತು ದ್ಯುಲೋಕವನ್ನೂ ಪೂರ್ಣವಾಗಿ ವ್ಯಾಪಿಸಿದ್ದಾನೆ. ಜಂಗಮಾತ್ಮಕವಾದ ಜಗತ್ತಿಗೂ, ಸ್ಥಾವರಾತ್ಮಕವಾದ ಜಗತ್ತಿಗೂ ಆದಿತ್ಯನೇ ಅಂತರಾತ್ಮನಾಗಿದ್ದಾನೆ ಮತ್ತು ಜಗದ್ವ್ಯಾಪಿಯಾಗಿದ್ದಾನೆ ಎಂದು ಹೇಳಿರುವನು.

**ಉಭೇ ಅಪ್ರಾ ರೋದಸೀ ವಿ ಸ ಆವಃ** - ಈ ಸೋಮದೇವನ ಮಹಿಮೆಯು ಭೂಲೋಕದಲ್ಲಿಯೂ ಸ್ವರ್ಗ, ದಲ್ಲಿಯೂ ವ್ಯಾಪಿಸಿರುವುದು ಎಂದರೆ ಮಾನವರಾದ ಯಜಮಾನಋತ್ವಿಗ್ಜನರೂ, ಸ್ವರ್ಗದಲ್ಲಿರುವ ಇಂದ್ರಾದಿದೇವತೆ

ಗಳೂ ಸೋಮಪಾನಮಾಡಿ ಹರ್ಷವನ್ನನುಭವಿಸುವರು. ಆದ್ದರಿಂದ ಸೋಮನ ಮಹಿಮೆಯು ದ್ಯಾವಾಪೃಥಿವಿಗಳೆರಡರಲ್ಲಿಯೂ ಹರಡಿದೆ ಮತ್ತು ಸೋಮಪಾನದಿಂದ ಕತ್ತಲೆಯು ನಾಶವಾಗುವುದು ಎಂದರೆ ಅಜ್ಞಾನವು ನಾಶವಾಗಿ ಪ್ರಜ್ಞೆಯುಂಟಾಗುವುದು ಎಂಬರ್ಥವೂ ಭಾಸವಾಗುವುದು.

**ಕಾರಿಣೇ ನ**—ಕೆಲಸಗಾರರಿಗೆ ಅವರು ಮಾಡಿದ ಕೆಲಸಕ್ಕಾಗಿ ಯಜಮಾನನು ದ್ರವ್ಯವನ್ನು ಕೊಟ್ಟೇ ಕೊಡುವನು ಎಂದರೆ, ಬೇಕಾದರೆ ಕೊಡಬಹುದು, ಬೇಡವಾದರೆ ಇಲ್ಲವೆನ್ನುವಹಾಗಿಲ್ಲ. ಕೊಟ್ಟೇಕೊಡಬೇಕಾದುದು ಅವನ ಕರ್ತವ್ಯ. ಲೋಕವ್ಯವಹಾರವೂ ಹಾಗೆಯೇ ಇರುವುದು. ಅದರಂತೆಯೇ ನಮ್ಮ ಸ್ತುತಿಯಿಂದ ಪ್ರೀತನಾದ ಸೋಮದೇವನು ನಮಗೆ ಧನಾದಿಗಳನ್ನು ಕೊಡಲಿ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಸ ವರ್ಧಿತಾ ವರ್ಧನಃ ಪೂಯಮಾನಃ ಸೋಮೋ ಮೀಢ್ವಾँ ಅಭಿ ನೋ ಜ್ಯೋತಿಷಾವೀತ್ ।**
**ಯೇನಾ ನಃ ಪೂರ್ವೇ ಪಿತರಃ ಪದಜ್ಞಾಃ ಸ್ವರ್ವಿದೋ ಅಭಿ ಗಾ ಅದ್ರಿಮುಷ್ಣನ್ ॥ ೩೯ ॥**

॥ ಪದಪಾಠಃ ॥

**ಸಃ । ವರ್ಧಿತಾ । ವರ್ಧನಃ । ಪೂಯಮಾನಃ । ಸೋಮಃ । ಮೀಢ್ವಾನ್ । ಅಭಿ । ನಃ । ಜ್ಯೋತಿಷಾ । ಆವೀತ್ ।**
**ಯೇನ । ನಃ । ಪೂರ್ವೇ । ಪಿತರಃ । ಪದಽಜ್ಞಾಃ । ಸ್ವಃಽವಿದಃ । ಅಭಿ । ಗಾಃ । ಅದ್ರಿಂ । ಉಷ್ಣನ್ ॥೩೯॥**

॥ ಸಾಯಣಭಾಷ್ಯಂ ॥

**ವರ್ಧಿತಾ ದೇವಾನಾಂ ಸ್ವಕಲಾಪ್ರದಾನೇನ ವರ್ಧಯಿತಾ ವರ್ಧನಃ ಸ್ವಯಂ ವರ್ಧಮಾನಃ ಪವಿತ್ರೇಣ ಪೂಯಮಾನೋ ಮೀಢ್ವಾನ್ಕಾಮಾನಾಂ ಸೇಕ್ತಾ ಸ ಸೋಮೋ ನೋಽಸ್ಮಾಞ್ಜ್ಯೋತಿಷಾ ಸ್ವತೇಜಸಾಭ್ಯಾವೀತ್ । ಅಭಿರಕ್ಷತು । ಯೇನ ಸೋಮೇನ ಪದಜ್ಞಾಃ ಪಣಿಭಿರಪಹೃತಾನಾಂ ಗವಾಂ ಪದಾನಿ ಜಾನಂತಃ ಸ್ವರ್ವಿದಃ ಸರ್ವಜ್ಞಾಃ ಸೂರ್ಯಂ ಜಾನಂತೋ ವಾ ನೋಽಸ್ಮಾಕಂ ಪೂರ್ವೇ ಚಿರಂತನಾಃ ಪಿತರೋಽಂಗಿರಸೋ ಗಾಃ ಪಶೂನಭಿಲಕ್ಷ್ಯಾದ್ರಿಮುಷ್ಣಞ್ಶಿಲೋಚ್ಚಯಮುಷ್ಣನ್। ಸೋಮತೇಜಸಾಂಧಕಾರಾವೃತಂ ಶಿಲೋಚ್ಚಯಂ ಗತ್ವಾ ಪಶೂನಾಹರನ್ನಿತ್ಯರ್ಥಃ ॥ ಉಷಿರಿಹ ಮುಷ್ಣಾತಿಸಮಾನಕರ್ಮಾ । ಯದ್ವಾ । ಮುಷ್ಣಾತೇರ್ಲಙಿ ವರ್ಣಲೋಪಃ ॥**

॥ ಪ್ರತಿಪದಾರ್ಥ ॥

**ಯೇನ**—ಯಾವ ಸೋಮನ ಸಹಾಯದಿಂದ । **ಪದಜ್ಞಾಃ**—ಪಣಿಗಳಿಂದ ಅಪಹೃತವಾದ ಗೋವುಗಳ (ಹೆಜ್ಜೆಯ) ಮಾರ್ಗಗಳನ್ನು ಅರಿತವರೂ । **ಸ್ವರ್ವಿದಃ**—ಸರ್ವಜ್ಞರೂ । **ಪೂರ್ವೇ**—ಪುರಾತನರೂ ಆದ ।

**ನಃ ಪಿತರಃ**—ನಮ್ಮ ಪಿತೃಗಳು (ಅಂಗಿರಸ್ಸುಗಳು) | **ಅದ್ರಿಂ**—ಪರ್ವತದಿಂದ | **ಉಷ್ಣನ್**—ಗೋವುಗಳನ್ನೂ ಪುನಃ ಅಪಹರಿಸಿ ಕೊಂಡುಬಂದರೋ | **ವರ್ಧಿತಾ**—ದೇವತೆಗಳನ್ನು ಪುಷ್ಟಿಗೊಳಿಸುವವನೂ | **ವರ್ಧನಃ**—ತಾನೂ ವೃದ್ಧಿಹೊಂದುವವನೂ | **ಪವಿತ್ರೇಣ**—ದಶಾಪವಿತ್ರದಿಂದ | **ಪೂಯಮಾನಃ**—ಶುದ್ಧಿಯನ್ನು ಹೊಂದುವವನೂ | **ಮೀಢ್ವಾನ್**—ಕಾಮವರ್ಷಕನೂ ಆದ | **ಸಃ ಸೋಮಃ**—ಸೋಮದೇವನು | **ನಃ**—ನಮ್ಮನ್ನು | **ಜ್ಯೋತಿಷಾ**—ತನ್ನ ತೇಜಸ್ಸಿನಿಂದ | **ಅಭ್ಯಾವೀತ್**—ಪೂರ್ಣವಾಗಿ ರಕ್ಷಿಸಲಿ.

|| ಭಾವಾರ್ಥ ||

ಯಾವಸೋಮನ ಸಹಾಯದಿಂದ ಪಣಿಗಳಿಂದ ಅಪಹೃತವಾದ ಗೋವುಗಳ ಪಾದಚಿಹ್ನೆಗಳನ್ನು ಅನುಸರಿಸಿ ಸರ್ವಜ್ಞರೂ, ಪುರಾತನರೂ ಆದ ನಮ್ಮ ಪಿತೃಗಳು ಪರ್ವತದಿಂದ ಗೋವುಗಳನ್ನು ಪುನಃ ಅಪಹರಿಸಿಕೊಂಡು ಬಂದರೊ, ಅಂತಹವನೂ, ದೇವತೆಗಳನ್ನು ಪುಷ್ಟಿಗೊಳಿಸುವವನೂ, ತಾನೂ ವೃದ್ಧಿಯನ್ನು ಹೊಂದುವವನೂ, ದಶಾ ಪವಿತ್ರದಿಂದ ಶುದ್ಧಿಯನ್ನು ಹೊಂದುವವನೂ, ಕಾಮ ವರ್ಷಕನೂ ಆವ ಸೋಮದೇವನು ನಮ್ಮನ್ನು ತನ್ನ ತೇಜಸ್ಸಿನಿಂದ ಪೂರ್ಣವಾಗಿ ರಕ್ಷಿಸಲಿ.

## English Translation.

May Soma the augmenter (of the gods), self-augmenting, being purified, the showerer (of benefits), protect us by his radiance; through whom our forefathers, tracing the footmarks, cognizant of all things, stole the cattle from the rock.

|| ವಿಶೇಷವಿಷಯಗಳು ||

ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು-ಸರಮಾ ಎಂಬುದು ದೇವತೆಗಳ ಬಳಿ ಇರುವ ಹೆಣ್ಣು ನಾಯಿಯು. ಪಣಿನಾಮಕ ದೈತ್ಯರು ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿದ್ದಾಗ ಆ ಗೋವುಗಳನ್ನು ಹುಡುಕುವುದಕ್ಕಾಗಿ ಇಂದ್ರನು ಈ ಸರಮಾ ಎಂಬ ದೇವಶುನಿಯನ್ನು ಕಳುಹಿಸಿದನು. ಲೋಕವ್ಯವಹಾರದಲ್ಲಿ ಬೇಟೆಗಾರನು ಮೃಗಗಳನ್ನು ಹುಡುಕುವುದಕ್ಕಾಗಿ ತನ್ನ ಬಳಿ ಇರುವ ಬೇಟೆ ನಾಯಿಯನ್ನು ಕಳುಹಿಸುವಂತೆ ಇಂದ್ರನೂ ಸಹ ಗವಾನ್ವೇಷಣಕ್ಕಾಗಿ ಈ ದೇವಶುನಿಯನ್ನು ಹೋಗೆನಲು ಆಗ ಅದು ಇಂದ್ರನನ್ನು ಕುರಿತು ಇಂತೆಂದಿತು-ಎಲೈ ಇಂದ್ರನೇ, ನೀನು ನನ್ನ ಮರಿಗಾಗಿ ಕ್ಷೀರಾದ್ಯಾಹಾರವನ್ನು ಕೊಡುವುದಾದರೆ ನಾನು ಹೋಗಿ ಗೋವುಗಳನ್ನು ಹುಡುಕಿ ತರುವೆನೆಂದಿತು. (ಶಾಟ್ಯಾಯನ ಶಾಖೆಯವರು ಹೇಳುವಂತೆ **ಅನ್ನಾದಿನೀಂ ತೇ ಸರಮೇ ಪ್ರಜಾಂ ಕರೋಮಿ ಯಾ ನೋ ಗಾ ಅನ್ವವಿಂದ**---ಎಲೈ ಸರಮೆಯೇ ನಿನ್ನ ಮರಿಗೆ ಆಹಾರವನ್ನು ಒದಗಿಸಿ ಕೊಡುವೆನು. ನೀನು ಹೋಗಿ ಗೋವುಗಳನ್ನು ಹುಡುಕಿಕೊಂಡು ಬಾ ಎಂದು ಹೇಳಲು) ಇಂದ್ರನು ಹಾಗೆಯೇ ಆಗಲೆಂದು ಹೇಳಲು ಆ ಶುನಿಯು ಹೊರಟು ಹುಡುಕುತ್ತಾ ಪಣಿಗಳು ಗೋವನ್ನು ಬಚ್ಚಿಟ್ಟಿದ್ದ ಪ್ರದೇಶವನ್ನು ಕಂಡು ಹಿಡಿದು ಅದನ್ನು ಇಂದ್ರನಿಗೆ ತಿಳಿಸಿತು. ಇಂದ್ರನು ಅದನ್ನು ತಿಳಿದು ಆ ಅಸುರನನ್ನು ಸಂಹರಿಸಿ ದೇವತೆಗಳ ಗೋವುಗಳನ್ನು ಬಿಡಿಸಿ ಹಿಂದಕ್ಕೆ ತಂದನು. ಈ ಅಭಿಪ್ರಾಯವೇ ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವುದು ಎಂದು

ಸರಮಾ ಎಂಬುವುದು ದೇವತೆಗಳ ಎಂದರೆ ಇಂದ್ರನ ಶುನಿಯು ಇದಕ್ಕೆ ಎರಡು ಮರಿಗಳಿದ್ದವೆಂದೂ ಅವು ಮೃತ್ಯುದೇವತೆಯಾದ ಯಮನ ಬಳಿ ಇದ್ದವೆಂದೂ ಅವುಗಳಿಗೆ ತಾಯಿಯ ಹೆಸರನ್ನನುಸರಿಸಿ ಸಾರಮೇಯೌ ಎಂಬ ಹೆಸರಿದ್ದಿತೆಂದೂ ತಿಳಿದುಬರುವುದು—

ಅತಿ ದ್ರವ ಸಾರಮೇಯೌ ಶ್ವನೌ ಚತುರಕ್ಷೌ ಶಬಲೌ ಸಾಧುನಾ ಪಥಾ ।
(ಋ. ಸಂ. ೧೦-೧೪-೧೦)

ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ ॥
(ಋ. ಸಂ. ೧೦-೧೪-೧೧)

ಈ ಋಕ್ಕುಗಳಲ್ಲಿ ಸರಮಾ ಎಂಬ ದೇವಶುನಿಯ ಎರಡು ಮರಿಗಳಾದ ಸಾರಮೇಯೌ ಎಂಬ ನಾಯಿಗಳ ವಿಷಯವೂ ಅವುಗಳಿಗೆ ನಾಲ್ಕು ಕಣ್ಣುಗಳಿದ್ದ ವಿಷಯವೂ ತಿಳಿದುಬರುವುದು. ಮೇಲೆ ಹೇಳಿದ ಸರಮಾ ಎಂಬ ದೇವಶುನಿಯು ಪಣಿಗಳ ಬಳಿಗೆ ಹೋಗಿ ಅವರೊಡನೆ ಸಂಧಾನಮಾಡಿದ ವಿಷಯವು ಋಗ್ವೇದದ ೧೦ ನೆಯ ಮಂಡಲದ ೧೦೮ ನೆಯ ಸೂಕ್ತದಲ್ಲಿ ಈ ರೀತಿ ವರ್ಣಿತವಾಗಿರುವುದು—

ಕಿಮಿಚ್ಛಂತೀ ಸರಮಾ ಪ್ರೇದಮಾನಡ್ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।
ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಂ ಪಯಾಂಸಿ ।

ಇಂದ್ರಸ್ಯ ದೂತೀರಿಷಿತಾ ಚರಾಮಿ ಮಹ ಇಚ್ಛಂತೀ ಪಣಯೋ ನಿಧೀನ್ ವಃ ॥
ಅತಿಷ್ಕದೋ ಭಿಯಸಾ ತನ್ನ ಆವತ್ತಥಾ ರಸಾಯಾ ಅತರಂ ಪಯಾಂಸಿ ॥

ಕೀದೃಙ್ಙಿಂದ್ರಃ ಸರಮೇ ಕಾ ದೃಶೀಕಾ ಯಸ್ಯೇದಂ ದೂತೀರಸರಃ ಪರಾಕಾತ್ ।
ಆ ಚ ಗಚ್ಛಾನ್ಮಿತ್ರಮೇನಾ ದಧಾಮಾಥಾ ಗವಾಂ ಗೋಪತಿರ್ನೋ ಭವಾಮಿ ॥

ನಾಹಂ ತಂ ವೇದ ದಭ್ಯಂ ದಭತ್ಸ ಯಸ್ಯೇದಂ ದೂತೀರಸರಃ ಪರಾಕಾತ್ ।
ನ ತಂ ಗೂಹಂತಿ ಸ್ರವತೋ ಗಭೀರಾ ಹತಾ ಇಂದ್ರೇಣ ಪಣಯಃ ಶಯಧ್ವೇ ॥

ಇಮಾ ಗಾವಃ ಸರಮೇ ಯಾ ಐಚ್ಛಃ ಪರಿ ದಿವೋ ಅಂತಾನ್ ಸುಭಗೇ ಪತಂತೀ ।
ಕಸ್ತ ಏನಾ ಅವ ಸೃಜಾದಯುಧ್ವ್ಯುತಾಸ್ಮಾಕಮಾಯುಧಾ ಸಂತಿ ತಿಗ್ಮಾ ॥

ಅಸೇನ್ಯಾ ವಃ ಪಣಯೋ ವಚಾಂಸ್ಯನಿಷವ್ಯಾಸ್ತನ್ವಃ ಸಂತು ಪಾಪೀಃ ।
ಅಧೃಷ್ಟೋ ವ ಏತವಾ ಅಸ್ತು ಪಂಥಾ ಬೃಹಸ್ಪತಿರ್ವ ಉಭಯಾ ನ ಮೃಳಾತ್ ॥

ಅಯಂ ನಿಧಿಃ ಸರಮೇ ಅದ್ರಿಬುಧ್ನೋ ಗೋಭಿರಶ್ವೇಭಿರ್ವಸುಭಿರ್ನ್ಯೃಷ್ಟಃ ।
ರಕ್ಷಂತಿ ತಂ ಪಣಯೋ ಯೇ ಸುಗೋಪಾ ರೇಕು ಪದಮಲಕಮಾ ಜಗಂಥ ॥

ಏಹ ಗಮನ್ನೃಷಯಃ ಸೋಮಶಿತಾ ಅಯಾಸ್ಯೋ ಅಂಗಿರಸೋ ನವಗ್ವಾಃ ।
ತ ಏತಮೂರ್ವಂ ವಿ ಭಜಂತ ಗೋನಾಮಥೈತದ್ವಚಃ ಪಣಯೋ ವಮನ್ನಿತ್ ॥

ಏವಾ ಚ ತ್ವಂ ಸರಮ ಆಜಗಂಥ ಪ್ರಬಾಧಿತಾ ಸಹಸಾ ದೈವ್ಯೇನ ।
ಸ್ವಸಾರಂ ತ್ವಾ ಕೃಣವೈ ಮಾ ಪುನರ್ಗಾ ಅಪ ತೇ ಗವಾಂ ಸುಭಗೇ ಭಜಾಮ ॥

ನಾಹಂ ವೇದ ಭ್ರಾತೃತ್ವಂ ನೋ ಸ್ವಸೃತ್ವಮಿಂದ್ರೋ ವಿದುರಂಗಿರಸಶ್ಚ ಘೋರಾಃ ।
ಗೋಕಾಮಾ ಮೇ ಅಚ್ಛದಯನ್ ಯದಾಯಮಪಾತ ಇತ ಪಣಯೋ ವರೀಯಃ ॥

ದೂರಮಿತ ಪಣಯೋ ವರೀಯ ಉದ್ಗಾವೋ ಯಂತು ಮಿನತೀರೃತೇನ ।
ಬೃಹಸ್ಪತಿರ್ಯಾ ಅವಿಂದನ್ನಿಗೂಳ್ಹಾಃ ಸೋಮೋ ಗ್ರಾವಾಣ ಋಷಯಶ್ಚ ವಿಪ್ರಾಃ ॥

(ಋ. ಸಂ. ೧೦-೧೦೮-೧ ರಿಂದ ೧೧)

ಇದರ ಅನುವಾದವನ್ನು ಕೆಳಗೆ ಕೊಟ್ಟಿರುತ್ತೇವೆ. ಇದು ಪಣಿಗಳಿಗೂ ಸರಮೆಗೂ ನಡೆದ ಸಂಭಾಷಣೆಯ ರೂಪದಲ್ಲಿರುವುದು. ಹಿಂದೆ ಬೃಹಸ್ಪತಿಯ ಗೋವುಗಳನ್ನು ವಲನ ಅನುಯಾಯಿಗಳಾದ ಪಣಿಗಳೆಂಬುವರು ಅಪಹರಿಸಿ ಒಂದು ರಹಸ್ಯ ಸ್ಥಳದಲ್ಲಿ ಬಚ್ಚಿಟ್ಟಿದ್ದರು. ಆಗ ಬೃಹಸ್ಪತಿಯ ಕೋರಿಕೆಯಂತೆ ಇಂದ್ರನು ಆ ಗೋವುಗಳನ್ನು ಹುಡುಕುವುದಕ್ಕಾಗಿ ದೇವಶುನಿಯಾದ ಸರಮೆಯನ್ನು ಕಳುಹಿದನು. ಆ ಸರಮೆಯು ಗೋವುಗಳನ್ನು ಹುಡುಕುತ್ತಾ ಬಹುದೂರ ಸಂಚರಿಸಿ ದಾರಿಯಲ್ಲಿ ಅಡ್ಡಲಾಗಿ ಸಿಕ್ಕಿದ ರಸಾ ಎಂಬ ಒಂದು ದೊಡ್ಡ ನದಿಯನ್ನು ದಾಟಿ ಪಣಿಗಳ ಸಮೀಪಕ್ಕೆ ಬಂದಿತು. ಆಗ ಪಣಿಗಳು ಸರಮೆಯು ಬಂದ ಉದ್ದೇಶವನ್ನು ತಿಳಿದು ಅದರೊಡನೆ ಸ್ನೇಹ ಮಾಡಿಕೊಳ್ಳುವ ಭಾವನೆಯಿಂದ ಇಂತು ಸಂಭಾಷಣೆಯನ್ನು ನಡೆಸಿದರು—

**ಪಣಿಗಳು**—ಎಲೈ ಸರಮೆಯೇ, ನೀನು ಬಹುದೂರದಿಂದ ಬಹುಕಷ್ಟಪಟ್ಟು ಇಲ್ಲಿಗೆ ಬಂದಿರುವಂತೆ ಕಾಣುತ್ತೆ. ನೀನು ಇಲ್ಲಿಗೆ ಬಂದ ಉದ್ದೇಶವೇನು ? ಇಲ್ಲಿಗೆ ಹೇಗೆ ಬಂದೆ? ರಸಾ ಎಂಬ ನದಿಯನ್ನು ಹೇಗೆ ದಾಟಿದೆ?

**ಸರಮೆ**—ಎಲೈ ಪಣಿಗಳೇ ಕೇಳಿರಿ ; ನಾನು ಇಂದ್ರನಿಂದ ನಿಯಮಿತಳಾಗಿ ಅವನ ದೂತಿಯಂತೆ ಇಲ್ಲಿಗೆ ಬಂದಿರುವೆನು. ನೀವು ಬಚ್ಚಿಟ್ಟಿರುವ ಧನಗಳನ್ನು (ಗೋವುಗಳನ್ನು) ಇಂದ್ರನು ಅಪೇಕ್ಷಿಸುವನು. ರಸಾ ನದಿಯು ಹೆದರಿ ನನಗೆ ದಾಟುವುದಕ್ಕೆ ಸಹಾಯಮಾಡಿತು. ಆದುದರಿಂದ ನಾನು ಆ ನದಿಯನ್ನು ದಾಟಿ ಬಂದೆನು.

**ಪಣಿಗಳು**—ಎಲೈ ಸರಮೆಯೇ, ಒಳ್ಳೇದು. ಇಂದ್ರನು ನಿನ್ನನ್ನು ದೂತಿಯನ್ನಾಗಿ ಕಳುಹಿಸಿರುವನೆಂದು ಹೇಳಿದೆಯಷ್ಟೆ. ಆ ಇಂದ್ರನು ನೋಡುವುದಕ್ಕೆ ಹೇಗಿರುವನು ? (ಪಣಿಗಳು ಹೀಗೆ ತಮ್ಮತಮ್ಮಲ್ಲಿ ಹೀಗೆ ಮಾತನಾಡಿಕೊಳ್ಳುವರು) ಸರಮೆಯು ಬಂದರೆ ಬರಲಿ. ಅದರೊಡನೆ ಸ್ನೇಹವನ್ನೇ ಮಾಡಿಕೊಳ್ಳೋಣ ಮತ್ತು ನಮ್ಮ ಗೋವುಗಳಿಗೆ ಅದೇ ಯಜಮಾನತಿಯಾಗಿರಲಿ.

**ಸರಮೆ**—ನೀವು ಭಾವಿಸಿರುವಂತೆ ಆ ಇಂದ್ರನನ್ನು ಜಯಿಸಲು ಸಾಧ್ಯವಿಲ್ಲ. ನನ್ನನ್ನು ಕಳುಹಿಸಿದ ಆ ಇಂದ್ರನು ಶತ್ರುಗಳನ್ನು ಜಯಿಸುವನೇ ಹೊರತು ಅವನನ್ನು ಇತರರು ಜಯಿಸಲು ಸಾಧ್ಯವಿಲ್ಲ. ಆಳವಾದ ನದಿಗಳು ಸಹ ಅವನನ್ನು ತಡೆಯಲಾರವು. ಅವನಿಂದ ನೀವು ಸಂಹೃತರಾಗಿ ಮೃತ್ಯುಶಯ್ಯೆಯಲ್ಲಿ ಮಲಗಬೇಕಾಗುವುದು.

**ಪಣಿಗಳು**—ಎಲೈ ಸರಮೆಯೇ, ಇಗೋ ಈ ಗೋವುಗಳಿಗಾಗಿಯೇ ಅಲ್ಲವೇ ನೀನು ಅಂತರಿಕ್ಷಮಾರ್ಗದಿಂದ ಬಹುದೂರ ಬಂದು ಅವುಗಳನ್ನು ಅಪೇಕ್ಷಿಸುತ್ತಿರುವುದು? ಆದರೆ ಆ ಗೋವುಗಳನ್ನು ಯುದ್ಧಮಾಡದೆ ನಿನಗೆ ಸುಮ್ಮನೆ ಒಪ್ಪಿಸುವವರಾರು ? ನಮ್ಮ ಆಯುಧಗಳು ಬಹು ಹರಿತವಾಗಿವೆ.

**ಸರಮೇ**—ನಿಮ್ಮ ಮಾತುಗಳಿಂದ ಏನು ಪ್ರಯೋಜನ? ಆ ಮಾತಿನಲ್ಲಿ ಸೈನ್ಯದ ಬಲವಿರುವುದೇ, ನಿಮ್ಮ ಪಾಪಪೂರಿತವಾದ ಶರೀರಗಳಿಗೆ ಬಿಲ್ಲುಬಾಣಗಳಿಗೆ ಇರುವ ಶಕ್ತಿ ಇರುವುದೇ ? ನೀವು ಅನುಸರಿಸುವ ಮಾರ್ಗವು ಬಹು ಕಷ್ಟಕರವಾದುದು. (ಗೋವುಗಳ ಮಾಲೀಕನಾದ) ಬೃಹಸ್ಪತಿಯು ನಿಮಗೆ ದಯವನ್ನು ತೋರಿಸುವುದಿಲ್ಲ, ನಿಮ್ಮ ಮಾತಿಗೆ ಬೆಲೆಯನ್ನು ಕೊಡುವುದಿಲ್ಲ.

**ಪಣಿಗಳು**—ಎಲೈ ಸರಮೇ, ಈ ಪಶುಧನವು, ಎಂದರೆ ಹಸುಗಳು, ಕುದುರೆಗಳು, ದ್ರವ್ಯ ಮುಂತಾದುವುಗಳನ್ನು ನಾವು ಸಂಗ್ರಹಿಸಿ ಪರ್ವತಗಳಲ್ಲಿ ಇಟ್ಟಿರುವೆವು. ಪಣಿಗಳಾದ ನಾವು ಅವುಗಳನ್ನು ಬಹು ಜಾಗರೂಕತೆಯಿಂದ ಕಾಪಾಡುತ್ತಿರುವೆವು. ಇಂತಹ ದುರ್ಗಮವಾದ ಸ್ಥಳಕ್ಕೆ ನೀನು ಏಕಾಂಗಿಯಾಗಿ ಬಂದಿರುವುದು ವ್ಯರ್ಥವು.

**ಸರಮೇ**—ಎಲೈ ಪಣಿಗಳೇ ಕೇಳಿ. ಋಷಿಗಳೂ, ಅಂಗಿರಸ್ಸುಗಳೂ ಸೋಮಪಾನದಿಂದ ಶಕ್ತಿಸಾಮರ್ಥ್ಯಗಳನ್ನು ಪಡೆದು ಅಯಾಸ್ಯನ ನಾಯಕತ್ವದಲ್ಲಿ ಇಲ್ಲಿಗೆ ಬಂದು ಈ ಗೋವುಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ತಮ್ಮಲ್ಲಿ ಹಂಚಿಕೊಳ್ಳುವರು. ನೀವು ಆಡುತ್ತಿರುವ ಮಾತು ವ್ಯರ್ಥವೆಂಬುದು ನಿಮಗೆ ಆಗ ಗೊತ್ತಾಗುವುದು.

**ಪಣಿಗಳು**—ಎಲೈ ಸರಮೇ, ನಿನಗೆ ದೇವತೆಗಳ ಬೆಂಬಲವಿರುವಂತೆ ಕಾಣುವುದು. ಆದುದರಿಂದ ನಾವು ನಿನ್ನನ್ನು ನಮ್ಮ ಸಹೋದರಿಯಂತೆ ಭಾವಿಸುವೆವು. ನೀನು ಇಂದ್ರನ ಬಳಿಗೆ ಹಿಂದಕ್ಕೆ ಹೋಗಬೇಡ. ಇಲ್ಲಿಯೇ ಇರು. ಈ ಗೋವುಗಳಲ್ಲಿ ನಿನಗೂ ಒಂದು ಪಾಲನ್ನು ಕೊಡುವೆವು.

**ಸರಮೇ**—ನೀವು ನೀಡುವ ಸ್ನೇಹಭಾವವೂ ಸಹೋದರಿತ್ವವೂ ನನಗೆ ಬೇಡ. ಇಂದ್ರನೂ, ಭಯಂಕರರಾದ ಅಂಗಿರಸ್ಸುಗಳೂ ನನ್ನ ಸ್ವಭಾವವನ್ನು ತಿಳಿದಿರುವರು. ಗೋವುಗಳನ್ನು ಹುಡುಕುತ್ತಾ ನಾನು ಇಲ್ಲಿಗೆ ಬರುವಾಗ ಅವರು ಗೂಢಮಾರ್ಗದಿಂದ ನಿಮ್ಮ ವಾಸಸ್ಥಾನವನ್ನು ಅರಿತಿರುವರು. ಆದುದರಿಂದ ಎಲೈ ಪಣಿಗಳೇ, ನೀವು ದೂರ ಓಡಿಹೋಗಿ ಬದುಕಿಕೊಳ್ಳಿರಿ.

ಸಾವಕಾಶಮಾಡಬೇಡಿ, ದೂರದಲ್ಲಿರುವ ಸುರಕ್ಷಿತವಾದ ಪ್ರದೇಶಕ್ಕೆ ಹೋಗಿ. ಗುಹೆಯಲ್ಲಿಟ್ಟಿರುವ ಗೋವುಗಳು ಕ್ರಮವಾಗಿ ಈಚೆಗೆ ಬರಲಿ. ಬೃಹಸ್ಪತಿ, ಸೋಮ ಮತ್ತು ಬುದ್ಧಿವಂತರಾದ ಋಷಿಗಳು ಈ ರಹಸ್ಯಸ್ಥಳವನ್ನು ಕಂಡುಹಿಡಿದು ಗೋವುಗಳಿರುವ ಗುಹೆಯ ಬಾಗಿಲನ್ನು ಒಡೆದು ಒಳಗೆ ನುಗ್ಗುವರು.

ಈ ಸಂಭಾಷಣೆಯಲ್ಲಿ ಒಂದು ಋಕ್ಕನ್ನು ಪಣಿಗಳೂ ಅದಕ್ಕೆ ಪ್ರತ್ಯುತ್ತರವಾಗಿ ಮತ್ತೊಂದು ಋಕ್ಕನ್ನು ಸರಮೆಯೂ ಹೇಳಿರುವರು. ಈ ಪಣಿಗಳು ಗೋವುಗಳನ್ನು ಅಪಹರಿಸಿದ ವಿಷಯಗಳು ಋಗ್ವೇದದಲ್ಲಿ ಅನೇಕಕಡೆ ಸೂಚಿತವಾಗಿರುವುದು.

ಋಗ್ವೇದದಲ್ಲಿ ಪಣಿಶಬ್ದಕ್ಕೆ ವ್ಯಾಪಾರಾದಿಗಳನ್ನು ಮಾಡುವ ಧನಿಕನೆಂಬ ಅರ್ಥವಿದ್ದರೂ ಅವನು ಯಜ್ಞಾದಿಗಳನ್ನು ಮಾಡದೆ ಮತ್ತು ದಕ್ಷಿಣೆದಾನಾದಿಗಳನ್ನು ಕೊಡದಿರುವ ಮನುಷ್ಯನೆಂದೂ ಅರ್ಥವಿರುವುದರಿಂದ ಅವನನ್ನು ನಿಕೃಷ್ಟಭಾವನೆಯಿಂದ ನೋಡುವುದಲ್ಲದೆ ಅವನು ಗೌರವಾರ್ಹನಲ್ಲದವನೆಂದೂ ನೀಚಮನುಷ್ಯನೆಂದೂ ಋಷಿಗಳು ಭಾವಿಸಿದ್ದಂತೆ ತೋರುವುದು. ಕೆಲವುಕಡೆ ಪಣಿ ಎಂಬುವನು ಒಬ್ಬ ಪ್ರತ್ಯೇಕ ವ್ಯಕ್ತಿಯಾಗಿ ಕಂಡುಬರುವುದಾದರೂ ಈ ಶಬ್ದದ ಬಹುವಚನಪ್ರಯೋಗವು ವಿಶೇಷವಾಗಿರುವುದರಿಂದ ಪಣಯಃ ಎಂಬ ಶಬ್ದವು ಒಂದು ವರ್ಗದ ಜನರನ್ನು ಸೂಚಿಸುವುದಾಗಿರುವುದೆಂದು ತಿಳಿಯಬೇಕು. ಈ ಪಣಿಗಳೆಂಬುವರು ಈ ದೇಶದ ಪೂರ್ವನಿವಾಸಿಗಳೆಂದೂ ಇವರು ವ್ಯಾಪಾರಾದಿಗಳಲ್ಲಿ ತೊಡಗಿದ್ದರೆಂದೂ ಆದರೂ ಇವರಲ್ಲಿ ಪ್ರಾಮಾಣಿಕತೆ ಇರಲಿಲ್ಲವಾದ್ದರಿಂದ ಇವರನ್ನು ಅಸುರರ ಗುಂಪಿಗೆ ಸೇರಿದವರೆಂದು ಜನರು ಹೇಳುತ್ತಿದ್ದರೆಂದೂ ಕೆಲವರ ಅಭಿಮತವು. ಇವರು ಯಜ್ಞಾದಿಗಳನ್ನು ಮಾಡದೆ ಯಾವ ಸತ್ಕರ್ಮಾನುಷ್ಠದಲ್ಲಿಯೂ ಆಸಕ್ತಿ ಇಲ್ಲದೆ ನ್ಯಾಯ ಅಥವಾ ಅನ್ಯಾಯಮಾರ್ಗದಿಂದ ಕೇವಲ ದ್ರವ್ಯ ಸಂಪಾದನೆಯೇ ಮುಖ್ಯವೆಂದು ಪರಿಗಣಿಸಿ ಅದರಂತೆ ನಡೆಯುತ್ತಿದ್ದುದರಿಂದ ಇವರನ್ನು ಆರ್ಯರು ದಸ್ಯುಗಳೆಂತಲೂ ನೀಚವೃತ್ತಿಯ ಮನುಷ್ಯರೆಂತಲೂ ಭಾವಿಸಿ ಆ ವಿಧವಾದ ಅಭಿಪ್ರಾಯವನ್ನು ಮಂತ್ರಾದಿಗಳಲ್ಲಿ ಹೊರಗೆಡವಿದ್ದಾರೆ. ಪಣಿಗಳ ವಿಷಯವಾಗಿ ಋಗ್ವೇದದಲ್ಲಿ ಅನೇಕ ಋಕ್ಕುಗಳಿರುವವು.

॥ ಸಂಹಿತಾಪಾಠಃ ॥

ಅಕ್ರಾನ್ತ್ಸಮುದ್ರಃ ಪ್ರಥಮೇ ವಿಧರ್ಮಞ್ಜನಯನ್ಪ್ರಜಾ ಭುವನಸ್ಯ ರಾಜಾ ।
ವೃಷಾ ಪವಿತ್ರೇ ಅಧಿ ಸಾನೋ ಅವ್ಯೇ ಬೃಹತ್ಸೋಮೋ ವಾವೃಧೇ ಸುವಾನ
ಇಂದುಃ ॥ ೪೦ ॥

॥ ಪದಪಾಠಃ ॥

ಅಕ್ರಾನ್ । ಸಮುದ್ರಃ । ಪ್ರಥಮೇ । ವಿऽಧರ್ಮನ್ । ಜನಯನ್ । ಪ್ರऽಜಾಃ । ಭುವನಸ್ಯ । ರಾಜಾ ।
ವೃಷಾ । ಪವಿತ್ರೇ । ಅಧಿ । ಸಾನೌ । ಅವ್ಯೇ । ಬೃಹತ್ । ಸೋಮಃ । ವವೃಧೇ । ಸುವಾನಃ । ಇಂದುಃ ॥೪೦॥

॥ ಸಾಯಣಭಾಷ್ಯಂ ॥

ಸಮುದ್ರೋ ಯಸ್ಮಾದಾಪಃ ಸಂದ್ರವಂತಿ ಸ ಸಮುದ್ರೋऽಪಾಂ ವರ್ಷಕೋ ರಾಜಾ ಸೋಮಃ ಪ್ರಥಮೇ ವಿಸ್ತೃತೇ ಭುವನಸ್ಯೋದಕಸ್ಯ ವಿಧರ್ಮನ್ ವಿಧಾರಕೇऽಂತರಿಕ್ಷೇ ಪ್ರಜಾ ಜನಯನ್ನುತ್ಪಾದಯನ್ನಕ್ರಾನ್ । ಸರ್ವಮತಿಕ್ರಾಮತಿ ॥ ಕ್ರಮತೇರ್ಲುಙಿ ತಿಪೀಡಭಾವೇ ವೃದ್ಧೌ ಚ ಕೃತಾಯಾಂ ಸಿಜ್ಲೋಪೇ ಮಕಾರಸ್ಯ ಮೋ ನೋ ಧಾತೋರಿತಿ ನಕಾರೇ ರೂಪಂ ॥ ವೃಷಾ ಕಾಮಾನಾಂ ವರ್ಷಿತಾ ಸುವಾನೋऽಭಿಷೂಯಮಾಣ ಇಂದುರ್ದೀಪ್ತಃ ಸ ಸೋಮೋऽಧ್ಯಧಿಕಂ ಸಾನೌ ಸಮುಚ್ಛ್ರಿತೇऽವ್ಯೇऽವಿಭವೇ ಪವಿತ್ರೇ ಬೃಹತ್ಪ್ರಭೂತಂ ವವೃಧೇ । ವರ್ಧತೇ ॥

॥ ಪ್ರತಿಪದಾರ್ಥ ॥

**ಸಮುದ್ರಃ**—ವೃಷ್ಟಿಯನ್ನು ಸುರಿಸುವವನೂ । **ರಾಜಾ**—ಪ್ರಭುವೂ ಆದ ಸೋಮನು । **ಪ್ರಥಮೇ**—ವಿಸ್ತೃತವಾದುದೂ ।**ಭುವನಸ್ಯ**—ಉದಕಕ್ಕೆ । **ವಿಧರ್ಮನ್**—ಧಾರಕವಾದುದೂ ಆದ ಅಂತರಿಕ್ಷದಲ್ಲಿ । **ಪ್ರಜಾಃ**—ಪ್ರಜೆಗಳನ್ನು । **ಜನಯನ್**—ಉತ್ಪನ್ನಮಾಡುತ್ತ । **ಅಕ್ರಾನ್**—ಲೋಕವನ್ನೆಲ್ಲ ವ್ಯಾಪಿಸುತ್ತಾನೆ । **ವೃಷಾ**—ಕಾಮವರ್ಷಕನೂ । **ಸುವಾನಃ**—ಹಿಂಡಲ್ಪಡುವವನೂ । **ಇಂದುಃ**—ಪ್ರಕಾಶಮಾನನೂ ಆದ । **ಸೋಮಃ**—ಸೋಮದೇವನು । **ಸಾನೌ**— ಉನ್ನತಪ್ರದೇಶದಲ್ಲಿರುವುದೂ । **ಅವ್ಯೇ**—ಉಣ್ಣೆಯಿಂದ ನಿರ್ಮಿತವೂ ಆದ । **ಪವಿತ್ರೇ ಅಧಿ**—ದಶಾಪವಿತ್ರದಲ್ಲಿ । **ಬೃಹತ್**—ಅತ್ಯಧಿಕವಾಗಿ । **ವವೃಧೇ**—ಬೆಳೆಯುತ್ತಾನೆ.

॥ ಭಾವಾರ್ಥ ॥

ವೃಷ್ಟಿಯನ್ನು ಸುರಿಸುವವನೂ, ಪ್ರಭುವೂ ಆದ ಸೋಮನು ವಿಸ್ತೃತವಾದುದೂ, ಉದಕಕ್ಕೆ ಧಾರಕವೂ ಆದ ಅಂತರಿಕ್ಷದಲ್ಲಿ ಪ್ರಜೆಗಳನ್ನು ಉತ್ಪನ್ನಮಾಡುತ್ತ ಲೋಕವನ್ನೆಲ್ಲ ವ್ಯಾಪಿಸುತ್ತಾನೆ. ಕಾಮವರ್ಷಕನೂ, ಹಿಂಡಲ್ಪಡುವವನೂ, ಪ್ರಕಾಶಮಾನನೂ ಆದ ಸೋಮದೇವನು ಉನ್ನತಪ್ರದೇಶದಲ್ಲಿರುವುದೂ, ಉಣ್ಣೆಯಿಂದ ನಿರ್ಮಿತವೂ ಆದ ದಶಾಪವಿತ್ರದಲ್ಲಿ ಅತ್ಯಧಿಕವಾಗಿ ವೃದ್ಧಿಯನ್ನು ಹೊಂದುತ್ತಾನೆ.

## English Translation.

The ocean, the royal (Soma), generating progency in the outstretched (firmament, the) supporter of the water traverses tne universe; the showerer (of benefits), the brilliant Soma when effused increases abundantly in the elevated woollen filter.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಅಧಿದೈವತ ಮತ್ತು ಆಧ್ಯಾತ್ಮಪಕ್ಷಗಳಲ್ಲಿ ಎರಡು ವಿಧ ಅರ್ಥಗಳು ಸಾಧ್ಯವೆಂದು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ—

**ಅತ್ಯಕ್ರಮೀತ್ಸಮುದ್ರ ಆದಿತ್ಯಃ ಪರಮೇ ವ್ಯವನೇ ವರ್ಷಕರ್ಮಣಾ ಜನಯನ್ ಪ್ರಜಾ ಭುವನಸ್ಯ ರಾಜಾ ಸರ್ವಸ್ಯ ರಾಜಾ ವೃಷಾ ಪವಿತ್ರೇ ಅಧಿ ಸಾನೋ ಅವ್ಯೇ ಬೃಹತ್ಸೋಮೋ ವಾವೃಧೇ ಸುವಾನ ಇಂದುರಿತ್ಯಧಿದೈವತಂ ॥**

**ಅಥಾಧ್ಯಾತ್ಮಂ— ಅತ್ಯಕ್ರಮೀತ್ಸಮುದ್ರ ಆತ್ಮಾ ಪರಮೇ ವ್ಯವನೇ ಜ್ಞಾನಕರ್ಮಣಾ ಜನಯನ್ ಪ್ರಜಾ ಭುವನಸ್ಯ ರಾಜಾ ಸರ್ವಸ್ಯ ರಾಜಾ ವೃಷಾ ಪವಿತ್ರೇ ಅಧಿ ಸಾನೋ ಅವ್ಯೇ ಬೃಹತ್ಸೋಮೋ ವಾವೃಧೇ ಸುವಾನ ಇಂದುರಿತ್ಯಾತ್ಮಗತಿಮಾಚಷ್ಟೇ ॥**

(ನಿ. ೧೪-೧೬)

ಅಧಿದೈವತಪಕ್ಷದಲ್ಲಿ ಸಮುದ್ರಶಬ್ದಕ್ಕೆ ಆದಿತ್ಯನೆಂದೂ ಇವನು ವೃಷ್ಟಿಕರ್ಮದಿಂದ ಪ್ರಜೆಗಳನ್ನು ಉತ್ಪತ್ತಿಮಾಡುತ್ತಾ ಸಕಲಲೋಕಕ್ಕೂ ರಾಜನಾಗಿರುವನೆಂದು ಹೇಳಿದೆ. ಆಧ್ಯಾತ್ಮಪಕ್ಷದಲ್ಲಿ ಸಮುದ್ರಶಬ್ದಕ್ಕೆ ಆತ್ಮನೆಂದು ಅರ್ಥಮಾಡಿ

ಈ ಆತ್ಮನು ತನ್ನ ಜ್ಞಾನದಿಂದ ಪ್ರಜೆಗಳ ಉತ್ಪತ್ತಿಗೆ ಕಾರಣವಾಗಿ ಸಕಲ ಲೋಕಗಳಿಗೂ ಪ್ರಭುವಾಗಿರುವನೆಂದು ಆತ್ಮ ಗತಿಯನ್ನು ವಿವರಿಸಿದೆ

॥ ಸಂಹಿತಾಪಾಠಃ ॥

ಮಹತ್ತತ್ಸೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನ್ ।

ಅದಧಾದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುಃ ॥

॥ ಪದಪಾಠಃ ॥

ಮಹತ್ । ತತ್ । ಸೋಮಃ । ಮಹಿಷಃ । ಚಕಾರ । ಅಪಾಂ । ಯತ್ । ಗರ್ಭಃ । ಅವೃಣೀತ । ದೇವಾನ್ ।

ಅದಧಾತ್ । ಇಂದ್ರೇ । ಪವಮಾನಃ । ಓಜಃ । ಅಜನಯತ್ । ಸೂರ್ಯೇ । ಜ್ಯೋತಿಃ । ಇಂದುಃ ॥ ೪೧ ॥

॥ ಸಾಯಣಭಾಷ್ಯಂ ॥

ಮಹಿಷೋ ಮಹಾನ್ಪೂಜ್ಯೋ ವಾ ಸೋಮೋ ಮಹತ್ಪ್ರಭೂತಂ ತತ್ಕರ್ಮ ಚಕಾರ । ಅಕರೋತ್ । ಕಿಂ ತತ್ । ಅಪಾಂ ಗರ್ಭ ಉದಕಾನಾಂ ಗರ್ಭಭೂತೋ ಜನಯಿತೃತ್ವಾಜ್ಜನ್ಯತ್ವಾಚ್ಚ ಸ ಸೋಮೋ ದೇವಾನಾವೃಣೀತ ಸಮಭಜತೇತಿ ಯತ್ತತ್ಕೃತವಾನಿತಿ । ಕಿಂಚ ಪವಮಾನಃ ಪೂಯಮಾನಃ ಸೋಮ ಓಜಃ ಸೋಮಪಾನೇನ ಜನ್ಯಂ ಬಲಮಿಂದ್ರೇಽದಧಾತ್ । ವ್ಯದಧಾತ್ । ತಥೇಂದುಃ ಸೋಮಃ ಸೂರ್ಯೇ ಜ್ಯೋತಿಸ್ತೇಜೋಽಜನಯತ್ ॥

॥ ಪ್ರತಿಪದಾರ್ಥ ॥

**ಅಪಾಂ ಗರ್ಭಃ** ಉದಕಗಳಿಗೆ ಗರ್ಭಭೂತನಾದ ಸೋಮದೇವನು । **ದೇವಾನ್**—ದೇವತೆಗಳನ್ನು । **ಅವೃಣೀತ**—ಆರಾಧಿಸಿದನು ಎಂಬ । **ಯತ್**—ಯಾವ ಕರ್ಮವಿದೆಯೋ । **ಮಹತ್**—ಮಾಹಾತ್ಮ್ಯದಿಂದ ಕೂಡಿದ । **ತತ್**—ಆ ಕರ್ಮವನ್ನು । **ಮಹಿಷಃ**—ಪೂಜ್ಯನಾದ । **ಸೋಮಃ**—ಸೋಮನು । **ಚಕಾರ**—ನೆರವೇರಿಸಿದ್ದಾನೆ । **ಪವಮಾನಃ**—ಶುದ್ಧಿಯನ್ನು ಹೊಂದಿದ ಸೋಮನು । **ಓಜಃ**—ಶಕ್ತಿಯನ್ನು । **ಇಂದ್ರೇ**—ಇಂದ್ರನಲ್ಲಿ । **ಅದಧಾತ್**—ಸ್ಥಾಪಿಸಿದ್ದಾನೆ । **ಇಂದುಃ**—ಸೋಮನು । **ಸೂರ್ಯೇ**—ಸೂರ್ಯನಲ್ಲಿ । **ಜ್ಯೋತಿಃ**—ತೇಜಸ್ಸನ್ನು । **ಅಜನಯತ್**—ಉತ್ಪನ್ನಮಾಡಿದನು

॥ ಭಾವಾರ್ಥ ॥

ಉದಕಗಳಿಗೆ ಗರ್ಭಭೂತನಾದ ಸೋಮನು ದೇವತೆಗಳನ್ನು ಆರಾಧಿಸಿದನು ಎಂಬ ಯಾವ ಕರ್ಮವಿದೆಯೋ, ಮಾಹಾತ್ಮ್ಯದಿಂದ ಕೂಡಿದ ಆ ಕರ್ಮವನ್ನು ಸೋಮನು ನೆರವೇರಿಸಿದ್ದಾನೆ. ಶುದ್ಧಿಯನ್ನು ಹೊಂದಿದ ಸೋಮನು ಇಂದ್ರನಲ್ಲಿ ಶಕ್ತಿಯನ್ನು ಸ್ಥಾಪಿಸಿದ್ದಾನೆ. ಸೋಮನು ಸೂರ್ಯನಲ್ಲಿ ತೇಜಸ್ಸನ್ನು ಉತ್ಪನ್ನಮಾಡಿದ್ದಾನೆ.

English Translation

The mighty Soma has achieved this mighty (work) that, being the germ of the waters, he has nourished the gods; purified he has given strength to Indra; Indu has generated the light in the sun.

ವಿಶೇಷವಿಷಯಗಳು

ಈ ಋಕ್ಕಿನ ವಿಷಯದಲ್ಲಿ ಯಾಸ್ಕರು ಆಧ್ಯಾತ್ಮಿಕಪಕ್ಷದಲ್ಲಿ ಈ ರೀತಿ ವಿವರಣೆಮಾಡಿದಾರೆ—

**ಮಹತ್ತೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನಾಮಾಧಿಪತ್ಯಮದಧಾ-ದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುರಾದಿತ್ಯ ಇಂದುರಾತ್ಮಾ ||**

ಈ ಋಕ್ಕಿನಲ್ಲಿ ಇಂದುಃ ಎಂಬ ಶಬ್ದಕ್ಕೆ ಸೋಮನು ಎಂಬ ಅರ್ಥಕ್ಕೆ ಬದಲಾಗಿ ಆತ್ಮನು ಎಂದು ಅರ್ಥಮಾಡಬೇಕು. ಮಿಕ್ಕ ವಿಷಯಗಳ ಅರ್ಥವಿವರಣೆಯಲ್ಲಿ ಏನೂ ವ್ಯತ್ಯಾಸವಿಲ್ಲ. ಎಂದರೆ ಅಂತರಿಕ್ಷಾದಿಲೋಕಗಳಿಗೆ ಪ್ರಭುವಾದ ಆತ್ಮನು (ಅಂತರಿಕ್ಷಾದಿ ಸರ್ವಸ್ಥಳಗಳಲ್ಲಿಯೂ ವ್ಯಾಪಿಸಿರುವ ಆತ್ಮನು) ದೇವತೆಗಳಿಗೆಲ್ಲಾ ಪ್ರಭುವಾಗಿದ್ದಾನೆ. ಈ ಆತ್ಮನೇ ಇಂದ್ರನಲ್ಲಿ ಸಾರ್ವಭೌಮತ್ವವನ್ನೂ ಎಂದರೆ ಸಕಲ ಚರಾಚರವಸ್ತುಗಳ ಮೇಲೆ ಅಧಿಪತ್ಯವನ್ನೂ, ಸೂರ್ಯನಲ್ಲಿ ತೇಜಸ್ಸನ್ನೂ ಸ್ಥಾಪಿಸಿದ್ದಾನೆ. ಈ ಆತ್ಮನೇ ಆದಿತ್ಯನು ಎಂದು ನಿರ್ವಚನಾಭಿಪ್ರಾಯವು.

|| ಸಂಹಿತಾಪಾಠಃ ||

ಮತ್ಸಿ ವಾಯುಮಿಷ್ಟಯೇ ರಾಧಸೇ ಚ ಮತ್ಸಿ ಮಿತ್ರಾವರುಣಾ ಪೂಯ-
ಮಾನಃ |
ಮತ್ಸಿ ಶರ್ಧೋ ಮಾರುತಂ ಮತ್ಸಿ ದೇವಾನ್ಮತ್ಸಿ ದ್ಯಾವಾಪೃಥಿವೀ ದೇವ
ಸೋಮ || ೪೨ ||

|| ಪದಪಾಠಃ ||

ಮತ್ಸಿ | ವಾಯುಂ | ಇಷ್ಟಯೇ | ರಾಧಸೇ | ಚ | ಮತ್ಸಿ | ಮಿತ್ರಾವರುಣಾ | ಪೂಯಮಾನಃ |
ಮತ್ಸಿ | ಶರ್ಧಃ | ಮಾರುತಂ | ಮತ್ಸಿ | ದೇವಾನ್ | ಮತ್ಸಿ | ದ್ಯಾವಾಪೃಥಿವೀ ಇತಿ | ದೇವ | ಸೋಮ ||೪೨||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ವಾಯುಂ ಮತ್ಸಿ | ಮಾದಯ | ಕಿಮರ್ಥಂ | ಇಷ್ಟಯೇಽಸ್ಮಾಕಮೇಷಣಾ-ಯಾನ್ನಾಯ ರಾಧಸೇ ಧನಾಯ ಚ| ತಥಾ ಪೂಯಮಾನಃ ಪವಿತ್ರೇಣ ತ್ವಂ ಮಿತ್ರಾವರುಣಾ ಮಿತ್ರಾವರುಣೌ

ಚ ಮತ್ಸಿ । ತರ್ಪಯಸಿ । ಕಿಂಚ ಮಾರುತಂ ಮರುತಾಂ ಸ್ವಭೂತಂ ಶರ್ಧೋ ಬಲಂ ಚ ಮತ್ಸಿ । ತಥಾ ದೇವಾನಿಂದ್ರಾದೀನ್ಮತ್ಸಿ । ಹರ್ಷಯಸಿ । ಹೇ ದೇವ ಸ್ತೋತವ್ಯ ಹೇ ಸೋಮ ದ್ಯಾವಾಪೃಥಿವ್ಯೌ ಚ ಮತ್ಸಿ । ಮಾದಯ । ಏತಾನ್ಹರ್ಷಯುಕ್ತಾನ್ಕೃತ್ವಾಸ್ಮಭ್ಯಂ ಧನಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವ** — ದೇವತಾತ್ಮನಾದ । **ಸೋಮ** — ಎಲೈ ಸೋಮನೇ । **ಇಷ್ಟಯೇ** — ಅಪೇಕ್ಷಿತವಾದ ಅನ್ನಕ್ಕಾಗಿಯೂ । **ರಾಧಸೇ ಚ** — ಧನಕ್ಕಾಗಿಯೂ । **ವಾಯುಂ** — ವಾಯುವನ್ನು । **ಮತ್ಸಿ** — ಹರ್ಷಗೊಳಿಸು । **ಪೂಯಮಾನಃ** — ಶುದ್ಧಿಯನ್ನು ಹೊಂದಿದ ನೀನು । **ಮಿತ್ರಾವರುಣಾ** — ಮಿತ್ರಾವರುಣರನ್ನು । **ಮತ್ಸಿ** — ಹರ್ಷಗೊಳಿಸು । **ಮಾರುತಂ ಶರ್ಧಃ** — ಮರುತ್ಸಂಘವನ್ನು । **ಮತ್ಸಿ** — ಹರ್ಷಗೊಳಿಸು । **ದೇವಾನ್** — ದೇವತೆಗಳನ್ನು । **ಮತ್ಸಿ** — ಹರ್ಷಗೊಳಿಸು । **ದ್ಯಾವಾಪೃಥಿವ್ಯಾ** — ದ್ಯಾವಾಪೃಥಿವಿಗಳನ್ನೂ । **ಮತ್ಸಿ** — ಹರ್ಷಗೊಳಿಸು.

॥ ಭಾವಾರ್ಥ ॥

ದೇವತಾತ್ಮನಾದ ಎಲೈ ಸೋಮನೇ, ಅಪೇಕ್ಷಿತವಾದ ಅನ್ನಕ್ಕಾಗಿಯೂ, ಧನಕ್ಕಾಗಿಯೂ, ವಾಯುವನ್ನು ಹರ್ಷಗೊಳಿಸು. ಶುದ್ಧಿಯನ್ನು ಹೊಂದಿದ ನೀನು ಮಿತ್ರಾವರುಣರನ್ನೂ, ಮರುತ್ಸಂಘವನ್ನೂ, ದ್ಯಾವಾಪೃಥಿವಿಗಳನ್ನೂ ತೃಪ್ತಿಗೊಳಿಸು. ಸಕಲ ದೇವತೆಗಳಿಗೂ ತೃಪ್ತಿಯನ್ನುಂಟುಮಾಡು.

English Translation

Exhilarate Vayu for (our) food and wealth, exhilarate Mitra and Varuna as soon as you are filtered ; exhilarate the company of the Maruts, exhilarate the gods, exhilarate heaven and earth, divine Soma.

॥ ಸಂಹಿತಾಪಾಠಃ ॥

ಋಜುಃ ಪವಸ್ವ ವೃಜಿನಸ್ಯ ಹಂತಾಪಾಮೀವಾಂ ಬಾಧಮಾನೋ ಮೃಧಶ್ಚ ।
ಅಭಿಶ್ರೀಣನ್ಪಯಃ ಪಯಸಾಭಿ ಗೋನಾಮಿಂದ್ರಸ್ಯ ತ್ವಂ ತವ ವಯಂ
ಸಖಾಯಃ ॥ ೪೩ ॥

॥ ಪದಪಾಠಃ ॥

ಋಜುಃ । ಪವಸ್ವ । ವೃಜಿನಸ್ಯ । ಹಂತಾ । ಅಪ । ಅಮೀವಾಂ । ಬಾಧಮಾನಃ । ಮೃಧಃ । ಚ ।
ಅಭಿऽಶ್ರೀಣನ್ । ಪಯಃ । ಪಯಸಾ । ಅಭಿ । ಗೋನಾಂ । ಇಂದ್ರಸ್ಯ । ತ್ವಂ । ತವ । ವಯಂ । ಸಖಾಯಃ ॥

॥ ಸಾಯಣಭಾಷ್ಯಂ ॥

ಹೇ ಸೋಮ ಋಜುರೃಜುಗಮನಃ ಸನ್ ಪವಸ್ವ । ಕ್ಷರ । ಕಿಂ ಕುರ್ವನ್ । ವೃಜಿನಸ್ಯೋಪದ್ರವಸ್ಯ ಹಂತಾ । ಅಮೀವಾಂ ರೋಗರೂಪಂ ರಾಕ್ಷಸಮಪ ಬಾಧಮಾನಃ । ತಥಾಸ್ಮದೀಯಾನ್ಮೃಧೋ ಹಿಂಸಕಾಞ್ಛತ್ರೂಂಶ್ಚ ಬಾಧಮಾನಃ ಸನ್ ಪವಸ್ವ । ತತಃ ಪಯ ಆತ್ಮೀಯಂ ರಸಂ ಗೋನಾಂ ಗವಾಂ ಪಯಸಾ ಕ್ಷೀರೇಣಾಭಿಶ್ರೀಣನ್ನಭಿಸಂಯೋಜಯನ್ ಪಾತ್ರಾಣ್ಯಭಿ ಗಚ್ಛಸಿ । ಅಪಿ ಚ ತ್ವಮಿಂದ್ರಸ್ಯ ಸಖಾಸಿ ಹೇ ಸೋಮ ತವ ವಯಂ ಸಖಾಯಃ ಸ್ತುತ್ಯಸ್ತೋತೃತ್ವಯಷ್ಟೃಯಷ್ಟವ್ಯತ್ವಲಕ್ಷಣೇನ ಸಖಿಭೂತಾಃ ಸ್ಮಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಋಜುಃ**—ನೇರವಾದ ಗಮನವುಳ್ಳವನೂ । **ವೃಜಿನಸ್ಯ**—ವಕ್ರಗಮನವುಳ್ಳವನನ್ನು । **ಹಂತಾ** - ನಾಶಮಾಡುವವನೂ ಆದ ನೀನು । **ಅಮೀವಾಂ**—ರೋಗವನ್ನು । **ಅಪ ಬಾಧಮಾನಃ**—ನಾಶಪಡಿಸುತ್ತಲೂ । **ಮೃಧಃ ಚ**—ಹಿಂಸಕರಾದ ಶತ್ರುಗಳನ್ನು ನಾಶಪಡಿಸುತ್ತಲೂ । **ಪವಸ್ವ**—ಪ್ರವಹಿಸು । **ಪಯಃ**—ನಿನ್ನ ರಸವನ್ನು । **ಗೋನಾಂ ಪಯಸಾ**—ಗೋವಿನ ಕ್ಷೀರದೊಂದಿಗೆ । **ಅಭಿಶ್ರೀಣನ್**—ಮಿಶ್ರಮಾಡುತ್ತ । **ಅಭಿ**—ಪಾತ್ರಕ್ಕೆ ಪ್ರವೇಶಿಸುತ್ತಿಯೇ । **ತ್ವಂ**—ನೀನು । **ಇಂದ್ರಸ್ಯ**—ಇಂದ್ರನ ಮಿತ್ರನು । **ವಯಂ**—ನಾವು । **ತವ ಸಖಾಯಃ**—ನಿನ್ನ ಮಿತ್ರರು.

॥ ಭಾವಾರ್ಥ ॥

ಎಲೈ ಸೋಮದೇವನೇ, ನೇರವಾದ ಗಮನವುಳ್ಳವನೂ, ವಕ್ರವಾದ ಗಮನವುಳ್ಳವನನ್ನು ನಾಶಮಾಡುವವನೂ ಆದ ನೀನು ರೋಗವನ್ನು ನಾಶಪಡಿಸುತ್ತಲೂ, ಹಿಂಸಕರಾದ ಶತ್ರುಗಳನ್ನು ನಾಶಪಡಿಸುತ್ತಲೂ ಪ್ರವಹಿಸು. ನಿನ್ನ ರಸವನ್ನು ಕ್ಷೀರದೊಂದಿಗೆ ಮಿಶ್ರಮಾಡುತ್ತ ಪಾತ್ರೆಗೆ ಪ್ರವೇಶಿಸು. ನೀನು ಇಂದ್ರನ ಮಿತ್ರನು. ನಾವು ನಿನ್ನ ಮಿತ್ರರು.

## English Translation

Flow you who are straightgoing, the slayer of the crooked-goer, driving away disease and enemies ; mixing your juice with the juice of the cows (you go to the cups) : (you are) Indra's (friend), we (are) your friends.

॥ ಸಂಹಿತಾಪಾಠಃ ॥

ಮಧ್ವಃ ಸೂದಂ ಪವಸ್ವ ವಸ್ವ ಉತ್ಸಂ ವೀರಂ ಚ ನ ಆ ಪವಸ್ವಾ ಭಗಂ ಚ ।
ಸ್ವದಸ್ವೇಂದ್ರಾಯ ಪವಮಾನ ಇಂದೋ ರಯಿಂ ಚ ನ ಆ ಪವಸ್ವಾ
ಸಮುದ್ರಾತ್ ॥ ೪೪ ॥

॥ ಪದಪಾಠಃ ॥

ಮಧ್ವಃ । ಸೂದಂ । ಪವಸ್ವ । ವಸ್ವಃ । ಉತ್ಸಂ । ವೀರಂ । ಚ । ನಃ । ಆ । ಪವಸ್ವ । ಭಗಂ । ಚ ।
ಸ್ವದಸ್ವ । ಇಂದ್ರಾಯ । ಪವಮಾನಃ । ಇಂದೋ ಇತಿ । ರಯಿಂ । ಚ । ನಃ । ಆ । ಪವಸ್ವ । ಸಮುದ್ರಾತ್॥

॥ ಸಾಯಣಭಾಷ್ಯಂ ॥

ಹೇ ಸೋಮ ಮಧ್ವೋ ಮಾಧುರ್ಯಸ್ಯ ಸೂದಂ ಕ್ಷಾರಯಿತಾರಂ ಘನೀಭೂತಂ ವಾ ವಸ್ವೋ ವಸುನೋ ಧನಸ್ಯೋತ್ಸಮುತ್ಸ್ಯಂದಕಂ ರಸಂ ಪವಸ್ವ । ಕಿಂಚ ನೋಽಸ್ಮಭ್ಯಂ ವೀರಂ ಪುತ್ರಮಾ ಪವಸ್ವ । ಆಪ್ರಾಪಯ । ತಥಾ ಭಗಂ ಭಜನೀಯಂ ಧನಂ ಚ ದೇಹಿ । ಹೇ ಇಂದೋ ಪವಮಾನಃ ಪೂಯಮಾನಃ ಸನ್ನಿಂದ್ರಾಯ ಸ್ವದಸ್ವ । ರುಚಿತೋ ಭವ । ತತಸ್ತ್ವಂ ನೋಽಸ್ಮಭ್ಯಂ ಸಮುದ್ರಾದಂತರಿಕ್ಷಾದ್ರಯಿಂ ಧನಂ ಪುತ್ರಂ ವಾ । ರಾತಿ ದದಾತಿ ಕ್ಷೀರಮಿತಿ ರಯಿರ್ಗೌರ್ವಾ । ತಾಂ ವಾ ಪವಸ್ವ । ದೇಹಿ ॥

। ಪ್ರತಿಪದಾರ್ಥ ॥

(ಎಲೈ ಸೋಮದೇವನೇ) । **ಮಧ್ವಃ**—ಮಾಧುರ್ಯವನ್ನು । **ಸೂದಂ**—ಜಿನುಗಿಸುವ । **ವಸ್ವಃ**—ಧನದ । **ಉತ್ಸಂ**—ಬುಗ್ಗೆಯನ್ನು । **ಪವಸ್ವ**—ಹರಿಯುವಂತೆ ಮಾಡು । **ನಃ**—ನಮಗೆ । **ವೀರಂ**—ವೀರ ಪುತ್ರರನ್ನು । **ಆ ಪವಸ್ವ**—ಒದಗಿಸು । **ಭಗಂ ಚ**—ಭೋಗಯೋಗ್ಯವಾದ ಧನವನ್ನು ಕೊಡು । **ಇಂದೋ**—ಎಲೈ ಸೋಮನೇ । **ಪವಮಾನಃ**—ಶುದ್ಧಿಯನ್ನು ಹೊಂದಿ । **ಇಂದ್ರಾಯ**—ಇಂದ್ರನಿಗಾಗಿ । **ಸ್ವದಸ್ವ**—ರುಚಿಕರ ನಾಗು । **ನಃ**—ನಮಗೆ । **ಸಮುದ್ರಾತ್**—ಅಂತರಿಕ್ಷದಿಂದ । **ರಯಿಂ**—ಧನವನ್ನು । **ಆ ಪವಸ್ವ**—ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಮಾಧುರ್ಯಯುಕ್ತವಾದ ಧನದ ಬುಗ್ಗೆಯನ್ನು ಹರಿಯುವಂತೆ ಮಾಡು. ನಮಗೆ ವೀರಪುತ್ರರನ್ನೊದಗಿಸು. ಭೋಗಯೋಗ್ಯವಾದ ಧನವನ್ನು ಕೊಡು. ಶುದ್ಧಿಯನ್ನು ಹೊಂದಿದ ನೀನು ಇಂದ್ರನಿಗಾಗಿ ರುಚಿಕರನಾಗು. ಅಂತರಿಕ್ಷದಿಂದ ನಮಗೆ ಧನವನ್ನು ಒದಗಿಸು.

## English Translation.

Pour forth a fountain of wealth distilling sweet juice, pour upon us male offspring and riches ; flow sweet for Indra, O Indu, when purified ; and pour riches upon us from the firmament.

॥ ಸಂಹಿತಾಪಾಠಃ ॥

ಸೋಮಃ ಸುತೋ ಧಾರಯಾತ್ಯೋ ನ ಹಿತ್ವಾ ಸಿಂಧುರ್ನ ನಿಮ್ನಮಭಿ
ವಾಜ್ಯಕ್ಷಾಃ ।

ಆ ಯೋನಿಂ ವನ್ಯಮಸದತ್ಪುನಾನಃ ಸಮಿಂದುರ್ಗೋಭಿರಸರತ್ಸಮದ್ಭಿಃ॥೪೫॥

॥ ಪದಪಾಠಃ ॥

ಸೋಮಃ । ಸುತಃ । ಧಾರಯಾ । ಅತ್ಯಃ । ನ । ಹಿತ್ವಾ । ಸಿಂಧುಃ । ನ । ನಿಮ್ನಂ । ಅಭಿ । ವಾಜೀ । ಅಕ್ಷಾರಿತಿ ।

ಆ । ಯೋನಿಂ । ವನ್ಯಂ । ಅಸದತ್ । ಪುನಾನಃ । ಸಂ । ಇಂದುಃ । ಗೋಭಿಃ । ಅಸರತ್ । ಸಂ । ಅತ್ऽಭಿಃ ॥ ೪೫ ॥

॥ ಸಾಯಣಭಾಷ್ಯಂ ॥

ಸುತೋಽಭಿಷುತಃ ಸೋಮೋ ಧಾರಯಾ ಸ್ವೀಯಯಾತ್ಯೋ ನಾತನಶೀಲೋಽಶ್ವ ಇವ ಹಿತ್ವಾ ಗತ್ವಾ ॥ ಹಿನೋತೇಃ ಕ್ತ್ವಿನಿಪಿ ರೂಪಂ ॥ ಕಿಂಚ ವಾಜೀ ಬಲವಾನ್ ಸೋಮಃ ಸಿಂಧುರ್ನ ಯಥಾ ಸಿಂಧುಃ ಸ್ಯಂದಮಾನಾ ನದೀ ನಿಮ್ನಂ ಪ್ರದೇಶಮಭಿಗಚ್ಛತಿ ತದ್ವನ್ನಿಮ್ನಮಧರಭಾವಿನಂ ಕಲಶಮಭ್ಯಕ್ಷಾಃ ಅಭಿಕ್ಷರತಿ । ತತಃ ಪುನಾನಃ ಪೂಯಮಾನಃ ಸೋಮೋ ವನ್ಯಂ ವೃಕ್ಷಭವಂ ಯೋನಿಂ ಯೋನಿಸ್ಥಾನಂ ಕಲಶಮಾಸದತ್ । ಆಸೀದತಿ । ಸೋಽಯಮಿಂದುಃ ಸೋಮೋ ಗೋಭಿರ್ಗೋವಿಕಾರೈಃ ಕ್ಷೀರಾದಿಭಿಃ ಶ್ರಯಣೈಃ ಸಮಸರತ್ । ಸಂಸರತಿ । ತಥಾದ್ಭಿರ್ವಸತೀವರೀಭಿಶ್ಚ ಸಂಗಚ್ಛತೇ ॥

॥ ಪ್ರತಿಪದಾರ್ಥ ॥

**ಸುತಃ**—ಹಿಂಡಲ್ಪಟ್ಟವನೂ । **ವಾಜೀ**—ಶಕ್ತಿಯುತನೂ ಆದ । **ಸೋಮಃ**—ಸೋಮನು । **ಧಾರಯಾ**—ತನ್ನ ಪ್ರವಾಹದಿಂದ । **ಅತ್ಯೋ ನ**—ಅಶ್ವದಂತೆ । **ಹಿತ್ವಾ**—ಗತಿಯನ್ನು ಹೊಂದಿ । **ನಿಮ್ನಂ**—ತಗ್ಗುಪ್ರದೇಶದಲ್ಲಿ ಹರಿಯುವ । **ಸಿಂಧುಃ ನ**—ನದಿಯಂತೆ । **ಅಭ್ಯಕ್ಷಾಃ**—ಪ್ರವಹಿಸುತ್ತಾನೆ । **ಪುನಾನಃ**—ಶುದ್ಧಿಯನ್ನು ಹೊಂದಿದ ಸೋಮನು । **ವನ್ಯಂ**—ವೃಕ್ಷದಿಂದ ನಿರ್ಮಿತವಾದ । **ಯೋನಿಂ**—ಕಲಶವನ್ನು । **ಆ ಸದತ್**—ಆಶ್ರಯಿಸಿ ಸ್ಥಿತನಾಗುತ್ತಾನೆ । **ಇಂದುಃ**—ಸೋಮನು । **ಗೋಭಿಃ**—ಕ್ಷೀರಾದಿಗಳೊಡನೆ । **ಸಮಸರತ್**—ಒಂದಾಗಿ ಸೇರಿಕೊಳ್ಳುತ್ತಾನೆ । **ಅದ್ಭಿಃ ಸಂ**—ವಸತೀವರಿಗಳೊಂದಿಗೂ ಒಂದಾಗಿ ಸೇರಿಕೊಳ್ಳುತ್ತಾನೆ.

॥ ಭಾವಾರ್ಥ ॥

ಹಿಂಡಲ್ಪಟ್ಟವನೂ, ಶಕ್ತಿಯುತನೂ ಆದ ಸೋಮನು ತನ್ನ ಪ್ರವಾಹದಿಂದ ಅಶ್ವದಂತೆ ಗತಿಯನ್ನಿಡುತ್ತ, ತಗ್ಗುಪ್ರದೇಶದಲ್ಲಿ ಹರಿಯುವ ನದಿಯಂತೆ ಪ್ರವಹಿಸುತ್ತಾನೆ. ಶುದ್ಧಿಯನ್ನು ಹೊಂದಿದ ಸೋಮನು ವೃಕ್ಷದಿಂದ (ಮರದಿಂದ ಮಾಡಿದ) ನಿರ್ಮಿತವಾದ ಕಲಶವನ್ನು ಆಶ್ರಯಿಸಿ ಸ್ಥಿತನಾಗುತ್ತಾನೆ. ಸೋಮನು ಕ್ಷೀರಾದಿಗಳೊಡನೆಯೂ ವಸತೀವರಿಉದಕಗಳೊಡನೆಯೂ ಒಂದಾಗಿ ಸೇರಿಕೊಳ್ಳುತ್ತಾನೆ.

## English Translation.

The Soma effused in a stream, going like a horse, flows powerful like a river down a descent ; purified he alights on the wooden abode (vessel); Indu mixes with the milk and curds, (mixes) with the water.

|| ವಿಶೇಷವಿಷಯಗಳು ||

ಈ ಮಂಡಲದ ಅನೇಕ ಋಕ್ಕುಗಳಲ್ಲಿ ಸೋಮನು ವಸತೀವರೀ ಉದಕಗಳೊಡನೆ ಸೇರುತ್ತಾನೆ ಅಥವಾ ಮಿಶ್ರಿತನಾಗುತ್ತಾನೆ ಎಂದು ಹೇಳಿರುವುದು. ಈ ವಸತೀವರೀ ಉದಕಗಳೆಂದರೇನು ? ಯಜ್ಞಗಳಲ್ಲಿ ಈ ಉದಕಗಳ ಪಾತ್ರವೇನು ? ಇದನ್ನು ಸೋಮರಸದೊಡನೆ ಸೇರಿಸುವ ಕ್ರಮವೇನು ಇತ್ಯಾದಿ ವಿಷಯಗಳಲ್ಲಿ ವಿವರಣೆಯು ಅವಶ್ಯಕವು. ಆದ್ದರಿಂದ ಈ ಸಂದರ್ಭದಲ್ಲಿ ಆಚರಿಸುವ ಅಪೋನಪ್ತ್ರೀಯವೆಂಬ ಯಜ್ಞಾಂಗ ಕರ್ಮವನ್ನು ಸೂಕ್ಷ್ಮವಾಗಿ ವಿವರಿಸುತ್ತೇವೆ.

ಅಪೋನಪ್ತ್ರೀಯವೆಂದರೆ—ವಸತೀವರೀ ಎಂಬ ಪಾತ್ರೆಯಲ್ಲಿರುವ ನೀರನ್ನೂ, ಏಕಧನಾ ಎಂಬ ಮತ್ತೊಂದು ಪಾತ್ರೆಯಲ್ಲಿರುವ ನೀರನ್ನು ವಿಧ್ಯುಕ್ತವಾಗಿಯೂ ಮಂತ್ರಪೂರ್ವಕವಾಗಿಯೂ ಸೇರಿಸುವುದು.

ಹೋತೃವು ಪ್ರಾತರನುವಾಕಮಂತ್ರಗಳನ್ನು ಪಠಿಸಿದನಂತರ ಅಧ್ವರ್ಯುವು ಹೋತೃವನ್ನುದ್ದೇಶಿಸಿ, **ಪರಿಹಿತೇಽಪ ಇಷ್ಯ ಹೋತಃ** ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು—**ಅಪೋನಪ್ತ್ರೀಯೋ ಅನ್ವಾಹ** ಎಂದು ಹೇಳುವನು. ಅನಂತರ ಅಧ್ವರ್ಯುವು ಪ್ರೈಷ ಮಂತ್ರಗಳ ಮೂಲಕ ಚಮಸಾಧ್ವರ್ಯು, ಮೈತ್ರಾವರುಣ, ಏಕಧನಾಪಾತ್ರೆಯನ್ನು ಧರಿಸಿರುವವರು ಇವರನ್ನು ಬರುವಂತೆ ಹೇಳುವನು. ಯಜಮಾನನ ಪತ್ನಿಯನ್ನು ಕರೆತರುವಂತೆ ನೇಷ್ಟೃವಿಗೆ ನಿರ್ದೇಶಿಸುವನು. ಎಲೈ ಆಗ್ನೀಧ್ರನೇ, ಹೋತೃವಿನ ಚಮಸವನ್ನೂ, ವಸತೀವರೀಕಲಶವನ್ನೂ ಚಾತ್ವಾಲದಲ್ಲಿ ಪರಸ್ಪರಾಭಿಮುಖವಾಗುವಂತೆ ಇರಿಸು ಎಂದು ಹೇಳುವನು. ಅನಂತರ ಚಮಸಾಧ್ವರ್ಯುವು ಚಮಸವನ್ನು ತರುವನು. ಏಕಧನಾಪಾತ್ರೆಯನ್ನು ಹಿಡಿದಿರುವವರು ಮೂರು ಪಾತ್ರೆಗಳನ್ನು ತರುವರು. ಅನಂತರ ಅಧ್ವರ್ಯುವು ಆ ಮೂರು ಪಾತ್ರೆಗಳಲ್ಲಿಯೂ ಒಂದೊಂದು ದರ್ಭೆಯನ್ನು ಹಾಕಿ ಶುದ್ಧಿಗೊಳಿಸುವನು. ನೇಷ್ಟೃವು ಯಜಮಾನನ ಪತ್ನಿಯನ್ನು ಕರೆತರುವನು. ಆಕೆಯು ತನ್ನ ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಳ್ಳುವಳು. ಅನಂತರ ಅಧ್ವರ್ಯುವು ಎಲ್ಲಾ ಪಾತ್ರೆಗಳಲ್ಲಿಯೂ ಒಂದೊಂದು ಕುಶವನ್ನಿಟ್ಟು **ದೇವೀರಾಪಃ** ಎಂಬ ಮಂತ್ರವನ್ನು ಪಠಿಸಿ, ನಾಲ್ಕು ಸ್ರುವಗಳ ತುಂಬ ಆಜ್ಯವನ್ನು ಸುರಿದು ಹೋಮಮಾಡುವನು. ಬಳಿಕ ಅಧ್ವರ್ಯುವು ಹೋತೃ ಮತ್ತು ಮೈತ್ರಾವರುಣರ ಚಮಸಗಳನ್ನು ಏಕಧನಾ ಪಾತ್ರೆಯ ಉದಕಸಹಿತವಾಗಿ ವಸತೀವರೀ ಕಲಶದ ಸಮೀಪಕ್ಕೆ ತಂದು, ಅದರ ನೀರನ್ನು ಹೋತೃವಿನ ಚಮಸ ಪಾತ್ರೆಗೂ, ಅದರಿಂದ ಮೈತ್ರಾವರುಣನ ಪಾತ್ರೆಗೂ, ಪುನಃ ಮೈತ್ರಾವರುಣರ ಪಾತ್ರೆಯಿಂದ ಹೋತೃವಿನ ಚಮಸಕ್ಕೂ ಸುರಿಯುವನು. ಹೋತೃವಿನ ಚಮಸಕ್ಕೆ ನೀರನ್ನು ಸುರಿಯುವಾಗ ಹೋತೃವು ಅಧ್ವರ್ಯುವನ್ನುದ್ದೇಶಿಸಿ, **ಅವೇರಾಪೋಽಧ್ವರ್ಯೂ೩ ಉ** ಎಂದು ಮೂರಾವರ್ತಿ ಕೇಳುವನು. ಅದಕ್ಕೆ ಅಧ್ವರ್ಯುವು **ಉತೇಮನನ್ನಮುಃ (ಉತೇಮಾಃ ಪಶ್ಯ)** ಎಂದು ಪ್ರತ್ಯುತ್ತರವನ್ನು ಹೇಳುವನು. ಅನಂತರ ಹೋತೃವು ಆ ಉದಕಗಳನ್ನುದ್ದೇಶಿಸಿ ಪ್ರತ್ಯುತ್ಥಾಪನವನ್ನು ಮಾಡುವನು.

ಈ ಅಪೋನಪ್ತ್ರೀಯವೆಂಬ ಕರ್ಮ ವಿಧಾನವು ಐತರೇಯ ಬ್ರಾಹ್ಮಣದಲ್ಲಿಯೂ, ತೈತ್ತಿರೀಯ-ಸಂಹಿತೆಯಲ್ಲಿಯೂ ಪ್ರತ್ಯೇಕವಾಗಿ ಹೇಳಲ್ಪಟ್ಟಿರುವುದು. ತೈತ್ತಿರೀಯಸಂಹಿತೆಯಲ್ಲಿ ಅಧ್ವರ್ಯುವು ಆಚರಿಸಬೇಕಾದ ಕ್ರಮವೂ, ಐತರೇಯ ಬ್ರಾಹ್ಮಣದಲ್ಲಿ ಹೋತೃವು ಪಠಿಸಬೇಕಾದ ಮಂತ್ರಗಳೂ ಹೇಳಲ್ಪಟ್ಟಿರುವವು. ಹೋತೃವು ಪಠಿಸಬೇಕಾದ ಮಂತ್ರಗಳೇ ಋಗ್ವೇದಕ್ಕೆ ಸಂಬಂಧಿಪಟ್ಟಿರುವುದರಿಂದ ಇಲ್ಲಿ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವ ಕ್ರಮವನ್ನು ಮಾತ್ರ ವಿವರಿಸುತ್ತೇವೆ.

### ಅಪೋನಪ್ತ್ರೀಯವೆಂಬ ಕರ್ಮದ ವಿವರಣೆ

( ಐತರೇಯ ಬ್ರಾಹ್ಮಣದಲ್ಲಿರುವಂತೆ )

ಪ್ರಾತರನುವಾಕ ಪಠನಾನಂತರ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು ಅಪೋನಪ್ತ್ರೀಯಸಂಬಂಧವಾದ ಮಂತ್ರಗಳನ್ನು ಪಠಿಸುವನು ಈ ಮಂತ್ರಪಠನದಲ್ಲಿ ಒಂದು ಕ್ರಮವನ್ನು ಅನುಸರಿಸಬೇಕು. ಅದನ್ನು ಇಲ್ಲಿ ಹೇಳಲಾಗಿದೆ.

**ತತ್ಸಂತತಮನುಬ್ರೂಯಾತ್ । ಸಂತತವರ್ಷೀಹ ಪ್ರಜಾಭ್ಯಃ ಪರ್ಜನ್ಯೋ ಭವತಿ ಯತ್ರೈವಂ ವಿದ್ವಾನೇತತ್ಸಂತತಮನ್ವಾಹ ಯದವಗ್ರಾಹಮನುಬ್ರೂಯಾಜ್ಜೀಮೂತವರ್ಷೀ ಹ ಪ್ರಜಾಭ್ಯಃ ಪರ್ಜನ್ಯಃ ಸ್ಯಾತ್ತಸ್ಮಾತ್ಸಂತತಮೇವಾನೂಚ್ಯಂ । ತಸ್ಯ ತ್ರಿಃ ಪ್ರಥಮಾಂ ಸಂತತಮನ್ವಾಹ ತೇನೈವ ತತ್ಸರ್ವಂ ಸಂತತಮನೂಕ್ತಂ ಭವತಿ ॥** (ಐ. ಬ್ರಾ. ೮–೧೯)

ಅಪೋನಪ್ತ್ರೀಯವೆಂಬ ಈ ಕರ್ಮದಲ್ಲಿ ಪಠಿಸಬೇಕಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಎಲ್ಲಿಯೂ ಮಧ್ಯದಲ್ಲಿ ನಿಲ್ಲಿಸದೆ, ಒಂದೇಸಮನೆ ಧಾರಾಕಾರವಾಗಿ ಪಠಿಸಬೇಕು. ಹೀಗೆ ಪಠಿಸಿದರೆ ಪರ್ಜನ್ಯದೇವನು ಸಂತತವಾಗಿ ಪ್ರಜೆಗಳಿಗೆ ಉಪಕಾರವಾಗುವಂತೆ ವೃಷ್ಟಿಯನ್ನು ಸುರಿಸುವನು. ಹಾಗಲ್ಲದೆ ಋಕ್ಕುಗಳನ್ನು ಪಾದಗಳಲ್ಲಿ ಅಥವಾ ಅರ್ಧ ಋಕ್ಕುಗಳಲ್ಲಿ, ಅಥವಾ ಋಕ್ಕುಗಳ ಅಂತ್ಯದಲ್ಲಿ ನಿಲ್ಲಿಸಿ ನಿಲ್ಲಿಸಿ ಪಠಿಸಿದರೆ ಪರ್ಜನ್ಯನು ವೃಷ್ಟಿಯನ್ನು ಯಾರಿಗೂ ಉಪಯೋಗವಿಲ್ಲದಂತೆ ಪರ್ವತಾದಿಗಳ ಮೇಲೆ ಸುರಿಸುವನು. ಸಸ್ಯಾದಿಗಳ ಮೇಲೆ ಸುರಿಸುವುದಿಲ್ಲ. ಆದ್ದರಿಂದ ಈ ಸೂಕ್ತವನ್ನು ಮಧ್ಯೆ ಎಲ್ಲಿಯೂ ನಿಲ್ಲಿಸದೆ ಕೊನೆಯವರೆಗೂ ಒಂದೇಸಮನಾಗಿ ಪಠಿಸಬೇಕು. ಆದರೆ ಈ ಸೂಕ್ತದಲ್ಲಿರುವ ಎಲ್ಲಾ ಋಕ್ಕುಗಳನ್ನು ಮಧ್ಯದಲ್ಲಿ ನಿಲ್ಲಿಸುವಂತೆ ಪಠಿಸುವುದು ಅಸಾಧ್ಯವಲ್ಲವೇ ಎಂದರೆ, ಆ ರೀತಿ ಮಾಡುವುದಕ್ಕೆ ಬದಲಾಗಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಸ್ವಲ್ಪವೂ ನಿಲ್ಲಿಸದಂತೆ ಮೂರಾವರ್ತಿ ಪಠಿಸಿದಲ್ಲಿ ಸೂಕ್ತವನ್ನೇ ನಿಲ್ಲಿಸದೆ ಪಠಿಸಿದಂತಾಗುವುದು

**ತಾ ಏತಾ ನವಾನಂತರಾಯಮನ್ವಾಹ । ಹಿನೋತಾ ನೋ ಅಧ್ವರಂ ದೇವಯಜ್ಯೇತಿ ದಶಮೀಂ । ಆವರ್ವೃತತೀರಧ ನು ದ್ವಿಧಾರಾ ಇತ್ಯಾವೃತ್ತಾಸ್ವೇಕಧನಾಸು ॥**

(ಐ. ಬ್ರಾ. ೮-೨೦)

**ಪ್ರದೇವತ್ರಾ** ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಒಂದು ವಿಶೇಷಕ್ರಮವಿರುವುದು. ಸೂಕ್ತದ ಮೊದಲನೆಯ ಋಕ್ಕಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಮಂತ್ರವನ್ನಾರಂಭಿಸಿ ಒಂಭತ್ತನೆಯ ಋಕ್ಕಿನ ಸಮಾಪ್ತಿವರೆಗೂ ಪಠಿಸಿ, ಅನಂತರ ೧೧ ನೆಯ ಋಕ್ಕಾದ **ಹಿನೋತಾ ನೋ ಅಧ್ವರಂ** (೧೦-೩೦-೧೧) ಎಂಬ ಋಕ್ಕನ್ನು ಪಠಿಸಬೇಕು. ಅನಂತರ **ಆವರ್ವೃತತೀರಧ** ಎಂಬ ೧೦ ನೇ ಋಕ್ಕನ್ನು ಪಠಿಸಬೇಕು.

ಇಲ್ಲಿ ಪ್ರಯೋಗ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವಾಗಿದೆ. ಸುತ್ಯಾದಿನದ ಎಂದರೆ, ಸೋಮರಸವನ್ನು ಹಿಂಡುವ ಹಿಂದಿನ ದಿನ ಅಗ್ನಿಷ್ಟೋಮೀಯ ಸಂಸ್ಕಾರಾನಂತರ ವಸತೀವರೀಸಂಜ್ಞಕವಾದ ಉದಕಗಳನ್ನು ಸೋಮಾಭಿಷವಕಾಲದಲ್ಲಿ ಉಪಯೋಗಿಸುವುದಕ್ಕಾಗಿ ಯಜ್ಞವೇದಿಯಲ್ಲಿ ಸ್ಥಾಪಿಸಬೇಕು. ಮಧ್ಯರಾತ್ರಿಯು ಕಳೆದನಂತರ ನಿದ್ರೆಯನ್ನು ತ್ಯಜಿಸಿ ಎದ್ದು, ಆಗ್ನೀಧ್ರಧಿಷ್ಣಿಯಾದಿಗಳನ್ನು ಆಯಾ ಮಂತ್ರಗಳಿಂದ ಅಭಿಮರ್ಶನೆಮಾಡಿ ಸೋಮಾಭಿಷಕ್ಕಾಗಿ ಬೇಕಾಗುವ ಪಾತ್ರೆಗಳನ್ನು ಆಸಾದನೆಮಾಡಿ. ಪ್ರಾತರನುವಾಕ ಮಂತ್ರಪಠನಕ್ಕಾಗಿ ಹೋತೃವನ್ನು ಪ್ರೈಷ ಮಂತ್ರದಿಂದ ನಿರ್ದೇಶಿಸಬೇಕು. ಪ್ರಾತರನುವಾಕ ಪಠನಾನಂತರ **ಶೃಣೋತ್ವಗ್ನಿಃ** ಎಂಬ ಮಂತ್ರದಿಂದ ಆಹುತಿಯನ್ನರ್ಪಿಸಿ ಏಕಧನಾ ಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೋಗುವಾಗ ಅಪೋನಪ್ತ್ರೀಯಸೂಕ್ತಪಠನಕ್ಕಾಗಿ ಹೋತೃವನ್ನುದ್ದೇಶಿಸಿ, ಪ್ರೈಷ ಮಂತ್ರದಿಂದ **ಏಕಧನಾ ಅಪ ಅನಯ** ಎಂದು ನಿರ್ದೇಶಿಸಬೇಕು. ಈ ಕ್ರಮಗಳೆಲ್ಲಾ ಅಧ್ವರ್ಯು ಪ್ರಯೋಗದಲ್ಲಿ ವಿವರಿಸಲಾಗಿರುವುದು ಈ ವಿಷಯದಲ್ಲಿ ಆಪಸ್ತಂಬ ಮಹರ್ಷಿಯು— **ಯತ್ರಾಭಿಜಾನಾತ್ಯಭೂದುಷಾ** ಇತ್ಯಾದಿ ಸೂತ್ರವಾಕ್ಯಗಳಿಂದ ಕಾರ್ಯಕ್ರಮವನ್ನು ನಿರ್ದೇಶಿಸಿರುವರು. ಆಶ್ವಲಾಯನ ಮಹರ್ಷಿಯೂ ಸಹ ಹೋತೃ ಸಂಬಂಧವಾದ ಮಂತ್ರಾದಿಗಳ ಪಠನ ವಿಷಯದಲ್ಲಿ **ಪರಿಹಿತೇಽಪ ಇಷ್ಯ ಹೋತಃ** ಇತ್ಯಾದಿ ವಾಕ್ಯಗಳಿಂದ ಕ್ರಮವನ್ನು ನಿರ್ದೇಶಿಸಿರುವರು. ಅನಂತರ ಸೂಕ್ತದ ಹತ್ತು ಋಕ್ಕುಗಳ (೯-೧೧) ಪಠನಾನಂತರ ಏಕಧನಾ ಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೊರಟ ಪುರುಷರು ತಮ್ಮ ತಮ್ಮ ಪಾತ್ರೆಗಳಲ್ಲಿ ನೀರನ್ನು ತುಂಬಿಕೊಂಡು ನದಿಯಿಂದ ಹಿಂತಿರುಗುವಾಗ ಹೋತೃವು ಸೂಕ್ತದ ಹತ್ತನೆಯ ಋಕ್ಕಾದ **ಆವರ್ವೃತತೀರಧ** ಎಂಬ (೧೦-೩೦-೧೦) ಹತ್ತನೆಯ ಋಕ್ಕನ್ನು ಪಠಿಸುವನು.

> **ಪ್ರತಿ ಯದಾಪೋ ಅದೃಶ್ರಮಾಯತೀರಿತಿ ಪ್ರತಿದೃಶ್ಯಮಾನಾಸು । ಆ ಧೇನವಃ ಪಯಸಾ ತೂರ್ಣ್ಯರ್ಥಾ ಇತ್ಯುಪಾಯತೀಷು । ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ಸಮಾಯತೀಷು ।**

ನೀರನ್ನು ಏಕಧನಾಪಾತ್ರೆಗಳಲ್ಲಿ ತುಂಬಿಕೊಂಡು ನದೀತೀರದಿಂದ ಹಿಂತಿರುಗಿ ಹೊರಟು ಬರುವಾಗ ನೀರಿನಿಂದ ತುಂಬಿದ ಆ ಏಕಧನಾಪಾತ್ರೆಗಳನ್ನು ಪುರುಷರು ಹೊತ್ತುಕೊಂಡು ಬರುತ್ತಿರುವುದನ್ನು ಹೋತೃವು ನೋಡಿದಾಗ **ಪ್ರತಿ ಯದಾಪಃ** (೧೦-೩೦-೧೩) ಎಂಬ ಮಂತ್ರವನ್ನು ಪಠಿಸುವನು. ಆ ಏಕಧನಾಪಾತ್ರೆಗಳಲ್ಲಿರುವ ಉದಕಗಳು ಚಾತ್ವಾಲ ಪ್ರದೇಶವನ್ನು (ಯಜ್ಞವೇದಿಯಲ್ಲಿರುವ ಒಂದು ಹಳ್ಳ, ಗುಂಡಿ) ತಲಪಿದಾಗ **ಆ ಧೇನವಃ ಪಯಸಾ** (೫-೪೩-೪) ಎಂಬ ಮಂತ್ರವನ್ನು ಪಠಿಸುವನು.

ಇಲ್ಲಿ ವಿವರಣೆಯು ಅವಶ್ಯಕವು **ಉನ್ನೇತರ್ಹೋತೃಚಮಸೇನ ವಸತೀವರೀಭಿಶ್ಚ ಚಾತ್ವಾಲಂ ಪ್ರತ್ಯಾಸ್ಸ** ಎಂದು ಅಧ್ವರ್ಯುವು ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಉನ್ನೇತೃವೆಂಬ ಋತ್ವಿಜನು ಹೋತೃ ಸಂಬಂಧವಾದ ಚಮಸವನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಹಿಂದಿನ ದಿನವೇ ಇಟ್ಟಿದ್ದ ನೀರನ್ನು ಚಾತ್ವಾಲದ ಸಮೀಪಕ್ಕೆ ಒಯ್ಯುವನು. ಅನಂತರ **ಮೈತ್ರಾವರುಣಸ್ಯ ಚಮಸಾಧ್ವರ್ಯವಾದ್ರವ** ಎಂಬ ಪ್ರೈಷಮಂತ್ರದಂತೆ ಮೈತ್ರಾವರುಣನೆಂಬ ಋತ್ವಿಜನ ಪರಿಚಾರಕನಾದ ಚಮಸಾಧ್ವರ್ಯುವು ಮೈತ್ರಾವರುಣ ಚಮಸವನ್ನೂ ಚಾತ್ವಾಲದ ಸಮೀಪಕ್ಕೆ ತರುವನು. ಇಲ್ಲಿ ಹೋತೃಚಮಸವೆಂದರೆ ವಸತೀವರೀಪಾತ್ರೆಯಲ್ಲಿರುವ ಉದಕಗಳೂ ಎಂದೂ ಮೈತ್ರಾವರುಣ ಚಮಸವೆಂದರೆ ಏಕಧನಾ ಪಾತ್ರೆಗಳಲ್ಲಿರುವ ಉದಕಗಳು ಎಂದೂ ತಿಳಿಯಬೇಕು. ಅನಂತರ ವಸತೀವರ್ಯುದಕ

ಸಹಿತವಾದ ಹೋತೃಚಮಸದಲ್ಲಿ ಮೈತ್ರಾವರುಣಚಮಸಗಳಲ್ಲಿರುವ ಏಕಧನಾಪಾತ್ರೆಗಳ ಉದಕಗಳನ್ನು ಅಧ್ವರ್ಯುವು ಒಂದರಲ್ಲೊಂದನ್ನು ಪರಸ್ಪರ) ಸೇರಿಸಿ ಮಿಶ್ರಮಾಡುವನು. ಮಿಶ್ರಮಾಡುವ ಕಾಲದಲ್ಲಿ ಹೋತೃವು **ಸಮನ್ಯಾ ಯಂತ್ಯುಪ** (೨-೩೫-೩) ಎಂಬ ಋಕ್ಕನ್ನು ಪಠಿಸುವನು. ಈ ವಿಷಯದಲ್ಲಿ ಆಪಸ್ತಂಬ ಮಹರ್ಷಿಯು— ಹೋತೃ ಚಮಸೇನ ವಸತೀವರೀಭ್ಯೋ ಎಂದು ಮೊದಲಾಗುವ ಸೂತ್ರದಿಂದ ಸ್ಪಷ್ಟವಾಗಿ ವಿವರಿಸಿರುವರು.

ಈ ಋಕ್ಕುಗಳ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಅದನ್ನು ಇಲ್ಲಿ ವಿವರಿಸಲಾಗಿದೆ.

**ಅಪೋ ವಾ ಅಸ್ಪರ್ಧಂತೆ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮೋ ವಯಮಿತಿ ಯಾಶ್ಚೇಮಾಃ ಪೂರ್ವೇದ್ಯುರ್ವಸತೀವರ್ಯೋ ಗೃಹ್ಯಂತೇ ಯಾಶ್ಚ ಪ್ರಾತರೇಕಧನಾಸ್ತಾ ಭೃಗುರಪಶ್ಯದಾಪೋ ವೈ ಸ್ಪರ್ಧಂತ ಇತಿ ತಾ ಏತಯರ್ಚಾ ಸಮಜ್ಞಪಯತ್ಸಮನ್ಯಾ ಯಂತ್ಯುಪ ಯಂತನ್ಯಾ ಇತಿ ತಾಃ ಸಮಜಾನತ ಸಂಜಾನಾನಾ ಹಾಸ್ಯಾಪೋ ಯಜ್ಞಂ ವಹಂತಿ ಯ ಏವಂ ವೇದ ॥**

ಸೋಮಾಭಿಷವಣಕ್ಕೆ ಹಿಂದಿನ ದಿನವೇ ತಂದ ನೀರನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಶೇಖರಿಸಿಟ್ಟಿರುವರು. ಸೋಮಾಭಿಷವಣದ (ಸೋಮವನ್ನು ಹಿಂಡುವ) ದಿನವೇ ಎಂದರೆ ಆ ದಿನ ಪ್ರಾತಃಕಾಲದಲ್ಲಿ ನದಿಯಿಂದ ಹೊಸದಾಗಿ ಆಗತಾನೇ ನೀರನ್ನು ಏಕಧನಾ ಎಂಬ ಪಾತ್ರೆಗಳಲ್ಲಿ ತಂದಿಟ್ಟಿರುವರು. ಈ ಎರಡುವಿಧ ಪಾತ್ರೆಗಳಲ್ಲಿದ್ದ ಉದಕಗಳು ಪೂರ್ವದಲ್ಲಿ ಯಜ್ಞನಿರ್ವಹಣೆಯ ವಿಷಯದಲ್ಲಿ ಪರಸ್ಪರ ಅಸೂಯೆಯಿಂದ ಸ್ಪರ್ಧಿಸಿದವು. ಎಂದರೆ ನಾವೇ ಯಜ್ಞ ನಿರ್ವಹಣೆಮಾಡಲು ಶಕ್ತರೆಂದು ವಸತೀವರ್ಯುದಕಗಳೂ (ಅಥವಾ ಉದಕಾಭಿಮಾನಿದೇವತೆಗಳೂ) ನಮಗೆ ಹೆಚ್ಚಿನ ಶಕ್ತಿ ಇರುವುದೆಂದು ಏಕಧನಾಪಾತ್ರೆಗಳಲ್ಲಿರುವ ಉದಕಗಳೂ ಪರಸ್ಪರ ಸ್ಪರ್ಧೆಯಿಂದ ಹೋರಾಡುತ್ತಿದ್ದುದನ್ನು ಭೃಗುಋಷಿಯು ನೋಡಿ **ಸಮನ್ಯಾ ಯಂತಿ** (೨-೩೫-೩) ಋಕ್ಕನ್ನು ಪಠಿಸಿ ಆ ಎರಡು ವಿಧವಾದ ಉದಕಗಳಿಗಿದ್ದ ಪರಸ್ಪರ ವೈಷಮ್ಯವನ್ನು ಪರಿಹರಿಸಿ ಅವುಗಳನ್ನು ಸಾಂತ್ವವಚನಗಳಿಂದ ಸಮಾಧಾನಮಾಡಿ ಅವುಗಳಿಗೆ ಪರಸ್ಪರ ಐಕಮತ್ಯವನ್ನುಂಟುಮಾಡಿದನು. ಆ ಮಂತ್ರಸಾಮರ್ಥ್ಯದಿಂದಲೇ ಆ ಉಭಯವಿಧ ಉದಕಗಳು ತಮ್ಮ ತಮ್ಮ ವಿವಾದಗಳನ್ನು ಬದಿಗೊತ್ತಿ ಯಜ್ಞನಿರ್ವಹಣಕಾರ್ಯದಲ್ಲಿ ಐಕಮತ್ಯದಿಂದ ಪ್ರವರ್ತಿಸತೊಡಗಿದವು. ಈ ವಿಷಯವನ್ನು ತಿಳಿದಿರುವ ಯಜಮಾನನು ತನ್ನ ಯಜ್ಞ ಕಾರ್ಯಗಳನ್ನು ವಿವಾದಾದಿಗಳಿಲ್ಲದೆ ಪರಸ್ಪರ ಐಕಮತ್ಯದಿಂದ ನಿರ್ವಿಘ್ನ ವಾಗಿ ನೆರವೇರಿಸಲು ಸಮರ್ಥನಾಗುವನು.

**ಆಪೋ ನ ದೇವೀರುಪಯಂತಿ ಹೋತ್ರಿಯಮಿತಿ ಹೋತೃಚಮಸೇ ಸಮವನೀಯಮಾನಾಸ್ವ ನ್ವಾಹ ವಸತೀವರೀಷ್ವೇಕಧನಾಸು ಚ ।**

ವಸತೀವರೀ ಮತ್ತು ಏಕಧನಾ ಪಾತ್ರೆಗಳಲ್ಲಿದ್ದ ಉಭಯವಿಧ ಉದಕಗಳನ್ನು ಹೋತೃಚಮಸದಲ್ಲಿ ಸುರಿದಮೇಲೆ ಹೋತೃವು **ಆಪೋ ನ ದೇವೀರುಪಯಂತಿ** (೧-೮೩-೨) ಎಂಬ ಮಂತ್ರವನ್ನು ಪಠಿಸುವನು.

**ಅವೇರಪೋಽಧ್ವರ್ಯಾ೩ ಉ ಇತಿ ಹೋತಾಧ್ವರ್ಯುಂ ಪೃಚ್ಛತಿ । ಆಪೋ ವೈ ಯಜ್ಞೋಽ ವಿದೋ ಯಜ್ಞಾ೩ ಮಿತ್ಯೇವ ತದಾಹ । ಉತೇಮನನ್ನಮುರಿತ್ಯಧ್ವರ್ಯುಃ ಪ್ರತ್ಯಾಹ ಉತೇಮಾಃ ಪಶ್ಯೇತ್ಯೇವ ತದಾಹ ।**

ಅನಂತರ ಹೋತೃವು ಒಂದು ಯಜುರ್ಮಂತ್ರವನ್ನು ಪಠಿಸಿ ಅಧ್ವರ್ಯುವನ್ನು ಕುರಿತು— ಎಲೈ ಅಧ್ವರ್ಯುವೇ, ಈಗ ನೀನು ಎರಡು ವಿಧವಾದ ಉದಕಗಳನ್ನು ಪಡೆದಿದ್ದೀಯಲ್ಲವೇ? ಎಂದು ಪ್ರಶ್ನಿಸುವನು. ಎರಡುವಿಧ ಉದಕಗಳೆಂದರೆ ಹಿಂದೆ ಹೇಳಿದಂತೆ ವಸತೀವರೀ ಮತ್ತು ಏಕಧನಾ ಪಾತ್ರೆಗಳಲ್ಲಿರುವ ಉದಕಗಳು. ಈ ಉದಕಗಳು ಸೋಮಾಭಿಷವಣ ಕಾಲದಲ್ಲಿ ಯಜ್ಞನಿರ್ವಹಣೆಗಾಗಿ ಉಪಯೋಗಿಸಲ್ಪಡವುವು. ಆದ್ದರಿಂದ ಯಜ್ಞವು ಅಬ್ರೂಪ-ಉದಕದ ಸ್ವರೂಪವೆಂದು ಹೇಳಲ್ಪಡುವುದು. ಆ ಪ್ರಶ್ನೆಗೆ ಅಧ್ವರ್ಯುವು ಉತ್ತರವೀಯುತ್ತ —ಎಲೈ ಹೋತೃವೇ ನೀನು ಕೇಳಿದ ಎರಡುವಿಧ ಉದಕಗಳನ್ನು ಯಜ್ಞನಿರ್ವಹಣಾರ್ಥವಾಗಿ ನಾನು ಪಡೆದಿರುವೆನು. ನೋಡು ಎಂದು ಹೇಳುವನು.

**ತಾಸ್ವಧ್ವರ್ಯೋ ಇಂದ್ರಾಯ ಸೋಮಂ ಸೋತಾ ಮಧುಮಂತಂ ವೃಷ್ಟಿವನಿಂ ತೀವ್ರಾಂತಂ ಬಹುರಮಧ್ಯಂ ವಸುಮತೇ ರುದ್ರವತ ಆದಿತ್ಯವತ ಋಭುಮತೇ ವಿಭುಮತೇ ವಾಜವತೇ ಬೃಹಸ್ಪತಿವತೇ ವಿಶ್ವದೇವ್ಯಾವತೇ । ಯಸ್ಯೇಂದ್ರಃ ಪೀತ್ವಾ ವೃತ್ರಾಣಿ ಜಂಘನತ್ಪ್ರ ಸ ಜನ್ಯಾನಿ ತಾರಿಷೋ೩ ಮಿತಿ ಪ್ರತ್ಯುತ್ತಿಷ್ಠತಿ ।**

ಈ ಮೇಲಿನ ಮಂತ್ರವನ್ನು ಪಠಿಸಿ ಹೋತೃವು ಉದಕಾಭಿಮಾನಿದೇವತೆಗಳನ್ನುದ್ದೇಶಿಸಿ ಪ್ರತ್ಯುತ್ಥಾನವನ್ನು ಮಾಡಬೇಕು. ಎಂದರೆ ಎದ್ದುನಿಂತುಕೊಂಡು ಪ್ರಾರ್ಥಿಸಬೇಕು. ಎಲೈ ಅಧ್ವರ್ಯುವೇ, ನೀನು ಪಡೆದಿರುವ ವಸತೀವರೀ ಮತ್ತು ಏಕಧನಾ ಎಂಬ ಎರಡುವಿಧ ಉದಕಗಳ ಸಹಾಯದಿಂದ ಸೋಮಾಭಿಷವವನ್ನು ಮಾಡು ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆದು ಹಿಂಡಿ ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸು. ಸೋಮರಸವು ಹೇಗಿರಬೇಕೆಂದರೆ ಮಧುರರಸದಿಂದ ಯುಕ್ತವಾಗಿ ಸಿಹಿಯಾಗಿಯೂ ವೃಷ್ಟಿ (ಮಳೆ) ಯನ್ನುಂಟುಮಾಡುವುದಾಗಿಯೂ, ಬೇಗನೆ ಫಲವನ್ನು ಕೊಡುವುದಾಗಿಯೂ ಅನೇಕವಿಧವಾದ ಕರ್ಮಾಂಗಯುಕ್ತವಾಗಿಯೂ ಇರಬೇಕು. ಇಲ್ಲಿ **ಮಧುಮಂತಂ** ಎಂಬ ಶಬ್ದಕ್ಕೆ—ಸೋಮರಸವು ಜೇನುತುಪ್ಪದಂತೆ ಸಿಹಿಯಾಗಿರಬೇಕು ಅಥವಾ ರುಚಿಕರವಾಗಿರಬೇಕು. ವೃಷ್ಟಿವನಿಂ— ವೃಷ್ಟಿಪ್ರದವಾದುದು ಎಂದರೆ ಈ ಸೋಮಪಾನದಿಂದ ಇಂದ್ರನು ತೃಪ್ತನಾಗಿ ಆ ಹರ್ಷದಿಂದ ಮೇಘಗಳನ್ನು ಸೀಳಿ ವೃಷ್ಟಿಯನ್ನು ಸುರಿಸುವಂತೆ ಮಾಡುವನು. ತೀವ್ರಾಂತಂ—ವಿಘ್ನರಹಿತವಾಗಿ ಯಜ್ಞವು ಸಮಾಪ್ತಿಯಾಗಿ ಅದರ ಫಲವು ಬೇಗನೆ ಪ್ರಾಪ್ತವಾಗುವುದು. ಬಹುರ (ಲ) ಮಧ್ಯಂ—ಯಜ್ಞದಲ್ಲಿ ಅನೇಕವಿಧವಾದ ಉಪಕರ್ಮಗಳಿರುವುವು. ಋತ್ವಿಗ್ವರಣದಿಂದ ಪ್ರಾರಂಭವಾಗಿ ಸಮಾಪ್ತಿಯವರೆಗೆ ಅನೇಕವಿಧ ಯಜ್ಞಾಂಗಕರ್ಮಗಳಿರುವುವು. ಆದ್ದರಿಂದ ಈ ಅನೇಕ ಕರ್ಮಗಳ ನಿರ್ವಹಣೆಗೆ ಸಾಧನವಾದ ಸೋಮರಸವು ಈ ವಿಧಗುಣಗಳುಳ್ಳ ಸೋಮರಸವನ್ನು ಇಂದ್ರನಿಗಾಗಿ ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು. ಈ ಸೋಮರಸವು ಇಂದ್ರನಿಗೊಬ್ಬನಿಗೆ ಮಾತ್ರವೇ ಎಂದರೆ ಇಂದ್ರನಿಗೂ ಇಂದ್ರನೊಡನಿರುವ ಇತರ ದೇವತೆಗಳಿಗೂ ಪಾನಾರ್ಥವಾಗಿ ಎಂದರ್ಥವು. ಆ ದೇವತೆಗಳು ಯಾರಾರೆಂದರೆ–ವಸುಮತೇ ರುದ್ರವತೇ ಆದಿತ್ಯವತೇ ವಿಶ್ವದೇವ್ಯಾವತೇ । ಎಂದರೆ ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಋಭು, ವಿಭು, ವಾಜ ಎಂಬ ಮೂರುಮಂದಿ ಋಭುಗಳು, ಬೃಹಸ್ಪತಿ, ವಿಶ್ವೇದೇವತೆಗಳು ಈ ಮೊದಲಾದ ದೇವತೆಗಳಿಂದ ಸಹಿತನಾದ ಇಂದ್ರನ ಪಾನಾರ್ಥವಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು ಇಂತಹ ಸೋಮರಸವನ್ನು ಪಾನಮಾಡಿ ಇಂದ್ರನು ಶತ್ರುಗಳನ್ನೂ, ಯಜ್ಞಮಾಡುವ ಯಜಮಾನನ ಪಾಪಗಳನ್ನೂ ನಾಶಮಾಡಲು ಸಮರ್ಥನಾಗುವನು. ಅಂತಹ ಸೋಮರಸವನ್ನು ಎಲೈ ಅಧ್ವರ್ಯುವೇ, ನೀನು ಸಿದ್ಧಪಡಿಸು ಎಂದು ಮಂತ್ರಾಭಿಪ್ರಾಯವು. ಈ ಮಂತ್ರವನ್ನು ಪಠಿಸಿ ಕೊನೆಯಲ್ಲಿ ಓಂ ಎಂಬ ಪ್ರಣವಮಂತ್ರವನ್ನು ಪಠಿಸಿ ಹೋತೃವು ಎದ್ದುನಿಂತುಕೊಂಡು ಪ್ರಾರ್ಥಿಸುವನು.

**ಪ್ರತ್ಯೃತ್ಥೇಯಾ ವಾ ಆಪಃ ಪ್ರತಿ ವೈ ಶ್ರೇಯಾಂಸಮಾಯಂತಮುತ್ತಿಷ್ಠಂತಿ ತಸ್ಮಾತ್ಪ್ರತ್ಯುತ್ಥೇಯಾಃ।**
**ಅನು ಪರ್ಯಾವೃತ್ಯಾಃ ಆನು ವೈ ಶ್ರೇಯಾಂಸಂ ಪರ್ಯಾವರ್ತಂತೇ ತಸ್ಮಾದನುಪರ್ಯಾವೃತ್ಯಾ ಅನುಬ್ರುವತೈವಾನುಪ್ರಪತ್ತವ್ಯಂ ॥**

ಈ ಎರಡುವಿಧ ಉದಕಗಳಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಎದ್ದುನಿಲ್ಲಬೇಕು. ಲೋಕವ್ಯವಹಾರದಲ್ಲಿ ಯಾರಾದರೂ ದೊಡ್ಡವರು ಬಂದರೆ, ಎಂದರೆ ಗುರುಗಳು, ಹಿರಿಯರು, ತಂದೆ ಮೊದಲಾದರು ಬಂದರೆ ಅವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಶಿಷ್ಯ ಪುತ್ರ ಮೊದಲಾದವರು ಎದ್ದುನಿಲ್ಲುವುದು ರೂಢಿಯಷ್ಟೆ. ಅದರಂತೆ ಇಲ್ಲಿಯೂ ಪೂಜಾರ್ಹವಾದ ಯಜ್ಞಕರ್ಮಗಳಿಗೆ ಅತ್ಯವಶ್ಯಕಗಳಾದ ಈ ಎರಡುವಿಧ ಉದಕಗಳಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಋತ್ವಿಗಾದಿಗಳು ಎದ್ದು ನಿಲ್ಲಬೇಕು. ಅಷ್ಟೇ ಅಲ್ಲ. ಗೌರವಾರ್ಹರಾದವರು ಅತ್ತಿತ್ತ ಸಂಚರಿಸುವಾಗ ಅವರನ್ನು ಅನುಸರಿಸಿ ಅವರ ಹಿಂದೆ ಇದ್ದು ವಿನಯದಿಂದ ಮರ್ಯಾದೆಮಾಡುವುದೂ ಸಹಜವಾಗಿದೆ. ಅದರಂತೆ ಇಲ್ಲಿಯೂ ಮಾಡಬೇಕೆಂದಭಿಪ್ರಾಯವು.

**ಈಶ್ವರೋ ಹ ಯದ್ಯಪ್ಯನ್ಯೋ ಯಜೇತಾಥ ಹೋತಾರಂ ಯಶೋಽರ್ತೋಸ್ತಸ್ಮಾದನುಬ್ರುವತೈ-ವಾನುಪ್ರಪತ್ತವ್ಯಂ ।**

ಒಂದುವೇಳೆ ಹೋತೃವು ಯಜ್ಞದಲ್ಲಿ ಭಾಗವಹಿಸುವನಲ್ಲವಾದರೂ ಮಂತ್ರವನ್ನು ಪಠಿಸುವ ಹೋತೃವು ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿಹೋದಲ್ಲಿ ಅವನಿಗೆ ಕೀರ್ತಿಯೂ ಪ್ರಾಧಾನ್ಯತೆಯೂ ಲಭಿಸುವುದು. ಆದ್ದರಿಂದ ಮಂತ್ರಪಠನಮಾಡುವವರು ಅವಶ್ಯಕವಾಗಿ ಆ ಉದಕಗಳನ್ನು ಹಿಂಬಾಲಿಸಿಹೋಗಬೇಕು. ಹೀಗೆ ಅನುಸರಿಸಿ ಹೋಗುವಕಾಲದಲ್ಲಿ ಈ ಕರ್ಮದಲ್ಲಿ ಇನ್ನೂ ಪಠಿಸದಿರುವ, ಅಂಬಯೋ ಯಂತಿ (೧-೨೩-೧೬) ಎಂಬ ಮಂತ್ರವನ್ನು ಪಠಿಸಬೇಕು—

**ಅಂಬಯೋ ಯಂತ್ಯಧ್ವಭಿರಿತ್ಯೇತಾಮನುಬ್ರುವನ್ನನು ಪ್ರಪದ್ಯೇತ ।**

**ಜಾಮಯೋ ಅಧ್ವರೀಯತಾಂ । ಪೃಂಚತೀರ್ಮಧುನಾ ಪಯ ಇತಿ ಯೋಽಮುಥವ್ಯೋ ಯಶೋಽರ್ತೋರ್ಬುಭೂಷೇತ್ ।**

ಈ ಋಕ್ಕಿನ ಅರ್ಥವನ್ನು ವಿವರಿಸುವರು—ಅಂಬ ಎಂಬ ಶಬ್ದವು ಗೌರವವನ್ನು ಸೂಚಿಸುವ ಮಾತೃವಾಚಕಶಬ್ದವು. ಅಂಬಯಃ ಎಂದರೆ ತಾಯಿಯರಂತೆ ಗೌರವಾನ್ವಿತರಾದ ಈ ಉದಕಗಳು ಎಂದರ್ಥವು. ಮಾತೃಸಮಾನರಾದ ಈ ಎರಡುವಿಧ ಉದಕಗಳು ನಾನಾವಿಧಮಾರ್ಗಗಳಿಂದ ಹೋಗುತ್ತಾರೆ. ಇವರು ಯಜ್ಞವನ್ನು ನೆರವೇರಿಸಬೇಕೆಂದು ಬಯಸುವ ಯಜಮಾನನಿಗೆ ಭಗಿನಿ ಎಂದರೆ ಸಹೋದರಿಯರಂತೆ ಹಿತವನ್ನು ಬಯಸುವವರು ಮತ್ತು ಮಧುರವಾದ ತಮ್ಮ ಉದಕಗಳಿಂದ ಎಲ್ಲರನ್ನೂ ತೃಪ್ತಿಗೊಳಿಸುವವರು. ಯಾವ ಪುರುಷನು ಇದುವರಿಗೆ ಸೋಮರಸದ ರುಚಿಯನ್ನು ಕಂಡರಿಯನೋ ಮತ್ತು ಸೋಮಯಾಗವನ್ನು ಮಾಡಿ ಕೀರ್ತಿಸಂಪಾದಿಸಬೇಕೆಂದು ಅಪೇಕ್ಷಿಸುವನೋ ಅಂತಹ ಪುರುಷನು ಮಂತ್ರಪಠನಪೂರ್ವಕವಾಗಿ ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿಹೋದರೆ ಅವನ ಇಷ್ಟಾರ್ಥವು ಸಿದ್ಧಿಸುವುದು.

**ಅಮೂರ್ಯಾ ಉಪ ಸೂರ್ಯೇ ಯಾಭಿರ್ವಾ ಸೂರ್ಯಃ ಸಹೇತಿ ತೇಜಸ್ಕಾಮೋ ಬ್ರಹ್ಮವರ್ಚಸಕಾಮಃ ।**

ಮುಂದಿನ ಋಕ್ಕಿನಲ್ಲಿ ಫಲಾಂತರಗಳನ್ನು ಹೇಳುವರು—**ಅಮೂರ್ಯಾ ಉಪ ಸೂರ್ಯೇ** ಎಂಬ (೧-೨೩-೧೭) ಋಕ್ಕನ್ನು ಪಠಿಸಿದಲ್ಲಿ ಅಧ್ಯಯನಸಂಪತ್ತಿನಿಂದ ತೇಜಸ್ವಿಯೂ, ಬ್ರಹ್ಮವರ್ಚಸ್ವಿಯೂ ಆಗುವನು.

**ಅಪೋ ದೇವೀರುಪಹ್ವಯೇ ಯತ್ರ ಗಾವಃ ಪಿಬಂತಿ ನ ಇತಿ ಪಶುಕಾಮಃ ॥**

ಪಶುಸಂಪತ್ತನ್ನು ಅಪೇಕ್ಷಿಸುವ ಪುರುಷನು—**ಅಪೋ ದೇವೀರುಪ ಹ್ವಯೇ** (೧೧-೨೩-೧೮) ಎಂಬ ಋಕ್ಕನ್ನು ಪಠಿಸಬೇಕು.

**ತಾ ಏತಾಃ ಸರ್ವಾ ಏವಾನುಬ್ರುವನ್ನನುಪ್ರಪದ್ಯೇತೈತೇಷಾಂ ಕಾಮಾನಾಮವರುಧ್ಯೈ । ಏತಾನ್ಕಾಮಾನವರುಂಧೇ ಯ ಏವಂ ವೇದ ॥**

ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯಲಿಚ್ಛಿಸುವವನು ಮೇಲೆ ಹೇಳಿದ ಮೂರು ಋಕ್ಕುಗಳನ್ನೂ ಪಠಿಸಬೇಕು. ಈ ವಿಷಯುವನ್ನು ತಿಳಿದಿರುವ ಪುರುಷನು ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖಿಸುವನು.

**ಏಮಾ ಅಗ್ಮನ್ರೇವತೀರ್ಜೀವಧನ್ಯಾ ಇತಿ ಸಾದ್ಯಮಾನಾಸ್ವನ್ವಾಹ ವಸತೀವರೀಷ್ವೇಕಧನಾಸು ಚ । ಆಗ್ಮನ್ನಾಪ ಉಶತೀರ್ಬರ್ಹಿರೇದಮಿತಿ ಸನ್ನಾನು ಸ ಏತಯಾ ಪರಿದಧಾತಿ ॥**

(ಐ. ಬ್ರಾ. ೮-೨೦)

ಮೇಲೆ ಹೇಳಿದ ಎರಡುವಿಧ ಉದಕಗಳು ಎಂದರೆ ವಸತೀವರೀ ಮತ್ತು ಏಕಧನಾಪಾತ್ರೆಗಳ ಉದಕಗಳು ಉತ್ತರ ವೇದಿಯ ಸಮೀಪಕ್ಕೆ ಒಯ್ಯಲ್ಪಡುವಾಗ ಹೋತೃವು–**ಏಮಾ ಅಗ್ಮನ್ರೇವತೀಃ** (೧೦-೩೦-೧೪) ಎಂಬ ಋಕ್ಕನ್ನು ಪಠಿಸಬೇಕು ಮತ್ತು ಈ ಉಭಯವಿಧ ಉದಕಗಳು ವೇದಿಯಲ್ಲಿ ಸ್ಥಾಪಿತವಾದ (ಇಡಲ್ಪಟ್ಟ) ನಂತರ ಹೋತೃವು **ಆಗ್ಮನ್ನಾಪ** (೧೦-೩೦-೧೫) ಎಂಬ ಋಕ್ಕನ್ನು ಈ ಅಪೋನಪ್ತ್ರೀಯ ಕರ್ಮದಲ್ಲಿ ಕೊನೆಯ ಋಕ್ಕನ್ನಾಗಿ ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸಬೇಕು.

ಇಲ್ಲಿಗೆ ಅಪೋನಪ್ತ್ರೀಯವೆಂಬ ಕರ್ಮದ ವಿವರಣೆಯು ಸಮಾಪ್ತವು.

॥ ಸಂಹಿತಾಪಾಠಃ ॥

**ಏಷ ಸ್ಯ ತೇ ಪವತ ಇಂದ್ರ ಸೋಮಶ್ಚಮೂಷು ಧೀರ ಉಶತೇ ತವಸ್ವಾನ್ ।**
**ಸ್ವರ್ಚಕ್ಷಾ ರಥಿರಃ ಸತ್ಯಶುಷ್ಮಃ ಕಾಮೋ ನ ಯೋ ದೇವಯತಾಮಸರ್ಜಿ ॥**

॥ ಪದಪಾಠಃ ॥

ಏಷಃ । ಸ್ಯಃ । ತೇ । ಪವತೇ । ಇಂದ್ರ । ಸೋಮಃ । ಚಮೂಷು । ಧೀರಃ । ಉಶತೇ । ತವಸ್ವಾನ್ ।
ಸ್ವಃऽಚಕ್ಷಾಃ । ರಥಿರಃ । ಸತ್ಯऽಶುಷ್ಮಃ । ಕಾಮಃ । ನ । ಯಃ । ದೇವऽಯತಾಂ । ಅಸರ್ಜಿ ॥ ೪೭ ॥

|| ಸಾಯಣಭಾಷ್ಯಂ ||

**ಹೇ ಇಂದ್ರ ಉಶತೇ ಕಾಮಯಮಾನಾಯ ತೇ ತುಭ್ಯಂ ತ್ವದರ್ಥಂ ಧೀರಃ ಪ್ರಾಜ್ಞಸ್ತವಸ್ವಾನ್ವೇಗವಾನ್ ಸ್ಯ ಸ ಏಷ ಸೋಮಶ್ಚಮೂಷು ಚಮಸೇಷು ಪವತೇ । ಕ್ಷರತಿ । ಸ್ವರ್ಚಕ್ಷಾಃ ಸರ್ವದರ್ಶನೋ ರಥಿರೋ ರಥವಾನ್ ಸತ್ಯಶುಷ್ಮೋ ಯಥಾರ್ಥಬಲೋ ಯಃ ಸೋಽಸೌ ದೇವಯತಾಂ ದೇವಾನಿಚ್ಛತಾಂ ಯಜಮಾನಾನಾಂ ಕಾನೋ ನ ಕಾಮದ ಇವಾಸರ್ಜಿ । ಅಸೃಜ್ಯತ । ಆದೀಯತೇತ್ಯರ್ಥಃ ॥**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಯಃ**—ಯಾವ ಸೋಮನು । **ದೇವಯತಾಂ**—ದೇವತೆಗಳನ್ನಿಚ್ಛಿಸುವ ಯಜಮಾನರ । **ಕಾನೋ ನ**—ಅಭಿಲಾಷೆಯಂತೆ । **ಅಸರ್ಜಿ**—ಕೊಡಲ್ಪಟ್ಟನೋ ಅಂತಹ । **ಸ್ವರ್ಚಕ್ಷಾಃ**—ಸಕಲವನ್ನೂ ನೋಡಬಲ್ಲವನೂ । **ರಥಿರಃ**—ರಥಯುಕ್ತನೂ । **ಸತ್ಯಶುಷ್ಮಃ**—ಸತ್ಯಾತ್ಮಕವಾದ ಶಕ್ತಿಯುಳ್ಳವನೂ । **ಧೀರಃ**—ಪ್ರಾಜ್ಞನೂ । **ತವಸ್ವಾನ್**—ವೇಗವುಳ್ಳವನೂ । **ಸ್ಯಃ**—ಪ್ರಸಿದ್ಧನೂ ಆದ । **ಏಷಃ ಸೋಮಃ**—ಈ ಸೋಮನು । **ಉಶತೇ**—ಸೋಮರಸವನ್ನಪೇಕ್ಷಿಸುವ । **ತೇ**—ನಿನಗಾಗಿ । **ಚಮೂಷು**—ಚಮೂ ಪಾತ್ರೆಗಳಲ್ಲಿ । **ಪವತೇ**—ಪ್ರವಹಿಸುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ಸೋಮನು ದೇವತೆಗಳನ್ನಿಚ್ಛಿಸುವ ಯಜಮಾನರ ಅಭಿಲಾಷೆಯಂತೆ ಕೊಡಲ್ಪಟ್ಟನೋ ಅಂತಹ ಸಕಲವನ್ನೂ ನೋಡಬಲ್ಲವನೂ, ರಥಯುಕ್ತನೂ, ಸತ್ಯಾತ್ಮಕವಾದ ಶಕ್ತಿಯುಳ್ಳವನೂ, ಪ್ರಾಜ್ಞನೂ, ವೇಗವುಳ್ಳವನೂ, ಪ್ರಸಿದ್ಧನೂ ಆದ ಈ ಸೋಮನು ಸೋಮರಸವನ್ನಪೇಕ್ಷಿಸುವ ನಿನಗಾಗಿ ಚಮೂ ಪಾತ್ರೆಗಳಲ್ಲಿ ಪ್ರವಹಿಸುತ್ತಾನೆ.

## English Translation

The flowing sagacious Soma flows into the cups, Indra, for you, who long (for him)—all-seeing, car-borne, of adequate vigour, who has been sent forth like the wish of the god-desiring (worshippers).

|| ಸಂಹಿತಾಪಾಠಃ ||

**ಏಷ ಪ್ರತ್ನೇನ ವಯಸಾ ಪುನಾನಸ್ತಿರೋ ವರ್ಪಾಂಸಿ ದುಹಿತುರ್ದಧಾನಃ ।**
**ವಸಾನಃ ಶರ್ಮ ತ್ರಿವರೂಥಮಪ್ಸು ಹೋತೇವ ಯಾತಿ ಸಮನೇಷು ರೇಭನ್ ॥ ೪೭ ॥**

|| ಪದಪಾಠಃ ||

ಏಷಃ । ಪ್ರತ್ನೇನ । ವಯಸಾ । ಪುನಾನಃ । ತಿರಃ । ವರ್ಪಾಂಸಿ । ದುಹಿತುಃ । ದಧಾನಃ ।
ವಸಾನಃ । ಶರ್ಮ । ತ್ರಿऽವರೂಥಂ । ಅಪ್‌ऽಸು । ಹೋತಾऽಇವ । ಯಾತಿ । ಸಮನೇಷು । ರೇಭನ್ ||೪೭||

|| ಸಾಯಣಭಾಷ್ಯಂ ||

ಪ್ರತ್ನೇನ ಪೂರ್ವಕಾಲೀನೇನ ವಯಸಾನ್ನೇನ ಪುನಾನಃ ಪೂಯಮಾನಃ । ಅನ್ನಾತ್ಮಿಕಯಾ ಧಾರಯಾ ಕ್ಷರನ್ನಿತ್ಯರ್ಥಃ । ತಾದೃಶೋ ದುಹಿತುಃ ಸರ್ವಸ್ಯ ದೋಗ್ಧ್ರ್ಯಾಃ ಪೃಥಿವ್ಯಾ ವರ್ಪಾಂಸಿ । ವರ್ಪ ಇತಿ ರೂಪನಾಮ ವೃಣೋತಿ ಶರೀರಮಿತಿ । ರೂಪಾಣಿ ತಿರೋ ದಧಾನಃ ಸ್ವತೇಜಸಾ ತಿರಸ್ಕುರ್ವನ್ನಾಚ್ಛಾದಯನ್ ತಥಾ ತ್ರಿವರೂಥಂ ತ್ರಿಭೂಮಿಕೋಪೇತಂ । ಯದ್ವಾ । ತ್ರಯಃ ಶೀತಾತಪವರ್ಷಾಃ । ತೇಷಾಂ ನಿವಾರಕಂ । ಶರ್ಮ ಯಜ್ಞಗೃಹಂ ವಸಾನ ಆಚ್ಛಾದಯನ್ನಪ್ಸು ವಸತೀವರೀಷು ಸ್ಥಿತ ಏಷ ಸೋಮೋ ಹೋತೇವ ಯಥಾ ಹೋತಾ ಸ್ತುತಿಧ್ವನಿಂ ಕುರ್ವನ್ಯಜ್ಞೇಷು ಯಾತಿ ತದ್ವದ್ರೇಭಞ್ಛಬ್ದಾಯಮಾನಃ ಸನ್ ಸಮನೇಷು । ಸಮಂತಿ ಕರ್ಮಾಣಿ ಧೃಷ್ಟಾಃ ಪ್ರಗಲ್ಭಾ ಯಂತ್ಯತ್ರೇತಿ ಸಮನಾ ಯಜ್ಞಾಃ । ತೇಷು ಯಾತಿ ಗಚ್ಛತಿ ||

|| ಪ್ರತಿಪದಾರ್ಥ ||

**ಪ್ರತ್ನೇನ** —ಪೂರ್ವಕಾಲೀನವಾದ । **ವಯಸಾ**— ಅನ್ನದೊಡನೆ । **ಪುನಾನಃ**—ಶುದ್ಧಿಯನ್ನು ಹೊಂದಿದವನೂ । **ದುಹಿತುಃ**—ಸಂಪತ್ಪ್ರದಳಾದ ಪೃಥ್ವಿಯ । **ವರ್ಪಾಂಸಿ**—ಶರೀರವನ್ನೆಲ್ಲ । **ತಿರೋ ದಧಾನಃ**—ತನ್ನ ತೇಜಸ್ಸಿನಿಂದ ವ್ಯಾಪಿಸುವವನೂ । **ತ್ರಿವರೂಥಂ**—ಶೀತ, ಉಷ್ಣ ಮತ್ತು ಮಳೆ ಇವುಗಳಿಂದ ರಕ್ಷಿಸತಕ್ಕ **ಶರ್ಮ**—ಯಜ್ಞಗೃಹವನ್ನು । **ವಸಾನಃ**—ತನ್ನ ತೇಜಸ್ಸಿನಿಂದ ಹೊದ್ದಿಸುವವನೂ । **ಅಪ್ಸು**—ವಸತೀವರಿಗಳಲ್ಲಿ ಸ್ಥಿತನೂ ಆದ । **ಏಷಃ**—ಸೋಮನು । **ಹೋತೇವ**—ಹೋತೃವಿನಂತೆ । **ರೇಭನ್**—ಶಬ್ದಮಾಡುತ್ತ । **ಸಮನೇಷು**—ಯಜ್ಞಗಳಲ್ಲಿ । **ಯಾತಿ**—ಸಂಚರಿಸುತ್ತಾನೆ.

|| ಭಾವಾರ್ಥ ||

ಪೂರ್ವಕಾಲೀನವಾದ ಅನ್ನದೊಡನೆ ಶುದ್ಧಿಯನ್ನು ಹೊಂದಿದವನೂ, ಸಂಪತ್ಪ್ರದಳಾದ ಪೃಥ್ವಿಯ ಶರೀರವನ್ನೆಲ್ಲ ತನ್ನ ತೇಜಸ್ಸಿನಿಂದ ವ್ಯಾಪಿಸುವವನೂ, ಶೀತ, ಉಷ್ಣ ಮತ್ತು ಮಳೆ ಇವುಗಳಿಂದ ರಕ್ಷಿಸತಕ್ಕ ಯಜ್ಞಗೃಹವನ್ನು ತನ್ನ ತೇಜಸ್ಸಿನಿಂದ ಹೊದ್ದಿಸುವವನೂ, ವಸತೀವರಿಗಳಲ್ಲಿ ಸ್ಥಿತನೂ ಆದ ಸೋಮನು ಹೋತೃವಿನಂತೆ ಶಬ್ದಮಾಡುತ್ತ ಯಜ್ಞಗೃಹಗಳಲ್ಲಿ ಸಂಚರಿಸುತ್ತಾನೆ.

## English Translation.

Flowing with (his) ancient food, enveloping the forms of the earth, covering the house of sacrifice which has a three-fold protection, (placed) in the waters he advances, calling aloud at the oblations like a ministrant priest.

॥ ಸಂಹಿತಾಪಾಠಃ ॥

ನೂ ನಸ್ತ್ವಂ ರಥಿರೋ ದೇವ ಸೋಮ ಪರಿ ಸ್ರವ ಚಮ್ವೋಃ ಪೂಯಮಾನಃ।
ಅಪ್ಸು ಸ್ವಾದಿಷ್ಠೋ ಮಧುಮಾಁ ಋತಾವಾ ದೇವೋ ನ ಯಃ ಸವಿತಾ
ಸತ್ಯಮನ್ಮಾ ॥ ೪೮ ॥

॥ ಪದಪಾಠಃ ॥

ನು । ನಃ । ತ್ವಂ । ರಥಿರಃ । ದೇವ । ಸೋಮ । ಪರಿ । ಸ್ರವ । ಚಮ್ವೋಃ । ಪೂಯಮಾನಃ ।
ಅಪ್ಽಸು । ಸ್ವಾದಿಷ್ಠಃ । ಮಧುಽಮಾನ್ । ಋತಽವಾ । ದೇವಃ । ನ । ಯಃ । ಸವಿತಾ । ಸತ್ಯಽಮನ್ಮಾ ॥

॥ ಸಾಯಣಭಾಷ್ಯಂ ॥

ಹೇ ದೇವ ಕಾಮ್ಯಮಾನ ಹೇ ಸೋಮ ರಥಿರೋ ರಥವಾಂಸ್ತ್ವಂ ನೋಽಸ್ಮಾಕಂ ಸ್ವಭೂತೇ ಯಜ್ಞೇ ಚಮ್ವೋರಧಿಷವಣಫಲಕಯೋಃ ಪೂಯಮಾನಃ ಸನ್ನಪ್ಸು ವಸತೀವರೀಷು ನು ಕ್ಷಿಪ್ರಂ ಪರಿ ಸ್ರವ। ಪರಿತಃ ಕ್ಷರ । ಸಾದಿಷ್ಠಃ ಸ್ವಾದುತಮಃ ಅತ ಏವ ಮಧುಮಾನ್ಮಾಧುರ್ಯಯುಕ್ತ ಋತಾವಾ ಯಜ್ಞವಾನ್ಸವಿತಾ ಸರ್ವಸ್ಯ ಪ್ರೇರಕೋ ಯಸ್ತ್ವಂ ದೇವೋ ನ ದೇವ ಇವ ಸತ್ಯಮನ್ಮಾ ಸತ್ಯಸ್ತುತಿಕೋ ಭವಸಿ ಸ ತ್ವಂ ಪರಿಸ್ರವೇತಿ ॥

॥ ಪ್ರತಿಪದಾರ್ಥ ॥

**ದೇವ**—ದೇವತಾತ್ಮನಾದ । **ಸೋಮ**—ಎಲೈ ಸೋಮದೇವನೇ । **ರಥಿರಃ**—ರಥಯುಕ್ತನಾದ । **ತ್ವಂ**—ನೀನು । **ನಃ**—ನಮ್ಮ ಯಜ್ಞದಲ್ಲಿ । **ಚಮ್ವೋಃ**—ಹಿಂಡುವ ಹಲಗೆಗಳ ಮೂಲಕ । **ಪೂಯಮಾನಃ**—ಶುದ್ಧಿಯನ್ನು ಹೊಂದಿ । **ನು**—ಕ್ಷಿಪ್ರವಾಗಿ । **ಅಪ್ಸು**—ವಸತೀವರಿಗಳಲ್ಲಿ ಸೇರಿಕೊಳ್ಳಲು । **ಪರಿ ಸ್ರವ**—ಪ್ರವಹಿಸು । **ಯಃ**—ಯಾವ ನೀನು । **ಸ್ವಾದಿಷ್ಠಃ**—ಅತ್ಯಂತ ರುಚಿಕರನೂ । **ಮಧುಮಾನ್**—ಮಾಧುರ್ಯೋಪೇತನೂ । **ಋತಾವಾ**—ಯಜ್ಞವಂತನೂ । **ಸವಿತಾ**—ಸರ್ವರಿಗೂ ಪ್ರೇರಕನೂ ಆಗಿರುವೆಯೋ ಅಂತಹ ನೀನು । **ದೇವೋ ನ**—ದೇವತಾತ್ಮಕನಾಗಿ ಇಂದ್ರಾದಿ ದೇವತೆಗಳಂತೆ । **ಸತ್ಯಮನ್ಮಾ**—ಸತ್ಯಾತ್ಮಕವಾದ ಪ್ರಶಂಸೆಗೆ ಅರ್ಹನಾಗಿರುತ್ತೀಯೆ.

॥ ಭಾವಾರ್ಥ ॥

ದೇವತಾತ್ಮಕವಾದ ಎಲೈ ಸೋಮದೇವನೇ, ರಥಯುಕ್ತನಾದ ನೀನು ನಮ್ಮ ಯಜ್ಞದಲ್ಲಿ ಹಿಂಡುವ ಹಲಗೆಗಳ ಮೂಲಕ ಶುದ್ಧಿಯನ್ನು ಹೊಂದಿ ಕ್ಷಿಪ್ರವಾಗಿ ವಸತೀವರಿಗಳಲ್ಲಿ ಸೇರಿಕೊಳ್ಳಲು ಪ್ರವಹಿಸು. ಯಾವ ನೀನು ಅತ್ಯಂತ ರುಚಿಕರನೂ, ಮಾಧುರ್ಯೋಪೇತನೂ, ಯಜ್ಞವಂತನೂ, ಸರ್ವರಿಗೂ ಪ್ರೇರಕನೂ ಆಗಿರುವೆಯೋ, ಅಂತಹ ನೀನು ಇಂದ್ರಾದಿ ದೇವತೆಗಳಂತೆ ಸತ್ಯಾತ್ಮಕವಾದ ಪ್ರಶಂಸೆಗೆ ಅರ್ಹನಾಗಿರುತ್ತೀಯೆ.

## English Translation.

Divine, Soma, who are car-borne, being filtered (at) our (sacrifice), flow quickly into the cups ; most sweet-flavoured in the waters, full of madhu, offered at the sacrifice, stimulator of all, who like a god are the object of true praise.

|| ಸಂಹಿತಾಪಾಠಃ ||

ಅಭಿ ವಾಯುಂ ವೀತ್ಯರ್ಷಾ ಗೃಣಾನೋ೩ಽಭಿ ಮಿತ್ರಾವರುಣಾ ಪೂಯಮಾನಃ ।
ಅಭೀ ನರಂ ಧೀಜವನಂ ರಥೇಷ್ಠಾಮಭೀಂದ್ರಂ ವೃಷಣಂ ವಜ್ರಬಾಹುಂ॥೪೯॥

|| ಪದಪಾಠಃ ||

ಅಭಿ । ವಾಯುಂ । ವೀತೀ । ಅರ್ಷ । ಗೃಣಾನಃ । ಅಭಿ । ಮಿತ್ರಾವರುಣಾ । ಪೂಯಮಾನಃ ।
ಅಭಿ । ನರಂ । ಧೀಽಜವನಂ । ರಥೇಽಸ್ಥಾಂ । ಅಭಿ । ಇಂದ್ರಂ । ವೃಷಣಂ । ವಜ್ರಽಬಾಹುಂ ॥ ೪೯ ॥

|| ಸಾಯಣಭಾಷ್ಯಂ ||

ಹೇ ಸೋಮ ಗೃಣಾನಃ ಸ್ತೂಯಮಾನಸ್ತ್ವಂ ವೀತೀ ॥ ಸುಪಾಂ ಸುಲುಗಿತಿ ಚತುರ್ಥ್ಯಾಃ ಪೂರ್ವಸವರ್ಣದೀರ್ಘಃ ॥ ವೀತ್ಯೈ ಪಾನಾಯ ವಾಯುಮಭ್ಯರ್ಷ । ಅಭಿಗಚ್ಛ । ತಥಾ ಪವಿತ್ರೇಣ ಪೂಯಮಾನಸ್ತ್ವಂ ಮಿತ್ರಾವರುಣಾ ಮಿತ್ರಾವರುಣೌ ಚ ಪಾನಾಯಾಭಿಗಚ್ಛ । ಕಿಂಚ ನರಂ ಸರ್ವಸ್ಯ ನೇತಾರಂ ಧೀಜವನಂ ಬುದ್ಧ್ಯಾ ಸಮಂ ವೇಗಂ ಕುರ್ವಾಣಂ ರಥೇಷ್ಠಾಂ ರಥೇಸ್ಥಾಂ ರಥೇ ತಿಷ್ಠಂತಂ । ಅನೇನಾಶ್ವಿನಾವಭಿಧೀಯೇತೇ । ಏಕವಚನಂ ಪ್ರತ್ಯೇಕವಿವಕ್ಷಯಾ ಸಮುದಾಯವಿವಕ್ಷಯಾ ವಾ । ಏತಾವೃಶಾವಶ್ವಿನೌ ಚಾಭಿಗಚ್ಛ । ತಥಾ ವೃಷಣಂ ಕಾಮಾನಾಂ ವರ್ಷಕಂ ವಜ್ರಬಾಹುಂ ವಜ್ರಯುಕ್ತಬಾಹುಮಿಂದ್ರಂ ಚ ತ್ವಂ ಪಾನಾಯಾಭಿಗಚ್ಛ ॥

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಗೃಣಾನಃ**— ಪ್ರಶಂಸಿತನಾದ ನೀನು । **ವೀತೀ**– ಪಾನಾರ್ಥವಾಗಿ । **ವಾಯುಂ**— ವಾಯುವನ್ನುದ್ದೇಶಿಸಿ । **ಅಭ್ಯರ್ಷ**— ಪ್ರವಹಿಸು । **ಪೂಯಮಾನಃ**— ಶುದ್ಧಿಯನ್ನು ಹೊಂದಿ । **ಮಿತ್ರಾವರುಣಾ**— ಮಿತ್ರಾವರುಣರನ್ನುದ್ದೇಶಿಸಿ । **ಅಭಿ**— ಪ್ರವಹಿಸು । **ನರಂ**— ಕರ್ಮನೇತೃಗಳೂ । **ಧೀಜವನಂ**— ವೇಗವಾದ ಬುದ್ಧಿಯುಳ್ಳವರೂ । **ರಥೇಷ್ಠಾಂ**— ರಥದಲ್ಲಿ ಕುಳಿತಿರುವವರೂ ಆದ ಅಶ್ವಿನೀದೇವತೆಗಳಿಗಾಗಿ । **ಅಭಿ**— ಪ್ರವಹಿಸು । **ವೃಷಣಂ**— ಇಷ್ಟಾರ್ಥಪ್ರದನೂ । **ವಜ್ರಬಾಹುಂ**— ಬಾಹುವಿನಲ್ಲಿ ವಜ್ರಾಯುಧವುಳ್ಳವನೂ ಆದ । **ಇಂದ್ರಂ**— ಇಂದ್ರನ ಪಾನಾರ್ಥವಾಗಿಯೂ । **ಅಭಿ**— ಪ್ರವಹಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಪ್ರಶಂಸಿತನಾದ ನೀನು ಪಾನಾರ್ಥವಾಗಿ ವಾಯುವನ್ನುದ್ದೇಶಿಸಿ ಪ್ರವಹಿಸು ಶುದ್ಧಿಯನ್ನು ಹೊಂದಿದ ನೀನು ಮಿತ್ರಾವರುಣರಿಗಾಗಿ ಪ್ರವಹಿಸು. ಕರ್ಮನೇತೃಗಳೂ, ಚುರುಕಾದ ಬುದ್ಧಿಯುಳ್ಳವರೂ, ರಥದಲ್ಲಿ ಕುಳಿತಿರುವವರೂ ಆದ ಅಶ್ವಿನೀದೇವತೆಗಳಿಗಾಗಿ ಪ್ರವಹಿಸು. ಇಷ್ಟಾರ್ಥಪ್ರದನೂ, ಬಾಹುವಿನಲ್ಲಿ ವಜ್ರಾಯುಧವುಳ್ಳವನೂ ಆದ ಇಂದ್ರನ ಪಾನಾರ್ಥವಾಗಿಯೂ ಪ್ರವಹಿಸು.

## English Translation.

Being eulogized, hasten to Vayu, for (him to) drink ; being purified, hasten to Mitra and Varuna ; (hasten) to the leader, who is quick as thought, mounted on a car, to Indra, the showerer, the wielder of the thunder-bolt.

॥ ಸಂಹಿತಾಪಾಠಃ ॥

ಅಭಿ ವಸ್ತ್ರಾ ಸುವಸನಾನ್ಯರ್ಷಾಭಿ ಧೇನೂಃ ಸುದುಘಾಃ ಪೂಯಮಾನಃ ।
ಅಭಿ ಚಂದ್ರಾ ಭರ್ತವೇ ನೋ ಹಿರಣ್ಯಾಭ್ಯಶ್ವಾನ್ರಥಿನೋ ದೇವ ಸೋಮ ॥

॥ ಪದಪಾಠಃ ॥

ಅಭಿ । ವಸ್ತ್ರಾ । ಸುऽವಸನಾನಿ । ಅರ್ಷ । ಅಭಿ । ಧೇನೂಃ । ಸುऽದುಘಾಃ । ಪೂಯಮಾನಃ ।
ಅಭಿ । ಚಂದ್ರಾ । ಭರ್ತವೇ । ನಃ । ಹಿರಣ್ಯಾ । ಅಭಿ । ಅಶ್ವಾನ್ । ರಥಿನಃ । ದೇವ । ಸೋಮ ॥ ೫೦ ॥

। ಸಾಯಣಭಾಷ್ಯಂ ॥

ಹೇ ಸೋಮ ತ್ವಮಸ್ಮಾಕಂ ಸುವಸನಾನಿ ಸುಪರಿಧಾನಾನಿ ವಸ್ತ್ರಾ ವಸ್ತ್ರಾಣ್ಯಭ್ಯರ್ಷ' ಅಭಿಗಮಯ । ಯದ್ವಾ । ಸುವಸನಾನಿ ಶೋಭನವಸ್ತ್ರಸಹಿತಾನಿ ವಸ್ತ್ರಾಚ್ಛಾದಕಾನಿ ಧನಾನ್ಯಭಿಗಮಯ । ಕಿಂಚ ಪೂಯಮಾನಃ ಪವಿತ್ರೇಣ ತ್ವಂ ಸುದುಘಾಃ ಸುಷ್ಠು ಪಯಸೋ ದೋಗ್ಧ್ರೀರ್ಧೇನೂರ್ನವಪ್ರಸೂತಿಕಾ ಗಾ ಅಭಿಪ್ರಾಪಯ । ಅಪಿ ಚ ಚಂದ್ರಾ ಚಂದ್ರಾಣ್ಯಾಹ್ಲಾದಕಾನಿ ಹಿರಣ್ಯಾ ಹಿರಣ್ಯಾನಿ ಭರ್ತವೇ ಭರಣಾಯ ಪೋಷಣಾಯ ನೋऽಸ್ಮಾಕಮಭಿಗಮಯ । ತಥಾ ಹೇ ದೇವ ಸ್ತೋತವ್ಯ ಹೇ ಸೋಮ ರಥಿನೋ ರಥವತೋऽಶ್ವಾನಸ್ಮಾಕಮಭಿಪ್ರಾಪಯ ॥

॥ ಪ್ರತಿಪದಾರ್ಥ ॥

**ಸೋಮ** - ಎಲೈ ಸೋಮದೇವನೇ । **ಸುವಸನಾನಿ**— ಹೊದ್ದುಕೊಳ್ಳಲು ಯೋಗ್ಯವಾದ । **ವಸ್ತ್ರಾ**— ವಸ್ತ್ರಗಳನ್ನು । **ಅಭ್ಯರ್ಷ**— ಒದಗಿಸು । **ಪೂಯಮಾನಃ**— ಶುದ್ಧಿಯನ್ನು ಹೊಂದಿದ ನೀನು । **ಸುದುಘಾಃ**— ಉತ್ತಮವಾಗಿ ಕರೆಯತಕ್ಕ । **ಧೇನೂಃ**— ಗೋವುಗಳನ್ನು । **ಅಭಿ**— ಒದಗಿಸು। **ಭರ್ತವೇ**- ನಮ್ಮ ಪೋಷಣೆಗಾಗಿ ।

**ಚಂದ್ರಾ**—ಆಹ್ಲಾದಕರವಾದ | **ಹಿರಣ್ಯಾ**—ಸುವರ್ಣಗಳನ್ನು | **ನಃ**—ನಮಗೆ | **ಅಭಿ**—ಒದಗಿಸು | **ದೇವ**—ಪೂಜ್ಯನಾದ ಎಲೈ ಸೋಮನೇ | **ರಥಿನಃ**—ರಥಯುಕ್ತವಾದ | **ಅಶ್ವಾನ್**—ಅಶ್ವಗಳನ್ನು | **ಅಭಿ**—ನಮಗೆ ಒದಗಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ಹೊದ್ದುಕೊಳ್ಳಲು ಯೋಗ್ಯವಾದ ವಸ್ತ್ರಗಳನ್ನು ನಮಗೆ ಒದಗಿಸು. ಶುದ್ಧಿಯನ್ನು ಹೊಂದಿದ ನೀನು ಉತ್ತಮವಾಗಿ ಕರೆಯತಕ್ಕ ಗೋವುಗಳನ್ನು ಒದಗಿಸು. ನಮ್ಮ ಪೋಷಣೆಗಾಗಿ ಆಹ್ಲಾದಕರವಾದ ಹಿರಣ್ಯಗಳನ್ನು ಒದಗಿಸು. ಪೂಜ್ಯನಾದ ಎಲೈ ಸೋಮನೇ, ರಥಯುಕ್ತವಾದ ಅಶ್ವಗಳನ್ನು ನಮಗೆ ಒದಗಿಸು.

## English Translation.

Bring us handsome garments, bring us, when you are purified, cows easily milked ; bring for our maintenance gratifying gold ; divine Soma bring us horses fit for chariots.

|| ಸಂಹಿತಾಪಾಠಃ ||

ಅಭೀ ನೋ ಅರ್ಷ ದಿವ್ಯಾ ವಸೂನ್ಯಭಿ ವಿಶ್ವಾ ಪಾರ್ಥಿವಾ ಪೂಯಮಾನಃ |
ಅಭಿ ಯೇನ ದ್ರವಿಣಮಶ್ನವಾಮಾಭ್ಯಾರ್ಷೇಯಂ ಜಮದಗ್ನಿವನ್ನಃ || ೫೧ ||

|| ಪದಪಾಠಃ ||

ಅಭಿ | ನಃ | ಅರ್ಷ | ದಿವ್ಯಾ | ವಸೂನಿ | ಅಭಿ | ವಿಶ್ವಾ | ಪಾರ್ಥಿವಾ | ಪೂಯಮಾನಃ |
ಅಭಿ | ಯೇನ | ದ್ರವಿಣಂ | ಅಶ್ನವಾಮ | ಅಭಿ | ಆರ್ಷೇಯಂ | ಜಮದಗ್ನಿsವತ್ | ನಃ || ೫೧ ||

|| ಸಾಯಣಭಾಷ್ಯಂ ||

ಹೇ ಸೋಮ ಪವಿತ್ರೇಣ ಪೂಯಮಾನಸ್ತ್ವಂ ದಿವ್ಯಾ ದಿವ್ಯಾನಿ ದಿವಿ ಭವಾನಿ ವಸೂನಿ ಧನಾನಿ ನೋಽಸ್ಮಾಕಮಭ್ಯರ್ಷ | ಅಭಿಗಮಯ | ತಥಾ ಪಾರ್ಥಿವಾ ಪಾರ್ಥಿವಾನಿ ಪೃಥಿವ್ಯಾಂ ಭವಾನಿ ವಿಶ್ವಾ ಸರ್ವಾಣಿ ಧನಾನ್ಯಭಿಗಮಯ | ತಥಾ ಯೇನ ತ್ವದೀಯೇನ ಸಾಮರ್ಥ್ಯೇನ ದ್ರವಿಣಂ ಧನಂ ವಯಮಭ್ಯಶ್ನವಾಮ ಅಭಿವ್ಯಾಪ್ನುವಾಮ ತತ್ಸಾಮರ್ಥ್ಯಮಭಿಗಮಯ | ಕಿಂಚಾರ್ಷೇಯಮಾರ್ಷಾಣಾಮೃಷಿಪುತ್ರಾಣಾಂ ಯೋಗ್ಯಂ ಧನಂ ಜಮದಗ್ನಿವಜ್ಜಮದಗ್ನೇರ್ಯಥಾ ತ್ವಂ ಪ್ರಾಪಯಃ ಏವಂ ನೋಽಸ್ಮಾಕಮಪ್ಯಭ್ಯರ್ಷ | ಯದ್ವಾ | ಆರ್ಷೇಯಮಾರ್ಷಾಣಾಂ ಯೋಗ್ಯಂ ಮಂತ್ರಂ ಜಮದಗ್ನೇಃ ಸ್ವಭೂತಂ ಮಂತ್ರಂ ಯಥಾ ಸ್ವಾದುತಮಮಕಾರ್ಷೀಃ ಏವಮಸ್ಮಾಕಂ ತಾದೃಶಂ ಮಂತ್ರಂ ಸ್ವಾದುತಮಂ ಕುರ್ವಿತಿ ಕುತ್ಸೋ ನಾಮರ್ಷಿಃ ಪ್ರಾರ್ಥಯತೇ ||

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) । **ಪೂಯಮಾನಃ**—ಶುದ್ಧಿಯನ್ನು ಹೊಂದಿದಾಗ ನೀನು । **ದಿವ್ಯಾ**—ದ್ಯುಲೋಕಸಂಬಂಧಿಯಾದ । **ವಸೂನಿ**—ಧನಗಳನ್ನು । **ನಃ**—ನಮಗೆ । **ಅಭ್ಯರ್ಷ**—ಒದಗಿಸು । **ವಿಶ್ವಾ**—ಸಮಸ್ತವಾದ । **ಪಾರ್ಥಿವಾ**—ಪೃಥಿವ್ಯುತ್ಪನ್ನವಾದ ಧನಗಳನ್ನೂ । **ಅಭಿ**—ಒದಗಿಸು । **ಯೇನ**—ಯಾವ ಸಾಮರ್ಥ್ಯದಿಂದ । **ದ್ರವಿಣಂ**—ಧನವನ್ನು । **ಅಶ್ನವಾಮ**—ನಾವು ಹೊಂದುವೆವೋ ಆ ಶಕ್ತಿಯನ್ನು । **ಅಭಿ**—ಕೊಡು । **ಆರ್ಷೇಯಂ**—ಋಷಿಯೋಗ್ಯವಾದ ಧನವನ್ನು । **ಜಮದಗ್ನಿವತ್**—ಜಮದಗ್ನಿಗೆ ಕೊಟ್ಟಂತೆ । **ನಃ**—ನಮಗೂ । **ಅಭಿ**—ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಶುದ್ಧಿಯನ್ನು ಹೊಂದಿದಾಗ ನಮಗೆ ದ್ಯುಲೋಕೋತ್ಪನ್ನವೂ, ಪೃಥಿವ್ಯುತ್ಪನ್ನವೂ ಆದ ಸಕಲ ಧನಗಳನ್ನೂ ಒದಗಿಸು, ನಮಗೆ ಧನವನ್ನು ಹೊಂದುವ ಸಾಮರ್ಥ್ಯವನ್ನು ಕೊಡು. ಹಿಂದೆ ಜಮದಗ್ನಿಗೆ ಋಷಿಯೋಗ್ಯವಾದ ಧನವನ್ನು ಕೊಟ್ಟಂತೆ ನಮಗೂ ಕೊಡು.

## English Translation.

Bring us celestial treasures, bring us all earthly (treasures) when you are purified ; bring us (the ability) whereby we may acquire riches, make our sacred prayer (sweet) as Jamadagni.

ವಿಶೇಷ ವಿಷಯಗಳು

ಜಮದಗ್ನಿಮಹರ್ಷಿಯು ವಿಶ್ವಾಮಿತ್ರನಿಗೆ ಆಪ್ತಮಿತ್ರನು. ಋಕ್ಸಂಹಿತೆಯಲ್ಲಿ, ೩-೬೨-೧೬ ರಿಂದ ೧೮ ; ೮-೧೦೧ ; ೯-೬೨ ; ೯-೬೫ ; ೯-೬೭-೧೬ ರಿಂದ ೧೮ ; ೧೦-೧೧೦ ; ೧೦-೧೩೭-೬ ; ೧೦-೧೬೭ ಇವಿಷ್ಟು ಮಂತ್ರಗಳೂ ಜಮದಗ್ನಿಕೃತವೆಂದು ಪ್ರಸಿದ್ಧವಾಗಿವೆ. ಇವನು ಭೃಗುಪುತ್ರನು. ಆದುದರಿಂದ ಜಮದಗ್ನಿಭಾರ್ಗವ ಎಂದೇ ಪ್ರಸಿದ್ಧನಾಗಿದ್ದಾನೆ. **ಗೃಣಾನೋ ಜಮದಗ್ನಿನಾ** ಎಂದು ತನ್ನ ಸ್ತುತಿಯನ್ನು ಅನೇಕಕಡೆಗಳಲ್ಲಿ ವಾಚ್ಯವಾಗಿ ಹೇಳಿಕೊಂಡಿದ್ದಾನೆ. (ಋ. ಸಂ. ೯-೬೨-೨೪ ; ೯-೬೫-೨೫ ಇತ್ಯಾದಿ).

**ಪ್ರಸೂತೋ ಭಕ್ಷಮಕರಂ ಚರಾವಪಿ ಸ್ತೋಮಂ ಚೇಮಂ ಪ್ರಥಮಃ ಸೂರಿರುನ್ಮೃಜೇ ।**
**ಸುತೇ ಸಾತೇನ ಯದ್ಯಾಗಮಂ ವಾಂ ಪ್ರತಿ ವಿಶ್ವಾಮಿತ್ರಜಮದಗ್ನೀ ದಮೇ ॥**

(ಋ. ಸಂ. ೧೦-೧೬೭-೪)

ಎಂಬಲ್ಲಿ ಇಂದ್ರನು ವಿಶ್ವಾಮಿತ್ರಜಮದಗ್ನಿಗಳಿಬ್ಬರನ್ನೂ ಒಟ್ಟಿಗೆ ಸೇರಿಸಿ ಸಂಬೋಧಿಸಿ ತನ್ನ ಅನುಗ್ರಹವನ್ನು ವ್ಯಕ್ತಪಡಿಸಿದ್ದಾನೆ. ಈ ವಿಧವಾದ ಸಾಹಚರ್ಯವು ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ವಸಿಷ್ಠನೊಂದಿಗೆ ಹೋರಾಡಲು ಸಮರ್ಥನಾದನು ಎಂಬ ವಿಷಯವೂ ಸಹ ಸಂಹಿತಾದಿಗಳಲ್ಲಿ ಪ್ರಸಿದ್ಧವಾಗಿದೆ.

**ವಿಶ್ವಾಮಿತ್ರಜಮದಗ್ನೀವಸಿಷ್ಠೇನಾಸ್ಪರ್ಧೇತಾಗ್‍ಂ ಸ ಏತಜ್ಜಮದಗ್ನಿರ್ವಿಹವ್ಯಮಪಶ್ಯತ್ತೇನ ವೈ ಸ ವಸಿಷ್ಠಸ್ಯೇಂದ್ರಿಯಂ ವೀರ್ಯಮವೃಂಕ್ತ ॥**

(ತೈ. ಸಂ. ೩-೧-೭-೩)

ವಿಶ್ವಾಮಿತ್ರ ಮತ್ತು ಜಮದಗ್ನಿ ಇಬ್ಬರೂ ಸಹ ವಸಿಷ್ಠನೊಂದಿಗೆ ಹೋರಾಡುತ್ತಿದ್ದಾಗ ಜಮದಗ್ನಿಯು **ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ** ಎಂಬ ಮಂತ್ರದಿಂದ ಆರಂಭವಾಗುವ ವಿಹವ್ಯ ಸೂಕ್ತದ ದರ್ಶನವನ್ನು ಪಡೆದನು (ಋ. ಸಂ. ೧೦-೧೨೮). ಇದರ ಸಹಾಯದಿಂದ ವಸಿಷ್ಠನ ಶಕ್ತಿಯನ್ನೆಲ್ಲಾ ತಾನೇ ಪಡೆದನು ಎಂದು ತೈತ್ತಿರೀಯಸಂಹಿತೆಯಲ್ಲಿ ಕಥಾರೂಪದಲ್ಲಿ ತಿಳಿಸಿದೆ. ಬೃಹದ್ದೇವತೆಯಲ್ಲಿಯೂ ಸಹ ಇದೇರೀತಿಯಾದ ಇನ್ನೊಂದು ಐತಿಹಾಸಿಕಸನ್ನಿವೇಶವು ಈ ರೀತಿ ಉಕ್ತವಾಗಿದೆ.

**ಸುದಾಸಶ್ಚ ಮಹಾಯಜ್ಞೇ ಶಕ್ತಿನಾ ಗಾಧಿಸೂನವೇ ।**
**ನಿಗೃಹೀತಂ ಬಲಾಚ್ಚೇತಃ ಸೋಽವಸೀದದ್ವಿಚೇತನಃ ।**
**ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ ।**
**ಸೂರ್ಯಕ್ಷಯಾದಿಹಾಹೃತ್ಯ ದದುಸ್ತೇ ಜಮದಗ್ನಯಃ ।**
**ಕುಶಿಕಾನಾಂ ತತಃ ಸಾ ವಾಗಮತಿಂ ತಾಮುಪಾಹನತ್ ॥**

(ಬೃ. ದೇ. ೪-೧೧೨ ರಿಂದ ೧೧೪)

ಸುದಾಸನ ಮಹಾಯಾಗದಲ್ಲಿ ವಸಿಷ್ಠಪುತ್ರನಾದ ಶಕ್ತಿಯಿಂದ ಹೊಡೆಯಲ್ಪಟ್ಟ ಗಾಧಿಪುತ್ರನು (ವಿಶ್ವಾಮಿತ್ರನು) ಮೂರ್ಛೆಹೊಂದಿದನು ಮತ್ತು ಜ್ಞಾನಶೂನ್ಯನಾಗಿ ಕೆಳಕ್ಕೆ ಬಿದ್ದುಬಿಟ್ಟನು. ಆಗ ಜಮದಗ್ನಿಗಳು ಸೂರ್ಯಪುತ್ರಿಯಾದ (ಅಥವಾ ಬ್ರಹ್ಮಪುತ್ರಿಯಾದ) **ಸಸರ್ಪರೀ**ನಾಮಕವಾದ ವಾಕ್ಕಿನ ಸಹಾಯವನ್ನು ಒದಗಿಸಿದರು. ಆ ವಾಗ್ದೇವಿಯು ಕುಶಿಕಪುತ್ರರ ಮೂರ್ಛೆಯನ್ನು ಹೋಗಲಾಡಿಸಿ ಅವರಿಗೆ ಪ್ರಜ್ಞೆಯು ಬರುವಂತೆ ಮಾಡಿದಳು ಎಂದು ಹೇಳಿದೆ. ಇದೇ ಸಂದರ್ಭವನ್ನು ಋಕ್ಸಂಹಿತೆಯಲ್ಲಿ—

**ಸಸರ್ಪರೀರಮತಿಂ ಬಾಧಮಾನಾ ಬೃಹನ್ಮಿಮಾಯ ಜಮದಗ್ನಿದತ್ತಾ ।**
**ಆ ಸೂರ್ಯಸ್ಯ ದುಹಿತಾ ತತಾನ ಶ್ರವೋ ದೇವೇಷ್ವಮೃತಮಜುರ್ಯಂ ॥**

(ಋ. ಸಂ. ೩-೫೩-೧೫)

ಇತ್ಯಾದಿ ಋಕ್ಕುಗಳಲ್ಲಿ ಸೂಚಿಸಿದೆ. ಇದರ ವಿಶೇಷಾರ್ಥವನ್ನು ಹಿಂದೆ ತಿಳಿಸಿದೆ.

ಈ ರೀತಿ ಕಥಾಸಂದರ್ಭಗಳನ್ನು ತಿಳಿಸುವಾಗಲೂ ಸಹ ಜಮದಗ್ನಿಪದಕ್ಕೆ ಕೆಲವುವೇಳೆ ಆಧ್ಯಾತ್ಮಿಕದೃಷ್ಟಿಯಿಂದಲೂ ಅರ್ಥವನ್ನು ಹೇಳಿದೆ. ಇಂತಹ ಸಂದರ್ಭಗಳಲ್ಲಿ ಜಮದಗ್ನಿಯು ಪ್ರಜಾಪತಿಯ ಪುತ್ರನೆಂದೂ ಜಗತ್ತತ್ತ್ವವನ್ನು ತನ್ನ ದಿವ್ಯದೃಷ್ಟಿಯಿಂದ ವೀಕ್ಷಿಸಿ ಪ್ರಪಂಚಕ್ಕೆ ಜ್ಞಾನರೂಪವಾದ ಪ್ರಕಾಶವನ್ನುಂಟುಮಾಡಿದನೆಂದೂ ತಿಳಿಸಿದೆ. ಉದಾಹರಣೆಗೆ—

**ಪ್ರಜಾಪತಿರ್ವಿರಾಜಮಪಶ್ಯತ್ತಯಾ ಭೂತಂ ಚ ಭವ್ಯಂ ಚಾಸೃಜತ ತಾಮೃಷಿಭ್ಯಸ್ತಿರೋಽದಧಾತ್ತಾಂ ಜಮದಗ್ನಿಸ್ತಪಸಾಽಪಶ್ಯತ್ತಯಾ ವೈ ಸ ಪೃಶ್ನೀನ್ಕಾಮಾನಸೃಜತ ।**

(ತೈ. ಸಂ. ೩-೩-೫-೨)

ಪ್ರಜಾಪತಿಯು ವಿರಾಟ್‌ದರ್ಶನವನ್ನು ಪಡೆದನು. ಅದರ ಸಹಾಯದಿಂದ ಭೂತವನ್ನೂ ಭವಿಷ್ಯತ್ತನ್ನೂ ಸೃಷ್ಟಿಸಿದನು. ಆದರೆ ಅವೆರಡನ್ನೂ ಋಷಿಗಳ ಗೋಚರಕ್ಕೂ ಬೀಳದಂತೆ ಮಾಡಿದನು. ಆಗ ಜಮದಗ್ನಿಯು ತನ್ನ ತಪಸ್ಸಿನ ಮಹಿಮೆ

ಯಿಂದ ಅವುಗಳ ದರ್ಶನವನ್ನು ಪಡೆದು ಅವುಗಳಿಂದ ಅನೇಕವಿಧವಾದ ಕಾಮವಿಷಯಗಳನ್ನು ಸೃಷ್ಟಿಸಿದನು ಎಂದು ಅವನ ದಿವ್ಯದರ್ಶನಶಕ್ತಿಯನ್ನು ವರ್ಣಿಸಿದೆ. ಇದೇವಿಧವಾಗಿ ಜಮದಗ್ನಿಯು ಆಧ್ಯಾತ್ಮಿಕತತ್ತ್ವವನ್ನು ಪ್ರತಿಬಿಂಬಿಸುವ ಅಂಶವೆಂಬುದನ್ನು ಉಪನಿಷತ್ತುಗಳು ತಿಳಿಸುತ್ತವೆ.

**ಇಮಾವೇವ ಗೋತಮಭಾರದ್ವಾಜೌ, ಅಯಮೇವ ಗೋತಮಃ, ಅಯಂ ಭಾರದ್ವಾಜಃ ।**
**ಇಮಾವೇವ ವಿಶ್ವಾಮಿತ್ರಜಮದಗ್ನೀ, ಅಯಮೇವ ವಿಶ್ವಾಮಿತ್ರಃ, ಅಯಂ ಜಮದಗ್ನಿಃ ।**

(ಬೃ. ಉ. ೨-೨-೪)

ಎಂದು ಬೃಹದಾರಣ್ಯಕದಲ್ಲಿ ಶರೀರತತ್ತ್ವವನ್ನು ವಿವರಿಸುವಾಗ ತಿಳಿಸಿದೆ. ಅವುಗಳಲ್ಲಿ ಗೋತಮ ಮತ್ತು ಭರದ್ವಾಜರು ಶ್ರೋತೃತತ್ತ್ವಪ್ರತಿಪಾದಕರು. ವಿಶ್ವಾಮಿತ್ರ ಮತ್ತು ಜಮದಗ್ನಿಗಳು ಚಕ್ಷುಸ್ತತ್ತ್ವಪ್ರತಿಪಾದಕರು. ವಿಶ್ವಾಮಿತ್ರನೇ ದಕ್ಷಿಣಚಕ್ಷುಸ್ಸು ಮತ್ತು ಜಮದಗ್ನಿಯೇ ವಾಮಚಕ್ಷುಸ್ಸು ಎಂದಿದೆ. ಆದರೆ ಇಲ್ಲಿ ಕೇವಲ ಭೌತಿಕವಾದ ಚಕ್ಷುಸ್ಸೆಂದು ಮಾತ್ರವಲ್ಲ. ಜ್ಞಾನಚಕ್ಷುಸ್ಸೆಂದೂ ಅರ್ಥಮಾಡಿಕೊಳ್ಳಬೇಕು. ಹೇಗೆಂದರೆ—

**ಪ್ರಜಾಪತಿರ್ವೈ ಜಮದಗ್ನಿಃ, ಸೋಽಶ್ವಮೇಧಃ ।**

(ಶ. ಬ್ರಾ. ೧೩-೨ ೨-೧೪)

ಎಂಬ ವಾಕ್ಯದಲ್ಲಿ ಯಾವ ಜಮದಗ್ನಿಯನ್ನು ಪ್ರಜಾಪತಿಯೆಂದೇ ನಿರ್ದೇಶಿಸಿದೆಯೋ ಅಂತಹ ಜಮದಗ್ನಿಯ ವಿಶೇಷ ಗುಣವೇನೆಂದರೆ,

**ಜಮದಗ್ನಿರ್ಋಷಿರಿತಿ । ಚಕ್ಷುರ್ವೈ ಜಮದಗ್ನಿರ್ಋಷಿರ್ಯದೇನೇನ ಜಗತ್ಪಶ್ಯತ್ಯಥೋ ಮನುತೇ ತಸ್ಮಾಚ್ಚಕ್ಷುರ್ಜಮದಗ್ನಿರ್ಋಷಿಃ ಪ್ರಜಾಪತಿಗೃಹೀತಯಾ ತ್ವಯೇತಿ ಪ್ರಜಾಪತಿಸೃಷ್ಟಯಾ ತ್ವಯೇತ್ಯೇತಚ್ಚಕ್ಷುರ್ಗೃಹ್ಣಾಮಿ ॥**

(ಶ. ಬ್ರಾ ೮-೧-೨೩)

ಮಹರ್ಷಿಯಾದ ಜಮದಗ್ನಿಯೇ ಚಕ್ಷುಸ್ಸು. ಜಗತ್ತೆಲ್ಲವೂ ಯಾವುದರ ಸಹಾಯದಿಂದ ದರ್ಶನಶಕ್ತಿಯನ್ನೂ ಚೇತನ ಶಕ್ತಿಯನ್ನೂ ಪಡೆಯುವುದೋ ಅಂತಹ ದಿವ್ಯಚಕ್ಷುಸ್ಸೇ ಜಮದಗ್ನಿಯು. ಪ್ರಜಾಪತಿಸೃಷ್ಟನಾದ ಎಲೈ ಜಮದಗ್ನಿಯೇ, ನಿನ್ನ ದಿವ್ಯಾನುಗ್ರಹದಿಂದ ನನ್ನ ಸಂತತಿಗೆಲ್ಲಾ ದರ್ಶನಶಕ್ತಿಯು ಲಭಿಸಲಿ ಎಂದು ಆಧ್ಯಾತ್ಮಿಕತತ್ತ್ವವನ್ನರಿಯುವ ದಿವ್ಯಜ್ಞಾನಕ್ಕಾಗಿ ಜಮದಗ್ನಿಯನ್ನು ಪ್ರಾರ್ಥಿಸಿದೆ. ಈ ತಾತ್ಪರ್ಯವನ್ನೇ ತೈತ್ತಿರೀಯಾರಣ್ಯಕದಲ್ಲೂ ತಿಳಿಸುತ್ತಾ,

**ಯದಕ್ಷರಂ ಭೂತಕೃತಂ । ವಿಶ್ವೇದೇವಾ ಉಪಾಸತೇ । ಮಹರ್ಷಿಮಸ್ಯ ಗೋಪ್ತಾರಂ । ಜಮದಗ್ನಿಮಕುರ್ವತ । ಜಮದಗ್ನಿರಾಪ್ಯಾಯತೇ । ಛಂದೋಭಿಶ್ಚತುರುತ್ತರೈಃ । ರಾಜ್ಞಸ್ಸೋಮಸ್ಯ ತೃಪ್ತಾಸಃ ॥**

(ತೈ. ಆ. ೧-೯-೭)

ಎಂಬ ವಾಕ್ಯಗಳಿಂದ ಜಮದಗ್ನಿಯು ಅಕ್ಷರಾತ್ಮಕನಾದ ಪರಮಾತ್ಮಸ್ವರೂಪನೆಂದೇ ತಿಳಿಸಿದೆ.

॥ ಸಂಹಿತಾಪಾಠಃ ॥

ಅಯಾ ಪವಾ ಪವಸ್ವೈನಾ ವಸೂನಿ ಮಾಂಶ್ಚತ್ವ ಇಂದೋ ಸರಸಿ ಪ್ರ ಧನ್ವ ।
ಬ್ರಧ್ನಶ್ಚಿದತ್ರ ವಾತೋ ನ ಜೂತಃ ಪುರುಮೇಧಶ್ಚಿತ್ತಕವೇ ನರಂ ದಾತ್ ॥೫೨॥

॥ ಪದಪಾಠಃ ॥

ಅಯಾ । ಪವಾ । ಪವಸ್ವ । ಏನಾ । ವಸೂನಿ । ಮಾಂಶ್ಚತ್ವೇ । ಇಂದೋ ಇತಿ । ಸರಸಿ । ಪ್ರ । ಧನ್ವ ।
ಬ್ರಧ್ನಃ । ಚಿತ್ । ಅತ್ರ । ವಾತಃ । ನ । ಜೂತಃ । ಪುರುಽಮೇಧಃ । ಚಿತ್ । ತಕವೇ । ನರಂ । ದಾತ್ ॥೫೨॥

॥ ಸಾಯಣಭಾಷ್ಯಂ ॥

ಹೇ ಸೋಮ ಅಯಾನಯಾ ಪವಾ ಪವಮಾನಯಾ ಧಾರಯಾ ಸಹೈನೈನಾನಿ ವಸೂನಿ ಧನಾನಿ ಪವಸ್ವ । ಕ್ಷರ ॥ ಪವಾ । ಪೂಙ್ ಪವನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್‌ಪ್ರತ್ಯಯಃ । ಆರ್ಧಧಾತುಕಲಕ್ಷಣೋ ಗುಣಃ । ಸಾವೇಕಾಚ ಇತಿ ತೃತೀಯಾಯಾ ಉದಾತ್ತತ್ವಂ ॥ ತಥಾ ಹೇ ಇಂದೋ ತ್ವಂ ಮಾಂಶ್ಚತ್ವೇ ಮನ್ಯಮಾನಾನಾಂ ಚಾತಕೇ ಸರಸ್ಯುದಕೇ ವಸತೀವರ್ಯಾಖ್ಯೇ ಪ್ರ ಧನ್ವ । ಪ್ರಗಚ್ಛ । ತತೋಽತ್ರಾಸ್ಮಿನ್ಸೋಮೇ ಪೂಯಮಾನೇ ಸತಿ ಬ್ರಧ್ನಶ್ಚಿತ್ ಸರ್ವೇಷಾಂ ಪ್ರಜ್ಞಾಪಕೋ ಮೂಲಭೂತೋ ವಾದಿತ್ಯೋಽಪಿ ವಾತೋ ನ ವಾತ ಇವ ಜೂತೋ ವೇಗಿತಃ ಸನ್ ಕಿಂಚ ಪುರುಮೇಧಶ್ಚಿದ್ಬಹುವಿಧಯಜ್ಞ ಇಂದ್ರಶ್ಚಿದಿಂದ್ರೋಽಪಿ ತಕವೇ ॥ ತಕತಿರ್ಗತಿಕರ್ಮಸು ಪಠಿತಃ । ಅಸ್ಮಾದೌಣಾದಿಕ ಉಪ್ರತ್ಯಯಃ ॥ ಸೋಮಮಭಿಗಚ್ಛತೇ ಸ್ತುತಿಭಿರ್ಮಹ್ಯಂ ನರಂ ಕರ್ಮನೇತಾರಂ ಪುತ್ರಂ ದಾತ್ । ಪ್ರಯಚ್ಛತು । ಹೇ ಸೋಮ ತ್ವಯಾ ತರ್ಪಿತಾ ಸಂತಾವಿಂದ್ರಾದಿತ್ಯೌ ಮಹ್ಯಂ ಪುತ್ರಂ ಪ್ರಯಚ್ಛತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಅಯಾ ಪವಾ**— ಪರಿಶುದ್ಧಿಯನ್ನು ಹೊಂದಿದ ನಿನ್ನ ಧಾರೆಯೊಡನೆ । **ಏನಾ ವಸೂನಿ**— ಪ್ರಸಿದ್ಧವಾದ ಧನಗಳನ್ನೂ । **ಪವಸ್ವ**— ಒದಗಿಸು । **ಇಂದೋ**— ಎಲೈ ಸೋಮನೇ । **ಮಾಂಶ್ಚತ್ವೇ**— ಹಳದಿಬಣ್ಣವುಳ್ಳ । **ಸರಿಸಿ**— ವಸತೀವರಿಗಳೊಂದಿಗೆ ಸೇರಿಕೊಳ್ಳಲು । **ಪ್ರ ಧನ್ವ**— ಪ್ರವಹಿಸು । **ಅತ್ರ**— ಈ ಸೋಮಯಾಗದ ಫಲವಾಗಿ । **ವಾತೋ ನ ಜೂತಃ**— ವಾಯುವಿನಂತೆ ವೇಗಗಾಮಿಯಾದ । **ಬ್ರಧ್ನಶ್ಚಿತ್**— ಆದಿತ್ಯನೂ । **ಪುರುಮೇಧಶ್ಚಿತ್**— ಅನೇಕ ಯಾಗಗಳಿಗೆ ಭಾಗಿಯಾದ ಇಂದ್ರನೂ । **ತಕವೇ**— (ಸ್ತುತಿಯೊಡನೆ ಸೋಮನನ್ನು ಸಮೀಪಿಸುವ) ಸ್ತುತಿಕರ್ತನಾದ ನನಗೆ । **ನರಂ**— ಪುತ್ರನನ್ನು । **ದಾತ್**— ಕೊಡಲಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ಪರಿಶುದ್ಧಿಯನ್ನು ಹೊಂದಿದ ನಿನ್ನ ಧಾರೆಯೊಡನೆ ಪ್ರಸಿದ್ಧವಾದ ಧನಗಳನ್ನೂ ಒದಗಿಸು. ಎಲೈ ಸೋಮನೇ, ಹಳದಿಬಣ್ಣವುಳ್ಳ ವಸತೀವರಿಗಳೊಂದಿಗೆ ಸೇರಿಕೊಳ್ಳಲು ಪ್ರವಹಿಸು ಈ ಸೋಮ

ಯಾಗದ ಫಲವಾಗಿ ವಾಯುವಿನಂತೆ ವೇಗಗಾಮಿಯಾದ ಆದಿತ್ಯನೂ, ಅನೇಕ ಯಾಗಗಳಿಗೆ ಭಾಗಿಯಾದ ಇಂದ್ರನೂ, ಸ್ತುತಿಕರ್ತನಾದ ನನಗೆ ಪುತ್ರನನ್ನು ಕೊಡಲಿ.

## English Translation.

With this filtered stream pour on us those treasures ; do you, Indu, advance to the brown water ; at this rite may the sun, rapid as the wind, may (Indra) the object of many sacrifices grant a son to me approaching (the Soma).

॥ ಸಂಹಿತಾಪಾಠಃ ॥

ಉತ ನ ಏನಾ ಪವಯಾ ಪವಸ್ವಾಧಿ ಶ್ರುತೇ ಶ್ರವಾಯ್ಯಸ್ಯ ತೀರ್ಥೇ ।
ಷಷ್ಟಿಂ ಸಹಸ್ರಾ ನೈಗುತೋ ವಸೂನಿ ವೃಕ್ಷಂ ನ ಪಕ್ವಂ ಧೂನವದ್ರಣಾಯ ॥

॥ ಪದಪಾಠಃ ॥

ಉತ । ನಃ । ಏನಾ । ಪವಯಾ । ಪವಸ್ವ । ಅಧಿ । ಶ್ರುತೇ । ಶ್ರವಾಯ್ಯಸ್ಯ । ತೀರ್ಥೇ ।
ಷಷ್ಟಿಂ । ಸಹಸ್ರಾ । ನೈಗುತಃ । ವಸೂನಿ । ವೃಕ್ಷಂ । ನ । ಪಕ್ವಂ । ಧೂನವತ್ । ರಣಾಯ ॥ ೫೩ ॥

॥ ಸಾಯಣಭಾಷ್ಯಂ ॥

ಹೇ ಸೋಮ ಉತಾಪಿ ಚ ಶ್ರವಾಯ್ಯಸ್ಯ ಸರ್ವೈಃ ಶ್ರವಣೀಯಸ್ಯ ಸೋಮಸ್ಯ ತವ ಶ್ರುತೇ ಪ್ರಸಿದ್ಧೇ । ಯದ್ವಾ । ಷಷ್ಠ್ಯರ್ಥೇ ಚತುರ್ಥೀ । ಶ್ರುತಸ್ಯ ಶಬ್ದಸ್ಯ ತೀರ್ಥೇ ಸ್ಥಾನೇ ನೋಽಸ್ಮಾಕಂ ಸ್ವಭೂತೇ ಯಜ್ಞೇ ಏನಾನಯಾ ಪವಯಾ ಪೂಯಮಾನಯಾ ಧಾರಯಾಧ್ಯಧಿಕಂ ಪವಸ್ವ । ಕ್ಷರ । ನೈಗುತಃ । ನೀಚೀನಂ ಗಮಂತೇ ಶಬ್ದಾಯಂತ ಇತಿ ನಿಗುತಃ ಶತ್ರವಃ । ತೇಷಾಂ ಹಂತೃತ್ವೇನ ಸಂಬಂಧೀ ಸೋಽಯಂ ಸೋಮಃ ಷಷ್ಟಿಂ ಸಹಸ್ರಾ ಷಷ್ಟಿಸಂಖ್ಯಾಕಾನಿ ಸಹಸ್ರಾಣಿ ವಸೂನಿ ಧನಾನಿ ರಣಾಯ ಶತ್ರೂಣಾಂ ಜಯಾರ್ಥಂ ಧೂನವತ್ । ಅಸ್ಮಾಕಮಕಂಪಯತ್ । ಪ್ರಾಯಚ್ಛದಿತಿ ಯಾವತ್ । ಕಥಮಿವ । ವೃಕ್ಷಂ ನ ಪಕ್ವಂ ಪಕ್ವಫಲಂ ವೃಕ್ಷಂ ಯಥಾ ಕಂಪಯತಿ ಫಲಾರ್ಥೀ ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ಉತ**—ಮತ್ತು । **ಶ್ರವಾಯ್ಯಸ್ಯ**—ಎಲ್ಲರಲ್ಲಿಯೂ ಪ್ರಸಿದ್ಧನಾದ ನಿನ್ನ । **ಶ್ರುತೇ**—ಜಗತ್ಪ್ರಸಿದ್ಧವಾದ । **ನಃ ತೀರ್ಥೇ**—ಉತ್ತಮಸ್ಥಾನವಾದ ನಮ್ಮ ಯಜ್ಞದಲ್ಲಿ । **ಏನಾಪವಯಾ**—ಪರಿಶುದ್ಧಿಯನ್ನು ಹೊಂದಿದ ಈ ಧಾರೆಯೊಂದಿಗೆ । **ಅಧಿ**—ಅತ್ಯಧಿಕವಾಗಿ । **ಪವಸ್ವ**—ಪ್ರವಹಿಸು । **ಪಕ್ವಂ**—ಪಕ್ವವಾದ ಫಲವುಳ್ಳ । **ವೃಕ್ಷಂ ನ**—ವೃಕ್ಷವನ್ನು ಅಲ್ಲಾಡಿಸುವಂತೆ । **ನೈಗುತಃ**—ಶತ್ರುಹಂತಕನಾದ

ಸೋಮನು । **ಷಷ್ಟಿಂ ಸಹಸ್ರಾ**—ಅರವತ್ತುಸಹಸ್ರಸಂಖ್ಯೆಯುಳ್ಳ । **ವಸೂನಿ**—ಧನಗಳನ್ನು । **ರಣಾಯ**—ಶತ್ರುಜಯಾರ್ಥವಾಗಿ । **ಧೂನವತ್**—ಕಂಪಿಸಿ ಬೀಳಿಸಿದ್ದಾನೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಎಲ್ಲರಲ್ಲಿಯೂ ಪ್ರಸಿದ್ಧನಾದ (ಪ್ರಸಿದ್ಧಿಯನ್ನು ಪಡೆಯುವ ಅರ್ಹತೆಯುಳ್ಳ) ನಿನ್ನ ಜಗತ್ಪ್ರಸಿದ್ಧವಾದ ಈ ಉತ್ತಮವಾದ ಯಜ್ಞಪ್ರದೇಶದಲ್ಲಿ ಪರಿಶುದ್ಧಿಯನ್ನು ಹೊಂದಿದ ಧಾರೆಯೊಂದಿಗೆ ಅಧಿಕವಾಗಿ ಪ್ರವಹಿಸು. ಪಕ್ವವಾದ ಫಲವುಳ್ಳ ವೃಕ್ಷವನ್ನು ಅಲ್ಲಾಡಿಸಿ ಅನೇಕ ಫಲಗಳನ್ನು ಬೀಳಿಸುವಂತೆ, ಶತ್ರುಹಂತಕನಾದ ಸೋಮನು ಅರವತ್ತುಸಹಸ್ರಸಂಖ್ಯೆಯುಳ್ಳ ಧನಗಳನ್ನು ಶತ್ರುಜಯಾರ್ಥವಾಗಿ ಕಂಪಿಸಿ ಬೀಳಿಸಿದ್ದಾನೆ.

## English Translation.

And flow with this filtered stream at the renowned station of you who are worthy of reknown ; (the Soma) the destroyer of enemies has shaken down (for us) sixty thousand treasures for victory as (one shakes) a tree whose fruit is ripe.

॥ ಸಂಹಿತಾಪಾಠಃ ॥

ಮಹೀಮೇ ಅಸ್ಯ ವೃಷನಾಮ ಶೂಷೇ ಮಾಂಶ್ಚತ್ವೇ ವಾ ಪೃಶನೇ ವಾ ವಧತ್ರೇ।
ಅಸ್ವಾಪಯನ್ನಿಗುತಃ ಸ್ನೇಹಯಚ್ಚಾಪಾಮಿತ್ರಾ ಅಪಾಚಿತೋ ಅಚೇತಃ ॥

॥ ಪದಪಾಠಃ ॥

ಮಹಿ । ಇಮೇ ಇತಿ । ಅಸ್ಯ । ವೃಷನಾಮ । ಶೂಷೇ ಇತಿ । ಮಾಂಶ್ಚತ್ವೇ । ವಾ । ಪೃಶನೇ । ವಾ । ವಧತ್ರೇ ಇತಿ ।
ಅಸ್ವಾಪಯತ್ । ನಿಽಗುತಃ । ಸ್ನೇಹಯತ್ । ಚ । ಅಪ । ಅಮಿತ್ರಾನ್ । ಅಪ । ಅಚಿತಃ । ಅಚ । ಇತಃ ॥೫೪॥

॥ ಸಾಯಣಭಾಷ್ಯಂ ॥

ಮಹಿ ಮಹತೀ ಪ್ರಭೂತೇ ವೃಷನಾಮ ॥ ಸುಪಾಂ ಸುಲುಗಿತಿ ಸುಪೋ ಲುಕ್ ॥ ವೃಷನಾಮನೀ ವರ್ಷಣನಮನೇ । ಶರಾಣಾಂ ವರ್ಷಣಂ ಶತ್ರೂಣಾಂ ನಮನಂ । ಇಮೇ ಏತೇ ದ್ವೇ ಕರ್ಮಣೀ ಅಸ್ಯ ಸೋಮಸ್ಯ ಶೂಷೇ ಸುಖಕರೇ ಭವತಃ । ಯೇ ಚ ಕರ್ಮಣೀ ಮಾಶ್ಚತ್ವೇ । ಅಶ್ವನಾಮೈತತ್ ಮಕ್ಷು ಚರತೀತಿ । ಅಶ್ವೈಃ ಕ್ರಿಯಮಾಣೇ ಯುದ್ಧೇ । ತತ್ಸಾಧ್ಯತ್ವಾದ್ಯುದ್ಧಮಿಹ ಗೃಹ್ಯತೇ । ವಾಪಿ ವಾ ಪೃಶನೇ ಸ್ಪರ್ಶನಸಾಧ್ಯೇ ಬಾಹುಯುದ್ಧೇ ವಧತ್ರೇ ಶತ್ರೂಣಾಂ ಹಿಂಸನಶೀಲೇ ಭವತಃ । ಸೋಽಯಂ ನಿಗುತೋ ನೀಚೈಃ ಶಬ್ದಾಯಮಾನಾಞ್ಶತ್ರೂನಸ್ವಾಪಯತ್ । ತಾಭ್ಯಾಮಸೂಷುಪತ್ । ಅವಧೀದಿತ್ಯರ್ಥಃ । ಕಿಂಚ

ಸ್ನೇಹಯತ್ ಸ್ವಾಪ್ನವಯತ್ಸಂಗ್ರಾಮಾಚ್ಛತ್ರೂನ್ । ಅಥ ಪ್ರತ್ಯಕ್ಷಕೃತಃ । ಹೇ ಸೋಮ ಸ ತ್ವಮಮಿತ್ರಾ-ಣ್ಯತ್ರೂನಪಾಚ । ಅಪಗಮಯ । ತಥಾಚಿತೋಽಗ್ನಿಚಯನಮಕುರ್ವತೋ ನಾಸ್ತಿಕಾಂಶ್ಚೇತೋಽಸ್ಮತ್ಸ-ಕಾಶಾದಪಾಚ । ಅಪಗಮಯ । ಅಂಚತಿರ್ಗತಿಕರ್ಮಾ ॥

॥ ಪ್ರತಿಪದಾರ್ಥ ॥

**ಮಹಿ**—ಅತ್ಯಧಿಕವಾಗಿ । **ವೃಷನಾಮ**—ವೃಷ್ಟಿಯನ್ನು ಸುರಿಸುವುದು ಮತ್ತು ಶತ್ರುಗಳನ್ನು ಬಾಗುವಂತೆ ಮಾಡುವುದು ಎಂಬ । **ಇಮೇ**—ಈ ಎರಡು ಕಾರ್ಯಗಳೂ । **ಅಸ್ಯ**—ಈ ಸೋಮನಿಗೆ । **ಶೂಷೇ**—ಸುಖಕರವಾಗಿರುತ್ತವೆ । **ಮಾಂಶ್ಚತ್ವೇ**—(ಈ ಎರಡು ಕಾರ್ಯಗಳೂ ಸಹ) ಅಶ್ವಗಳೊಡನೆ ಹೋರಾಡುವ ಯುದ್ಧಗಳಲ್ಲಾಗಲಿ । **ವಾ**—ಅಥವಾ । **ಪೃಶನೇ**—ಬಾಹುಗಳೊಡನೆ ನಡೆಸುವ ತುಮುಲಯುದ್ಧಗಳಲ್ಲಾಗಲಿ । **ವಧತ್ರೇ**—ಶತ್ರುನಾಶಕವಾಗಿರುತ್ತವೆ । **ನಿಗುತಃ**—ಕೆಳಗೆ ಬಿದ್ದು ಶಬ್ದಮಾಡುತ್ತಿದ್ದ ಶತ್ರುಗಳನ್ನು । **ಅಸ್ವಾಪಯತ್**—ದೀರ್ಘನಿದ್ರೆಯನ್ನು ಮಾಡುವಂತೆ ಮಾಡಿದನು (ನಾಶಮಾಡಿದನು) । **ಸ್ನೇಹಯತ್**—ಉಳಿದವರನ್ನು ದೂರಕ್ಕೆ ಓಡಿಸಿದನು । (ಎಲೈ ಸೋಮದೇವನೇ) **ಅಮಿತ್ರಾನ್**—ಶತ್ರುಗಳನ್ನು । **ಅಪ ಅಚ**—ದೂರಕ್ಕೆ ಓಡಿಸು । **ಅಚಿತಃ**—ಅಗ್ನಿಕಾರ್ಯವನ್ನು ಮಾಡದಿರುವವರನ್ನೂ । **ಇತಃ**—ಇಲ್ಲಿಂದ । **ಅಪ**—ದೂರಕ್ಕೆ ಓಡಿಸು.

॥ ಭಾವಾರ್ಥ ॥

ಅತ್ಯಧಿಕವಾಗಿ ವೃಷ್ಟಿಯನ್ನು ಸುರಿಸುವುದು ಮತ್ತು ಶತ್ರುಗಳನ್ನು ತಲೆಬಾಗುವಂತೆ ಮಾಡುವುದು ಈ ಎರಡು ಕಾರ್ಯಗಳೂ ಸೋಮನಿಗೆ ಸುಖಕರವಾಗಿರುತ್ತವೆ. ಅಶ್ವಗಳೊಡನೆ ಯುದ್ಧಮಾಡುವ ಕಾಲದಲ್ಲಾಗಲಿ, ಅಥವಾ ಬಾಹುಗಳೊಡನೆ ತುಮುಲಯುದ್ಧಮಾಡುವ ಕಾಲದಲ್ಲಾಗಲಿ, ಈ ಎರಡು ಕಾರ್ಯಗಳೂ ಶತ್ರುನಾಶಕವಾಗಿರುತ್ತವೆ. ಕೆಳಗೆ ಬಿದ್ದು ಶಬ್ದಮಾಡುತ್ತಿದ್ದ ಶತ್ರುಗಳ ಸದ್ದನ್ನು ಅಡಗಿಸಿ ಸೋಮನು ಅವರನ್ನು ನಾಶಪಡಿಸಿದನು. ಉಳಿದವರನ್ನು ದೂರಕ್ಕೆ ಓಡಿಸಿದನು. ಎಲೈ ಸೋಮದೇವನೇ, ಶತ್ರುಗಳನ್ನು ದೂರಕ್ಕೆ ಓಡಿಸು. ಅಗ್ನಿಕಾರ್ಯವನ್ನು ಮಾಡದಿರುವವರನ್ನು ದೂರಕ್ಕೆ ಓಡಿಸು.

## English Translation.

Thease two great acts, the raining (of arrows) and the humiliation (of foes), are the givers of happiness ; they are deadly either in a fight on horse-back or in a hand to hand fight ; he has put the foes to sleep and driven them away ; do you (Soma) drive away the enemies and unbelievers.

॥ ಸಂಹಿತಾಪಾಠಃ ॥

ಸಂ ತ್ರೀ ಪವಿತ್ರಾ ವಿತತಾನ್ಯೇಷ್ಯನ್ವೇಕಂ ಧಾವಸಿ ಪೂಯಮಾನಃ ।

ಅಸಿ ಭಗೋ ಅಸಿ ದಾತ್ರಸ್ಯ ದಾತಾಸಿ ಮಘವಾ ಮಘವದ್ಭ್ಯ ಇಂದೋ ॥೫೫॥

॥ ಪದಪಾಠಃ ॥

ಸಂ । ತ್ರೀ । ಪವಿತ್ರಾ । ವಿऽತತಾನಿ । ಏಷಿ । ಅನು । ಏಕಂ । ಧಾವಸಿ । ಪೂಯಮಾನಃ ।

ಅಸಿ । ಭಗಃ । ಅಸಿ । ದಾತ್ರಸ್ಯ । ದಾತಾ । ಅಸಿ । ಮಘऽವಾ । ಮಘವತ್ऽಭ್ಯಃ । ಇಂದೋ ಇತಿ ॥ ೫೫ ॥

॥ ಸಾಯಣಭಾಷ್ಯಂ ॥

ಹೇ ಸೋಮ ವಿತತಾನಿ ವಿಸ್ತೃತಾನಿ ತ್ರೀ ತ್ರೀಣಿ ಪವಿತ್ರಾಣ್ಯಗ್ನಿವಾಯುಸೂರ್ಯಾತ್ಮಕಾನಿ ಪವಿತ್ರಾಣಿ ಸಮೇಷಿ । ಸಮ್ಯಕ್ ಪ್ರಾಪ್ನೋಷಿ । ಕಿಂಚ ಪೂಯಮಾನಸ್ತ್ವಮೇಕಮವಿವಾಲಕೃತಂ ಪವಿತ್ರಮನು ಧಾವಸಿ । ಅನುಗಚ್ಛಸಿ। ಕಿಂಚ ತ್ವಂ ಭಗೋ ಭಜನೀಯೋऽಸಿ । ತಥಾ ದಾತ್ರಸ್ಯ ದೇಯಸ್ಯ ಧನಸ್ಯ ದಾತಾಸಿ । ಕಥಮಸ್ಯ ಧನದತ್ವಮಿತಿ ಚೇತ್ ತದುಚ್ಯತೇ । ಹೇ ಇಂದೋ ಸೋಮ ಮಘವದ್ಭ್ಯೋऽನ್ಯೇಭ್ಯೋऽಪಿ ತ್ವಂ ಮಘವಾಸಿ । ಅತಿಶಯೇನ ಧನವಾನ್ಭವಸಿ ॥

॥ ಪ್ರತಿಪದಾರ್ಥ ॥

(ಎಲೈ ಸೋಮದೇವನೇ) **ವಿತತಾನಿ** — ವಿಸ್ತೃತವಾದ । **ತ್ರೀ ಪವಿತ್ರಾ**— ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಮೂರು ಪವಿತ್ರಗಳನ್ನೂ । **ಸಮೇಷಿ** — ನೀನು ಪ್ರವೇಶಿಸುತ್ತೀಯೆ । **ಪೂಯಮಾನಃ**— ಶುದ್ಧಿಯನ್ನು ಹೊಂದುವಾಗ । **ಏಕಂ** — ಉಣ್ಣೆಯ ಪವಿತ್ರವನ್ನು ಮಾತ್ರ । **ಅನು ಧಾವಸಿ**— ಪ್ರವೇಶಿಸುತ್ತೀಯೆ । (**ತ್ವಂ**— ನೀನು) । **ಭಗಃ**— ಪೂಜ್ಯನಾಗಿ । **ಅಸಿ**— ಇದ್ದೀಯೆ । **ದಾತ್ರಸ್ಯ**— ದಾನಕ್ಕೆ ಯೋಗ್ಯವಾದ ಧನಕ್ಕೆ । **ದಾತಾ ಅಸಿ**— ದಾತೃವಾಗಿದ್ದೀಯೇ । **ಇಂದೋ** — ಎಲೈ ಸೋಮದೇವನೇ । **ಮಘವದ್ಭ್ಯಃ**— ಧನವಂತರಲ್ಲೆಲ್ಲಾ। **ಮಘವಾ ಅಸಿ**— ಧನಿಕನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ವಿಸ್ತೃತವಾದ ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಮೂರು ಪವಿತ್ರಗಳನ್ನೂ ನೀನು ಪ್ರವೇಶಿಸುತ್ತೀಯೆ. ಶುದ್ಧಿಯನ್ನು ಹೊಂದುವಾಗ ಉಣ್ಣೆಯು ಪವಿತ್ರವನ್ನು ಮಾತ್ರ ಪ್ರವೇಶಿಸುತ್ತೀಯೆ. ನೀನು ಪೂಜ್ಯನು. ದಾನಕ್ಕೆ ಯೋಗ್ಯವಾದ ಧನಕ್ಕೆ ದಾತೃವಾಗಿಯೂ, ಧನಿಕರಲ್ಲೆಲ್ಲ ಅತ್ಯಧಿಕವಾದ ಧನಿಕನಾಗಿಯೂ ಇದ್ದೀಯೆ.

English Translation.

You reach the three outstretched filters, you hasten to the one (filter) being purified; you are Bhaga, you are the donor of gifts, you Indu, are more affluent than the affluent.

॥ ಸಂಹಿತಾಪಾಠಃ ॥

ಏಷ ವಿಶ್ವವಿತ್ಪವತೇ ಮನೀಷೀ ಸೋಮೋ ವಿಶ್ವಸ್ಯ ಭುವನಸ್ಯ ರಾಜಾ ।

ದ್ರಪ್ಸಾँ ಈರಯನ್ವಿದಥೇಷ್ವಿಂದುರ್ವಿ ವಾರಮವ್ಯಂ ಸಮಯಾತಿ ಯಾತಿ॥೫೬॥

॥ ಪದಪಾಠಃ ॥

ಏಷಃ । ವಿಶ್ವऽವಿತ್ । ಪವತೇ । ಮನೀಷೀ । ಸೋಮಃ । ವಿಶ್ವಸ್ಯ । ಭುವನಸ್ಯ । ರಾಜಾ ।

ದ್ರಪ್ಸಾನ್ । ಈರಯನ್ । ವಿದಥೇಷು । ಇಂದುಃ । ವಿ । ವಾರಂ । ಅವ್ಯಂ । ಸಮಯಾ । ಅತಿ । ಯಾತಿ ॥

॥ ಸಾಯಣಭಾಷ್ಯಂ ॥

ವಿಶ್ವವಿತ್ ಸರ್ವಸ್ಯ ವೇತ್ತಾ ಅತ ಏವ ಮನೀಷೀ ಮೇಧಾವೀ ವಿಶ್ವಸ್ಯ ಭುವನಸ್ಯ ಸರ್ವಸ್ಯ ಲೋಕಸ್ಯ ರಾಜಾ ಸ್ವಾಮ್ಯೇಷ ಸೋಮಃ ಪವತೇ । ಕ್ಷರತಿ । ಏತದೇವ ವಿವೃಣೋತಿ । ವಿದಥೇಷು । ವಿದಂತಿ ಜಾನಂತ್ಯತ್ರ ದೇವಾನಿತಿ ಯದ್ವಾ ವಿಂದಂತಿ ಲಭಂತೆ ಇತಿ ವಿದಥಾ ಯಜ್ಞಾಃ ತೇಷು ದ್ರಪ್ಸಾನ್ರಸಕಣಾನೀರಯನ್ ಪ್ರೇರಯನ್ನಿಂದುಃ ಸೋಮೋऽವ್ಯಮವಿಭವಂ ವಾರಂ ವಾಲಂ ಪವಿತ್ರಂ ಸಮಯೋಭಯತೋ ವ್ಯತಿ ಯಾತಿ । ವ್ಯತೀತ್ಯ ಗಚ್ಛತಿ ॥

॥ ಪ್ರತಿಪದಾರ್ಥ ॥

**ವಿಶ್ವವಿತ್**—ಸರ್ವಜ್ಞನೂ । **ಮನೀಷೀ**—ಮೇಧಾವಿಯೂ । **ವಿಶ್ವಸ್ಯ ಭುವನಸ್ಯ**—ಸಕಲ ಲೋಕಕ್ಕೂ । **ರಾಜಾ**—ಪ್ರಭುವಾಗಿಯೂ ಇರುವ । **ಏಷಃ ಸೋಮಃ**—ಈ ಸೋಮನು । **ಪವತೇ**—ಪ್ರವಹಿಸುತ್ತಾನೆ । **ವಿದಥೇಷು**—ಯಜ್ಞಗಳಲ್ಲಿ । **ದ್ರಪ್ಸಾನ್**—ಸೋಮರಸಗಳನ್ನು । **ಈರಯನ್**—ಪ್ರವಹಿಸುವಂತೆ ಮಾಡುತ್ತ । **ಇಂದುಃ**—ಸೋಮನು । **ಅವ್ಯಂ**—ದಶಾಪವಿತ್ರದ । **ವಾರಂ**—ಉಣ್ಣೆಯ ನೂಲುಗಳಲ್ಲಿ । **ಸಮಯಾ**—ಎರಡುಕಡೆಗಳಲ್ಲಿಯೂ । **ವ್ಯತಿಯಾತಿ**—ಪ್ರವಹಿಸಿ ಹೋಗುತ್ತಾನೆ.

॥ ಭಾವಾರ್ಥ ॥

ಸರ್ವಜ್ಞನೂ, ಮೇಧಾವಿಯೂ, ಸಕಲ ಲೋಕಕ್ಕೂ ಪ್ರಭುವೂ ಆದ ಸೋಮನು ಪ್ರವಹಿಸುತ್ತಾನೆ. ಯಜ್ಞಗಳಲ್ಲಿ ಸೋಮರಸವನ್ನು ಪ್ರವಹಿಸುವಂತೆ ಮಾಡುತ್ತಾ, ಸೋಮನು ದಶಾಪವಿತ್ರದ ಉಣ್ಣೆಯ ನೂಲುಗಳಲ್ಲಿ ಎರಡು ಕಡೆಗಳಲ್ಲಿಯೂ ಪ್ರವಹಿಸಿ ಹೋಗುತ್ತಾನೆ.

## English Translation.

This all knowing sage Soma, the sovereign of the whole world, flows forth ; distilling his drops at the sacrifices, Indu passes through the sheep's hair on both sides.

॥ ಸಂಹಿತಾಪಾಠಃ ॥

ಇಂದುಂ ರಿಹಂತಿ ಮಹಿಷಾ ಅದಬ್ಧಾಃ ಪದೇ ರೇಭಂತಿ ಕವಯೋ ನ ಗೃಧ್ರಾಃ ।
ಹಿನ್ವಂತಿ ಧೀರಾ ದಶಭಿಃ ಕ್ಷಿಪಾಭಿಃ ಸಮಂಜತೇ ರೂಪಮಪಾಂ ರಸೇನ ॥೫೭॥

॥ ಪದಪಾಠಃ ॥

ಇಂದುಂ । ರಿಹಂತಿ । ಮಹಿಷಾಃ । ಅದಬ್ಧಾಃ । ಪದೇ । ರೇಭಂತಿ । ಕವಯಃ । ನ । ಗೃಧ್ರಾಃ ।

ಹಿನ್ವಂತಿ । ಧೀರಾಃ । ದಶಽಭಿಃ । ಕ್ಷಿಪಾಭಿಃ । ಸಂ । ಅಂಜತೇ । ರೂಪಂ । ಅಪಾಂ । ರಸೇನ　॥ ೫೭ ॥

॥ ಸಾಯಣಭಾಷ್ಯಂ ॥

ಮಹಿಷಾ ಮಹಾಂತಃ ಪೂಜ್ಯಾ ವಾ ಅತ ಏವಾದಬ್ಧಾಃ ಕೈಶ್ಚಿದಪ್ಯಹಿಂಸಿತಾ ದೇವಾ ಇಂದುಂ ಸೋಮಂ ರಿಹಂತಿ । ಲಿಹಂತಿ । ಆಸ್ವಾದಯಂತಿ । ಕಿಂಚ ದೇವಾಃ ಸೋಮಮುಶಂತಃ ಸಂತಃ ಪದೇ ತಸ್ಯಾಸ್ಯ ಸೋಮಸ್ಯ ಧಾರಾಸ್ಥಾನೇ ರೇಭಂತಿ । ಶಬ್ದಾಯಂತೇ । ತತ್ರ ದೃಷ್ಟಾಂತಃ । ಕವಯೋ ನ ಗೃಧ್ರಾಃ । ಧನಮಭಿಕಾಂಕ್ಷಮಾಣಾಃ ಕವಯಃ ಸ್ತೋತಾರೋ ಯಥಾ ಸ್ತುವಂತಃ ಶಬ್ದಾಯಂತೇ ತದ್ವತ್ । ಧೀರಾಃ ಕರ್ಮಣಿ ಕುಶಲಾ ಋತ್ವಿಜೋ ದಶಭಿರೇತತ್ಸಂಖ್ಯಾಕಾಭಿಃ ಕ್ಷಿಪಾಭಿರಂಗುಲೀಭಿಸ್ತಮಿಮಂ ಸೋಮಂ ಹಿನ್ವಂತಿ । ಅಭಿಷವಾರ್ಥಂ ಪ್ರೇರಯಂತಿ । ಅಪಿ ಚ ರೂಪಂ ಸೋಮಸ್ಯ ರೂಪಮಂಶುಮಪಾಂ ವಸತೀವರ್ಯಾಖ್ಯಾನಾಂ ರಸೇನ ಸಮಂಜತೇ । ಸಮ್ಯಕ್ ಸೇವಯಂತಿ ॥

॥ ಪ್ರತಿಪದಾರ್ಥ ॥

**ಮಹಿಷಾಃ**— ಪೂಜ್ಯರೂ । **ಅದಬ್ಧಾಃ**— ಅಹಿಂಸಿತರೂ ಆದ ದೇವತೆಗಳು । **ಇಂದುಂ**—ಸೋಮನನ್ನು । **ರಿಹಂತಿ**—ಆಸ್ವಾದಿಸುತ್ತಾರೆ । **ಗೃಧ್ರಾಃ**— ಧನೇಚ್ಛುಗಳಾದ । **ಕವಯೋ ನ**—ಸ್ತುತಿಕರ್ತರಂತೆ । **ಪದೇ**— ಸೋಮನ ಪ್ರವಾಹಸ್ಥಾನದಲ್ಲಿ । **ರೇಭಂತಿ**—ಶಬ್ದಮಾಡುತ್ತಾರೆ । **ಧೀರಾಃ**—ಪ್ರಾಜ್ಞರಾದ ಋತ್ವಿಕ್ಕುಗಳು । **ದಶಭಿಃ ಕ್ಷಿಪಾಭಿಃ**—ಹತ್ತು ಬೆರಳುಗಳಿಂದಲೂ । **ಹಿನ್ವಂತಿ**—ಸೋಮನನ್ನು ಹಿಂಡಿ ಪ್ರವಹಿಸುವಂತೆ ಮಾಡುತ್ತಾರೆ । **ರೂಪಂ**—ಸೋಮನ ರೂಪವನ್ನು । **ಅಪಾಂ ರಸೇನ**—ವಸತೀವರಿಗಳ ರಸದೊಡನೆ । **ಸಮಂಜತೇ**—ಒಟ್ಟಿಗೆ ಸೇರಿಸಿ ಸಂಸ್ಕರಿಸುತ್ತಾರೆ.

॥ ಭಾವಾರ್ಥ ॥

ಪೂಜ್ಯರೂ, ಅಹಿಂಸಿತರೂ ಆದ ದೇವತೆಗಳು ಸೋಮನನ್ನು ಆಸ್ವಾದಿಸುತ್ತಾರೆ. ಧನೇಚ್ಛುಗಳಾದ ಸ್ತುತಿಕರ್ತರಂತೆ ಸೋಮನ ಪ್ರವಾಹಸ್ಥಾನದಲ್ಲಿ ಶಬ್ದಮಾಡುತ್ತಾರೆ. ಪ್ರಾಜ್ಞರಾದ ಋತ್ವಿಕ್ಕುಗಳು ಹತ್ತು ಬೆರಳುಗಳಿಂದಲೂ ಸೋಮನನ್ನು ಹಿಂಡಿ ಪ್ರವಹಿಸುವಂತೆ ಮಾಡುತ್ತಾರೆ. ಸೋಮನ ರೂಪವನ್ನು ವಸತೀವರಿಗಳ ರಸಗಳೊಡನ ಸೇರಿಸಿ ಸಂಸ್ಕರಿಸುತ್ತಾರೆ.

English Translation

The adorable, unassailable (deities) sip the Soma juice, they hail it at its station like worshippers greedy (of wealth); the skilful priests send forth the Soma with their ten fingers, they anoint its body with the fluid of the waters.

|| ಸಂಹಿತಾಪಾಠಃ ||

ತ್ವಯಾ ವಯಂ ಪವಮಾನೇನ ಸೋಮ ಭರೇ ಕೃತಂ ವಿ ಚಿನುಯಾಮ ಶಶ್ವತ್ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೫೮ ॥

|| ಪದಪಾಠಃ ||

ತ್ವಯಾ । ವಯಂ । ಪವಮಾನೇನ । ಸೋಮ । ಭರೇ । ಕೃತಂ । ವಿ । ಚಿನುಯಾಮ । ಶಶ್ವತ್ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ॥ ೫೮ ॥

|| ಸಾಯಣಭಾಷ್ಯಂ ||

ಹೇ ಸೋಮ ಪವಮಾನೇನ ಪವಿತ್ರೇಣ ಪೂಯಮಾನೇನ ತ್ವಯಾ ಸಹಾಯೇನ ಭರೇ । ಸಂಗ್ರಾಮನಾಮ । ಸಂಗ್ರಾಮೇ ಶಶ್ವದ್ಬಹು ಕೃತಂ ಕರ್ತವ್ಯಂ ವಯಂ ವಿ ಚಿನುಯಾಮ । ವಿಶೇಷೇಣ ಕುರ್ಯಾಮ । ಯಸ್ಮಾತ್ತ್ವತ್ಸಾಹಾಯ್ಯೇನ ಕರ್ಮಾಣಿ ಕುರ್ಮಃ ತತ್ತ್ವಸ್ಮಾನ್ನೋಽಸ್ಮಾನ್ ಮಿತ್ರೋ ವರುಣೋಽದಿತಿರೇತನ್ನಾಮಕಾಃ ಸಿಂಧುರೇತದಭಿಧಾನಾ ಚ ಪೃಥಿವ್ಯುತಾಪಿ ಚ ದ್ಯೌಃ ಏತೇ ಮಿತ್ರಾದಯೋ ನೋಽಸ್ಮಾನ್ಮಾಮಹಂತಾಂ । ಪೂಜಯಂತು ಧನಾದಿದಾನೇನ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ | **ವಯಂ**—ನಾವು | **ಪವಮಾನೇನ**—ಶುದ್ಧಿಯನ್ನು ಹೊಂದಿದ | **ತ್ವಯಾ**—ನಿನ್ನೊಡನೆ | **ಭರೇ**—ಸಂಗ್ರಾಮದಲ್ಲಿ | **ಶಶ್ವತ್**—ಅಧಿಕವಾಗಿ | **ಕೃತಂ**—ಕರ್ತವ್ಯವನ್ನು | **ವಿ ಚಿನುಯಾಮ**—ನಿರ್ವಹಿಸುವಂತಾಗಲಿ | **ನಃ**—ನಮ್ಮನ್ನು | **ಮಿತ್ರಃ**—ಮಿತ್ರನೂ | **ವರುಣಃ**—ವರುಣನೂ | **ಅದಿತಿಃ**—ಅದಿತಿಯೂ | **ಸಿಂಧುಃ**—ಸಿಂಧುದೇವತೆಯೂ | **ಪೃಥಿವೀ**—ಪೃಥ್ವಿಯೂ | **ಉತ**—ಮತ್ತು | **ದ್ಯೌಃ**—ದ್ಯುಲೋಕಾಧಿದೇವತೆಯೂ | **ಮಾಮಹಂತಾಂ**—ಧನಪ್ರದಾನದಿಂದ ಪುಷ್ಟಿಗೊಳಿಸಲಿ.

|| ಭಾವಾರ್ಥ ||

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನಿನ್ನೊಡನೆ ನಾವು ಯುದ್ಧದಲ್ಲಿ ಅತ್ಯಧಿಕವಾಗಿ ಕರ್ತವ್ಯವನ್ನು ನಿರ್ವಹಿಸುವಂತಾಗಲಿ. ನಮ್ಮನ್ನು ಮಿತ್ರನೂ, ವರುಣನೂ, ಅದಿತಿಯೂ, ಸಿಂಧುದೇವತೆಯೂ, ಪೃಥ್ವಿಯೂ ಮತ್ತು ದ್ಯುಲೋಕಾಧಿದೇವತೆಯೂ ಧನಪ್ರದಾನದಿಂದ ಪುಷ್ಟಿಗೊಳಿಸಲಿ.

## English Translation

May we ever, Soma, with you who are purified, (as our ally) win much wealth in battle ; so may Mitra, Varuna, Aditi, Sindhu, heaven and earth enrich us.

# ತೊಂಭತ್ತೆಂಟನೆಯ ಸೂಕ್ತವು

---

|| ಸಾಯಣಭಾಷ್ಯಂ ||

**ಅಭಿ ನ ಇತಿ ದ್ವಾದಶರ್ಚಂ ದ್ವಿತೀಯಂ ಸೂಕ್ತಂ । ವೃಷಾಗಿರೋ ರಾಜ್ಞಃ ಪುತ್ರೋಽಂಬರೀಷೋ ಭರದ್ವಾಜಪುತ್ರ ಋಜಿಶ್ವಾ ಚೋಭೌ ಸಹಿತಾವಸ್ಯರ್ಷೀ । ಇದಮುತ್ತರಾಣಿ ಚ ತ್ರೀಣ್ಯಾನುಷ್ಟುಭಾನಿ । ಅತ್ರ ತ್ವೇಕಾದಶೀ ಬೃಹತೀ । ಪವಮಾನಃ ಸೋಮೋ ದೇವತಾ । ತಥಾ ಚಾನುಕ್ರಮ್ಯತೇ । ಅಭಿ ನೋ ದ್ವಾದಶಾಂಬರೀಷ ಋಜಿಶ್ವಾ ಚಾನುಷ್ಟುಭಂ ಹ ಬೃಹತ್ಯೇಕಾಂತ್ಯೇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಅಭಿ ನಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವೃಷಾಗಿರ ಎಂಬ ರಾಜನ ಪುತ್ರನಾದ ಅಂಬರೀಷ ಎಂಬುವನೂ ಮತ್ತು ಭರದ್ವಾಜಪುತ್ರನಾದ ಋಜಿಶ್ವಾ ಎಂಬುವನೂ ಈ ಇಬ್ಬರೂ ಋಷಿಗಳು. ಈ ಸೂಕ್ತವೂ ಇದರ ಮುಂದಿನ ಮೂರು ಸೂಕ್ತಗಳೂ ಅನುಷ್ಟುಪ್‌ಛಂದಸ್ಕವು. ಆದರೆ ಈ ಸೂಕ್ತದ ಹನ್ನೊಂದನೆಯ ಋಕ್ಕು ಮಾತ್ರ ಬೃಹತೀಛಂದಸ್ಕವು. ಪವಮಾನಸೋಮನು ದೇವತೆಯು. ಅನುಕ್ರಮಣಿಕೆಯಲ್ಲಿ—**ಅಭಿ ನೋ ದ್ವಾದಶಾಂಬರೀಷ ಋಜಿಶ್ವಾ ಚಾನುಷ್ಟುಭಂ ಹ ಬೃಹತ್ಯೇಕಾಂತ್ಯಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೮

ಮಂಡಲ-೯ || ಅನುವಾಕ-೬ || ಸೂಕ್ತ-೯೮ ||

ಅಷ್ಟಕ-೭ || ಅಧ್ಯಾಯ-೪ || ವರ್ಗ-೨೩, ೨೪ ||

|| **ಸೂಕ್ತದಲ್ಲಿರುವ ಋಕ್ಸಂಖ್ಯೆ – ೧೨** ||

|| ಋಷಿಃ—ಅಂಬರೀಷ ಋಜಿಶ್ವಾ ಚ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—೧–೧೦, ೧೨. ಅನುಷ್ಟುಪ್ । ೧೧. ಬೃಹತೀ ||

|| ಸಂಹಿತಾಪಾಠಃ ||

ಅಭಿ ನೋ ವಾಜಸಾತಮಂ ರಯಿಮರ್ಷ ಪುರುಸ್ಪೃಹಂ ।
ಇಂದೋ ಸಹಸ್ರಭರ್ಣಸಂ ತುವಿದ್ಯುಮ್ನಂ ವಿಭ್ವಾಸಹಂ ॥ ೧ ॥

॥ ಪದಪಾಠಃ ॥

ಅಭಿ । ನಃ । ವಾಜಽಸಾತಮಂ । ರಯಿಂ । ಅರ್ಷ । ಪುರುಽಸ್ಪೃಹಂ ।

ಇಂದೋ ಇತಿ । ಸಹಸ್ರಽಭರ್ಣಸಂ । ತುವಿಽದ್ಯುಮ್ನಂ । ವಿಭ್ವಽಸಹಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದೋ ದೀಪ್ತ ವಾಜಸಾತಮಮತ್ಯಂತಂ ಬಲಪ್ರದಮನ್ನಪ್ರದಂ ವಾ ರಯಿಂ ಧನಂ ಪುತ್ರಂ ವಾ ನೋಽಸ್ಮಾಕಮಭ್ಯರ್ಷ । ಅಭಿಗಮಯ । ಕೀದೃಶಂ । ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಸಹಸ್ರಭರ್ಣಸಂ ಬಹುವಿಧಭರಣಂ । ಅನೇಕಪೋಷಣಯುಕ್ತಮಿತ್ಯರ್ಥಃ । ತುವಿದ್ಯುಮ್ನಂ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವೇತಿ ಯಾಸ್ಕಃ । ನಿ. ೫-೫ । ಬಹ್ವನ್ನಂ ಬಹುಯಶೋಯುಕ್ತಂ ವಾ ವಿಭ್ವಸಹಂ । ವಿಭ್ವ ಇತಿ ಮಹನ್ನಾಮ । ಮಹತೋಽಭಿಭವಿತಾರಂ ॥

॥ ಪ್ರತಿಪದಾರ್ಥ ॥

**ಇಂದೋ**—ಎಲೈ ಸೋಮದೇವನೇ । **ನಃ**—ನಮಗೆ । **ಪುರುಸ್ಪೃಹಂ**—ಅನೇಕರಿಂದ ಅಪೇಕ್ಷಿತ ವಾದುದೂ । **ಸಹಸ್ರಭರ್ಣಸಂ**—ಅನೇಕರನ್ನು ಭರಿಸುವ ಶಕ್ತಿಯುಳ್ಳದ್ದೂ । **ತುವಿದ್ಯುಮ್ನಂ**—ಪ್ರಭೂತವಾದ ಅನ್ನಯುತವಾದುದೂ । **ವಿಭ್ವಸಹಂ**—ಶಕ್ತಿಯುತರಾದ ಶತ್ರುಗಳನ್ನೂ ಸೋಲಿಸಬಲ್ಲುದೂ । **ವಾಜಸಾತಮಂ**—ಅತ್ಯಂತ ಬಲಪ್ರದವಾದುದೂ ಆದ । **ರಯಿಂ**—ಧನವನ್ನು । **ಅಭಿ ಮರ್ಷ**—ಒದಗಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ಅನೇಕರಿಂದ ಅಪೇಕ್ಷಿತವಾದುದೂ, ಅನೇಕರನ್ನು ಭರಿಸುವ ಶಕ್ತಿಯುಳ್ಳದ್ದೂ, ಪ್ರಭೂತವಾದ ಅನ್ನಯುತವಾದುದೂ, ಶಕ್ತಿಯುತರಾದ ಶತ್ರುಗಳನ್ನೂ ಸೋಲಿಸಬಲ್ಲುದೂ, ಅತ್ಯಂತ ಬಲಪ್ರದ ವಾದುದೂ ಆದ ಧನವನ್ನು ಒದಗಿಸು.

## English Translation.

Bring us, Indu, strength-bestowing riches, desired by many, supporting many, far-celebrated and overcoming mighty (foes).

॥ ಸಂಹಿತಾಪಾಠಃ ॥

ಪರಿ ಷ್ಯ ಸುವಾನೋ ಅವ್ಯಯಂ ರಥೇ ನ ವರ್ಮಾವ್ಯತ ।

ಇಂದುರಭಿ ದ್ರುಣಾ ಹಿತೋ ಹಿಯಾನೋ ಧಾರಾಭಿರಕ್ಷಾಃ ॥ ೨ ॥

|| ಪದಪಾಠಃ ||

ಪರಿ | ಸ್ಯಃ | ಸುವಾನಃ | ಅವ್ಯಯಂ | ರಥೇ | ನ | ವರ್ಮ | ಅವ್ಯತ |

ಇಂದುಃ | ಅಭಿ | ದ್ರುಣಾ | ಹಿತಃ | ಹಿಯಾನಃ | ಧಾರಾಭಿಃ | ಅಕ್ಷಾರಿತಿ || ೨ ||

|| ಸಾಯಣಭಾಷ್ಯಂ ||

ಸುವಾನಃ ಸೂಯಮಾನಃ ಸ್ಯ ಸ ಸೋಮೋಽವ್ಯಯಮವಿಮಯಂ ಪವಿತ್ರಂ ಪರಿ ಪವತೇ | ತತ್ರ ದೃಷ್ಟಾಂತಃ | ರಥೇ ನ ಯಥಾ ರಥೇ ಸ್ಥಿತಃ ಪುರುಷೋ ವರ್ಮ ಕವಚಮವ್ಯತ ಪರಿವ್ಯಯತಿ || ವ್ಯಯ-ತೇರ್ಲುಙಿ ವರ್ಣಲೋಪಶ್ಛಾಂದಸಃ || ಅಭಿ ಹಿತೋಽಭಿತಃ ಪ್ರೇರಿತಃ ಯದ್ವಾ ಸ್ತೋತೃಭಿರಭಿಷ್ಟುತಃ ಸ ಇಂದುಃ ಸೋಮೋ ದ್ರುಣಾ ದ್ರುಮಮಯೇನ ದ್ರೋಣಕಲಶೇನ ಹಿಯಾನಃ | ಹಿ ಗತೌ ವೃದ್ಧೌ ಚ || ತೇನ ಪೂರ್ಯಮಾಣಃ ಸನ್ ಧಾರಾಭಿರಕ್ಷಾಃ | ಕ್ಷರತಿ || ಕ್ಷರತೇರ್ಲುಙಿ ರೂಪಂ ||

|| ಪ್ರತಿಪದಾರ್ಥ ||

**ರಥೇ**—ರಥದಲ್ಲಿರತಕ್ಕ ಪುರುಷನು | **ವರ್ಮ**—ಕವಚವನ್ನು | **ಅವ್ಯತ ನ**—ತನ್ನ ದೇಹದ ಸುತ್ತಲೂ ಧರಿಸಿಕೊಳ್ಳುವಂತೆ | **ಸುವಾನಃ**—ಹಿಂಡಲ್ಪಡುವ | **ಸ್ಯಃ**—ಸೋಮನು | **ಅವ್ಯಯಂ ಪರಿ**—ದಶಾಪವಿತ್ರದಲ್ಲಿ ಸುತ್ತಲೂ ಹರಿಯುತ್ತಾನೆ | **ಅಭಿ ಹಿತಃ**—ಸ್ತೋತೃಗಳಿಂದ ಪ್ರೇರಿತನಾದ | **ಇಂದುಃ**—ಸೋಮವು | **ದ್ರುಣಾ**—ವೃಕ್ಷನಿರ್ಮಿತವಾದ ಕಲಶದಲ್ಲಿ | **ಹಿಯಾನಃ**—ಸುರಿಯಲ್ಪಟ್ಟು | **ಧಾರಾಭಿಃ**—ಧಾರೆಗಳಿಂದ | **ಅಕ್ಷಾಃ**—ಪ್ರವಹಿಸುತ್ತದೆ.

|| ಭಾವಾರ್ಥ ||

ರಥಸ್ಥನಾದ ಪುರುಷನು ಕವಚವನ್ನು ತನ್ನ ದೇಹದ ಸುತ್ತಲೂ ಧರಿಸಿಕೊಳ್ಳುವಂತೆ ಹಿಂಡಲ್ಪಡುವ ಸೋಮನು ದಶಾಪವಿತ್ರದಲ್ಲಿ ಸುತ್ತಲೂ ಹರಿಯುತ್ತಾನೆ. ಸ್ತೋತೃಗಳಿಂದ ಪ್ರೇರಿತನಾದ ಸೋಮವು ವೃಕ್ಷನಿರ್ಮಿತವಾದ ಕಲಶದಲ್ಲಿ (ಮರದ ಪಾತ್ರೆಯಲ್ಲಿ) ಸುರಿಯಲ್ಪಟ್ಟು ಧಾರೆಗಳಿಂದ ಪ್ರವಹಿಸುತ್ತದೆ.

## English Translation.

When effused the Soma juice flows to the woollen (filter) as (a warrior) in a chariot is covered in mail ; fitted into the wooden (cask), hurrying forth, it flows in streams.

|| ಸಂಹಿತಾಪಾಠಃ ||

ಪರಿ ಷ್ಯ ಸುವಾನೋ ಅಕ್ಷಾ ಇಂದುರವ್ಯೇ ಮದಚ್ಯುತಃ |

ಧಾರಾ ಯ ಊರ್ಧ್ವೋ ಅಧ್ವರೇ ಭ್ರಾಜಾ ನೈತಿ ಗವ್ಯಯುಃ || ೩ ||

॥ ಪದಪಾಠಃ ॥

ಪರಿ । ಸ್ಯಃ । ಸುವಾನಃ । ಅಕ್ಷಾರಿತಿ । ಇಂದುಃ । ಅವ್ಯೇ । ಮದಽಚ್ಯುತಃ ।

ಧಾರಾ । ಯಃ । ಊರ್ಧ್ವಃ । ಅಧ್ವರೇ । ಭ್ರಾಜಾ । ನ । ಏತಿ । ಗವ್ಯಽಯುಃ ॥ ೩ ॥

॥ ಸಾಯಣಭಾಷ್ಯಂ ॥

**ಸುವಾನಃ ಸೂಯಮಾನಃ ಸ್ಯ ಸ ಇಂದುಃ ಸೋಮೋ ಮದಚ್ಯುತೋ ಮದಾರ್ಥಂ ದೇವೈಃ ಪ್ರೇರಿತಃ ಸನ್ನವ್ಯೇಽವಿಭವೇ ಪವಿತ್ರೇ ಪರ್ಯಕ್ಷಾಃ । ಪರಿತಃ ಕ್ಷರತಿ । ಅಧ್ವರ ಊರ್ಧ್ವಃ ಸಮುಚ್ಛ್ರಿತಃ ಸರ್ವೇಷಾಂ ಮುಖ್ಯೋ ಯಃ ಸೋಮೋ ಗವ್ಯಯುರ್ಗೋಕಾಮಃ ಯದ್ವಾ ಕ್ಷೀರಾದಿಕಂ ಕಾಮಯಮಾನಃ ಸನ್ ಧಾರಾ ಧಾರಯಾ ಸಹೈತಿ ಗಚ್ಛತಿ । ಭ್ರಾಜಾ ನ ಭ್ರಾಜಮಾನಯಾ ದೀಪ್ತ್ಯಾ ಯಥಾಂತರಿಕ್ಷೇ ಗಚ್ಛತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಭ್ರಾಜಾ ನ**— ಪ್ರಕಾಶಮಾನವಾದ ಕಾಂತಿಯೊಡನೆ ಅಂತರಿಕ್ಷದಲ್ಲಿ ಸಂಚರಿಸುವಂತೆ । **ಯಃ**— ಯಾವ ಸೋಮನು । **ಅಧ್ವರೇ**— ಯಜ್ಞದಲ್ಲಿ । **ಊರ್ಧ್ವಃ**— ಎಲ್ಲರಿಗೂ ಮುಖ್ಯನಾಗಿಯೂ । **ಗವ್ಯಯುಃ**— ಕ್ಷೀರಾದಿಗಳನ್ನಪೇಕ್ಷಿಸಿಯೂ । **ಧಾರಾ**— ಧಾರಾರೂಪದಲ್ಲಿ । **ಏತಿ**— ಪ್ರವಹಿಸುವನೋ । **ಸುವಾನಃ**— ಹಿಂಡಲ್ಪಡತಕ್ಕ । **ಸ್ಯಃ ಇಂದುಃ**— ಅದೇ ಸೋಮನು । **ಮದಚ್ಯುತಃ**— ಹರ್ಷಾರ್ಥವಾಗಿ ಪ್ರೇರಿತನಾಗಿ । **ಅವ್ಯೇ**— ದಶಾಪವಿತ್ರದಲ್ಲಿ । **ಪರ್ಯಕ್ಷಾಃ**— ಸುತ್ತಲೂ ಪ್ರವಹಿಸುತ್ತಾನೆ.

॥ ಭಾವಾರ್ಥ ॥

ಪ್ರಕಾಶಮಾನವಾದ ಕಾಂತಿಯೊಡನೆ ಅಂತರಿಕ್ಷದಲ್ಲಿ ಸಂಚರಿಸುವಂತೆ ಯಾವ ಸೋಮನು ಯಜ್ಞದಲ್ಲಿ ಎಲ್ಲರಿಗೂ ಮುಖ್ಯನಾಗಿಯೂ, ಕ್ಷೀರಾದಿಗಳನ್ನಪೇಕ್ಷಿಸಿಯೂ ಧಾರಾರೂಪದಲ್ಲಿ ಪ್ರವಹಿಸುವನೋ, ಹಿಂಡಲ್ಪಡುವ ಅದೇ ಸೋಮನು ಹರ್ಷಕ್ಕಾಗಿ ದೇವತೆಗಳಿಂದ ಪ್ರೇರಿತನಾಗಿ ದಶಾಪವಿತ್ರದಲ್ಲಿ ಸುತ್ತಲೂ ಪ್ರವಹಿಸುತ್ತಾನೆ.

English Translation

The Soma juice being effused flows through the fleece diffusing exhilaration ; who, being exalted goes to the sacrifice in a stream desiring the milk and curds as (he goes to the firmament) with radiance.

॥ ಸಂಹಿತಾಪಾಠಃ ॥

ಸ ಹಿ ತ್ವಂ ದೇವ ಶಶ್ವತೇ ವಸು ಮರ್ತಾಯ ದಾಶುಷೇ ।

ಇಂದೋ ಸಹಸ್ರಿಣಂ ರಯಿಂ ಶತಾತ್ಮಾನಂ ವಿವಾಸಸಿ ॥ ೪ ॥

॥ ಪದಪಾಠಃ ॥

ಸಃ । ಹಿ । ತ್ವಂ । ದೇವ । ಶಶ್ವತೇ । ವಸು । ಮರ್ತಾಯ । ದಾಶುಷೇ ।

ಇಂದೋ ಇತಿ । ಸಹಸ್ರಿಣಂ । ರಯಿಂ । ಶತಽಆತ್ಮಾನಂ । ವಿವಾಸಸಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವ ಸೋಮ ಸ ತ್ವಂ ಶಶ್ವತೇ ಪುತ್ರಾದಿಮತ್ತ್ವೇನ ಬಹವೇ ಮರ್ತ್ಯಾಯ ಮನುಷ್ಯಾಯ ದಾಶುಷೇ ಹವಿರ್ದತ್ತವತೇ ಯಜಮಾನಾಯ ವಸು ಧನಂ ಮಹ್ಯಂ ಚ ವಿವಾಸಸಿ । ಪ್ರೇರಯಸಿ । ಏಕವಾಕ್ಯತಾಪಕ್ಷೇ ಹಿ ತಿಙಂತಸ್ಯ ಹಿಯೋಗಾದನಿಘಾತಃ ಸ್ಯಾತ್ ॥

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ ಎಲೈ ಸೋಮನೇ । **ಸ ಹಿ ತ್ವಂ**—ಪ್ರಸಿದ್ಧನಾದ ನೀನು । **ದಾಶುಷೇ**—ಹವಿಸ್ಸನ್ನು ಕೊಡುವವನಿಗೆ ... ಹವಿಸ್ಸನ್ನ ರ್ಪಿಸತಕ್ಕ । **ಶಶ್ವತೇ ಮರ್ತ್ಯಾಯ**—ಅನೇಕ ಮಾನವರಿಗೆ । **ವಸು**—ಧನವನ್ನು । **ವಿವಾಸಸಿ**—ಕೊಡುತ್ತೀಯೆ । **ಇಂದೋ**—ಎಲೈ ಸೋಮನೇ (ಅಂತಹ ಯಜಮಾನನಿಗೆ) । **ಸಹಸ್ರಿಣಂ**—ಸಹಸ್ರಸಂಖ್ಯೆಯಲ್ಲಿಯೂ । **ಶತಾತ್ಮಾನಂ**—ನೂರಾರು ರೂಪದಲ್ಲಿಯೂ । **ರಯಿಂ**—ಧನವನ್ನು ಕೊಡುತ್ತೀಯೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಸೋಮನೇ, ಪ್ರಸಿದ್ಧನಾದ ನೀನು, ಹವಿಸ್ಸನ್ನರ್ಪಿಸತಕ್ಕ ಸಕಲ ಮಾನವರಿಗೂ ಧನವನ್ನು ಕೊಡುತ್ತೀಯೆ. ಅಂತಹ ಯಜಮಾನರಿಗೆ ಸಹಸ್ರಸಂಖ್ಯೆಯಲ್ಲಿಯೂ, ನೂರಾರು ರೂಪದಲ್ಲಿಯೂ ಧನವನ್ನು ಕೊಡುತ್ತೀಯೆ.

## English Translation.

For you, divine Indu, grant riches to every man who offers libations, thousand-fold and hundred-fold treasure.

॥ ಸಂಹಿತಾಪಾಠಃ ॥

ವಯಂ ತೇ ಅಸ್ಯ ವೃತ್ರಹನ್ವಸೋ ವಸ್ವಃ ಪುರುಸ್ಪೃಹಃ ।
ನಿ ನೇದಿಷ್ಠತಮಾ ಇಷಃ ಸ್ಯಾಮ ಸುಮ್ನಸ್ಯಾಧ್ರಿಗೋ ॥ ೫ ॥

॥ ಪದಪಾಠಃ ॥

ವಯಂ । ತೇ । ಅಸ್ಯ । ವೃತ್ರಽಹನ್ । ವಸೋ ಇತಿ । ವಸ್ವಃ । ಪುರುಽಸ್ಪೃಹಃ ।

ನಿ । ನೇದಿಷ್ಠಽತಮಾಃ । ಇಷಃ । ಸ್ಯಾಮ । ಸುಮ್ನಸ್ಯ । ಅಧ್ರಿಗೋ ಇತ್ಯಧ್ರಿಽಗೋ ॥ ೫ ॥

|| ಸಾಯಣಭಾಷ್ಯಂ ||

ಹೇ ವೃತ್ರಹಞ್ಛತ್ರೂಣಾಂ ಹಂತಃ ಸೋಮ ಅಸ್ಯೈತಾದೃಶಸ್ಯ ತೇ ತವ ಸ್ವಭೂತಾ ವಯಂ ಸ್ಮಃ । ತತೋ ಹೇ ವಸೋ ವಾಸಯಿತಃ ಪುರುಸ್ಪೃಹೋ ಬಹುಭಿಃ ಸ್ಪೃಹಣೀಯಸ್ಯ ವಸ್ವೋ ವಸುನೋ ಧನಸ್ಯ ತ್ವಯಾ ದೀಯಮಾನಸ್ಯ ವಯಂ ನಿ ನಿತರಾಂ ನೇದಿಷ್ಠತಮಾ ಅತ್ಯಂತಮಂತಿಕತಮಾಃ ಸ್ಯಾಮ । ತಥೇಷೋಽನ್ನಸ್ಯ ಕಿಂಚ ಹೇ ಅಧ್ರಿಗೋ ಅಧೃತಗಮನ ಸೋಮ ಸುಮ್ನಸ್ಯ ಸುಖಸ್ಯ ವಯಮಂತಿಕ-ತಮಾಃ ಸ್ಯಾಮ । ಭವೇಮ ॥

॥ಪ್ರತಿಪದಾರ್ಥ॥

**ವೃತ್ರಹನ್**—ಶತ್ರುನಾಶಕನಾದ ಎಲೈ ಸೋಮನೇ । **ವಯಂ**—ನಾವು । **ಅಸ್ಯ ತೇ**—ಪ್ರಸಿದ್ಧನಾದ ನಿನಗೆ ಸೇರಿದವರು । **ವಸೋ**—ವಸತಿದಾಯಕನಾದ ಎಲೈ ಸೋಮನೇ । **ಪುರುಸ್ಪೃಹಃ**—ಅನೇಕರಿಂದ ಅಪೇಕ್ಷಿತವಾದ । **ವಸ್ವಃ**—ಧನಕ್ಕೆ । **ನಿ**—ಅತಿಶಯವಾಗಿ । **ನೇದಿಷ್ಠತಮಾಃ**—ಅತ್ಯಂತ ಸಮೀಪಸ್ಥರಾಗಿರುವಂತೆ ಆಗಲಿ । **ಅಧ್ರಿಗೋ**—ಅಪ್ರತಿಹತವಾದ ಗಮನವುಳ್ಳ ಎಲೈ ಸೋಮನೇ । **ಇಷಃ**—ಅನ್ನಕ್ಕೂ । **ಸುಮ್ನಸ್ಯ**—ಸುಖಕ್ಕೂ । **ಸ್ಯಾಮ**—ನಾವು ಪಾತ್ರರಾಗುವಂತಾಗಲಿ.

|| ಭಾವಾರ್ಥ ||

ಶತ್ರುನಾಶಕನಾದ ಎಲೈ ಸೋಮನೇ, ನಾವು ಪ್ರಸಿದ್ಧನಾದ ನಿನಗೆ ಸೇರಿದವರು. ವಸತಿದಾಯಕನಾದ ಎಲೈ ಸೋಮನೇ, ಅನೇಕರಿಂದ ಅಪೇಕ್ಷಿತವಾದ ಧನಕ್ಕೆ ನಾವು ಸಮೀಪದಲ್ಲಿರುವಂತಾಗಲಿ. ಅಪ್ರತಿಹತವಾದ ಗಮನವುಳ್ಳ ಎಲೈ ಸೋಮನೇ, ಅನ್ನಕ್ಕೂ, ಸುಖಕ್ಕೂ ನಾವು ಪಾತ್ರರಾಗುವಂತಾಗಲಿ.

## English Translation.

Slayer of enemies, may we be your (people); Vasu, (may we be) extremely near your much-coveted wealth; irresistible (Soma), may we be near happiness.

|| ಸಂಹಿತಾಪಾಠಃ ||

ದ್ವಿರ್ಯಂ ಪಂಚ ಸ್ವಯಶಸಂ ಸ್ವಸಾರೋ ಅದ್ರಿಸಂಹತಂ ।
ಪ್ರಿಯಮಿಂದ್ರಸ್ಯ ಕಾಮ್ಯಂ ಪ್ರಸ್ನಾಪಯಂತ್ಯೂರ್ಮಿಣಂ ॥ ೬ ॥

॥ ಪದಪಾಠಃ ॥

ದ್ವಿಃ । ಯಂ । ಪಂಚ । ಸ್ವಽಯಶಸಂ । ಸ್ವಸಾರಃ । ಅದ್ರಿಽಸಂಹತಂ ।
ಪ್ರಿಯಂ । ಇಂದ್ರಸ್ಯ । ಕಾಮ್ಯಂ । ಪ್ರಽಸ್ನಾಪಯಂತಿ । ಊರ್ಮಿಣಂ ॥ ೬ ॥

|| ಸಾಯಣಭಾಷ್ಯಂ ||

ದ್ವಿಃ ಪಂಚ ದಶಸಂಖ್ಯಾಕಾಃ ಸ್ವಸಾರಃ ಕರ್ಮಕರಣಾರ್ಥಮಿತಸ್ತತೋ ಗಚ್ಛಂತ್ಯೋಽಂಗುಲಯಃ ಸ್ವಯಶಸಂ ಸ್ವಭೂತಯಶಸ್ಕಮದ್ರಿಸಂಹತಂ ಗ್ರಾವಭಿರಭಿಷುತಮಿಂದ್ರಸ್ಯ ಪ್ರಿಯಂ ಕಾಮ್ಯಂ ಸರ್ವೈಃ ಕಾಮ್ಯಮಾನಮೂರ್ಮಿಣಂ ಧಾರಾಭಿಸ್ತದ್ವಂತಂ ಯಂ ಸೋಮಂ ಪ್ರಸ್ನಾಪಯಂತಿ ವಸತೀವರೀಭಿಃ ಪ್ರಕರ್ಷೇಣ ಸೇಚಯಂತಿ ಯಜಮಾನಾಃ ತಂ ಪುನಂತೀತ್ಯುತ್ತರತ್ರ ಸಂಬಂಧಃ ||

|| ಪ್ರತಿಪದಾರ್ಥ |

**ಸ್ವಯಶಸಂ** — ತಾನೇ ಸಂಪಾದಿಸಿದ ಯಶಸ್ಸುಳ್ಳದ್ದೂ | **ಅದ್ರಿಸಂಹತಂ** — ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟದ್ದೂ | **ಇಂದ್ರಸ್ಯ** - ಇಂದ್ರನಿಗೆ | **ಪ್ರಿಯಂ** — ಪ್ರೀತಿಕರವಾದುದೂ | **ಕಾಮ್ಯಂ** — ಆಕರ್ಷಕವಾದುದೂ | **ಊರ್ಮಿಣಂ** — ಧಾರಾರೂಪದಲ್ಲಿರುವುದೂ ಆದ | **ಯಂ** — ಯಾವ ಸೋಮವನ್ನು | **ದ್ವಿಃ ಪಂಚ ಸ್ವಸಾರಃ** — ಹತ್ತು ಬೆರಳುಗಳೂ | **ಪ್ರಸ್ನಾಪಯಂತಿ** — ವಸತೀವರಿಗಳೊಂದಿಗೆ ಸೇರಿಸುವುವೋ (ಅದನ್ನು ಯಜಮಾನರು ಶುದ್ಧಿಗೊಳಿಸುತ್ತಾರೆ).

|| ಭಾವಾರ್ಥ ||

ಸ್ವಯಂಸಂಪಾದಿತವಾದ ಯಶಸ್ಸುಳ್ಳದ್ದೂ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟದ್ದೂ, ಇಂದ್ರನಿಗೆ ಪ್ರೀತಿಕರವಾದುದೂ, ಆಕರ್ಷಕವಾದುದೂ, ಧಾರಾರೂಪದಲ್ಲಿರುವುದೂ ಆದ ಯಾವ ಸೋಮವನ್ನು ಹತ್ತು ಬೆರಳುಗಳೂ ವಸತೀವರಿಗಳೊಂದಿಗೆ ಸೇರಿಸುವುವೋ, ಅದನ್ನು ಯಜಮಾನರು ಶುದ್ಧಿಗೊಳಿಸುತ್ತಾರೆ.

## English Translation.

Whom, celebrated, expressed by the stones, dear to Indra, beloved (by all) moving in streams, the twice five sister (fingers) bathe (in the sacred waters)—

|| ಸಂಹಿತಾಪಾಠಃ ||

ಪರಿ ತ್ಯಂ ಹರ್ಯತಂ ಹರಿಂ ಬಭ್ರುಂ ಪುನಂತಿ ವಾರೇಣ |
ಯೋ ದೇವಾನ್ವಿಶ್ವಾँ ಇತ್ಪರಿ ಮದೇನ ಸಹ ಗಚ್ಛತಿ || ೨ ||

|| ಪದಪಾಠಃ ||

ಪರಿ | ತ್ಯಂ | ಹರ್ಯತಂ | ಹರಿಂ | ಬಭ್ರುಂ | ಪುನಂತಿ | ವಾರೇಣ |
ಯಃ | ದೇವಾನ್ | ವಿಶ್ವಾನ್ | ಇತ್ | ಪರಿ | ಮದೇನ | ಸಹ | ಗಚ್ಛತಿ || ೨ ||

॥ ಸಾಯಣಭಾಷ್ಯಂ ॥

ಹರ್ಯತಂ ಸರ್ವೈಃ ಸ್ಪೃಹಣೀಯಂ ಹರಿಂ ಹರಿತವರ್ಣಂ ಬಭ್ರುಂ ಬಭ್ರುವರ್ಣಂ ಚ ತ್ಯಂ ತಂ ಸೋಮಂ ವಾರೇಣ ವಾಲೇನ ಪವಿತ್ರೇಣ ಪರಿ ಪುನಂತಿ । ಪರಿಶೋಧಯಂತಿ । ಯಃ ಸೋಮೋ ವಿಶ್ವಾನ್ ಸರ್ವಾನಿಂದ್ರಾದೀನ್ದೇವಾನಿದ್ದೇವಾನೇವ ಮದೇನ ಮಾದಕೇನ ರಸೇನ ಸಹ ಪರಿ ಗಚ್ಛತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಸೋಮನು । ವಿಶ್ವಾನ್ ದೇವಾನ್ ಇತ್—ಸಕಲ ದೇವತೆಗಳನ್ನೂ । ಮದೇನ ಸಹ—ಮದಕರವಾದ ತನ್ನ ರಸದೊಂದಿಗೆ । ಪರಿ ಗಚ್ಛತಿ—ಹೋಗಿ ಸಮಾಪಿಸುವನೋ ಅಂತಹ । ಹರ್ಯತಂ—ಎಲ್ಲರಿಗೂ ಅಪೇಕ್ಷಿತನೂ । ಹರಿಂ—ಪಚ್ಚೆವರ್ಣವುಳ್ಳವನೂ । ಬಭ್ರುಂ—ಹೊಂಬಣ್ಣವುಳ್ಳವನೂ ಆದ । ತ್ಯಂ—ಸೋಮನನ್ನು । ವಾರೇಣ—ಪವಿತ್ರದ ಉಣ್ಣೆಯ ನೂಲುಗಳಿಂದ । ಪರಿಪುನಂತಿ—ಶೋಧಿಸುತ್ತಾರೆ.

॥ ಭಾವಾರ್ಥ ॥

ಯಾವ ಸೋಮನು ತನ್ನ ಮಧುಕರವಾದ ರಸದೊಂದಿಗೆ ಸಕಲದೇವತೆಗಳನ್ನೂ ಸಮಾಪಿಸುವನೋ ಅಂತಹ ಎಲ್ಲರಿಗೂ ಅಪೇಕ್ಷಿತನೂ, ಪಚ್ಚೆವರ್ಣವುಳ್ಳವನೂ ಹೊಂಬಣ್ಣವುಳ್ಳವನೂ ಆದ ಸೋಮನನ್ನು ಋತ್ವಿಕ್ಕುಗಳು ದಶಾಪವಿತ್ರದಿಂದ ಶೋಧಿಸುತ್ತಾರೆ.

## English Translation

Him, coveted (by all), green-tinted, brown, they purify with the filter; who goes to all the gods with (his) exhilaration.

॥ ಸಂಹಿತಾಪಾಠಃ ॥

ಅಸ್ಯ ವೋ ಹ್ಯವಸಾ ಪಾಂತೋ ದಕ್ಷಸಾಧನಂ ।
ಯಃ ಸೂರಿಷು ಶ್ರವೋ ಬೃಹದ್ದಧೇ ಸ್ವರ್ಣ ಹರ್ಯತಃ ॥ ೮ ॥

। ಪದಪಾಠಃ ॥

ಅಸ್ಯ । ವಃ । ಹಿ । ಅವಸಾ । ಪಾಂತಃ । ದಕ್ಷಽಸಾಧನಂ ।
ಯಃ । ಸೂರಿಷು । ಶ್ರವಃ । ಬೃಹತ್ । ದಧೇ । ಸ್ವಃ । ನ । ಹರ್ಯತಃ ॥ ೮ ॥

॥ ಸಾಯಣಭಾಷ್ಯಂ ॥

ವಃ ॥ ಛಾಂದಸೋ ವಸಾದೇಶಃ ॥ ಹಿರವಧಾರಣೇ । ವೋ ಯೂಯಮಸ್ಯ ಸೋಮಸ್ಯಾವಸಾ ರಕ್ಷಣೇನ ದಕ್ಷಸಾಧನಂ ಬಲಸ್ಯ ಸಾಧನಂ ರಸಂ ಪಾಂತಃ ಪಿಬಂತೋ ಭವಥ । ಸ್ವರ್ಣಾದಿತ್ಯ ಇವ ಹರ್ಯತಃ

ಸರ್ವೈಃ ಕಾಮ್ಯಮಾನೋ ಯೋಽಯಂ ಸೋಮಃ ಸೂರಿಷು ಸ್ತೋತ್ರಾಣಿ ಪ್ರೇರಯತ್ಸು ಸ್ತೋತೃಷು ಬೃಹನ್ಮಹತ್ಪ್ರಭೂತಂ ಶ್ರವೋಽನ್ನಂ ದಧೇ ವಿದಧೇ । ಸ್ಥಾಪಯತೀತಿ ಯಾವತ್ ॥

॥ ಪ್ರತಿಪದಾರ್ಥ ॥

ಸ್ವಃ ನ—ಆದಿತ್ಯನಂತೆ । ಹರ್ಯತಃ—ಸಕಲರಿಂದಲೂ ಅಪೇಕ್ಷಿತನಾದ । ಯಃ—ಯಾವ ಸೋಮನು । ಸೂರಿಷು—ಸ್ತೋತೃಗಳಲ್ಲಿ । ಬೃಹತ್—ಪ್ರಭೂತವಾದ । ಶ್ರವಃ—ಅನ್ನವನ್ನು । ದಧೇ—ಸ್ಥಾಪಿಸುವನೋ ಅಂತಹ । ಅಸ್ಯ—ಸೋಮನ । ಅವಸಾ—ರಕ್ಷಣದೊಡನೆ । ದಕ್ಷಸಾಧನಂ—ಶಕ್ತಿಸಾಧನವಾದ ರಸವನ್ನು । ವಃ—ನೀವು । ಪಾಂತ—ಪಾನಮಾಡಿರಿ.

॥ ಭಾವಾರ್ಥ ॥

ಆದಿತ್ಯನಂತೆ ಸಕಲರ ಅಪೇಕ್ಷೆಗೂ ಪಾತ್ರನಾದ ಯಾವ ಸೋಮನು ಸ್ತೋತೃಗಳಲ್ಲಿ ಪ್ರಭೂತವಾದ ಅನ್ನವನ್ನು ಸ್ಥಾಪಿಸುವನೋ ಅಂತಹ ಸೋಮನ ರಕ್ಷಣದೊಡನೆ ಶಕ್ತಿಸಾಧನವಾದ ರಸವನ್ನು ನೀವು ಪಾನಮಾಡಿರಿ.

## English Translation.

For you by his protection have drunk the strengthening (juice of that Soma), who, beloved (by all) like the sun, has bestowed abundant food upon his worshippers.

॥ ಸಂಹಿತಾಪಾಠಃ ॥

ಸ ವಾಂ ಯಜ್ಞೇಷು ಮಾನವೀ ಇಂದುರ್ಜನಿಷ್ಟ ರೋದಸೀ ।
ದೇವೋ ದೇವೀ ಗಿರಿಷ್ಠಾ ಅಸ್ರೇಧನ್ತಂ ತುವಿಷ್ವಣಿ ॥ ೯ ॥

॥ ಪದಪಾಠಃ ॥

ಸಃ । ವಾಂ । ಯಜ್ಞೇಷು । ಮಾನವೀ ಇತಿ । ಇಂದುಃ । ಜನಿಷ್ಟ । ರೋದಸೀ ಇತಿ ।
ದೇವಃ । ದೇವೀ ಇತಿ । ಗಿರಿಽಸ್ಥಾಃ । ಅಸ್ರೇಧನ್ । ತಂ । ತುವಿಽಸ್ವನಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮಾನವೀ ಮಾನವ್ಯೌ ಮನೋಃ ಸ್ವಭೂತೇ ಹೇ ದೇವೀ ದ್ಯೋತಮಾನೇ ದ್ಯಾವಾಪೃಥಿವ್ಯೌ ವಾಂ ಯುವಯೋರ್ಯಜ್ಞೇಷು ಸ ಇಂದುಃ ಸೋಮೋಽಜನಿಷ್ಟ । ದೇವಃ ಸ್ವತೇಜಸಾ ಸರ್ವಂ ಪ್ರಕಾಶಯನ್ ಪೃಥಿವ್ಯಾಂ ಗಿರಿಷ್ಠಾ ಗ್ರಾವಸು ತಿಷ್ಠನ್ । ತುವಿಷ್ವಣಿ ಬಹುಸ್ವನ ಉಪರೇ ಯಜ್ಞೇ ವಾಸ್ರೇಧನ್ । ಋತ್ವಿಜೋ ಗ್ರಾವಭಿಃ ಯಾವತ್ ॥

॥ ಪ್ರತಿಪದಾರ್ಥ ॥

**ಮಾನವೀ**— ಮನುವಿನಿಂದ ಉತ್ಪನ್ನರಾದವರೂ । **ದೇವೀ** — ದೇವಾತ್ಮರೂ ಆದ । **ರೋದಸೀ** — ಎಲೈ ದ್ಯಾವಾಪೃಥಿವಿಗಳೇ। **ವಾಂ** — ನಿಮ್ಮನ್ನುದ್ದೇಶಿಸಿದ । **ಯಜ್ಞೇಷು** — ಯಜ್ಞಗಳಲ್ಲಿ । **ದೇವಃ** — ಪ್ರಕಾಶಮಾನನೂ। **ಗಿರಿಷ್ಠಾಃ** — ಹಿಂಡುವ ಕಲ್ಲುಗಳ ನಡುವೆ ಸ್ಥಿತನೂ ಆದ । **ಸಃ ಇಂದುಃ** — ರಸಾತ್ಮಕನಾದ ಸೋಮನು । **ಜನಿಷ್ಟ** — ಉತ್ಪನ್ನನಾಗಿದ್ದಾನೆ। **ತಂ** — ಉತ್ಪನ್ನನಾದ ಸೋಮನನ್ನು । **ತುವಿಷ್ವಣಿ** — ಶಬ್ದಯುತವಾದ ಯಜ್ಞದಲ್ಲಿ । **ಅಸ್ರೇಧನ್** — ಋತ್ವಿಕ್ಕುಗಳು ಹಿಂಡಿದರು

॥ ಭಾವಾರ್ಥ ॥

ಮನುವಿನಿಂದ ಉತ್ಪನ್ನರೂ, ದೇವಾತ್ಮರೂ ಆದ ಎಲೈ ದ್ಯಾವಾಪೃಥಿವಿಗಳೇ, ನಿಮ್ಮನ್ನುದ್ದೇಶಿಸಿದ ಯಜ್ಞಗಳಲ್ಲಿ ಪ್ರಕಾಶಮಾನನೂ, ಹಿಂಡುವ ಕಲ್ಲುಗಳ ನಡುವೆ ಸ್ಥಿತನೂ ಆದ ರಸಾತ್ಮಕನಾದ ಸೋಮನು ಉತ್ಪನ್ನನಾಗಿದ್ದಾನೆ. ಉತ್ಪನ್ನನಾದ ಸೋಮನನ್ನು ಶಬ್ದಯುತವಾದ ಯಜ್ಞದಲ್ಲಿ ಋತ್ವಿಕ್ಕುಗಳನ್ನು ಹಿಂಡಿದ್ದಾರೆ.

## English Translation.

Divine heaven and earth the progeny of Manu, the Soma juice is generated at your sacrifices, radiant, abiding in the grinding stones; (the priests) bruise him at the loud-sounding ceremony.

॥ ಸಂಹಿತಾಪಾಠಃ ॥

ಇಂದ್ರಾಯ ಸೋಮ ಪಾತವೇ ವೃತ್ರಘ್ನೇ ಪರಿ ಷಿಚ್ಯಸೇ ।
ನರೇ ಚ ದಕ್ಷಿಣಾವತೇ ದೇವಾಯ ಸದನಾಸದೇ ॥ ೧೦ ॥

॥ ಪದಪಾಠಃ ॥

ಇಂದ್ರಾಯ । ಸೋಮ । ಪಾತವೇ । ವೃತ್ರಽಘ್ನೇ । ಪರಿ । ಸಿಚ್ಯಸೇ ।
ನರೇ । ಚ । ದಕ್ಷಿಣಾಽವತೇ । ದೇವಾಯ । ಸದನಽಸದೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಸೋಮ ವೃತ್ರಘ್ನೇ ವೃತ್ರಸ್ಯ ಹಂತ್ರ ಇಂದ್ರಾಯ । ಷಷ್ಠ್ಯರ್ಥೇ ಚತುರ್ಥೀ ॥ ಇಂದ್ರಸ್ಯ ಪಾತವೇ ಪಾನಾರ್ಥಂ ಪರಿ ಷಿಚ್ಯಸೇ । ಪರಿತಃ ಪಾತ್ರೇಷು ಸಿಚ್ಯಸೇ । ವಸತೀವರೀಭಿರ್ವಾ । ಕಿಂಚ ದಕ್ಷಿಣಾವತೇ ಋತ್ವಿಗ್ಭ್ಯೋ ದಕ್ಷಿಣಾದಾನೇನ ತದ್ವತೇ ದೇವಾಯ ದೇವಾರ್ಥಂ ಹವೀಂಷಿ ದಾತುಂ ಸದನಸದೇ ಯಜ್ಞಗೃಹೇ ಸೀದತೇ ನರೇ ಮನುಷ್ಯಾಯ ಯಜಮಾನಾಯ ತಸ್ಮೈ ಫಲಪ್ರದಾನಾರ್ಥಂ ಪರಿ ಷಿಚ್ಯಸೇ ॥

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ವೃತ್ರಘ್ನೇ**—ವೃತ್ರಹಂತಕನಾದ । **ಇಂದ್ರಾಯ**—ಇಂದ್ರನ । **ಪಾತವೇ**—ಪಾನಾರ್ಥವಾಗಿಯೂ । **ದಕ್ಷಿಣಾವತೇ**— ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಡುವವನೂ । **ದೇವಾಯ**—ದೇವತೆಗಳಿಗೆ ಹವಿಸ್ಸನ್ನರ್ಪಿಸಲು । **ಸದನಸದೇ**— ಯಜ್ಞಗೃಹದಲ್ಲಿರುವ । **ನರೇ ಚ**—ಯಜಮಾನನಿಗೆ ಫಲದಾನಕ್ಕಾಗಿಯೂ । **ಪರಿಷಿಚ್ಯಸೇ**—ಹಿಂಡಲ್ಪಡುತ್ತೀಯೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ವೃತ್ರಹಂತಕನಾದ ಇಂದ್ರನ ಪಾನಾರ್ಥವಾಗಿಯೂ, ಋತ್ವಿಕ್ಕುಗಳಿಗೆ ದಕ್ಷಿಣೆಯನ್ನರ್ಪಿಸಿ ದೇವತೆಗಳಿಗೆ ಹವಿಸ್ಸನ್ನರ್ಪಿಸಲು ಯಜ್ಞಗೃಹದಲ್ಲಿರುವ ಯಜಮಾನನಿಗೆ ಫಲದಾನಕ್ಕಾಗಿಯೂ, ನೀನು ಹಿಂಡಲ್ಪಡುತ್ತೀಯೆ.

## English Translation.

You are poured forth, Soma, for Indra, the slayer of Vritra, to drink; and for the munificent worshipper who sits in the halls of sacrifice (to give oblations) to the god.

॥ ಸಂಹಿತಾಪಾಠಃ ॥

ತೇ ಪ್ರತ್ನಾಸೋ ವ್ಯುಷ್ಟಿಷು ಸೋಮಾಃ ಪವಿತ್ರೇ ಅಕ್ಷರನ್ ।
ಅಪಪ್ರೋಥಂತಃ ಸನುತರ್ಹುರಶ್ಚಿತಃ ಪ್ರಾತಸ್ತಾँ ಅಪ್ರಚೇತಸಃ ॥ ೧೧ ॥

॥ ಪದಪಾಠಃ ॥

ತೇ । ಪ್ರತ್ನಾಸಃ । ವಿಽಉಷ್ಟಿಷು । ಸೋಮಾಃ । ಪವಿತ್ರೇ । ಅಕ್ಷರನ್ ।
ಅಪಽಪ್ರೋಥಂತಃ । ಸನುತಃ । ಹುರುಃಽಚಿತಃ । ಪ್ರಾತರಿತಿ । ತಾನ್ । ಅಪ್ರಽಚೇತಸಃ ॥ ೧೧ ॥

॥ ಸಾಯಣಭಾಷ್ಯಂ ॥

ವ್ಯುಷ್ಟಿಷೂಷಸಾಂ ವ್ಯುಚ್ಛನೇಷು ಪ್ರಕಾಶನೇಷು ಪ್ರತ್ನಾಸಃ ಪ್ರತ್ನಾಸ್ತೇ ಸೋಮಾಃ ಪವಿತ್ರೇಽಕ್ಷರನ್ । ಕ್ಷರಂತಿ । ಯೇ ಸೋಮಾಃ ಸನುತೇರಂತರ್ಹಿತಾನಪ್ರಚೇತಸಃ ಪ್ರಜ್ಞಾನರಹಿತಾನ್ ಹುರಶ್ಚಿತಃ । ಸ್ತೇನನಾಮ್ನೈತತ್ ಕೌಟಿಲ್ಯೇನ ಚಿನ್ವಂತೀತಿ । ತಾನ್ಮಾಯಾವಿನಃ ಸ್ತೇನಾನ್ಪ್ರಾತಃ ಪ್ರಾತಃಕಾಲ ಏವಾಪಪ್ರೋಥಂತಃ । ಅಪಪ್ರೋಥನಂ ಚಾಪಪ್ರೇರಣಂ । ಅಪಪ್ರೇರಯಂತಃ ಶಬ್ದೇನ ನಿರಾಕುರ್ವಂತೋ ಭವಂತಿ । ತೇ ಕ್ಷರಂತೀತಿ ಸಮನ್ವಯಃ ॥

|| ಪ್ರತಿಪದಾರ್ಥ ||

**ಸನುತಃ**—ಅಡಗಿಕೊಂಡಿರುವವರೂ | **ಅಪ್ರಚೇತಸಃ**—ಪ್ರಜ್ಞಾರಹಿತರೂ | **ಹುರಶ್ಚಿತಃ**—ವಕ್ರಗಾಮಿಗಳೂ ಆದ | **ತಾನ್**—ಚೋರರೂಪರಾದ ಅಸುರರನ್ನು | **ಪ್ರಾತಃ**—ಪ್ರಾತಃಕಾಲದಲ್ಲೇ | **ಅಪಪ್ರೋಥಂತಃ**—ದೂರಕ್ಕೆ ಓಡಿಸುತ್ತ | **ಪ್ರತ್ನಾಸಃ**—ಪುರಾತನಗಳಾದ | **ತೇ ಸೋಮಃ**—ಸೋಮರಸಗಳು | **ವ್ಯುಷ್ಟಿಷು**—ಉಷಃಕಾಲಗಳ ಆವಿರ್ಭಾವಕಾಲಗಳಲ್ಲೇ | **ಪವಿತ್ರೇ**—ದಶಾಪವಿತ್ರದಲ್ಲಿ | **ಅಕ್ಷರನ್**—ಪ್ರವಹಿಸುತ್ತವೆ.

|| ಭಾವಾರ್ಥ ||

ಗುಟ್ಟಾಗಿ ಅಡಗಿಕೊಂಡಿರುವವರೂ, ದುಷ್ಟಬುದ್ಧಿಯುಳ್ಳವನೂ, ವಕ್ರಗಾಮಿಗಳೂ ಆದ ಚೋರರೂಪರಾದ ಅಸುರರನ್ನು ಪ್ರಾತಃಕಾಲದಲ್ಲೇ ದೂರಕ್ಕೆ ಓಡಿಸುತ್ತ ಪುರಾತನಗಳಾದ ಸೋಮರಸಗಳು ಉಷಃಕಾಲಗಳ ಆವಿರ್ಭಾವ ಕಾಲಗಳಲ್ಲೇ ದಶಾಪವಿತ್ರದಲ್ಲಿ ಪ್ರವಹಿಸುತ್ತವೆ.

English Translation

Those ancient Soma juices flow into the filter at the dawns, driving away in the early morning the concealed and ignorant thieves.

|| ಸಂಹಿತಾಪಾಠಃ ||

ತಂ ಸಖಾಯಃ ಪುರೋರುಚಂ ಯೂಯಂ ವಯಂ ಚ ಸೂರಯಃ |
ಅಶ್ಯಾಮ ವಾಜಗಂಧ್ಯಂ ಸನೇಮ ವಾಜಪಸ್ತ್ಯಂ || ೧೨ ||

|| ಪದಪಾಠಃ ||

ತಂ | ಸಖಾಯಃ | ಪುರಃऽರುಚಂ | ಯೂಯಂ | ವಯಂ | ಚ | ಸೂರಯಃ |
ಅಶ್ಯಾಮ | ವಾಜऽಗಂಧ್ಯಂ | ಸನೇಮ | ವಾಜऽಪಸ್ತ್ಯಂ || ೧೨ ||

|| ಸಾಯಣಭಾಷ್ಯಂ ||

**ಹೇ ಸಖಾಯಃ ಸ್ತೋತಾರಃ ಸೂರಯಃ ಪ್ರಾಜ್ಞಾ ಯೂಯಂ ವಯಂ ಚ ಯಜಮಾನಾಃ ಪುರೋರುಚಂ ಪುರತೋ ರೋಚಮಾನಂ ವಾಜಗಂಧ್ಯಂ ಬಲಕರಸಾಧುಗಂಧೋಪೇತಂ ಸೋಮಮಶ್ಯಾಮ | ಅಶ್ನೀಯಾಮ | ಪಿಬೇಮ | ಕಿಂಚ ವಾಜಪಸ್ತ್ಯಮನ್ನಯುಕ್ತಗೃಹಸಹಿತಂ ಯದ್ವಾ ಬಲಕರಂ ಸೋಮಂ ಸನೇಮ | ಸಂಭಜೇಮಹಿ | ಸೋಮೇನ ಬಲಾನ್ನಗೃಹಾದೀನಿ ಭವಂತೀತ್ಯರ್ಥಃ ||**

|| ಪ್ರತಿಪದಾರ್ಥ ||

**ಸಖಾಯಃ**—ಮಿತ್ರಭೂತರಾದ ಎಲೈ ಸ್ತುತಿಕರ್ತರೇ | **ಸೂರಯಃ**—ಪ್ರಾಜ್ಞರಾದ | **ಯೂಯಂ**—ನೀವೂ | **ವಯಂ ಚ**—ಯಜಮಾನರಾದ ನಾವೂ | **ಪುರೋರುಚಂ**—ಅಧಿಕವಾಗಿ ಪ್ರಕಾಶಿಸುವುದೂ |

**ವಾಜಗಂಧ್ಯಂ**—ಶಕ್ತ್ಯುತ್ಪಾದಕವಾದ ಸುಗಂಧವುಳ್ಳದ್ದೂ ಆದ ಸೋಮವನ್ನು | **ಅಶ್ಯಾಮ**—ಪಾನಮಾಡೋಣ | **ವಾಜಪಸ್ತ್ಯಂ**—ಅನ್ನಯುಕ್ತವಾದ ಗೃಹವನ್ನೂ | **ಸನೇಮ**—ಹೊಂದೋಣ.

|| ಭಾವಾರ್ಥ ||

ಮಿತ್ರಭೂತರಾದ ಎಲೈ ಸ್ತುತಿಕರ್ತರೇ, ಪ್ರಾಜ್ಞರಾದ ನೀವೂ, ಯಜಮಾನರಾದ ನಾವೂ, ಅಧಿಕವಾಗಿ ಪ್ರಕಾಶಿಸುವುದೂ, ಶಕ್ತ್ಯುತ್ಪಾದಕವಾದ ಸುಗಂಧವುಳ್ಳದ್ದೂ ಆದ ಸೋಮವನ್ನು ಪಾನಮಾಡೋಣ. ಅನ್ನಯುಕ್ತವಾದ ಗೃಹವನ್ನೂ ಹೊಂದೋಣ.

## English Translation.

May you and we, intelligent friends, eat the bright Soma fragrant and invigorating, may we obtain food and dwellings.

# ತೊಂಭತ್ತೊಂಭತ್ತನೆಯ ಸೂಕ್ತವು

---

|| ಸಾಯಣಭಾಷ್ಯಂ ||

**ಆ ಹರ್ಯತಾಯೇತ್ಯಷ್ಟರ್ಚಂ ತೃತೀಯಂ ಸೂಕ್ತಂ। ಕಶ್ಯಪಗೋತ್ರೌ ರೇಭಸೂನೂ ಏತತ್ಸಂಜ್ಞಾದ್ವಾವೃಷೀ । ಆದ್ಯಾ ಬೃಹತೀ ಸಪ್ತಾನುಷ್ಟುಭಃ । ಪವಮಾನಸೋಮೋ ದೇವತಾ । ತಥಾ ಚಾನುಕ್ರಾಂತಂ। ಆ ಹರ್ಯತಾಯೊಷ್ಟೌ ರೇಭಸೂನೂ ಕಾಶ್ಯಪೌ ಬೃಹತ್ಯಾದ್ಯೇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಆ ಹರ್ಯತಾಯ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಶ್ಯಪಗೋತ್ರದವರಾದ ರೇಭ ಮತ್ತು ಸೂನು ಎಂಬಿಬ್ಬರು ಋಷಿಗಳು. ಪವಮಾನಸೋಮನು ದೇವತೆಯು ; ಈ ಸೂಕ್ತದ ಮೊದಲನೆಯ ಋಕ್ಕು ಬೃಹತೀಛಂದಸ್ಕವು. ಉಳಿದ ಏಳು ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಆ ಹರ್ಯತಾಯೊಷ್ಟೌ ರೇಭಸೂನೂ ಕಾಶ್ಯಪೌ ಬೃಹತ್ಯಾದ್ಯಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೯೯

ಮಂಡಲ—೯ || ಅನುವಾಕ—೬ || ಸೂಕ್ತ—೯೯ ||

ಅಷ್ಟಕ—೭ || ಅಧ್ಯಾಯ—೪ || ವರ್ಗ—೨೫, ೨೬ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ||

|| ಋಷಿ—ರೇಭಸೂನೂ ಕಾಶ್ಯಪೌ ||

|| ದೇವತಾ—ಪವಮಾನಃ ಸೋಮಃ ||

|| ಛಂದಃ—೧. ಬೃಹತೀ | ೨-೮. ಅನುಷ್ಟುಪ್ ||

॥ ಸಂಹಿತಾಪಾಠಃ ॥

ಆ ಹರ್ಯತಾಯ ಧೃಷ್ಣವೇ ಧನುಸ್ತನ್ವಂತಿ ಪೌಂಸ್ಯಂ ।

ಶುಕ್ರಾಂ ವಯಂತ್ಯಸುರಾಯ ನಿರ್ಣಿಜಂ ವಿಪಾಮಗ್ರೇ ಮಹೀಯುವಃ ॥ ೧ ॥

॥ ಪದಪಾಠಃ ॥

ಆ । ಹರ್ಯತಾಯ । ಧೃಷ್ಣವೇ । ಧನುಃ । ತನ್ವಂತಿ । ಪೌಂಸ್ಯಂ ।

ಶುಕ್ರಾಂ । ವಯಂತಿ । ಅಸುರಾಯ । ನಿಃऽನಿಜಂ । ವಿಪಾಂ । ಅಗ್ರೇ । ಮಹೀಯುವಃ ॥ ೧ ॥

॥ ಸಾಯಣಭಾಷ್ಯಂ ॥

ಹರ್ಯತಾಯ ಸರ್ವೈಃ ಸ್ಪೃಹಣೀಯಾಯ ಧೃಷ್ಣವೇ ಶತ್ರೂಣಾಂ ಧರ್ಷಣಶೀಲಾಯ ಸೋಮಾಯ ಪೌಂಸ್ಯಂ ಪುಂಸ್ತ್ವಸ್ಯಾಭಿವ್ಯಂಜಕಂ ಧನುರಾ ತನ್ವಂತಿ । ಧನುಷಿ ಜ್ಯಾಂ ಕುರ್ವಂತೀತಿ । ಸೋಮಸ್ಯ ಧಾರಾವಿಸರ್ಗಾರ್ಥಂ ವಿತಾಯಮಾನಂ ಪವಿತ್ರಮಭಿಧೀಯತೇ । ತದೇವ ವಿವೃಣೋತಿ । ಮಹೀಯುವಃ ಪೂಜಾಕಾಮಾ ಋತ್ವಿಜೋ ವಿಪಾಂ ಮೇಧಾವಿನಾಂ ದೇವಾನಾಮಗ್ರೇ ಪುರಸ್ತಾಚ್ಛುಕ್ರಾಂ ಶುಕ್ಲವರ್ಣಾಂ ನಿರ್ಣಿಜಂ ಯಯಾ ಸೋಮೋ ನಿರ್ಣಿಜ್ಯತೇ ತಾಮಸುರಾಯ ಬಲವತೇ ವಯಂತಿ । ವಿತನ್ವಂತಿ । ದಶಾಪವಿತ್ರಂ ವಿಸ್ತಾರಯಂತೀತ್ಯರ್ಥಃ । ವಯತಿರ್ಗತಿಕರ್ಮಾ ॥

॥ ಪ್ರತಿಪದಾರ್ಥ ॥

**ಹರ್ಯತಾಯ**—ಆಕರ್ಷಕವಾದ ರೂಪವುಳ್ಳವನೂ । **ಧೃಷ್ಣವೇ**—ಶತ್ರುಗಳನ್ನು ಎದುರಿಸುವವನೂ ಆದ ಸೋಮನ ರಸಕ್ಕಾಗಿ । **ಪೌಂಸ್ತ್ಯಂ**—ಪುರುಷಶಕ್ತಿಯನ್ನು ಪ್ರಕಟಿಸುವ । **ಧನುಃ**—ಧನುಸ್ಸನ್ನು । **ಆ ತನ್ವಂತಿ**—ಹೆದೆಯೇರಿಸಿ ಸಿದ್ಧಪಡಿಸುತ್ತಾರೆ । **ಮಹೀಯುವಃ**—ಪೂಜಾಕಾಮರಾದ ಋತ್ವಿಕ್ಕುಗಳು । **ವಿಪಾಂ**—ಮೇಧಾವಿಗಳಾದ ದೇವತೆಗಳ । **ಅಗ್ರೇ**—ಮುಂಭಾಗದಲ್ಲಿ । **ಶುಕ್ರಾಂ**—ಶುಭ್ರವರ್ಣದ್ದೂ । **ನಿರ್ಣಿಜಂ**—ಶುದ್ಧಿಸಾಧಕವಾದುದೂ ಆದ ಪವಿತ್ರವನ್ನು । **ಅಸುರಾಯ**—ಶಕ್ತಿಯುತನಾದ ಸೋಮನಿಗಾಗಿ । **ವಯಂತಿ**—ವಿಸ್ತರಿಸಿ ಹರಡುತ್ತಾರೆ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳವನೂ, ಶತ್ರುಗಳನ್ನು ಎದುರಿಸುವವನೂ ಆದ ಸೋಮನ ರಸಕ್ಕಾಗಿ ಪುರುಷಶಕ್ತಿಯನ್ನು ಪ್ರಕಟಿಸುವ ಧನುಸ್ಸನ್ನು ಹೆದೆಯೇರಿಸಿ ಸಿದ್ಧಪಡಿಸುತ್ತಾರೆ. ಪೂಜಾಕಾಮರಾದ ಋತ್ವಿಕ್ಕುಗಳು ಮೇಧಾವಿಗಳಾದ ದೇವತೆಗಳ ಮುಂಭಾಗದಲ್ಲಿ ಶುಭ್ರವರ್ಣದ್ದೂ, ಶುದ್ಧಿಸಾಧಕವಾದುದೂ ಆದ ಪವಿತ್ರವನ್ನು ಶಕ್ತಿಯುತನಾದ ಸೋಮನಿಗಾಗಿ ವಿಸ್ತರಿಸಿ ಹರಡುತ್ತಾರೆ.

English Translation.

They stretch the bow of manhood for the beloved courageous (Soma); (the priests) wishing to worship spread out the white filter for the mighty (Soma) in the presence of the sage (deities).

|| ಸಂಹಿತಾಪಾಠಃ ||

ಅಧ ಕ್ಷಪಾ ಪರಿಷ್ಕೃತೋ ವಾಜಾಁ ಅಭಿ ಪ್ರ ಗಾಹತೇ ।

ಯದೀ ವಿವಸ್ವತೋ ಧಿಯೋ ಹರಿಂ ಹಿನ್ವಂತಿ ಯಾತವೇ || ೨ ||

|| ಪದಪಾಠಃ ||

ಅಧ । ಕ್ಷಪಾ । ಪರಿಽಕೃತಃ । ವಾಜಾನ್ । ಅಭಿ । ಪ್ರ । ಗಾಹತೇ ।

ಯದಿ । ವಿವಸ್ವತಃ । ಧಿಯಃ । ಹರಿಂ । ಹಿನ್ವಂತಿ । ಯಾತವೇ || ೨ ||

|| ಸಾಯಣಭಾಷ್ಯಂ ||

ಕ್ಷಪಾ || ಸುಪಾಂ ಸುಲುಗಿತಿ ಪಂಚಮ್ಯಾ ಆಕಾರಃ || ಕ್ಷಪಾಯಾ ರಾತ್ರೇರಧಾನಂತರಂ ಪ್ರಾತಃಕಾಲೇ ಪರಿಷ್ಕೃತಃ || ಭೂಷಣಾರ್ಥೇ ಸಂಪರ್ಯುಪೇಭ್ಯ ಇತಿ ಕರೋತೇಃ ಸುಡಾಗಮಃ || ಅದ್ಭಿರಲಂಕೃತಃ । ಯದ್ವಾ । ಕ್ಷಪಯಿತ್ರ್ಯಾಂ ಸೇನಾಯಾಮಲಂಕೃತಃ । ಸೋಮೋ ವಾಜಾನನ್ನಾನಿ ಬಲಾನಿ ವಾಭಿಲಕ್ಷ್ಯ ಪ್ರ ಗಾಹತೇ । ಪ್ರ ಗಚ್ಛತಿ । ವಿವಸ್ವತಃ ಪರಿಚರಣವತೋ ಯಜಮಾನಸ್ಯ ಧಿಯಃ ಕರ್ಮಸಾಧನಭೂತಾ ಅಂಗುಲಯೋ ಹರಿಂ ಹರಿತವರ್ಣಮೇತಮಂಶುಂ ಯಾತವೇ ಪಾತ್ರಾಣ್ಯಭಿಗಮನಾಯ ಯದಿ ಹಿನ್ವಂತಿ ಪ್ರೇರಯಂತಿ ತರ್ಹಿ ಸವನಾನಿ ಗಚ್ಛತೀತಿ ||

|| ಪ್ರತಿಪದಾರ್ಥ ||

**ಯದಿ**—ಯಾವಾಗ । **ವಿವಸ್ವತಃ**—ಯಜಮಾನನ । **ಧಿಯಃ**—ಬೆರಳುಗಳು । **ಹರಿಂ**--ಪಚ್ಚೆವರ್ಣವುಳ್ಳ ಸೋಮನನ್ನು । **ಯಾತವೇ**—ಪಾತ್ರಾಭಿಮುಖವಾಗಿ ಹೋಗಲು । **ಹಿನ್ವಂತಿ**—ಪ್ರೇರಿಸುತ್ತವೆಯೋ ಆಗ । **ಕ್ಷಪಾ ಅಧ**-ರಾತ್ರಿಯಾದನಂತರ ಪ್ರಾತಃಕಾಲದಲ್ಲಿ । **ಪರಿಷ್ಕೃತಃ**-ಉದಕಗಳೊಡನೆ ಅಲಂಕೃತನಾದ ಸೋಮನು । **ವಾಜಾನ್ ಅಭಿ**—ಅನ್ನಾಭಿಮುಖವಾಗಿ । **ಪ್ರ ಗಾಹತೇ**—ಪ್ರವಹಿಸುತ್ತಾನೆ

|| ಭಾವಾರ್ಥ ||

ಯಾವಾಗ ಯಜಮಾನನ ಬೆರಳುಗಳು ಪಚ್ಚೆವರ್ಣವುಳ್ಳ ಸೋಮನನ್ನು ಪಾತ್ರಾಭಿಮುಖವಾಗಿ ಹೋಗಲು ಪ್ರೇರಿಸುತ್ತವೆಯೋ, ಆಗ ರಾತ್ರಿಯಾದನಂತರ ಪ್ರಾತಃಕಾಲದಲ್ಲಿ ಉದಕಗಳೊಡನೆ ಅಲಂಕೃತನಾದ ಸೋಮನು ಅನ್ನಾಭಿಮುಖನಾಗಿ ಪ್ರವಹಿಸುತ್ತಾನೆ.

## English Translation.

Consecrated at the end of the night (the Soma) plunges into the viands, when the fingers of the worshipper press out the green-tinted (juice) to go (to the vessels).

॥ ಸಂಹಿತಾಪಾಠಃ ॥

ತಮಸ್ಯ ಮರ್ಜಯಾಮಸಿ ಮದೋ ಯ ಇಂದ್ರಪಾತಮಃ ।
ಯಂ ಗಾವ ಆಸಭಿರ್ದಧುಃ ಪುರಾ ನೂನಂ ಚ ಸೂರಯಃ ॥ ೩ ॥

॥ ಪದಪಾಠಃ ॥

ತಂ । ಅಸ್ಯ । ಮರ್ಜಯಾಮಸಿ । ಮದಃ । ಯಃ । ಇಂದ್ರಽಪಾತಮಃ ।
ಯಂ । ಗಾವಃ । ಆಸ್ಽಭಿಃ । ದಧುಃ । ಪುರಾ । ನೂನಂ । ಚ । ಸೂರಯಃ ॥ ೩ ॥

॥ ಸಾಯಣಭಾಷ್ಯಂ ॥

ಅಸ್ಯ ಸೋಮಸ್ಯ ತಂ ರಸಂ ಮರ್ಜಯಾಮಸಿ । ಮರ್ಜಯಾಮಃ । ಶೋಧಯಾಮಃ । ಅಲಂಕುರ್ಮೋ ವಾ । ಯೋ ಮದೋ ಮದಕರೋ ರಸ ಇಂದ್ರಪಾತಮ ಇಂದ್ರೇಣಾತ್ಯಂತಂ ಪಾತವ್ಯೋ ಭವತಿ । ಕಿಂಚ ಗಾವೋ ಗಂತಾರಃ ಸೂರಯಃ ಸ್ತೋತಾರಃ ಪುರಾ ಚ ನೂನಮಿದಾನೀಂ ಚ ಯಂ ಸೋಮರಸಮಾಸಭಿರಾಸ್ಯೈರ್ದಧುಃ ಧಾರಯಂತಿ । ಪಿಬಂತೀತಿ ಯಾವತ್ । ಯದ್ವಾ । ಗಾವೋ ಧೇನವೋ ಯಂ ಸೋಮಂ ತೃಣಾದಿಷ್ವವಸ್ಥಿತಮಾಸಭಿರಾಸ್ಯೈರ್ದಧುಃ ಧಾರಯಂತಿ ತೃಣರೂಪೇಣ ಭಕ್ಷಯಂತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಸೋಮರಸವು । **ಮದಃ**—ಹರ್ಷಕಾರಕವಾಗಿಯೂ । **ಇಂದ್ರಪಾತಮಃ**—ಇಂದ್ರನ ಪಾನಕ್ಕೆ ಯೋಗ್ಯವಾಗಿಯೂ ಇರುವುದೋ ಅಂತಹ । **ಅಸ್ಯ ತಂ**—ಈ ಸೋಮರಸವನ್ನು । **ಮರ್ಜಯಾಮಸಿ**—ಶೋಧಿಸಿ ಅಲಂಕರಿಸುತ್ತೇವೆ । **ಯಂ**—ಯಾವ ಅದೇ ಸೋಮರಸವನ್ನು । **ಗಾವಃ**—ಪೂಜಾನಿರತರಾದ । **ಸೂರಯಃ**—ಸ್ತುತಿಕರ್ತರು । **ಪುರಾ**—ಹಿಂದೆಯೂ । **ನೂನಂ**—ಈಗಲೂ । **ಆಸಭಿಃ**—ಮುಖಗಳಿಂದ । **ದಧುಃ**—ಧರಿಸುತ್ತಾರೆ (ಪಾನಮಾಡುತ್ತಾರೆ).

॥ ಭಾವಾರ್ಥ ॥

ಹರ್ಷಕಾರಕವಾಗಿಯೂ ಇಂದ್ರನ ಪಾನಕ್ಕೆ ಯೋಗ್ಯವಾಗಿಯೂ ಇರುವ ಸೋಮರಸವನ್ನು ಶೋಧಿಸಿ ಅಲಂಕರಿಸುತ್ತೇವೆ. ಪ್ರಸಿದ್ಧವಾದ ಈ ಸೋಮರಸವನ್ನು ಪೂಜಾನಿರತರಾದ ಸ್ತುತಿಕರ್ತರು ಹಿಂದೆ ಪಾನಮಾಡಿದಂತೆ ಈಗಲೂ ಪಾನಮಾಡುತ್ತಾರೆ.

## English Translation.

We purify the juice of that Soma which is exhilarating and fit for Indra's drinking ; which the approaching worshippers both now and of old take up in their mouths.

ತಂ ಗಾಥಯಾ ಪುರಾಣ್ಯಾ ಪುನಾನಮಭ್ಯನೂಷತ ।

ಉತೋ ಕೃಪಂತ ಧೀತಯೋ ದೇವಾನಾಂ ನಾಮ ಬಿಭ್ರತೀಃ ॥ ೪ ॥

॥ ಪದಪಾಠಃ ॥

ತಂ । ಗಾಥಯಾ । ಪುರಾಣ್ಯಾ । ಪುನಾನಂ । ಅಭಿ । ಅನೂಷತ ।

ಉತೋ ಇತಿ । ಕೃಪಂತೆ । ಧೀತಯಃ । ದೇವಾನಾಂ । ನಾಮ । ಬಿಭ್ರತೀಃ ॥ ೪ ॥

॥ ಸಾಯಣಭಾಷ್ಯಂ ॥

ಪುನಾನಂ ಪೂಯಮಾನಂ ತಂ ಸೋಮಂ ಪುರಾಣ್ಯಾ ಪುರಾ ಕೃತಯಾ ಗಾಥಯಾ ಸ್ತುತ್ಯಾಭ್ಯನೂಷತ । ಸ್ತೋತಾರೋಽಭಿಷ್ಟುವಂತಿ ॥ ನೂ ಸ್ತವನೇ । ಲುಙ್ ರೂಪಂ ॥ ಉತೋ ಅಪಿ ಚ ನಾಮ ಕರ್ಮಾರ್ಥಂ ನಮನಂ ಬಿಭ್ರತೀರ್ಬಿಭ್ರಾಣಾ ಧೀತಯೋಽಂಗುಲಯೋ ದೇವಾನಾಂ ಸೋಮರೂಪಹವಿಷ್ಪ್ರದಾನಾಯ ಕೃಪಂತೆ । ಕಲ್ಪಯಂತಿ । ಸಮರ್ಥಾ ಭವಂತಿ ॥ ಕೃಪೂ ಸಾಮರ್ಥ್ಯೇ ॥

॥ ಪ್ರತಿಪದಾರ್ಥ ॥

**ಪುನಾನಂ**—ಶುದ್ಧಿಯನ್ನು ಹೊಂದಿದ । **ತಂ**—ಸೋಮನನ್ನು । **ಪುರಾಣ್ಯಾ**—ಹಿಂದೆ ನಿರ್ಮಿತವಾದ । **ಗಾಥಯಾ**—ಸ್ತುತಿಯಿಂದ । **ಅಭ್ಯನೂಷತ**—ಸ್ತುತಿಕರ್ತರು ಪ್ರಶಂಸಿಸುತ್ತಾರೆ । **ಉತೋ**—ಮತ್ತು । **ನಾಮ ಬಿಭ್ರತೀಃ**-ಹಿಂಡಲು ಯೋಗ್ಯವಾದ ಹಿಡಿತವನ್ನು ಹೊಂದಿದ । **ಧೀತಯಃ**-ಬೆರಳುಗಳು । **ದೇವಾನಾಂ**-ದೇವತೆಗಳಿಗೆ ರಸವನ್ನು ಹಿಂಡಲು । **ಕೃಪಂತೆ**—ಶಕ್ತವಾಗುತ್ತವೆ.

॥ ಭಾವಾರ್ಥ ॥

ಶುದ್ಧಿಯನ್ನು ಹೊಂದಿದ ಸೋಮನನ್ನು ಹಿಂದೆ ನಿರ್ಮಿತವಾದ ಸ್ತುತಿಯಿಂದ ಸ್ತುತಿಕರ್ತರು ಪ್ರಶಂಸಿಸುತ್ತಾರೆ. ಮತ್ತು ಹಿಂಡಲು ಯೋಗ್ಯವಾದ ಹಿಡಿತವನ್ನು ಹೊಂದಿದ ಬೆರಳುಗಳು ದೇವತೆಗಳಿಗೆ ರಸವನ್ನು ಹಿಂಡಲು ಶಕ್ತವಾಗುತ್ತವೆ.

English Translation

They celebrate the purified Soma juice with an ancient hymn of praise, and the fingers exercising their pressure are able (to prepare the oblation) for the gods.

ತಮುಕ್ಷಮಾಣಮವ್ಯಯೋ ವಾರೇ ಪುನಂತಿ ಧರ್ಣಸಿಂ ।

ದೂತಂ ನ ಪೂರ್ವಚಿತ್ತಯ ಆ ಶಾಸತೇ ಮನೀಷಿಣಃ ॥ ೫ ॥

॥ ಪದಪಾಠಃ ॥

ತಂ । ಉಕ್ಷಮಾಣಂ । ಅವ್ಯಯೋ । ವಾರೇ । ಪುನಂತಿ । ಧರ್ಣಸಿಂ ।

ದೂತಂ । ನ । ಪೂರ್ವಽಚಿತ್ತಯೇ । ಆ । ಶಾಸತೇ । ಮನೀಷಿಣಃ ॥ ೫ ॥

॥ ಸಾಯಣಭಾಷ್ಯಂ ॥

ಉಕ್ಷಮಾಣಮದ್ಭಿಃ ಸಿಚ್ಯಮಾನಂ ಧರ್ಣಸಿಂ ಸರ್ವಸ್ಯ ಧಾರಕಂ ಸೋಮಮವ್ಯಯೋಽವಿಮಯೇ ವಾರೇ ವಾಲೇ ಪವಿತ್ರೇ ಪುನಂತಿ । ಶೋಧಯಂತಿ । ತತೋ ಮನೀಷಿಣೋ ಮೇಧಾವಿನೋ ಯಜಮಾನಾಸ್ತಮಿಮಂ ಸೋಮಂ ದೂತಂ ನ ದೂತಮಿವ ಪೂರ್ವಚಿತ್ತಯೇ ದೇವಾನಾಂ ಪೂರ್ವಮೇವ ಪ್ರಜ್ಞಾಪನಾಯಾ ಶಾಸತೇ ಪ್ರಾರ್ಥಯಂತೇ ॥

॥ ಪ್ರತಿಪದಾರ್ಥ ॥

**ಉಕ್ಷಮಾಣಂ**—ಉದಕಗಳೊಂದಿಗೆ ಸೇರಿಸಲ್ಪಡುವವನೂ । **ಧರ್ಣಸಿಂ**—ಸಕಲವನ್ನೂ ಧರಿಸುವವನೂ ಆದ । **ತಂ**—ಸೋಮನನ್ನು । **ಅವ್ಯಯೋ ವಾರೇ**—ದಶಾಪವಿತ್ರದ ಎಣ್ಣೆನೂಲುಗಳಲ್ಲಿ (ಬಲೆಯಂತಿರುವ ದಶಾಪವಿತ್ರದಲ್ಲಿ) । **ಪುನಂತಿ**—ಶುದ್ಧಿಮಾಡುತ್ತಾರೆ । **ಮನೀಷಿಣಃ**—ಪ್ರಾಜ್ಞರಾದ ಯಜಮಾನರು । **ದೂತಂ ನ**—ದೂತನಿಗೆ ಹೇಳುವಂತೆ । **ಪೂರ್ವಚಿತ್ತಯೇ**—ದೇವತೆಗಳಿಗೆ ತನ್ನ ಪೂಜೆಯನ್ನು ಮೊದಲೇ ತಿಳಿಸುವಂತೆ । **ಆ ಶಾಸತೇ**—ಪ್ರಾರ್ಥಿಸುತ್ತಾರೆ.

॥ ಭಾವಾರ್ಥ ॥

ಉದಕಗಳೊಂದಿಗೆ ಸೇರಿಸಲ್ಪಡುವವನೂ, ಸಕಲವನ್ನು ಧರಿಸುವವನೂ ಆದ ಸೋಮನನ್ನು ಬಲೆಯಂತೆ ಹೊಸೆದಿರುವ ದಶಾಪವಿತ್ರದ ನೂಲುಗಳಿಂದ ಶುದ್ಧಿಮಾಡುತ್ತಾರೆ. ಪ್ರಾಜ್ಞರಾದ ಯಜಮಾನರು ದೂತನಿಗೆ ಹೇಳುವಂತೆ ದೇವತೆಗಳಿಗೆ ತನ್ನ ಪೂಜೆಯನ್ನು ಮೊದಲೇ ತಿಳಿಸುವಂತೆ ಪ್ರಾರ್ಥಿಸುತ್ತಾರೆ.

## English Translation.

Him sprinkled (with water) the supporter (of all things) they purify in the woollen filter ; the wise (worshippers) instruct him as a messenger to proclaim (their prayers) beforehand (to the gods).

॥ ಸಂಹಿತಾಪಾಠಃ ॥

ಸ ಪುನಾನೋ ಮದಿಂತಮಃ ಸೋಮಶ್ಚಮೂಷು ಸೀದತಿ ।

ಪಶೌ ನ ರೇತ ಆದಧತ್ಪತಿರ್ವಚಸ್ಯತೇ ಧಿಯಃ ॥ ೬ ॥

॥ ಪದಪಾಠಃ ॥

ಸಃ । ಪುನಾನಃ । ಮದಿನ್ऽತಮಃ । ಸೋಮಃ । ಚಮೂಷು । ಸೀದತಿ ।

ಪಶೌ । ನ । ರೇತಃ । ಆऽದಧತ್ । ಪತಿಃ । ವಚಸ್ಯತೇ । ಧಿಯಃ ॥ ೬ ॥

॥ ಸಾಯಣಭಾಷ್ಯಂ ॥

ಮದಿಂತಮೋऽತ್ಯಂತಂ ಮಾದಯಿತಾ ಸ ಸೋಮಃ ಪುನಾನಃ ಪೂಯಮಾನಃ ಸಂಶ್ಚಮೂಷು ಚಮಸೇಷು ಸೀದತಿ । ತತಃ ಪಶೌ ನ ಯಥಾ ಪಶೌ ಕಶ್ಚಿದ್ವೃಷಭೋ ರೇತ ಆದಧಾತಿ ತದ್ವಚ್ಚಮಸಾದಿಷು ರೇತಃ ಸ್ವೀಯಂ ರಸಮಾದಧದಾದಧಾನೋ ಧಿಯಃ ಕರ್ಮಣಃ ಪತಿಃ ಪಾಲಯಿತಾಯಂ ಸೋಮೋ ವಚಸ್ಯತೇ । ಅಭಿಷ್ಟೂಯತೇ ॥

॥ ಪ್ರತಿಪದಾರ್ಥ ॥

**ಮದಿಂತಮಃ**—ಅತ್ಯಂತ ಹರ್ಷಕಾರಕನಾದ । **ಸಃ ಸೋಮಃ**—ಸೋಮದೇವನು । **ಪುನಾನಃ**—ಶುದ್ಧಿಯನ್ನು ಹೊಂದಿ । **ಚಮೂಷು**—ಚಮೂಪಾತ್ರೆಗಳಲ್ಲಿ । **ಸೀದತಿ**—ಸ್ಥಿತನಾಗುತ್ತಾನೆ । **ಪಶೌ ನ**—ಗೋವಿನಲ್ಲಿ ವೃಷಭವು ರೇತಸ್ಸನ್ನು ಸ್ಥಾಪಿಸುವಂತೆ । **ಧಿಯಃ ಪತಿಃ**—ಕರ್ಮಪಾಲಕನಾದ ಸೋಮನು । **ರೇತಃ**—ತನ್ನ ರಸವನ್ನು । **ಆದಧತ್**—ಪಾತ್ರೆಯಲ್ಲಿ ಸ್ಥಾಪಿಸುತ್ತ । **ವಚಸ್ಯತೇ**—ಪ್ರಶಂಸಿಸಲ್ಪಡುತ್ತಾನೆ.

॥ ಭಾವಾರ್ಥ ॥

ಅತ್ಯಂತ ಹರ್ಷಕಾರಕನಾದ ಸೋಮದೇವನು ಶುದ್ಧಿಯನ್ನು ಹೊಂದಿ ಚಮೂಪಾತ್ರೆಗಳಲ್ಲಿ ಸ್ಥಿತನಾಗುತ್ತಾನೆ. ಗೋವಿನಲ್ಲಿ ವೃಷಭವು ರೇತಸ್ಸನ್ನು ಸ್ಥಾಪಿಸುವಂತೆ ಕರ್ಮಪಾಲಕನಾದ ಸೋಮನು ತನ್ನ ರಸವನ್ನು ಪಾತ್ರೆಯಲ್ಲಿ ಸ್ಥಾಪಿಸುತ್ತ ಪ್ರಶಂಸಿಸಲ್ಪಡುತ್ತಾನೆ.

English Translation.

The most exhilarating Soma, being purified, alights on the vessels; putting his seed (in the vessels) as in a heifer, the protector of the rite is worshipped.

॥ ಸಂಹಿತಾಪಾಠಃ ॥

ಸ ಮೃಜ್ಯತೇ ಸುಕರ್ಮಭಿರ್ದೇವೋ ದೇವೇಭ್ಯಃ ಸುತಃ ।

ವಿದೇ ಯದಾಸು ಸಂದದಿರ್ಮಹೀರಪೋ ವಿ ಗಾಹತೇ ॥ ೭ ॥

|| ಪದಪಾಠಃ ||

ಸಃ । ಮೃಜ್ಯತೇ । ಸುಕರ್ಮ್ಽಭಿಃ । ದೇವಃ । ದೇವೇಭ್ಯಃ । ಸುತಃ ।
ವಿದೇ । ಯತ್ । ಆಸು । ಸಂಽದದಿಃ । ಮಹೀಃ । ಅಪಃ । ವಿ । ಗಾಹತೇ ॥ ೭ ॥

|| ಸಾಯಣಭಾಷ್ಯಂ ||

ದೇವೇಭ್ಯೋ ದೇವಾರ್ಥಂ ಸುತೋಽಭಿಷುತೋ ದೇವೋ ದ್ಯೋತಮಾನಃ ಸ್ತೋತವ್ಯೋ ವಾ ಸ ಸೋಮಃ ಸುಕರ್ಮಭಿರೃತ್ವಿಗ್ಭಿರ್ಮೃಜ್ಯತೇ । ಪರಿಪೂಯತೇ । ಯದ್ಯದಾಯಂ ಸೋಮ ಆಸು ಪ್ರಜಾಸು ಸಂದದಿಃ ಸಮ್ಯಗ್ಧನದಾನಶೀಲ ಇತಿ ವಿದೇ ಜ್ಞಾಯತೇ ತದಾನೀಂ ಮಹೀರ್ಮಹತೀರಪೋ ವಸತೀವರೀರ್ವಿ ಗಾಹತೇ । ವಿಶೇಷೇಣಾಭಿಗಚ್ಛತಿ । ಯದಾ ಸೋಮಮಭಿಷುಣ್ವಂತಿ ತದಾ ತೇಭ್ಯೋ ಧನಂ ಪ್ರಯಚ್ಛತೀತ್ಯರ್ಥಃ ॥

|| ಪ್ರತಿಪದಾರ್ಥ ||

**ದೇವೇಭ್ಯಃ**—ದೇವತೆಗಳಿಗಾಗಿ । **ಸುತಃ**—ಹಿಂಡಲ್ಪಟ್ಟವನೂ । **ದೇವಃ**—ಪ್ರಕಾಶಮಾನನೂ ಆದ । **ಸಃ**—ಸೋಮದೇವನು । **ಸುಕರ್ಮಭಿಃ**—ಉತ್ತಮವಾದ ಕರ್ಮವುಳ್ಳ ಋತ್ವಿಕ್ಕುಗಳಿಂದ। **ಮೃಜ್ಯತೇ**—ಶೋಧಿಸಲ್ಪಡುತ್ತಾನೆ । **ಯತ್**—ಯಾವಾಗ । **ಆಸು**—ಈ ಪ್ರಜೆಗಳಲ್ಲಿ । **ಸಂದದಿಃ**—ಉದಾರವಾದ ದಾನಿಯೆಂದು । **ವಿದೇ**—ಅರಿಯಲ್ಪಡುವನೋ ಆಗ । **ಮಹೀಃ**—ಮಹತ್ತಾದ । **ಅಪಃ**—ವಸತೀವರಿಉದಕಗಳನ್ನು । **ವಿ ಗಾಹತೇ**—ಪ್ರವೇಶಿಸುತ್ತಾನೆ.

|| ಭಾವಾರ್ಥ ||

ದೇವತೆಗಳಿಗಾಗಿ ಹಿಂಡಲ್ಪಟ್ಟವನೂ, ಪ್ರಕಾಶಮಾನನೂ ಆದ ಸೋಮದೇವನು ಉತ್ತಮವಾದ ಕರ್ಮವುಳ್ಳ ಋತ್ವಿಕ್ಕುಗಳಿಂದ ಶೋಧಿಸಲ್ಪಡುತ್ತಾನೆ. ಯಾವಾಗ ಈ ಪ್ರಜೆಗಳಲ್ಲಿ ಉದಾರವಾದ ದಾನಿಯೆಂದು ಅರಿಯಲ್ಪಡುವನೋ, ಆಗ ಮಹತ್ತಾದ ವಸತೀವರಿಉದಕಗಳನ್ನು ಪ್ರವೇಶಿಸುತ್ತಾನೆ.

## English Translation.

Effused for the gods, the God Soma is cleansed by the skilful (priests); when he is recognized amongst these (people) as the giver (of riches), he plunges into the mighty waters.

|| ಸಂಹಿತಾಪಾಠಃ ||

ಸುತ ಇಂದೋ ಪವಿತ್ರ ಆ ನೃಭಿರ್ಯತೋ ವಿ ನೀಯಸೇ ।
ಇಂದ್ರಾಯ ಮತ್ಸರಿನ್ತಮಶ್ಚಮೂಷ್ವಾ ನಿ ಷೀದಸಿ ॥ ೮ ॥

|| ಪದಪಾಠಃ ||

ಸುತಃ | ಇಂದೋ ಇತಿ | ಪವಿತ್ರೇ | ಆ | ನೃಽಭಿಃ | ಯತಃ | ವಿ | ನೀಯಸೇ |

ಇಂದ್ರಾಯ | ಮತ್ಸರಿನ್ಽತಮಃ | ಚಮೂಷು | ಆ | ನಿ | ಸೀದಸಿ || ೮ ||

|| ಸಾಯಣಭಾಷ್ಯಂ ||

ಹೇ ಇಂದೋ ಸುತೋಽಭಿಷುತೋ ಯತ ಆಯತಃ ಸರ್ವತೋ ವಿಸ್ತೃತಸ್ತ್ವಂ ನೃಭಿಃ ಕರ್ಮನೇತೃಭಿರ್ಋತ್ವಿಗ್ಭಿಃ ಪವಿತ್ರೇ ವಿ ನೀಯಸೇ | ವಿಶೇಷೇಣ ನೀಯಮಾನೋ ಭವಸಿ | ತತೋ ಮತ್ಸರಿಂತಮೋಽತಿಶಯೇನ ಮಾದಯಿತಾ ತ್ವಮಿಂದ್ರಾಯೇಂದ್ರಾರ್ಥಂ ಚಮೂಷು ಚಮಸೇಷ್ವಾ ನಿಷೀದಸಿ ||

|| ಪ್ರತಿಪದಾರ್ಥ ||

ಇಂದೋ— ಎಲೈ ಸೋಮದೇವನೇ | ಸುತಃ—ಹಿಂಡಲ್ಪಟ್ಟು | ಯತಃ—ವಿಸ್ತಾರವಾಗಿ ಹರಡುವ ನೀನು | ನೃಭಿಃ - ಋತ್ವಿಕ್ಕುಗಳಿಂದ | ಪವಿತ್ರೇ—ದಶಾಪವಿತ್ರದಲ್ಲಿ | ಆ ವಿ ನೀಯಸೇ—ಸೇರಿಸಲ್ಪಡುತ್ತೀಯೆ | ಮತ್ಸರಿನ್ತಮಃ—ಅತ್ಯಂತ ಹರ್ಷಕಾರಕನಾದ ನೀನು | ಇಂದ್ರಾಯ—ಇಂದ್ರಾರ್ಥವಾಗಿ | ಚಮೂಷು—ಚಮಸಪಾತ್ರೆಗಳಲ್ಲಿ | ಆ ನಿ ಷೀದಸಿ—ಸ್ಥಾನವನ್ನು ಹೊಂದುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಹಿಂಡಲ್ಪಟ್ಟು ವಿಸ್ತಾರವಾಗಿ ಹರಡುವ ನೀನು ಋತ್ವಿಕ್ಕುಗಳಿಂದ ದಶಾಪವಿತ್ರದಲ್ಲಿ ಸೇರಿಸಲ್ಪಡುತ್ತೀಯೆ. ಅತ್ಯಂತ ಹರ್ಷಕಾರಕನಾದ ನೀನು ಇಂದ್ರಾರ್ಥವಾಗಿ ಚಮಸಪಾತ್ರೆಗಳಲ್ಲಿ ಸ್ಥಾನವನ್ನು ಹೊಂದುತ್ತೀಯೆ. (ಸೇರಿಕೊಳ್ಳುತ್ತೀಯೆ.)

English Translation.

When effused, Indu, and collected by the priests, yon are guided to the filter ; you alight on the cups for Indra, exciting exceeding exhilaration.

## ನೂರನೆಯ ಸೂಕ್ತವು

| ಸಾಯಣಭಾಷ್ಯಂ ||

**ಅಭೀ ನವಂತ ಇತಿ ನವರ್ಚಂ ಚತುರ್ಥಂ ಸೂಕ್ತಂ | ಪೂರ್ವವದೃಷಿದೇವತೇ | ಸರ್ವಾ ಅನುಷ್ಟುಭಃ | ತಥಾ ಚಾನುಕ್ರಮ್ಯತೇ | ಅಭೀನವಂತೇ ನವೇತಿ || ಗತೋ ವಿನಿಯೋಗಃ ||**

ಅನುವಾದವು—**ಅಭೀ ನವಂತೇ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತದ ಋಷಿದೇವತಾಛಂದಸ್ಸುಗಳೆಲ್ಲವೂ ಹಿಂದಿನ ಸೂಕ್ತದಂತೆಯೇ ಸೂಕ್ತದ ಋಕ್ಕುಗಳೆಲ್ಲವೂ ಅನುಷ್ಟುಪ್ ಛಂದಸ್ಸವು. ಅನುಕ್ರಮಣಿಕೆಯಲ್ಲಿ—**ಅಭೀ ನವಂತೇ ನವ**—ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

# ಸೂಕ್ತ—೧೦೦

ಮಂಡಲ – ೯ || ಅನುವಾಕ—೬ || ಸೂಕ್ತ—೧೦೦ ||
ಅಷ್ಟಕ— ೭ || ಅಧ್ಯಾಯ—೪ || ವರ್ಗ—೨೭, ೨೮ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ||
|| ಋಷಿಃ—ರೇಭಸೂನೂ ಕಾಶ್ಯಪಾ ||
|| ದೇವತಾ—ಪವಮಾನಃ ಸೋಮಃ ||
|| ಛಂದಃ— ಅನುಷ್ಟುಪ್ ||

|| ಸಂಹಿತಾಪಾಠಃ ||

ಅಭೀ ನವಂತೇ ಅದ್ರುಹಃ ಪ್ರಿಯಮಿಂದ್ರಸ್ಯ ಕಾಮ್ಯಂ |
ವತ್ಸಂ ನ ಪೂರ್ವ ಆಯುನಿ ಜಾತಂ ರಿಹಂತಿ ಮಾತರಃ || ೧ ||

|| ಪದಪಾಠಃ ||

ಅಭಿ | ನವಂತೇ | ಅದ್ರುಹಃ | ಪ್ರಿಯಂ | ಇಂದ್ರಸ್ಯ | ಕಾಮ್ಯಂ |
ವತ್ಸಂ | ನ | ಪೂರ್ವೇ | ಆಯುನಿ | ಜಾತಂ | ರಿಹಂತಿ | ಮಾತರಃ || ೧ ||

|| ಸಾಯಣಭಾಷ್ಯಂ ||

ಯಥಾ ಮಾತರೋ ಗಾವಃ ಪೂರ್ವೇ ಪ್ರಥಮ ಆಯುನಿ ವಯಸಿ ಜಾತಂ ವತ್ಸಂ ರಿಹಂತಿ ಲಿಹಂತಿ ತಥಾದ್ರುಹೋಽದ್ರೋಹಾ ವಸತೀವರ್ಯಾಖ್ಯಾ ಆಪ ಇಂದ್ರಸ್ಯ ಪ್ರಿಯಂ ಕಾಮ್ಯಂ ಸರ್ವೈಃ ಕಾಮ್ಯಮಾನಂ ಸೋಮಮಭಿ ನವಂತೇ | ಅಭಿಗಚ್ಛಂತಿ ||

|| ಪ್ರತಿಪದಾರ್ಥ ||

**ಮಾತರಃ**—ಕರುವನ್ನು ಹಾಕಿದ ಗೋವುಗಳು | **ಪೂರ್ವೇ ಆಯುನಿ**—ತಮ್ಮ ಪ್ರಥಮ ದಿವಸಗಳಲ್ಲಿ | **ಜಾತಂ**—ಆಗತಾನೆ ಹುಟ್ಟಿದ | **ವತ್ಸಂ**—ಕರುವನ್ನು | **ರಿಹಂತಿ ನ**—ಆದರದಿಂದ ಸಮೀಪಿಸಿ ನೆಕ್ಕುವಂತೆ | **ಅದ್ರುಹಃ**—ಕೇಡನ್ನು ಬಯಸದ ವಸತೀವರಿಗಳು | **ಇಂದ್ರಸ್ಯ ಪ್ರಿಯಂ**—ಇಂದ್ರನಿಗೆ ಪ್ರೀತಿಕಾರಕವೂ | **ಕಾಮ್ಯಂ**—ಆಕರ್ಷಕವೂ ಆದ ಸೋಮವನ್ನು | **ಅಭಿ ನವಂತೇ**—ಆದರದಿಂದ ಎದುರುಗೊಳ್ಳುತ್ತವೆ.

|| ಭಾವಾರ್ಥ ||

ಆಗತಾನೇ ಕರುವನ್ನು ಹಾಕಿದ ಗೋವುಗಳು ತಮ್ಮ ಪ್ರಥಮದಿವಸಗಳಲ್ಲಿ ಹುಟ್ಟಿದ ಕರುವನ್ನು ಆದರದಿಂದ ಸಮೀಪಿಸಿ ನೆಕ್ಕುವಂತೆ ದ್ರೋಹರಹಿತವಾದ ವಸತೀವರಿಗಳು ಇಂದ್ರನಿಗೆ ಪ್ರೀತಿಕಾರಕವೂ, ಆಕರ್ಷಕವೂ ಆದ ಸೋಮವನ್ನು ಆದರದಿಂದ ಎದುರುಗೊಳ್ಳುತ್ತವೆ.

## English Translation

The innocent waters repair to Soma dear to Indra and beloved (of all), as the maternal cows lick the new-born calf at the beginning of its life.

॥ ಸಂಹಿತಾಪಾಠಃ ॥

ಪುನಾನ ಇಂದವಾ ಭರ ಸೋಮ ದ್ವಿಬರ್ಹಸಂ ರಯಿಂ ।

ತ್ವಂ ವಸೂನಿ ಪುಷ್ಯಸಿ ವಿಶ್ವಾನಿ ದಾಶುಷೋ ಗೃಹೇ ॥ ೨ ॥

॥ ಪದಪಾಠಃ ॥

ಪುನಾನಃ । ಇಂದೋ ಇತಿ । ಆ । ಭರ । ಸೋಮ । ದ್ವಿಽಬರ್ಹಸಂ । ರಯಿಂ ।

ತ್ವಂ । ವಸೂನಿ । ಪುಷ್ಯಸಿ । ವಿಶ್ವಾನಿ । ದಾಶುಷಃ । ಗೃಹೇ ॥ ೨ ॥

। ಸಾಯಣಭಾಷ್ಯಂ ।

ಹೇ ಇಂದೋ ದೀಪ್ಯಮಾನ ಹೇ ಸೋಮ ಪುನಾನಃ ಪೂಯಮಾನಸ್ತ್ವಂ ದ್ವಿಬರ್ಹಸಂ ದ್ವಯೋಃ ಸ್ಥಾನಯೋಃ ಪರಿಬೃಂಹಣಶೀಲಂ ರಯಿಂ ಧನಮಸ್ಮಭ್ಯಮಾ ಭರ । ಆಹರ । ದೇಹಿ । ತ್ವಂ ಹಿ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಗೃಹೇ ಸ್ಥಿತ್ವಾ ವಿಶ್ವಾನಿ ಸರ್ವಾಣಿ ವಸೂನಿ ಧನಾನಿ ಪುಷ್ಯಸಿ । ಪೋಷಯಸಿ ॥

॥ ಪ್ರತಿಪದಾರ್ಥ ॥

**ಇಂದೋ**— ಪ್ರಕಾಶಮಾನನಾದ । **ಸೋಮ**— ಎಲೈ ಸೋಮದೇವನೇ । **ಪುನಾನಃ**— ಶುದ್ಧಿಯನ್ನು ಹೊಂದಿದ ನೀನು । **ದ್ವಿಬರ್ಹಸಂ**— ದ್ಯಾವಾಪೃಥಿವಿಗಳೆರಡಕ್ಕೂ ಸೇರಿದ । **ರಯಿಂ**— ಧನವನ್ನು । **ಆ ಭರ**— ನಮಗೆ ತಂದೊದಗಿಸು । **ತ್ವಂ** — ನೀನು । **ದಾಶುಷಃ** — ಯಜಮಾನನ । **ಗೃಹೇ**— ಗೃಹದಲ್ಲಿ । **ವಿಶ್ವಾನಿ ವಸೂನಿ**— ಸಮಸ್ತ ಸಂಪತ್ತುಗಳನ್ನೂ । **ಪುಷ್ಯಸಿ**— ವೃದ್ಧಿಯಾಗುವಂತೆ ಮಾಡುತ್ತೀಯೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನೀನು ದ್ಯಾವಾಪೃಥಿವಿಗಳೆರಡಕ್ಕೂ ಸೇರಿದ ಧನವನ್ನು ನಮಗೆ ತಂದೊದಗಿಸು. ಯಜಮಾನನ ಗೃಹದಲ್ಲಿ ಸಕಲ ಸಂಪತ್ತುಗಳನ್ನೂ ನೀನು ವೃದ್ಧಿಯಾಗುವಂತೆ ಮಾಡುತ್ತೀಯೆ.

## English Translation.

Indu Soma, when purified bring us the riches of both worlds you foster all treasures in the house of the donor (of the libation).

|| ಸಂಹಿತಾಪಾಠಃ ||

ತ್ವಂ ಧಿಯಂ ಮನೋಯುಜಂ ಸೃಜಾ ವೃಷ್ಟಿಂ ನ ತನ್ಯತುಃ ।
ತ್ವಂ ವಸೂನಿ ಪಾರ್ಥಿವಾ ದಿವ್ಯಾ ಚ ಸೋಮ ಪುಷ್ಯಸಿ || ೩ ||

|| ಪದಪಾಠಃ ||

ತ್ವಂ । ಧಿಯಂ । ಮನಃऽಯುಜಂ । ಸೃಜ । ವೃಷ್ಟಿಂ । ತನ್ಯತುಃ ।
ತ್ವಂ । ವಸೂನಿ । ಪಾರ್ಥಿವಾ । ದಿವ್ಯಾ । ಚ । ಸೋಮ । ಪುಷ್ಯಸಿ || ೩ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಂ ಮನೋಯುಜಂ ಮನಸಾ ಯುಜ್ಯಮಾನಾಂ ಮನೋವೇಗಾಂ ಧಿಯಂ ಧ್ಯಾತವ್ಯಾಂ ಧಾರಾಂ ಸೃಜ । ಪಾತ್ರೇಷು ವಿಸೃಜ । ತತ್ರ ದೃಷ್ಟಾಂತಃ । ವೃಷ್ಟಿಂ ನ ತನ್ಯತುಃ । ತನು ವಿಸ್ತಾರೇ । ಋತನ್ಯಂಜೀತ್ಯಾದಿನಾ ಯತುಚ್ಪ್ರತ್ಯಯಃ ॥ ತನೋತಿ ವಿಸ್ತಾರಯತೀತಿ ತನ್ಯತುರ್ಮೇಘಃ । ಯಥಾ ಮೇಘೋ ವೃಷ್ಟಿಂ ಸೃಜತಿ ತದ್ವತ್ । ತತೋ ಹೇ ಸೋಮ ತ್ವಂ ಪಾರ್ಥಿವಾ ಪೃಥಿವ್ಯಾಂ ಭವಾನಿ ವಸೂನಿ ಧನಾನಿ ತಥಾ ದಿವ್ಯಾನಿ ದಿವಿ ಭವಾನಿ ಧನಾನಿ ಚ ಪುಷ್ಯಸಿ । ಅಸ್ಮಭ್ಯಂ ಪೋಷಯಸಿ । ಪ್ರಯಚ್ಛಸೀತ್ಯರ್ಥಃ ||

|| ಪ್ರತಿಪದಾರ್ಥ ||

**ಸೋಮ** — ಎಲೈ ಸೋಮದೇವನೇ । **ತನ್ಯತುಃ**— ಮೇಘವು । **ವೃಷ್ಟಿಂ ನ** — ಮಳೆಯನ್ನು ಸುರಿಸುವಂತೆ । **ತ್ವಂ** — ನೀನು । **ಮನೋಯುಜಂ** — ಮನೋವೇಗದಂತೆ ವೇಗವುಳ್ಳ । **ಧಿಯಂ**— ನಿನ್ನ ಧಾರೆಯನ್ನು । **ಸೃಜ**— ಪಾತ್ರೆಗಳಲ್ಲಿ ಸುರಿಸು । **ತ್ವಂ** — ನೀನು । **ಪಾರ್ಥಿವಾ**— ಪೃಥ್ವೀಸಂಬಂಧಿಯಾದುದೂ । **ದಿವ್ಯಾ ಚ**— ದ್ಯುಲೋಕಸ್ಥವಾದುದೂ ಆದ । **ವಸೂನಿ**— ಸಂಪತ್ತುಗಳನ್ನು । **ಪುಷ್ಯಸಿ**— ಪುಷ್ಟಿಗೊಳಿಸುತ್ತೀಯೆ.

|| ಭಾವಾರ್ಥ ||

ಎಲೈ ಸೋಮದೇವನೇ, ಮೇಘವು ಮಳೆಯನ್ನು ಸುರಿಸುವಂತೆ ಮನೋವೇಗದಂತೆ ವೇಗವುಳ್ಳ ನಿನ್ನ ಧಾರೆಯನ್ನು ಪಾತ್ರೆಗಳಲ್ಲಿ ಸುರಿಸು. ನೀನು ಪೃಥಿವೀಸ್ಥವಾದುದೂ, ದ್ಯುಲೋಕಸ್ಥವಾದುದೂ ಆದ ಸಕಲ ಸಂಪತ್ತುಗಳನ್ನೂ ವೃದ್ಧಿಗೊಳಿಸುತ್ತೀಯೆ.

## English Translation.

Let loose your stream which is as rapid as thought ; as the cloud (let loose) the rain ; you Soma foster terrestrial and celestial treasures.

|| ಸಂಹಿತಾಪಾಠಃ ||

ಪರಿ ತೇ ಜಿಗ್ಯುಷೋ ಯಥಾ ಧಾರಾ ಸುತಸ್ಯ ಧಾವತಿ ।

ರಂಹಮಾಣಾ ವ್ಯಗ್ವ್ಯಯಂ ವಾರಂ ವಾಜೀವ ಸಾನಸಿಃ || ೪ ||

|| ಪದಪಾಠಃ ||

ಪರಿ । ತೇ । ಜಿಗ್ಯುಷಃ । ಯಥಾ । ಧಾರಾ । ಸುತಸ್ಯ । ಧಾವತಿ ।

ರಂಹಮಾಣಾ । ವಿ । ಅವ್ಯಯಂ । ವಾರಂ । ವಾಜೀऽಇವ । ಸಾನಸಿಃ || ೪ ||

|| ಸಾಯಣಭಾಷ್ಯಂ ||

ಸುತಸ್ಯ ತೇ ತ್ವದೀಯಾ ಸಾನಸಿಃ ಸಂಭಜನಶೀಲಾ ಯದ್ವಾ ಸ್ತೋತೃಭಿಃ ಸಂಭಜನೀಯಾ ರಂಹಮಾಣಾ ವೇಗಂ ಕುರ್ವಾಣಾ ಧಾರಾವ್ಯಯಮವಿಮಯಂ ವಾರಂ ವಾಲಂ ಪವಿತ್ರಂ ವಿ ಪರಿ ಧಾವತಿ । ವಿಶೇಷೇಣ ಪರಿತೋ ಗಚ್ಛತಿ। ತತ್ರ ದೃಷ್ಟಾಂತಃ । ಜಿಗ್ಯುಷಃ ಶತ್ರೂಣಾಂ ಜೇತುರ್ವೀರಸ್ಯ ವಾಜೀವಾಶ್ವೋ ಯಥಾ ಯುದ್ಧಂ ಪರಿತೋ ಧಾವತಿ ತದ್ವತ್ || ಜಯತೇಃ ಕ್ವಸೌ ಸನ್ಲಿಟೋರ್ಜೇರಿತಿ ಕುತ್ವಂ । ಯಥೇತಿ ಪೂರಕಃ ||

|| ಪ್ರತಿಪದಾರ್ಥ ||

(ಎಲೈ ಸೋಮದೇವನೇ) **ಜಿಗ್ಯುಷಃ**—ಜಯಶಾಲಿಯಾದ ವೀರನ । **ವಾಜೀವ**—ಅಶ್ವವು ಓಡುವಂತೆ । **ಸುತಸ್ಯ**—ಹಿಂಡಲ್ಪಟ್ಟ । **ತೇ**—ನಿನ್ನ । **ಸಾನಸಿಃ**—ಸ್ತೋತೃಗಳಿಂದ ಪೂಜಿಸಲ್ಪಡುವುದೂ । **ರಂಹಮಾಣಾ**—ವೇಗವಾಗಿ ಹರಿಯುವುದೂ ಆದ । **ಧಾರಾ**—ಪ್ರವಾಹವು । **ಅವ್ಯಯಂ ವಾರಂ**—ದಶಾಪವಿತ್ರದೊಳಕ್ಕೆ । **ವಿ ಪರಿ ಧಾವತಿ**—ವೇಗವಾಗಿ ಪ್ರವಹಿಸಿ ಹೋಗುತ್ತದೆ.

|| ಭಾವಾರ್ಥ ||

ಎಲೈ ಸೋಮದೇವನೇ, ಜಯಶಾಲಿಯಾದ ವೀರನ ಅಶ್ವವು ಓಡುವಂತೆ ಹಿಂಡಲ್ಪಟ್ಟ ನಿನ್ನ, ಸ್ತೋತೃಗಳಿಂದ ಪೂಜಿಸಲ್ಪಡುವುದೂ, ವೇಗವಾಗಿ ಹರಿಯುವುದೂ ಆದ ಪ್ರವಾಹವು ದಶಾಪವಿತ್ರದೊಳಕ್ಕೆ ವೇಗವಾಗಿ ಪ್ರವಹಿಸಿ ಹೋಗುತ್ತದೆ.

English Translation

Your stream when you are effused, swift-flowing, bountiful, rushes through the sheep's hair like the horse of a victorious (hero).

|| ಸಂಹಿತಾಪಾಠಃ ||

ಕ್ರತ್ವೇ ದಕ್ಷಾಯ ನಃ ಕವೇ ಪವಸ್ವ ಸೋಮ ಧಾರಯಾ ।

ಇಂದ್ರಾಯ ಪಾತವೇ ಸುತೋ ಮಿತ್ರಾಯ ವರುಣಾಯ ಚ || ೫ ||

॥ ಪದಪಾಠಃ ॥

ಕ್ರತ್ವೇ । ದಕ್ಷಾಯ । ನಃ । ಕವೇ । ಪವಸ್ವ । ಸೋಮ । ಧಾರಯಾ ।

ಇಂದ್ರಾಯ । ಪಾತವೇ । ಸುತಃ । ಮಿತ್ರಾಯ । ವರುಣಾಯ । ಚ ॥ ೫ ॥

॥ ಸಾಯಣಭಾಷ್ಯಂ ॥

ಹೇ ಕವೇ ಕ್ರಾಂತದರ್ಶನ ಹೇ ಸೋಮ ನೋಽಸ್ಮಭ್ಯಂ ಕ್ರತ್ವೇ ಪ್ರಜ್ಞಾನಾಯ ದಕ್ಷಾಯ ಬಲಾಯ ಚ ತ್ವಂ ಧಾರಯಾ ಪವಸ್ವ । ಕ್ಷರ । ಕೀದೃಶಃ । ಇಂದ್ರಾಯ ಪಾತವೇ ಪಾನಾರ್ಥಂ ತಥಾ ಮಿತ್ರಾಯ ವರುಣಾಯ ಚ ಸುತೋಽಭಿಷುತಃ ಖಲು ॥

॥ ಪ್ರತಿಪದಾರ್ಥ ॥

**ಕವೇ**—ಪ್ರಾಜ್ಞನಾದ । **ಸೋಮ** ಎಲೈ ಸೋಮದೇವನೇ । **ಇಂದ್ರಾಯ**—ಇಂದ್ರನ । **ಪಾತವೇ**—ಪಾನಾರ್ಥವಾಗಿಯೂ । **ಮಿತ್ರಾಯ**—ಮಿತ್ರನಿಗಾಗಿಯೂ । **ವರುಣಾಯ**—ವರುಣನಿಗಾಗಿಯೂ । **ಸುತಃ**—ಹಿಂಡಲ್ಪಟ್ಟ ನೀನು । **ನಃ**—ನಮ್ಮ । **ಕ್ರತ್ವೇ**—ಜ್ಞಾನವೃದ್ಧಿಗಾಗಿಯೂ । **ದಕ್ಷಾಯ**—ಶಕ್ತಿಗಾಗಿಯೂ । **ಧಾರಯಾ**—ಧಾರಾರೂಪದಲ್ಲಿ । **ಪವಸ್ವ**—ಪ್ರವಹಿಸು.

॥ ಭಾವಾರ್ಥ ॥

ಪ್ರಾಜ್ಞನಾದ ಎಲೈ ಸೋಮದೇವನೇ ಇಂದ್ರನ ಪಾನಾರ್ಥವಾಗಿಯೂ, ಮಿತ್ರನಿಗಾಗಿಯೂ ಮತ್ತು ವರುಣನಿಗಾಗಿಯೂ ಹಿಂಡಲ್ಪಟ್ಟ ನೀನು ನಮ್ಮ ಜ್ಞಾನವೃದ್ಧಿಗಾಗಿಯೂ, ಶಕ್ತಿಗಾಗಿಯೂ, ಧಾರಾರೂಪದಲ್ಲಿ ಪ್ರವಹಿಸು.

English Translation.

Sage Soma, flow in a stream for our enlightenment and invigoration, poured forth for Indra, Mitra and Varuna to drink.

ಪವಸ್ವ ವಾಜಸಾತಮಃ ಪವಿತ್ರೇ ಧಾರಯಾ ಸುತಃ ।

ಇಂದ್ರಾಯ ಸೋಮ ವಿಷ್ಣವೇ ದೇವೇಭ್ಯೋ ಮಧುಮತ್ತಮಃ ॥ ೬ ॥

॥ ಪದಪಾಠಃ ॥

ಪವಸ್ವ । ವಾಜಽಸಾತಮಃ । ಪವಿತ್ರೇ । ಧಾರಯಾ । ಸುತಃ ।

ಇಂದ್ರಾಯ । ಸೋಮ । ವಿಷ್ಣವೇ । ದೇವೇಭ್ಯಃ । ಮಧುಮತ್ಽತಮಃ ॥ ೬ ॥

|| ಸಾಯಣಭಾಷ್ಯಂ ||

ಹೇ ಸೋಮ ವಾಜಸಾತಮೋಽತಿಶಯೇನಾನ್ನಸ್ಯ ದಾತಾ ಸುತೋಽಭಿಷುತಸ್ತ್ವಂ ಪವಿತ್ರೇ ಧಾರಯಾ ಸಹ ಪವಸ್ವ । ಕ್ಷರ । ತತೋ ಹೇ ಸೋಮ ತ್ವಮಿಂದ್ರಾಯ ವಿಷ್ಣವೇ ಚಾನ್ಯೇಭ್ಯೋ ಮಿತ್ರಾದಿಭ್ಯೋ ದೇವೇಭ್ಯಶ್ಚ ಮಧುಮತ್ತಮೋಽತಿಶಯೇನ ಮಾಧುರ್ಯೋಪೇತೋ ಭವ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ವಾಜಸಾತಮಃ**—ಅತಿಶಯವಾಗಿ ಅನ್ನಪ್ರದನೂ । **ಸುತಃ**—ಹಿಂಡಲ್ಪಟ್ಟವನೂ ಆದ ನೀನು । **ಪವಿತ್ರೇ**—ದಶಾಪವಿತ್ರದಲ್ಲಿ । **ಧಾರಯಾ**—ಧಾರಾರೂಪದಲ್ಲಿ । **ಪವಸ್ವ**—ಪ್ರವಹಿಸು । **ಇಂದ್ರಾಯ**—ಇಂದ್ರಾರ್ಥವಾಗಿಯೂ । **ವಿಷ್ಣವೇ**—ವಿಷ್ಣುವಿಗಾಗಿಯೂ । **ದೇವೇಭ್ಯಃ**—ಇತರ ದೇವತೆಗಳಿಗಾಗಿಯೂ । **ಮಧುಮತ್ತಮಃ**—ಅತ್ಯಂತ ಮಾಧುರ್ಯೋಪೇತನಾಗಿರು

|| ಭಾವಾರ್ಥ ||

ಎಲೈ ಸೋಮದೇವನೇ, ಅತಿಶಯವಾದ ಅನ್ನಪ್ರದನೂ, ಹಿಂಡಲ್ಪಟ್ಟವನೂ ಆದ ನೀನು ದಶಾಪವಿತ್ರದಲ್ಲಿ ಧಾರಾರೂಪದಲ್ಲಿ ಪ್ರವಹಿಸು. ಇಂದ್ರಾರ್ಥವಾಗಿಯೂ, ವಿಷ್ಣುವಿಗಾಗಿಯೂ ಮತ್ತು ಇತರ ದೇವತೆಗಳಿಗಾಗಿಯೂ ಅತ್ಯಂತ ಮಾಧುರ್ಯೋಪೇತನಾಗಿರು.

English Translation

Flow, Soma, who are the giver of food in a stream, when effused, to the filter ; (flow) Soma who are most sweet for Indra, for Vishnu, for the gods

|| ಸಂಹಿತಾಪಾಠಃ ||

ತ್ವಾಂ ರಿಹಂತಿ ಮಾತರೋ ಹರಿಂ ಪವಿತ್ರೇ ಅದ್ರುಹಃ ।
ವತ್ಸಂ ಜಾತಂ ನ ಧೇನವಃ ಪವಮಾನ ವಿಧರ್ಮಣಿ || ೭ ||

|| ಪದಪಾಠಃ ||

ತ್ವಾಂ । ರಿಹಂತಿ । ಮಾತರಃ । ಹರಿಂ । ಪವಿತ್ರೇ । ಅದ್ರುಹಃ ।
ವತ್ಸಂ । ಜಾತಂ । ನ । ಧೇನವಃ । ಪವಮಾನ । ವಿಽಧರ್ಮಣಿ || ೭ ||

|| ಸಾಯಣಭಾಷ್ಯಂ ||

ಹೇ ಪವಮಾನ ಸೋಮ ವಿಧರ್ಮಣಿ ವಿವಿಧಂ ಹವಿಷಾಂ ಧಾರಕೇ ಯಜ್ಞೇಽದ್ರುಹೋ ದ್ರೋಹವರ್ಜಿತಾ ಮಾತರೋ ಮಾತೃಭೂತಾ ವಸತೀವರ್ಯೋ ಹರಿಂ ಹರಿತವರ್ಣಂ ತ್ವಾಂ ಪವಿತ್ರೇ ಸ್ಥಿತಂ ರಿಹಂತಿ । ಲಿಹಂತಿ । ಆಸ್ವಾದಯಂತಿ । ಕಥಮಿವ । ಯಥಾ ಧೇನವೋ ಜಾತಂ ವತ್ಸಂ ಲಿಹಂತಿ ತಥಾ ||

॥ ಪ್ರತಿಪದಾರ್ಥ ॥

**ಪವಮಾನ**—ಎಲೈ ಸೋಮದೇವನೇ । **ಧೇನವಃ**—ಧೇನುಗಳು । **ಜಾತಂ**—ಆಗತಾನೇ ಹುಟ್ಟಿದ । **ವತ್ಸಂ ನ**-ಕರುಗಳನ್ನು ನೆಕ್ಕುವಂತೆ । **ವಿಧರ್ಮಣಿ**-ಅನೇಕ ಹವಿಸ್ಸುಗಳಿಗೆ ಧಾರಕವಾದ ಯಜ್ಞದಲ್ಲಿ । **ಅದ್ರುಹಃ**-ದ್ರೋಹರಹಿತವೂ । **ಮಾತರಃ**—ಮಾತೃಭೂತಗಳೂ ಆದ ವಸತೀವರಿಗಳು । **ಹರಿಂ**—ಪಚ್ಚೆವರ್ಣವುಳ್ಳ । **ತ್ವಾಂ**—ನಿನ್ನನ್ನು । **ಪವಿತ್ರೇ**—ದಶಾಪವಿತ್ರದಲ್ಲಿ । **ರಿಹಂತಿ**—ಆದರದಿಂದ ಅಪ್ಪಿಕೊಳ್ಳುತ್ತವೆ.

॥ ಭಾವಾರ್ಥ ॥

ಎಲೈ ಸೋಮದೇವನೇ, ಧೇನುಗಳು ಆಗ ತಾನೇ ಹುಟ್ಟಿದ ಕರುಗಳನ್ನು ನೆಕ್ಕುವಂತೆ ಅನೇಕ ಹವಿಸ್ಸುಗಳಿಗೆ ಧಾರಕವಾದ ಯಜ್ಞದಲ್ಲಿ ದ್ರೋಹರಹಿತವೂ ಮಾತೃಭೂತಗಳೂ ಆದ ವಸತೀವರಿಗಳು ಪಚ್ಚೆವರ್ಣವುಳ್ಳ ನಿನ್ನನ್ನು ದಶಾಪವಿತ್ರದಲ್ಲಿ ಆದರದಿಂದ ಅಪ್ಪಿಕೊಳ್ಳುತ್ತವೆ.

English Translation

The innocent maternal (waters) caress you, the green-tinted, upon the filter, O Pavamana, at the sacrifice, as milch cow caress their new-born calf.

॥ ಸಂಹಿತಾಪಾಠಃ ॥

ಪವಮಾನ ಮಹಿಶ್ರವಶ್ಚಿತ್ರೇಭಿರ್ಯಾಸಿ ರಶ್ಮಿಭಿಃ ।
ಶರ್ಧನ್ತಮಾಂಸಿ ಜಿಘ್ನಸೇ ವಿಶ್ವಾನಿ ದಾಶುಷೋ ಗೃಹೇ ॥ ೮ ॥

॥ ಪದಪಾಠಃ ॥

ಪವಮಾನ । ಮಹಿ । ಶ್ರವಃ । ಚಿತ್ರೇಭಿಃ । ಯಾಸಿ । ರಶ್ಮಿಽಭಿಃ ।
ಶರ್ಧನ್ । ತಮಾಂಸಿ । ಜಿಘ್ನಸೇ । ವಿಶ್ವಾನಿ । ದಾಶುಷಃ । ಗೃಹೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ಪವಮಾನ ಮಹಿ ಮಹಚ್ಛ್ರವಃ ಶ್ರವಣೀಯಮಂತರಿಕ್ಷಂ ಚಿತ್ರೇಭಿಶ್ಚಿತ್ರೈರ್ನಾನಾವಿಧೈಃ ಶ್ಲಾಘನೀಯೈರ್ವಾ ರಶ್ಮಿಭಿಃ ಪರಿ ಯಾಸಿ । ಪರಿಗಚ್ಛಸಿ । ತಥಾ ಶರ್ಧನ್ ವೇಗಂ ಕುರ್ವಂಸ್ತ್ವಂ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಗೃಹೇ ಸ್ಥಿತ್ವಾ ವಿಶ್ವಾನಿ ಸರ್ವಾಣಿ ತಮಾಂಸಿ ತಮೋರೂಪಾಣಿ ರಕ್ಷಾಂಸಿ ಜಿಘ್ನಸೇ । ಹಂಸಿ । ಏವಂ ದ್ಯಾವಾಪೃಥಿವ್ಯೋರ್ವರ್ತಸ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪವಮಾನ**—ಪವಮಾನಸಂಜ್ಞಕನಾದ ಎಲೈ ಸೋಮದೇವನೇ । **ಮಹಿ**—ಮಹತ್ತಾದ । **ಶ್ರವಃ**—ಅಂತರಿಕ್ಷವನ್ನು । **ಚಿತ್ರೇಭಿಃ**—ಅನೇಕವಿಧಗಳಾದ । **ರಶ್ಮಿಭಿಃ**—ನಿನ್ನ ಕಿರಣಗಳಿಂದ । **ಯಾಸಿ**—ವ್ಯಾಪಿಸು

ತ್ತೀಯೆ । **ಶರ್ಧನ್**—ವೇಗಗಾಮಿಯಾದ ನೀನು । **ದಾಶುಷಃ**—ಹವಿಸ್ಸನ್ನು ಅರ್ಪಿಸುವ ಯಜಮಾನನ । **ಗೃಹೇ**—ಗೃಹದಲ್ಲಿರುವ । **ವಿಶ್ವಾನಿ ತಮಾಂಸಿ**—ಅಂಧಕಾರರೂಪದ ಸಕಲ ರಾಕ್ಷಸರನ್ನೂ । **ಜಿಘ್ನಸೇ**—ನಾಶಪಡಿಸುತ್ತೀಯೆ.

॥ ಭಾವಾರ್ಥ॥

ಪವಮಾನಸಂಜ್ಞಕನಾದ ಎಲೈ ಸೋಮದೇವನೇ, ಮಹತ್ತಾದ ಅಂತರಿಕ್ಷವನ್ನು ಅನೇಕವಿಧವಾದ ನಿನ್ನ ಕಿರಣಗಳಿಂದ ನೀನು ವ್ಯಾಪಿಸುತ್ತೀಯೆ. ವೇಗಗಾಮಿಯಾದ ನೀನು ಹವಿಸ್ಸನ್ನರ್ಪಿಸುವ ಯಜಮಾನನ ಗೃಹದಲ್ಲಿರುವ ಅಂಧಕಾರರೂಪದ ಸಕಲ ರಾಕ್ಷಸರನ್ನೂ ನಾಶಪಡಿಸುತ್ತೀಯೆ.

English Translation

Pavamana, you traverse the vast firmament with various rays hastening on you, dispell all Rakshasas at the house of the donor (of the libation).

॥ ಸಂಹಿತಾಪಾಠಃ ॥

**ತ್ವಂ ದ್ಯಾಂ ಚ ಮಹಿವ್ರತ ಪೃಥಿವೀಂ ಚಾತಿ ಜಭ್ರಿಷೇ ।**

**ಪ್ರತಿ ದ್ರಾಪಿಮಮುಂಚಥಾಃ ಪವಮಾನ ಮಹಿತ್ವನಾ ॥ ೯ ॥**

॥ ಪದಪಾಠಃ ॥

ತ್ವಂ । ದ್ಯಾಂ । ಚ । ಮಹಿಽವ್ರತ । ಪೃಥಿವೀಂ । ಚ । ಅತಿ । ಜಭ್ರಿಷೇ ।

ಪ್ರತಿ । ದ್ರಾಪಿಂ । ಅಮುಂಚಥಾಃ । ಪವಮಾನ । ಮಹಿಽತ್ವನಾ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮಹಿವ್ರತ ಮಹಾಕರ್ಮನ್ ಬಹುವಿಧಕರ್ಮನ್ ಸೋಮ ತ್ವಂ ದ್ಯಾಂ ದ್ಯುಲೋಕಂ ಚ ಪೃಥಿವೀಂ ಚಾತಿ ಜಭ್ರಿಷೇ । ಅತ್ಯಂತಂ ಬಿಭರ್ಷಿ ॥ ಡುಭೃಞ್ ಧಾರಣಪೋಷಣಯೋಃ । ತಸ್ಯ ಚ್ಛಾಂದಸೇ ಲಿಟಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರೇಡಾಗಮಃ ॥ ಅಂತರಿಕ್ಷೇ ಸೋಮಾತ್ಮನೇತಿ ಪೃಥಿವ್ಯಾಂ ಲತಾರೂಪೇಣೇತ್ಯೇವಂ ಲೋಕದ್ವಯವರ್ತಿತ್ವಂ । ಹೇ ಪವಮಾನ ಕ್ಷರನ್ ಸೋಮ ತ್ವಂ ಮಹಿತ್ವನಾ ಮಹತ್ತ್ವೇನ ಯುಕ್ತಃ ಸನ್ ದ್ರಾಪಿಂ ಕವಚಂ ಪ್ರತ್ಯಮುಂಚಥಾಃ । ಪ್ರತಿಮುಂಚಸಿ । ಸಂವೃಣೋಷಿ ॥

॥ ಪ್ರತಿಪದಾರ್ಥ ॥

**ಮಹಿವ್ರತ**—ಮಹತ್ಕರ್ಮವನ್ನಾಚರಿಸುವ ಎಲೈ ಸೋಮದೇವನೇ । **ತ್ವಂ**—ನೀನು । **ದ್ಯಾಂ ಚ**—ದ್ಯುಲೋಕವನ್ನೂ । **ಪೃಥಿವೀಂ ಚ**—ಪೃಥ್ವೀಲೋಕವನ್ನೂ । **ಅತಿ ಜಭ್ರಿಷೇ**—ಅತಿಶಯವಾಗಿ ಭರಿಸುತ್ತೀಯೆ ।

**ಪವಮಾನ**—ಪವಮಾನಸಂಜ್ಞಕನಾದ ಎಲೈ ಸೋಮದೇವನೇ । **ಮಹಿತ್ವನಾ**—ಮಾಹಾತ್ಮ್ಯದಿಂದ ಕೂಡಿರುವ ನೀನು । **ದ್ರಾಪಿಂ**—ಕವಚವನ್ನು । **ಪ್ರತ್ಯಮುಂಚಥಾಃ**—ಹಾಕಿಕೊಳ್ಳುತ್ತೀಯೆ.

॥ ಭಾವಾರ್ಥ ॥

ಮಹತ್ಕಾರ್ಯವನ್ನಾಚರಿಸುವ ಎಲೈ ಸೋಮದೇವನೇ, ನೀನು ದ್ಯುಲೋಕವನ್ನೂ, ಪೃಥ್ವಿಲೋಕವನ್ನೂ ಅತಿಶಯವಾಗಿ ಧರಿಸುತ್ತೀಯೆ. ಪವಮಾನಸಂಜ್ಞಕನಾದ ಎಲೈ ಸೋಮದೇವನೇ, ಮಾಹಾತ್ಮ್ಯದಿಂದ ಕೂಡಿರುವ ನೀನು ಕವಚವನ್ನು ಹಾಕಿಕೊಳ್ಳುತ್ತೀಯೆ.

## English Translation

Observer of manifold rites, you support both heaven and earth; O Pavamana, (who are endowed) with greatness, you put on your coat of mail.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಸಪ್ತಮಾಷ್ಟಕೇ ಚತುರ್ಥೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ಣಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯ
ಸಪ್ತಮಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥